

# ಋಗ್ವೇದಸಂಹಿತಾ

ಭಾಗ—೧೩

ದ್ವಿತೀಯಾಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು

ಪ್ರಥಮ ಮಂಡಲದ ಸೂಕ್ತಗಳು ೧೬೬—೧೮೩

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೩

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೩

ದ್ವಿತೀಯಾಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೧೬೬-೧೮೩

—o—

*Translated with Exhaustive Critical Notes*
*by*

**Asthana Mahavidwan**
**H. P. VENKATA RAO,**
*Editor.*

*Printed at*
SREE SHARADA PRESS
MYSORE.
1951

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

—o—

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

---

**ಸಹಾಯಕ ವಿದ್ವನ್ಮಂಡಲಿ**

1. **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥ ವೆಂಕಟರಮಣಾಚಾರ್, M. A., B. T.,** ಸಾಹಿತ್ಯವಿದ್ವಾನ್.
7. **ಬ್ರ॥ ಶ್ರೀ॥ S. ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್, Govt. Oriental Research Institute. Mysore.
9. **ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು. Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಮುನ್ನುಡಿ

ಋಗ್ವೇದ ಸಂಹಿತೆಯಲ್ಲಿ ಹದಿಮೂರನೆಯದಾದ ಈ ಭಾಗದಲ್ಲಿ ಪ್ರಥಮಮಂಡಲದ ೧೬೬ ನೆ ಸೂಕ್ತದಿಂದ ೧೮೩ ರ ವರೆಗೆ ಅಗಸ್ತ್ಯಋಷಿಯಿಂದ ದೃಷ್ಟವಾದ ಒಟ್ಟು ೧೮ ಸೂಕ್ತಗಳಿವೆ. ಮರುತ್ತುಗಳು, ಮರುತ್ವಾನ್ ಇಂದ್ರ, ಮಹಾಮಹಿಮನೂ, ವಿಶ್ವಪಾಲಕನೂ ಆದ ಇಂದ್ರ, ಅಶ್ವಿನೀದೇವತೆಗಳು ಇವರೇ ಈ ಸೂಕ್ತಗಳ ದೇವತೆಗಳು. ಈ ದೇವತೆಗಳ ಮಹತ್ತ್ವದ ವರ್ಣನೆ ಮತ್ತು ಇವರನ್ನುದ್ದೇಶಿಸಿ ಅರ್ಪಿತವಾದ ಸ್ತುತಿಗಳು ಇವುಗಳ ನಡುವೆ ಅಗಸ್ತ್ಯ ಲೋಪಾಮುದ್ರೆಯರ ಸಂವಾದವು ಒಂದು ಅಪರೂಪವಾದ ಸನ್ನಿವೇಶವಾಗಿದೆ. ಆದರೆ ಅದರಲ್ಲೂ ಒಂದು ವೈಶಿಷ್ಟ್ಯವಿದೆ. ಇವರ ಸಂವಾದವು ಕಾಮಪ್ರಧಾನವಾದ ಭಾವಗಳನ್ನು ವರ್ಣಿಸಿದರೂ ಸಹ (ಸೂ. ೧೭೯) ಆ ಕಾಮವು ಧರ್ಮಾವಿರುದ್ಧವಾಗಿದ್ದು ಅಗಸ್ತ್ಯ-ಲೋಪಾಮುದ್ರೆಯರ ಅಸಾಧಾರಣವಾದ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. **"ಸ ತಾನಭಿಜಗಾಮಾಶು ನಿರೂಪ್ಯೈಂದ್ರಂ ಹವಿಸ್ತದಾ"** ಇತ್ಯಾದಿಯಾಗಿ ಬೃಹದ್ದೇವತಾವಾಕ್ಯಗಳು ವಿವರಿಸಿರುವಂತೆ ಈ ಅಧ್ಯಾಯದಲ್ಲಿ ಸೂಕ್ತದ್ರಷ್ಟೃವಾದ ಅಗಸ್ತ್ಯನು ತನ್ನ ಕೃತಿಯಲ್ಲಿ ಅನುಸರಿಸಿರುವ ಕ್ರಮವನ್ನು ಮುಂದೆ ತಿಳಿಸಲಾಗಿದೆ (p. 193–195).

ಅಧ್ಯಾಯದ ಪ್ರಾರಂಭದಲ್ಲಿಯೇ ೧೬೬ ಮತ್ತು ೧೬೭ ನೇ ಸೂಕ್ತಗಳಲ್ಲಿರುವ ಮರುದ್ದೇವತೆಗಳ ಸ್ವರೂಪ ವರ್ಣನವು ಋಷಿಯ ಕೃತಿಕೌಶಲವನ್ನೂ ಅದ್ಭುತವಾದ ಭಾವಾಭಿವ್ಯಕ್ತಿಯನ್ನೂ ತಿಳಿಸುತ್ತದೆ. **"ಭಯಂತೇ ವಿಶ್ವಾ ಭುವನಾನಿ"** (೧-೧೬೬-೪); **"ವಿಶ್ವೋ ವೋ ಅಜ್ಮನ್ಭಯತೇ"** (೧-೧೬೬-೫) ಇತ್ಯಾದಿ ವಾಕ್ಯಗಳಿಂದ ಮರುತ್ತುಗಳ ಭಯಂಕರವಾದ ಸ್ವರೂಪವನ್ನೂ ಆಗಮನವನ್ನೂ ವರ್ಣಿಸಿದ್ದರೂ ಸಹ ಅವರ ಆಗಮನ ಕಾಲದಲ್ಲಿ ಆವಿರ್ಭವಿಸುವ ವಿಶ್ವಸೌಂದರ್ಯದ ಸನ್ನಿವೇಶವೂ ಸಹ ಜೊತೆಯಲ್ಲಿಯೇ ವರ್ಣಿತವಾಗಿದೆ. ಉದಾಹರಣೆಗೆ—

**ವಿಶ್ವೋ ವೋ ಅಜ್ಮನ್ಭಯತೇ ವನಸ್ಪತೀ ರಥೀಯಂತೀವ ಪ್ರ ಜಿಹೀತ ಓಷಧಿಃ ।**

ಎಂಬಲ್ಲಿ ಮರುತ್ತುಗಳ ಆಗಮನದ ರಭಸದಿಂದ ಉತ್ಪನ್ನವಾಗುವ ಭೀತಿಯೊಂದು ಕಡೆ ಮತ್ತು ಅದೇ ಆಗಮನದ ಕಾಲದಲ್ಲಿ ಆಕರ್ಷಕವಾದ ಲತೆಗಳ ಚಲನವಲನಾದಿಗಳ ಸೌಂದರ್ಯವೊಂದು ಕಡೆ ಹೀಗೆ ಭಾವದ್ವಯದ ಅಭಿವ್ಯಕ್ತಿಯು ಋಷಿಯ ಕಾವ್ಯಸೃಷ್ಟಿಯ ಕುಶಲತೆಯನ್ನು ತೋರಿಸುತ್ತದೆ. **"ಗುಹಾ ಚರಂತೀ ಮನುಷೋ ನ ಯೋಷಾ ಸಭಾವತೀ ವಿದಥ್ಯೇವ ಸಂ ವಾಕ್"**, **"ಆ ಸ್ಥಾಪಯಂತ ಯುವತಿಂ ಯುವಾನಃ ಶುಭೇ ನಿಮಿಶ್ಲಾಂ ವಿದಥೇಷು ಪಜ್ರಾಂ"** (೧-೧೬೭-೩ ಮತ್ತು ೬) ಇತ್ಯಾದಿ ಋಕ್ಕುಗಳಲ್ಲಿ ಅತ್ಯಾಕರ್ಷಕವಾದ ಪ್ರಕೃತಿ ಸೌಂದರ್ಯವು ವರ್ಣಿತವಾಗಿದೆ ವಿದ್ಯುನ್ಮರುತ್ತುಗಳ ಸಂಯೋಗವು ಸುಂದರಾಲಂಕೃತಳಾದ ಸ್ತ್ರೀಯು ತದನುರೂಪನಾದ ಪತಿಯೊಡನೆ ಸೇರಿಕೊಂಡು ನಲಿಯುವಂತಿದೆಯೆಂಬ ವರ್ಣನವು ಋಷಿಯ ಪ್ರಕೃತಿ ಸೌಂದರ್ಯಾನುಭವದ ಸ್ವರೂಪವನ್ನು ತಿಳಿಸುತ್ತದೆ. ಕಾವ್ಯಾತ್ಮಕವಾದ ಈ ಸೌಂದರ್ಯತತ್ತ್ವಪ್ರತಿಪಾದನೆಯೊಡನೆಯೇ ಆಧ್ಯಾತ್ಮಿಕವಾದ ತತ್ತ್ವಾನ್ವೇಷಣವೂ ಸಹ ಜೊತೆಯಲ್ಲಿಯೇ ಇರುತ್ತದೆ. **"ಕ್ವ ಸ್ವಿದಸ್ಯ ರಜಸೋ ಮಹಸ್ಪರಂ ಕ್ವಾವರಂ ಮರುತೋ ಯಸ್ಮಿನ್ನಾಯಯ"** (೧-೧೬೮-೬) "ಎಲೈ ಮರುತ್ತುಗಳೇ ನೀವು ಯಾವ ಲೋಕದಿಂದ ಆಗಮಿಸುತ್ತೀರೋ ಆ ಲೋಕದ ಆದ್ಯಂತಗಳಾವುವು? ಯಾವ ಉದಕಾರ್ಥವಾಗಿ ಬರುತ್ತೀರೋ ಉದಕಾತ್ಮಕವಾದ ಆ ಲೋಕದ ಆದ್ಯಂತಗಳಾವುವು?" ಇತ್ಯಾದಿ ಪ್ರಶ್ನೆಗಳಲ್ಲಿ ತತ್ತ್ವರಹಸ್ಯಾನ್ವೇಷಣವು ಕಾಣುತ್ತದೆ.

ಪ್ರಕೃತವಾದ ಅಧ್ಯಾಯದಲ್ಲಿ ಕೆಲವು ಸಮಸ್ಯಾತ್ಮಕವಾದ ಸನ್ನಿವೇಶಗಳು ಸ್ಥೂಲವಾದ ದೃಷ್ಟಿಗೆ ಅರ್ಥವಾಗುವುದಿಲ್ಲ. ಈ ಸನ್ನಿವೇಶಗಳಲ್ಲಿ ವಿವರಿಸಿರುವ ದೇವತಾತತ್ತ್ವಪ್ರತಿಪಾದನೆಯು ಅರ್ಥವಾಗಬೇಕಾದರೆ ಬಹಳ ಸೂಕ್ಷ್ಮದೃಷ್ಟಿಯಿಂದಲೂ ಶ್ರುತ್ಯಂತರಗಳ ವಾಕ್ಯಗಳ ಆಧಾರದ ಮೇಲೆಯೂ ವಿಮರ್ಶಿಸಬೇಕು. ಉದಾಹರಣೆಗೆ, **" ಮರುದ್ಭಿಃ ಸಹ ಮರುತ್ವಾಂಸ್ತತ್ರ ಸೋಽಭವತ್ "** (ಬೃ. ದೇ. ೪-೫೬); **" ಕ್ಷತ್ರಂ ವಾ ಇಂದ್ರೋ ವಿಶೋ ಮರುತಃ "** (ಶ. ಬ್ರಾ. ೪-೩-೩-೬) ಇತ್ಯಾದ್ಯನೇಕ ವಾಕ್ಯಗಳು ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವನ್ನೂ ರಾಜಪ್ರಜಾಸಂಬಂಧವನ್ನೂ ವರ್ಣಿಸಿದ್ದರೂ ಸಹ ಪ್ರಕೃತವಾದ ಅಧ್ಯಾಯದಲ್ಲಿ (೧೭೦ ನೇ ಸೂಕ್ತ) ವರ್ಣಿತವಾಗಿರುವ ಇಂದ್ರನ ಆಗ್ರಹವು ಒಂದು ಅಪ್ರಾಕೃತಿಕವಾದ ಸಂದರ್ಭವನ್ನು ತಿಳಿಸುತ್ತದೆ. ಈ ಅಂಶದ ವಿವರಣೆಯನ್ನು ಆ ಸೂಕ್ತದ ವಿಶೇಷವಿಷಯಗಳಲ್ಲಿ ತಿಳಿಸಲಾಗಿದೆ.

**" ಯೇನ ಮಾನಾಸಶ್ಚಿತಯಂತ ಉಸ್ರಾ ವ್ಯುಷ್ಟಿಷು ಶವಸಾ ಶಶ್ವತೀನಾಂ "** (೧-೧೭೧-೫) ಎಂಬಲ್ಲಿ ಇಂದ್ರನ ಅನುಗ್ರಹದಿಂದಲೇ **ಉಷಸ್ಸು** ಪ್ರತಿದಿನವೂ ಭೂತಜಾತಗಳಲ್ಲಿ ಚೈತನ್ಯವನ್ನುಂಟುಮಾಡಲು ಶಕ್ಯವಾಗುತ್ತದೆ ಎಂದು ವರ್ಣಿಸಿದೆ. ಈ ಅಂಶವು ಬೇರೆ ಕಡೆಯಲ್ಲಿ ತಿಳಿಸಿರುವ ಅಂಶಕ್ಕೆ ವಿರೋಧವಾಗಿರುವಂತೆ ಕಾಣುತ್ತದೆ. ಹೇಗೆಂದರೆ,

**"ದಿವಶ್ಚಿದ್ಘಾ ದುಹಿತರಂ ಮಹಾನ್ಮಹೀಯಮಾನಾಂ । ಉಷಾಸಮಿಂದ್ರ ಸಂಪಿಣಕ್ ॥"**
(ಋ. ಸಂ. ೪-೩೦-೯)

**ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ ॥**
(ಋ. ಸಂ. ೪-೩-೧೦)

ಇತ್ಯಾದಿ ಸಂದರ್ಭಗಳಲ್ಲಿ ಇಂದ್ರನು ದಿವೋದುಹಿತೆಯಾದ ಉಷಸ್ಸನ್ನು ಹಿಂಸಿಸಿದುದೂ, ಆ ಇಂದ್ರನಿಂದ ಬೆದರಿ ಉಷಸ್ಸು ಶಕಟದಿಂದ ಇಳಿದು ಮರೆಯಾದುದೂ ವಿಶದವಾಗಿದೆ. ಇಂತಹ ಸಂದರ್ಭಗಳಲ್ಲಿ ತಾತ್ಪರ್ಯವನ್ನು ಹೇಳುವುದು ಸುಲಭಸಾಧ್ಯವಲ್ಲ. ಒಂದೊಂದುಸಲ ಆದಿತ್ಯನಿಗೂ ಇಂದ್ರನಿಗೂ ತಾದಾತ್ಮ್ಯವನ್ನು ಹೇಳಿದೆ. ಅಂತಹ ಸಂದರ್ಭಗಳಲ್ಲಿ ಸೂರ್ಯರೂಪಿಯಾದ ಇಂದ್ರನಿಗೆ ಉಷಸ್ಸು ಪತ್ನಿಯೆಂದರ್ಥಮಾಡಬಹುದು. ಹೇಗೆಂದರೆ— **"ಯುಂಜಂತಿ ಬ್ರಧ್ನಮರುಷಂ ಚರಂತಂ"** (೧-೬-೧) **"ಕೇತುಂ ಕೃಣ್ವನ್ನಕೇತವೇ"** (೧-೬-೩) ಇತ್ಯಾದ್ಯನೇಕ ಋಕ್ಕುಗಳಲ್ಲಿ ಇಂದ್ರನಿಗೂ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿದೆ. **ಬ್ರಧ್ನಮಾದಿತ್ಯರೂಪೇಣಾವಸ್ಥಿತಮಿಂದ್ರಂ** ಎಂದು ಸಾಯಣರು ಅರ್ಥಮಾಡಿದ್ದಾರೆ. ಮತ್ತು **"ವಾಜಿನೀವತೀ ಸೂರ್ಯಸ್ಯ ಯೋಷಾ"** ಇತ್ಯಾದಿ ಋಕ್ಕುಗಳಲ್ಲಿ ಆದಿತ್ಯಾತ್ಮಕನಾದ ಇಂದ್ರನಿಗೂ ಉಷಸ್ಸಿಗೂ ಇರತಕ್ಕ ಪತಿಪತ್ನಿಯರ ಸಂಬಂಧವು ವರ್ಣಿತವಾಗಿದೆ. ಈ ರೀತಿ ಪತಿಪತ್ನಿಯರ ಸಂಬಂಧವಿರುವಾಗ **"ಉಷಾಸಮಿಂದ್ರ ಸಂಪಿಣಕ್"** ಇತ್ಯಾದಿ ವಾಕ್ಯಗಳಲ್ಲಿ ಇಂದ್ರನು ಉಷಸ್ಸನ್ನು ಹಿಂಸಿಸಿದನು ಎಂದರೆ ತಾತ್ಪರ್ಯವೇನು ಎಂಬ ಪ್ರಶ್ನೆಯು ಬರುತ್ತದೆ. ಪ್ರಕೃತವಾದ ಅಧ್ಯಾಯದಲ್ಲಿ ಇಂದ್ರನ ಅನುಗ್ರಹದಿಂದಲೇ ಉಷಸ್ಸು ಭೂತಜಾತಗಳಿಗೆಲ್ಲಾ ಚೈತನ್ಯದಾಯಿಯಾಗುತ್ತಾಳೆ ಎಂದಿದೆ. ಈ ರೀತಿ ಸಮಸ್ಯಾತ್ಮಕವಾದ ಸನ್ನಿವೇಶಗಳಿರುವಾಗ ಇಂತಹ ಸನ್ನಿವೇಶಗಳು ಬರುವ ಕಡೆಗಳಲ್ಲೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿ ಆಯಾ ಸಂದರ್ಭಕ್ಕೆ ತಕ್ಕಂತೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಬೇಕಾಗುತ್ತದೆ.

ಇದೇ ರೀತಿಯಲ್ಲಿ **ಮುಷಾಯ ಸೂರ್ಯಂ ಕವೇ ಚಕ್ರಮೀಶಾನ ಓಜಸಾ** । (೧-೧೭೫-೪) ಎಲೈ ಇಂದ್ರನೇ, ಸಮರ್ಥನಾದ ನೀನು ನಿನ್ನ ಸಾಮರ್ಥ್ಯಾತಿಶಯದಿಂದ ಸೂರ್ಯನ ರಥದ ಚಕ್ರವನ್ನು ಅಪಹರಿಸಿದೆ ಎಂಬ

ವರ್ಣನೆಯಿದೆ. ಇದೇ ರೀತಿಯಲ್ಲಿ, **"ಮುಷಾಯ ಇಂದ್ರ ಸೂರ್ಯಂ (ಚಕ್ರಂ)"** (೪–೩೦–೪); ಇತ್ಯಾದಿ ಸ್ಥಳಗಳಲ್ಲೆಲ್ಲಾ ಈ ಅಂಶವನ್ನು ತಿಳಿಸಿದೆ. ಇದು ಹೇಗೆ ಸಾಧ್ಯ? ಸೂರ್ಯನ ರಥಕ್ಕಿರತಕ್ಕ ಚಕ್ರಗಳೆಷ್ಟು? ಅದನ್ನು ಇಂದ್ರನು ಅಪಹರಿಸಿದನು ಎಂಬುದು ಹೇಗೆ ಎಂಬ ಪ್ರಶ್ನೆಯು ಬರುತ್ತದೆ. ಇದೇ ಅಲ್ಲದೆ, **"ಇಂದ್ರಃ ಸೂರ್ಯಮರೋಚಯತ್"** (೮-೩-೬); **"ತ್ವಂ ಸೂರ್ಯಮರೋಚಯಃ"** (೮-೯೮-೨); ಇತ್ಯಾದಿ ಸ್ಥಳಗಳಲ್ಲಿ ಸೂರ್ಯನು ಪ್ರಕಾಶಿತನಾಗಿ ಬೆಳಗಲು ಇಂದ್ರನೇ ಕಾರಣನು ಎಂದೂ, **"ಸೂರ್ಯಂ ವಿವೇದ ತಮಸಿ ಕ್ಷಿಯಂತಂ"** (೩-೩೯-೫) ಇತ್ಯಾದಿ ಸ್ಥಳಗಳಲ್ಲಿ ಕಗ್ಗತ್ತಲೆಯಲ್ಲಿ ಸುಪ್ತನಾಗಿದ್ದ ಸೂರ್ಯನನ್ನು ಮಾನವರ ಹಿತಕ್ಕಾಗಿ ಇಂದ್ರನು ಮೇಲಕ್ಕೆದ್ದು ಪ್ರಕಾಶಿಸುವಂತೆ ಮಾಡಿದನೆಂದೂ ಮತ್ತು, **"ಸ ಹಿ ಜಿಷ್ಣುಃ ಪಥಿಕೃತ್ಸೂ-ರ್ಯಾಯ"** (೧೦-೧೧೧-೩) ಇತ್ಯಾದಿ ಋಕ್ಕುಗಳಲ್ಲಿ ಸೂರ್ಯನ ಸಂಚಾರಕ್ಕಾಗಿ ಇಂದ್ರನು ಮಾರ್ಗವನ್ನು ಪರಿಕಲ್ಪಿಸಿದನೆಂದೂ ವರ್ಣಿತವಾಗಿದೆ. ಹೀಗೆಲ್ಲಾ ಇರುವಾಗ ಇಂದ್ರನು ಸೂರ್ಯನ ಚಕ್ರವನ್ನು ಅಪಹರಿಸಿದನು ಎಂಬುದರ ಅರ್ಥವೇನು? ಈ ಅಂಶಗಳು ಪರಸ್ಪರ ವಿರೋಧಾತ್ಮಕವಲ್ಲವೇ ಎಂದರೆ, ಅದಕ್ಕೆ ಈ ರೀತಿ ಸಮಾಧಾನವನ್ನು ಹೇಳಬೇಕಾಗುತ್ತದೆ.

"ಸಪ್ತ ಯುಂಜಂತಿ ರಥಮೇಕಚಕ್ರಂ" (೧–೧೬೪–೨) ಇತ್ಯಾದಿ ವರ್ಣನೆಗಳಿಂದ ಸೂರ್ಯನ ರಥವು ಏಕಚಕ್ರಾತ್ಮಕವಾದುದು ಎಂದು ಪ್ರಸಿದ್ಧವಾಗಿದೆ. ಈ ಚಕ್ರವನ್ನೇ ಇಂದ್ರನು ಅಪಹರಿಸಿದರೆ ಸೂರ್ಯನ ಗತಿಯನ್ನೇ ಪೂರ್ಣವಾಗಿ ತಡೆದು ಲೋಕವ್ಯವಹಾರಕ್ಕೇ ತಡೆಮಾಡಿದಂತಾಗುತ್ತದೆ. ಅದು ಇಂದ್ರನ ಉದ್ದಿಶ್ಯವಾಗಿರಲು ಸಾಧ್ಯವೇ ಇಲ್ಲ. ಆದುದರಿಂದ **ಚಕ್ರಂ ಅಹರತ್** ಎಂಬುದಕ್ಕೇನರ್ಥವನ್ನು ಹೇಳಬೇಕಾಗುತ್ತದೆ ಎಂದರೆ, ೧–೧೭೫–೪ ; ೪–೩೦–೪ ಇತ್ಯಾದಿ ಸ್ಥಳಗಳಲ್ಲೆಲ್ಲಾ **ಸೂರ್ಯಂ, ಚಕ್ರಂ** ಎಂಬ ಪ್ರಯೋಗವಿರುವುದನ್ನು ಸಹ ಗಮನಿಸಬೇಕು. ಇಲ್ಲಿ ಸೂರ್ಯನ ಚಕ್ರವೆಂದರ್ಥಮಾಡಿದರೆ ತಪ್ಪಾಗಬಹುದು. ಸೂರ್ಯಾತ್ಮಕವಾದ ಚಕ್ರವೆಂದರ್ಥಮಾಡಿದರೆ, ಆಗ ಇಂದ್ರನು ಈ ಸೂರ್ಯಾತ್ಮಕವಾದ ಚಕ್ರವನ್ನು ಏತಕ್ಕೆ ಅಪಹರಿಸಿದನು ಎಂದು ಪ್ರಶ್ನಿಸಿದರೆ, ಅದಕ್ಕೆ ಉತ್ತರ ರೂಪವಾಗಿ,

**"ಇಂದ್ರಃ ಸೂರ್ಯಸ್ಯ ರಶ್ಮಿಭಿರ್ನ್ಯರ್ಶಸಾನಮೋಷತಿ । ಅಗ್ನಿರ್ವನೇವ ಸಾಸಹಿಃ ಪ್ರ ವಾವೃಧೇ"॥**

(ಋ. ಸಂ. ೮-೧೨-೯)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಸೂರ್ಯರಶ್ಮಿಗಳಿಂದ ಅಸುರರನ್ನು ನಾಶಮಾಡಿದನು ಎಂದಿದೆ. ಕಗ್ಗತ್ತಲೆಯನ್ನು ಹರಡಿ, ಪ್ರಕಾಶಕ್ಕೆ ಅಡ್ಡಲಾಗಿ ಬಂದ ಅಸುರರನ್ನು ನಾಶಮಾಡಿ ಪ್ರಕಾಶವನ್ನು ಹರಡಲು ಸೂರ್ಯಬಿಂಬವೇ ಇಂದ್ರನಿಗೆ ಆಯುಧವಾಯಿತು. ಆದುದರಿಂದ, ಚಕ್ರಾತ್ಮಕವಾದ ಸೂರ್ಯನನ್ನು ಅಪಹರಿಸಿದನು ಎಂದು ವರ್ಣಿತವಾಗಿಯೆಂದು ಹೇಳಬಹುದು. ಕುತ್ಸಾದಿ ಋಷಿಗಳನ್ನೂ ರಕ್ಷಿಸಿದನು ಎಂದು ಪ್ರಸಿದ್ಧವಾಗಿದೆ. **"ಅಯಂ ಚಕ್ರ-ಮಿಷಣತ್ಸೂರ್ಯಸ್ಯ......................ತ್ವಚೋ ಬುಧ್ನೇ ರಜಸೋ ಅಸ್ಯ ಯೋನೌ ॥"** ಎಂಬಲ್ಲಿ ಸ್ತುತವಾಗಿರುವಂತೆ ಇಂದ್ರನು ಸೂರ್ಯಚಕ್ರವನ್ನು ಹಿಡಿದು ಅಂತರಿಕ್ಷದಲ್ಲಿ ಉದಕಮೂಲವಾದ ಪ್ರದೇಶಗಳನ್ನು ಆಕ್ರಮಿಸಿ ಉದಕದ ಪ್ರವಾಹಕ್ಕೂ, ಪ್ರಕಾಶದ ವಿಸ್ತೃತಿಗೂ ಅಡ್ಡಲಾಗಿ ಬಂದ ಏತಶಾದ್ಯಸುರರನ್ನು ನಾಶಮಾಡಿ, ಲೋಕಕ್ಕೆ ಆದಿತ್ಯಪ್ರಕಾಶವೂ, ಉದಕಪ್ರವಾಹವೂ ಹರಡುವಂತೆ ಮಾಡಿದನು ಎಂದು ತಾತ್ಪರ್ಯವನ್ನು ಹೇಳಬೇಕು.

ಈ ಅಧ್ಯಾಯದಲ್ಲಿ ಅಗಸ್ತ್ಯ-ಲೋಪಾಮುದ್ರೆಯರ ಸಂಭಾಷಣೆಯನ್ನು ವರ್ಣಿಸುವ ಸನ್ನಿವೇಶವು ಕಾವ್ಯದೃಷ್ಟಿಯಿಂದ ಅತ್ಯುತ್ತಮವಾದ ಭಾಗವಾಗಿದೆ. ಮಾನವನ ಐಹಿಕಾಮುಷ್ಮಿಕಗಳೆರಡರ ಧ್ಯೇಯಗಳನ್ನೂ ತಿಳಿಸಿ ಕಾಮವು ಪುರುಷನ ಸಹಜವಾದ ಪ್ರವೃತ್ತಿಯಾದುದರಿಂದ ಅದನ್ನು ನಿರೋಧಿಸುವುದು ಪ್ರಕೃತಿಗೆ ವಿರೋಧವಾಗಿ ವರ್ತಿಸಿದಂತಾಗುವುದೆಂದೂ, ಆದರೆ, ಆ ಕಾಮಸಂತೃಪ್ತಿಯು ಉತ್ತಮವಾದ ಆಧ್ಯಾತ್ಮಿಕಧ್ಯೇಯದ ಸಿದ್ಧಿಗೆ ತಡೆಯಾಗದಿರುವಂತೆ ಮಾಡಲು ಪುರುಷಪ್ರಯತ್ನದಿಂದ ಸಾಧ್ಯವೆಂದೂ ಅಗಸ್ತ್ಯನು ತನ್ನ ಉತ್ತಮವಾದ ಜೀವನದ ಆದರ್ಶದಿಂದ ತೋರಿಸಿದ್ದಾನೆ.

ಲೋಪಾಮುದ್ರೆಯು ಇಂತಹ ಮಹಾನುಭಾವನಾದ ಅಗಸ್ತ್ಯನಿಗೆ ಪತ್ನಿಯಾಗಿದ್ದಾಳೆ. **“ಪೂರ್ವೀರಹಂ ಶರದಃ ಶಶ್ರಮಾಣಾ”** **“ಯೇ ಚಿದ್ಧಿ ಪೂರ್ವ ಋತಸಾಪಃ”** ಎಂಬ ಈ ಎರಡು ವಾಕ್ಯಗಳಲ್ಲಿ ಲೋಪಾಮುದ್ರೆಯು ತನ್ನ ಸಂಯಮಾತ್ಮಕವಾದ ಜೀವನವನ್ನು ತಿಳಿಸಿ ಕೇವಲ ಸಂಯಮವೇ ಜೀವನದ ಪೂರ್ಣವಾದ ಗುರಿಯಲ್ಲವೆಂದೂ, ಸಂಯಮಾತ್ಮಕವಾದ ಜೀವನವನ್ನು ನಡೆಸಿದ ಪ್ರಾಚೀನರಾದ ಋಷಿಗಳೆಲ್ಲರೂ ಸಹ ದಾಂಪತ್ಯ ಜೀವನದ ಸುಖವನ್ನನುಭವಿಸಿ ತಮ್ಮ ಋತಾತ್ಮಕವಾದ ಜೀವನಕ್ಕೆ ಕುಂದನ್ನುಂಟುಮಾಡಿಕೊಳ್ಳಲಿಲ್ಲವೆಂದೂ, ಆದುದರಿಂದ ಅಗಸ್ತ್ಯನೂ ಸಹ ಅದೇ ರೀತಿಯಲ್ಲಿ ಮಾನವನ ಸಹಜವಾದ ಜೀವನಕ್ಕೆ ವಿರೋಧವಾಗಿ ವರ್ತಿಸಬಾರದೆಂದೂ ಪ್ರಾರ್ಥಿಸಿಕೊಳ್ಳುತ್ತಾಳೆ. **“ಧೀರಮಧೀರಾ ಧಯತಿ ಶ್ವಸಂತಂ”** ಎಂಬಲ್ಲಿ ಋಷಿಯು ಅಗಸ್ತ್ಯಲೋಪಾಮುದ್ರೆಯರ ಸ್ವರೂಪಗಳನ್ನು ವರ್ಣಿಸಿದ್ದಾನೆ. ಅತ್ಯುತ್ತಮವಾದ ಧೀರನಾದುದರಿಂದ ಅಗಸ್ತ್ಯನು ಬಹುಕಾಲ ಆತ್ಮಸಂಯಮವನ್ನಾಚರಿಸಿ ಅನಂತರ ಲೋಪಾಮುದ್ರೆಯ ಪ್ರಾರ್ಥನೆಯನ್ನಂಗೀಕರಿಸಿದನು. **“ಉಭೌ ವರ್ಣಾವೃಷಿರುಗ್ರಃ ಪುಪೋಷ ಸತ್ಯಾ ದೇವೇಷ್ವಾಶಿಷೋ ಜಗಾಮ”** ಎಂಬ ವಾಕ್ಯದಿಂದ ಶಿಷ್ಯನು ಅಗಸ್ತ್ಯನ ಮಹಾಮಹಿಮೆಯನ್ನೂ ವರ್ಣಿಸಿದ್ದಾನೆ. ಈ ಸನ್ನಿವೇಶವು ನೈತಿಕವಾದ ದೃಷ್ಟಿಯಿಂದ ಈ ಅಧ್ಯಾಯದಲ್ಲಿ ಅತ್ಯುತ್ತಮವಾದ ಭಾಗವಾಗಿದೆ. ಅಗಸ್ತ್ಯ-ಲೋಪಾಮುದ್ರೆಯರು ಮಾನವರಿಗೆ ಆದರ್ಶಪ್ರಾಯರಾದ ದಂಪತಿಗಳಾಗಿದ್ದಾರೆ. ದಾಂಪತ್ಯ ಜೀವನದಲ್ಲೂ ಬ್ರಹ್ಮಚರ್ಯವು ಹೇಗೆ ಸಾಧ್ಯವೆಂದೂ, ಈ ಬ್ರಹ್ಮಚರ್ಯ ಪರಿಪಾಲನೆಯಿಂದಲೇ ಕಾಮಸಂತೃಪ್ತಿಯೊಡನೆ ಆಧ್ಯಾತ್ಮಿಕಧ್ಯೇಯವನ್ನು ಸಾಧಿಸಲು ಸಾಧ್ಯವಾಗುವುದೆಂದೂ ತಿಳಿಸಿದೆ.

ಅಗಸ್ತ್ಯನ ಉತ್ಪತ್ತಿಯನ್ನೂ ಅವನ ಅಸಾಧಾರಣವಾದ ಆತ್ಮಶಕ್ತಿಯನ್ನೂ ೧-೧೭೯ ನೇ ಸೂಕ್ತದ ವಿಶೇಷ ವಿಷಯಗಳಲ್ಲಿ ತಿಳಿಸಿದೆ. **ಅಗಸ್ತ್ಯ** ಶಬ್ದದ ನಿರ್ವಚನವನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ತಿಳಿಸಿ ಆಯಾ ನಿರ್ವಚನದಂತೆ ಅವನ ಇತಿಹಾಸವನ್ನು ವಿವರಿಸಿರುತ್ತಾರೆ ಪ್ರಕೃತದಲ್ಲಿ ನಾವು ಎರಡು ಮುಖ್ಯವಾದ ಅಭಿಪ್ರಾಯಗಳನ್ನು ಮಾತ್ರ ಪರಿಶೀಲಿಸಬಹುದು. ಅವುಗಳಲ್ಲಿ ಮೊದಲನೆಯದಾಗಿ **ಅಗ** ಶಬ್ದಕ್ಕೆ **ಕುಂಭ**ವೆಂದರ್ಥವಾಗುವುದರಿಂದ ಅಗಸ್ತ್ಯನೆಂದರೆ ಕುಂಭಸ್ಥನೆಂದು ಒಂದರ್ಥವಾಗುತ್ತದೆ. ಕುಂಭಸ್ಥವಾಗವುದು ಸೋಮವು. - ಆದುದರಿಂದ ಅಗಸ್ತ್ಯನೆಂದರೆ ಸೋಮವೆಂದರ್ಥವೆಂಬುದಾಗಿ ಕೆಲವು ಪಂಡಿತರ ಮತ. M. Bergaigne ಎಂಬ ಫ್ರೆಂಚ್ ಪಂಡಿತನು ಈ ವಿಷಯವನ್ನ ತಿಳಿಸುತ್ತಾ ಹೀಗೆ ಹೇಳಿದ್ದಾನೆ.

> “The hymn 179 has a mystical meaning, Agastya being identifiable with the celestial Soma whom Lopamudra, representing a fervant prayer, succeeds after long labour in drawing down from his secret dwelling place”

(La Religion Vedique. Vol. II. p. 394).

ಎಂದರೆ ಅಗಸ್ತ್ಯನು ಕುಂಭಸ್ಥವಾದ ಸೋಮನೆಂದೂ, ಲೋಪಾಮುದ್ರೆಯೇ ಶ್ರದ್ಧೆಯ ಭೌತಿಕರೂಪವೆಂದೂ, ಈ ಶ್ರದ್ಧಾರೂಪವಾದ ಪ್ರಾರ್ಥನೆಯ ಮೇರೆ ರಹಸ್ಯವಾಗಿ ಅಡಗಿದ್ದ (ಅಗಸ್ತ್ಯಾತ್ಮಕವಾದ) ಸೋಮವು ಹೊರಕ್ಕೆ ಬಂದು ದೇವತೆಗಳ ತೃಪ್ತಿಗೆ ಕಾರಣವಾಯಿತೆಂದೂ ಈ ವಾಕ್ಯಗಳ ಅಭಿಪ್ರಾಯವಾಗಿದೆ. ಇದು ಕೇವಲ ಕಲ್ಪಿತವಾದ ವಿವರಣೆ ಯಾಗುತ್ತದೆಂದು ಇನ್ನು ಕೆಲವರ ಮತವಾಗಿದೆ.

ಎರಡನೆಯದಾಗಿ, **ಅಗ** ಶಬ್ದಕ್ಕೆ ಪರ್ವತವೆಂದರ್ಥಮಾಡಿ, **ಅಗಂ ಸ್ತ್ಯಾಯತೀತ್ಯಗಸ್ತ್ಯಃ ।** (ವಿಂಧ್ಯ) ಪರ್ವತವನ್ನು ತಡೆದು ನಿಲ್ಲಿಸಿದುದರಿಂದ **ಅಗಸ್ತ್ಯ**ನೆಂಬ ಹೆಸರು ಪ್ರಸಿದ್ಧವಾಯಿತೆಂದೂ ಇನ್ನೊಂದು ನಿರ್ವಚನವಿದೆ. ಆದರೆ ಅಗಸ್ತ್ಯನು ಪರ್ವತವನ್ನು ತಡೆದು ನಿಲ್ಲಿಸಿದ ಕಥೆಯು ಮಹಾಭಾರತಾದಿಗಳಲ್ಲಿ ಹೇಳಲ್ಪಟ್ಟಿದೆಯೇ ಹೊರತು ಈ ವಿಷಯದಲ್ಲಿ ವೈದಿಕವಾದ ಸನ್ನಿವೇಶಗಳನ್ನು ವಿವರಿಸಲು ಅನುಕೂಲವಾದ ನಿರ್ವಚನವಿಲ್ಲ. **ಕುಂಭೋದ್ಭವ**ನೆಂಬ ವಿಷಯವು **ವೈದಿಕ** ಮತ್ತು **ಪೌರಾಣಿಕ**ವಾದ ವರ್ಣನೆಗಳಲ್ಲಿರುವುದರಿಂದ ಕುಂಭಸಂಭವನೆಂಬುವುದು ಎರಡಕ್ಕೂ ಸಾಧಾರಣವಾದ ವಿಷಯವಾಗಿದೆ. **ಮಾನ್ಯ, ಮಾಂದಾರ್ಯ** ಇತ್ಯಾದಿ ವಿಶೇಷಣಗಳಿಗಿರುವ ಅರ್ಥವನ್ನು ಆಯಾ ಸಂದರ್ಭಗಳಲ್ಲಿ ವಿಶೇಷವಿಷಯಪ್ರಕರಣಗಳಲ್ಲಿ ತಿಳಿಸಲಾಗಿದೆ. ಆದರೆ ಮಾನ್ಯವೆಂಬ ವಿಶೇಷಣವೂ ಸಹ ಅಗಸ್ತ್ಯನ ಸೋಮಾತ್ಮಕವಾದ ಸ್ವರೂಪವನ್ನು ತಿಳಿಸುತ್ತದೆಯೆಂಬುದಕ್ಕೆ ಇನ್ನೊಂದು ಆಧಾರವಾಗಿದೆಯೆಂದೂ ಕೆಲವರ ಅಭಿಪ್ರಾಯ ವಾಗಿದೆ. ಇದಕ್ಕೆ ಬೃಹದ್ದೇವತಾದಿ ವಾಕ್ಯಗಳನ್ನು ಉದಾಹರಿಸಿ ತಮ್ಮ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ.

**ಮಾನೇನ ಸಂಮಿತೋ ಯಸ್ಮಾತ್ತಸ್ಮಾನ್ಮಾನ್ಯ ಇಹೋಚ್ಯತೇ ।**
**ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ॥**

(ಬೃ. ದೇ. ೫-೧೫೩)

ನಿಯಮಿತವಾದ ಪ್ರಮಾಣವು ಅಳೆಯಲ್ಪಡುವ ಕುಂಭದಿಂದ ಹುಟ್ಟಿದ್ದರಿಂದ ಇವನಿಗೆ **ಮಾನ್ಯ** ಎಂಬ ಹೆಸರು ಎಂಬುದಾಗಿ ಈ ಅಂಶವನ್ನು ತಿಳಿಸಿದೆ. ಮತ್ತು ಇದೇ ವಿಷಯವನ್ನು–

**ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।**
**ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥**

(ಋ. ಸಂ. ೭-೩೩-೧೩)

ಇತ್ಯಾದಿ ಋಕ್ಕುಗಳಲ್ಲೂ ಸಹ ತಿಳಿಸಿ ಅಗಸ್ತ್ಯನನ್ನು ನಿಯಮಿತವಾದ ಪ್ರಮಾಣವುಳ್ಳವನೆಂದು ವರ್ಣಿಸಿದೆ. ಆದುದ ರಿಂದ ಮೇಲಿನ ಅಭಿಪ್ರಾಯಕ್ಕೆ ಸಮರ್ಥನೆಯು ದೊರಕುತ್ತದೆಂದು ಅವರ ಮತವಾಗಿದೆ. ಆದರೆ ಅಗಸ್ತ್ಯನು ಐತಿಹಾಸಿಕವಾದ ವ್ಯಕ್ತಿಯೆಂಬುದರಲ್ಲಿ ಸಂದೇಹವಿಲ್ಲ. ಋಷಿಶ್ರೇಷ್ಠನಾಗಿಯೂ ಅತ್ಯದ್ಭುತವಾದ ತಪೋಮಹಿಮೆ ಯಿಂದಲೂ, ಮಾನವಾತೀತವಾದ ಧರ್ಮಗಳಿಂದಲೂ ಕೂಡಿ ಮಾನವರಿಗೆ ಅತ್ಯುತ್ತಮವಾದ ಮಾರ್ಗದರ್ಶಕನಾಗಿದ್ದ ನೆಂಬುದು ಪುರಾಣೇತಿಹಾಸಗಳಲ್ಲೆಲ್ಲಾ ಪ್ರಸಿದ್ಧವಾದ ವಿಷಯವಾಗಿದೆ.

೧೮೦ ರಿಂದ ೧೮೩ ರವರೆಗೆ ನಾಲ್ಕುಸೂಕ್ತಗಳೂ ಸಹ ಅಶ್ವಿನೀದೇವತೆಗಳನ್ನುದ್ದೇಶಿಸಿ ಪಠಿಸಿದ ಸೂಕ್ತ ಗಳಾಗಿವೆ. ಈ ಸೂಕ್ತಗಳಲ್ಲಿ ಹಿಂದೆಲ್ಲಾ ಹೇಳಿರುವಂತೆ ಅಶ್ವಿನಿದೇವತೆಗಳು ತಮ್ಮ ಭಕ್ತರಿಗೆ ಮಾಡಿದ ಉಪಕಾರಗಳನ್ನು ವರ್ಣಿಸುವುದರ ಜೊತೆಗೆ ಅಶ್ವಿನೀದೇವತೆಗಳ ವೈಶಿಷ್ಟ್ಯವನ್ನು ತಿಳಿಸುವ ಅಪರೂಪವಾದ ಸನ್ನಿವೇಶಗಳೂ ವರ್ಣಿತ

ವಾಗಿವೆ. ಇಲ್ಲಿಯೂ ಸಹ ಅಗಸ್ತ್ಯಮಹಾಮುನಿಯ ಮಹತ್ತ್ವವು ತಿಳಿಯುತ್ತದೆ. "**ಅಗಸ್ತ್ಯೋ ನರಾಂ ನೃಷು ಪ್ರಶಸ್ತಃ ಕಾರಾಧುನೀವ ಚಿತಯತ್ಸಹಸ್ರೈಃ**" ಎಂಬಲ್ಲಿ ಯಾಗಾದಿ ಕರ್ಮಗಳನ್ನಾಚರಿಸುವವರಲ್ಲೆಲ್ಲಾ ಅತಿಶಯವಾದ ಮಹತ್ವವುಳ್ಳ ಅಗಸ್ತ್ಯನು ಅಶ್ವಿನೀದೇವತೆಗಳನ್ನು ಸ್ತುತಿಸಿ ಅವರ ಅನುಗ್ರಹಕ್ಕೆ ಪಾತ್ರನಾದನು ಎಂದು ಸ್ತುತವಾಗಿದೆ. ಹೀಗೆಯೇ ಅನೇಕ ಸನ್ನಿವೇಶಗಳಲ್ಲಿ ಅತ್ಯುತ್ತಮವಾದ ಭಾವಗಳು ಕಾವ್ಯಾತ್ಮಕವಾದ ಶೈಲಿಯಲ್ಲಿ ಪ್ರತಿಪಾದಿತವಾಗಿವೆ. ಅವನ್ನು ಯಥಾಮತಿ ಆಯಾ ಸಂದರ್ಭಗಳಲ್ಲಿ ವಿವರಿಸಲಾಗಿದೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ, ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಶ್ರೀಮತ್ಖರನಾಮಸಂವತ್ಸರ ಶ್ರಾವಣ ಶುದ್ಧ ಪಂಚಮೀ ಮಂಗಳವಾರ
7—8—1951.

ಅನುವಾದಕ:
**ಹೆಚ್. ಪಿ. ವೆಂಕಟರಾವ್,**
ಆಸ್ಥಾನಮಹಾವಿದ್ವಾನ್.

॥ ಶ್ರೀಃ ॥

# ವಿಷಯಾನುಕ್ರಮಣಿಕೆ



## ದ್ವಿತೀಯಾಷ್ಟಕದಲ್ಲಿ ಚತುರ್ಥಾಧ್ಯಾಯವು

## ಪ್ರಥಮಮಂಡಲದ ಸೂಕ್ತಗಳು ೧೬೬–೧೮೪


**೧೬೬. ತನ್ನು ವೋಚಾಮ ಎಂಬ ನೂರ ಅರವತ್ತಾರನೆಯ ಸೂಕ್ತವು—**

ಅಗಸ್ತ್ಯಋಷಿಯ ಸೂಕ್ಷ್ಮಪರಿಚಯ 1

ಸೂಕ್ತದ ಋಷಿದೇವತಾ ಛಂದಸ್ಸುಗಳು 3

**ವಿದಥ** ಶಬ್ದದ ರೂಪನಿಷ್ಪತ್ತಿ ಮತ್ತು ಅರ್ಥಾನುವಿವರಣೆ 9

ಮರುದ್ದೇವತೆಗಳು ರುದ್ರಪುತ್ರರೆಂಬ ವಿಚಾರ 13

**ಹರ್ಮ್ಯ** ಶಬ್ದಾರ್ಥವಿವರಣೆ ಇತ್ಯಾದಿ 21

**ಸ್ಕಂಭದೇಷ್ಣ, ಅನವಭ್ರರಾಧಸಃ, ಅಲಾತೃಣಾಸಃ** ಇತ್ಯಾದಿ ಶಬ್ದಗಳ ಅರ್ಥವಿವರಣೆ ಇತ್ಯಾದಿ 33

**ಅರ್ಕ** ಶಬ್ದದ ನಾನಾರ್ಥಗಳು 35

**ರಥ** ಶಬ್ದರೂಪನಿಷ್ಪತ್ತಿ, ಅರ್ಥವಿವರಣೆ 42

**ವೃಷಖಾದಯಃ ಖಾದಿ** ಮೊದಲಾದ ಶಬ್ದಾರ್ಥ ವಿಚಾರದಲ್ಲಿ ಆಂಗ್ಲ ಪಂಡಿತರ ಅಭಿಪ್ರಾಯಗಳು 43

**ಅಂಸ** ಶಬ್ದಾರ್ಥ ಇತ್ಯಾದಿ 45

**ರುಕ್ಮ, ರಭಸ, ಕ್ಷುರ** ಇತ್ಯಾದಿ ಶಬ್ದಗಳ ವಿವರಣೆ 49

**ವ್ರತ** ಶಬ್ದಾರ್ಥ ವಿವರಣೆ 57

**ಜಾಮಿ** ಶಬ್ದ ವಿವರಣೆ 64

**೧೬೭. ಸಹಸ್ರಂ ತೇ ಎಂಬ ನೂರ ಅರವತ್ತೇಳನೆಯ ಸೂಕ್ತವು—**

ಸೂಕ್ತದ ಋಷಿದೇವತಾ ಛಂದಸ್ಸುಗಳು 73

**ಇಂದ್ರ** ಶಬ್ದದ ರೂಪನಿಷ್ಪತ್ತಿ ಇತ್ಯಾದಿ 75

**ಸಮುದ್ರ** ಶಬ್ದದ ರೂಪನಿಷ್ಪತ್ತಿ 78

**ರೋದಸೀ** ಎಂಬ ಶಬ್ದದ ನಾನಾರ್ಥಗಳು 86

**ಚಿತ್** ಎಂಬ ಶಬ್ದದ ನಾನಾವಿಧ ಪ್ರಯೋಗಗಳು ಇತ್ಯಾದಿ 99

೧೬೮. ಯಜ್ಞಾಯಜ್ಞಾ ಎಂಬ ನೂರ ಅರವತ್ತೆಂಟನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 113
**ತುರ್ವಣಿ, ಸುವೃಕ್ತಿ** ಇತ್ಯಾದಿ ಶಬ್ದಗಳ ಅರ್ಥವಿವರಣೆ 115
**ಋಷ್ಟಿ** ಶಬ್ದ ವಿವರಣೆ ಇತ್ಯಾದಿ 128
**ರಜಸ್** ಶಬ್ದಾರ್ಥ ವಿವರಣೆ 131
**ಪವಿಃ, ಸಿಂಧವಃ** ಇತ್ಯಾದಿ ಶಬ್ದಗಳ ವಿವರಣೆ 139
**ಪೃಶ್ನಿ** ಶಬ್ದ ವಿವರಣೆ 142

೧೬೯. ಮಹಶ್ಚಿತ್ತ್ವಂ ಎಂಬ ನೂರ ಅರವತ್ತೊಂಭತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 146
ಮರುದ್ದೇವತೆಗಳ ಉತ್ಪತ್ತಿ ವಿಚಾರ ಇತ್ಯಾದಿ 148
**ಸನೇಮಿ** ಶಬ್ದಾರ್ಥ ವಿಚಾರ 156
**ದಕ್ಷಿಣಾ** ಶಬ್ದಾರ್ಥ ಇತ್ಯಾದಿ 160
**ಪೃಥಿವೀ** ಶಬ್ದದ ನಾನಾರ್ಥಗಳು 167
**ವಿಶ್ವಜನ್ಯಾ** ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ 174

೧೭೦. ನ ನೂನಮಸ್ತಿ ಎಂಬ ನೂರ ಎಪ್ಪತ್ತನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 176
**ನೂನಂ** ಎಂಬ ಶಬ್ದದ ನಾನಾರ್ಥಗಳು 178
**ನ ನೂನಂ** ಎಂಬ ಋಕ್ಕಿಗೆ ಯಾಸ್ಕರ ನಿರ್ವಚನವು 179
ಇಂದ್ರಾಗಸ್ತ್ಯಸಂವಾದದಲ್ಲಿ ಅಗಸ್ತ್ಯಋಷಿಯ ವಾಕ್ಯವು 182
ಇಂದ್ರನ ವಾಕ್ಯವು 184
**ಅಮೃತೆ** ಶಬ್ದದ ವಿವಿಧಾರ್ಥಗಳು 187
**ವಸು** ಶಬ್ದದ ಅನೇಕಾರ್ಥಗಳು 190

೧೭೧. ಪ್ರತಿ ವ ಏನಾ ಎಂಬ ನೂರ ಎಪ್ಪತ್ತೊಂದನೆಯ ಸೂಕ್ತವು—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 192
ಇಂದ್ರಾಗಸ್ತ್ಯರಿಗೆ ಉಂಟಾದ ಅಸಮಾಧಾನಕ್ಕೆ ಕಾರಣ ಇತ್ಯಾದಿ 193
**ತುರ** ಶಬ್ದಾರ್ಥ ವಿವರಣೆ 196
**ಸುಮತಿ** ಶಬ್ದಾರ್ಥ ವಿವರಣೆ ಇತ್ಯಾದಿ 197
**ಮಘವತ್** ಶಬ್ದದ ಪ್ರಯೋಗ ಮತ್ತು ಅರ್ಥವಿವರಣೆ 205
**ವನ** ಶಬ್ದ ವಿವರಣೆ 207

ಇಂದ್ರನಿಗೂ ಮರುತ್ತುಗಳಿಗೂ ಇರುವ ಸಾಹಚರ್ಯ, ಮರುತ್ತುಗಳು ಇಂದ್ರನಿಗೆ ಮಾಡಿದ ಸಹಾಯ ಇತ್ಯಾದಿ 210

ಅಗಸ್ತ್ಯಋಷಿಯ ಪಶ್ಚಾತ್ತಾಪ 213

**ಮಾನಾಸಃ, ಮಾನ್ಯ** ಎಂಬ ಶಬ್ದಗಳ ನಾನಾರ್ಥಗಳು ಮತ್ತು ಪ್ರಯೋಗಗಳು ಇತ್ಯಾದಿ 215

**ವೃಷಭೆ** ಶಬ್ದಾರ್ಥ ವಿವರಣೆ ಇತ್ಯಾದಿ 219

**ಸ್ಯಾನ್** ಶಬ್ದದ ಅರ್ಥಾನುವಾದ 222

**ವೃಜನ** ಶಬ್ದದ ನಾನಾ ಅರ್ಥಗಳು ಮತ್ತು ಪ್ರಯೋಗಗಳು 223

**ಉದರ್ಕ** ಅಥವಾ ಅಭ್ಯಾಸಗಳ ಉಪಯೋಗ ಇತ್ಯಾದಿ 225

೧೭೨. **ಚಿತ್ರೋ ವೋಽಸ್ತು ಎಂಬ ನೂರ ಎಪ್ಪತ್ತೆರಡನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 226

**ಏವೈಃ ಏವಾಸಃ** ಇತ್ಯಾದಿ ಶಬ್ದಗಳ ಪ್ರಯೋಗ ಇತ್ಯಾದಿ 228

**ಸುದಾನು** ಶಬ್ದಾರ್ಥ ವಿಚಾರ 228

**ಅಹಿಭಾನವಃ** ಎಂಬ ಶಬ್ದದ ಅರ್ಥಾನುವಾದ 230

**ತೃಣಸ್ಕಂದಸ್ಯ** ಎಂಬ ಶಬ್ದದ ಅರ್ಥವಿಚಾರ 234

೧೭೩. **ಗಾಯತ್ಸಾಮ ಎಂಬ ನೂರ ಎಪ್ಪತ್ತಮೂರನೆಯ ಸೂಕ್ತವು—**

ಸೂಕ್ತದ ವಿನಿಯೋಗ 236

ಋಷಿದೇವತಾ ಛಂದಸ್ಸುಗಳು 237

ಮರುತ್ವತೀಯಶಸ್ತ್ರದ ಸ್ವರೂಪ ಮತ್ತು ವಿವರಣೆ 238

**ನಭನ್ಯಂ** ಎಂಬ ಶಬ್ದದ ರೂಪನಿಷ್ಪತ್ತಿ ಇತ್ಯಾದಿ 240

**ಸಾಮ** ಶಬ್ದದ ನಿರ್ವಚನ ರೂಪನಿಷ್ಪತ್ತಿ ಅರ್ಥಾನುವಾದ ಇತ್ಯಾದಿ 242

**ಧೇನು** ಶಬ್ದದ ರೂಪನಿಷ್ಪತ್ತಿ ಅರ್ಥವಿವರಣೆ 245

**ಸ್ವಃ** ಎಂಬ ಶಬ್ದದ ನಾನಾರ್ಥಗಳು ಮತ್ತು ಪ್ರಯೋಗಗಳು ಉದಾಹರಣೆ ಸಮೇತ 246

**ವೃಷಾ, ವೃಷಭಃ, ವೃಷಣ** ಎಂಬ ಶಬ್ದಗಳ ನಾನಾರ್ಥಗಳು ಮತ್ತು ಪ್ರಯೋಗಗಗಳು—ಉದಾಹರಣೆ ಸಮೇತ 252

**ಮೃಗಃ ಜುಗುರ್ಯಾತ್, ಗೂರ್ತ** ಇತ್ಯಾದಿ ಶಬ್ದಗಳ ಅರ್ಥವಿವರಣೆ 255

**ಹೋತಾ** ಎಂಬ ಶಬ್ದದ ಅರ್ಥಗಳು ಮತ್ತು ಪ್ರಯೋಗಗಳು 258

**ನಕ್ಷತ್, ಶರತ್** ಇತ್ಯಾದಿ ಶಬ್ದಗಳ ಅರ್ಥವಿವರಣೆ 260

**ಚ್ಯೌತ್ನ, ದಸ್ಮ** ಇತ್ಯಾದಿ ಶಬ್ದಗಳ ವಿವರಣೆ 264

**ನಾಸತ್ಯಾ** ಎಂಬ ಶಬ್ದದ ರೂಪನಿಷ್ಪತ್ತಿ ಇತ್ಯಾದಿ 265
**ತೆಷ್ಟ್ಯ** ಶಬ್ದಾರ್ಥ ವಿವರಣೆ 272
**ಸ್ವಧಾ** ಶಬ್ದಾರ್ಥ, ರೂಪನಿಷ್ಪತ್ತಿ, ಪ್ರಯೋಗ ಇತ್ಯಾದಿ 273
**ರೋದಸೀ** ಎಂಬ ಶಬ್ದದ ನಾನಾರ್ಥ ಮತ್ತು ಪ್ರಯೋಗಗಳೂ **ರೋದಸೀ** ಎಂಬುದು ರುದ್ರಪತ್ನಿಯ ಹೆಸರು ಎಂಬ ವಿಚಾರ ಇತ್ಯಾದಿ ವಿಷಯ ವಿಮರ್ಶೆ 275
**ಸೂರಿ** ಶಬ್ದಾರ್ಥ ವಿಚಾರ, ನಿರ್ವಚನ, ಪ್ರಯೋಗ ಇತ್ಯಾದಿ 281
ಸವನತ್ರಯ ವಿಚಾರ 285
**ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ** ಎಂಬ ಸವನತ್ರಯಗಳಲ್ಲಿ ಉಪಯೋಗಿಸುವ ಸ್ತೋತ್ರ ಮತ್ತು ಶಸ್ತ್ರಮಂತ್ರಗಳು 290
**ಸಮುದ್ರ** ಶಬ್ದದ ವಿಸ್ತಾರವಾದ ವಿವರಣೆ ಇತ್ಯಾದಿ 291
**ಅವಯಾಃ** ಎಂಬ ಶಬ್ದದ ವಿವರಣೆ ಇತ್ಯಾದಿ 305
**ಜೀರದಾನು** ಶಬ್ದದ ರೂಪನಿಷ್ಪತ್ತಿ ಮತ್ತು ವಿವರಣೆ 309

೧೭೪. ತ್ವಂ ರಾಜೇಂದ್ರ ಎಂಬ **ನೂರ ಎಪ್ಪತ್ತನಾಲ್ಕನೆಯ ಸೂಕ್ತವು**—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 313
**ಅಸುರ** ಶಬ್ದದ ನಾನಾವಿಧ ಅರ್ಥ ಮತ್ತು ಪ್ರಯೋಗಗಳು 315
**ಸತ್ಪತಿ, ಸತ್ಯ** ಮೊದಲಾದ ಶಬ್ದಗಳ ವಿವರಣೆ 317
**ಪುರುಕುತ್ಸ**ನೆಂಬ ರಾಜನ ವಿಚಾರ 323
**ಯೋನಿ** ಶಬ್ದಾರ್ಥ ವಿವರಣೆ ಉದಾಹರಣೆ ಸಮೇತ 331
**ಕುತ್ಸ**ನ ವಿಚಾರ 335
**ಆಯುಃ** ಶಬ್ದದ ವಿವಿಧಾರ್ಥಗಳು 343
**ಸ್ವಸ್ತಿ** ಶಬ್ದ ವಿವರಣೆ 356

೧೭೫. ಮತ್ಸ್ಯಪಾಯಿ ಎಂಬ **ನೂರ ಎಪ್ಪತ್ತೈದನೆಯ ಸೂಕ್ತವು**—

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 361
**ಸ್ವರಸಾಮದ** ವಿಚಾರ 363
**ದಸ್ಯು** ಶಬ್ದ ವಿವರಣೆ ಇತ್ಯಾದಿ 374
**ಕವಿ** ಶಬ್ದದ ನಾನಾರ್ಥಗಳು ಇತ್ಯಾದಿ 377
**ಕುತ್ಸ** ಮತ್ತು **ಶುಷ್ಣಾಸುರನ** ವಿಷಯ ಇತ್ಯಾದಿ 380
**ಕ್ರತು** ಶಬ್ದದ ವಿಸ್ತಾರವಾದ ವಿವರಣೆ 385
**ನಿವಿದ್** ಮಂತ್ರಗಳ ವೈಶಿಷ್ಟ್ಯ ಮತ್ತು ಅವುಗಳ ಸ್ವರೂಪ 390

**೧೭೬. ಮತ್ಸಿ ನೋ ಎಂಬ ನೂರ ಎಪ್ಪತ್ತಾರನೆಯ ಸೂಕ್ತವು—**

ಇಂದ್ರನ ಸೋಮಪಾನ ವಿಚಾರ ಇತ್ಯಾದಿ 397

**ಜರ್ಷಣಿ, ಸ್ವಧಾ** ಎಂಬ ಶಬ್ದಗಳ ವಿವರಣೆ 402

**ಪಂಚಜನರು** ಯಾರು ಎಂಬ ವಿಚಾರ 407

**ಸೂರಿ** ಶಬ್ದದ ವಿವರಣೆ ಇತ್ಯಾದಿ 412

**ದ್ವಿಬರ್ಹಸಃ ಅರ್ಕ** ಇತ್ಯಾದಿ ಶಬ್ದಗಳ ವಿಸ್ತಾರವಾದ ವಿವರಣೆ 416

**ನಿವಿದ್** ಮತ್ತು **ಉಕ್ಥ** ಮಂತ್ರಗಳ ಸ್ವರೂಪ ಇತ್ಯಾದಿ 421

**೧೭೭. ಆ ಚರ್ಷಣಿಪ್ರಾ ಎಂಬ ನೂರ ಎಪ್ಪತ್ತೇಳನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 427

**ಚರ್ಷಣಿ, ಕೃಷ್ಟಿ** ಇತ್ಯಾದಿ ಶಬ್ದಗಳ ವಿವರಣೆ 429

**ವೃಷನ್** ಶಬ್ದದ ವೈಶಿಷ್ಟ್ಯ ಇತ್ಯಾದಿ 436

**ಹಾರಿಯೋಜನ** ಶಬ್ದದ ವಿವರಣೆ 440

**ಕಾರೋಃ** ಎಂಬ ಶಬ್ದದ ವಿವರಣೆ 445

**೧೭೮. ಯದ್ಧ ಸ್ಯಾ ತೇ ಎಂಬ ನೂರ ಎಪ್ಪತ್ತೆಂಟನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 446

**ಶ್ರುಷ್ಟಿ, ಆಯುಃ** ಎಂಬ ಶಬ್ದಗಳ ನಾನಾರ್ಥಗಳು 448

**ಯೋನಿ** ಶಬ್ದದ ವಿಧವಿಧ ಪ್ರಯೋಗಗಳು 455

**ಸಮರ್ಯ** ಶಬ್ದಾರ್ಥ ವಿಚಾರ 463

**೧೭೯. ಪೂರ್ವೀರಹಂ ಎಂಬ ನೂರ ಎಪ್ಪತ್ತೊಂಭತ್ತನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 468

ಲೋಪಾಮುದ್ರೆಗೂ ಅಗಸ್ತ್ಯಋಷಿಗೂ ನಡೆದ ಸಂಭಾಷಣೆ ಇತ್ಯಾದಿ 470

ಲೋಪಾಮುದ್ರೆಯು ರತಿ ವಿಷಯವಾಗಿ ಅಗಸ್ತ್ಯನನ್ನು ಪ್ರಾರ್ಥಿಸುವುದು 473

**ಋತಸಾಪ** ಶಬ್ದಾರ್ಥ ವಿಚಾರ 474

ಅಗಸ್ತ್ಯನು ಲೋಪಾಮುದ್ರೆಗೆ ಹೇಳುವ ಪ್ರತ್ಯುತ್ತರ ಇತ್ಯಾದಿ ವಿಷಯ 479

ಬೃಹದ್ದೇವತಾ ಗ್ರಂಥದ ಪ್ರಕಾರ ಅಗಸ್ತ್ಯ ಲೋಪಾಮುದ್ರೆಯರ ವಿಷಯ 483

ಅಗಸ್ತ್ಯಶಿಷ್ಯನು ಗುರು ಮತ್ತು ಗುರುಪತ್ನಿಯರ ರಹಸ್ಯ ಸಂಭಾಷಣೆಯನ್ನು ಕೇಳಿ ಪಶ್ಚಾತ್ತಾಪವನ್ನು ಸೂಚಿಸುವುದು ಇತ್ಯಾದಿ 488

ಅಗಸ್ತ್ಯನು ಮಿತ್ರಾವರುಣರ ಪುತ್ರನೆಂಬ ವಿಷಯದಲ್ಲಿ ಬೃಹದ್ದೇವತಾಕಾರರ ವಿವರಣೆ ಇತ್ಯಾದಿ 492

ಋಷಿಗಳ ಸ್ವರೂಪ ಇತ್ಯಾದಿ 494

೧೮೦ **ಯುವೋ ರಜಾಂಸಿ ಎಂಬ ನೂರ ಎಂಭತ್ತನೆಯ ಸೂಕ್ತವು—**

ಸೂಕ್ತದ ವಿನಿಯೋಗ 496
ಋಷಿದೇವತಾ ಛಂದಸ್ಸುಗಳು 497
**ರಜಃ** ಶಬ್ದದ ನಾನಾರ್ಥಗಳು ಉದಾಹರಣೆ ಸಮೇತ 499
ಅಶ್ವಿನೀದೇವತೆಗಳ ರಥದ ಸ್ವರೂಪ 503
**ಹ್ವಾರಃ** ಎಂಬ ಶಬ್ದದ ವಿವರಣೆ 507
ಅಶ್ವಿನೀದೇವತೆಗಳು **ಶಯುುವೆಂಬ** ರಾಜರ್ಷಿಯ ಧೇನುವನ್ನು ಹಾಲುಕೊಡುವಂತೆ ಮಾಡಿದ ವಿಚಾರ ಇತ್ಯಾದಿ 509
**ಅತ್ರಿ** ಋಷಿಗೆ ಅಶ್ವಿನೀದೇವತೆಗಳು ಸಹಾಯಮಾಡಿದ ವಿಚಾರ 512
**ಘರ್ಮ** ಮತ್ತು **ಪ್ರವರ್ಗ್ಯ**ಗಳ ಸ್ವರೂಪ ಇತ್ಯಾದಿ 516
**ತುಗ್ರ** ಪುತ್ರನಾದ **ಭುಜ್ಯು**ವನ್ನು ಅಶ್ವಿನೀದೇವತೆಗಳು ಸಮುದ್ರ ಮಧ್ಯದಿಂದ ರಕ್ಷಿಸಿದವಿಷಯ 523
**ಪುರಂಧಿ**ಶಬ್ದದ ನಾನಾರ್ಥ ವಿವರಣೆ 528
**ಪಣಿ** ಎಂಬ ಅಸುರರ ವಿಷಯ 536
**ರುದ್ರ** ಶಬ್ದನಿಷ್ಪತ್ತಿ ಇತ್ಯಾದಿ 541
ಯಜ್ಞನಿರ್ವಹಣದಲ್ಲಿ ಅಶ್ವಿನೀದೇವತೆಗಳ ಪಾತ್ರವಿಚಾರ 545

೧೮೧. **ಕದು ಪ್ರೇಷ್ಠೌ ಎಂಬ ನೂರ ಎಂಭತ್ತೊಂದನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 551
ಅಶ್ವಿನೀದೇವತೆಗಳು ದೇವತೆಗಳ ಯಜ್ಞವನ್ನು ಪೂರ್ಣಗೊಳಿಸಿದ ವಿಚಾರ ಇತ್ಯಾದಿ 553
**ವಾರುಣಾಶ್ವ** ವಿಚಾರ 557
**ಧಿಷ್ಣ್ಯ** ಶಬ್ದಾರ್ಥವಿಚಾರ ಮತ್ತು ಪ್ರಯೋಗ 559
ಅಶ್ವಿನೀದೇವತೆಗಳು ಯಾರು, ಇವರ ಸ್ವರೂಪವೇನು ಎಂಬ ವಿಷಯ ವಿಮರ್ಶೆ ಇತ್ಯಾದಿ 566
ಅಶ್ವಿನೀದೇವತೆಗಳ ಉತ್ಪತ್ತಿವಿಚಾರ ಇತ್ಯಾದಿ 568
ಅಶ್ವಿನೀದೇವತೆಗಳ ರಥ ಸಂಚಾರಕ್ರಮ 573
ಅಶ್ವಿನೀದೇವತೆಗಳನ್ನು ಸೃಷ್ಟಿಕರ್ತರೆಂದು ವರ್ಣಿಸಿರುವ ವಿಚಾರ 581

೧೮೨. **ಅಭೂದಿದಂ ಎಂಬ ನೂರ ಎಂಭತ್ತೆರಡನೆಯ ಸೂಕ್ತವು—**

ಸೂಕ್ತದ ವಿನಿಯೋಗ 591
ಋಷಿದೇವತಾ ಛಂದಸ್ಸುಗಳು 592
**ಇಂದ್ರ**ಶಬ್ದನಿಷ್ಪತ್ತಿ ಮತ್ತು ಅರ್ಥವಿವರಣೆ 598
**ದಧೀಚಿ**ಋಷಿಯ ವೃತ್ತಾಂತ 601
**ಸಿಂಧು**ಶಬ್ದದ ನಾನಾರ್ಥಗಳು ಮತ್ತು ಪ್ರಯೋಗಗಳು 612

ಸಮುದ್ರಮಧ್ಯದಲ್ಲಿ ಮುಳುಗುತ್ತಿದ್ದ **ಭುಜ್ಯ**ವೆಂಬ ರಾಜನನ್ನು ಅಶ್ವಿನೀದೇವತೆಗಳ ನಾಲ್ಕು ದೋಣಿಗಳ ಮೂಲಕ ರಕ್ಷಿಸಿದ ವಿಚಾರ 616

**ಅಗಸ್ತ್ಯ**ಋಷಿಗೆ **ಮಾನ್ಯ**ನೆಂಬ ಹೆಸರು ಹೇಗೆ ಬಂದಿತೆಂಬ ವಿಚಾರ 621

೧೮೩. **ತಂ ಯುಂಜಾಥಾಂ ಎಂಬ ನೂರ ಎಂಭತ್ತಮೂರನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 624

ಅಶ್ವಿನೀದೇವತೆಗಳ ರಥದ ವರ್ಣನೆ ಇತ್ಯಾದಿ 626

**ತ್ರಿಚಕ್ರ, ತ್ರಿಧಾತು** ಇತ್ಯಾದಿ ಶಬ್ದಗಳ ಅರ್ಥವಿವರಣೆ 628

**ವರ್ತಿ**ಶಬ್ದವಿವರಣೆ 635

**ವೃಕ**ಶಬ್ದದ ನಾನಾರ್ಥಗಳು ಮತ್ತು ಉದಾಹರಣೆಗಳು ಇತ್ಯಾದಿ 638

ಅಶ್ವಿನೀದೇವತೆಗಳು **ಪುರುಮೀಳ್ಹ, ಅತ್ರಿ, ಗೋತಮ** ಎಂಬುವರನ್ನು ರಕ್ಷಿಸಿದ ವಿಚಾರ, ಪುರುಮೀಳ್ಹನ ವೃತ್ತಾಂತ ಇತ್ಯಾದಿ 643

ರಹುಗಣಪುತ್ರನಾದ **ಗೋತಮನ** ವೃತ್ತಾಂತ 647

**ದೇವಯಾನ** ಮತ್ತು **ಪಿತೃಯಾಣ** ಇವುಗಳ ವರ್ಣನೆ ಇತ್ಯಾದಿ 652

ವಿಷಯಾನುಕ್ರಮಣಿಕೆ ಸಮಾಪ್ತವು



## ಸಂಕೇತಾಕ್ಷರಗಳ ವಿವರಣೆಯು.

---

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮ ಸೂತ್ರ
ಆಪ. ಪ. ಸೂ—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ ಅಥವಾ ಆ ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದ ಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೋಯೋಪನಿಷತ್
ಐ. ಬ್ರಾ.—ಐತರೇಯ ಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.

---



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ—೧೩

## ॥ ದ್ವಿತೀಯಾಷ್ಟಕೇ ಚತುರ್ಥೋಽಧ್ಯಾಯಃ ॥

### ಎರಡನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು

## ಪ್ರಥಮಮಂಡಲದ ಸೂಕ್ತಗಳು ೧೬೬—೧೮೩

ಋಕ್ಸಂಹಿತೆಯ ಈ ಭಾಗದಲ್ಲಿರುವ ೧೬೬-೧೮೩ ಸೂಕ್ತಗಳಿಗೆ ಮಿತ್ರಾವರುಣರ ಪುತ್ರನಾದ ಅಗಸ್ತ್ಯನೆಂಬುವನು (ಮೈತ್ರಾವರುಣಿರಗಸ್ತ್ಯಃ) ಋಷಿಯು. ಈ ಋಷಿದೃಷ್ಟವಾದ ಸೂಕ್ತಗಳು ಋಗ್ವೇದದಲ್ಲಿ ಪ್ರಥಮಮಂಡಲ ೧೬೫ ನೆಯ ಸೂಕ್ತದಲ್ಲಿ ೧೩–೧೫ ನೆಯ ಋಕ್ಕುಗಳು (೩ ಋಕ್ಕುಗಳು); ೧೬೬, ೧೬೭, ೧೬೮, ೧೬೯ ನೆಯ ಸೂಕ್ತಗಳು (೪೪ ಋಕ್ಕುಗಳು); ೧೭೦ ರಲ್ಲಿ ೨, ೫ ಋಕ್ಕುಗಳು (೨ ಋಕ್ಕುಗಳು); ೧೭೧, ೧೭೨, ೧೭೩, ೧೭೪, ೧೭೫, ೧೭೬, ೧೭೭, ೧೭೮ ನೆಯ ಸೂಕ್ತಗಳು (೫೪ ಋಕ್ಕುಗಳು); ೧೭೯ ರಲ್ಲಿ ೩, ೪ ನೆಯ ಋಕ್ಕುಗಳು (೨ ಋಕ್ಕುಗಳು); ೧೮೦, ೧೮೧, ೧೮೨, ೧೮೩, ೧೮೪, ೧೮೫, ೧೮೬, ೧೮೭, ೧೮೮, ೧೮೯, ೧೯೦, ೧೯೧ ನೆಯ ಸೂಕ್ತಗಳು

(೧೧೫ ಋಕ್ಕುಗಳು); ಒಟ್ಟು ೨೨೦ ಋಕ್ಕುಗಳಿಗೆ ಋಷಿಯಾಗಿರುವನು. ಋ. ಸಂ. ೭-೩೩-೧೩ ನೆಯ ಋಕ್ಕಿನಲ್ಲಿ ಈ ಋಷಿಯು ಮಾನನೆಂದು ಎಂದರೆ ಮಾನನೆಂಬುವನ ಪುತ್ರನೆಂದು ಕರೆಯಲ್ಪಟ್ಟಿದ್ದಾನೆ. ಈ ಋಕ್ಕಿನಲ್ಲಿ ಈ ಋಷಿಯು ಮತ್ತು ವಸಿಷ್ಠನ ಜನ್ಮವಿಚಾರವಾದ ಪ್ರಸ್ತಾಪವಿದೆ.

ಒಂದು ಸಲ ಅಗಸ್ತ್ಯಋಷಿಯು ಯಜ್ಞದಲ್ಲಿ ಇಂದ್ರನನ್ನು ಬಿಟ್ಟು ಮರುದ್ದೇವತೆಗಳಿಗೆ ಮಾತ್ರ ಹವಿಸ್ಸನ್ನರ್ಪಿಸಬೇಕೆಂದು ಹೇಳಿದಾಗ ಇಂದ್ರನಿಗೆ ಕೋಪಬಂದಿತು ಇಂದ್ರನ ಆ ಕೋಪವನ್ನು ಶಮನಮಾಡಿದ ವಿಚಾರವೇ ಋ. ಸಂ ೧-೧೬೫; ೧-೧೭೦; ೧-೧೭೧ ನೆಯ ಸೂಕ್ತಗಳಲ್ಲಿ ಚರ್ಚಿಸಲ್ಪಟ್ಟಿದೆ. ಈ ವಿಷಯವು ಋಗ್ವೇದಲ್ಲಲ್ಲದೆ, ತೈ. ಸಂ. ೭-೫-೫-೨; ತೈ. ಬ್ರಾ. ೨-೭-೧೧-೧; ಮೈತ್ರಾಯಣೀಯ ಸಂಹಿತಾ. ೨-೧-೮; ಕಾಠಕಸಂಹಿತಾ. ೧೦-೧೧; ಪಂಚವಿಂಶಬ್ರಾಹ್ಮಣ ೨೧-೧೪-೫; ಐತರೇಯಬ್ರಾಹ್ಮಣ ೫-೧೬; ಕೌಶೀತಕೀಬ್ರಾಹ್ಮಣ ೨೬-೯; ಈ ಸ್ಥಳಗಳಲ್ಲಿಯೂ ವಿವರಿಸಲ್ಪಟ್ಟಿರುವುದು. ಋ. ಸಂ. ೧-೧೭೯ ನೆಯ ಸೂಕ್ತದಲ್ಲಿ ಈ ಋಷಿಗೂ, ಇವನ ಪತ್ನಿಯಾದ ಈ ಲೋಪಾಮುದ್ರೆಗೂ ಸ್ತ್ರೀಸಂಗವಿಚಾರದಲ್ಲಿ ನಡೆದ ಸ್ವಾರಸ್ಯವಾದ ಸಂಭಾಷಣೆ ಇದೆ. ಋ. ಸಂ. ೧-೧೧೭-೧೧ ರಲ್ಲಿ ಇವನು ಖೇಲನೆಂಬ ರಾಜನಿಗೆ ಪುರೋಹಿತನಾಗಿದ್ದನೆಂದೂ ವಿಶ್ಪಲಾ ಎಂಬ ಸ್ತ್ರೀಗೆ ಯುದ್ಧದಲ್ಲಿ ಕಾಲು ಮುರಿದು ಹೋದಾಗ ಅದನ್ನು ಸರಿಪಡಿಸಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿರುವ ವಿಷಯದ ಪ್ರಸ್ತಾಪವಿದೆ. ಋ. ಸಂ. ೭-೩೩-೧೦, ೧೩ ನೆಯ ಋಕ್ಕುಗಳಲ್ಲಿರುವ ವಿಷಯದ ಆಧಾರದ ಮೇಲೆ ಈ ಅಗಸ್ತ್ಯಋಷಿಯು ಮಿತ್ರಾವರುಣರ ಪುತ್ರನೆಂದೂ, ಆದುದರಿಂದ ವಸಿಷ್ಠಋಷಿಯ ಸಹೋದರನೆಂದೂ ಹೇಳಬಹುದು. ಈ ಋಷಿಯ ಪ್ರಸ್ತಾಪವು ಮೇಲೆ ಹೇಳಿದ ಋಕ್ಕುಗಳಲ್ಲಲ್ಲದೆ, ಋ. ಸಂ. ೭-೫-೨೬; ೧೦-೬೦-೬; ಅಥರ್ವವೇದ ೨-೩೨-೩; ೪-೩೭-೧; ೧೮-೩-೧೫; ಮೈತ್ರಾಯಣೀಯ ಸಂಹಿತಾ ೪-೨-೯; ಎಂಬ ಸ್ಥಳಗಳಲ್ಲಿಯೂ ಇರುವುದು.

# ನೂರ ಅರವತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಥ ಚತುರ್ಥೋಽಧ್ಯಾಯ ಆರಭ್ಯತೇ । ಕಯಾ ಶುಭೇತ್ಯಸ್ಮಿಂಸ್ತ್ರಯೋವಿಂಶೇಽನುವಾಕೇ ಪಂಚದಶ ಸೂಕ್ತಾನಿ । ತತ್ರ ತನ್ನುತ್ಯೇತದ್ದ್ವಿತೀಯಂ ಸೂಕ್ತಂ ಪಂಚದಶರ್ಚಂ । ಅತ್ರಾನುಕ್ರಮಣಿಕಾ । ತನ್ನುಪಂಚೋನಾಗಸ್ತ್ಯೋ ಮಾರುತಂ ಹಿ ದ್ವಿತ್ರಿಷ್ಟುಬಂತಂ ಮಿತ್ರಾವರುಣಯೋರ್ದೀಕ್ಷಿತಯೋರುರ್ವಶೀಮಪ್ಸರಸಂ ದೃಷ್ಟ್ವಾ ವಾಸತೀವರೇ ಕುಂಭೇ ರೇತೋಽಪತತ್ತತೋಽಗಸ್ತ್ಯವಸಿಷ್ಠಾವಜಾಯೇತಾಮಿತಿ । ಸೂಕ್ತ-ಸಂಖ್ಯಾನುವರ್ತತ ಆನ್ಯಸ್ಯಾಃ ಸೂಕ್ತಸಂಖ್ಯಾಯಾಃ । ಅನು. ೧೨-೧ । ಇತಿ ಪರಿಭಾಷಿತತ್ವಾತ್ಪಂಚ-ದಶರ್ಚಂ । ಉಕ್ತಲಕ್ಷಣೇನಾಗಸ್ತ್ಯೇನ ದೃಷ್ಟತ್ವಾತ್ತಸ್ಯಾರ್ಷಂ । ಮಾರುತಂ ಹೀತ್ಯುಕ್ತತ್ವಾತ್ತುಹ್ಯಾದಿ ಪರಿಭಾಷಯೇದಮಾದಿಸೂಕ್ತತ್ರಯಂ ಮರುದ್ದೇವತಾಕಂ । ಅಂತ್ಯೇ ದ್ವೇ ತ್ರಿಷ್ಟುಭೌ ಶಿಷ್ಟಾಸ್ತ್ರಿಷ್ಟುಬಂತ-ಪರಿಭಾಷಯಾ ಜಗತ್ಯಃ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಕಯಾ ಶುಭಾ** ಎಂಬ ಸೂಕ್ತದಿಂದ ಪ್ರಾರಂಭವಾಗುವ (ಪ್ರಥಮಮಂಡಲದ) ಇಪ್ಪತ್ತ ಮೂರನೆಯ ಅನುವಾಕದಲ್ಲಿ ಹದಿನೈದು ಸೂಕ್ತಗಳಿರುವುವು ಅವುಗಳಲ್ಲಿ **ತೆನ್ನು ವೋಚಾಮ** ಎಂಬ ಈ ಸೂಕ್ತವು ಎರಡನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ— **ತೆನ್ನ್ವಗಸ್ತ್ಯೋ ಮಾರುತಂ ಹಿ ದ್ವಿತ್ರಿಷ್ಟುಬಂತಂ ಮಿತ್ರಾವರುಣಯೋರ್ದೀಕ್ಷಿತಯೋರುರ್ವಶೀಮಪ್ಸರಸಂ ದೃಷ್ಟ್ವಾ ವಾಸತೀವರೇ ಕುಂಭೇ ರೇತೋಽಪತತ್ತತೋಽಗಸ್ತ್ಯವಸಿಷ್ಠಾವಜಾಯೇತಾಮಿತಿ । ಸೂಕ್ತಸಂಖ್ಯಾನುವರ್ತತ ಆನ್ಯಸ್ಯಾಃ ಸೂಕ್ತಸಂಖ್ಯಾಯಾಃ ।** (ಅನು. ೧೨-೧) ಎಂದು ಹೇಳಿರುವುದು. ಎಂದರೆ ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಒಂದು ಸಲ ಮಿತ್ರಾವರುಣರು ಯಜ್ಞದೀಕ್ಷೆ ಯಲ್ಲಿದ್ದಾಗ ಊರ್ವಶೀ ಎಂಬ ಅಪ್ಸರಸ್ತ್ರೀಯ ಸಂದರ್ಶನದಿಂದ ಅವರಿಗೆ ರೇತಸ್ಖಲನವಾಗಿ ಆ ರೇತಸ್ಸು ಸಮೀಪ ದಲ್ಲಿದ್ದ ವಸತೀವರಿ ಎಂಬ ಕುಂಭದಲ್ಲಿ ಬಿದ್ದಿತು. ಅದರಿಂದ ಅಗಸ್ತ್ಯ ಮತ್ತು ವಸಿಷ್ಠ ಎಂಬ ಋಷಿಗಳು ಉತ್ಪನ್ನ ರಾದರು ಎಂದಭಿಪ್ರಾಯವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು. ಅನುಕ್ರಮಣಿಕೆಯಲ್ಲಿ **ಮಾರುತಂ ಹಿ** ಎಂದು ಹಿ ಶಬ್ದಪ್ರಯೋಗವಿರುವುದರಿಂದ ಈ ಸೂಕ್ತ ಮತ್ತು ಮುಂದಿನ ಎರಡು ಸೂಕ್ತಗಳು ಮರುದ್ದೇವತಾಕವೆಂದು ತಿಳಿಯ ಬೇಕು. ಈ ಸೂಕ್ತದ ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ವಿನಿಯೋಗವು ಲೈಂಗಿಕವು.

## ಸೂಕ್ತ—೧೬೭

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೬೭ ॥
ಅಷ್ಟಕ— ೨ ॥ ಅಧ್ಯಾಯ—೪ ॥ ವರ್ಗ—೧, ೨, ೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಮರುತಃ ॥
॥ ಛಂದಃ—೧-೧೩, ಜಗತೀ । ೧೪-೧೫ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತನ್ನು ವೋಚಾಮ ರಭಸಾಯ ಜನ್ಮನೇ ಪೂರ್ವಂ ಮಹಿತ್ವಂ ವೃಷಭಸ್ಯ ಕೇತವೇ ।
ಐಧೇವ ಯಾಮನ್ಮರುತಸ್ತುವಿಷ್ವಣೋ ಯುಧೇವ ಶಕ್ರಾಸ್ತವಿಷಾಣಿ ಕರ್ತನ ॥ ೧ ॥

॥ ಪದಪಾಠಃ ॥

ತತ್ । ನು । ವೋಚಾಮ । ರಭಸಾಯ । ಜನ್ಮನೇ । ಪೂರ್ವಂ । ಮಹಿऽತ್ವಂ । ವೃಷಭಸ್ಯ । ಕೇತವೇ । ಐಧಾऽಇವ । ಯಾಮನ್ । ಮರುತಃ । ತುವಿऽಸ್ವನಃ । ಯುಧಾऽಇವ । ಶಕ್ರಾಃ । ತವಿಷಾಣಿ । ಕರ್ತನ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವಯಂ ಯುಷ್ಮದೀಯಂ ತತ್ತಾದೃಶಂ ಪ್ರಸಿದ್ಧಂ ಪೂರ್ವಂ ಪೂರಕಂ ಪೂರ್ವತನಂ ವಾ ಮಹಿತ್ವಂ ಮಾಹಾತ್ಮ್ಯಂ ನು ಕ್ಷಿಪ್ರಂ ವೋಚಾಮ । ಬ್ರೂಮಃ । ಕಿಮರ್ಥಂ । ರಭಸಾಯ ರಾಭಸ್ಯಯುಕ್ತಾಯ ಜನ್ಮನೇ ವೇದ್ಯಾಂ ಪ್ರಾದುರ್ಭಾವಾಯ । ವೇದ್ಯಾಂ ಸಂನಿಧಾನಾಯೇತ್ಯರ್ಥಃ । ತದಪಿ ಕಿಮರ್ಥಮಿತ್ಯತ ಆಹ । ವೃಷಭಸ್ಯ ಫಲಸ್ಯ ವರ್ಷಿತುರ್ಯಜ್ಞಸ್ಯ ಕೇತವೇ ಪ್ರಜ್ಞಾನಾಯ । ವಾಯುಪ್ರೇರಣೇನ ಮೇಘಾಗಮನಂ ಪ್ರಸಿದ್ಧಂ । ಹೇ ತುವಿಷ್ವಣೋ ಗಮನಸಂರಂಭೇಣ ಪ್ರಭೂತಧ್ವನಿಯುಕ್ತಾ ಹೇ ಶಕ್ರಾಃ ಸರ್ವಮಪಿ ಕರ್ತುಂ ಶಕ್ತಾಃ ಯೂಯಂ ಯಾಮನ್ಯಾಮನಿ ಯಾಗಗಮನೇ ಪ್ರಸ್ತುತೇ ಸತ್ಯೈಧೇವೈಧಾನ್ಯೇಧಃಸಂಬಂಧೀನಿ ತೇಜಾಂಸೀವ ಪ್ರಾಪ್ಯೇನ ಮಹತ್ತ್ವೇನ ತವಿಷಾಣಿ ಬಲಾನಿ ಸಾಮರ್ಥ್ಯಾನಿ ಕರ್ತನ । ಕುರುತ । ತತ್ಸ್ತುಮ ಇತ್ಯರ್ಥಃ । ತತ್ರ ದೃಷ್ಟಾಂತಃ । ಯುಧೇವ ಯುದ್ಧೇನ ತತ್ತದ್ಯುದ್ಧನಿಮಿತ್ತಂ ಯಥಾ ತವಿಷಾಣಿ ಕುರುಥ ತದ್ವತ್ ॥

॥ ಪ್ರತಿಪದಾರ್ಥ ॥

**ತುವಿಷ್ವಣಃ**— ಹೆಚ್ಚಾದ ಧ್ವನಿ ವಿಶಿಷ್ಟರೂ (ಗರ್ಜಿಸುವವರೂ) । **ಶಕ್ರಾಃ**—ಸಮರ್ಥರೂ ಆದ । **(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಯಾಮನ್**—(ಯಾಗ) ಗಮನವು (ಪ್ರಸ್ತುತವಾಗಲು) । **ಐಧಾ ಇವ**— ಏಧಸ್ಸಂಬಂಧವಾದ ತೇಜಸ್ಸಿನಿಂದಲೋ ಎಂಬುವ ಹಾಗೆ । **ತವಿಷಾಣಿ**—ಬಲಗಳನ್ನು (ಸಾಮರ್ಥ್ಯದ್ಯೋತಕ ಕರ್ಮಗಳನ್ನು) । **ಯುಧಾ ಇವ**— ಯುದ್ಧದಿಂದಲೋ ಎಂಬಂತೆ (ಯುದ್ಧಕಾಲಗಳಲ್ಲಿ ಸಾಮರ್ಥ್ಯ ದ್ಯೋತನ ಮಾಡುವಂತೆ) । **ಕರ್ತನ**—ಮಾಡುತ್ತೀರಿ । **ತತ್**—ಅಂತಹ (ಪ್ರಸಿದ್ಧವಾದ) । **ಪೂರ್ವಂ**—ಪೂರಕವಾದ (ಪುರಾತನವಾದ) । **ಮಹಿತ್ವಂ**—(ನಿಮ್ಮ) ಮಾಹಾತ್ಮ್ಯೆಯನ್ನು । **ವೃಷಭಸ್ಯ**—ಫಲವರ್ಷಕವಾದ (ಯಜ್ಞದ) । **ಕೇತವೇ**—(ಜ್ಞಾನವನ್ನುಂಟುಮಾಡುವುದಕ್ಕೋಸ್ಕರ) ಜ್ಞಾನವನ್ನುಂಟುಮಾಡುವ ಉದ್ದೇಶದಿಂದ । **ರಭಸಾಯ**—ತಡವಿಲ್ಲದ । **ಜನ್ಮನೇ**—(ವೇದಿಭೂಮಿಯಲ್ಲಿ ನಿಮ್ಮ) ಆವಿರ್ಭಾವಕ್ಕೋಸ್ಕರ (ಸನ್ನಿಧಾನಕ್ಕೋಸ್ಕರ) । **ನು**—ಕ್ಷಿಪ್ರವಾಗಿ । **ವೋಚಾಮ**—ಹೇಳುತ್ತೇವೆ (ಸ್ತುತಿಸುತ್ತೇವೆ).

॥ ಭಾವಾರ್ಥ ॥

ಗಟ್ಟಿಯಾಗಿ ಗರ್ಜಿಸುವವರೂ, ಸಮರ್ಥರೂ ಆದ ಎಲೈ ಮರುದ್ದೇವತೆಗಳೇ, ಯುದ್ಧಕಾಲಗಳಲ್ಲಿ ಸಾಮರ್ಥ್ಯ ಪ್ರಕಾಶಮಾಡುವಂತೆ, ನಮ್ಮ ಯಾಗಶಾಲೆಗೆ ಬರುವಾಗಲೂ ನಿಮ್ಮ ಸಾಮರ್ಥ್ಯವನ್ನು ದ್ಯೋತನ ಮಾಡುತ್ತೀರಿ; ಎಲೈ ಮರುದ್ದೇವತೆಗಳೇ, ನೀವು ತಡಮಾಡದೆ ಬಂದು, ಫಲವರ್ಷಕವಾದ ಯಾಗಗಳ ಜ್ಞಾನವನ್ನುಂಟುಮಾಡಿ ಎಂದು, ನಿಮ್ಮ ಪುರಾತನವಾದ ಮಾಹಾತ್ಮೆಗಳನ್ನು ಪ್ರಶಂಸಿಸುತ್ತೇವೆ.

## English Translation.

We proclaim eagerly, Maruts, your ancient greatness, for (the sake of inducing) your prompt appearance, as the indication of (the approach of) the showerer (of benfits). Loud-roaring and mighty Maruts, you exert your vigorous energies for the advance (to the sacrifice), as if it was to battle.

॥ ವಿಶೇಷವಿಷಯಗಳು ॥

**ತನ್ನು ವೋಚಾಮ ಪೂರ್ವಂ ಮಹಿತ್ವಂ**—ಇಲ್ಲಿ ತತ್ ಎಂಬ ಶಬ್ದವು ಹಿಂದೆ ಅನೇಕಋಷಿಗಳಿಂದ ಅತಿಶಯವಾಗಿ ಸ್ತೋತ್ರಮಾಡಲ್ಪಟ್ಟು ಪ್ರಸಿದ್ಧಿಯಾದ ಎಂಬರ್ಥವನ್ನು ಸೂಚಿಸುವುದು **ಪೂರ್ವಂ—ಪೂರಕಂ ಪೂರ್ವತನಂ ವಾ** ಬಹಳ ಹೆಚ್ಚಾದ ಅಥವಾ ಪುರಾತನವಾದ, ಹಿಂದಿನ, ಹಿಂದೆ ನೀವು ನೆರವೇರಿಸಿದ ಅಥವಾ ಹಿಂದೆ ಅನೇಕ ಋಷಿಗಳು ಕೊಂಡಾಡಿರುವುದರಿಂದ ಪ್ರಸಿದ್ಧವಾದ (ಸಾಹಸಕೃತ್ಯಗಳು) ಎಂದಭಿಪ್ರಾಯವು, **ಮಹಿತ್ವಂ**—ಮಹಿಮೆ, ಅಥವಾ ವೀರ್ಯಕರ್ಮಗಳು, ಸಾಹಸಕೃತ್ಯಗಳು ಇತ್ಯಾದಿ. ಎಂದರೆ ಎಲೈ ಮರುದ್ದೇವತೆಗಳೇ ನೀವು ಹಿಂದೆ ಎಸಗಿದ ಪ್ರಸಿದ್ಧವಾದ ಅನೇಕ ಸಾಹಸಕರ್ಮಗಳನ್ನೂ ಅವುಗಳ ಮಹಿಮೆಯನ್ನು ಈಗ ವರ್ಣಿಸುವೆವು ಎಂದು ವಾಕ್ಯದ ಮುಖ್ಯಾಭಿಪ್ರಾಯವು.

**ರಭಸಾಯ ಜನ್ಮನೇ—ರಾಭಸ್ಯಯುಕ್ತಾಯ ಜನ್ಮನೇ ವೇದ್ಯಾಂ ಪ್ರಾದುರ್ಭಾವಾಯ ।** ಅತಿಶೀಘ್ರವಾಗಿ ಯಜ್ಞವೇದಿಕೆಯಲ್ಲಿ ಬರುವುದಕ್ಕಾಗಿ ಎಂದು ಸಾಯಣರ ಅರ್ಥವಿವರಣೆಯು. ಇದರಂತೆ **ರಭಸಾಯ** ಎಂದರೆ ಶೀಘ್ರವಾದ, ಬೇಗನೆ ಎಂದೂ **ಜನ್ಮನೇ** ಎಂದರೆ ಉತ್ಪತ್ತಿ ಅಥವಾ ಆಗಮನ (For your immedaiate presence) ಎಂದೂ ಅರ್ಥವಾಗುವುದು ಯಜ್ಞವೇದಿಯಲ್ಲಿ ನೀವು ಬೇಗನೆ ಬರುವುದಕ್ಕಾಗಿ ಎಂದು ಮುಖ್ಯಾಭಿಪ್ರಾಯವು Max Muller ಎಂಬಪಂಡಿತನು ಈ ಶಬ್ದಗಳಿಗೆ for the robust host ಬಹಳ ಶಕ್ತಿಯುಳ್ಳ ಮರುತ್ಸಂಘವೆಂದು ಅರ್ಥ ವಿವರಣೆ ಮಾಡಿರುವನು. ಆದರೆ ಭಾಷ್ಯಕಾರರ ವಿವರಣೆಯೇ ಹೆಚ್ಚು ಸಮಂಜಸವಾಗಿರುವುದು.

**ವೃಷಭಸ್ಯ ಕೇತವೇ**—ಈ ಶಬ್ದಗಳ ಅರ್ಥವು ಸ್ಪಷ್ಟವಾಗಿಲ್ಲ. ಭಾಷ್ಯಕಾರರು—**ವೃಷಭಸ್ಯ ಫಲಸ್ಯ ವರ್ಷಿತುರ್ಯಜ್ಞಸ್ಯ ಕೇತವೇ ಪ್ರಜ್ಞಾಪನಾಯ ।** ಯಜಮಾನನ ಇಷ್ಟಾರ್ಥಗಳನ್ನು ಕೊಡುವ ಯಜ್ಞದ ತಿಳುವಳಿಕೆಗಾಗಿ ಎಂದರೆ ಯಜ್ಞಕರ್ಮಗಳ ಜ್ಞಾನಲಾಭಕ್ಕಾಗಿ ಎಂದು ವಿವರಿಸಿರುವರು. Max Muller ಪಂಡಿತನು for the herald of powerful Indra ಎಂದು ಈ ಶಬ್ದಗಳ ಭಾಷಾಂತರ ಮಾಡಿರುವನು. ಈ ಶಬ್ದಗಳಿಗೆ ಎರಡು ವಿಧವಾಗಿ ಅರ್ಥಮಾಡಬಹುದು. ಸದ್ಯದಲ್ಲಿಯೇ ಸಂನಿಹಿತವಾದ ಎಂದರೆ ನೆರವೇರಿಸಲು ಸಿದ್ಧಮಾಡುತ್ತಿರುವ ಯಜ್ಞವೆಂದಾಗಲೀ ಅಥವಾ ಭಾಷ್ಯಕಾರರ ಅಭಿಪ್ರಾಯದಂತೆ ಮರುದ್ದೇವತೆಗಳ ಆಗಮನವು ವೃಷ್ಟಿಸೂಚಕವಾದುದರಿಂದ ಮೇಘಾಗಮನವೆಂದಾಗಲೀ ಅರ್ಥವಾಗಬಹುದು. ಆದರೂ ಈ ಶಬ್ದಗಳ ಮುಖ್ಯಾಭಿಪ್ರಾಯವು ಸಂದಿಗ್ಧವಾಗಿಯೇ ಇರುವುದು.

**ಏಧೇವ ಯಾಮನ್ ಮರುತಃ ತುವಿಷ್ವಣಃ**—ಅಗ್ನಿಯಲ್ಲಿ ಹಾಕಿದ ಕಾಷ್ಠಾದಿಗಳು ಧಗಧಗನೆ ಉರಿಯುತ್ತಿರುವಾಗ ಶಬ್ದಮಾಡುತ್ತಾ ಅತ್ಯಂತ ಪ್ರಕಾಶಮಾನವಾಗಿರುವಂತೆ, ಎಲೈ ಮರುತ್ತುಗಳೇ, ನಿಮ್ಮ ಆಗಮನವು ಬಹಳ ಧ್ವನಿಯುಕ್ತವಾಗಿರುವುದು ಎಂದಭಿಪ್ರಾಯವು ಗಾಳಿಯು ಬಹಳ ರಭಸವಾಗಿ ಬೀಸುತ್ತಿರುವಾಗ ಶಬ್ದ ಅಥವಾ

ಧ್ವನಿಯುಂಟಾಗುವುದು ಸಹಜವು, ಅಗ್ನಿಯಲ್ಲಿ ಕಾಷ್ಠಗಳನ್ನು ಹಾಕಿ ಅವುಗಳು ಉರಿಯುವಾಗ ಶಬ್ದವಾಗುವುದೂ ಸಹಜವು. ಅದರಂತೆ ಮರುದ್ದೇವತೆಗಳ ಆಗಮನವು ಧ್ವನಿಯುಕ್ತವಾಗಿರುವುದು ಎಂದು ಇಲ್ಲಿ ವರ್ಣಿಸಲಾಗಿದೆ. ತುವಿ ಎಂಬ ಶಬ್ದವು ಉರು ಮೊದಲಾದ ಹನ್ನೆರಡು ಬಹುನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ತುವಿ ಎಂದರೆ ಬಹು ಎಂದೂ, ಸ್ವನಃ ಎಂದರೆ ಧ್ವನಿಯೆಂದೂ ಅರ್ಥವಿರುವುದರಿಂದ ತುವಿಸ್ವನಃ ಎಂಬ ಶಬ್ದಕ್ಕೆ ಬಹಳವಾದ ಧ್ವನಿಯಿಂದ ಕೂಡಿದ ಎಂದಭಿಪ್ರಾಯವು.

**ಶಕ್ರಾಃ—ಶಕ್ತಾಃ** । ಸಮರ್ಥರಾದ, ಶಕ್ತಿಯುಳ್ಳ.

**ಯುಧೇವ ತವಿಷಾಣಿ ಕರ್ತನ**—ತವಿಷಾಣಿ ಎಂಬ ಶಬ್ದವು ಬಲ ಎಂಬರ್ಥವುಳ್ಳ ತವಃ ಅಥವಾ ತವಿಷೀ (ನಿ. ೩-೯) ಶಬ್ದದಿಂದ ನಿಷ್ಪನ್ನವಾಗಿರುವುದರಿಂದ, ಬಲ, ಸಾಮರ್ಥ್ಯ ಎಂಬರ್ಥವನ್ನು ಸೂಚಿಸುವುದು. ಯುದ್ಧದಲ್ಲಿ ಬಲ ಪ್ರದರ್ಶನಮಾಡುವುದು ಸಹಜವಾಗಿರುವುದರಿಂದ ಅದರಂತೆ ನಮ್ಮ ಯಜ್ಞವೇದಿಕೆಗೆ ಬರುವಾಗಲೂ ಬಲಪ್ರದರ್ಶನದಿಂದ ಎಂದರೆ ಅತ್ಯುತ್ಸಾಹದಿಂದ ಶೀಘ್ರವಾಗಿ ಬರಬೇಕೆಂದು ಈ ದೃಷ್ಟಾಂತವನ್ನು ಉಪಯೋಗಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವೋಚಾಮ**—ವಚ ಪರಿಭಾಷಣೇ. ಧಾತು. **ಛಂದಸಿ ಲುಙ್‌ಲ**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ಅಸ್ಯತಿವಕ್ತಿಖ್ಯಾತಿಭ್ಯೋಙ್** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. ಇದು ಪರವಾದಾಗ **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. ಗುಣ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರಭಸಾಯ**—ರಭ ರಾಭಸ್ಯೇ ಧಾತು. **ಅತ್ಯವಿಚಮಿತ**—(ಉ. ಸೂ. ೩-೩೯೭) ಎಂಬುದರಿಂದ ಅಸಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಜನ್ಮನೇ**—ಜನೀ ಪ್ರಾದುರ್ಭಾವೇ ಧಾತು. **ಸರ್ವಧಾತುಭ್ಯೋ ಮನಿನ್** (ಉ. ಸೂ. ೪-೫೮೪) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥ್ಯಂತರೂಪ.

**ಮಹಿತ್ವಂ—ತಸ್ಯಭಾವಸ್ತ್ವತಲೌ** ಎಂಬುದರಿಂದ ಭಾವಾರ್ಥದಲ್ಲಿ ತ್ವ ಪ್ರತ್ಯಯ. **ತ್ವಾಂತಂ ಕ್ಲೀಬಂ** ಎಂಬ ವಚನದಿಂದ ನಪುಂಸಕವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ವೃಷಭಸ್ಯ**—ವೃಷು ಸೇಚನೇ ಧಾತು. **ಋಷಿವೃಷಿಭ್ಯಾಂ ಕಿತ್** (ಉ. ಸೂ. ೪-೪೦೩) ಎಂಬುದರಿಂದ ಅಭಚ್ ಪ್ರತ್ಯಯ. ಕಿತ್ವ ವಿಧಾನಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಚಿತ್ತಾದುದರಿಂದ ಅಂತೋದಾತ್ತ ಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಐಧಾ ಇವ**— ಏಧಃ ಸಂಬಂಧೀನಿ ಐಧಾನಿ. **ತಸ್ಯೇದಂ** ಎಂಬುದರಿಂದ ಸಂಬಂಧಾರ್ಥದಲ್ಲಿ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ.

**ಯಾಮನ್**—ಯಾ ಪ್ರಾಪಣೇ ಧಾತು. **ಆತೋ ಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀ ಪರವಾದಾಗ ಅದಕ್ಕೆ ಲುಕ್.

**ಯುಧಾ**—ಯುಧ ಪ್ರಹಾರೇ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಅದಕ್ಕೆ ಕ್ವಿಪ್ ಪ್ರತ್ಯಯ. ತೃತೀಯಾ ಏಕವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತವಿಷಾಣಿ**—ತವ ಎಂಬುದು ಸೌತ್ರ ಧಾತು. **ತವೇರ್ಣಿದ್ವಾ** (ಉ. ಸೂ. ೧-೪೮) ಎಂಬುದರಿಂದ ಟಿಷಚ್ ಪ್ರತ್ಯಯ. **ಚುಟೂ** ಎಂಬುದರಿಂದ ಟಕಾರಕ್ಕೆ ಇತ್ವ ಬರುವುದರಿಂದ ಲೋಪ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಕರ್ತನ**—ಡುಕೃಞ್ ಕರಣೇ ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ತನಪಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ಪಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ನಿತ್ಯಂ ನ ಸೂನುಂ ಮಧು ಬಿಭ್ರತ ಉಪ ಕ್ರೀಳಂತಿ ಕ್ರೀಳಾ ವಿದಥೇಷು ಘೃಷ್ವಯಃ ।
ನಕ್ಷಂತಿ ರುದ್ರಾ ಅವಸಾ ನಮಸ್ವಿನಂ ನ ಮರ್ಧಂತಿ ಸ್ವತವಸೋ ಹವಿಷ್ಕೃತಂ ॥ ೨ ॥

॥ ಪದಪಾಠಃ ॥

ನಿತ್ಯಂ । ನ । ಸೂನುಂ । ಮಧು । ಬಿಭ್ರತಃ । ಉಪ । ಕ್ರೀಳಂತಿ । ಕ್ರೀಳಾಃ । ವಿದಥೇಷು । ಘೃಷ್ವಯಃ ।
ನಕ್ಷಂತಿ । ರುದ್ರಾಃ । ಅವಸಾ । ನಮಸ್ವಿನಂ । ನ । ಮರ್ಧಂತಿ । ಸ್ವಽತವಸಃ । ಹವಿಃಽಕೃತಂ ॥ ೨ ॥

॥ ಸಾಯಣಭಾಷ್ಯಂ ॥

ನಿತ್ಯಂ ನ ಸೂನುಮೌರಸಂ ಪ್ರಿಯಂ ಪುತ್ರಮಿವ ಮಧು ಮಧುರಂ ಹವಿರ್ಬಿಭ್ರತೋ ಧಾರಯಂತೋ ಮರುತೋ ವಿದಥೇಷು ಯಾಗೇಷು ಘೃಷ್ವಯೋ ರಕ್ಷಃಪ್ರಭೃತೀನಾಂ ಘರ್ಷಕಾಃ ಸಂತಃ ಕ್ರೀಳಾಃ ಕ್ರೀಡನಶೀಲಾ ಉಪೋಪೇತ್ಯ ಕ್ರೀಳಂತಿ । ವಿಹರಂತಿ । ಕಿಂಚ ರುದ್ರಾಃ । ರುದ್ರಪುತ್ರಾ ಮರುತೋಽಪಿ ರುದ್ರಾ ಉಚ್ಯಂತೇ ಜನ್ಯಜನಕಯೋರಭೇದಾತ್ । ಮರುತಾಂ ರುದ್ರಪುತ್ರತ್ವಂ ಪುರಾಣೇಷು ತಪಸಾ ತುಷ್ಟೌ ಪಾರ್ವತೀಪರಮೇಶ್ವರೌ ಮರುತಃ ಪುತ್ರತ್ವೇನ ಸ್ವೀಚಕ್ರತುರಿತಿ ಪ್ರಸಿದ್ಧಂ । ನಮಸ್ವಿನಂ ನಮಸ್ಕಾರೋಪಲಕ್ಷಿತಸ್ತೋತ್ರೋಪೇತಂ ಹವಿಷ್ಕೃತಂ ಹವಿಷಃ ಕರ್ತಾರಂ ಪ್ರದಾತಾರಂ ಯಜಮಾನಮವಸಾ ರಕ್ಷಣೇನ ತರ್ಪಣೇನ ವಾ ನಿಮಿತ್ತಭೂತೇನ ನಕ್ಷಂತಿ । ವ್ಯಾಪ್ನುವಂತಿ । ಕಿಂ ಚ ಸ್ವತವಸಃ ಸ್ವಾಯತ್ತಬಲಾ ಮರುತೋ ಯಜಮಾನಂ ನ ಮರ್ಧಂತಿ । ನ ಸಂಗ್ರಾಮಯಂತಿ ನ ಕ್ಲೇಶಯಂತೀತ್ಯರ್ಥಃ॥

॥ ಪ್ರತಿಪದಾರ್ಥ ॥

**ನಿತ್ಯಂ ಸೂನುಂ ನ**— ಔರಸಪುತ್ರನನ್ನು (ಧರಿಸುವಂತೆ) । **ಮಧು**—ಮಧುರವಾದ ಹವಿಸ್ಸನ್ನು । **ಬಿಭ್ರತಃ**—ಧರಿಸಿರುವ (ಸ್ವೀಕರಿಸಿದ) ಮರುದ್ದೇವತೆಗಳು । **ವಿದಥೇಷು**—ಯಾಗಗಳಲ್ಲಿ । **ಘೃಷ್ವಯಃ**—ರಾಕ್ಷಸಾದಿಗಳನ್ನು ಘರ್ಷಿಸುವವರೂ । **ಕ್ರೀಳಾಃ**—ಕ್ರೀಡನಶೀಲರೂ ಆಗಿ । **ಉಪ**—ಸಮೀಪಿಸಿ । **ಕ್ರೀಳಂತಿ**—ವಿಹರಿಸುತ್ತಾರೆ । **(ಕಿಂಚ**—ಮತ್ತು) । **ರುದ್ರಾಃ**—ರುದ್ರಪುತ್ರರಾದ ಮರುದ್ದೇವತೆಗಳು । **ನಮಸ್ವಿನಂ**—ನಮಸ್ಕಾರಯುಕ್ತನೂ । **ಹವಿಷ್ಕೃತಂ**—ಹವಿಪ್ಪ್ರದಾತೃವೂ ಆದ ಯಜಮಾನನನ್ನು । **ಅವಸಾ**—(ತಮ್ಮ) ರಕ್ಷಣಾಕಾರ್ಯದಿಂದ ಅಥವಾ ತೃಪ್ತಿಪಡಿಸುವುದರಿಂದ (ರಕ್ಷಿಸುವುದಕ್ಕೋಸ್ಕರ ಅಥವಾ ತೃಪ್ತಿಪಡಿಸುವುದಕ್ಕೋಸ್ಕರ) । **ನಕ್ಷಂತಿ**—ವ್ಯಾಪಿಸುತ್ತಾರೆ (ಪ್ರಾಪ್ತರಾಗುತ್ತಾರೆ) । (ಮತ್ತು) **ಸ್ವತವಸಃ**—ಸ್ವಾಯತ್ತಬಲರಾದ (ನೈಸರ್ಗಿಕ ಬಲವಿಶಿಷ್ಟರಾದ) ಮರುತರು । **ನ ಮರ್ಧಂತಿ**—(ಯಜಮಾನನನ್ನು) ಕ್ಲೇಶಪಡಿಸುವುದಿಲ್ಲ.

॥ ಭಾವಾರ್ಥ ॥

ಮರುದ್ದೇವತೆಗಳು ಔರಸಪುತ್ರನನ್ನು ಸ್ವೀಕರಿಸುವಂತೆ ಮಧುರವಾದ ಹವಿಸ್ಸನ್ನು ಸ್ವೀಕರಿಸಿ, ಯಾಗಗಳಲ್ಲಿ ಅನಿಷ್ಟರಾದವರನ್ನು ಧರ್ಷಿಸುತ್ತಾ ಕ್ರೀಡಿಸುತ್ತಾರೆ; ರುದ್ರ ಪುತ್ರರಾದ ಮರುದ್ದೇವತೆಗಳು, ನಮಸ್ಕರಿಸುತ್ತಿರುವವನೂ, ಹವಿಪ್ಪ್ರದಾತೃವೂ ಆದ ಯಜಮಾನನನ್ನು ರಕ್ಷಿಸಲು ಬರುತ್ತಾರೆ; ಮಹಾಬಲಿಷ್ಠರಾದರೂ ಯಜಮಾನನನ್ನು ಹಿಂಸಿಸುವುದಿಲ್ಲ.

## English Translation.

Ever accepting the sweet (libation), as (they would) a son, they sport playfully at sacrifices, demolishing (all intruders): the Rudras come to the offerer of prayers and oblations, for his protection, and powerful as they are, do him no harm.

॥ ವಿಶೇಷವಿಷಯಗಳು ॥

**ನಿತ್ಯಂ ನ ಸೂನುಂ ಮಧು**—ಇಲ್ಲಿ ನ ಎಂಬ ಶಬ್ದವು ಉಪಮಾವಾಚಕವಾಗಿರುವುದು. ಪ್ರತಿದಿನವೂ ತಂದೆಯು ತನ್ನ ಪ್ರೀತಿಪಾತ್ರನಾದ ಮಗನಿಗೆ (ಮಗುವಿಗೆ) ಮಧುರವಾದ ತಿಂಡಿಯನ್ನು ಕೊಡುವಂತೆ ಎಂದು ಮರುದ್ದೇವತೆಗಳು ಯಜ್ಞಮಾಡುವ ಯಜಮಾನನಿಗೆ ಇಷ್ಟಾರ್ಥಫಲಗಳನ್ನು ಕೊಡುವರೆಂಬ ಅತ್ಯಂತ ಸಮಂಜಸವಾದ ದೃಷ್ಟಾಂತವನ್ನು ಹೇಳಿರುವರು. ತಂದೆಯಾದವನು ತನ್ನ ಪ್ರೀತಿಪಾತ್ರವಾದ ಮಗುವಿಗೆ ಆದರಾತಿಶಯದಿಂದ ಸಿಹಿಯಾದ ತಿಂಡಿಯನ್ನು ಕೊಟ್ಟು ಸಂತೋಷಪಡಿಸುವಂತೆ, ಮರುದ್ದೇವತೆಗಳೂ ತಮ್ಮನ್ನು ಸ್ತೋತ್ರಾದಿಗಳಿಂದ ಆರಾಧಿಸುವ ಯಜ್ಞಕರ್ತರಿಗೆ ಸಕಲ ಇಷ್ಟಾರ್ಥಗಳನ್ನು ಅನುಗ್ರಹಿಸುವರೆಂದು ಮುಖ್ಯಾಭಿಪ್ರಾಯವು.

**ಕ್ರೀಳಂತಿ, ಕ್ರೀಳಾಃ**—ಗಾಳಿಯು ರಭಸವಾಗಿ ಬೀಸುವಾಗ ಒಂದುವಿಧವಾದ ಆಹ್ಲಾದಕರವಾದ ಶಬ್ದವುಂಟಾಗುವುದರಿಂದ ಮರುದ್ದೇವತೆಗಳು ವಿಹಾರಾರ್ಥವಾಗಿ ಹರ್ಷಧ್ವನಿಗೈಯ್ಯುತ್ತಾ ಕ್ರೀಡಿಸುತ್ತಾರೆಂದು ಋಷಿಯು ವರ್ಣನೆಮಾಡಿರುವನು. **ಕ್ರೀಳಂತಿ, ಕ್ರೀಳಾಃ** ಎಂಬ ಶಬ್ದಗಳು ಸಾಧಾರಣವಾಗಿ ಮರುದ್ದೇವತೆಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟು ಅವರ ವೈಶಿಷ್ಟ್ಯವನ್ನು ತೋರಿಸುವವು. ಆದರೂ ಈ ಶಬ್ದವು ಇತರ ದೇವತೆಗಳ ಪರವಾಗಿಯೂ ಉಪಯೋಗಿಸಲ್ಪಡುವುದು. ಉದಾಹರಣೆಗಾಗಿ—

**ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇಶುಭಂ । ಕಣ್ವಾ ಅಭಿ ಪ್ರ ಗಾಯತ ॥**

(ಋ. ಸಂ. ೧-೩೭-೧)

ಇತ್ಯಾದಿ ಋಕ್ಕುಗಳಲ್ಲಿ ಮರುದ್ದೇವತೆಗಳ ಪರವಾಗಿಯೂ,

**ಕ್ರೀಳಂತಸ್ತ್ವಾ ಸುಮನಸಃ ಸಪೇಮಾಭಿ ದ್ಯುಮ್ನಾ ತಸ್ಥಿವಾಂಸೋ ಜನಾನಾಂ ।**

(ಋ. ಸಂ. ೪-೪-೯)

**ಜ್ಯೇಷ್ಠೇಭಿರ್ಯೋ ಭಾನುಭಿರ್ಋಷೂಣಾಂ ಪರ್ಯೇತಿ ಪರಿವೀತೋ ವಿಭಾವಾ ।**

ಕ್ರೀಳುಮದ್ಭಿರ್ವರ್ಷಿಷ್ಠೇಭಿರ್ಭಾನುಭಿರ್ನಕ್ಷತಿ ದ್ಯಾಂ ।

(ಋ. ಸಂ. ೧೦-೩-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿ ಪರವಾಗಿಯೂ,

**ವೃಥಾ ಕ್ರೀಳಂತ ಇಂದವಃ ಸಧಸ್ಥಮಭ್ಯೇಕಮಿತ್ । ಸಿಂಧೋರೂರ್ಮಾ ವ್ಯಕ್ಷರನ್ ॥**

(ಋ. ಸಂ. ೯-೨೧-೩)

ಇತ್ಯಾದಿ ಋಕ್ಕುಗಳಲ್ಲಿ ಸೋಮದೇವತೆಯ ಪರವಾಗಿಯೂ ಈ ಶಬ್ದಪ್ರಯೋಗವಿರುವುದು.

**ವಿದಥೇಷು—ಯಜ್ಞೇಷು ।** ಯಜ್ಞಗಳಲ್ಲಿ ಎಂದರೆ ಯಜ್ಞಸ್ಥಾನಗಳಲ್ಲಿ ಎಂದರ್ಥ. **ವೇದಯಿತವ್ಯೇಷು ಸ್ತೋತ್ರೇಷು ನಿಮಿತ್ತಭೂತೇಷು** ಎಂಬುದರಿಂದ **ವಿದಥ** ಶಬ್ದದ ನಿರ್ವಚನವನ್ನು ತೋರಿಸಿದೆ. ಇಲ್ಲಿ ನಿರುಕ್ತಕಾರರ ನಿರ್ವಚನಗಳಲ್ಲಿ ಒಂದನ್ನು ಮಾತ್ರ ಅನುಸರಿಸಿದೆ. **ಯಜ್ಞಃ, ವೇನಃ** ಇತ್ಯಾದಿ **ಯಜ್ಞನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩-೧೯), ಮತ್ತು **ವಿದಥಾನಿ ವೇದನಾನಿ ।** ವಿದಥ ಶಬ್ದಕ್ಕೆ ಜ್ಞಾನವೆಂದರ್ಥವೆಂಬುದನ್ನು (ನಿ ೬-೭). ತೋರಿಸಲು

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರಚೋದಯನ್ ॥**

(ಋ. ಸಂ. ३-೨೭-೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಜ್ಞಾನಾರ್ಥಕ**ವಾದ **ವಿದ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಸಾಯಣರು **ವಿದಥಾನಿ ವೇದಿತವ್ಯಾನಿ ಕರ್ಮಾಣಿ ।** ಅರಿಯಲ್ಪಡಬೇಕಾದ ಕರ್ಮಗಳು ಎಂದರ್ಥಮಾಡಿದ್ದಾರೆ. ಈ ಪದಕ್ಕಾಗಿ ನಿಷ್ಕರ್ಷವಾದ ಅರ್ಥವನ್ನು ಹೇಳಬೇಕೆಂದು ಕೆಲವು ಪಂಡಿತರು ಪ್ರಯತ್ನಿಸಿ ಎಲ್ಲರೂ ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸಿರುವರು. ಒಬ್ಬೊಬ್ಬರು ಒಂದೊಂದು ವಿಧವಾದ ಈ ಪದದ ನಿರ್ವಚನವನ್ನು ತೋರಿಸಿ ಬೇರೆಬೇರೆ ಅರ್ಥಮಾಡಿರುವುದರಿಂದ ಆ ಎಲ್ಲಾ ಅರ್ಥಗಳೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುವುವು ಎಂದು ತಿಳಿಯುತ್ತದೆ. Max Muller ಎಂಬ ಪಂಡಿತನು,

**ಅಮಾದೇಷಾಂ ಭಿಯಸಾ ಭೂಮಿರೇಜತಿ ನೌರ್ನ ಪೂರ್ಣಾ ಕ್ಷರತಿ ವ್ಯಥಿರ್ಯತೀ ।**
**ದೂರೇದೃಶೋ ಯೇ ಚಿತಯಂತ ಏಮಭಿರಂತರ್ಮಹೇ ವಿದಥೇ ಯೇತಿರೇ ನರಃ ।**

(ಋ. ಸಂ. ೫-೫೯-೨)

ಎಂಬ ಋಕ್ಕನ್ನು ವಿವರಿಸುವಾಗ **ವಿದಥೇ** ಎಂಬ ಪದಕ್ಕೆ (ಯಜ್ಞ) ಸಭೆ (the great sacrificial assembly) ಎಂದು ಅರ್ಥಮಾಡಿದ್ದಾನೆ. ಮತ್ತು ಇದರ ವಿವರಣೆಯನ್ನು ಕೊಡುತ್ತಾ ಇತರ **ಜರ್ಮನ್** ಪಂಡಿತರು ಈ ಪದಕ್ಕೆ ಹೇಳಿರುವ ಅರ್ಥವನ್ನು ಇದರ ಮೂಲಧಾತುವಿನ ವಿಷಯದಲ್ಲಿ ಅವರ **ಅಭಿಪ್ರಾಯ**ಗಳನ್ನೂ. ಕೊನೆಗೆ Vidatha may have been the name of a sacred act, as Veda is of sacred knowledge. But the fact remains that it is best translated by assembly, particularly an assembly for sacrificial purposes.

(Sacred Books of the East. Vol. 32 p. 349-50)

ಪವಿತ್ರವಾದ ಜ್ಞಾನವೆಂಬುದು ವೇದಶಬ್ದಾರ್ಥವಾಗುವಂತೆ ಪವಿತ್ರವಾದ **ಕ್ರಿಯೆ** ಎಂಬುದು **ವಿದಥ** ಶಬ್ದಾರ್ಥವೆಂದು ಕೆಲವರು ಹೇಳಿರುವರು. ಆದರೆ **ಯಜ್ಞಸಭೆ**ಯೆಂಬುದೇ ಈ ಪದದ ಮುಖ್ಯಾರ್ಥವೆಂಬುದರಲ್ಲಿ ಸಂಶಯವಿಲ್ಲವೆಂದು ನಿಷ್ಕರ್ಷಿಸಿದ್ದಾನೆ.

Hermann Oldenberg ಎಂಬ ಪಂಡಿತನು Vedic Hymns ಎಂಬ ಗ್ರಂಥದಲ್ಲಿ ಋ. ಸಂ. ೧-೩೧-೬ನೇ ಋಕ್ಕಿನಲ್ಲಿರುವ **ವಿದಥೇ** ಎಂಬ ಪದಕ್ಕೆ ಅರ್ಥವನ್ನು ವಿವರಿಸುವಾಗ ತನ್ನ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾನೆ. ಅವನ ವಾಕ್ಯಗಳನ್ನು ಉದಹರಿಸಿ ಅನಂತರ ಅವನ ಅಭಿಪ್ರಾಯಗಳನ್ನು ತಿಳಿಸಲಾಗುತ್ತದೆ.

On the derivation and meaning of ವಿದಥ Various opinions have been pronounced in the last years which have been collected by prof. Max Muller in his note on R. V, V. 59·2 (S. B. E. Vol- 32 p. 349 sp.) without trying to discuss here all different theories, I proceed to state my own opinion ;

I propose to derive ವಿದಥ from ವಿ+ಧಾ; The verb ವಿ+ಧಾ means 'to distrbute, to arrange, to ordain;' thus the original meaning of ವಿದಥ must be like the meaning of ವಿಧಾನ, 'distribution, disposition, ordinance; In V. 3-6, we read ವಿದಥೇಷು ಅಹ್ನಾಂ: this phrase receives its explanation by VII. 66-11 we may call attention also to VI. 51-2 within the sphere of the Vedic poets' thoughts, the most prominent example of something most artificially ವಿಹಿತ was the sacrifice. ಯಜ್ಞ and ವಿದಥ, 'Sacrifice' and 'ordinance' became nearly synonymous. (III 3-3)................................. finally ವಿದಥ seems to mean 'the act of disposing of any business' or the like; this meaning appears, I believe, in some passages like the well-known phrase, ಬೃಹದ್ವದೇಮ ವಿದಥೇ ಸುವೀರಾಃ—may we with Valiant men mightily raise our voice at the determining of ordinances. Thus the word ವಿದಥ and ಸಭಾ approach each other in the meaning; a person influential in council is called both ವಿದಥ್ಯ and ಸಭೇಯ"

(Sacred Books of the East. Vol. 46. p. 27).

ಈ ಲೇಖನದ ಮುಖ್ಯಸಾರಾಂಶವೇನೆಂದರೆ,

**ವಿದಥ** ಶಬ್ದವು **ಧಾ** ಧಾತುವಿಗೆ ವಿ ಎಂಬ ಉಪಸರ್ಗವನ್ನು ಸೇರಿಸುವುದರಿಂದ ನಿಷ್ಪನ್ನವಾಗಿದೆ. **ವಿಧಾ** ಎಂದರೆ ಹಂಚು, **ನಿಯಮಿಸು** ಎಂದರ್ಥವಾಗುತ್ತದೆ. ನಿಯಮಪಾಲನೆಯೆಂದೂ ಅರ್ಥವಾಗಬಹುದು. **ವಿದಥ** ಮತ್ತು **ವಿಧಾ** ಈ ಎರಡು ಪದಗಳ ಅರ್ಥಗಳೂ ಒಂದೇ ಎಂಬ ಅಂಶವನ್ನು,

**ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯಮಾನಾಃ ।**
**ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥**

(ಋ. ಸಂ. ೫-೩-೬)

ಎಂಬ ಋಕ್ಕಿನಲ್ಲಿರುವ **ವಿದಥೇಷ್ವಹ್ನಾಂ** ಎಂಬ ಪದಗಳಿಗೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ।**

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿರುವ **ವಿ—ದಧುಃ** ಎಂಬ ಪದಗಳಿಗೂ ಇರತಕ್ಕ ಸಮಾನಾರ್ಥದಿಂದ ತಿಳಿಯುತ್ತದೆ. ಮತ್ತು **ವಿಹಿತ, ವಿದಥ** ಎಂಬ ಪದಗಳ ಅರ್ಥಗಳೂ ಒಂದೇ ಆಗಿ, ಶಾಸ್ತ್ರವಿಹಿತವಾದ ಯಜ್ಞವೇ **ವಿದಥ** ವೆಂಬ ಹೆಸರಿನಿಂದ ಕರೆಯಲ್ಪಟ್ಟಿತು. ಯಜ್ಞ ಅಥವಾ ಯಜ್ಞಸಭೆ ಎಂಬ ಅರ್ಥವು ಕೊನೆಯಲ್ಲಿ ಉಳಿಯಿತು ಎಂದು ಈ ಪಂಡಿತನು ವಿವರಿಸಿದ್ದಾನೆ.

ವಿದಥ ವೆಂದರೆ ಸಭೆಯೆಂದಾಗುವುದೇ ಇಲ್ಲ. ವೈಯಕ್ತಿಕವಾದ **ಗೃಹ** ಎಂಬರ್ಥವೇ ಸರಿಯಾದುದು ಎಂದು Bloomfield ಎಂಬ ಪಂಡಿತನು Max Muller ಮತ್ತು Oldenberg ಎಂಬಿಬ್ಬರೂ ಹೇಳಿರುವ ಅರ್ಥದಲ್ಲಿರುವ ದೋಷಗಳನ್ನು ತೋರಿಸಿದ್ದಾನೆ. ಅವನ ಅಭಿಪ್ರಾಯವು ಈ ರೀತಿಯಿದೆ --

The word ವಿದಥ contains the root ವಿದ್ in its ordinary sense of 'get, acquire'. Instead of this, the radical idea underlying the word was genernlly felt to be 'come to-gether,' 'assemble'. Again, the false start from the notion of 'assemblage' resulted in an approximation of the word to other words for assemblage, especially to ಸಭಾ with which ವಿದಥ was almost identified. We shall see that there are decided points of contact between the words ವಿದಥ and ಸಭಾ but the contact is that of extreme opposites in a way. ವಿದಥ refers to home matters; ಸಭಾ generally to public matters.

In the interpretation of a term that figures prominently in the mystic—hieratic sphere of the Veda it is peculiarly necessary to search for its uses outside of that sphere, if there be such uses. In X—85-26, the bride after the wedding ceremoney proper, as the newly married couple are about to travel to their new home is addressed with the words "May Pushan taking thee by the hand lead thee home, may the Asvins lead thee forth on their car. Go to your house in order that thou mayst be mistress of the house'.

Now ವಿದಥ here, can but have one meaning, 'household' or something very like it. It certainly cannot refer to anything in the nature of publie gathering similar to the ಸಭಾ. In the phrase ಬೃಹದ್ವದೇಮ ವಿದಥೇ ಸುವೀರಾಃ (R. V. 2-1-I6), the word ಸುವೀರಾಃ refers to family relations, not to public life.

Thus far, it may not be doubted, the word appears in the language of ordinary life. But it is found to a very much greater extent in the sacredotal sphere; indeed, as all interpreters from Yaska on, have agreed, it often has a meaning very close to Yagna 'Sacrifice' itself. This is as it should be, in as much as the sacrifice is a private, home affair, it is very natural ವಿದಥ the house, the premises, the establishment, should figure

prominently in connection with the sacrifice. ಈ ಲೇಖನದ ಸಾರಾಂಶವೇನೆಂದರೆ **ವಿದಥ** ಶಬ್ದಕ್ಕೆ **ಸಭಾ** ಎಂಬ ಅರ್ಥವನ್ನು ಕೆಲವರು ಹೇಳಿರುವುದು ಸರಿಯಲ್ಲ. ಈ ಶಬ್ದಕ್ಕೆ ವೈಯಕ್ತಿಕವಾದ ಗೃಹವೆಂದರ್ಥ. ಈ ಅರ್ಥದಲ್ಲಿಯೇ ಈ ಪದದ ಪ್ರಯೋಗವಿರುವುದನ್ನು ಅನೇಕಕಡೆಗಳಲ್ಲಿ ಗಮನಿಸಬಹುದು. ಉದಾಹರಣೆಗೆ—

**ಪೂಷಾ ತ್ವೇತೋ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರವಹತಾಂ ರಥೇನ |**
**ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾ ವದಾಸಿ ||**

(ಋ. ಸಂ. ೧೦-೮೫-೨೬)

ಎಂಬ ಋಕ್ಕಿನಲ್ಲಿ **ಪೂಷನೂ, ಅಶ್ವಿನೀದೇವತೆಗಳೂ** ನಿನ್ನನ್ನು **ಪತಿಗೃಹಕ್ಕೆ** ಕ್ಷೇಮದಿಂದ ಕರೆದೊಯ್ಯಲಿ ಎಂಬರ್ಥವಿರುವುದು ವಿಶದವಾಗಿದೆ. ಅಲ್ಲದೆ.

**ಯೇ ಸ್ತೋತೃಭ್ಯೋ ಗೋಅಗ್ರಾಮಶ್ವಪೇಶಸಮಗ್ನೇ ರಾತಿಮುಪಸೃಜಂತಿ ಸೂರಯಃ |**
**ಅಸ್ಮಾಞ್ಚ ತಾಂಶ್ಚ ಪ್ರ ಹಿ ನೇಷಿ ವಸ್ಯ ಆ ಬೃಹದ್ವದೇಮ ವಿದಥೇ ಸುವೀರಾಃ ||**

(ಋ. ಸಂ. ೨-೧-೧೬)

ಎಂಬ ಋಕ್ಕಿನಲ್ಲಿಯೂ ಸಹ **ಸುವೀರಾಃ** ಎಂದರೆ **ಶೋಭನಪುತ್ರಾದಿಸಹಿತಾಃ** ಎಂದರ್ಥಮಾಡಿರುವುದರಿಂದ ಗೃಹವೆಂದರ್ಥ. ಆದರೆ ಗೃಹದಲ್ಲಿ ಯಜ್ಞಕಾರ್ಯವು ನಡೆಯುವುದರಿಂದ ಪ್ರಕೃತದಲ್ಲಿ **ಯಜ್ಞಗೃಹ**ವೆಂದಾಗುತ್ತದೆ. ಯಾಸ್ಕಾದಿಗಳು **ಯಜ್ಞ**ಪರ್ಯಾಯಶಬ್ದವೆಂದು ಹೇಳಿರುವುದರಲ್ಲಿಯೂ ಇದೇ ಅರ್ಥವಿದೆ. ಹೀಗೆಂಬುದಾಗಿ ಪಾಶ್ಚಾತ್ಯರಲ್ಲಿ ಅನೇಕ ಪಂಡಿತರು ತಮ್ಮ ತಮ್ಮ ವೈಯಕ್ತಿಕವಾದ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ.

ಹೀಗೆ **ಗೃಹ, ಯಜ್ಞ, ಸಭಾ** ಎಂಬ ಬೇರೆ ಬೇರೆ ಅರ್ಥಗಳೆಲ್ಲವೂ ಹೊಂದಿಕೊಳ್ಳುವುದರಿಂದ ಇವುಗಳಲ್ಲಿ ಯಾವುದೂ ತಪ್ಪೆಂದು ಹೇಳುವುದಕ್ಕಾಗುವುದಿಲ್ಲ. ಸಾಯಣಭಾಷ್ಯದಲ್ಲಿಯೇ ಈ ಅರ್ಥಗಳೆಲ್ಲವೂ ಇವೆ. ಉದಾಹರಣೆಗೆ ೧೦-೮೫-೨೬ ಮತ್ತು ೨೭; ೭-೮೪-೩ ಇತ್ಯಾದಿಋಕ್ಕುಗಳಲ್ಲಿ ಗೃಹವೆಂದೂ, ೧೦-೧೦೦-೬, ೧೦-೧೦೦-೭ ಇತ್ಯಾದ್ಯನೇಕ ಋಕ್ಕುಗಳಲ್ಲಿ ಯಜ್ಞವೆಂದೂ ಅರ್ಥಮಾಡಿದ್ದಾರೆ. ಯಜ್ಞಗೃಹವೆಂದೂ ಮತ್ತು ಯಜ್ಞಸಭಾ ಎಂದೂ ಸಹ ಅರ್ಥವಾಗುತ್ತದೆ.

**ಘೃಷ್ವಯಃ—ರಕ್ಷಃಪ್ರಭೃತೀನಾಂ ಘರ್ಷಕಾಃ |** ರಾಕ್ಷಸರೇ ಮೊದಲಾದವರನ್ನು ಘರ್ಷಣೆಮಾಡುವವರು ಎಂದರೆ ಯಜ್ಞಕ್ಕೆ ಅವರು ಉಂಟುಮಾಡುವ ತೊಂದರೆಗಳನ್ನು ಪರಿಹರಿಸುವವರು; ರಾಕ್ಷಸಾದಿಗಳಿಗೆ ಹಿಂಸೆಯನ್ನುಂಟುಮಾಡುವವರು ಎಂದಭಿಪ್ರಾಯವು.

**ರುದ್ರಾಃ—ರುದ್ರಪುತ್ರಾಃ | ಮರುತೋಽಪಿ ರುದ್ರಾ ಉಚ್ಯಂತೇ ಜನ್ಯಜನಕಯೋರಭೇದಾತ್ |** ರುದ್ರಾಃ ಎಂದರೆ ಇಲ್ಲಿ ರುದ್ರಪುತ್ರರು. ತಂದೆಯ ಹೆಸರಿನಿಂದಲೇ ಪುತ್ರರನ್ನು ಕರೆಯುವುದು 'ವಾಡಿಕೆಯಾದ್ದರಿಂದಲೂ, ವ್ಯವಹಾರಾದಿಗಳಲ್ಲಿ ಜನ್ಯಜನಕರಿಗೆ ಭೇದವು ಎಣಿಸಲ್ಪಡದಿರುವುದರಿಂದಲೂ, ಇಲ್ಲಿ ರುದ್ರಪುತ್ರರಾದ ಮರುದ್ದೇವತೆಗಳನ್ನು ರುದ್ರಶಬ್ದದಿಂದಲೇ ವರ್ಣಿಸಿರುವುದು. ಮರುತ್ತುಗಳು ರುದ್ರಪುತ್ರರು ಹೇಗಾದರು ಎಂಬ ವಿಷಯದಲ್ಲಿ ಸಾಯಣರು ಋ. ಸಂ. ೧-೧೧೪-೬ ನೆಯ ಋಕ್ಕಿನ ಭಾಷ್ಯದಲ್ಲಿ ಒಂದು ಪೂರ್ವೇತಿಹಾಸವನ್ನು ಹೇಳಿರುವರು.

**ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾನ್ ಜಿಗಾಯ । ತದಾನೀಂ ದಿತಿರಸುರಮಾತೇಂದ್ರಹನನಸಮರ್ಥಂ ಪುತ್ರಂ ಕಾಮಯಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ । ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರ-ಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿ-ಭೇದ । ಪುನರಪ್ಯೇಕೈಕಂ ಸಪ್ತಖಂಡಮಕರೋತ್ । ತೇ ಸರ್ವೇ ಗರ್ಭೈಕದೇಶಾ ಯೋನೇ-ರ್ನಿರ್ಗತ್ಯಾರುದನ್ । ಏತಸ್ಮಿನ್ನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರಾವಿ-ಮಾನ್ ದದೃಶುಃ । ಮಹೇಶಂ ಪ್ರತಿ ಪಾರ್ವತ್ಯೇವಮುವೋಚತ್ । ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯಂತಾಮೇವಂ ತ್ವಯಾ ಕಾರ್ಯಂ ಮಯಿ ಚೇತ್ಪ್ರೀತಿ-ರಸ್ತೀತಿ । ಸ ಚ ಮಹೇಶ್ವರಸ್ತಾನ್ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾ-ನ್ಪುತ್ರಾನ್ಕೃತ್ವಾ ಗೌರ್ಯೈ ಪ್ರದದೌ ತವೇಮೇ ಪುತ್ರಾಃ ಸಂತ್ವಿತಿ । ಅತಃ ಸರ್ವೇಷು ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ । ರೌದ್ರೇಷು ಚ ಮರುತಾಂ ಪಿತಾ ರುದ್ರ ಇತಿ ॥**

ಎಂದರೆ—ಹಿಂದೆ ಒಂದಾನೊಂದುಕಾಲದಲ್ಲಿ ಇಂದ್ರನು ಅಸುರರನ್ನು ಜಯಿಸಿದಾಗ ಅಸುರಮಾತೆಯಾದ ದಿತಿಯು ಇಂದ್ರನನ್ನು ನಿಗ್ರಹಮಾಡಲು ಸಮರ್ಥನಾದ ಪುತ್ರನನ್ನು ಪಡೆಯುವ ಉದ್ದೇಶದಿಂದ ತಪಸ್ಸನ್ನು ಆಚರಿಸಿ, ತನ್ನ ಪತಿಯ ಸೇವೆಯಿಂದ ಗರ್ಭವತಿಯಾದಳು. ಇಂದ್ರನು ಈ ವರ್ತಮಾನವನ್ನು ತಿಳಿದು ಮಾತೃಸೇವೆಯನ್ನು ಆಚರಿಸುವ ನೆಪದಿಂದ ದಿತಿಯ ಸಮೀಪದಲ್ಲಿ ಇರುತ್ತಾ ಸೂಕ್ಷ್ಮವಾದ ಆಕಾರವನ್ನು ಹೊಂದಿ, ತನ್ನ ವಜ್ರಾಯುಧ ಸಹಿತನಾಗಿ ದಿತಿಯ ಉದರವನ್ನು ಪ್ರವೇಶಿಸಿ, ಆ ಗರ್ಭವನ್ನು ಮೊದಲು ಏಳುಭಾಗವಾಗಿಯೂ, ಅನಂತರ ಅವುಗಳಲ್ಲಿ ಪ್ರತಿಯೊಂದನ್ನೂ ಮತ್ತೆ ಏಳು ಏಳು ಚೂರುಗಳನ್ನಾಗಿ ಎಂದರೆ ನಲವತ್ತೊಂಭತ್ತು ಚೂರುಗಳನ್ನಾಗಿ ಸೀಳಿದನು. ಇವರಿಂದ ಆ ಗರ್ಭದ ಚೂರುಗಳು ಉದರದಿಂದ ಹೊರಗಡೆಗೆ ಜಾರಿ ಭೂಮಿಯಲ್ಲಿ ಬಿದ್ದು ಅಳುತ್ತಿರುವುದನ್ನು ಲೋಕಾನುಗ್ರಹಕ್ಕಾಗಿ ಸಂಚರಿಸುತ್ತಿರುವ ಪಾರ್ವತೀಪರಮೇಶ್ವರರು ನೋಡಿದರು. ಆಗ ಪಾರ್ವತಿಯು ಆ ಮಾಂಸಖಂಡಗಳ ವಿಷಯದಲ್ಲಿ ದಯೆಯನ್ನು ಹೊಂದಿ ತನ್ನ ಪತಿಯನ್ನು ಕುರಿತು ಇವುಗಳೆಲ್ಲ (ಜೀವ) ಪ್ರಾಣವನ್ನು ಹೊಂದಿ ಜೀವಿಸುವ ಹಾಗೆ ಮಾಡಬೇಕು ಎಂದು ಬೇಡಿಕೊಂಡ ಕಾರಣ ಪರಮೇಶ್ವರನು ಆ ನಲವತ್ತೊಂಬತ್ತು ಮಾಂಸಖಂಡಗಳೂ, ಒಂದೇಸಮನಾದ ರೂಪ, ಅಲಂಕಾರ, ವಯಸ್ಸು ಉಳ್ಳ ಪುತ್ರರನ್ನಾಗಿ ಮಾಡಿದನು. ಮತ್ತು ಇವರು ನಿನ್ನ ಮಕ್ಕಳು ಎಂದು ಪಾರ್ವತಿಗೆ ಹೇಳಿದನು. ಈ ಇತಿಹಾಸದಿಂದ ಮರುತ್ತುಗಳು ರುದ್ರಪುತ್ರರೆಂದೂ, ರುದ್ರನು ಮರುತ್ಪಿತನೆಂದೂ ಆಯಾಯ ಸೂಕ್ತಗಳಲ್ಲಿ ಹೇಳಲ್ಪಟ್ಟಿರುವುದು.

**ನಿತ್ಯಂ** — ಈ ಶಬ್ದವು ಯಾವಾಗಲೂ ಆಧುನಿಕಸಂಸ್ಕೃತದಲ್ಲಿ **ಯಾವಾಗಲೂ** eternal, everlasting ಎಂಬ ಅರ್ಥವನ್ನು ಸೂಚಿಸುವುದಾದರೂ ಋಗ್ವೇದದಲ್ಲಿ ಇದಕ್ಕೆ **ತನ್ನ ಸ್ವಂತ** one's own ಎಂಬ ಅರ್ಥವೇ ಹೆಚ್ಚಾಗಿ ಬಳಕೆಯಲ್ಲಿರುವುದು. ಇದಲ್ಲದೆ ಈ ಶಬ್ದವು ಅನೇಕ ಸಂದರ್ಭಗಳಲ್ಲಿ ಎಂದರೆ—

**ರಯಿರ್ನ ಚಿತ್ರಾ ಸೂರೋ ನ ಸಂದೃಗಾಯುರ್ನ ಪ್ರಾಣೋ ನಿತ್ಯೋ ನ ಸೂನುಃ ।**

(ಋ ಸಂ ೧-೬೬-೧)

**ನಿತ್ಯಂ ನ ಸೂನುಂ ಪಿತ್ರೋರುಪಸ್ಥೇ ದ್ಯಾವಾ ರಕ್ಷತಂ ಪೃಥಿವೀ ನೋ ಅಭ್ವಾತ್ ।**

(ಋ. ಸಂ. ೧-೧೮೫-೨)

ಇತ್ಯಾದಿ ಋಕ್ಕುಗಳಲ್ಲಿ **ಸೂನು** ಶಬ್ದದೊಡನೆಯೂ,

**ಜನ್ಮೇವ ನಿತ್ಯಂ ತನಯಂ ಜುಷಸ್ವ ಸ್ತೋಮಂ ಮೇ ಅಗ್ನೇ ತನ್ವಾ ಸುಜಾತ ।**

(ಋ. ಸಂ. ೩-೧೫-೨)

**ನ್ಯಮೃಕ್ಷಾಮ ಯೋಷಣಾಂ ನ ಮರ್ಯೇ ನಿತ್ಯಂ ನ ಸೂನುಂ ತನಯಂ ದಧಾನಾಃ**

(ಋ. ಸಂ. ೧೦-೩೯-೧೪)

ಇತ್ಯಾದಿ ಋಕ್ಕುಗಳಲ್ಲಿ **ತನಯ** ಶಬ್ದದೊಡನೆಯೂ, ಮತ್ತು ಋ. ಸಂ. ೨-೨-೧೧ ರಲ್ಲಿ **ತೋಕ** ಶಬ್ದದೊಡನೆಯೂ, ಋ. ಸಂ. ೭-೮೮-೬ ರಲ್ಲಿ **ಆಪಿ**ಶಬ್ದದೊಡನೆಯೂ, ಋ. ಸಂ. ೧-೭೧-೧ ರಲ್ಲಿ **ಪತಿ**ಶಬ್ದದೊಡನೆಯೂ ಉಪಯೋಗಿಸಲ್ಪಟ್ಟಿದೆ. ಈ ಸ್ಥಳಗಳಲ್ಲೆಲ್ಲಾ ನಿತ್ಯಶಬ್ದಕ್ಕೆ **ತನ್ನದೇ ಆದ, ತನ್ನ ಸ್ವಂತವಾದ,** one's own ಎಂದೇ ಅರ್ಥವು.

**ಹವಿಷ್ಕೃತಂ**—**ಹವಿಷಃ ಕರ್ತಾರಂ, ಪ್ರದಾತಾರಂ ಯಜಮಾನಂ ।** ಯಜ್ಞಾದಿಗಳಲ್ಲಿ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಯಜಮಾನನನ್ನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ನಿತ್ಯಂ**—**ತ್ಯಪ್ ನೇರ್ಧ್ರುವ ಇತಿ ವಕ್ತವ್ಯಂ** ಎಂಬುದರಿಂದ ನಿ ಎಂಬುದಕ್ಕೆ ತ್ಯಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಬಿಭ್ರತಃ**—ಡುಭೃಞ್ ಭರಣೇ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶ್ಲು ವಿಕರಣ. ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ನಾಭ್ಯಸ್ತಾಚ್ಛತುಃ** ಎಂಬುದರಿಂದ ನುಮಾಗಮ ಬರುವುದಿಲ್ಲ. ಪ್ರಥಮಾ ಬಹುವಚನಾಂತರೂಪ.

**ಕ್ರೀಳಂತಿ**—ಕ್ರೀಡೃ ವಿಹಾರೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಕ್ರೀಳಾಃ**—ಪೂರ್ವೋಕ್ತವಾದ ಧಾತುವಿಗೆ ಕರ್ತರಿಯಲ್ಲಿ **ನಂದಿಗ್ರಹಪಚಾದಿಭ್ಯಃ**-(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

**ವಿದಥೇಷು**—ವಿದ ಜ್ಞಾನೇ ಧಾತು. **ರುದಿವಿದಿಭ್ಯಾಂ ಙಿತ್** (ಉ. ಸೂ. ೩-೩೯೫) ಎಂಬುದರಿಂದ ಅಥ ಪ್ರತ್ಯಯ. ಙಿತ್ವಾತಿದೇಶಮಾಡಿರುವುದರಿಂದ ಲಘೂಪಧ ಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಘೃಷ್ವಯಃ**—ಘೃಷ ಸಂಘರ್ಷೇ. ಧಾತು. **ಕೃವಿಘೃಷ್ವಿ** (ಉ. ಸೂ. ೪-೪೯) ಎಂಬುದರಿಂದ ಕ್ವಿಪ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರಥಮಾ ಬಹುವಚನಾಂತರೂಪ.

**ನಕ್ಷಂತಿ**—ನಕ್ಷ ವ್ಯಾಪ್ತೌ. ಇದು ಸೌತ್ರಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಕ್ರೀಳಂತಿ ಎಂಬಲ್ಲಿ ಬಂದಂತೆಯೇ ಧಾತುಸ್ವರ ಉಳಿಯುತ್ತದೆ.

**ರುದ್ರಾಃ**—ರುದಿರ್ ಅಶ್ರುವಿಮೋಚನೇ. ಧಾತು. **ಸ್ಫಾಯಿತಂಚಿ**—(ಉ. ಸೂ. ೨-೧೭೯) ಎಂಬುದರಿಂದ ರಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನಮಸ್ವಿನಂ**—ನಮಃ ಅಸ್ಯ ಅಸ್ತಿ ಇತಿ ನಮಸ್ವೀ. **ಅಸ್‍ಮಾಯಾ**—(ಪಾ. ಸೂ. ೫-೨-೧೨೧) ಎಂಬುದರಿಂದ ಮತ್ವರ್ಥದಲ್ಲಿ ವಿನಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಮರ್ಧಂತಿ**—ಮೃಧು ಕ್ಲೇದನೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಸ್ವತವಸಃ**—ಸ್ವಂ ತವಃ ಯೇಷಾಂ ತೇ. ಸ್ವತವಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಹವಿಷ್ಕೃತಂ**—ಹವಿಃ ಕರೋತಿ ಇತಿ ಹವಿಷ್‍ಕೃತ್. ಡುಕೃಞ್ ಕರಣೇ. ಧಾತು. ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

ಯಸ್ಮಾ ಊಮಾಸೋ ಅಮೃತಾ ಅರಾಸತ ರಾಯಸ್ಪೋಷಂ ಚ ಹವಿಷಾ ದದಾಶುಷೇ ।
ಉಕ್ಷಂತ್ಯಸ್ಮೈ ಮರುತೋ ಹಿತಾ ಇವ ಪುರೂ ರಜಾಂಸಿ ಪಯಸಾ ಮಯೋಭುವಃ ॥ ೩ ॥

॥ ಪದಪಾಠಃ ॥

ಯಸ್ಮೈ । ಊಮಾಸಃ । ಅಮೃತಾಃ । ಅರಾಸತ । ರಾಯಃ । ಪೋಷಂ । ಚ । ಹವಿಷಾ । ದದಾಶುಷೇ ।
ಉಕ್ಷಂತಿ । ಅಸ್ಮೈ । ಮರುತಃ । ಹಿತಾಃऽಇವ । ಪುರು । ರಜಾಂಸಿ । ಪಯಸಾ । ಮಯಃऽಭುವಃ ॥ ೩ ॥

॥ ಸಾಯಣಭಾಷ್ಯಂ ॥

ಯಸ್ಮೈ ಯಜಮಾನಾಯ ಹವಿಷಾ ದದಾಶುಷೇ ಸೋಮಾದಿಹವಿರ್ದತ್ತವತೇ ಹವಿಷಾ ಪ್ರೀತಾ ಊಮಾಸೋಽವಿತಾರೋಽಮೃತಾ ಅಮರಣಧರ್ಮಾಣೋ ಮರುತೋ ರಾಯಸ್ಪೋಷಂ ಧನಸ್ಯ ಪುಷ್ಟಿಂ । ಚಶಬ್ದಾತ್ಪಶ್ವಾದಿಪುಷ್ಟಿಂ । ಅರಾಸತ ಪ್ರಾಯಚ್ಛನ್ । ರಾಸತಿರ್ದಾನಾರ್ಥಃ । ಅಸ್ಮೈ ಯಜಮಾನಾಯ ಹಿತಾ ಇವ ಹಿತಾಚರಣಾಃ ಸಖಾಯ ಇವ ಸಂತೋ ಮಯೋಭುವಃ ಸುಖಸ್ಯ ಭಾವಯಿತಾರೋ ಮರುತೋ ರಜಾಂಸಿ ಲೋಕಾನ್ ಪುರು ಪ್ರಭೂತಂ ಯಥಾ ಭವತಿ ತಥಾ ಪಯಸೋದಕೇನ ಸಸ್ಯಾದ್ಯುತ್ಪತ್ತ್ಯರ್ಥಮುಕ್ಷಂತಿ । ಸಿಂಚಂತಿ ॥

॥ ಪ್ರತಿಪದಾರ್ಥ ॥

**ಹವಿಷಾ**—ಸೋಮಾದಿಹವಿಸ್ಸನ್ನು । **ದದಾಶುಷೇ**—ಅರ್ಪಿಸುವ । **ಯಸ್ಮೈ**—ಯಾವ ಯಜಮಾನನಿಗೆ । **ಊಮಾಸಃ**—ರಕ್ಷಕರೂ । **ಅಮೃತಾಃ**—ಮರಣರಹಿತರೂ ಆದ ಮರುದ್ದೇವತೆಗಳು । **ರಾಯಃ ಪೋಷಂ**—ಧನದ ಪುಷ್ಟಿಯನ್ನೂ । **ಚ**—ಪಶ್ವಾದಿಪುಷ್ಟಿಯನ್ನೂ । **ಅರಾಸತ**—ದಾನಮಾಡುತ್ತಾರೋ । **ಅಸ್ಮೈ**—ಆ ಯಜಮಾನನಿಗೆ । **ಹಿತಾಃ ಇವ**—ಹಿತೈಷಿಗಳಾದ ಮಿತ್ರರಂತೆ ಇರುವವರೂ । **ಮಯೋಭುವಃ**—ಸುಖದಾತೃಗಳೂ ಆದ । **ಮರುತಃ**—ಮರುದ್ದೇವತೆಗಳು । **ರಜಾಂಸಿ**—ಲೋಕಗಳನ್ನು । **ಪುರು**—ಅಭಿವೃದ್ಧಿ ಹೊಂದುಹಾಗೆ । **ಪಯಸಾ**—(ಸಸ್ಯಾದ್ಯುತ್ಪತ್ತಿಗೋಸ್ಕರ)ಉದಕದಿಂದ । **ಉಕ್ಷಂತಿ**—ಚುಮುಕಿಸುತ್ತಾರೆ.

॥ ಭಾವಾರ್ಥ ॥

ರಕ್ಷಕರೂ, ಅಮರರೂ ಆದ ಮರುದ್ದೇವತೆಗಳು ಹವಿರಾದಿದಾತೃವಾದ ಯಜಮಾನನಿಗೆ ಪಶ್ವಾದಿ ಧನಾಭಿವೃದ್ಧಿಯನ್ನುಂಟುಮಾಡುತ್ತಾರೆ; ಮತ್ತು ಹಿತೈಷಿಗಳಾದ ಮಿತ್ರರಂತೆ ಇರುವ ಈ ಮರುದ್ದೇವತೆಗಳು ಸುಖದಾತೃಗಳಾಗಿ, ಉದಕವನ್ನು ಒದಗಿಸಿ, ಸಸ್ಯಾದ್ಯಭಿವೃದ್ಧಿಯ ಮೂಲಕ ಲೋಕಗಳೆಲ್ಲವೂ ಪ್ರವೃದ್ಧವಾಗುವಂತೆ ಮಾಡುತ್ತಾರೆ.

## English Translation.

To him, the presenter (of offerings), the protecting and immortal Maruts, (gratified) by the oblation, have given abundance of riches: they, the bestowers of happiness, becoming, as it were, the friends (of the worshipper), sprinkle the regions plentifully with water.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು—ಮರುದ್ದೇವತೆಗಳನ್ನುದ್ದೇಶಿಸಿ, ಹವಿಸ್ಸನ್ನು ಸಮರ್ಪಿಸುವ ಯಜಮಾನರಿಗೆ ಮರಣಹಿತರಾದ ಮರುದ್ದೇವತೆಗಳು ಧನವನ್ನೂ ಪಶುಪುತ್ರಾದಿಸಂಪತ್ತನ್ನೂ ಕೊಟ್ಟು ಕಾಪಾಡುತ್ತಾರೆ. ಮತ್ತು ಯಜಮಾನರ ಹಿತವನ್ನೇ ಯಾವಾಗಲೂ ಸಾಧಿಸುತ್ತಾ ಅವರ ಅನುಕೂಲಕ್ಕಾಗಿಯೂ, ಲೋಕರಕ್ಷಣಾರ್ಥವಾಗಿಯೂ, ಸಸ್ಯಾಭಿವೃದ್ಧಿಗಾಗಿಯೂ, ವೃಷ್ಟಿಯನ್ನುಂಟುಮಾಡಿ ಭೂಮಿಯನ್ನೆಲ್ಲಾ ನೀರಿನಿಂದ ನೆನೆಯುವಂತೆ ಮಾಡುತ್ತಾರೆ.

**ರಾಯಃ ಪೋಷಂ—ರಾಯಃ** ಎಂದರೆ ಧನವು, **ಪೋಷಂ** ಎಂದರೆ ಪುಷ್ಟಿಯು. ಇವುಗಳಿಗೆ ಸಾಧನ ಭೂತವಾದ ಗವಾದಿಪಶುಸಂಪತ್ತನ್ನು ಎಂದರ್ಥವು.

**ಹವಿಷಾ ದದಾಶುಷೇ—ಸೋಮಾದಿಹವಿರ್ದತ್ತವತೇ ।** ಸೋಮವೇ ಮೊದಲಾದ ಹವಿಸ್ಸನ್ನು ಅರ್ಪಿಸುವ ಯಜಮಾನನಿಗಾಗಿ.

**ಹಿತಾ ಇವ—ಹಿತಾಚರಣಾಃ ಸಖಾಯ ಇವ ।** ಯಾವಾಗಲೂ ಹಿತವನ್ನೇ ಉಂಟುಮಾಡುವ ಸ್ನೇಹಿತರಂತೆ ಮರುದ್ದೇವತೆಗಳು ಯಜಮಾನನ ಹಿತವನ್ನೇ ಬಯಸುವರು.

**ಪುರು—ಪ್ರಭೂತಂ ।** ಉರು ತುವಿ ಮೊದಲಾದ ಹನ್ನೆರಡು ಬಹುನಾಮಗಳಲ್ಲಿ ಪುರು ಶಬ್ದವು ಪಠಿತ ವಾಗಿರುವುದರಿಂದ ಪುರು ಎಂದರೆ ಬಹಳವಾಗಿ ಎಂದರ್ಥವು. (ನಿ. ೩-೧೩)

**ರಜಾಂಸಿ—**ರಜಶ್ಶಬ್ದಕ್ಕೆ ಅನೇಕಾರ್ಥಗಳಿರುವವು. ರಜಃ ಎಂದರೆ ರಾತ್ರಿಯೆಂದೂ (ನಿ. ೨-೧೮), ಜ್ಯೋತಿಯೆಂದೂ, ಉದಕವೆಂದೂ (ನಿ. ೪-೧೯) ಲೋಕವೆಂದೂ (ನಿ. ೪-೧೯) ನಾನಾರ್ಥಗಳಿವೆ. ಇಲ್ಲಿ ಲೋಕ ಗಳೆಂದು ಅರ್ಥವು.

**ಮಯೋಭುವಃ—**ಮಯಃ ಎಂದರೆ ಸುಖವು (ನಿ. ೩-೧೩) ಯಾಜಮಾನರಿಗೆ ಸುಖವನ್ನುಂಟುಮಾಡುವವ ರಾದ್ದರಿಂದ ಮರುದ್ದೇವತೆಗಳನ್ನು ಮಯೋಭುವಃ ಎಂಬ ವಿಶೇಷಣದಿಂದ ಸೂಚಿಸಿದೆ ಸಾಧಾರಣವಾಗಿ ಎಲ್ಲಾ ದೇವತೆಗಳ ಪರವಾಗಿಯೂ ಈ ಶಬ್ದದ ಪ್ರಯೋಗವಿರುವುದು

॥ ವ್ಯಾಕರಣಪ್ರಕ್ರಿಯಾ ॥

**ಊಮಾಸಃ—**ಅವ ರಕ್ಷಣೇ. ಧಾತು. **ಅವಿಸಿವಿಶುಷಿಭ್ಯಃ ಕಿತ್** (ಉ. ಸೂ. ೧–೧೪೧) ಎಂಬುದರಿಂದ ಮನ್ ಪ್ರತ್ಯಯ. ಕಿತ್ವ ವಿಧಾನಮಾಡಿರುವುದರಿಂದ ಉಪಧಾವಕಾರಗಳಿಗೆ **ಜ್ವರತ್ವರ**—(ಪಾ. ಸೂ. ೬-೪-೨೦) ಎಂಬುದರಿಂದ ಊಠಾದೇಶ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

**ಅಮೃತಾಃ—**ನಞ್ ಸ್ವರಕ್ಕೆ ಬಾಧಕವಾಗಿ **ನಞೋಜರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಅರಾಸತ—**ರಾಸೃ ಶಬ್ದೇ. ಧಾತು. ಇಲ್ಲಿ ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. ವ್ಯತ್ಯಯದಿಂದ ಝಕ್ಕೆ ಅತಾದೇಶ. ಲಙ್ ಪ್ರಥಮಪುರುಷ ಬಹುವಚನಾಂತರೂಪ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ರಾಯಃ—ಊಡಿದಂಪದಾದಿ**—(ಪಾ. ಸೂ. ೬–೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದದಾಶುಷೇ—**ದಾಶೃ ದಾನೇ. ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ ಚತುರ್ಥೀ ಏಕವಚನ

ಪರವಾದಾಗ **ವಸೋಃ ಸಂಪ್ರಸಾರಣಂ** ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿ ಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ

**ಉಕ್ಷಂತಿ**– ಉಕ್ಷ ಸೇಚನೇ. ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ಹಿತಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಯೋಭುವಃ**—ಮಯಃ ಎಂಬುದು ಸುಖದ ಹೆಸರು. ಇದು ಉಪಪದವಾಗಿರುವಾಗ ಅಂತರ್ಭಾವಿ ತಣ್ಯರ್ಥಕವಾದ ಭೂಧಾತುವಿಗೆ ಕ್ವಿಪ್ ಪ್ರತ್ಯಯ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ ॥ ೩ ॥



॥ ಸಂಹಿತಾಪಾಠಃ ॥

ಆ ಯೋ ರಜಾಂಸಿ ತವಿಷೀಭಿರವ್ಯತ ಪ್ರ ವ ಏವಾಸಃ ಸ್ವಯತಾಸೋ ಅಧ್ರಜನ್ ।
ಭಯಂತೇ ವಿಶ್ವಾ ಭುವನಾನಿ ಹರ್ಮ್ಯಾ ಚಿತ್ರೋ ವೋ ಯಾಮಃ ಪ್ರಯತಾಸ್ವೃಷ್ಟಿಷು ॥ ೪ ॥

॥ ಪದಪಾಠಃ ॥

ಆ । ಯೇ । ರಜಾಂಸಿ । ತವಿಷೀಭಿಃ । ಅವ್ಯತ । ಪ್ರ । ವಃ । ಏವಾಸಃ । ಸ್ವऽಯತಾಸಃ । ಅಧ್ರಜನ್ ।
ಭಯಂತೇ । ವಿಶ್ವಾ । ಭುವನಾನಿ । ಹರ್ಮ್ಯಾ । ಚಿತ್ರಃ । ವಃ । ಯಾಮಃ । ಪ್ರऽಯತಾಸು । ಋಷ್ಟಿಷು ॥ ೪ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯುಷ್ಮತ್ಸಂಬಂಧಿನೋ ಯ ಏವಾಸ ಏವಾ ಅಶ್ವವಿಶೇಷಾಸ್ತವಿಷೀಭಿಃ ಸ್ವಕೀಯೈರ್ಬಲೈರ್ವೃಷ್ಟಿಪ್ರದಾನಾದಿರೂಪೈ ರಜಾಂಸಿ ಲೋಕಾನಾವ್ಯತ ಸರ್ವತ ಆವೃಣ್ವಂತಿ ತೇ ವೋ ಯುಷ್ಮಾಕಮೇವಾಸೋಽಶ್ವಾಃ ಸ್ವಯತಾಸಃ ಸ್ವಯಮೇವ ಸಾರಥಿನಾ ವಿನೈವ ಯುಕ್ತಾಃ ಪ್ರಾಧ್ರಜನ್ ।

ಪ್ರಕರ್ಷೇಣ ಗಚ್ಛಂತಿ । ವ್ಯಾಪ್ನುವಂತಿ । ಕಿಂಚ ಯುಷ್ಮದಾಗಮನಾದ್ವಿಶ್ವಾ ಭುವನಾನಿ ಸರ್ವಾಣಿ ಭೂತಜಾತಾನಿ ವಿಶ್ವಾ ಹರ್ಮ್ಯಾ ಸರ್ವಾಣಿ ಹರ್ಮ್ಯಾಣಿ ಚ ಭಯಂತೇ । ಬಿಭ್ಯತಿ ಪತೆನಾತ್ । ಯಸ್ಮಾದೇವಂ ತಸ್ಮಾದ್ವೋ ಯಾಮಶ್ಚಿತ್ರಶ್ಚಾಯನೀಯಃ । ಆಶ್ಚರ್ಯಭೂತ ಇತ್ಯರ್ಥಃ । ಭೀತೇಃ ಕಾರಣಮಾಹ । ಋಷ್ಟಿಷು ಯುದ್ಧಸ್ಥಾಷು ಹೇತಿಷು ಪ್ರಯತಾಸು ಪ್ರಕರ್ಷೇಣೋದ್ಯತಾಸು ಸತೀಷು । ಅಥವಾ ಭೀತೌ ದೃಷ್ಟಾಂತಃ । ಋಷ್ಟಿಷು ಪ್ರಯತಾಸು ಸತೀಷು । ಲುಪ್ತೋಪಮೇಯಂ । ಆಯುಧೇಷೂದ್ಯತೇಷು ಯಥಾ ಜನಾ ಬಿಭ್ಯತಿ ತದ್ವದ್ಯುಷ್ಮದಾಗಮನಾದ್ಬಿಭ್ಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಯೇ ವಿವಾಸಃ**—ಯಾವ ನಿಮ್ಮ ಅಶ್ವಗಳು । **ತವಿಷೀಭಿಃ**—(ವೃಷ್ಟಿಪ್ರದಾನಾದಿರೂಪವಾದ) ಸ್ವಕೀಯ ಬಲಗಳಿಂದ । **ರಜಾಂಸಿ**—ಲೋಕಗಳನ್ನು । **ಆ ಅವ್ಯತ**—ಸರ್ವತ್ರ ಆವರಿಸುತ್ತವೆಯೋ । (**ತೇ**—ಆ) । **ವಃ**—ನಿಮ್ಮ (ಅಶ್ವಗಳು) । **ಸ್ವಯತಾಸಃ**—ತಾವಾಗಿಯೇ (ಸಾರಥಿಯಿಲ್ಲದೇ) ರಥದಲ್ಲಿ ನಿಯುಕ್ತಗಳಾಗಿ । **ಪ್ರ ಅಧ್ರಜನ್**—ವಿಶೇಷವಾಗಿ ವ್ಯಾಪಿಸುತ್ತವೆ । (**ಕಿಂಚ**—ಮತ್ತೂ ನಿಮ್ಮ ಆಗಮನದಿಂದ) । **ವಿಶ್ವಾ ಭುವನಾನಿ**—ಸಮಸ್ತ ಭೂತಜಾತಗಳೂ । (**ವಿಶ್ವಾ**) **ಹರ್ಮ್ಯಾ**—ಸಮಸ್ತ ಗೃಹಗಳೂ । **ಋಷ್ಟಿಷು**—ಯುದ್ಧಸ್ಥವಾದ ಆಯುಧಗಳನ್ನು । **ಪ್ರಯತಾಸು**—ಹೊಡೆಯುವುದಕ್ಕಾಗಿ ಮೇಲೆತ್ತಿದಾಗ (ಭಯಪಡುವಂತೆ) । **ಭಯಂತೇ**—(ಬೀಳುತ್ತೇವೆಂದು) ಭಯಪಡುತ್ತವೆ । (**ತಸ್ಮಾತ್**—ಆದುದರಿಂದ) । **ವಃ**—ನಿಮ್ಮ । **ಯಾಮಃ**—(ಆ ಗಮನವು) ಸಂಚಾರವು । **ಚಿತ್ರಃ**—ಆಶ್ಚರ್ಯಕರವಾದುದು.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಸ್ವತಃನಿಯುಕ್ತವಾಗುವ ನಿಮ್ಮ ಅಶ್ವಗಳು ವೃಷ್ಟಿಪ್ರದಾನಾದಿ ಕರ್ಮವಿಶಿಷ್ಟವಾಗಿ, ಲೋಕಗಳಲ್ಲೆಲ್ಲಾ ಸಂಚರಿಸುತ್ತವೆ; ಯುದ್ಧದಲ್ಲಿ ಆಯುಧಗಳಿಂದ ಜನರು ಭೀತರಾಗುವಂತೆ, ನಿಮ್ಮ ಆಗಮನದಿಂದ ಪ್ರಾಸಾದಾದಿಗಳೂ, ಸಮಸ್ತ ಭೂತಜಾತಗಳೂ ಬೀಳುತ್ತೇವೆಂದು ಭಯಗೊಳ್ಳುತ್ತವೆ.

## English Translation.

Those, ycur coursers, which traverse the regions in their speed, proceed, self-guided : all worlds, all dwellings, are alarmed, for marvellous is your coming : (such fear as is felt) when spears are thrust forth (in battle).

॥ ವಿಶೇಷವಿಷಯಗಳು ॥

**ರಜಾಂಸಿ—ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ ।** ರಜಃ ಶಬ್ದಕ್ಕೆ ಜ್ಯೋತಿ, ಉದಕ, ಲೋಕಗಳೆಂಬ ಅನೇಕಾರ್ಥಗಳಿವೆ. (ನಿ. ೪-೧೯) ಇಲ್ಲಿ ಲೋಕಗಳೆಂದರ್ಥವು.

**ತವಿಷೀಭಿಃ**—ತವಿಷೀ ಎಂಬ ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಭಾಷ್ಯಕಾರರು ಈ ಶಬ್ದಕ್ಕೆ ಸ್ವಕೀಯೈರ್ಬಲೈರ್ವೃಷ್ಟಿಪ್ರದಾನಾದಿರೂಪೈಃ—ಮಳೆಯನ್ನು ಹುಯ್ಯುವಂತೆ ಮಾಡುವ ತಮ್ಮ

ಶಕ್ತಿಸಾಮರ್ಥ್ಯಗಳಿಂದ ಎಂದರ್ಥ ಮಾಡಿರುವರು. Max Muller ಪಂಡಿತನು—you have stirred up the clouds with might ನಿಮ್ಮ ಶಕ್ತಿಸಾಮರ್ಥ್ಯಗಳಿಂದ ಮೇಘಗಳನ್ನು ಚದುರಿಸಿ ಮಳೆಹುಯ್ಯುವಂತೆ ಮಾಡುತ್ತೀರಿ ಎಂದು ಅರ್ಥವಿವರಣೆ ಮಾಡಿರುವನು. ಮಳೆ ಹುಯ್ಯುವಾಗ ಗಾಳಿಯು ಬಹಳ ರಭಸವಾಗಿ ಬೀಸುವುದರಿಂದ ಮರುದ್ದೇವತೆಗಳು ತಮ್ಮ ಬಲಪ್ರಯೋಗವನ್ನು ಮಾಡಿರುವರು ಎಂದು ಇಲ್ಲಿ ವರ್ಣಿಸಿದೆ.

**ಅವ್ಯತ—ಲೋಕಾನ್ ಸರ್ವತ ಆವೃಣಂತಿ ।** ಭೂಮಿಯೆಲ್ಲವನ್ನೂ ವ್ಯಾಪಿಸುವುವು, ಆವರಿಸುವವು ಎಂದು ಭಾಷ್ಯಕಾರರ ವಿವರಣೆಯು. ಮಾಕ್ಸ್ ಮುಲ್ಲರ್ ಪಂಡಿತನು ಈ ಶಬ್ದವು ಚದುರಿಸು (to stir up, to excite) ಎಂಬ ಅರ್ಥವಿರುವ ವಿ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಇಲ್ಲಿ ಮೇಘಗಳನ್ನು ಮರುದ್ದೇವತೆಗಳು ಚದುರಿಸುವರು, ಪ್ರೇರಿಸುವರು ಎಂದು ಹೇಳಿರುವನು. ಮತ್ತೂ ಪ್ರವಯಣ—a goad, ಪ್ರವೇತೃ—driver ಇತ್ಯಾದಿ ಶಬ್ದಗಳೂ ಮೇಲೆ ಹೇಳಿದ ವಿಧಾತುವಿನಿಂದಲೇ ನಿಷ್ಪನ್ನವಾಗಿರುವುದೆಂದು ಹೇಳಿರುವನು.

**ಏವಾಸಃ—ಇಣ್ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ವೇಗಗಮನವನ್ನು ಸೂಚಿಸುವುದು. ಬಹಳ ವೇಗವಾಗಿ ಹೋಗತಕ್ಕ ಎಂದರ್ಥವು. ಇಲ್ಲ ಬಹಳ ವೇಗಗಮನವುಳ್ಳವು ಅಶ್ವಗಳಾದುದರಿಂದ ಮರುದ್ದೇವತೆಗಳ ಅಶ್ವಗಳೆಂದು ತಿಳಿಯಬೇಕು. ಮರುತ್ತಗಳ ಅಶ್ವಗಳಿಗೆ **ಪೃಷತ್ಯೋ ಮರುತಾಂ** (ನಿ. ೨-೨೮) ಎಂಬ ನಿರ್ವಚನ ಪ್ರಕಾರವಾಗಿ ಚುಕ್ಕೆಗಳುಳ್ಳ ಜಿಂಕೆಗಳೆಂದು ಹೆಸರಿದ್ದರೂ ಅನೇಕ ಋಕ್ಕುಗಳಲ್ಲಿ ಅಶ್ವಶಬ್ದವಾಚಕಪದಗಳನ್ನೇ ಉಪಯೋಗಿಸಲಾಗಿದೆ.

**ಸ್ವಯುತಾಸಃ :—ಸ್ವಯಮೇವ ಸಾರಥಿನಾ ವಿನೈವ ಯುಕ್ತಾಃ ।** ಸಾರಥಿಯ ಸಹಾಯವಿಲ್ಲದೇ ತಾವೇ ರಥಕ್ಕೆ ಹೂಡಿಕೊಳ್ಳುವ ಎಂದಭಿಪ್ರಾಯವು. ಲೋಕವ್ಯವಹಾರದಲ್ಲಿ ರಥಕ್ಕೆ ಅಶ್ವಗಳನ್ನು ಸಾರಥಿಯೇ ಮೊದಲಾದವರು ಕಟ್ಟಿ ಸಿದ್ಧಪಡಿಸುವುದು ರೂಢಿಯು. ಆದರೆ ಮರುದ್ದೇವತೆಗಳ ಅಶ್ವಗಳು ಆ ರೀತಿ ಇತರರ ಪ್ರೇರಣೆ ಅಥವಾ ಸಹಾಯವಿಲ್ಲದೆ ತಾವೇ ಸ್ವತಃ ರಥಕ್ಕೆ ಹೂಡಿಕೊಳ್ಳುವ ಸಾಮರ್ಥ್ಯವುಳ್ಳವು ಎಂದಭಿಪ್ರಾಯವು. ಇಂದ್ರನ ಹರೀ ಎಂಬ ಕುದುರೆಗಳ ವಿಷಯದಲ್ಲಿಯೂ, ಅಶ್ವಿನೀದೇವತೆಗಳ ವಾಹನವಿಷಯದಲ್ಲಿಯೂ ಇದೇ ರೀತಿಯಾದ ಅಭಿಪ್ರಾಯವು ವರ್ಣಿತವಾಗಿರುವುದು.

**ಭಯಂತೇ ವಿಶ್ವಾ ಭುವನಾನಿ ಹರ್ಮ್ಯಾ**—ಲೋಕದಲ್ಲಿರುವ ಸಮಸ್ತ ವಸ್ತುಜಾತಗಳೂ, ಪ್ರಾಣಿಗಳೂ, ಮನೆ ಮುಂತಾದ ಕಟ್ಟಡಗಳೂ ಮರುದ್ದೇವತೆಗಳ ಆಗಮನದಿಂದ ಭಯದಿಂದ ನಡಗುವುವು. ಅತಿರಭಸವಾಗಿ ಬೀಸುವ ಗಾಳಿಯಿಂದಲೂ, ಮಳೆಯಿಂದಲೂ ವೃಕ್ಷಾದಿಗಳೂ, ಜನಗಳೂ, ಮನೆಗಳೂ ಅಲ್ಲಾಡುವುವು. ಗಾಳಿಯ ಹೊಡತದಿಂದ ವೃಕ್ಷಗಳು ಬುಡಸಹಿತ ಉರುಳುವುವು. ಮನೆಗಳು ಕುಸಿದು ಬೀಳುವುವು. ಈ ವಿಷಯಗಳನ್ನೇ **ಭಯಂತೇ** ಎಂಬ ಶಬ್ದದಿಂದ ಋಷಿಯು ವರ್ಣಿಸಿರುವನು.

**ಹರ್ಮ್ಯಾ—ಸರ್ವಾಣಿ ಹರ್ಮ್ಯಾಣಿ ।** ಸಮಸ್ತ ಗೃಹಗಳು ಎಂದು ಭಾಷ್ಯಕಾರರ ವಿವರಣೆಯು. Max Muller ಪಂಡಿತನು ಈ ಶಬ್ದವು ಭುವನಾನಿ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದೆಂದೂ **ಹರ್ಮ್ಯಾ** ಎಂದರೆ ಗೃಹದಲ್ಲಿ ವಾಸಮಾಡುವ ಎಂದರ್ಥವೆಂದೂ ಹೇಳಿರುವನು. ಮತ್ತು ಈ ಶಬ್ದದ ನಾನಾರ್ಥಗಳನ್ನು ವಿವರಿಸಿರುವನು. ಹರ್ಮ್ಯವೆಂದರೆ ಬೆಂಕಿಯನ್ನು ಹೊತ್ತಿಸುವ ಗುಳಿ, ಒಲೆ, ಗೃಹ ಎಂದು ಕ್ರಮವಾಗಿ ಅರ್ಥಭೇದಗಳನ್ನು

ಸೂಚಿಸುವುದು ಕಾಲಕ್ರಮದಲ್ಲಿ ಬಳಕೆಗೆ ಬಂದಿತೆಂದೂ ಅಭಿಪ್ರಾಯಪಡುವನು:—ಹರ್ಮ್ಯ is used here as an adjective of ಭುವನಾನಿ and can only mean living in houses It does not, however, occur again in the same sense, though it occurs several times as a Substantive, meaning houses- Its original meaning is fire-pit, then, hearth, then house, a transition of meaning analogous to that of aedes. Most of the ancient nations begin their kitchen with a fire-pit. They dig a hole in the ground, take a piece of the animal's raw hide, and press it down with their hands close to the sides of the hole, which thus becomes a sort of pot or basin. This they fill with water, and they make a number of stones red-hot in a fire clse by. The meat is put into the water, and the stones dropped in till the meat is boiled. Catlin describes the process as awkward and tedious, and says that since the Assinaboins had learnt from the Mandans to make pottery, and had been supplied with vessels by the traders, they had entirely done away the custom excepting at public festivals; where they seem, like all others of the human family, to take pleasure in cherishing and perpetuating their ancient customs. This pit was called ಹರ್ಮ್ಯ.

(Tylor's Early History of mankind. p. 262).

ಇದಲ್ಲದೆ—

**ತೇ ಹರ್ಮ್ಯೇಷ್ಠಾಃ ಶಿಶವೋ ನ ಶುಭ್ರಾ ವತ್ಸಾಸೋ ನ ಪ್ರ ಕ್ರೀಳಿನಃ ಪಯೋಧಾಃ ।**

(ಋ. ಸಂ. ೭-೫೬-೧೬)

ಎಂಬ ಋಕ್ಕಿನಲ್ಲಿ ಮರುದ್ದೇವತೆಗಳು ಸಣ್ಣ ಬಾಲಕರಂತೆ ಪ್ರಕಾಶಿಸುತ್ತಾ ಒಲೆಯ ಸಮೀಪದಲ್ಲಿ ನಿಂತಿದ್ದರು ಎಂದಿರುವುದರಿಂದ ಹರ್ಮ್ಯ ಶಬ್ದಕ್ಕೆ ಇಲ್ಲಿ ಒಲೆಯೆಂದು ಅರ್ಥವು.

**ತೇಷಾಂ ಸ ಹನ್ಮೋ ಅಕ್ಷಾಣಿ ಯಥೇದಂ ಹರ್ಮ್ಯಂ ತಥಾ ।**

(ಋ. ಸಂ. ೭-೫೫-೬)

ಎಂಬ ಋಕ್ಕಿನಲ್ಲಿ ನಾವು ಈ ಗೃಹವನ್ನು ಮುಚ್ಚುವಂತೆ ನಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತೇವೆ ಎಂದಿರುವುದರಿಂದ ಇಲ್ಲಿ ಹರ್ಮ್ಯ ಶಬ್ದಕ್ಕೆ ಗೃಹವೆಂದರ್ಥವು.

**ಅಭೂದು ಕೇತುರುಷಸಃ ಪುರಸ್ತಾತ್ಪ್ರತೀಚ್ಯಾಗಾದಧಿ ಹರ್ಮ್ಯೇಭ್ಯಃ ।**

(ಋ. ಸಂ. ೭-೭೬-೨)

ಎಂಬ ಋಕ್ಕಿನಲ್ಲಿ—ಉಷಃಕಾಲದ ಬೆಳಕು ಮೊದಲು ಮನೆಗಳ ಮೇಲೆ ಬೀಳುತ್ತದೆ ಎಂದಿರುವುದರಿಂದ ಹರ್ಮ್ಯ ಶಬ್ದಕ್ಕೆ ಮನೆಗಳೆಂದೇ ಅರ್ಥವು.

**ಸ ಶೇವೃಧೋ ಜಾತ ಆ ಹರ್ಮ್ಯೇಷು ನಾಭಿರ್ಯುವಾ ಭವತಿ ರೋಚನಸ್ಯ ।**

(ಋ. ಸಂ. ೧೦-೪೬-೩)

ಎಂಬಲ್ಲಿ—ಅಗ್ನಿಯು ಮನೆಗಳಲ್ಲಿ ಉತ್ಪನ್ನವಾಗುವುದು. (ಮನೆಗಳಲ್ಲಿ ಬೆಂಕಿಯನ್ನು ಹೊತ್ತಿಸುವರು) ಎಂದು ಹರ್ಮ್ಯ ಶಬ್ದವು ಮನೆಯೆಂಬ ಅರ್ಥವನ್ನೇ ಸೂಚಿಸುವುದು.

**ಮನ್ಯೋರಿಯಾಯ ಹರ್ಮ್ಯೇಷು ತಸ್ಥೌ ಯತಃ ಪ್ರಜಜ್ಞ ಇಂದ್ರೋ ಅಸ್ಯ ವೇದ ।**

(ಋ. ಸಂ. ೧೦-೭೩-೧೦)

ಇಲ್ಲಿ (ಇಂದ್ರನು) ಮನ್ಯುವಿನಿಂದ ಬಂದನು ಮತ್ತು ಮನೆಯಲ್ಲಿ ನಿಂತಿದ್ದನು ಎಂದಿರುವುದರಿಂದ ಇಲ್ಲಿಯೂ ಮನೆಯೆಂದೇ ಅರ್ಥವು.

ಕೆಲವುಕಡೆ ಹರ್ಮ್ಯ ಶಬ್ದವು ಮನೆಯಲ್ಲಿ ವಾಸಮಾಡುವವನು ಎಂಬರ್ಥವನ್ನು ಸೂಚಿಸುವುದಾದರೂ ಮೇಲೆ ಕೊಟ್ಟಿರುವ ಋ. ಸಂ. ೭–೫೫–೬ ಎಂಬ ಋಕ್ಕಿನಲ್ಲಿ ಮನೆ ಅಥವಾ ಕಟ್ಟಡ (building) ಎಂದೇ ಸ್ಪಷ್ಟವಾಗಿ ಹೇಳಿರುವುದರಿಂದ ಈ ಶಬ್ದಕ್ಕೆ ಬೇರೆ ವಿಧವಾದ ಅರ್ಥವನ್ನು ಕಲ್ಪಿಸುವುದು ಅಷ್ಟು ಸಮಂಜಸವಾಗಲಾರದು. ಆದರೂ ಹಳ್ಳ ಗುಣಿ ಎಂಬ ಅರ್ಥದಲ್ಲಿಯೂ ಈ ಶಬ್ದದ ಪ್ರಯೋಗವಿರುವುದು ಕಂಡುಬರುವುದು.

**ಯದೀಂ ಸುಕ್ಷತ್ರ ಪ್ರಭೃತಾ ಮದಸ್ಯ ಯುಯುತ್ಸಂತಂ ತಮಸಿ ಹರ್ಮ್ಯೇ ಧಾಃ ।**

(ಋ. ಸಂ. ೫-೩೨-೫)

ಎಂಬ ಋಕ್ಕಿನಲ್ಲಿ (ಎಲೈ ಇಂದ್ರನೇ, ಯುದ್ಧಮಾಡಬೇಕೆಂದು ಬಯಸುತ್ತಿರುವ ಶುಷ್ಣಾಸುರನನ್ನು ಕಗ್ಗತ್ತಲೆಯಿಂದ ಕೂಡಿರುವ ಹಳ್ಳದಲ್ಲಿ ಹಾಕಿದೆ) ಹಳ್ಳ ಎಂಬರ್ಥದಲ್ಲಿಯೂ,

**ಯುವಂ ಕಣ್ವಾಯ ನಾಸತ್ಯಾಪಿರಿಪ್ತಾಯ ಹರ್ಮ್ಯೇ । ಶಶ್ವದೂತೀರ್ದಶಸ್ಯಥಃ ।**

(ಋ. ಸಂ. ೮-೫-೨೩)

ಎಂಬ ಋಕ್ಕಿನಲ್ಲಿ (ಎಲೈ ನಾಸತ್ಯರೇ, ನೀವು ಹಳ್ಳದಲ್ಲಿ ಅಸುರರಿಂದ ಎಸೆಯಲ್ಪಟ್ಟಿರುವ ಕಣ್ವಋಷಿಗೆ ಸಹಾಯವನ್ನು ನೀಡಿರಿ) ಹಳ್ಳವೆಂಬರ್ಥದಲ್ಲಿಯೂ ಹರ್ಮ್ಯ ಶಬ್ದದ ಪ್ರಯೋಗವಿರುವುದು.

**ಶ್ರಮುಸ್ಯ ದಾಯಂ ವಿ ಭಜಂತ್ಯೇಭ್ಯೋ ಯದಾ ಯಮೋ ಭವತಿ ಹರ್ಮ್ಯೇ ಹಿತಃ ।**

(ಋ. ಸಂ. ೧೦-೧೧೪-೧೦)

ಎಂಬ ಋಕ್ಕಿನಲ್ಲಿ (ಯಮನು ತನ್ನ ಮನೆಯಲ್ಲಿ ಅಥವಾ ಕೆಳಗಿನ ಲೋಕದಲ್ಲಿ ಕುಳಿತಿರುವಾಗ) ಮನೆ ಅಥವ ಅಧೋ ಲೋಕವೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಇದಲ್ಲದೆ ಋ. ಸಂ. ೧–೧೧೨–೭; ೧–೧೧೯–೬; ೮–೭೩–೩; ೧೦–೮೦–೩ ಎಂಬ ಋಕ್ಕುಗಳಲ್ಲಿರುವ ಘರ್ಮ ಶಬ್ದವೂ ಸಹ ಅಗ್ನಿಜ್ವಾಲೆಯಿಂದ ಕೂಡಿರುವ ಹಳ್ಳದಲ್ಲಿ ಅತ್ರಿ ಋಷಿಯು ಎಸೆಯಲ್ಪಟ್ಟಿರುವುದನ್ನು ಸೂಚಿಸುವುದು.

॥ ವ್ಯಾಕರಣಪ್ರಕ್ರಿಯಾ ॥

**ತವಿಷೀಭಿಃ**—ತವ ಎಂಬುದು ಸೌತ್ರಧಾತು. ಇದಕ್ಕೆ **ತವೇರ್ಣಿದ್ವಾ** (ಉ. ಸೂ. ೧-೪೮) ಎಂಬುದರಿಂದ ಟಿಷಚ್ ಪ್ರತ್ಯಯ. ಟಿತ್ತಾದುದರಿಂದ **ಟಿಡ್ಢಾಣಞ್**—ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ವ್ಯತ್ಯಯದಿಂದ ಆದ್ಯುದಾತ್ತ ಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಅವ್ಯತ**— ವೀ ಗತ್ಯಾದಿಷು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್ **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಶಪಿಗೆ ಲುಕ್. ಬಹುವಚನದಲ್ಲಿ ಝ ಪ್ರತ್ಯಯಕ್ಕೆ ಅತಾದೇಶ. ಯಣಾದೇಶ. ಅಡಾಗಮ ಮೊದಲು ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತ ವಾಗುತ್ತದೆ.

**ಏವಾಸಃ**—ಇಣ್ ಗತೌ ಧಾತು. **ಇಣ್‌ಶೀಭ್ಯಾಂ ವನ್** (ಉ. ಸೂ. ೧-೧೫೦) ಎಂಬುದರಿಂದ ವನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

**ಸ್ವಯತಾಸಃ**—ಸ್ವಃ ಯತಃ ಯೇಷಾಂ ತೇ. ಸ್ವಯತಾಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಧ್ರಜನ್**—ಧ್ರಜ ಗತೌ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಭಯಂತೇ**—ಞಿಭೀ ಭಯೇ. ಧಾತು. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮ ಪುರುಷಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ. ವ್ಯತ್ಯಯದಿಂದ ಶಪಿಗೆ ಶ್ಲು ಆದೇಶ ಬರುವುದಿಲ್ಲ. ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ, ಅಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಿಶ್ವಾ, ಹರ್ಮ್ಯಾ**—**ಶೇಶ್ಛಂದಸಿ ಬಹುಲಂ** ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ.

**ಚಿತ್ರಃ**—ಚಿಞ್ ಚಯನೇ. ಧಾತು. **ಅಮಿಚಿಮಿದಿ**—(ಉ. ಸೂ. ೪-೭೦೩) ಎಂಬುದರಿಂದ ಕ್ತ್ರ ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರಯತಾಸು—ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಕರ್ಮಣಿ ಕ್ತಪ್ರತ್ಯಯಾಂತವಾದುದು ಪರವಾದುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಯಾಮಃ**—ಯಾ ಪ್ರಾಪಣೇ. ಧಾತು. **ಅರ್ತಿಸ್ತು ಸು**—(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಯತ್ತ್ವೇಷಯಾಮಾ ನದಯಂತ ಪರ್ವತಾನ್ದಿವೋ ವಾ ಪೃಷ್ಠಂ ನರ್ಯಾ ಅಚುಚ್ಯವುಃ ।
ವಿಶ್ವೋ ವೋ ಅಜ್ಮನ್ಭಯತೇ ವನಸ್ಪತೀ ರಥೀಯಂತೀವ ಪ್ರ ಜಿಹೀತ ಓಷಧಿಃ ॥ ೫ ॥

॥ ಪದಪಾಠಃ ॥

ಯತ್ । ತ್ವೇಷಽಯಾಮಾಃ । ನದಯಂತ । ಪರ್ವತಾನ್ । ದಿವಃ । ವಾ । ಪೃಷ್ಠಂ । ನರ್ಯಾಃ । ಅಚುಚ್ಯವುಃ । ವಿಶ್ವಃ । ವಃ । ಅಜ್ಮನ್ । ಭಯತೇ । ವನಸ್ಪತಿಃ । ರಥಿಯಂತೀಽಇವ । ಪ್ರ । ಜಿಹೀತೇ । ಓಷಧಿಃ ॥ ೫ ॥

॥ ಸಾಯಣಭಾಷ್ಯಂ ॥

ಮರುತಸ್ತ್ವೇಷಯಾಮಾಃ ಪ್ರದೀಪ್ತಗಮನಾ ಯದ್ಯದಾ ಪರ್ವತಾನ್ ಪರ್ವವತೋ ಗಿರೇರ್ಗಹ್ವರಾಣಿ ಪೂರಕಾನ್ಮೇಘಾನ್ವಾ ನದಯಂತ ನಾದಯಂತಿ ವಾಥವಾ ದಿವೋ ವಿದ್ಯೋತನಾತ್ಮಕಸ್ಯಾಂತರಿಕ್ಷಸ್ಯ ಪೃಷ್ಠಮುಪರಿಭಾಗಂ ನರ್ಯಾ ನರೇಭ್ಯೋ ಹಿತಾ ಅಚುಚ್ಯವುಃ ಗಚ್ಛಂತಿ ತದಾ ವೋ ಯುಷ್ಮತ್ಸಂಬಂಧಿನ್ಯಜ್ಮನ್ ಗಮನೇ ನಿಮಿತ್ತಭೂತೇ ಸತಿ ವಿಶ್ವೋ ವನಸ್ಪತಿರ್ವನಸ್ಯ ಪಾಲಯಿತಾ ವೃಕ್ಷಸಮೂಹೋ ಭಯತೇ । ಬಿಭೇತಿ । ತಥೌಷಧಿಃ ಪ್ರಿಯಂಗುವ್ರೀಹ್ಯಾದಿಃ ಪ್ರ ಜಿಹೀತೇ । ಪ್ರಕರ್ಷೇಣ ಗಚ್ಛತಿ । ಸ್ವಸ್ಥಾನಾದಿತಸ್ತತಶ್ಚಲತೀತ್ಯರ್ಥಃ । ತತ್ರ ದೃಷ್ಟಾಂತಃ । ರಥೀಯಂತೀವ । ರಥಮಾತ್ಮನ ಇಚ್ಛಂತೀ ಸ್ತ್ರೀ । ರಥಾರೂಢೇತ್ಯರ್ಥಃ । ತಾದೃಶೀ ಸ್ತ್ರೀವ । ಸಾ ಯಥಾ ಚಲತಿ ತದ್ವತ್ ॥

॥ ಪ್ರತಿಪದಾರ್ಥ ॥

**ತ್ವೇಷಯಾಮಾಃ**—ಪ್ರದೀಪ್ತರಾದ ಮರುದ್ದೇವತೆಗಳು । **ಯತ್**—ಯಾವಾಗ । **ಪರ್ವತಾನ್**—ಗಿರಿಗಹ್ವರಗಳನ್ನು ಅಥವಾ ಮೇಘಗಳನ್ನು । **ನದಯಂತ**—ಧ್ವನಿವಿಶಿಷ್ಟವನ್ನಾಗಿ ಮಾಡುತ್ತಾರೆಯೋ । **ವಾ**—ಅಥವಾ । **ದಿವಃ**—ಅಂತರಿಕ್ಷದ । **ಪೃಷ್ಠಂ**—ಮೇಲ್ಭಾಗವನ್ನು । **ನರ್ಯಾಃ**—ನರರ ಹಿತೇಚ್ಛುಗಳಾಗಿ । **ಅಚುಚ್ಯವುಃ**—ವ್ಯಾಪಿಸುತ್ತಾರೆಯೋ । (**ತದಾ**—ಆಗ) । **ವಃ**—ನಿಮ್ಮ । **ಅಜ್ಮನ್**—ಗಮನಕಾಲದಲ್ಲಿ । **ವಿಶ್ವಃ ವನಸ್ಪತಿಃ**—ಸಮಸ್ತ ವೃಕ್ಷಗಳೂ । **ಭಯತೇ**—ಭಯಪಡುತ್ತವೆ । (**ತಥಾ**—ಹಾಗೆಯೆ) । **ಓಷಧಿಃ**—ಸಸ್ಯಾದಿಗಳೂ । **ರಥೀಯಂತೀ ಇವ**—ರಥಸ್ಥಳಾದ ಸ್ತ್ರೀಯು ಓಲಾಡುವಂತೆ । **ಪ್ರ ಜಿಹೀತೇ**—(ಸ್ವಸ್ಥಾನದಿಂದ) ಹೆಚ್ಚಾಗಿ ಚಲಿಸುತ್ತದೆ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮ ಪ್ರದೀಪ್ತಗಮಗಳಾದ ಅಶ್ವಗಳು ಪರ್ವತಗಳನ್ನು ಪ್ರತಿಧ್ವನಿತವನ್ನಾಗಿ ಮಾಡುತ್ತವೆ ; ಮತ್ತು ಮನುಷ್ಯರಿಗೆ ಹಿತಕರಗಳಾಗಿ ಅಂತರಿಕ್ಷದ ಮೇಲ್ಭಾಗವನ್ನು ವ್ಯಾಪಿಸುತ್ತವೆ ; ಹೀಗೆ ನಿಮ್ಮ ಸಂಚಾರಕಾಲದಲ್ಲಿ ಸಮಸ್ತ ವೃಕ್ಷಗಳೂ ಭಯದಿಂದ ಕಂಪಿಸುತ್ತವೆ; ರಥಸ್ಥಳಾದ ಸ್ತ್ರೀಯಂತೆ ಲತಾಗುಚ್ಛಾದಿಗಳು ಅತ್ತಲಿಂದಿತ್ತ ಓಲಾಡುತ್ತವೆ.

## English Translation.

When your brilliant coursers make the mountains echo ; and friendly to man, traverse the summit of the firmament ; then all the forest lords are alarmed at your approach, and the bushes wave to and fro, as a woman in a chariot.

॥ ವಿಶೇಷವಿಷಯಗಳು ॥

**ತ್ವೇಷಯಾಮಾಃ—ಪ್ರದೀಪ್ತಗಮನಾಃ** । ಭಯಂಕರವಾದ ಗಮನವುಳ್ಳವರು. ಗಾಳಿಯು ರಭಸದಿಂದ ಬೀಸುವಾಗ ಎಲ್ಲರಿಗೂ, ಮುಖ್ಯವಾಗಿ ವೃಕ್ಷಗಳಿಗೂ, ಗೃಹಾದಿಗಳಿಗೂ ಭಯವನ್ನುಂಟುಮಾಡುವುದೆಂದಭಿಪ್ರಾಯವು. ಏಕೆಂದರೆ, ವೇಗವಾಗಿ ಬೀಸುವ ಬಿರುಗಾಳಿಯಿಂದ ವೃಕ್ಷಗಳು ಬುಡಸಹಿತ ಉರುಳಿಸಲ್ಪಡುವವು. ಗೃಹಗಳೂ, ಅವುಗಳ ಮೇಲುಹೊದಿಕೆಯೂ ದೂರ ಎಸೆಯಲ್ಪಡುವವು. ಸಣ್ಣ ಸಣ್ಣ ಸಸ್ಯಗಳೂ ಗಿಡಗಳೂ ಅಲ್ಲೋಲಕಲ್ಲೋಲವಾಗುವವು. ಈ ರೀತಿ ಬಹಳ ಅನರ್ಥವನ್ನುಂಟುಮಾಡುವುದರಿಂದ ಮರುದ್ದೇವತೆಗಳ ಗಮನವು (ರಭಸದಿಂದ ಬೀಸುವ ಗಾಳಿಯು) ಬಹು ಭಯಂಕರವಾಗಿರುವುದೆಂದು ಇಲ್ಲಿ ವರ್ಣಿಸಿದೆ Wilson ಪಂಡಿತನು ಈ ಶಬ್ದಕ್ಕೆ ಮರುದ್ದೇವತೆಗಳ ಅಶ್ವಗಳೆಂದು ಅರ್ಥಮಾಡಿರುವನು. ಆರೀತಿ ಅರ್ಥಮಾಡುವುದಕ್ಕೆ ಸರಿಯಾದ ಕಾರಣವಿರುವಂತೆ ಕಂಡುಬರುವುದಿಲ್ಲ.

**ನದಯಂತ**—ನದ್ ಧಾತುವಿಗೆ ಶಬ್ದಮಾಡು, ಧ್ವನಿಗೈಯ್ಯು ಎಂಬರ್ಥವಿರುವುದು. ಈ ಋಕ್ಕಿನಲ್ಲಿ ಉಪಯೋಗಿಸಿರುವ ಪರ್ವತ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಪರ್ವತವೆಂದರೆ ಮೇಘ (ನಿ. ೨-೨೧) ಅಥವಾ ಬೆಟ್ಟ (ನಿ. ೧-೨೦); ಮೇಘವೆಂಬ ಅರ್ಥವನ್ನು ಹೇಳುವುದಾದರೆ ಗಾಳಿಯ ಹೊಡೆತವು ಮೇಘವನ್ನು ಘರ್ಜಿಸುವಂತೆ (ಗುಡುಗುವಂತೆ) ಮಾಡುವದು ಎಂದೂ, ಬೆಟ್ಟವೆಂಬ ಅರ್ಥವನ್ನು ಹೇಳುವುದಾದರೆ ಪರ್ವತದ ತಪ್ಪಲು ಪ್ರದೇಶಗಳಲ್ಲಿಯೂ, ಗಿರಿಗಹ್ವರಗಳಲ್ಲಿಯೂ ವೇಗವಾಗಿ ಬೀಸುವ ಗಾಳಿಯು ಶಬ್ದವನ್ನು ಮಾಡುವುದು ಎಂದು ಹೇಳಬೇಕಾಗುವುದು. Wilson ಪಂಡಿತನು—ಮರುದ್ದೇವತೆಗಳ ಅಶ್ವಗಳು ವೇಗವಾಗಿ ಹೋಗುವಾಗ ಪರ್ವತಾದಿಗಳು ಪ್ರತಿಧ್ವನಿಗೈಯ್ಯುವಂತೆ ಮಾಡುವುದು ಎಂದು ವಿವರಣೆ ಮಾಡಿರುವನು. ಆದರೆ ನದ್ ಧಾತುವಿಗೆ ಮೊದಲು ಕಂಪಿಸು, ಚಲಿಸು, ಅಲ್ಲಾಡು (to vibrate, to shake) ಎಂಬ ಅರ್ಥಗಳಿದ್ದು ಕಾಲಕ್ರಮದಿಂದ ಶಬ್ದಮಾಡು ಎಂಬರ್ಥವು ರೂಢಿಯಲ್ಲಿ ಬಂದಂತೆ ಕಾಣುವುದು. ಈ ದೃಷ್ಟಿಯಿಂದ ಈ ಋಕ್ಕಿನ ಅರ್ಥವನ್ನು ವಿವರಿಸುವುದಾದರೆ ಮರುದ್ದೇವತೆಗಳ ಆಗಮನದಿಂದ ಸಮಸ್ತ ಜನರೂ, ವೃಕ್ಷಾದಿಗಳೂ ಭಯದಿಂದ ನಡಗುವರು ಎಂಬರ್ಥವು ಸೂಚಿತವಾಗುವುದು. ಈ ಋಕ್ಕಿನ ಉತ್ತರಾರ್ಧದಲ್ಲಿ **ವಿಶ್ವೋ ವೋ ಅಜ್ಮನ್ಭಯತೇ ವನಸ್ಪತಿಃ** ಎಂಬ ವಾಕ್ಯವು ಇದನ್ನು ಸ್ಪಷ್ಟಪಡಿಸುವುದು.

**ಅಚ್ಯುತಾ ಚಿದ್ವೋ ಅಜ್ಮನ್ನಾ ನಾನದತಿ ಪರ್ವತಾಸೋ ವನಸ್ಪತಿಃ । ಭೂಮಿರ್ಯಾಮೇಷು ರೇಜತೇ ॥**

(ಋ. ಸಂ. ೮-೨೦-೫)

ಎಂಬ ಋಕ್ಕಿನಲ್ಲಿ ಪ್ರಕೃತವಾದ ಈ ಋಕ್ಕಿನಲ್ಲಿ ಹೇಳಿರುವ ವಿಷಯವೇ ವಿವರಿಸಲ್ಪಟಿರುವುದು. ಭೂಮಿಯು ಸಹ ನಡುಗುವುದೆಂದು ಇಲ್ಲಿ ಹೇಳಿರುವುದು. ಈ ವಿಷಯದಲ್ಲಿ,

**ನಿ ವೋ ಯಾಮಾಯ ಮಾನುಷೋ ದಧ್ರ ಉಗ್ರಾಯ ಮನ್ಯವೇ । ಜಿಹೀತ ಪರ್ವತೋ ಗಿರಿಃ ॥**

(ಋ. ಸಂ. ೧-೩೭-೭)

ಎಂಬ ಋಕ್ಕಿನಲ್ಲಿ ಹೇಳಿರುವ ಮರುದ್ದೇವತೆಗಳ ಭಯಂಕರವಾದ ಆಗಮನದ ಸ್ವರೂಪವು ಗಮನಾರ್ಹವಾಗಿದೆ.

**ರಥೀಃಯಂತೀವ**— ರಥದಲ್ಲಿ ಕುಳಿತಿರುವ ಸ್ತ್ರೀಯಂತೆ; ರಥದಲ್ಲಿ ಕುಳಿತಿರುವ ಸ್ತ್ರೀಯು, ರಥವು ವೇಗವಾಗಿ ಚಲಿಸುತ್ತಿರುವಾಗ ಇತ್ತಲಿಂದತ್ತ ಅಳ್ಳಾಡುವಂತೆ ಅಥವಾ ಭಯದಿಂದ ನಡುಗುವಂತೆ ಎಂದಭಿಪ್ರಾಯವು. ಈ ಶಬ್ದವು ಋಗ್ವೇದದಲ್ಲಿ ಇನ್ನೆಲ್ಲಿಯೂ ಪ್ರಯೋಗಿಸಲ್ಪಟ್ಟಿರುವುದಿಲ್ಲ. Max Muller ಪಂಡಿತನು ಈ ಶಬ್ದಕ್ಕೆ ವೇಗವಾಗಿ ಚಲಿಸುತ್ತಿರುವ ರಥ ಅಥವಾ ರಥಚಕ್ರವೆಂಬ ಅರ್ಥವು ಸಮಂಜಸವಾಗಿರುವುದೆಂದು ಹೇಳಿರುವನು.

**ಜಿಹೀತ ಓಷಧಿಃ— ಪ್ರಿಯಂಗುವ್ರೀಹ್ಯಾದಿ ಪ್ರ ಜಹೀತೇ । ಪ್ರಕರ್ಷೇಣ ಗಚ್ಛತಿ ಸ್ವಸ್ಥಾನಾದಿತಸ್ತತಶ್ಚಲತೀತ್ಯರ್ಥಃ ।** ಈ ಋಕ್ಕಿನಲ್ಲಿ ಹಿಂದೆಯೇ ಹೇಳಿರುವ ವನಸ್ಪತಿ ಶಬ್ದವು ದೊಡ್ಡದೊಡ್ಡದಾದ ವೃಕ್ಷಗಳನ್ನು ಸೂಚಿಸುವುದು. ಓಷಧಿ ಶಬ್ದವು ಸಣ್ಣದಾಗಿರುವ ಪ್ರಿಯಂಗು, ವ್ರೀಹಿ ಇತ್ಯಾದಿ ಸಸ್ಯಾದಿಗಳನ್ನು ಎಂದರೆ, ಹೆಚ್ಚು ಎತ್ತರ ಅಥವಾ ದೃಢವಾಗಿ ಬೆಳೆಯದಿರುವ ಸಸಿ ಬಳ್ಳಿ ಮೊದಲಾದವನ್ನು ಸೂಚಿಸುವುದು. ಇಂತಹ ಸಸ್ಯಗಳು ಗಾಳಿಯ ಹೊಡತದಿಂದ ನಾನಾದಿಕ್ಕುಗಳಿಗೂ ಚದುರಿಹೋಗುವಂತೆ ಕಿತ್ತು ಎಸೆಯಲ್ಪಡುವವು ಎಂದಭಿಪ್ರಾಯವು ಮೇಲಿನ ಉದಾಹರಣೆಯಲ್ಲಿ— **ಜಿಹೀತ ಪರ್ವತೋ ಗಿರಿಃ** ಎಂಬ ವಾಕ್ಯವು ಕಲ್ಲುಬಂಡೆಗಳಿಂದ ಕೂಡಿರುವ ಅಚಲವಾದ ಪರ್ವತವೇ ಮರುತ್ತುಗಳಿಂದ ಸ್ವಸ್ಥಾನಗಳಿಂದ ಚದುರಿಸಲ್ಪಡುವವು ಎಂದು ಹೇಳಿರುವಾಗ ಎದುರಿಗೆ ನಿಲ್ಲಲು ಶಕ್ತಿಯಿಲ್ಲದ ಸಸ್ಯಾದಿಗಳು ಹೇಗೆತಾನೆ ಮರುತ್ತುಗಳ ರಭಸವನ್ನು ತಡೆಯಬಲ್ಲವು ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತ್ವೇಷಯಾಮಾಃ**— ತ್ವೇಷಃ ಯಾಮಃ ಯೇಷಾಂ ತೇ ತ್ವೇಷಯಾಮಾಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ನದಯಂತ**— ಣದ ಅವ್ಯಕ್ತೇ ಶಬ್ದೇ. ಧಾತು. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. **ಹೇತುಮತಿಚ** (ಪಾ. ಸೂ. ૩-೧-೨೬) ಎಂಬುದರಿಂದ ಣಿಚ್. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ವಚನದಿಂದ ಉಪಧಾವೃದ್ಧಿ ಬರುವುದಿಲ್ಲ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹು

ವಚನಾಂತರೂಪ. **ಬಹುಲಂ ಛಂದಸ್ಯಮಾ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ.

**ಪರ್ವತಾನ್**—ಪರ್ವ ಪೂರಣೇ. ಧಾತು. **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ನರ್ಯಾಃ**—ನರೇಭ್ಯೋ ಹಿತಾಃ ನರ್ಯಾಃ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರ ಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಚುಚ್ಯವುಃ**—ಚ್ಯುಙ್ ಗತೌ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಿಯಾಗುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಝಿ ಪರವಾದಾಗ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಸಿಜಭ್ಯಸ್ತ ವಿದಿಭ್ಯಶ್ಚ** (ಪಾ. ಸೂ.೩-೪-೧೦೯) ಎಂಬುದರಿಂದ ಝಿಗೆ ಜುಸಾದೇಶ. **ಜುಸಿ ಚ** (ಪಾ. ಸೂ. ೭-೩-೮೩) ಎಂಬುದರಿಂದ ಗುಣ. ಅವಾದೇಶ. **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಜ್ಮನ್**—ಅಜ ಗತಿಕ್ಷೇಪಣಯೋಃ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** ಎಂಬುದರಿಂದ ಮನಿನ್ ಪ್ರತ್ಯಯ. **ವಲಾದಾವಾರ್ಧಧಾತುಕೇ ನೇಷ್ಯತೇ** ಎಂಬುದರಿಂದ ವೀಭಾವ ಬರುವುದಿಲ್ಲ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

**ಭಯತೇ**—ಞಿಭೀ ಭಯೇ. ಧಾತು. ಪ್ರಥಮಪುರುಷ ಏಕವಚನದಲ್ಲಿ ವ್ಯತ್ಯಯದಿಂದ ಶಪಿಗೆ ಶ್ಲು ಬರುವುದಿಲ್ಲ. ಧಾತುವಿಗೆ ಗುಣ, ಅಯಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ವನಸ್ಪತಿಃ-ಪಾರಸ್ಕರ ಪ್ರಭೃತೀನಿ ಸಂಜ್ಞಾಯಾಂ** ಎಂಬುದರಿಂದ ಸುಟಾಗಮ. **ಉಭೇವನಸ್ಪತ್ಯಾದಿಷು** (ಪಾ. ಸೂ. ೬-೨-೧೪೦) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

**ರಥೀಯಂತೀ**—ರಥಮಾತ್ಮನ ಇಚ್ಛತಿ ರಥೀಯತಿ. ಇಚ್ಛಾರ್ಥದಲ್ಲಿ ಕ್ಯಚ್. ವ್ಯತ್ಯಯದಿಂದ ಪೂರ್ವಕ್ಕೆ ಈತ್ವ. ಕ್ಯಜಂತದ ಮೇಲೆ ಶತೃ ಬಂದಾಗ ಸ್ತ್ರೀತ್ವದಲ್ಲಿ ಙೀಪ್. ಕ್ಯಚ್ ಸ್ವರ ಉಳಿಯುತ್ತದೆ.

**ಜಿಹೀತೇ**—ಓಹಾಙ್ ಗತೌ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. || ೫ ||



॥ ಸಂಹಿತಾಪಾಠಃ ॥

ಯೂಯಂ ನ ಉಗ್ರಾ ಮರುತಃ ಸುಚೇತುನಾರಿಷ್ಟಗ್ರಾಮಾಃ ಸುಮತಿಂ ಪಿಪರ್ತನ ।
ಯತ್ರಾ ವೋ ದಿದ್ಯುದ್ರದತಿ ಕ್ರಿವಿರ್ದತೀ ರಿಣಾತಿ ಪಶ್ವಃ ಸುಧಿತೇವ ಬರ್ಹಣಾ ॥ ೬ ॥

॥ ಪದಪಾಠಃ ॥

ಯೂಯಂ । ನಃ । ಉಗ್ರಾಃ । ಮರುತಃ । ಸುऽಚೇತುನಾ । ಅರಿಷ್ಟऽಗ್ರಾಮಾಃ । ಸುऽಮತಿಂ । ಪಿಪರ್ತನ ।
ಯತ್ರ । ವಃ । ದಿದ್ಯುತ್ । ರದತಿ । ಕ್ರಿವಿಃऽದತೀ । ರಿಣಾತಿ । ಪಶ್ವಃ । ಸುಧಿತಾऽಇವ । ಬರ್ಹಣಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ಉಗ್ರಾ ಉದ್ಗೂರ್ಣಬಲಾ ಮರುತಃ ಯೂಯಂ ಸುಚೇತುನಾ ಶೋಭನಚೇತಸಾರಿಷ್ಟಗ್ರಾಮಾ ಅಹಿಂಸಿತಸಂಘಾಃ ಸಂತೋ ನೋऽಸ್ಮಾಕಂ ಸುಮತಿಂ ಶೋಭನಬುದ್ಧಿಂ ಪಿಪರ್ತನ । ಪೂರಯತ । ಕಸ್ಮಿನ್ಕಾಲ ಇತಿ ತದುಚ್ಯತೇ । ಯತ್ರ ಯಸ್ಮಿನ್ಕಾಲೇ ವೋ ಯುಷ್ಮತ್ಸಂಬಂಧಿನೀ ಕ್ರಿವಿರ್ದತೀ ವಿಕ್ಷೇಪಣಶೀಲದಂತೀ ದಿದ್ಯುದ್ಧೇತೀ ರದತಿ ಲಿಖತಿ ಮೇಘಸಂಸ್ತ್ಯಾಯಂ ಪಶ್ವಃ ಪಶೂಂಶ್ಚ ರಿಣಾತಿ ರೇಷತಿ ಹಿನಸ್ತಿ । ವಾಯೌ ವಾತಿ ಸತಿ ಪಶವಃ ಶೀರ್ಯಂತ ಇತಿ ಪ್ರಸಿದ್ಧಂ । ಹಿಂಸಾಯಾಂ ದೃಷ್ಟಾಂತಃ । ಸುಧಿತಾ ಸುಹಿತಾ ಸುಷ್ಠು ಪ್ರೇರಿತಾ ಬರ್ಹಣಾ ಹತಿಸ್ತತ್ಸಾಧನಾ ಹೇತಿರ್ವಾ ಯಥಾ ರಿಣಾತಿ ತದ್ವತ್ ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಕಾಲದಲ್ಲಿ । **ವಃ**—ನಿಮ್ಮದಾದ । **ಕ್ರಿವಿರ್ದತೀ**—ಸೀಳುವ ಸ್ವಭಾವದ ಹಲ್ಲುಗಳುಳ್ಳ । **ದಿದ್ಯುತ್**—ಆಯುಧವು (ವಿದ್ಯುತ್ತು) । **ರದತಿ**—ಮೇಘಮಾಲೆಯನ್ನು ಸೀಳುತ್ತದೆಯೋ । (ಮತ್ತು) । **ಸುಧಿತಾ**—ಚೆನ್ನಾಗಿ ಪ್ರೇರಿಸಲ್ಪಟ್ಟ । **ಬರ್ಹಣಾ ಇವ**—ಹತಿಸಾಧನವಾದ ಆಯುಧವು ಹಿಂಸಿಸುವಂತೆ । **ಪಶ್ವಃ**—ಪಶುಗಳನ್ನೂ । **ರಿಣಾತಿ**—ಹಿಂಸಿಸುತ್ತದೆಯೋ । (**ತತ್ರ**—ಆ ಕಾಲದಲ್ಲಿ) । **ಉಗ್ರಾಃ**—ಉಗ್ರರಾದ । (**ಹೇ**) **ಮರುತಃ**—ಎಲೈ ಮರುದ್ದೇವತೆಗಳೇ । **ಯೂಯಂ**—ನೀವು । **ಸುಚೇತುನಾ**—ಒಳ್ಳೆಯ ಮನಸ್ಸಿನಿಂದ । **ಅರಿಷ್ಟಗ್ರಾಮಾಃ**—ಅಹಿಂಸಿತವಾದ ಜನಸಂಘಗಳುಳ್ಳವರಾಗಿ । **ನಃ**—ನಮಗೆ । **ಸುಮತಿಂ**—ಸದ್ಬುದ್ಧಿಯನ್ನು । **ಪಿಪರ್ತನ**—ಪೂರ್ಣಮಾಡಿ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮ ಆಯುಧವಾದ ವಿದ್ಯುತ್ತು ವಿಕ್ಷೇಪಣಶೀಲವಾದುದು; ಅದು ಮೇಘವಾಲೆಯನ್ನೂ, ಪಶುಗಳನ್ನೂ, ಸರಿಯಾಗಿ ಎಸೆಯಲ್ಪಟ್ಟ ಆಯುಧದಂತೆ, ಸೀಳುತ್ತದೆ. ಈ ರೀತಿ ಉಗ್ರರಾದ ನೀವು ನಮ್ಮ ವಿಷಯದಲ್ಲಿ ದಯಶಾಲಿಗಳಾಗಿ, ನಮ್ಮನ್ನು ಹಿಂಸಿಸದೆ, ಸದ್ಬುದ್ಧಿಯುಳ್ಳವರಾಗಿ.

## English Translation.

Fierce Maruts, free from malevolence in your kindly thoughts, fulfil towards us your good purposes; when your missile lightning rends (the cloud), as a well-hurled weapon wounds the deer.

॥ ವಿಶೇಷವಿಷಯಗಳು ॥

**ಸುಚೇತುನಾ—ಶೋಭನಚೇತಸಾ ।** ಉತ್ತಮವಾದ ಎಂದರೆ ಅನುಗ್ರಹಾತ್ಮಕವಾದ ಬುದ್ಧಿಯಿಂದ. ಈ ಶಬ್ದವು ಋಗ್ವೇದದಲ್ಲಿ ಯಾವಾಗಲೂ ತೃತೀಯಾವಿಭಕ್ತ್ಯಂತವಾಗಿಯೇ ಉಪಯೋಗಿಸಲ್ಪಡುವುದು ಮತ್ತು ದೇವತೆಗಳು ಮನುಷ್ಯರ ವಿಷಯದಲ್ಲಿ ತೋರುವ ಅನುಗ್ರಹವನ್ನು ಸೂಚಿಸುವುದಾಗಿರುವುದು. ಇದಕ್ಕೆ ವಿರುದ್ಧವಾಗಿ **ಸುಮತಿ** ಶಬ್ದವು ದೇವತೆಗಳನ್ನು ಪ್ರಾರ್ಥಿಸುವ **ಮನುಷ್ಯರ** ಉತ್ತಮ ಬುದ್ಧಿಯನ್ನು ಸೂಚಿಸುವುದು. **ಸುಚೇತುನಾ** ಎಂಬ ಶಬ್ದವು—

**ಸ ನೋ ನೇದಿಷ್ಠಂ ದದೃಶಾನ ಆ ಭರಾಗ್ನೇ ದೇವೇಭಿಃ ಸಚನಾಃ ಸುಚೇತುನಾ ಮಹೋ ರಾಯಃ ಸುಚೇತುನಾ ।**

(ಋ ಸಂ. ೧-೧೨೭-೧೧)

ಎಂಬ ಋಕ್ಕಿನಲ್ಲಿ—ಎಲೈ ಅಗ್ನಿಯೇ. ನೀನೂ ದೇವತೆಗಳೂ ಸಹ ನಮ್ಮಲ್ಲಿ ನಿನಗೆ ಇರುವ ಅನುಗ್ರಹ ಬುದ್ಧಿಯಿಂದ ಬಹಳವಾದ ಧನವನ್ನು ತಂದು ಕೊಡು—ಎಂದು ಸುಚೇತುನಾ ಎಂಬ ಶಬ್ದವು ಅಗ್ನಿ ಪರವಾಗಿ ಪ್ರಯುಕ್ತವಾಗಿದೆ.

**ಅಸ್ಮಭ್ಯಂ ದ್ಯಾವಾಪೃಥಿವೀ ಸುಚೇತುನಾ ರಯಿಂ ಧತ್ತಂ ವಸುಮಂತಂ ಶತಗ್ವಿನಂ ।**

(ಋ. ಸಂ ೧-೧೫೯-೫)

ಎಂಬಲ್ಲಿ—ಎಲೈ ದ್ಯಾವಾಪೃಥಿವಿಗಳೇ ನೀವು ನಮ್ಮಲ್ಲಿ ಅನುಗ್ರಹ ಬುದ್ಧಿಯಿಂದ ನೂರುಗಟ್ಟಲೆ ರತ್ನಾದಿ ಧನಗಳನ್ನೂ ಪಶುಗಳನ್ನೂ ಕೊಡಿ ಎಂದು ದ್ಯಾವಾಪೃಥಿವಿಗಳ ಪರವಾಗಿ ಉಪಯೋಗಿಸಲ್ಪಟ್ಟಿದೆ.

**ಸ್ವಸ್ತಿ ಪೂಷಾ ಅಸುರೋ ದಧಾತು ನಃ ಸ್ವಸ್ತಿ ದ್ಯಾವಾಪೃಥಿವೀ ಸುಚೇತುನಾ ।**

(ಋ. ಸಂ. ೫-೫೧-೧೧)

ಇಲ್ಲಿಯೂ ದ್ಯಾವಾಪೃಥಿವಿಗಳ ಪರವಾಗಿಯೇ ಉಪಯುಕ್ತವಾಗಿದೆ.

**ತಾ ಬಾಹವಾ ಸುಚೇತುನಾ ಪ್ರ ಯಂತಮಸ್ಮಾ ಅರ್ಚತೇ ।**

(ಋ. ಸಂ. ೫-೬೪-೨)

ಎಂಬ ಋಕ್ಕಿನಲ್ಲಿ—ಎಲೈ ಮಿತ್ರಾವರುಣರೇ, ನಿಮ್ಮ ಅನುಗ್ರಹಾತ್ಮಕವಾದ ಬಾಹುಗಳನ್ನು (ಕೈಗಳನ್ನು) ನಿಮ್ಮನ್ನು ಆರಾಧಿಸುತ್ತಿರುವವರಿಗೆ (ನಮಗೆ) ನೀಡಿರಿ ಎಂದು ಮಿತ್ರಾವರುಣರ ಪರವಾಗಿ ಉಪಯೋಗಿಸಲ್ಪಟ್ಟಿದೆ.

**ಆ ರಯಿಮಾ ಸುಚೇತುನಮಾ ಸುಕ್ರತೋ ತನೂಷ್ವಾ । ಪಾಂತಮಾ ಪುರುಸ್ಪೃಹಂ ॥**

(ಋ. ಸಂ. ೯-೬೫-೩೦)

ಎಂಬ ಋಕ್ಕಿನಲ್ಲಿ ಮಾತ್ರ ಸುಚೇತುನಾ ಎಂದು ತೃತೀಯಾವಿಭಕ್ತಿಗೆ ಬದಲಾಗಿ ಸುಚೇತುನಂ ಎಂದು ದ್ವಿತೀಯಾ ವಿಭಕ್ತಿಯ ಪ್ರಯೋಗವಿರುವುದು. ಆದರೆ ಇದಕ್ಕೆ ತೃತೀಯಾವಿಭಕ್ತಿಯ ಅರ್ಥವನ್ನೇ ಹೇಳಬೇಕಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಸುಚೇತುನಾ**—ಶೋಭನಂ ಚೇತುಃ ತೇನ. ಚಿತೀ ಸಂಜ್ಞಾನೇ ಧಾತು. ಔಣಾದಿಕ ಉ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಅರಿಷ್ಟಗ್ರಾಮಾಃ**—ರಿಷ್ಟ ಹಿಂಸಾಯಾಂ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ನ ರಿಷ್ಟಃ ಅರಿಷ್ಟಃ ಅರಿಷ್ಟಃ ಗ್ರಾಮಃ ಯೈಸ್ತೇ ಅರಿಷ್ಟಗ್ರಾಮಾಃ. ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುಮತಿಂ**—ಮನ ಜ್ಞಾನೇ ಧಾತು. ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪಿಪರ್ತನ**—ಪೃ ಪೂರಣೇ. ಧಾತು. ಜುಹೋತ್ಯಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ ತಾದೇಶ. ಅದಕ್ಕೆ **ತಪ್ತನಪ್ತನಥನಾಶ್ಚ** (ಪಾ. ಸೂ. ೩-೧-೪೫) ಎಂಬುದರಿಂದ ತನಬಾದೇಶ. ಪಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯತ್ರ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ರದತಿ**—ರದ ವಿಲೇಖನೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ತಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ರಿಣಾತಿ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ವಿಕರಣಸ್ವರ ಉಳಿಯುತ್ತದೆ.

**ಪಶ್ವಃ**—ಪಶು ಶಬ್ದಕ್ಕೆ ಶಸ್ ಪರವಾದಾಗ **ಜಸಾದಿಷು ಛಂದಸಿ ವಾವಚನಂ** ಎಂಬ ವಚನದಿಂದ ಪೂರ್ವ ಸವರ್ಣದೀರ್ಘ ಬಾರದಿರುವುದರಿಂದ ಯಣಾದೇಶ.

**ಸುಧಿತಾ** – ಡುಧಾಞ್ ಧಾರಣಪೋಷಣಯೋಃ ಧಾತು ಇದಕ್ಕೆ ನಿಷ್ಠಾ ಪರವಾದಾಗ **ದಧಾತೇರ್ಹಿಃ** ಎಂಬುದರಿಂದ ಧಾತುವಿಗೆ ಹಿ ಆದೇಶ ಸ್ತ್ರೀತ್ವದಲ್ಲಿ ಟಾಪ್. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಪ್ರ ಸ್ಕಂಭದೇಷ್ಣಾ ಅನವಭ್ರರಾಧಸೋಽಲಾತೃಣಾಸೋ ವಿದಥೇಷು ಸುಷ್ಟುತಾಃ ।
ಅರ್ಚಂತ್ಯರ್ಕಂ ಮದಿರಸ್ಯ ಪೀತಯೇ ವಿದುರ್ವೀರಸ್ಯ ಪ್ರಥಮಾನಿ ಪೌಂಸ್ಯಾ ॥ ೭ ॥

॥ ಪದಪಾಠಃ ॥

ಪ್ರ । ಸ್ಕಂಭಽದೇಷ್ಣಾಃ । ಅನವಭ್ರಽರಾಧಸಃ । ಅಲಾತೃಣಾಸಃ । ವಿದಥೇಷು । ಸುಽಸ್ತುತಾಃ । ಅರ್ಚಂತಿ । ಅರ್ಕಂ । ಮದಿರಸ್ಯ । ಪೀತಯೇ । ವಿದುಃ । ವೀರಸ್ಯ । ಪ್ರಥಮಾನಿ । ಪೌಂಸ್ಯಾ ॥ ೭ ॥

॥ ಸಾಯಣಭಾಷ್ಯಂ ॥

ಪ್ರ ಸ್ಕಂಭದೇಷ್ಣಾಃ ಪ್ರಕರ್ಷೇಣ ಸ್ತಂಭಿತದಾನಾಃ । ಅವಿರತದಾನಾ ಇತ್ಯರ್ಥಃ । ಅನವಭ್ರರಾಧಸೋಽಭ್ರಷ್ಟಹವಿರಾದಿಧನಾಃ । ರಾಧ ಇತಿ ಧನನಾಮ । ಅಲಾತೃಣಾಸಃ ॥ ನಕಾರಸ್ಯ ಸ್ಥಾನೇ ಲಕಾರಃ ॥ ಅನಾತೃಣಾಸ ಆತರ್ದನರಹಿತಾಃ । ಅಥವಾ । ಅಲಂ ಪರ್ಯಾಪ್ತಮಾತರ್ದನಾಃ ಶತ್ರೂಣಾಂ । ಯದ್ವಾ । ಅಲಮತ್ಯರ್ಥಂ ದಾತಾರಃ ಫಲಾನಾಂ । ಏವಂರೂಪಾ ಮರುತೋ ವಿದಥೇಷು ಯಾಗೇಷ್ವರ್ಕಮರ್ಚನೀಯಮಿಂದ್ರಂ ಸ್ವಸಖೀಭೂತಮರ್ಚಂತಿ । ಪೂಜಯಂತಿ । ಸ್ತುತ್ಯಾದಿನಾ ಸಂಭಾವಯಂತೀತ್ಯರ್ಥಃ । ಕಿಮರ್ಥಂ ಮದಿರಸ್ಯ ಮಾದನಸಾಧನಸ್ಯ ಸೋಮಸ್ಯ ಪೀತಯೇ ಪಾನಾಯ । ತಸ್ಯೇಂದ್ರಸ್ಯ ಮಹತ್ತ್ವಂ ಕಥಂ ಜಾನಂತೀತ್ಯತ ಆಹ । ತೇ ಮರುತೋ ವೀರಸ್ಯ ವಿವಿಧಂ ಶತ್ರೂಣಾಮೀರಕಸ್ಯೇಂದ್ರಸ್ಯ ಪ್ರಥಮಾನಿ ಪ್ರತಮಾನಿ ಮುಖ್ಯಾನಿ ಪೌಂಸ್ಯಾ ಪುಂಸ್ತ್ವಾನಿ ವೃತ್ರವಧಾದಿರೂಪಾಣಿ ವಿದುಃ । ಜಾನಂತಿ ॥

॥ ಪ್ರತಿಪದಾರ್ಥ ॥

**(ಮರುತಃ**—ಮರುದ್ದೇವತೆಗಳು) । **ವೀರಸ್ಯ**—ವೀರನಾದ ಇಂದ್ರನ । **ಪ್ರಥಮಾನಿ**—ಮುಖ್ಯವಾದ (ಮೊದಲಿನ) । **ಪೌಂಸ್ಯಾ**—ವೃತ್ರವಧಾದಿ ಸಾಹಸಗಳನ್ನು । **ವಿದುಃ**—ತಿಳಿದಿದಾರೆ । (ಅಂತಹ) **ಪ್ರ ಸ್ಕಂಭ-ದೇಷ್ಣಾಃ**— ಪ್ರಕೃಷ್ಟಾಶ್ರಯವುಳ್ಳ (ಅವಿರತವಾದ) ದಾನವುಳ್ಳವರೂ । **ಅನವಭ್ರರಾಧಸಃ**— ಅಭ್ರಷ್ಟವಾದ ಹವಿರಾದಿ ಧನವಿಶಿಷ್ಟರೂ । **ಅಲಾತೃಣಾಸಃ**—ಹಿಂಸಾಬುದ್ಧಿಯಿಲ್ಲದವರೂ ಅಥವಾ ಶತ್ರುಗಳ ವಿಷಯದಲ್ಲಿ ಹಿಂಸಾ ಬುದ್ಧಿಯುಳ್ಳವರೂ ಅಥವಾ ಹೆಚ್ಚಾದ ಫಲದಾತೃಗಳೂ । **ವಿದಥೇಷು**—ಯಾಗಗಳಲ್ಲಿ । **ಸುಷ್ಟುತಾಃ**—ಚೆನ್ನಾಗಿ ಸ್ತುತರೂ (ಆದ ಮರುದ್ದೇವತೆಗಳು) । **ಮದಿರಸ್ಯ**—ಮದಸಾಧನವಾದ ಸೋಮರಸದ । **ಪೀತಯೇ**—ಪಾನ ಕ್ಕೋಸ್ಕರ । **ಅರ್ಕಂ**—ಪೂಜನೀಯನಾದ ಇಂದ್ರನನ್ನು । **ಅರ್ಚಂತಿ**—ಸ್ತುತ್ಯಾದಿಗಳಿಂದ ಪೂಜಿಸುತ್ತಾರೆ.

॥ ಭಾವಾರ್ಥ ॥

ಅವಿರತದಾನಿಗಳೂ, ಅಪಾರವಾದ ಹವಿರಾದಿ ಧನವಿಶಿಷ್ಟರೂ, ಹೆಚ್ಚಾದ ಫಲದಾತೃಗಳೂ, ಯಾಗಗಳಲ್ಲಿ ವಿಶೇಷವಾಗಿ ಸ್ತುತರೂ ಆದ ಈ ಮರುದ್ದೇವತೆಗಳು, ವೀರನಾದ ಇಂದ್ರನ ಮುಖ್ಯವಾದ ವೃತ್ರವಧಾದಿ ಸಾಹಸ ಗಳನ್ನು ತಿಳಿದವರಾಗಿ, ಪೂಜ್ಯನಾದ ಇಂದ್ರನನ್ನು ಮದಸಾಧನವಾದ ಸೋಮರಸವನ್ನು ಪಾನಮಾಡುವುದಕ್ಕೋಸ್ಕರ, ಸ್ತುತ್ಯಾದಿಗಳಿಂದ ಅರ್ಚಿಸಿ ಕರೆಯುತ್ತಾರೆ.

## English Translation

Givers without stint, possessors of inexhaustible riches, devoid of malevolence, ever glorified at sacrifices, they worship the adorable (indra), for (the sake of) drinking the (Soma) wine; for they know the first manly exploits of the hero.

॥ ವಿಶೇಷವಿಷಯಗಳು ॥

**ಪ್ರ ಸ್ಕಂಭದೇಷ್ಣಾಃ—ಪ್ರಕರ್ಷೇಣ ಸ್ತಂಭಿತದಾನಾಃ । ಅವಿರತದಾನಾ ಇತ್ಯರ್ಥಃ ।** ಮರುದ್ದೇವತೆ ಗಳು ಕೊಡುವ ಇಷ್ಟಾರ್ಥಗಳು ದೃಢವಾದವು ಎಂದರೆ ಅಲ್ಪಕಾಲವಿದ್ದು ನಾಶವಾಗತಕ್ಕದಲ್ಲ, ಶಾಶ್ವತವಾಗಿ ಇರತಕ್ಕವು ಎಂದಭಿಪ್ರಾಯವು

**ಅನವಭ್ರರಾಧಸಃ—ಅಭ್ರಷ್ಟಹವಿರಾದಿಧನಾಃ ।** ರಾಧಃಶಬ್ದವು ಮಘಂ, ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ರಾಧಃ ಎಂದರೆ ಧನವೆಂದರ್ಥವು. ಅನವಭ್ರ ಎಂದರೆ ಭ್ರಷ್ಟವಲ್ಲದ ಎಂದರೆ ವ್ಯರ್ಥವಲ್ಲದ ಎಂದರ್ಥವು. ಮರುದ್ದೇವತೆಗಳಿಗೆ ಅರ್ಪಿಸುವ ಹವಿರಾದಿ (ಧನವು)ಯು ವ್ಯರ್ಥ ವಾಗುವುದಿಲ್ಲ. ಅದನ್ನು ಅವರು ಸ್ವೀಕರಿಸಿ ಅದಕ್ಕೆ ತಕ್ಕ ಪ್ರತಿಫಲವನ್ನು ಯಜಮಾನರಿಗೆ ಅನುಗ್ರಹಿಸುವುದರಿಂದ ಮರುದ್ದೇವತೆಗಳಿಗೆ ಅರ್ಪಿಸಿದ ಹವಿಸ್ಸಿನರೂಪದ ಧನವು ವ್ಯರ್ಥವಾಗುವುದಿಲ್ಲವೆಂದು ಮುಖ್ಯಾಭಿಪ್ರಾಯವು.

**ಅಲಾತೃಣಾಸಃ**— ಈ ಶಬ್ದವು ಈ ಋಕ್ಕಿನಲ್ಲಿಯೂ,

**ಅಲಾತೃಣೋ ವಲ ಇಂದ್ರ ವ್ರಜೋ ಗೋಃ ಪುರಾ ಹಂತೋರ್ಭಯಮಾನೋ ವ್ಯಾರ ।**
**ಸುಗಾನ್ಪಥೋ ಅಕೃಣೋನ್ನಿರಜೇ ಗಾಃ ಪ್ರಾವನ್ವಾಣೀಃ ಪುರುಹೂತಂ ಧಮಂತೀಃ ॥**
(ಋ. ಸಂ. ೩-೩೦-೧೦)

ಎಂಬ ಋಕ್ಕಿನಲ್ಲಿಯೂ ಉಪಯೋಗಿಸಲ್ಪಟ್ಟಿರುವುದು. ಇನ್ನೆಲ್ಲಿಯೂ ಇರುವುದಿಲ್ಲ. ಈ ಶಬ್ದಕ್ಕೆ ಸಾಯಣರು— **ಅನಾತೃಣಾಸ ಆತರ್ದನರಹಿತಾಃ ಅಥವಾ ಅಲಂ ಪರ್ಯಾಪ್ತಮಾತರ್ದನಾಃ ಶತ್ರೂಣಾಂ ಯದ್ವಾ ಅಲಮತ್ಯರ್ಥಂ ದಾತಾರಃ ಫಲಾನಾಂ।** ಎಂದು ಪ್ರಕೃತಋಕ್ಕಿನ ವಿವರಣೆಯಲ್ಲಿಯೂ **ಅಲಾತೃಣೋ ವಲ ಇಂದ್ರ ವ್ರಜಃ** ಎಂಬ ಉದಾಹರಣೆಗಾಗಿ ಕೊಟ್ಟಿರುವ ಋಕ್ಕಿಗೆ ವಿವರಣೆಯನ್ನು ಮಾಡುವಾಗ **ಬಹೂದಕತಯಾಲ-ಮತ್ಯರ್ಥಮಾತೃದ್ಯತೇ ಹಿಂಸ್ಯತ ಇತ್ಯಲಾತೃಣಃ** ಎಂದೂ ಹೇಳಿರುವರು. ನಿರುಕ್ತಕಾರರೂ ಈ ಋಕ್ಕಿಗೆ ನಿರ್ವಚನ ಮಾಡುವಾಗ **ಅಲಾತೃಣೋಽಲಮಾತರ್ದನೋ ಮೇಘಃ** ಎಂದು ಹೇಳಿರುವರು. (ನಿ. ೬–೨) ಎಂದರೆ, ಮೇಘದಲ್ಲಿರುವ ಉದಕಕ್ಕಾಗಿ ಅದನ್ನು ಹಿಂಸೆಪಡಿಸುವ, ಮಳೆಯನ್ನು ಹುಯ್ಯುವಂತೆ ಬಲಪ್ರಯೋಗಮಾಡುವ ಮರುತ್ತುಗಳೆಂದರ್ಥವು. ಮೇಘಗಳಲ್ಲಿ ನೀರಿದ್ದ ಮಾತ್ರಕ್ಕೆ ಅವು ಮಳೆಯನ್ನು ಹುಯ್ಯುವವು ಎಂದು ಹೇಳಲು ಸಾಧ್ಯವಿಲ್ಲ. ಮರುತ್ತುಗಳ ಎಂದರೆ ವೇಗವಾಗಿ ಬೀಸುವ ಗಾಳಿಯ ಹೊಡೆತದಿಂದ ಪ್ರೇರಿಸಲ್ಪಟ್ಟು ಮಳೆಯನ್ನು ಹುಯ್ಯುವವು ಈ ರೀತಿ ಮೇಘಗಳನ್ನು ಹಿಂಸೆಪಡಿಸುವ ಎಂದು ಮುಖ್ಯಾಭಿಪ್ರಾಯವು; ಅಥವಾ ಶತ್ರುಗಳನ್ನು ಹಿಂಸಿಸುವ ಅಥವಾ ತಮ್ಮನ್ನು ಸ್ತೋತ್ರಮಾಡುವವರಿಗೆ ವಿಶೇಷವಾಗಿ ಫಲಗಳನ್ನು ಕೊಡುವ ಎಂದಾದರೂ ಅರ್ಥವಾಗಬಹುದೆಂದು ಸಾಯಣರ ವಿವರಣೆಯು.

Max Muller ಪಂಡಿತನು ಈ ಶಬ್ದದ ಅರ್ಥವಿಚಾರವಾಗಿ ಕೆಲವು ಪಾಶ್ಚಾತ್ಯ ಪಂಡಿತರ ಅಭಿಪ್ರಾಯಗಳನ್ನು ಸೂಚಿಸಿ ವಿಮರ್ಶೆಮಾಡಿರುವನು. ನಿರುಕ್ತಕಾರರು ಹೇಳಿರುವ ಅಲಮತರ್ದನೋ ಮೇಘಃ—ಸುಲಭವಾಗಿ ನೀರನ್ನುಸುರಿಸುವ ಮೇಘವು (The cloud which opens easily) ಎಂಬಭಿಪ್ರಾಯವನ್ನು ವ್ಯಕ್ತಪಡಿಸಿರುವನು. ಅತರ್ದನ ಶಬ್ದವು ತೃದ್ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದೆಂದು ಇವನ ಮತವು. ಸಾಯಣರು ಇದಕ್ಕೆ ವಿರುದ್ಧವಾಗಿ ಕೊಲ್ಲು, ಹಿಂಸಿಸು ಎಂಬರ್ಥವಿರುವ ತೃಃ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿರುವುದೆಂದು ಹೇಳಿ ಅದರಂತೆ ಅರ್ಥವಿವರಣೆಮಾಡಿರುದರು. Professor Roth ಎಂಬ ಪಂಡಿತನು ಈ ತರ್ದನ ಶಬ್ದವು ತೃಣ ಎಂಬ ಉಪಸರ್ಗದಿಂದ ಸಹಿತವಾದ **ರಾ ದಾನೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದೆಂದೂ ಅತರ್ದನ ಶಬ್ದವು ನಿಷೇಧಾರ್ಥವನ್ನು ಸೂಚಿಸುವುದರಿಂದ ಅತರ್ದನವೆಂದರೆ ಏನನ್ನೂ ಕೊಡದಿರುವ (one who does not give or yield anything) ಎಂದರ್ಥವಿರಬೇಕೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುವನು. ಈ ಅರ್ಥವನ್ನು ಸ್ವೀಕರಿ ಸುವುದಾದರೆ ಇದೇ ಋಕ್ಕಿನಲ್ಲಿರುವ ಸ್ಕಂಭದೇಷ್ಣಾಃ ಮೊದಲಾದ ಶಬ್ದಗಳಲ್ಲಿ ಹೇಳಿರುವ ಮರುದ್ದೇವತೆಗಳ ಉದಾರತ್ವವು ವ್ಯರ್ಥವಾಗುವುದಿಲ್ಲವೇ? Wilson ಪಂಡಿತನು—Devoid of melevolence ಕೆಡಕನ್ನು ಮಾಡದಿರುವದೆಂದು ಈ ಶಬ್ದಕ್ಕೆ ಮಾಡಿರುವ ಭಾಷಾಂತರವೂ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಆದುದರಿಂದ ಪ್ರಕೃತವಾದ ಈ ಋಕ್ಕಿನಲ್ಲಿ ಮರುದ್ದೇವತೆಗಳಿಗೆ ವಿಶೇಷಣವಾಗಿಯೂ ಋ. ಸಂ. ೩-೩೦–೧೦ ರಲ್ಲಿ ವಲ ಎಂಬ ಅಸುರನಿಗೆ ವಿಶೇಷಣವಾಗಿಯೂ ಇದ್ದು ಸರಿಯಾದ ಅರ್ಥವು ಹೊಂದಿಕೊಳ್ಳುವಂತೆ ವಿವರಿಸಬೇಕಾದರೆ, ಅಲಾತೃಣವೆಂಬ ಶಬ್ದವು ಲಾತೃನ್ ಎಂಬ ಶಬ್ದದಿಂದ ನಿಷ್ಪನ್ನವಾಗಿರುವುದೆಂದು ಹೇಳಬೇಕು. ಈ ಲಾತೃನ್ ಅಥವಾ ಲಾತ್ರವೆಂಬ ಶಬ್ದವು

ರಾತ್ರ ಎಂಬ ಶಬ್ದದ ಅವಾಂತರರೂಪವು. ರ ಲ ಕಾರಗಳಿಗೆ ಭೇದವಿಲ್ಲದಿರುವುದರಿಂದ ಲಾತ್ರ ಎನ್ನುವುದಕ್ಕೆ ಬದಲಾಗಿ ರಾತ್ರವೆಂದು ಹೇಳಬಹುದು. ಈ ರಾತ್ರಶಬ್ದವು ರೈ ಅಥವಾ ರಾ ಶಬ್ದೇ (to bark) ಎಂಬ ಧಾತುವಿನಿಂದ ನಿಷ್ಪನ್ನ ವಾಗಿರುವುದೆಂದು ಹೇಳುವಾಗ ಅಲಾತೃಣ(ಅರಾತೃಣ) ಶಬ್ದಕ್ಕೆ ಮರುತ್ತುಗಳ ವಿಷಯದಲ್ಲಿ—ಬೈಯ್ಯದಿರುವ, ಕೆಟ್ಟದ್ದನ್ನು ಹಾರೈಸದಿರುವ ಎಂಬರ್ಥವನ್ನೂ ಚಲನ ವಿಷಯದಲ್ಲಿ ಶಬ್ದಮಾಡದೆ (without braking) ಎಂಬರ್ಥವನ್ನೂ ಹೇಳಲು ಸಾಧ್ಯವಾಗುವುದು, ಎಂದು ಶಬ್ದದ ಅರ್ಥವನ್ನು ವಿಮರ್ಶೆಮಾಡಿರುವನು.

**ವಿದಥೇಷು**— ಯಜ್ಞಾದಿಗಳಲ್ಲಿ. ಈ ಶಬ್ದದ ಅರ್ಥವಿಷಯದಲ್ಲಿ ನಾವು ಕೊಟ್ಟಿರುವ ವಿಸ್ತಾರವಾದ ವಿವರಣೆ ಯನ್ನು 9–13 ನೇ ಪೇಜುಗಳಲ್ಲಿ ನೋಡಿ.

**ಅರ್ಕಂ — ಅರ್ಚನೀಯಮಿಂದ್ರಂ ।** ಪೂಜಿಸಲು ಅರ್ಹನಾದ ಇಂದ್ರನನ್ನು ಎಂದರ್ಥವು. ಅರ್ಕಶಬ್ದಕ್ಕೆ ಅನ್ನವೆಂದೂ (ನಿ. ೩–೯) ವಜ್ರಾಯುಧವೆಂದೂ (ನಿ. ೩–೧೧) ದೇವ, ಮಂತ್ರ (ನಿ ೫–೪) ಎಂದೂ ನಾನಾರ್ಥ ಗಳಿರುವುವು. ಅರ್ಕಶಬ್ದಕ್ಕೆ ಯಾಸ್ಕರು—

**ಅರ್ಕಃ । ಅರ್ಕೋ ದೇವೋ ಭವತಿ ಯದೇನಮರ್ಚತಿ ।**
**ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ ।**
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ ।**
**ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ॥**

(ನಿ. ೫–೪)

ಎಂದು ನಾಲ್ಕು ವಿಧವಾದ ಅರ್ಥವನ್ನು ಹೇಳಿರುವರು. ಇದರ ಅರ್ಥವಿವರಣೆಯನ್ನು ಈ ರೀತಿ ಮಾಡಬಹುದು—

**ದೇವಃ— ತಾವತ್ಸರ್ವ ಏವಾರ್ಕ ಇತ್ಯುಚ್ಯತೇ ಯದ್ಯಸ್ಮಾದೇನಂ ದೇವಂ ಅರ್ಚಂತಿ ಸ್ತೋತಾರಃ**—ಅರ್ಕ ಎಂದರೆ ದೇವತೆಯು. ಏಕೆಂದರೆ, ಇದರಿಂದ ಭಕ್ತರು ಯಾರನ್ನು ಪೂಜಿಸುವುದಕ್ಕೆ ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು, ಎಂದರೆ ಭಕ್ತರು ಪೂಜಿಸುವ ವಸ್ತುವಿಗೆ (ದೇವತೆಗೆ) ಅರ್ಕವೆಂದು ಹೆಸರು.

**ಅರ್ಕೋ ಮಂತ್ರೋ ಭವತಿ। ಯದ್ಯಸ್ಮಾದನೇನ ಮಂತ್ರೇಣಾರ್ಚಂತಿ ಸ್ತೋತಾರಸ್ತಸ್ಮಾದರ್ಕಃ**— ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು. ಏಕೆಂದರೆ, ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ ಅಥವಾ ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

**ಅರ್ಕಮನ್ನಂ ಭವತಿ—ತದ್ಧಿ ಅರ್ಚತಿ ಭೂತಾನಿ ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರವಿಶೇಷೇಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ, ಪೂಜ್ಯಂ ಚ ಸರ್ವಸ್ಯೈವಾನ್ನಂ**—ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತಪ್ರಾಣಿಗಳಿಗೂ ಆವಶ್ಯಕವಾಗಿರುವುದರಿಂದ ಅನ್ನವನ್ನು ಎಲ್ಲರೂ ಗೌರವಿಸಿ ಅಪೇಕ್ಷಿಸುವರು. ಎಂದರೆ, ಎಲ್ಲರೂ ಪ್ರೀತ್ಯಾದಾರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕ ಶಬ್ದಕ್ಕೆ ಅನ್ನವೆಂದೂ ಅರ್ಥವಾಗುವುದು.

**ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ। ಸಂವೃತ್ತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ**—ಇನ್ನು ಅರ್ಕಶಬ್ದಕ್ಕೆ ವೃಕ್ಷವಿಶೇಷವೆಂಬ ಹೆಸರು ಪ್ರಸಿದ್ಧವಾಗಿಯೇ ಇದೆ. ಅರ್ಕವೃಕ್ಷವೆಂದರೆ ಎಕ್ಕದಗಿಡವೆಂದು ಕರ್ಣಾಟಕಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು (ಕಡ್ಡಿಗಳನ್ನು) ಹೋಮಗಳಲ್ಲಿ ಉಪಯೋಗಿಸುವುದರಿಂದಲೂ, ಇದನ್ನು ಔಷಧಾದಿಗಳಲ್ಲಿ ಬಳಸುವ ರೂಢಿ ಇರುವುದರಿಂದಲೂ ಅರ್ಕ ವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿಯಾಗಿರುವುದರಿಂದ ಕಟುಕಿಮ್ನಾ ಎಂದು ಹೇಳುವರು. ಪ್ರಸಕ್ತ ಋಕ್ಕಿನಲ್ಲಿ ಅರ್ಕಶಬ್ದಕ್ಕೆ **ಅರ್ಚನೀಯಂ** ಎಂದರೆ ಪೂಜಿಸಲು ಯೋಗ್ಯವಾದ ಎಂಬರ್ಥವನ್ನು ಭಾಷ್ಯಕಾರರು ವಿವರಿಸಿರುವರು.

**ಪ್ರಥಮಾನಿ—ಪ್ರಥಮಾನಿ ಪ್ರತಮಾನಿ ಮುಖ್ಯಾನಿ।** ಪ್ರಥಮವೆಂದರೆ ಮುಖ್ಯವೆಂದರ್ಥವು. ಯಾಸ್ಕರು— ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ (ನಿ. ೨-೨೨) ಎಂದು ನಿರ್ವಚನವನ್ನು ಹೇಳಿರುವರು.

**ಪೌಂಸ್ಯಾ— ಪುಂಸ್ತ್ವಾನಿ ವೃತ್ರವಧಾದಿರೂಪಾಣಿ।** ಪುರುಷರೂ ಮತ್ತು ಶೂರರೂ ಮಾಡಬಹುದಾದ ಸಾಹಸಕರ್ಮಗಳು, ಪರಾಕ್ರಮಕಾರ್ಯಗಳು; ಇಲ್ಲಿ ವೃತ್ರವಧಾದಿರೂಪವಾದ ಸಾಹಸಗಳೆಂದು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸ್ಕಂಭದೇಷ್ಣಾಃ**—ಸ್ಕಭಿ ಗತಿಪ್ರತಿಬಂಧೇ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಸ್ಕಂಭಃ ದೇಷ್ಣಃ ಯೇಷಾಂ ತೇ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅನವಭ್ರರಾಧಸಃ**—ಅನವಭ್ರಂ ರಾಧಃ ಯೇಷಾಂ ತೇ. ಹಿಂದಿನಂತೇ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಲಾತೃಣಾಸಃ**—ನ ವಿದ್ಯತೇ ಆತೃಣಂ ಯೇಷಾಂ ತೇ. ಅಲಾತೃಣಾಸಃ. **ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. **ನಲೋಪೋ ನಞಃ** ಎಂಬುದರಿಂದ ನಞ್‌ನ ನಕಾರಕ್ಕೆ ಲೋಪ ಬಂದಾಗ **ತಸ್ಮಾನ್ನುಡಚಿ** ಎಂಬುದರಿಂದ ಪರದ ಅಜಾದಿಗೆ ನುಡಾಗಮ. ಛಾಂದಸವಾಗಿ ನಕಾರಕ್ಕೆ ಲಕಾರಾದೇಶ. **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಸುಸ್ತುತಾಃ**—ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸು) ಪ್ರಕೃತಿಸ್ವರ ಬರುತ್ತದೆ.

**ಅರ್ಚಂತಿ** ಅರ್ಚ ಪೂಜಾಯಾಂ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕ ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮದಿರಸ್ಯ**—ಮದೀ ಹರ್ಷೇ ಧಾತು. **ಇಷಿ ಮದಿ ಮುದಿ**—(ಉ. ಸೂ. ೧-೫೧) ಎಂಬುದರಿಂದ ಕಿರಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಪೀತಯೇ**—ಪಾ ಪಾನೇ ಧಾತು. **ಸ್ಥಾಗಾ ಪಾಪಚೋಭಾವೇ** (ಪಾ. ಸೂ. ೩-೩-೯೫) ಎಂಬುದರಿಂದ ಕ್ತಿನ್ ಪ್ರತ್ಯಯ. **ಘುಮಾಸ್ಥಾಗಾ**—(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ವ್ಯತ್ಯಯದಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ವಿದುಃ**—ವಿದ ಜ್ಞಾನೇ. ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ **ವಿದೋ ಲಟೋ ವಾ** (ಪಾ. ಸೂ. ೩-೪-೮೩) ಎಂಬುದರಿಂದ ಜುಸಾದೇಶ. ಶಪಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವೀರಸ್ಯ**—ಅಜ ಗತಿಕ್ಷೇಪಣಯೋಃ ಧಾತು. **ಸ್ಫಾಯಿತಂಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. **ಅಜೇರ್ವ್ಯಘ**—(ಪಾ. ಸೂ. ೨-೪-೫೬) ಎಂಬುದರಿಂದ ಧಾತುವಿಗೆ ವೀ ಭಾವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪೌಂಸ್ಯಾ**—ಪುಂಸಃ ಇಮಾನಿ. ಪೌಂಸ್ಯಾನಿ. ಷ್ಯಞ್ ಪ್ರತ್ಯಯ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ॥ ೭ ॥



॥ ಸಂಹಿತಾಪಾಠಃ ॥

ಶತಭುಜಿಭಿಸ್ತಮಭಿಹ್ರುತೇರಘಾತ್ಪೂರ್ಭೀ ರಕ್ಷತಾ ಮರುತೋ ಯಮಾವತ ।
ಜನಂ ಯಮುಗ್ರಾಸ್ತವಸೋ ವಿರಪ್ಶಿನಃ ಪಾಥನಾ ಶಂಸಾತ್ತನಯಸ್ಯ ಪುಷ್ಟಿಷು ॥ ೮ ॥

॥ ಪದಪಾಠಃ ॥

ಶತಭುಜಿಽಭಿಃ । ತಂ । ಅಭಿಽಹ್ರುತೇಃ । ಅಘಾತ್ । ಪೂಃಽಭಿಃ । ರಕ್ಷತ । ಮರುತಃ । ಯಂ । ಆವತ ।
ಜನಂ । ಯಂ । ಉಗ್ರಾಃ । ತವಸಃ । ವಿಽರಪ್ಶಿನಃ । ಪಾಥನ । ಶಂಸಾತ್ । ತನಯಸ್ಯ । ಪುಷ್ಟಿಷು ॥ ೮ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯೂಯಂ ಶತಭುಜಿಭಿಃ । ಶತಮಿತ್ಯಪರಿಮಿತನಾಮ । ಅಸಂಖ್ಯಾತಭೋಗವದ್ಭಿಃ ಪೂರ್ಭಿಃ ಪಾಲನೈರ್ಜೇತವ್ಯೈಃ ಶತ್ರೂಣಾಂ ನಗರೈರ್ವಾ ತಂ ರಕ್ಷಥ । ಪಾಲಯತ । ತಮಿತ್ಯುಕ್ತಂ ।

**ಕೆನಿಮಿತ್ತಾಹ । ಯಂ ಜನಮಭಿಹ್ರುತೇರಭಿಭವಕಾರಣಾತ್ಕುಟಿಲಸ್ವಭಾವಾದಘಾತ್ಪಾಪಾದವತ ಅರಕ್ಷತ । ಕಿಂಚ ಹೇ ಉಗ್ರಾ ಉದ್ಗೂರ್ಣತೇಜಸೋ ಹೇ ತವಸೋ ಬಲವಂತೋ ವೇಗವಂತೋ ವಾ ಹೇ ವಿರಪ್ಶಿನಃ । ಮಹನ್ನಾಮೈತತ್ । ಮಹಾಂತಃ । ರಪಣೀಯಾಃ ಶಬ್ದಾ ರಪಾಃ । ತೇ ಯೇಷಾಂ ತೇ ರಪ್ಶಿನಃ । ವಿವಿಧಾ ರಪ್ಶಿನಃ ಸ್ತೋತಾರೋ ಯೇಷಾಂ ತೇ ತಥೋಕ್ತಾ ಹೇ ತಾದೃಶಾಃ ಯೂಯಂ ಯಂ ಚ ಜನಂ ಪಾಥನ ಪಾಥ ರಕ್ಷಥ । ಕಸ್ಮಾನ್ನಿಮಿತ್ತಾದಿತಿ ಉಚ್ಯತೇ । ತನಯಸ್ಯ । ಉಪಲಕ್ಷಣಮೇತತ್ । ಪುತ್ರಾದೀನಾಂ ಪುಷ್ಟಿಷು ನಿಮಿತ್ತಭೂತೇಷು ಶಂಸಾದಭಿಶಂಸನಾತ್ । ಯಮೇವಂ ಕುರುಥ ತಂ ರಕ್ಷತೇತಿ ಶೇಷಃ । ಪಾಪಕ್ಷಯಾದ್ಯನಿಷ್ಟಪರಿಹಾರೇಣ ಪುತ್ರಾದಿಪೋಷರೂಪೇಷ್ಟಪ್ರಾಪ್ತ್ಯಾ ಚ ರಕ್ಷತೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ (ನೀವು)। **ಯಂ**—ಯಾವ ಮನುಷ್ಯನನ್ನು। **ಅಭಿಹ್ರುತೇಃ**—ಅಭಿಭವಕಾರಣವಾದ (ಕುಟಿಲಸ್ವಭಾವದ) । **ಅಘಾತ್**—ಪಾಪದಿಂದ । **ಅವತ**—ರಕ್ಷಿಸುತ್ತೀರೋ (ಮತ್ತು) । **ಉಗ್ರಾಃ**—ಕ್ರೂರರೂ । **ತವಸಃ**—ಬಲಿಷ್ಠರೂ । **ವಿರಪ್ಶಿನಃ**—ಮಹತ್ತ್ವವಿಶಿಷ್ಟರೂ (ವಿವಿಧಸ್ತೋತೃಗಳುಳ್ಳವರೂ) ಆದ । **(ಹೇ ಮರುತಃ**—ಎಲೈ ಮರುದ್ದೇವತೆಗಳೇ) । **ಯಂ ಜನಂ**—ಯಾವ ಮನುಷ್ಯನನ್ನು । **ತನಯಸ್ಯ**—ಪುತ್ರನ (ಪುತ್ರಾದಿಗಳ) । **ಪುಷ್ಟಿಷು**—ಪುಷ್ಟಿಗಳ ವಿಷಯದಲ್ಲಿ । **ಶಂಸಾತ್**—ಅಭಿಶಂಸನದಿಂದ । **ಪಾಥನ**—ರಕ್ಷಿಸುತ್ತೀರೋ । **ತಂ**—ಆ ಮನುಷ್ಯನನ್ನು । **ಶತಭುಜಿಭಿಃ**—ಅಸಂಖ್ಯಾತಭೋಗವಿಶಿಷ್ಟವಾದ । **ಪೂರ್ಭಿಃ**—ರಕ್ಷಣಾಕಾರ್ಯಗಳಿಂದ ಅಥವಾ ಜೇತವ್ಯವಾದ ಶತ್ರುನಗರಗಳಿಂದ । **ರಕ್ಷತ**—ರಕ್ಷಿಸಿರಿ ।

॥ ಭಾವಾರ್ಥ ॥

ಉಗ್ರರೂ, ಮಹಾಬಲಿಷ್ಠರೂ, ವಿವಿಧ ಸ್ತೋತ್ರಗಳಿಂದ ಸ್ತುತ್ಯರೂ ಆದ ಎಲೈ ಮರುದ್ದೇವತೆಗಳೇ, ನೀವು ಕೆಲವರನ್ನು ಅಭಿಭವಸಾಧಕವಾದ ಪಾಪದಿಂದ ರಕ್ಷಿಸುತ್ತೀರಿ; ಮತ್ತೆ ಕೆಲವರನ್ನು ಪುತ್ರಾದಿಪೋಷಣದಿಂದ ರಕ್ಷಿಸುತ್ತೀರಿ; ಅವರೆಲ್ಲರಿಗೂ ಅಪರಿಮಿತಭೋಗಸಾಧಕವಾದ ಶತ್ರುನಗರಗಳನ್ನು ಜಯಿಸಿಕೊಟ್ಟು, ರಕ್ಷಕರಾಗಿ.

## English Translation.

Maruts, gratify, with infinite and complete enjoyments, him, whom you protect from degrading sin: that man whom, fierce and mighty, and glorified (as you are), you defend from calumny, by (providing for) the nourishment of his descendants.

॥ ವಿಶೇಷವಿಷಯಗಳು ॥

**ಅಭಿಹ್ರುತೇಃ—ಅಭಿಭವಕಾರಣಾತ್ಕುಟಿಲಸ್ವಭಾವಾತ್ ।** ಕೇಡಕನ್ನುಂಟುಮಾಡುವ ದುಷ್ಟಸ್ವಭಾವದಿಂದ. ಈ ಶಬ್ದವು ಹ್ರು ಧಾತುವಿನಿಂದ ನಿಷ್ಪನ್ನವಾಗಿದೆ. ಹ್ರು ಧಾತುವು ಧಾತುಪಾಠದಲ್ಲಿ ಉಕ್ತವಾಗಿಲ್ಲ. ಭಾಷ್ಯಕಾರರು ಈ ಧಾತುವಿನಿಂದ ನಿಷ್ಪನ್ನವಾದ **ಹ್ರುಣಾತಿ** ಎಂಬ ಶಬ್ದವನ್ನು ಇದೇ ಸೂಕ್ತದ ೧೨ ನೆಯ ಋಕ್ಕಿನಲ್ಲಿ ವಿವರಿಸುವಾಗ ಇದರ ಸಮಾನಾರ್ಥಕವಾದ ಹ್ವರತಿ ಎಂಬ ಮತ್ತೊಂದು ಧಾತುವಿನಿಂದ ಇದರ ಅರ್ಥವನ್ನು ವಿವರಿಸಿದ್ದಾರೆ.

**ಸ ನಸ್ಪಾಸತೇ ದುರಿತಾದಭಿಹ್ರುತಃ ಶಂಸಾದಘಾದಭಿಹ್ರುತಃ ।**

(ಋ. ಸಂ ೧-೧೨೮-೫)

ಎಂಬ ಋಕ್ಕಿನಲ್ಲಿರುವ **ಅಭಿಹ್ರುತಃ** ಎಂಬ ಶಬ್ದಕ್ಕೆ ಭಾಷ್ಯಕಾರರು— **ಅಭಿಮುಖ್ಯೇನ ಪಾಪೈಃ ಹ್ರಿಯಮಾಣಾನ್ ನೋಽಸ್ಮಾನ್ ದುರಿತಾತ್ಪಾಪಾತ್ಪಾಸತೇ ತ್ರಾಯತೇ ।** ಪಾಪದಿಂದಲೂ, ಧಾಳಿಯಿಂದಲೂ, ಕೆಟ್ಟಭಾಷೆಯಿಂದಲೂ, ಹಿಂಸೆಯಿಂದಲೂ ನಮ್ಮನ್ನು ರಕ್ಷಿಸುವನು ಎಂದು ಅರ್ಥವಿವರಣೆ ಮಾಡಿರುವರು. (He protects us from evil, from assault, from evil-speaking, from assault).

**ವಿಶ್ವಾದ್ರಿರಿಕ್ಷೋರುತ ವಾ ನಿನಿತ್ಸೋರಭಿಹ್ರುತಾಮಸಿ ಹಿ ದೇವ ವಿಷ್ಪಟ್**

(ಋ. ಸಂ. ೧-೧೮೯-೬)

ಎಂಬ ಋಕ್ಕಿನಲ್ಲಿರುವ **ಅಭಿಹ್ರುತಾಂ** ಎಂಬ ಶಬ್ದಕ್ಕೆ ಸಾಯಣರು— **ಅಭಿಹ್ರುತಾಮಾಭಿಮುಖ್ಯೇನ ಕುಟಿಲಂ ಕುರ್ವತಾಂ ದ್ವಿಷಾಂ—** ವಿಶೇಷವಾಗಿ ನಮಗೆ ಬಾಧೆಯನ್ನುಂಟುಮಾಡುವ ಶತ್ರುಗಳ ಎಂದು ಅರ್ಥವಿವರಣೆ ಮಾಡಿರುವರು. ಇದಲ್ಲದೆ ಈ ಹ್ರುಧಾತುವಿನೊಡನೆ ವಿ ಎಂಬ ಉಪಸರ್ಗಸೇರಿದ **ವಿಹ್ರುತ** ಎಂಬ ಶಬ್ದವು—

**ಸಂಧಾತಾ ಸಂಧಿಂ ಮಘವಾ ಪುರೂವಸುರಿಷ್ಕರ್ತಾ ವಿಹ್ರುತಂ ಪುನಃ ।**

(ಋ. ಸಂ. ೮-೧-೧೨)

**ಕ್ಷೇಮಾ ರಪೋ ಮರುತ ಆತುರಸ್ಯ ನ ಇಷ್ಕರ್ತಾ ವಿಹ್ರುತಂ ಪುನಃ ।**

(ಋ. ಸಂ. ೮-೨೦-೨೬)

ಎಂಬ ಎರಡು ಋಕ್ಕುಗಳಲ್ಲಿ ಮಾತ್ರವಿರುವುದು. ವಿಹ್ರುತಶಬ್ದಕ್ಕೆ—(ಹಿಂದೆಯೇ) ಹಿಂಸಿಸಲ್ಪಟ್ಟ ಎಂಬರ್ಥವು ಸೂಚಿತ ವಾಗುವುದು. ಮತ್ತೂ—

**ತಾ ಹಿ ಕ್ಷತ್ರಮವಿಹ್ರುತಂ ಸಮ್ಯಗಸುರ್ಯ೧ ಮಾಶಾತೇ ।**

(ಋ. ಸಂ. ೫-೬೬-೨)

**ವಿಭ್ರಾಡ್ ಬೃಹತ್ಪಿಬತು ಸೋಮ್ಯಂ ಮಧ್ವಾಯುರ್ದಧದ್ಯಜ್ಞಪತಾವವಿಹ್ರುತಂ ।**

(ಋ. ಸಂ. ೧೦-೧೭೦-೧)

ಎಂಬ ಋಕ್ಕಿನಲ್ಲಿರುವ **ಅವಿಹ್ರುತಂ** ಎಂಬ ಶಬ್ದವು ನಿಷೇಧಾರ್ಥವನ್ನು ಸೂಚಿಸುವುದು ಎಂದರೆ ವಿಹ್ರುತ ಶಬ್ದಕ್ಕೆ ವಿರೋಧಾರ್ಥವನ್ನು ಹೇಳುವುದು. ಯಾವವಿಧವಾದ ಬಾಧೆಯೂ ಅಥವಾ ಹಿಂಸೆಯೂ ಇಲ್ಲದಿರುವ ಎಂದರ್ಥವು.

**ಪೂರ್ಭಿಃ—ಪಾಲನೈರ್ಜೇತವ್ಯೈಃ ಶತ್ರೂಣಾಂ ನಗರೈರ್ವಾ ।** ರಕ್ಷಣೆಗಳಿಂದ ಅಥವಾ (ನೀವು) ಗೆದ್ದುಕೊಡುವ ಶತ್ರುನಗರಗಳಿಂದ.

**ತವಸಃ—ಬಲವಂತೋ ವೇಗವಂತೋ ವಾ ।** ಬಲವುಳ್ಳ ಅಥವಾ ವೇಗ ಗಮನವುಳ್ಳ. **ತವಸಃ** ಎಂಬ ಶಬ್ದವು ಮಹತ್ ಬ್ರಧ್ನಃ ಮೊದಲಾದ ಇಪ್ಪತ್ತೈದು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩).

**ವಿರಪ್ಶಿನಃ—ಮಹನ್ನಾಮೈತತ್ । ಮಹಾಂತಃ । ರಪಣೀಯಾಃ ಶಬ್ದಾ ರಪಾಃ । ತೇ ಯೇಷಾಂ ತೇ ರಪ್ಶಿನಃ । ವಿವಿಧಾ ರಪ್ಶಿನಃ ಸ್ತೋತಾರೋ ಯೇಷಾಂ ತೇ ।** ವಿರಪ್ಶೀ ಎಂಬಶಬ್ದವು ಮಹತ್ ಬ್ರಧ್ನಃ

ಮೊದಲಾದ ಇಪ್ಪತ್ತೈದು ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ವಿರಪ್ಶಿನಃ** ಎಂದರೆ—ದೊಡ್ಡವರು ಶ್ರೇಷ್ಠರಾದವರು ಎಂದರ್ಥವು. ಇದಲ್ಲದೆ ಈ ಶಬ್ದಕ್ಕೆ ಅವಯವಾರ್ಥವನ್ನು ಭಾಷ್ಯಕಾರರು ವಿವರಿಸುತ್ತಾ ಸ್ಪಷ್ಟವಾಗಿ ಉಚ್ಚರಿಸುವ ಶಬ್ದಗಳಿಗೆ **ರಪಾಃ** ಎಂದೂ ಆ ಶಬ್ದಗಳಿಂದ ಕೂಡಿರುವ ಸ್ತೋತ್ರಗಳಿಗೆ ಅಥವಾ ಸ್ತೋತ್ರಮಾಡುವವರಿಗೆ **ರಪ್ಶಿನಃ** ಎಂದೂ ಹೆಸರು ಇಂತಹ ನಾನಾವಿಧಸ್ತೋತ್ರಗಳಿಂದ (ಅಥವಾ ಸ್ತೋತ್ರಕರ್ತರಿಂದ) ಸ್ತುತಿಸಲ್ಪಡುವ (ಮರುತ್ತುಗಳಿಗೆ) ವರಿಗೆ **ವಿರಪ್ಶಿನಃ** ಎಂದೂ ಹೆಸರೆಂದು ಅರ್ಥವಿವರಣೆಮಾಡಿದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಶತಭುಜಿಭಿಃ**—ಶತಂ ಭುಜಯಃ ಯೇಷಾಂ ತೇ, ತೈಃ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಭಿಹ್ರುತೇಃ**—**ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಪೂರ್ಭಿಃ**—ಪೄ ಪಾಲನಪೂರಣಯೋಃ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಉದೋಷ್ಠ್ಯ ಪೂರ್ವಸ್ಯ** (ಪಾ. ಸೂ. ೭-೧-೧೦೨) ಎಂಬುದರಿಂದ ಉತ್ವ. ರಪರವಾಗಿ ಬರುತ್ತದೆ ಭಿಸ್ ಪರವಾದಾಗ **ಹಲಿ ಚ** ಎಂಬುದರಿಂದ ಉಪಧಾ ದೀರ್ಘ.

**ರಕ್ಷತ**— ರಕ್ಷ ಪಾಲನೇ. ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅವತ**—ಅವ ರಕ್ಷಣೇ. ಧಾತು. ಲಙ್ ಮಧ್ಯಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗಿರುವುದರಿಂದ ಆದ್ಯುದಾತ್ತವಾಗುತ್ತದೆ.

**ತವಸಃ**—ಛಾಂದಸವಾಗಿ ಮತುಪಿಗೆ ಲೋಪ ಬರುತ್ತದೆ. **ಆಮಂತ್ರಿತಸ್ಯ ಚ**—(ಪಾ. ಸೂ ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವಿರಿಪ್ಶಿನಃ**—ರಪ ವ್ಯಕ್ತಾಯಾಂ ವಾಚಿ ಧಾತು. ಉಣಾದಿಯಲ್ಲಿ ಬಹುಲವಚನ ಸಾಮರ್ಥ್ಯದಿಂದ ವಿಪೂರ್ವ ವಾಗಿರುವಾಗ ಇದಕ್ಕೆ ಶಕ್ ಪ್ರತ್ಯಯ. ವಿವಿಧಂ ಶಬ್ದಂ ರಪಂತಿ ಇತಿ ವಿರಪ್ಶಾಃ—ಸ್ತೋತಾರಃ ತೇ ಯೇಷಾಂ ಸಂತಿ ಇತಿ ವಿರಪ್ಶಿನಃ. ಮತ್ವರ್ಥದಲ್ಲಿ ಇನಿ ಪ್ರತ್ಯಯ ಆಮಂತ್ರಿತನಿಘಾತಸ್ವರಬರುತ್ತದೆ.

**ಪಾಥನ**— ಪಾ ರಕ್ಷಣೇ. ಧಾತು. ಅದಾದಿ ಲೋಟ್ ಪ್ರಥಮಪುರುಷ ಬಹುವಚನಕ್ಕೆ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಥನಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತಸ್ವರವಾಗುತ್ತದೆ.

**ಶಂಸಾತ್**—ಶಂಸು ಸ್ತುತೌ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ವಿಶ್ವಾನಿ ಭದ್ರಾ ಮರುತೋ ರಥೇಷು ವೋ ಮಿಥಸ್ಪೃಧ್ಯೇವ ತವಿಷಾಣ್ಯಾಹಿತಾ ।
ಅಂಸೇಷ್ವಾ ವಃ ಪ್ರಪಥೇಷು ಖಾದಯೋಽಕ್ಷೋ ವಶ್ಚಕ್ರಾ ಸಮಯಾ ವಿ
ವಾವೃತೇ ॥ ೯ ॥

॥ ಪದಪಾಠಃ ॥

ವಿಶ್ವಾನಿ । ಭದ್ರಾ । ಮರುತಃ । ರಥೇಷು । ವಃ । ಮಿಥಸ್ಪೃಧ್ಯಾಽಇವ । ತವಿಷಾಣಿ । ಆಽಹಿತಾ ।
ಅಂಸೇಷು । ಆ । ವಃ । ಪ್ರಽಪಥೇಷು । ಖಾದಯಃ । ಅಕ್ಷಃ । ವಃ । ಚಕ್ರಾ । ಸಮಯಾ । ವಿ ।
ವವೃತೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವೋ ರಥೇಷು ಯುಷ್ಮತ್ಸಂಬಂಧಿರಥೇಷು ರಂಹಣಸಾಧನೇಷು ವಿಶ್ವಾನಿ ಭದ್ರಾ ಸರ್ವಾಣಿ ಕಲ್ಯಾಣಾನಿ ಭೋಗಯೋಗ್ಯಾನಿ ದ್ರವ್ಯಾಣ್ಯಸ್ಮಭ್ಯಂ ಪ್ರದೇಯಾನಿ ಫಲಾನಿ ವಾಹಿತಾನಿ । ತಥಾ ವೋಽಂಸೇಷ್ವಾ ತದುಪಲಕ್ಷಿತಭುಜೇಷ್ವಪಿ । ಆಕಾರೋಽಪ್ಯರ್ಥೇ । ಮಿಥಸ್ಪೃಧ್ಯೇವ ಬಲಾಧಿಕ್ಯಾತ್ಪರಸ್ಪರಸ್ಪರ್ಧಾವಿಷಯಾಣಿ ತವಿಷಾಣಿ ಬಲಾನಿ ಅಂಸೇಷೂಕ್ತಲಕ್ಷಣಾನ್ಯಾಯುಧಾನಿ ವಾಹಿತಾನಿ । ಕಿಂಚ ವಃ ಪ್ರಪಥೇಷು । ಪ್ರಗತಾಃ ಪಂಥಾನೋ ಯೇಷು ವಿಶ್ರಾಮಸ್ಥಾನೇಷು ತಾನಿ ಪ್ರಪಥಾನಿ । ತೇಷು ಖಾದಯಃ ಖಾದ್ಯಾನಿ ಭಕ್ಷ್ಯಾಣ್ಯಾಹಿತಾನಿ । ಯದ್ವಾ । ಪ್ರಗತಃ ಪಂಥಾ ಯೈಸ್ತೇಷು ಪಾದಾಗ್ರೇಷು-ಖಾದಯಃ ಸ್ಥಿರಾ ಆಭರಣವಿಶೇಷಾ ಆಹಿತಾಃ । ಕಿಂಚಾಕ್ಷೋ ವೋ ಯುಷ್ಮತ್ಸಂಬಂಧೀ ರಥ್ಯೋಽಕ್ಷ-ಶ್ಚಕ್ರಾ ತತ್ರೋಪನಿಬದ್ಧಾನಿ ಚಕ್ರಾಣಿ ಸಮಯಾ ಸಮೀಪೇ ತೇಷಾಂ ಪರಿಸರೇ ವಿ ವವೃತೇ । ವಿಶೇಷೇಣ ವರ್ತತೇ । ನ ಕದಾಚಿದಪಿ ಚಕ್ರೇಷು ಸಂಲಗ್ನೋ ಭವತೀತ್ಯರ್ಥಃ । ಯಸ್ಮಾದೇವಂ ದೇವಯಜನಗಮನ-ಸಾಧನಾನಿ ಸಂತಿ ತಸ್ಮಾಚ್ಛೀಘ್ರಮಾಗಚ್ಛಧ್ವಮಿತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ವಃ**—ನಿಮ್ಮ । **ರಥೇಷು**—ರಥಗಳಲ್ಲಿ । **ವಿಶ್ವಾನಿ ಭದ್ರಾ**—ಸಮಸ್ತ ಭೋಗಸಾಧನ ಪದಾರ್ಥಗಳೂ ಅಥವಾ ನಮಗೆ ದೇಯವಾದ ವಸ್ತುಗಳೂ । **ಆ ಹಿತಾ**—ಇಡಲ್ಪಟ್ಟಿವೆ । **ಅಂಸೇಷು ಆ**—ನಿಮ್ಮ ಭುಜಗಳಲ್ಲಿಯೂ । **ಮಿಥಸ್ಪೃಧ್ಯಾ ಇವ**—ಪರಸ್ಪರ ಸ್ಪರ್ಧೆಯಿಂದಲೋ ಎಂಬುವಹಾಗೆ । **ತವಿಷಾಣಿ**—ಬಲಗಳು (ಬಲಪ್ರದರ್ಶಕವಾದ ಆಯುಧಗಳು) । (**ಆ ಹಿತಾ**—ಧೃತವಾಗಿವೆ) । (ಮತ್ತು) **ವಃ**—ನಿಮ್ಮ । **ಪ್ರಪಥೇಷು**—ಮಾರ್ಗದಲ್ಲಿರುವ ವಿಶ್ರಾಂತಿ ಸ್ಥಳಗಳಲ್ಲಿ । **ಖಾದಯಃ**—ಖಾದ್ಯಪದಾರ್ಥ

ಗಳು (ಇಡಲ್ಪಟ್ಟಿವೆ) । [ಅಥವಾ **ಪ್ರಪಥೇಷು**— ಪಾದಾಗ್ರಗಳಲ್ಲಿ ।**ಖಾದಯಃ**— ಸ್ಥಿರವಾದ ಆಭರಣ ವಿಶೇಷಗಳು (ಧರಿಸಲ್ಪಟ್ಟವೆ) ।] **(ಕಿಂಚ**—ಮತ್ತು) । **ವಃ ಅಕ್ಷಃ**—ನಿಮ್ಮ (ರಥದ) ಅಚ್ಚು । **ಚಕ್ರಾ**—(ಅದಕ್ಕೆ ನಿಬದ್ಧವಾದ) ಚಕ್ರಗಳ । **ಸಮಯಾ**—ಸಮೀಪದಲ್ಲಿ । **ವಿ ವಾವೃತೇ**—ವಿಶೇಷವಾಗಿ ಇದೆ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮ ರಥಗಳಲ್ಲಿ ಸಮಸ್ತ ಭೋಗಸಾಧನವಾದ ಪದಾರ್ಥಗಳೂ ಅಥವಾ ನಮಗೆ ದೇಯವಾದ ವಸ್ತುಗಳೂ ಸಿದ್ಧವಾಗಿವೆ ; ನಮ್ಮ ರಕ್ಷಣಸಾಧನಗಳಾದ ಆಯುಧಗಳೂ ನಿಮ್ಮ ಭುಜಗಳಲ್ಲಿ ಧೃತವಾಗಿವೆ; ನಿಮ್ಮ ಮಾರ್ಗದಲ್ಲಿರುವ ವಿಶ್ರಾಂತಿ ಗೃಹಗಳಲ್ಲಿ ಖಾದ್ಯಪದಾರ್ಥಗಳೂ ಸಿದ್ಧವಾಗಿವೆ. (ನಿಮ್ಮ ಪಾದಾಗ್ರಗಳಲ್ಲಿರಬೇಕಾದ ಆಭರಣವಿಶೇಷಗಳೂ ಧರಿಸಲ್ಪಟ್ಟಿವೆ); ನಿಮ್ಮ ರಥದ ಚಕ್ರಗಳೂ ರಥದ ಅಚ್ಚಿಗೆ ಸರಿಯಾಗಿ ಜೋಡಿಸಲ್ಪಟ್ಟಿವೆ; (ಹೀಗೆ ನಿಮ್ಮ ಪ್ರಯಾಣಕ್ಕೆ ಎಲ್ಲವೂ ಸಿದ್ಧವಾಗಿರುವಾಗ, ನಮ್ಮ ಯಾಗಶಾಲೆಗೆ ಬೇಗ ಹೊರಟುಬನ್ನಿ).

## English Translation

Maruts, all good things are in your cars : on your shoulders abides emulous strength : at your resting-places on the road refreshments (are ready): the axle of your (chariot) wheels holds them firmly together.

॥ ವಿಶೇಷವಿಷಯಗಳು ॥

**ವಿಶ್ವಾನಿ ಭದ್ರಾ ಮಹತೋ ರಥೇಷು ವಃ**—ಈ ಋಕ್ಕಿನಲ್ಲಿ ಋಷಿಯು ಮರುದ್ದೇವತೆಗಳ ಆಗಮನವನ್ನು ಬಯಸುತ್ತಾ, ಅವರ ಆಗಮನಾರ್ಥವಾಗಿ ಎಲ್ಲವೂ ಸಿದ್ಧವಾಗಿರುವುದನ್ನು ವರ್ಣಿಸುತ್ತಾನೆ. ಎಲೈ ಮರುದ್ದೇವತೆಗಳೇ, ನಿಮ್ಮ ರಥದಲ್ಲಿ ಉತ್ತಮವಾದ ಅಥವಾ ಶ್ರೇಷ್ಠವಾದ ವಸ್ತುಗಳೆಲ್ಲವೂ ಸಜ್ಜುಗೊಳಿಸಲ್ಪಟ್ಟಿವೆ. ಈ ವಸ್ತುಗಳು ಭೋಗಯೋಗ್ಯವಾದವುಗಳು ಈ ದ್ರವ್ಯಗಳನ್ನು ಸ್ತೋತ್ರಮಾಡುವ ನಮಗೆ ಕೊಡುವುದಕ್ಕಾಗಿ ನಿಮ್ಮ ರಥದಲ್ಲಿ ಸಿದ್ಧಮಾಡಿ ಇಡಲ್ಪಟ್ಟಿವೆ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ರಥೇಷು**—ರಥ ಶಬ್ದಕ್ಕೆ ಯಾಸ್ಕರು ತಮ್ಮ ನಿರುಕ್ತದಲ್ಲಿ—**ರಥೋ ರಂಹತೇರ್ಗತಿಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ । ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ ರಪತೇರ್ವಾ ರಸತೇರ್ವಾ** (ನಿ. ೯-೧೧) ಎಂದು ಹೇಳಿರುವರು. ಎಂದರೆ, ಗಮನಕರ್ಮವನ್ನು ಸೂಚಿಸುವ ರಂಹ್ ಧಾತುವಿನಿಂದಾಗಲಿ, ಸ್ಥಿರವಾಗಿರು ಎಂಬರ್ಥವುಳ್ಳ ಸ್ಥಿರತಿ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ರಥವು ಯಾವಾಗಲೂ ಹೋಗುತ್ತಿರು (ಸಂಚರಿಸುತ್ತಿರು)ವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಇದರಲ್ಲಿ ಕುಳಿತುಕೊಳ್ಳುವ ಯೋಧನು ಸ್ಥಿರವಾಗಿರುವನು. ಅಶ್ವಾದಿ ವಾಹನಗಳ ಮೇಲೆ ಕುಳಿತುಕೊಂಡಾಗ ಶರೀರವು ಅಲುಗಾಡುವಂತೆ, ರಥದಲ್ಲಿ ಕುಳಿತಾಗ ಅಲುಗಾಡದೆ ಸ್ಥಿರವಾಗಿ ಕುಳಿತುಕೊಳ್ಳಲು ಸಾಧ್ಯವಾಗುವುದರಿಂದ ಇದಕ್ಕೆ ರಥವೆಂದು ಹೆಸರು. ಅಥವಾ ಈ ರಥದಲ್ಲಿ ಕುಳಿತು ವಿಹರಿಸುವುದರಿಂದ ಇದಕ್ಕೆ ರಥವೆಂದು ಹೆಸರು ಎಂದು ಅವಯವಾರ್ಥಗಳನ್ನು ವಿವರಿಸಿರುವರು.

**ಮಿಥಸ್ಪೃಧ್ಯೇವ—ಬಲಾಧಿಕ್ಯಾತ್ಪರಸ್ಪರಸ್ಪರ್ಧಾವಿಷಯಾಣಿ** । ಬಲಾಧಿಕ್ಯದಿಂದ ಒಂದಕ್ಕೊಂದು ಸ್ಪರ್ಶಮಾಡಿ (ತಗಲುತ್ತಾ) ಘರ್ಷಣೆಮಾಡುತ್ತಿರುವ (clashing against each other)- ಲೋಹಾದಿ

ಗಳಿಂದ ಮಾಡಲ್ಪಟ್ಟ ನಾನಾವಿಧ ಆಯುಧಗಳನ್ನು ಒಟ್ಟಿಗೆ ಸೇರಿಸಿ ರಥದಲ್ಲಿ ಒಂದುಕಡೆ ಇಟ್ಟಿರುವಾಗ ರಥದ ಚಲನೆ ಯಿಂದ ಆ ಆಯುಧಗಳು ಒಂದಕ್ಕೊಂದು ತಗಲುತ್ತಾ ಶಬ್ದಮಾಡುವವು ಎಂದಭಿಪ್ರಾಯವು.

**ತವಿಷಾಣಿ—**ತವಿಷ ಶಬ್ದವು ಬಲನಾಮಗಳಲ್ಲಿ ಪಠಿತವಾಗಿರುವುದು. (ನಿ. ೩-೧೩) ಆದರೆ ಇಲ್ಲಿ ಈ ಶಬ್ದವು ನಪುಂಸಕಲಿಂಗ ಬಹುವಚನಾಂತವಾಗಿ ಉಪಯೋಗಿಸಲ್ಪಟ್ಟಿರುವುದರಿಂದ ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಇರುವ ತವಿಷಾಣಿ ಎಂಬ ಶಬ್ದಕ್ಕೆ ಹೇಳಿರುವ **ಸಾಮರ್ಥ್ಯಾನಿ—**ಸಾಮರ್ಥ್ಯಗಳು, ಪರಾಕ್ರಮಗಳು, ಸಾಹಸಕಾರ್ಯ ಗಳು ಎಂದು ಹೇಳುವುದು ಸಮಂಜಸವಾಗುವುದಿಲ್ಲ. ಏಕೆಂದರೆ ಸಾಮರ್ಥ್ಯಗಳಾಗಲಿ, ಸಾಹಸಕಾರ್ಯಗಳಾಗಲಿ, ರಥಗಳಲ್ಲಿ ಇಡುವ ವಸ್ತುಗಳಲ್ಲ ಅವು ಕಾರ್ಯಗಳ ಹೆಸರುಮಾತ್ರ ಅಥವಾ ತವಿಷಾಣಿ ಎಂಬ ಶಬ್ದಕ್ಕೆ ಸೈನ್ಯವೆಂದು ಅರ್ಥಮಾಡಿದರೂ ಸೈನ್ಯಗಳನ್ನು ರಥದಲ್ಲಿ (ಅದು ಎಷ್ಟೇ ದೊಡ್ಡದಾಗಿದ್ದರೂ) ಇಡುವುದೂ ಸಾಧ್ಯವಿಲ್ಲ. ಆದುದರಿಂದ ತವಿಷಾಣಿ ಎಂಬ ಶಬ್ದಕ್ಕೆ ಬಲವಾದ ಆಯುಧಗಳು ಎಂಬ ಅರ್ಥವೇ ಸಮಂಜಸವಾಗಿರುವುದು. ಆದುದರಿಂದ,

**ಮಿಥಸ್ಪೃಧ್ಯೇವ ತವಿಷಾಣ್ಯಾಹಿತಾ—**ಎಂಬ ವಾಕ್ಯಕ್ಕೆ ರಥಚಲನೆಯಿಂದ ಪರಸ್ಪರ ಘರ್ಷಣಮಾಡುವ ಅನೇಕ ಶ್ರೇಷ್ಠವಾದ ಆಯುಧಗಳು ನಿಮ್ಮ ರಥದಲ್ಲಿ ಇಡಲ್ಪಟ್ಟಿವೆ ಎಂದರ್ಥವು.

**ಅಂಸೇಷ್ವಾ ವಃ—**ಮೇಲೆ ಹೇಳಿದ ರಥದಲ್ಲಿರುವ ಆಯುಧಗಳಲ್ಲದೆ, ಇನ್ನು ಕೆಲವು ಆಯುಧಗಳನ್ನು ನಿಮ್ಮ ಬಾಹುಗಳಲ್ಲಿ ಧರಿಸಿದ್ದೀರಿ ಎಂದರ್ಥವು.

**ಪ್ರಪಥೇಷು ಖಾದಯಃ—ವಃ ಪ್ರಪಥೇಷು । ಪ್ರಗತಾಃ ಪಂಥಾನೋ ಯೇಷು ವಿಶ್ರಾಮಸ್ಥಾ—ನೇಷು ತಾನಿ । ಪ್ರಪಥಾನಿ । ತೇಷು ಖಾದಯಃ ಖಾದ್ಯಾನಿ ಭಕ್ಷ್ಯಾಣ್ಯಾಹಿತಾನಿ । ಯದ್ವಾ ಪ್ರಗತೈಃ ಪಂಥಾ ಯೈಸ್ತೇಷು ಪಾದಾಗ್ರೇಷು ಖಾದಯಃ ಸ್ಥಿರಾ ಆಭರಣವಿಶೇಷಾ ಆಹಿತಾಃ ॥** ಭಾಷ್ಯಕಾರರು ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥಗಳನ್ನು ಹೇಳಿರುವರು. ಪ್ರಪಥವೆಂದರೆ, ಪ್ರಯಾಣಕಾಲದಲ್ಲಿ ಕೆಲವುಕಾಲ ಮಾರ್ಗಗಮನ ದಿಂದ ಆಯಾಸವಾದಾಗ ವಿಶ್ರಮಿಸಿಕೊಳ್ಳುವುದಕ್ಕಾಗಿ ಕುಳಿತುಕೊಳ್ಳುವ ಸ್ಥಳವು. ಇಂತಹ ಸ್ಥಳದಲ್ಲಿ ಕುಳಿತುಕೊಂಡು ಜತೆಯಲ್ಲಿ ತಂದಿರುವ ಭಕ್ಷ್ಯಾದಿ ಆಹಾರಗಳನ್ನು ಸೇವಿಸುವುದು ಸಹಜವು. ಈ ವಿಷಯವೇ ಇಲ್ಲಿ ಸೂಚಿತವಾಗಿರುವು ದೆಂದೂ, ಅಥವಾ ಪ್ರಪಥವೆಂದರೆ ಮಾರ್ಗಗಮನಕ್ಕಾಗಿ (ನಡೆಯುವುದಕ್ಕೆ) ಉಪಯೋಗಿಸುವ ಪಾದಗಳೆಂದೂ, ಅವುಗಳಲ್ಲಿ ಧರಿಸುವ ಪಾದಾಭರಣಗಳಿಗೆ ಖಾದಯಃ ಎಂದು ಹೆಸರೆಂದು ಮತ್ತೊಂದು ಅರ್ಥವನ್ನೂ ಹೇಳಿರುವರು.

Max Muller ಎಂಬ ಜರ್ಮನ್ ಪಂಡಿತನು-ಅಂಸೇಷ್ವಾ ವಃ ಪ್ರಪಥೇಷು ಖಾದಯಃ ಎಂಬ ಎರಡು ವಾಕ್ಯಗಳನ್ನು ಒಂದೇ ವಾಕ್ಯವನ್ನಾಗಿ ಪರಿಗಣಿಸಿ ಅದಕ್ಕೆ—When you are on your journeys, you carry rings on your shoulders. (ನೀವು ಪ್ರಯಾಣಮಾಡುವಾಗ ನಿಮ್ಮ ಭುಜಗಳಲ್ಲಿ ಆಭರಣಗ ಳನ್ನು (ಆಯುಧಗಳನ್ನು ?) ಧರಿಸುತ್ತೀರಿ ಎಂದು ಅರ್ಥವಿವರಣೆಮಾಡಿ ಇದನ್ನು ಸಮರ್ಥಿಸುವುದಕ್ಕಾಗಿ ಋ. ಸಂ. ೧-೬೪-೧೦ ನೇ ಋಕ್ಕಿನಲ್ಲಿರುವ **ವೃಷಖಾದಯಃ** ಎಂಬ ಶಬ್ದವನ್ನು ವಿವರಿಸುವಾಗ ಖಾದಿಶಬ್ದದ ವಿಮರ್ಶೆಯನ್ನು ಹೀಗೆ ಮಾಡಿರುವನು—

In ವೃಷಖಾದಯಃ the meaning of ಖಾದಿ is by no means clear. Sayana evidently guesses and proposes two meanings-weapon or food. In several

passages where ಖಾದಿ occurs, it seems to be an ornament rather than a weapon, yet if derived from khad to bite, it may originally have signified some kind of weapon. Roth tranlates it by ring, and it is certain that these khadis were to be seen not only on the arms and shoulders, but likewise on the feet of the Maruts. There is a famous weapon in India, the ಚಕ್ರ or quoit, a ring with sharp edges (ಚಕ್ರಾಯುಧ) which is thrown from a great distance with fatal effect. Bollensen (Orient and Occident Vol. II. p. 46) suggests for ವೃಷನ್ the meanig of hole in the ear, and then translates the compound as having earrings in the hole of the ear. But ವೃಷನ್ does not mean the hole in the lap of the ear, nor has ವೃಷಭ that meaning either in the Veda or elsewhere. Wilson gives for ವೃಷಭ, not for ವೃಷನ್, the meaning of orifice of the ear, but this is very different from the hole in the lap of the ear. Benfey suggests that the khadis were made of the teeth of wild animals and hence their name of biters. ವೃಷನ್ conveys the meanig of strong, though possibly with the implied idea of rain-producing, fertlising. In ವೃಷನ್ we have one of those words which it is almost impossible to translate accurately. It occurs over and over again in the Vedic Hymns, and if we once know the various ideas which it either expreesss or implies, we have little difficulty in understanding its import in a vague and genaral way, though we look in vain for corresponding terms in any modern language. In the Veda, and in ancient languages generally, one and the same word is frequently made to do service for many. Words retain their general meaning, though at the same time they are evidently used with a definite purpose. This is not only a peculiar phase of language, but a peculiar phase of thought, and as to us this phase hase become strange and unreal, it is very difficult to transport ourselves back into it, still more to translate the pregnant terms of the Vedic poets into the definite languages which we have to use.

ಮರುದ್ದೇವತೆಗಳು ಖಾದಿಯೆಂಬ ಆಭರಣ ಅಥವಾ ಆಯುಧವಿಶೇಷಗಳನ್ನು ಭುಜಗಳಲ್ಲಿ ಧರಿಸಿರುವರೆಂದು ಹೇಳುವ ಮತ್ತೊಂದು ಮಂತ್ರಮಾತ್ರವಿರುವುದು—

**ಅಂಸೇಷ್ವಾ ಮರುತಃ ಖಾದಯೋ ವೋ ವಕ್ಷಃಸು ರುಕ್ಮಾ ಉಪಶಿಶ್ರಿಯಾಣಾಃ ।**
**ವಿ ವಿದ್ಯುತೋ ನ ವೃಷ್ಟಿಭೀ ರುಚಾನಾ ಅನು ಸ್ವಧಾಮಾಯುಧೈರ್ಯಚ್ಛಮಾನಾಃ ॥**

(ಋ. ಸಂ. ೭-೫೬-೧೩)

ಈ ಋಕ್ಕಿನಲ್ಲಿ—ಎಲೈ ಮರುದ್ದೇವತೆಗಳೇ, ನಿಮ್ಮ ಭುಜಗಳಲ್ಲಿ ಖಾದಿಯೆಂಬ ಆಯುಧವಿಶೇಷಗಳಿವೆ ಎದೆಯ ಮೇಲೆ ಚಿನ್ನದ ಸರಪಣಿಗಳು ಕಟ್ಟಲ್ಪಟ್ಟಿವೆ ಎಂದು ವರ್ಣನೆ ಇರುವುದು.

**ಋಷ್ಟಾಮಂಸೇಷು ರಂಭಿಣೀವ ರಾರಭೇ ಹಸ್ತೇಷು ಖಾದಿಶ್ಚ ಕೃತಿಶ್ಚ ಸಂ ದಧೇ ।**

(ಋ. ಸಂ. ೧-೧೬೮-೩)

**ತ್ವೇಷಂ ಗಣಂ ತವಸಂ ಖಾದಿಹಸ್ತಂ ಧುನಿವ್ರತಂ ಮಾಯಿನಂ ದಾತಿವಾರಂ ।**

(ಋ. ಸಂ. ೫-೫೮-೨)

ಎಂಬ ಋಕ್ಕುಗಳಲ್ಲಿ ಖಾದಿಯೆಂಬ ಆಯುಧವನ್ನು ಹಸ್ತದಲ್ಲಿ (ಕೈಯಲ್ಲಿ) ಧರಿಸಿರುವಂತೆ ವಿವರಿಸಿರುವುದು. ಮರುದ್ದೇವತೆಗಳ ಆಯುಧವಿಶೇಷಗಳನ್ನೂ ಅವುಗಳನ್ನೂ ಧರಿಸುವ ಸ್ಥಾನಗಳನ್ನು—

**ಅಂಸೇಷು ವಃ ಋಷ್ಟಯಃ ಪತ್ಸು ಖಾದಯೋ ವಕ್ಷಸ್ಸು ರುಕ್ಮಾ ಮರುತೋ ರಥೇ ಶುಭಃ ।**

(ಋ. ಸಂ. ೫-೫೪-೧೧)

ಎಂಬ ಋಕ್ಕಿನಲ್ಲಿ ವಿವರಿಸುವಾಗ ಖಾದಿಯೆಂಬ ಆಯುಧಗಳನ್ನು (ಅಥವಾ ಆಭರಣಗಳನ್ನು) ಪಾದಗಳಲ್ಲಿ ಧರಿಸಿರುವ ರೆಂದು ವಿವರಿಸಿದೆ. (The khadis are on your forefeet) ಆದರೆ ಪಾದಗಳಲ್ಲಿ ಆಯುಧಗಳನ್ನು ಧರಿಸುವುದು ಸಾಧ್ಯವಲ್ಲದ್ದರಿಂದ ಇಲ್ಲಿ ಖಾದಿಶಬ್ದಕ್ಕೆ ಆಭರಣವಿಶೇಷವೆಂದೇ ಅರ್ಥವಿರಬೇಕು. ಖಾದಿಯ ಆಕಾರವೂ ಸ್ವರೂಪವೂ ಈಗ ನಮಗೆ ತಿಳಿದಿಲ್ಲವಾದರೂ ಇದು ಚಕ್ರದಂತಿರುವ ಒಂದು ಆಯುಧವಿಶೇಷವೆಂಬುದು ನಿರ್ವಿವಾದ ವಿಷಯ. ಇದು ಗುಂಡಾಗಿ (ವರ್ತುಲಾಕಾರವಾಗಿ) ಬಳೆಯಂತಿರುವುದರಿಂದ ಪಾದಗಳಲ್ಲಿ ಅಲಂಕಾರಾರ್ಥವಾಗಿ ಧರಿಸಿರುವ ಈ ಕಾಲು ಬಳೆಗಳನ್ನೇ (ಚಕ್ರದಂತಿರುವ) ಖಾದಿಯೆಂಬ ಹೆಸರಿನಿಂದ ಅನೇಕಕಡೆ ವರ್ಣಿಸಲ್ಪಟ್ಟಿರ ಬಹುದೆಂದು ಊಹಿಸಬಹುದಾಗಿದೆ. ಇದನ್ನು ಪಾದದಲ್ಲಾಗಲಿ, ಭುಜ ಅಥವಾ ಹಸ್ತಗಳಲ್ಲಾಗಲೀ ಇತರ ಕಾಲಗಳಲ್ಲಿ ಧರಿಸಿದ್ದರೂ ಯುದ್ಧಮಾಡುವಾಗ ಮಾತ್ರ ಹಸ್ತಗಳಲ್ಲಿಯೇ ಧರಿಸಬೇಕಾಗಿದ್ದಿತು. ಆದುದರಿಂದ ಋಷಿಗಳು ಈ ವಿಷಯವನ್ನು ಬೇರೆ ಬೇರೆ ರೀತಿಯಿಂದ ವರ್ಣಿಸಿರುವರು. ವಿಷ್ಣುವಿನ ಹಸ್ತದಲ್ಲಿರುವ ಚಕ್ರವೆಂಬ ಆಯುಧ ವಿಶೇಷವೂ ಖಾದಿ ಎಂಬ ಆಯುಧದ ಆಧಾರದಿಂದಲೇ ರೂಢಿಗೆ ಬಂದಿರಬಹುದು.

ಭಾಷ್ಯಕಾರರು ಖಾದಿ ಶಬ್ದಕ್ಕೆ ಹೇಳಿರುವ **ಖಾದ್ಯಾನಿ ಭಕ್ಷ್ಯಾಣಿ**—ತಿನ್ನುವುದಕ್ಕೆ ಯೋಗ್ಯವಾದ ಭಕ್ಷ್ಯಗಳು ಎಂಬ ಅರ್ಥವನ್ನು ಅನೇಕ ಪಾಶ್ಚಾತ್ಯ ಪಂಡಿತರು ಸಮಂಜಸವಾಗಿರುವುದೆಂದು ಒಪ್ಪುವುದಿಲ್ಲ. Max Muller ಪಂಡಿತನು ಈ ವಿಷಯದಲ್ಲಿ—

What however is quite certain is this, that ಖಾದಿ in the Veda never means food, as Sayana opt'onally interprets it. This interpretation is accepted by Wilson, who translates-at your resting places on the road

refreshments (are ready). Nay, he goes on in a note to use this passage as a proof of the advanced civilisation of India at the time of the Vedic Rishis. " The expression " he says " is worthy of note as indicating the existence of accomodations for the use of travellers : the ಪ್ರಪಥ is the choltri (ಛತ್ರ) of the south of India, the Sarai of Mohammadans, a place by the roadside whare the travellers may find shelter and provisions."

ಪ್ರಪಥಶಬ್ದದ ಅರ್ಥವಿಷಯದಲ್ಲಿಯೂ ಭಾಷ್ಯಕಾರರು ಈ ಋಕ್ಕಿನಲ್ಲಿ **ಪ್ರಪಥೇಷು ಪಂಥಾನೋ ವಿಶ್ರಾಮಸ್ಥಾನೇಷು**—ದಾರಿಯಲ್ಲಿ ಸಿಕ್ಕುವ ವಿಶ್ರಾಂತಿ ಸ್ಥಾನಗಳೆಂದು ವಿವರಿಸಿದ್ದರೂ—

**ಆಯುರ್ವಿಶ್ವಾಯುಃ ಪರಿ ಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್ ।**

(ಋ. ಸಂ. ೧೦-೧೭-೪)

**ಪ್ರಪಥೇ ಪಥಾಮಜನಿಷ್ಟ ಪೂಷಾ ಪ್ರಪಥೇ ದಿವಃ ಪ್ರಪಥೇ ಪೃಥಿವ್ಯಾಃ ।**

(ಋ. ಸಂ. ೧೦-೧೭-೬)

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**

(ಋ. ಸಂ. ೧೦-೬೩-೧೬)

ಇತ್ಯಾದಿ ಋಕ್ಕುಗಳಲ್ಲಿರುವ ಪ್ರಪಥೇ ಎಂಬ ಶಬ್ದಕ್ಕೆ ಪ್ರಕೃಷ್ಟೇ ಮಾರ್ಗೇ ಉತ್ತಮವಾದ ಮಾರ್ಗದಲ್ಲಿ ಎಂಬರ್ಥವನ್ನೇ ಹೇಳಿರುವರು. ಆದುದರಿಂದ ಈ ಋಕ್ಕಿನಲ್ಲಿರುವ ಪ್ರಪಥೇಷು ಖಾದಯಃ ಎಂಬ ಶಬ್ದಗಳಿಗೆ—ಉತ್ತಮವಾದ ಮಾರ್ಗಗಳಲ್ಲಿ ಸಂಚರಿಸುವಾಗ ಮರುದ್ದೇವತೆಗಳು ಖಾದಿಯೆಂಬ ಆಯುಧವಿಶೇಷಗಳನ್ನು ಧರಿಸುತ್ತಾರೆಂಬ ಅರ್ಥವೇ ಸಮಂಜಸವಾಗಿರುವುದು.

**ಅಕ್ಷೋ ವಶ್ಚಕ್ರಾ ಸಮಯಾ ವಿ ವಾವೃತೇ—ಅಕ್ಷೋ ವೋ ಯುಷ್ಮತ್ಸಂಬಂಧೀ ರಥೋಽಕ್ಷ—ಶ್ಚಕ್ರಾ ತತ್ರೋಪನಿಬದ್ಧಾನಿ ಚಕ್ರಾಣಿ ಸಮಯಾ ಸಮೀಪೇ ತೇಷಾಂ ಪರಿಸರೇ ವಿ ವವೃತೇ ವಿಶೇಷೇಣ ವರ್ತತೇ ನ ಕದಾಚಿದಪಿ ಚಕ್ರೇಷು ಸಂಲಗ್ನೋ ಭವತೀತ್ಯರ್ಥಃ ।** ಎಲೈ ಮರುದ್ದೇವತೆಗಳೇ ನಿಮ್ಮ ರಥದ ಅಚ್ಚು ಅದರ ಪಾರ್ಶ್ವಗಳಲ್ಲಿರುವ ಚಕ್ರಗಳನ್ನು ಏಕಕಾಲದಲ್ಲಿ ಸುತ್ತಲೂ ತಿರುಗುವಂತೆ ಮಾಡುತ್ತದೆ. ದೃಢವಾಗಿ ಜೋಡಿಸಲ್ಪಟ್ಟಿವೆ. ಅಚ್ಚಿನಿಂದ ಕಳಚಿ ಬೀಳುವುದಿಲ್ಲ. ಇದೇ ಅರ್ಥವನ್ನು—

**ಸತ್ರಾ ತೇ ಅನು ಕೃಷ್ಟಯೋ ವಿಶ್ವಾ ಚಕ್ರೇವ ವಾವೃತುಃ ।**

(ಋ. ಸಂ. ೪-೩೦-೨)

ಎಂಬ ಋಕ್ಕಿನಲ್ಲಿ ಹೇಳಿರುವುದು. ಎಂದರೆ ನಿಮ್ಮ ರಥವು ಯಾವ ತಡೆಯೂ ಇಲ್ಲದೆ ಸುಖವಾಗಿ ಸಂಚರಿಸುವುದು ಎಂದು ಮುಖ್ಯಾಭಿಪ್ರಾಯವು. ಇಲ್ಲಿ ಅಚ್ಚು ಚಕ್ರವನ್ನು ತಿರುಗುವಂತೆ ಮಾಡುವುದು ಎಂದು ಹೇಳಿರುವುದು ಸರಿಯಾಗಿಲ್ಲ. ಕುದುರೆಗಳು ರಥವನ್ನು ಎಳೆಯುವುದರಿಂದ ಚಕ್ರಗಳು ತಿರುಗುವುವು. ಆದರೂ ಅಚ್ಚಿನ ಸಮೀಪದಲ್ಲಿ ಅವಕ್ಕೆ

ಸಂಬಂಧಿಸಿದಂತೆ ಚಕ್ರಗಳು ಇರುವುದರಿಂದ ಋಷಿಯು ಆ ರೀತಿ ವರ್ಣಿಸಿರಬಹುದು. ಸಮಯಾ ಎಂಬ ಶಬ್ದಕ್ಕೆ ವೇದದಲ್ಲಿ ಒಟ್ಟಿಗೆ ಅಥವಾ ಏಕಕಾಲದಲ್ಲಿ ಎಂದರ್ಥವಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಭದ್ರಾ—**ಭದಿ ಕಲ್ಯಾಣೇ ಸುಖೇ ಚ ಧಾತು. ಇದಕ್ಕೆ ಔಣಾದಿಕ ರಕ್ ಪ್ರತ್ಯಯ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಆಹಿತಾ—**ಆಙ್ ಉಪಸರ್ಗ. ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಆ) ಉದಾತ್ತಸ್ವರ ಬರುತ್ತದೆ. ಹಿಂದಿನಂತೆ ನಪುಂಸಕ ಬಹುವಚನದಲ್ಲಿ ಶಿಗೆ ಲೋಪ.

**ಮಿಥಸ್ಪೃಧ್ಯಾ—**ಸ್ಪರ್ಧ ಸಂಘರ್ಷೇ ಧಾತು. ಇದಕ್ಕೆ ಕ್ವಿಪ್ ಬಂದಾಗ **ಬಹುಲಂ ಛಂದಸಿ** ಎಂಬುದರಿಂದ ಧಾತುರೇಫಕ್ಕೆ ಸಂಪ್ರಸಾರಣ. ಅಕಾರಲೋಪ. ಸ್ಪರ್ಧಂತೇ ಇತಿ ಸ್ಪೃಧಃ. ಇದರಮೇಲೆ ಭಾವಾರ್ಥದಲ್ಲಿ ಯತ್ ಪ್ರತ್ಯಯ. **ಯತೋ ನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ಶಿಗೆ ಲೋಪ.

**ಪ್ರಪಥೇಷು—**ಪ್ರಗತಾಃ ಪಂಥಾನೋ ಯೇಷು ತಾನಿ ಪ್ರಪಥಾನಿ. ತೇಷು. **ಋಕ್ ಪೂರಬ್ಧೂಃಪಥಾಮಾನಕ್ಷೇ** (ಪಾ. ಸೂ. ೫-೪-೭೪) ಎಂಬುದರಿಂದ ಅಕಾರ ಪ್ರತ್ಯಯ ಸಮಾಸಾಂತವಾಗಿ ಬರುತ್ತದೆ. ಟಿ ಲೋಪ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಚಕ್ರಾ—**ಚಕ್ರಾಣಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಮುಂದೆ ಸಮಯಾ ಎಂಬುದರ ಯೋಗವಿರುವುದರಿಂದ **ಅಭಿತಃ ಪರಿತಃ ಸಮಯಾ—**ಎಂಬ ವಚನದಿಂದ ಷಷ್ಠಿಗೆ ಅಪವಾದವಾಗಿ ದ್ವಿತೀಯಾ ಬರುತ್ತದೆ.

**ವವೃತೇ—**ವೃತು ವರ್ತನೇ. ಧಾತು. ಛಾಂದಸವಾಗಿ ಲಿಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಭೂರೀ॑ಣಿ ಭ॒ದ್ರಾ ನರ್ಯೇ॑ಷು ಬಾ॒ಹುಷು॒ ವಕ್ಷಃ॑ಸು ರು॒ಕ್ಮಾ ರ॑ಭ॒ಸಾಸೋ॑ ಅ॒ಂಜಯಃ॑ ।
ಅಂಸೇ॑ಷ್ವೇ॒ತಾಃ ಪ॒ವಿಷು॑ ಕ್ಷು॒ರಾ ಅಧಿ॒ ವಯೋ॒ ನ ಪ॒ಕ್ಷಾನ್ವ್ಯನು॒ ಶ್ರಿಯೋ॑ ಧಿರೇ ॥ ೧೦ ॥

॥ ಪದಪಾಠಃ ॥

ಭೂರೀಣಿ । ಭದ್ರಾ । ನರ್ಯೇಷು । ಬಾಹುಷು । ವಕ್ಷಃಸು । ರುಕ್ಮಾಃ । ರಭಸಾಸಃ । ಅಂಜಯಃ । ಅಂಸೇಷು । ಏತಾಃ । ಪವಿಷು । ಕ್ಷುರಾಃ । ಅಧಿ । ವಯಃ । ನ । ಪಕ್ಷಾನ್ । ವಿ । ಅನು । ಶ್ರಿಯಃ । ಧಿರೇ ॥ ೧೦ ॥

॥ ಸಾಯಣಭಾಷ್ಯಂ ॥

ತೇ ಮರುತೋ ನರ್ಯೇಷು ನರೇಭ್ಯೋ ಹಿತೇಷು ಬಾಹುಷು ಭುಜೇಷು ಭೂರೀಣಿ ಪ್ರಭೂತಾನಿ ಭದ್ರಾ ಭದ್ರಾಣಿ ಕಲ್ಯಾಣಾನಿ ಧನಾನಿ ಸ್ತೋತೃಭ್ಯೋ ದಾತುಂ ಧಿರೇ । ದಧಿರೇ । ಧಾರಯಂತಿ । ತಥಾ ವಕ್ಷಃಸೂರಃಸ್ಥಲೇಷು ರುಕ್ಮಾಃ ಸುವರ್ಣರತ್ನಾದಿನಿರ್ಮಿತಾನ್ಯಾಭರಣಾನಿ ಧಾರಯಂತಿ । ಕೀದೃಶಾನಿ । ರಭಸಾಸೋ ರಾಭಸ್ಯಯುಕ್ತಾನಿ ಕಾಂತಿಮಂತಿ ವಾ ತಥಾಂಜಯೋ ವ್ಯಕ್ತಾನಿ । ಅಂಸೇಷು ಭುಜಮೂಲೇಷ್ವೇತಾಃ ಶುಕ್ಲವರ್ಣಾ ಮಾಲಾಃ । ಪವಿಷು ವಜ್ರಸದೃಶೇಷ್ವಾಯುಧೇಷು ಕ್ಷುರಾಃ ಕ್ಷುರಧಾರಾಃ । ಅಧಿ ಸಪ್ತಮ್ಯರ್ಥಾನುವಾದೀ । ಏವಮೇತೇ ಮರುತಃ ಸರ್ವಾಂಗೇಷು ಶ್ರಿಯೋ ಲಕ್ಷ್ಮೀರನುಕ್ರಮೇಣ ವಿ ಧಿರೇ । ವಿವಿಧಂ ಧಾರಯಂತಿ । ತತ್ರ ದೃಷ್ಟಾಂತಃ । ವಯೋ ನ ಪಕ್ಷಾನ್ ಪಕ್ಷಿಣಃ ಪಕ್ಷಾನಿವ ॥

॥ ಪ್ರತಿಪದಾರ್ಥ ॥

(**ತೇ ಮರುತಃ**—ಆ ಮರುದ್ದೇವತೆಗಳು) । **ನರ್ಯೇಷು**—ನರರಿಗೆ ಹಿತವಾದ । **ಬಾಹುಷು**—ತೋಳುಗಳಲ್ಲಿ । **ಭೂರೀಣಿ**—ಪ್ರಭೂತವಾದ । **ಭದ್ರಾ**—ಮಂಗಳಕರವಾದ (ಸ್ತೋತೃಗಳಿಗೆ ದೇಯವಾದ ಧನಗಳನ್ನು) । **ಧಿರೇ**—ಧರಿಸಿರುತ್ತಾರೆ । **ವಕ್ಷಸ್ಸು**—ಉರಸ್ಥಳಗಳಲ್ಲಿ । **ರಭಸಾಸಃ**—ಕಾಂತಿವಿಶಿಷ್ಟವಾದ ಮತ್ತು । **ಅಂಜಯಃ**—ವ್ಯಕ್ತವಾದ । **ರುಕ್ಮಾಃ**—ಸುವರ್ಣಾದಿ (ನಿರ್ಮಿತವಾದ ಆಭರಣಗಳನ್ನೂ) । (**ಧಿರೇ**—ಧರಿಸಿದಾರೆ) । **ಅಂಸೇಷು**—ಭುಜಮೂಲಗಳಲ್ಲಿ । **ಏತಾಃ**—ಶುಕ್ಲವರ್ಣದ ಮಾಲೆಗಳನ್ನೂ । **ಪವಿಷು**—ವಜ್ರಸದೃಶವಾದ ಆಯುಧಗಳಲ್ಲಿ । **ಕ್ಷುರಾಃ**—ಹರಿತವಾದ ಅಲಗುಗಳನ್ನೂ । **ಅಧಿ (ಧಿರೇ)**—ಹೊಂದಿದ್ದಾರೆ (ಈ ರೀತಿಯಾಗಿ ಮರುದ್ದೇವತೆಗಳು) । **ಶ್ರಿಯಃ**—(ನಾನಾ) ಅಲಂಕಾರಗಳನ್ನು । **ಅನು**—(ಉಕ್ತ) ಕ್ರಮದಲ್ಲಿ । **ವಯಃ**—ಪಕ್ಷಿಗಳು । **ಪಕ್ಷಾನ್ ನ**—(ವಿವಿಧವರ್ಣದ) ಪಕ್ಷಗಳನ್ನು (ಧರಿಸಿರುವಂತೆ) । **ವಿ (ಧಿರೇ)**—ವಿವಿಧವಾಗಿ (ಧರಿಸಿದಾರೆ).

॥ ಭಾವಾರ್ಥ ॥

ಮನುಷ್ಯರಿಗೆ ಹಿತವನ್ನುಂಟುಮಾಡುವ ಮರುದ್ದೇವತೆಗಳ ಬಾಹುಗಳಲ್ಲಿ ಮನುಷ್ಯರಿಗೆ ಪ್ರದೇಯವಾದ ಅನೇಕ ಶುಭದ್ರವ್ಯಗಳೂ, ಅವರ ವಕ್ಷಸ್ಸುಗಳ ಮೇಲೆ ಥಳಥಳಿಸುವ ಮತ್ತು ಸ್ಪಷ್ಟವಾಗಿ ಗೋಚರವಾಗುವ ಸುವರ್ಣಾಭರಣಗಳೂ, ಅವರ ಭುಜಗಳ ಮೇಲೆ ಸ್ವಚ್ಛವಾದ ಮಾಲೆಗಳೂ ಮತ್ತು (ಕೈಗಳಲ್ಲಿ) ಹರಿತವಾದ ಮತ್ತು ವಜ್ರಸದೃಶವಾದ ಆಯುಧಗಳೂ ಇವೆ; ಈ ರೀತಿ ಪಕ್ಷಿಗಳು ನಾನಾವರ್ಣದ ರೆಕ್ಕೆಗಳನ್ನು ಹೊಂದಿರುವಂತೆ, ಮರುದ್ದೇವತೆಗಳೂ ವಿವಿಧವಾಗಿ ಅಲಂಕೃತರಾಗಿದಾರೆ. (ಅಥವಾ ತಮ್ಮ ಕಾಂತಿಯನ್ನು ಸುತ್ತಲೂ ಬೀರುತ್ತಾರೆ).

## English Translation.

Maruts, in your arms, propitious to man, are many good things: on your breasts are golden (ornaments), brilliant and conspicuous: white garlands (hang) on your shoulders: sharp are (the edges of) your weapons: the Maruts have various decorations, as birds have (many coloured) wings.

### ॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮರುದ್ದೇವತೆಗಳು ನಾನಾ ಅವಯವಗಳಲ್ಲಿ ಅಲಂಕಾರಾರ್ಥವಾಗಿ ಧರಿಸಿರುವ ಆಭರಣಗಳನ್ನೂ ಆಯುಧಗಳನ್ನೂ ವಿವರಿಸಿದೆ.

**ಭೂರೀಣಿ ಭದ್ರಾ ನರ್ಯೇಷು ಬಾಹುಷು**—ಮರುದ್ದೇವತೆಗಳು ತಮ್ಮ ಬಲವುಳ್ಳ ಬಾಹುಗಳಲ್ಲಿ (ಕೈಗಳಲ್ಲಿ) ಉತ್ತಮವಾದ ವಸ್ತುಗಳನ್ನು (ಯಜಮಾನರಿಗೆ) ಕೊಡುವುದಕ್ಕಾಗಿ ಧರಿಸಿರುವರು ಎಂದರೆ ತಮ್ಮನ್ನು ಸ್ತೋತ್ರಮಾಡುವ ಯಜಮಾನರಿಗೆ ಕೊಡಬೇಕೆಂದು ಮಂಗಳಕರವಾದ ಅನೇಕ ಉತ್ತಮ ವಸ್ತುಗಳನ್ನು ಕೈಯಲ್ಲಿ ಹಿಡಿದಿದ್ದಾರೆ. ಇಲ್ಲಿ ನರ್ಯೇಷು ಎಂಬ ಶಬ್ದಕ್ಕೆ ಭಾಷ್ಯಕಾರರು **ನರೇಭ್ಯೋ ಹಿತೇಷು** ಮನುಷ್ಯರಿಗೆ ಹಿತವಾದ ಎಂದರೆ ಮನುಷ್ಯರು ಅಪೇಕ್ಷಿಸುವ ಎಂದರ್ಥಮಾಡಿದಾರೆ. Max Muller ಪಂಡಿತನು ಇದಕ್ಕೆ manly—ಪುರುಷರಿಗೆ ಇರಬೇಕಾದ ಬಲವಾದ (ಬಾಹುಗಳು) ಎಂದರ್ಥಮಾಡಿದಾನೆ.

**ವಕ್ಷಸ್ಸು ರುಕ್ಮಾ—ಉರಃಸ್ಥಲೇಷು ರುಕ್ಮಾಃ ಸುವರ್ಣರತ್ನಾದಿನಿರ್ಮಿತಾನ್ಯಾಭರಣಾನಿ ಧಾರಯಂತಿ ।** ವಕ್ಷಃಸ್ಥಲದಲ್ಲಿ ಎಂದರೆ ಎದೆಯ ಮೇಲೆ ಸುವರ್ಣರತ್ನಾದಿಗಳಿಂದ ನಿರ್ಮಿತವಾದ ಹಾರಾದ್ಯಾಭರಣಗಳನ್ನು ಧರಿಸಿರುವರು. ಈ ವಿಷಯವು **ವಕ್ಷಃಸು ರುಕ್ಮಾ** (ಋ. ಸಂ. ೧-೬೪-೪) ಎಂಬ ಋಕ್ಕಿನಲ್ಲಿಯೂ ವರ್ಣಿತವಾಗಿದೆ. ಪ್ರಥಮಾಬಹುವಚನಾಂತವಾದ ರುಕ್ಮಾ ಎಂಬ ಶಬ್ದವು, ಮರುತ್ತುಗಳು ತಮ್ಮ ಎದೆಯ ಮೇಲೆ ಧರಿಸುವ ಸುವರ್ಣ ಹಾರಾದ್ಯಾಭರಣಗಳನ್ನು ಸೂಚಿಸುವುದಕ್ಕಾಗಿ ಉಪಯೋಗಿಸಲ್ಪಡುವುದು. ಆದುದರಿಂದಲೇ ಋ ಸಂ. ೨-೩೪-೨; ೫-೫೫-೧; ೫-೫೭-೫ ಮೊದಲಾದ ಋಕ್ಕುಗಳಲ್ಲಿ ಮರುದ್ದೇವತೆಗಳನ್ನು **ರುಕ್ಮವಕ್ಷಸಃ** (ಎದೆಯ ಮೇಲೆ ಚಿನ್ನದ ಆಭರಣಗಳನ್ನು ಧರಿಸಿರುವವರು—gold-breasted) ಎಂದು ಕರೆಯಲಾಗಿದೆ. ಆಶ್ವಲಾಯನಶ್ರೌತಸೂತ್ರದಲ್ಲಿಯೂ (ಆ. ಶ್ರೌ. ಸೂ. ೯-೪) ತೈತ್ತಿರೀಯ ಸಂಹಿತೆಯಲ್ಲಿಯೂ (ತೈ. ಸಂ. ೧-೮-೧೮-೧) **ರುಕ್ಮಂ ಹೋತ್ರೇ** ಎಂದು ಹೋತೃವೆಂಬ ಋತ್ವಿಜನಿಗೆ ಯಜ್ಞದಲ್ಲಿ ಋತ್ವಿಕ್ಸಂಭಾವನೆಗಾಗಿ ಕೊಡುವ ಸುವರ್ಣಾಭರಣವನ್ನು ನಿರ್ದೇಶಿಸಿದೆ. ಈ ಆಭರಣವು ವರ್ತುಲಾಕಾರವಾಗಿ ಇರುವುದೆಂದು ಹೇಳಲಾಗಿದೆ. ಪ್ರಾಯಶಃ ಹಾರವೆಂದು ಹೇಳುವ ಆಭರಣದಂತೆ ಇರಬಹುದು.

**ರಭಸಾಸಃ—ರಾಭಸ್ಯಯುಕ್ತಾನಿ ಕಾಂತಿಮಂತಿ ವಾ ।** ಥಳಥಳಿಸುವಂತೆ ಪ್ರಕಾಶಿಸುವ. ಈ ಶಬ್ದವು ರಭ್-ನುಗ್ಗು, ಮೇಲೆ ಬೀಳು, ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಶಬ್ದವು ಯಾವಾಗಲೂ ವೇಗದಿಂದ ಕೂಡಿದ ಬಲವನ್ನು ಪ್ರಕಾಶಪಡಿಸುವುದಾಗಿದೆ. **ರಭಸ** ಎಂಬ ಶಬ್ದವು ಮರುದ್ದೇವತೆಗಳ ವಿಷಯದಲ್ಲಿ ಮಾತ್ರವೇ ಅಲ್ಲದೆ ಅಗ್ನಿ ಮತ್ತು ಇಂದ್ರ ಇವರುಗಳ ವಿಷಯದಲ್ಲಿಯೂ ಉಪಯೋಗಿಸಿರುವುದು ಕಂಡುಬರುವುದು.

**ಪೃಶ್ನೇಃ ಪುತ್ರಾ ಉಪಮಾಸೋ ರಭಿಷ್ಠಾಃ ಸ್ವಯಾ ಮತ್ಯಾ ಮರುತಃ ಸಂ ಮಿಮಿಕ್ಷುಃ ।**

(ಋ. ಸಂ. ೫-೫೮-೫)

ಎಂಬ ಋಕ್ಕಿನಲ್ಲಿ **ರಭಿಷ್ಠಾಃ** (ಅತ್ಯಂತ ಶಕ್ತಿಯುಕ್ತರು) ಎಂಬ ಶಬ್ದವು ಮರುದ್ದೇವತೆಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ಪೃಥುಂ ತಿರಶ್ಚಾ ವಯಸಾ ಬೃಹಂತಂ ವ್ಯಚಿಷ್ಠಮನ್ನೈ ರಭಸಂ ದೃಶಾನಂ ।**

(ಋ. ಸಂ. ೨-೧೦-೪)

ಇಲ್ಲಿ **ರಭಸಂ** ಎಂಬ ಶಬ್ದವು ಅಗ್ನಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ.

**ವಿಷ್ಕಭ್ನಂತಃ ಸ್ಕಂಭನೇನಾ ಜನಿತ್ರೀ ಆಸೀನಾ ಊರ್ಧ್ವಂ ರಭಸಂ ವಿ ಮಿನ್ವನ್ ।**

(ಋ ಸಂ. ೩-೩೧-೧೨)

ಎಂಬ ಋಕ್ಕಿನಲ್ಲಿ **ರಭಸಂ** ಎಂಬ ಶಬ್ದವು ಇಂದ್ರನಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಮತ್ತು ಕೆಲವು ಸ್ಥಳಗಳಲ್ಲಿ ಈ ಶಬ್ದವು ಕ್ರೂರವಾದ, ಭಯಂಕರವಾದ, ವೇಗವಾಗಿ ನುಗ್ಗಿ ಮೇಲೆ ಬೀಳುವ, ಮುಂತಾದ ಅರ್ಥಗಳಲ್ಲಿ ಉಪಯೋಗಿಸಿರುವುದು ಕಂಡುಬರುವುದು.

**ಅಧಾ ಶಯೀತ ನಿರ್ಋತೇರುಪಸ್ಥೇಽಧೈನಂ ವೃಕಾ ರಭಸಾಸೋ ಅದ್ಯುಃ ।**

(ಋ. ಸಂ. ೧೦-೯೫-೧೪)

ಎಂಬ ಋಕ್ಕಿನಲ್ಲಿ ರಭಸಾಸಃ ಎಂಬ ಶಬ್ದವು ವೇಗದಿಂದ ಮುನ್ನುಗ್ಗುವ, ಭಯಂಕರವಾದ ಎಂಬರ್ಥದಲ್ಲಿ ವೃಕಾಃ (ತೋಳಗಳು) ಎಂಬ ಶಬ್ದಕ್ಕೆ ವಿಶೇಷಣವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ರಭಸ ಶಬ್ದವು ಥಳಥಳಿಸುವ, ಪ್ರಕಾಶಮಾನವಾದ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

**ಭದ್ರಾನ್ ಕೃಣ್ವನ್ನಿಂದ್ರಹವಾನ್ತ್ಸಖಿಭ್ಯ ಆ ಸೋಮೋ ವಸ್ತ್ರಾ ರಭಸಾನಿ ದತ್ತೇ ।**

(ಋ. ಸಂ. ೯-೯೬-೧)

ಎಂಬ ಋಕ್ಕಿನಲ್ಲಿಯೂ ಸಹ ಇದೇ ಅರ್ಥದಲ್ಲಿ ವಸ್ತ್ರಾ ಎಂಬ ಶಬ್ದಕ್ಕೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಮರುದ್ದೇವತೆಗಳ ಆಭರಣ ಮತ್ತು ಆಯುಧಗಳನ್ನು—

**ಚಿತ್ರೈರಂಜಿಭಿರ್ವಪುಷೇ ವ್ಯಂಜತೇ ವಕ್ಷಃಸು ರುಕ್ಮಾಁ ಅಧಿ ಯೇತಿರೇ ಶುಭೇ ।**
**ಅಂಸೇಷ್ವೇಷಾಂ ನಿ ಮಿಮೃಕ್ಷುರೃಷ್ಟಯಃ ಸಾಕಂ ಜಜ್ಞಿರೇ ಸ್ವಧಯಾ ದಿವೋ ನರಃ ॥**

(ಋ. ಸಂ. ೧-೬೪-೪)

**ಅಂಸೇಷು ವ ಋಷ್ಟಯಃ ಪತ್ಸು ಖಾದಯೋ ವಕ್ಷಃಸು ರುಕ್ಮಾ ಮರುತೋ ರಥೇ ಶುಭಃ ।**
**ಅಗ್ನಿಭ್ರಾಜಸೋ ವಿದ್ಯುತೋ ಗಭಸ್ತ್ಯೋಃ ಶಿಪ್ರಾಃ ಶೀರ್ಷಸು ವಿತತಾ ಹಿರಣ್ಯಯೀಃ ॥**

(ಋ ಸಂ. ೫-೫೪-೧೧)

ಎಂಬ ಋಕ್ಕುಗಳಲ್ಲಿ ವಿಶದವಾಗಿ ವಿವರಿಸಿದೆ

**ಏತಾಃ—ಶುಕ್ಲವರ್ಣಾ ಮಾಲಾಃ ।** ಬೆಳ್ಳಗಿರುವ ಮಾಲೆಗಳು ಅಥವಾ ಹಾರಗಳು ಎಂದು ಭಾಷ್ಯಕಾರರ ವಿವರಣೆಯು. ಏತಾಃ ಎಂಬ ಶಬ್ದವು ಚಿಕ್ಕೆಗಳುಳ್ಳ ಜಿಂಕೆಯೆಂಬ ಅರ್ಥವನ್ನು ಸೂಚಿಸುವುದು. ಈ ಕಾರಣದಿಂದಲೇ

ಚಿಕ್ಕಿಗಳಿಂದ ಕೂಡಿದ ಜಿಂಕೆಯ ಚರ್ಮವನ್ನು ಮರುದ್ದೇವತೆಗಳು ತಮ್ಮ ಭುಜದ ಮೇಲೆ ಧರಿಸಿರುವರೆಂದು (ಹೊದ್ದುಕೊಂಡಿರುವರೆಂದು) ಇಲ್ಲಿ ಅರ್ಥವು ಸೂಚಿತವಾಗುವುದು ಎಂದು ಪಾಶ್ಚಾತ್ಯ ಪಂಡಿತರ ಅಭಿಪ್ರಾಯವು. ಏಕೆಂದರೆ— ಆಶ್ವಲಾಯನಗೃಹ್ಯಸೂತ್ರದಲ್ಲಿಯೂ, ಇತರ ಗೃಹ್ಯಸೂತ್ರಗಳಲ್ಲಿಯೂ ಬ್ರಾಹ್ಮಣನು ಜಿಂಕೆಯ ಚರ್ಮವನ್ನು ವಸ್ತ್ರದಂತೆ (ಅಥವಾ ಅದಕ್ಕೆ ಬದಲಾಗಿ) ಧರಿಸಬೇಕೆಂದು ನಿಯಮವಿರುವುದು. ಬ್ರಹ್ಮಚಾರಿಯು ಉಪನಯನಾನಂತರ ವೇದಾಧ್ಯಯನಮಾಡುವಾಗ ಬ್ರಾಹ್ಮಣನಾಗಿದ್ದರೆ ಐಣೇಯ (ಜಿಂಕೆಯ) ಚರ್ಮವನ್ನೂ ಕ್ಷತ್ರಿಯನು ರೌರವ (ರುರು ಎಂಬ ಜಿಂಕೆ) ಎಂಬ ಜಿಂಕೆಯ ಚರ್ಮವನ್ನೂ, ವೈಶ್ಯನು ಅಜ (ಆಡು) ದ ಚರ್ಮವನ್ನೂ ಧರಿಸಬೇಕೆಂದೂ ಮತ್ತು ವಸ್ತ್ರಗಳನ್ನು ಧರಿಸುವಾಗ ಬ್ರಾಹ್ಮಣನು ಕಾಷಾಯವಸ್ತ್ರವನ್ನೂ (dark red colour) ಕ್ಷತ್ರಿಯನು ಮಾಂಜಿಷ್ಠ ವರ್ಣದ (bright red colour) ವಸ್ತ್ರವನ್ನೂ, ವೈಶ್ಯನು ಹಾರಿದ್ರವರ್ಣದ (yellow) ವಸ್ತ್ರವನ್ನೂ ಧರಿಸಬೇಕೆಂದು ನಿಯಮವಿರುವುದು. ಆದುದರಿಂದ ಜಿಂಕೆಯ ಚರ್ಮವನ್ನು ವಸ್ತ್ರಕ್ಕೆ ಬದಲಾಗಿ ಉಪಯೋಗಿಸುವುದು ರೂಢಿಯಲ್ಲಿತ್ತೆಂದು ಹೇಳಬಹುದು. ಈ ಕಾರಣಕ್ಕಾಗಿಯೇ ಪ್ರಕೃತವಾದ ಋಕ್ಕಿನಲ್ಲಿ ಋಷಿಯು-ಮರುದ್ದೇವತೆಗಳು ಭುಜಗಳಲ್ಲಿ ಜಿಂಕೆಯ ಚರ್ಮವನ್ನು ಧರಿಸಿರುವರೆಂದು ವರ್ಣಿಸಿರಬಹುದು. ವಸ್ತ್ರಾರ್ಥವಾಗಿ ಉಪಯೋಗಿಸುವ ಹದಮಾಡಿದ ಜಿಂಕೆಯ ಚರ್ಮಕ್ಕೆ ಅಜಿನವೆಂದು ಹೆಸರು. ಇದನ್ನು ಕೃಷ್ಣಾಜಿನ (ಕೆಂಪು ಜಿಂಕೆಯ ಚರ್ಮ) ವೆಂದೂ ಹೇಳುವರು. ಈ ಅಜಿನಶಬ್ದದ ಪ್ರಯೋಗವು ಋಗ್ವೇದದಲ್ಲಿಲ್ಲದಿದ್ದರೂ ಯಜುರ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ವಿಶೇಷವಾಗಿರುವುದು.

**ಕ್ಷುರಾಃ**— ಹರಿತವಾದ ಅಲಗುಗಳುಳ್ಳ ಆಯುಧಗಳು. ಕ್ಷುರಾಃ ಎಂದರೆ ಕ್ಷೌರಮಾಡುವ ಕತ್ತಿಗೂ (Razor) ಈ ಹೆಸರು. ಏಕೆಂದರೆ ಕ್ಷೌರದ ಕತ್ತಿಯು ಬಹಳ ಹರಿತವಾಗಿರಬೇಕಾಗಿರುವುದು. ಹರಿತವಾದ ಆಯುಧವನ್ನು ಕುರಿತು ಹೇಳುವಾಗ ಕ್ಷುರಾಃ ಎಂಬ ಕ್ಷೌರದ ಕತ್ತಿಯ ದೃಷ್ಟಾಂತವನ್ನು ಹೇಳುವುದು ರೂಢಿಯಲ್ಲಿರುವುದು. ಋಗ್ವೇದಕಾಲದಲ್ಲಿಯೂ ಅದಕ್ಕೆ ಪೂರ್ವದಲ್ಲಿಯೂ ಸಹ ಕತ್ತಿಯಿಂದ ಕ್ಷೌರಮಾಡುವುದು ರೂಢಿಯಲ್ಲಿದ್ದಂತೆ ಕಂಡುಬರುವುದು. ಈ ವಿಷಯದಲ್ಲಿ—

**ಯದಾ ತೇ ವಾತೋ ಅನುವಾತಿ ಶೋಚಿರ್ವಪ್ತೇವ ಶ್ಮಶ್ರು ವಪಸಿ ಪ್ರ ಭೂಮ ।**

(ಋ. ಸಂ. ೧೦-೧೪೨-೪)

**ಕೇಶಶ್ಮಶ್ರು ವಪತೇ ನಖಾನಿ ನಿಕೃಂತತೇ ಮೃತಾ ವಾ ಏಷಾ ತ್ವಗಮೇಧ್ಯಾ ಯತ್ಕೇಶಶ್ಮಶ್ರು ಮೃತಾಮೇವ ತ್ವಚಮಮೇಧ್ಯಾಮುಪಹತ್ಯ ಯಜ್ಞಿಯೋ ಭೂತ್ವಾ ಮೇಧಮುಪೈತಿ ।**

(ತೈ. ಸಂ. ೬-೧-೧-೨)

ಇತ್ಯಾದಿ ಮಂತ್ರಗಳು ಕತ್ತಿಯಿಂದ ಕ್ಷೌರಮಾಡುವುದು ರೂಢಿಯಲ್ಲಿದ್ದ ವಿಷಯವನ್ನು ಸಮರ್ಥಿಸುವವು.

**ವಯೋ ನ ಪಕ್ಷಾನ್ ವಿ ಅನು ಶ್ರಿಯೋ ಧಿರೇ**— ಇಲ್ಲಿ ಶ್ರಿಯಃ ಎಂದರೆ ಕಾಂತಿಯನ್ನು, ಸೊಬಗನ್ನು (Splendour) ಎಂದರ್ಥವು. ಪಕ್ಷಿಗಳು ಹಾರುವಾಗ ತಮ್ಮ ರೆಕ್ಕೆಗಳನ್ನು ಬಿಚ್ಚಿಹರಡುವಂತೆ ಮರುದ್ದೇವತೆಗಳು ಪ್ರಯಾಣಮಾಡುವಾಗ ಅವರ ಕಾಂತಿಯು ಸುತ್ತಲೂ ಅಥವಾ ಎಲ್ಲಾ ಕಡೆಯಲ್ಲಿಯೂ ಹರಡುವುದೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ನರ್ಯೇಷು**—ನರಾಯ ಹಿತಾಃ ನರ್ಯಾಃ, ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರ ಲೋಪ. **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರುಕ್ಮಾಃ**—ರುಚ ದೀಪ್ತೌ ಧಾತು. **ಯುಜಿ ರುಚಿತಿಜಾಂಕುಶ್ಚ** (ಉ. ಸೂ. ೧-೧೪೩) ಎಂಬುದರಿಂದ ಮಕ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿನ ಅಂತ್ಯಕ್ಕೆ ಕುತ್ವ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಭಸಾಸಃ**—ರಭ ರಾಭಸ್ಯೇ. ಧಾತು. **ಅತ್ಯಃವಿಚಮಿತ**—(ಉ. ಸೂ. ೩-೩೯೭) ಎಂಬುದರಿಂದ ಅಸಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೯೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ.

**ಅಂಜಯಃ**—ಅಂಜೂ ವ್ಯಕ್ತಿಮ್ರಕ್ಷಣಗತಿಷು. **ಖನಿಕಷ್ಯಂಜಿ**—(ಉ. ಸೂ. ೪-೫೭೯) ಎಂಬುದರಿಂದ ಇ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಏತಾಃ**—ಇಣ್ ಗತೌ ಧಾತು. **ಹಸಿ ಮೃಗ್ರಿಣ್ವಾ**—(ಉ. ಸೂ. ೩-೩೬೬) ಎಂಬುದರಿಂದ ತನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪವಿಷು**—ಪೂಞ್ ಪವನೇ. ಧಾತು. **ಅಚ ಇಃ** (ಉ. ಸೂ. ೪-೫೭೮) ಎಂಬುದರಿಂದ ಇ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅವಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕ್ಷುರಾಃ**—ಕ್ಷುರ ವಿಲೇಖನೇ. ಧಾತು. **ಋಜ್ರೇಂದ್ರಾಗ್ರ**—(ಉ. ಸೂ. ೨-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ.

**ಧಿರೇ**—ಧೃಞ್ ಧಾರಣೇ. ಧಾತು. ಛಾಂದಸವಾಗಿ ಲಿಟ್ ಬಂದಾಗ ವ್ಯತ್ಯಯದಿಂದ ವರ್ಣಲೋಪ. ಛಂದಸ್ಸಿನಲ್ಲಿ ದ್ವಿತ್ವ ವಿಕಲ್ಪವಾದುದರಿಂದ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

**ಮಹಾಂತೋ ಮಹ್ನಾ ವಿಭ್ವೋ೩ವಿಭೂತಯೋ ದೂರೇದೃಶೋ ಯೇ ದಿವ್ಯಾ ಇವ ಸ್ತೃಭಿಃ।**

**ಮಂದ್ರಾಃ ಸುಜಿಹ್ವಾಃ ಸ್ವರಿತಾರ ಆಸಭಿಃ ಸಂಮಿಶ್ಲಾ ಇಂದ್ರೇ ಮರುತಃ ಪರಿಷ್ಟುಭಃ ॥ ೧೧ ॥**

॥ ಪದಪಾಠಃ ॥

ಮಹಾಂತಃ । ಮಹ್ನಾ । ವಿಽಭ್ವಃ । ವಿಽಭೂತಯಃ । ದೂರೇಽದೃಶಃ । ಯೇ । ದಿವ್ಯಾಃಽಇವ । ಸ್ತೃಽಭಿಃ ।
ಮಂದ್ರಾಃ । ಸುಽಜಿಹ್ವಾಃ । ಸ್ವರಿತಾರಃ । ಆಸಽಭಿಃ । ಸಂಽಮಿಶ್ಲಾಃ । ಇಂದ್ರೇ । ಮರುತಃ । ಪರಿಽಸ್ತುಭಃ ॥

॥ ಸಾಯಣಭಾಷ್ಯಂ ॥

**ಯೇ ಮರುತೋ ಮಹಾಂತೋ ಮಹಾತ್ಮ್ಯೋಪೇತಾಃ । ಕೇನ । ಮಹ್ನಾ ಮಹತ್ತ್ವೇನ ಪ್ರಭಾವಾತಿಶಯೇನ । ತಥಾ ವಿಭ್ವೋ ವಿಭವೋ ವ್ಯಾಪ್ತಾಃ ತಥಾ ವಿಭೂತಯೋ ವಿವಿಧೈಶ್ವರ್ಯವಂತಃ ದೂರೇದೃಶೋ ದೂರೇ ದೃಶ್ಯಮಾನಾಃ ಪ್ರಕಾಶಮಾನಾಃ । ದೂರದರ್ಶನೇ ದೃಷ್ಟಾಂತಃ । ದಿವ್ಯಾಃ ಸ್ತೃಭಿರಿವ । ಸ್ತೃ ಇತಿ ನಕ್ಷತ್ರನಾಮ ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಂ । ನಿ. ೩–೨೦ । ಇತಿ ನಿರುಕ್ತತ್ವಾತ್ । ದಿವಿ ಭವಾ ದೇವಾಃ ಸ್ತೃಭಿಃ ಸ್ವಪುಷ್ಪಕಭೂತೈಸ್ತೇಜಃಪುಂಜೈರ್ನಕ್ಷತ್ರೈರ್ಯಥಾ ದೂರೇ ದೃಶ್ಯಮಾನಾ ಭವಂತಿ ತದ್ವತ್ । ಕಿಂಚ ಮಂದ್ರಾ ಮಾದನಾಃ ಸುಜಿಹ್ವಾಃ ಶೋಭನಜಿಹ್ವಾಃ ಆಸಭಿರಾಸ್ಯೈಃ ಸ್ವರಿತಾರಃ ಶಬ್ದಯಿತಾರಃ । ಪ್ರಿಯವಚನಾ ಇತ್ಯರ್ಥಃ । ಅತ ಏವ ಸುಜಿಹ್ವಾ ಇತ್ಯುಕ್ತಂ । ಕಿಂಚ ಇಂದ್ರೇ ಸಂಮಿಶ್ಲಾಃ ಸಮ್ಯಗ್ಮಿಶ್ರಯಿತಾರಃ । ಇಂದ್ರಸಹಾಯಿನ ಇತ್ಯರ್ಥಃ । ಮರುತೋ ಹ್ಯೇನಂ ನಾಜಹುರಿತಿ ಶ್ರುತೇಃ । ತಥಾ ಪರಿಷ್ಟುಭಃ ಪರಿತಃ ಸ್ತೋಭಯುಕ್ತಾಃ ಸ್ತುತಿಭಿರ್ಯುಕ್ತಾಃ । ಏವಂ ಮಹಾಭಾಗಾ ಯೇ ಮರುತಃ ಸಂತಿ ತೇಽಸ್ಮದ್ಯಜ್ಞಮಾಗಚ್ಛಂತೀತಿ ಶೇಷಃ ॥**

॥ ಪ್ರತಿಪದಾರ್ಥ ॥

**ಯೇ ಮರುತಃ**—ಯಾವ ಮರುದ್ದೇವತೆಗಳು । **ಮಹ್ನಾ**—ಪ್ರಭಾವಾತಿಶಯದಿಂದ । **ಮಹಾಂತಃ**—ಮಾಹಾತ್ಮ್ಯವಿಶಿಷ್ಟರೂ । **ವಿಭ್ವಃ**—ವಿಭುಗಳೂ (ವ್ಯಾಪ್ತರೂ) । **ವಿಭೂತಯಃ**—ವಿವಿಧೈಶ್ವರ್ಯವುಳ್ಳವರೂ । **ಸ್ತೃಭಿಃ**—ನಕ್ಷತ್ರಗಳಿಂದ (ಅವುಗಳ ತೇಜಸ್ಸಿನಿಂದ) । **ದಿವ್ಯಾಃ ಇವ**—ದ್ಯುಲೋಕಸ್ಥರಾದ ದೇವತೆಗಳು (ದೂರದಿಂದಲೇ ದೃಶ್ಯಮಾನರಾಗುವಂತೆ) । **ದೂರೇದೃಶಃ**—ದೂರದಿಂದಲೇ ಗೋಚರವಾಗುವವರೂ । **ಮಂದ್ರಾಃ**—ಮದಕಾರಕರೂ । **ಆಸಭಿಃ**—ಮುಖಗಳಿಂದ । **ಸ್ವರಿತಾರಃ**—ಶಬ್ದಮಾಡುವವರೂ (ಪ್ರಿಯವಚನರೂ) । (ಆದುದರಿಂದಲೇ) । **ಸುಜಿಹ್ವಾಃ**—ಒಳ್ಳೆಯ ನಾಲಿಗೆಗಳುಳ್ಳವರೂ । **(ಕಿಂಚ**—ಮತ್ತು) । **ಇಂದ್ರೇ**—ಇಂದ್ರನಲ್ಲಿ (ಇಂದ್ರನೊಡನೆ) । **ಸಂಮಿಶ್ಲಾಃ**—ಚೆನ್ನಾಗಿ ಮಿಶ್ರರಾಗುವವರೂ (ಇಂದ್ರಸಹಾಯಕರೂ) । **(ತಥಾ**—ಹಾಗೆಯೇ) । **ಪರಿಷ್ಟುಭಃ**—ಸ್ತುತಿಯುಕ್ತರೂ (ಆಗಿದ್ದಾರೋ ಅವರು ನಮ್ಮ ಯಾಗಶಾಲೆಗೆ ಆಗಮಿಸಲಿ).

॥ ಭಾವಾರ್ಥ ॥

ಈ ಮರುದ್ದೇವತೆಗಳು (ನೈಸರ್ಗಿಕವಾದ) ಮಾಹಾತ್ಮ್ಯೋಪೇತರು, ವ್ಯಾಪ್ತರು, ವಿವಿಧೈಶ್ವರ್ಯವುಳ್ಳವರು. ನಕ್ಷತ್ರಪ್ರಕಾಶದಿಂದ ದೇವತೆಗಳು ದೂರದಿಂದಲೇ ದೃಗ್ಗೋಚರವಾಗುವಂತೆ, ದೂರದಿಂದಲೇ ಪರಿದೃಶ್ಯಮಾನರು, ಸಂತೋಷಕಾರಕರು, ತಮ್ಮ ಮುಖಗಳಿಂದ (ಹಿತವಾದ) ಶಬ್ದಮಾಡುವವರು, ಸುಜಿಹ್ವರು, ಇಂದ್ರನಿಗೆ ಸಹಾಯಕರು ಮತ್ತು ಸರ್ವತ್ರ ಸ್ತುತರು. ಇಂಥವರು ನಮ್ಮ ಯಾಗಶಾಲೆಗೆ ಆಗಮಿಸುತ್ತಾರೆ.

## English Translation.

Maruts, mighty with mighty power, all-pervading, manifest afar off, as the gods (are made manifest) by the constellations; exhilarating, soft-tongued, speaking gently with your mouths, associated with Indra, glorified by praise; (come to our sacrifice).

॥ ವಿಶೇಷವಿಷಯಗಳು ॥

**ವಿಭೂತಯಃ—ವಿವಿಧೈಶ್ವರ್ಯವಂತಃ ।** ನಾನಾವಿಧವಾದ ಐಶ್ವರ್ಯವುಳ್ಳವರು. ಕೆಲವು ಸಂದರ್ಭಗಳಲ್ಲಿ ಈ ಶಬ್ದಕ್ಕೆ ಶಕ್ತಿಸಾಮರ್ಥ್ಯಗಳೆಂದು ಅರ್ಥವಾಗುವುದು. ಈ ಶಬ್ದದ ಪ್ರಯೋಗವು ಸಾಧಾರಣವಾಗಿ ಪ್ರಥಮಾ ವಿಭಕ್ತಿಯಲ್ಲಿದ್ದು ಕರ್ತೃವಾಚಕವಾಗಿದ್ದರೂ ಅನೇಕ ಸಂದರ್ಭಗಳಲ್ಲಿ ವಿಶೇಷಣ ಪದವಾಗಿ ಉಪಯೋಗಿಸಲ್ಪಡುವುದು.

**ಏವಾ ಹಿ ತೇ ವಿಭೂತಯ ಊತಯ ಇಂದ್ರ ಮಾವತೇ ।**

(ಋ. ಸಂ. ೧-೮-೯)

ಇಲ್ಲಿ—ಎಲೈ ಇಂದ್ರನೇ, ನಿನ್ನ ಶಕ್ತಿಸಾಮರ್ಥ್ಯಗಳು ನನ್ನಂತಹ ಯಜ್ಞಮಾಡುವವನಿಗೆ ರಕ್ಷಣೆಯನ್ನುಂಟುಮಾಡುತ್ತವೆ—ಎಂದು ವಿಶೇಷ್ಯಪದವಾಗಿ ಪ್ರಯುಕ್ತವಾಗಿದೆ.

**ಸ್ತೋತ್ರಂ ರಾಧಾನಾಂ ಪತೇ ಗಿರ್ವಾಹೋ ವೀರ ಯಸ್ಯ ತೇ । ವಿಭೂತಿರಸ್ತು ಸೂನೃತಾ ॥**

(ಋ. ಸಂ. ೧-೩೦-೫)

ಇಲ್ಲಿ—ಎಲೈ ಇಂದ್ರನೇ, ನಿನ್ನ ವಿಷಯವಾಗಿ ನಾವು ಮಾಡುವ ಸ್ತೋತ್ರವು ಬಹಳ ಶಕ್ತಿಯುಳ್ಳದ್ದಾಗಿರಲಿ—ಎಂದು ವಿಭೂತಿಶಬ್ದವು ಸೂನೃತಾ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು.

**ಮಹಾಮನೂನಂ ತವಸಂ ವಿಭೂತಿಂ ಮತ್ಸರಾಸೋ ಜರ್ಹೃಷಂತ ಪ್ರಸಾಹಂ ।**

(ಋ. ಸಂ. ೬-೧೭-೪)

ಇಲ್ಲಿ—ಮಧುರವಾದ ಸೋಮರಸಗಳು ಮಹಾತ್ಮನೂ, ಪೂರ್ಣನೂ, ಬಲಯುತನೂ, ಸಾಮರ್ಥ್ಯವುಳ್ಳವನೂ, ಸೋಲದಿರುವವನೂ ಆದ ಇಂದ್ರನನ್ನು ಸಂತೋಷಪಡಿಸಿದವು—ಎಂದು ವಿಭೂತಿಶಬ್ದವು ಇಂದ್ರನಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ.

**ಉಗ್ರಂ ನ ವೀರಂ ನಮಸೋಪ ಸೇದಿಮ ವಿಭೂತಿಮಕ್ಷಿತಾವಸುಂ ।**

(ಋ. ಸಂ. ೮-೪೯-೬)

**ಪ್ರ ವೀರಮುಗ್ರಂ ವಿವಿಚಿಂ ಧನಸ್ಪೃತಂ ವಿಭೂತಿಂ ರಾಧಸೋ ಮಹಃ ।**

(ಋ. ಸಂ. ೮-೫೦-೬)

ಈ ಋಕ್ಕುಗಳಲ್ಲಿಯೂ ವಿಭೂತಿಶಬ್ದವು ಶಕ್ತಿಯುಳ್ಳ ಎಂದು ವಿಶೇಷಣಪದವಾಗಿಯೇ ಉಪಯೋಗಿಸಲ್ಪಟ್ಟಿರುವುದು.

**ಸ್ತೃಭಿಃ**—**ಸ್ತೃ ಇತಿ ನಕ್ಷತ್ರನಾಮ । ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಂ** (ನಿ. ೩–೨೦) ಸ್ತೃಭಿಃ ಎಂದರೆ ನಕ್ಷತ್ರವೆಂದು ಯಾಸ್ಕರು ಹೇಳಿರುವರು. ಆದುದರಿಂದ **ದೂರೇದೃಶೋ ಯೇ ದಿವ್ಯಾ ಇವ ಸ್ತೃಭಿಃ** ಎಂಬ ವಾಕ್ಯಕ್ಕೆ ಆಕಾಶದಲ್ಲಿ ಮಿನುಗುವ ನಕ್ಷತ್ರದಂತೆ. ಬಹುದೂರಪ್ರದೇಶದಿಂದಲೂ ಕಾಣಲ್ಪಡುವವರು ; ಆಕಾಶದಲ್ಲಿರುವ ನಕ್ಷತ್ರವು ಬಹುದೂರದಲ್ಲಿದ್ದರೂ ಅವು ನಮಗೆ ಕಾಣಿಸುವಂತೆ ಮರುದ್ದೇವತೆಗಳು ಬಹುದೂರದಲ್ಲಿದ್ದರೂ ನಮಗೆ ಕಾಣಿಸುವರೆಂದಭಿಪ್ರಾಯವು.

**ಸಂಮಿಶ್ಲಾಃ ಇಂದ್ರೇ ಮರುತಃ**—ಇಂದ್ರನಲ್ಲಿ ಮಿಶ್ರಿತರಾಗಿ ಇರುವವರು ಎಂದರೆ ಇಂದ್ರನ ಜತೆಯಲ್ಲಿ ಇರುವವರು. ಇಂದ್ರನ ಸಹಾಯಕರು ಎಂದಭಿಪ್ರಾಯವು. ಮರುದ್ದೇವತೆಗಳು ಇಂದ್ರನ ಸ್ನೇಹಿತರೆಂದು—

**ಅಯಮಿಂದ್ರೋ ಮರುತ್ಸಖಾ ವಿ ವೃತ್ರಸ್ಯಾಭಿನಚ್ಛಿರಃ ।**

(ಋ. ಸಂ. ೮-೭೬-೨)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಹ್ನಾ**—ಮಹಿಮ್ನಾ ಎಂದು ರೂಪವಾದಾಗ ಛಾಂದಸವಾಗಿ ವರ್ಣಲೋಪ ಬರುತ್ತದೆ. ಅಥವಾ ಮಹ ಪೂಜಾಯಾಂ ಧಾತು. ಇದಕ್ಕೆ ಔಣಾದಿಕ ಕನಿ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನದಲ್ಲಿ **ಅಲ್ಲೋಪೋಽನಃ** ಎಂಬುದರಿಂದ ಅಕಾರಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಭ್ವಃ**—ವಿಭು+ಜಸ್ ಎಂದಿರುವಾಗ **ಜಸಾದಿಷು ಛಂದಸಿ ವಾ ವಚನಂ** ಎಂಬ ವಚನದಿಂದ ಗುಣಾದಿಗಳು ಬರುವುದಿಲ್ಲ. ಯಣಾದೇಶ. **ಉದಾತ್ತ ಸ್ವರಿತಯೋರ್ಯಣಃ** (ಪಾ ಸೂ. ೮-೨-೪) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ವಿಭೂತಯಃ**—ಭೂ ಸತ್ತಾಯಾಂ ಧಾತು. ಕ್ತಿನ್ ಪ್ರತ್ಯಯ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ

**ದೂರೇದೃಶಃ**—ದೃಶಿರ್ ಪ್ರೇಕ್ಷಣೇ. ಧಾತು. ಕ್ವಿಪ್ ಪ್ರತ್ಯಯ. **ತತ್ಪುರುಷೇ ಕೃತಿ ಬಹುಲಂ** ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಸಪ್ತಮಿಗೆ ಅಲುಕ್. ಪ್ರಥಮಾ ಬಹುವಚನಾಂತರೂಪ.

**ದಿವ್ಯಾಃ**—ದಿವಿ ಭವಾಃ ದಿವ್ಯಾಃ. **ಭವೇ ಛಂದಸಿ** ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಂದ್ರಾಃ**—ಮದಿ ಸ್ತುತೌ ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨–೧೭೦) ಎಂಬುದರಿಂದ ರಕ್ ಪ್ರತ್ಯಯ. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸುಜಿಹ್ವಾಃ**—ಶೋಭನಾಃ ಜಿಹ್ವಾಃ ಯೇಷಾಂ ತೇ. ಸುಜಿಹ್ವಾಃ. **ನಞ್ ಸುಭ್ಯಾಂ** (ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಸ್ವರಿತಾರಃ**—ಸ್ವೃ ಶಬ್ದೋಪತಾಪಯೋಃ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಸ್ವರತಿ ಸೂತಿ**—(ಪಾ. ಸೂ. ೭-೨-೪೪) ಎಂಬುದರಿಂದ ವಿಕಲ್ಪ. ಇಡಾಗಮ ವಿಧಾನ ಮಾಡಿರುವುದರಿಂದ ಇದಕ್ಕೆ ಇಡಾಗಮ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ, ರಪರವಾಗಿ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಆಸಭಿಃ**—ಆಸ್ಯ ಶಬ್ದಕ್ಕೆ ಭಿಸ್ ಪರವಾದಾಗ **ಪದ್ದನ್ನೋಮಾ**—(ಪಾ. ಸೂ. ೬-೧-೬೩) ಎಂಬುದರಿಂದ ಆಸನ್ ಆದೇಶ. ಪದಸಂಜ್ಞಾ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂಬುದರಿಂದ ನಲೋಪ. ॥ ೧೧ ॥



॥ ಸಂಹಿತಾಪಾಠಃ ॥

ತದ್ವಃ ಸುಜಾತಾ ಮರುತೋ ಮಹಿತ್ವನಂ ದೀರ್ಘಂ ವೋ ದಾತ್ರಮದಿತೇರಿವ ವ್ರತಂ ।
ಇಂದ್ರಶ್ಚನ ತ್ಯಜಸಾ ವಿ ಹ್ರುಣಾತಿ ತಜ್ಜನಾಯ ಯಸ್ಮೈ ಸುಕೃತೇ ಅರಾಧ್ವಂ ॥ ೧೨ ॥

॥ ಪದಪಾಠಃ ॥

ತತ್ । ವಃ । ಸುಽಜಾತಾಃ । ಮರುತಃ । ಮಹಿಽತ್ವನಂ । ದೀರ್ಘಂ । ವಃ । ದಾತ್ರಂ । ಅದಿತೇಃಽಇವ । ವ್ರತಂ ।
ಇಂದ್ರಃ । ಚನ । ತ್ಯಜಸಾ । ವಿ । ಹ್ರುಣಾತಿ । ತತ್ । ಜನಾಯ । ಯಸ್ಮೈ । ಸುಽಕೃತೇ । ಅರಾಧ್ವಂ ॥೧೨॥

॥ ಸಾಯಣಭಾಷ್ಯಂ ॥

ಹೇ ಸುಜಾತಾಃ ಶೋಭನಜನನಾ ಹೇ ಮರುತಃ ವೋ ಯುಷ್ಮದೀಯಂ ಮಹಿತ್ವನಂ ಮಹತ್ತ್ವಂ ತತ್ ತಾದೃಕ್ ಖಲು । ತದಿತ್ಯುಕ್ತಂ ಕಿಮಿತ್ಯಾಹ । ವೋ ಯುಷ್ಮಾಕಂ ದಾತ್ರಂ ದಾನಂ ವೃಷ್ಟ್ಯಾದಿರೂಪಂ ದೀರ್ಘಮತ್ಯಾಯತಮವಿಚ್ಛಿನ್ನಂ । ಪ್ರಕೃಷ್ಟೋಪಕಾರೀತ್ಯರ್ಥಃ । ದೀರ್ಘತ್ವೇ ದೃಷ್ಟಾಂತಃ । ಅದಿತೇರ್ವ್ರತಮಿವ । ಅದೀನಾಯಾ ದೇವಮಾತುರ್ಭೂಮ್ಯಾ ವಾ । ವ್ರತಮಿತಿ ಕರ್ಮನಾಮ । ತದ್ಯಥಾ ದೀರ್ಘಮತಿವಿಸ್ತೃತಂ ತದ್ವತ್ । ಅದಿತಿರ್ದ್ಯೌರದಿತಿರಂತರಿಕ್ಷಂ । ಋ. ೧-೮೯-೧೦ । ಇತ್ಯಾದಿಮಂತ್ರವರ್ಣಾತ್ । ಕಿಂಚ ಹೇ ಮರುತಃ ಯೂಯಂ ಯಸ್ಮೈ ಸುಕೃತೇ ಶೋಭನಯಾಗಾದಿಕರ್ತ್ರೇ ಯಜಮಾನಾಯ ಯದಭಿಮತಂ ಧನಮರಾಧ್ವಂ ತದಿಂದ್ರಶ್ಚೇಂದ್ರೋಽಪಿ ತ್ಯಜಸಾ ತ್ಯಾಗೇನ ನ ವಿ ಹ್ರುಣಾತಿ ।

**ನ ವಿಹ್ವರತಿ । ಕೌಟಿಲ್ಯಂ ನ ಕರೋತಿ ॥ ಚನೇತ್ಯಯಂ ಯದ್ಯಪಿ ನಿಪಾತದ್ವಯಸಮುದಾಯರೂಪ ಏಕೋ ನಿಪಾತಃ ತಥಾಪ್ಯವಯವವಿಭಾಗೇನ ಚಶಬ್ದಃ ಸಮುಚ್ಚಯೇ ನಶಬ್ದೋ ನಿಷೇಧೇಽಧಿಗಂತವ್ಯಃ ॥ ಯುಷ್ಮದ್ದನಾದಿತ್ಯಾಗಮಿಂದ್ರತ್ಯಾಗೋಽಪಿ ನಾತಿಕ್ರಾಮತೀತ್ಯರ್ಥಃ । ಯದ್ವಾ । ಯಸ್ಮೈ ತದ್ಧನಮರಾಧ್ವಂ ತಮಿಂದ್ರೋಽಪಿ ನ ಕುಟಿಲಯತಿ । ನ ನಿಷೇಧಯತಿ ಕಿಂತ್ವನುಮೋದಯತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಹೇ) ಸುಜಾತಾಃ ಮರುತಃ**—ಶುಭಜನನರಾದ ಎಲೈ ಮರುದ್ದೇವತೆಗಳೇ । **ವಃ**—ನಿಮ್ಮ । **ಮಹಿತ್ವನಂ**—ಮಾಹಾತ್ಮ್ಯೆಯು । **ತತ್**—ಅಂತಹುದಷ್ಟೇ । **ವಃ**—ನಿಮ್ಮ । **ದಾತ್ರಂ**—ವೃಷ್ಟ್ಯಾದಿರೂಪದಾನವು । **ಅದಿತೇಃ**—ದೇವಮಾತೆಯಾದ ಅದಿತಿಯ ಅಥವಾ ಭೂಮಿಯ । **ವ್ರತಂ ಇವ**—ಕರ್ಮದಂತೆ । **ದೀರ್ಘಂ**—ಅತ್ಯಂತ ವಿಸ್ತೃತವಾದುದು (ಅವಿಚ್ಛಿನ್ನವಾದುದು) । **(ಕಿಂಚ**—ಮತ್ತು) । **ಯಸ್ಮೈ**—ಯಾವ । **ಸುಕೃತೇ ಜನಾಯ**—ಯಾಗಾದಿ ಶುಭಕರ್ಮ ಕರ್ತೃವಾದ ಯಜಮಾನನಿಗೆ । **ಅರಾಧ್ವಂ**—(ಅಭಿಮತವಾದ ಧನಾದಿಗಳನ್ನು ನೀವು) ಕೊಡುತ್ತೀರೋ । **ತತ್**—ಆ ತ್ಯಾಗವನ್ನು । **ಇಂದ್ರಃ ಚ**—ಇಂದ್ರನೂಕೂಡ । **ತ್ಯಜಸಾ**—(ತನ್ನ) ತ್ಯಾಗದಿಂದ । **ನ ವಿ ಹ್ರುಣಾತಿ**—ಕುಟಿಲವನ್ನಾಗಿ ಮಾಡುವುದಿಲ್ಲ (ಅತಿಕ್ರಮಿಸುವುದಿಲ್ಲ) । **ತತ್**—ಅವನನ್ನು । **ಇಂದ್ರಃ ಚ**—ಇಂದ್ರನೂ ಕೂಡ । **ನ ವಿ ಹ್ರುಣಾತಿ**—ಕುಟಿಲನನ್ನಾಗಿ ಮಾಡುವುದಿಲ್ಲ (ನಿಷೇಧಿಸುವುದಿಲ್ಲ. ಆದರೆ ಅನುಮೋದಿಸುತ್ತಾನೆ).

॥ ಭಾವಾರ್ಥ ॥

ಎಲೈ ಶೋಭನಜನನರಾದ ಮರುದ್ದೇವತೆಗಳೇ, ನಿಮ್ಮ ವೃಷ್ಟ್ಯಾದಿರೂಪದಾನವು(ಅದಿತಿಯ) ಭೂದೇವಿಯ ಕರ್ಮದಷ್ಟು ಅವಿಚ್ಛಿನ್ನವಾದುದು. ಮತ್ತು ಯಾಗಾದಿ ಶುಭಕರ್ಮಕರ್ತೃವಿಗೆ ನೀವು ಅನುಗ್ರಹಿಸುವ ಧನಾದಿ ದಾನವು ಇಂದ್ರನಿಂದಲೂ ಅತಿಕ್ರಮಿಸಲಸಾಧ್ಯವಾದುದು. (ಇಂದ್ರನಿಂದಲೂ ಅನುಮೋದಿತವಾದುದು); ಎಲೈ ಮರುದ್ದೇವತೆಗಳೇ, ನಿಮ್ಮ ಮಾಹಾತ್ಮ್ಯೆಯು ಇಂತಹುದು.

English Translation.

Such, well-born Maruts, is your greatness, that your munificence is as long (continued) as the function of Aditi; and Indra does not exceed by his own liberality, (the value of) that which you have bestowed upon the devout man (who worships you).

॥ ವಿಶೇಷವಿಷಯಗಳು ॥

**ವ್ರತಂ**—ವ್ರತಂ ಎಂಬ ಶಬ್ದವು ಕರ್ಮನಾಮಗಳಲ್ಲಿ ಉಕ್ತವಾಗಿದೆ (ನಿ. ೩-೧) ಈ ಶಬ್ದಾರ್ಥವನ್ನು ಯಾಸ್ಕರು ವಿಶದವಾಗಿ ವಿವರಿಸುತ್ತಾ—

**ವ್ರತಮಿತಿ ಕರ್ಮನಾಮ ವೃಣೋತೀತಿ ಸತಃ ।**
**ಇದಮಪೀತರತ್ ವ್ರತಮೇತಸ್ಮಾದೇವ ನಿವೃತ್ತಿಕರ್ಮ ವಾರಯತೀತಿ ಸತಃ ।**
**ಅನ್ನಮಪಿ ವ್ರತಮುಚ್ಯತೇ ಯದಾವೃಣೋತಿ ಶರೀರಂ ।**

(ನಿ. ೨-೧೩)

ಎಂದು ವ್ರತಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಹೇಳಿರುವರು. ಎಂದರೆ ಪುರುಷನು ಮಾಡುವ ಶುಭ ಅಥವಾ ಅಶುಭಕರ್ಮವು ಇವನನ್ನು ವ್ಯಾಪಿಸುವುದರಿಂದ ಕರ್ಮಕ್ಕೆ ವ್ರತವೆಂದು ಹೆಸರು ; ಅಥವಾ ಈ ಕರ್ಮವು ನಿವೃತ್ತಿ ಕರ್ಮವಾಗಿಯೂ ಆಗಿರಬಹುದು ಎಂದರೆ ತನಗೆ ಬೇಡದ ಅಥವಾ ಶಾಸ್ತ್ರನಿಷಿದ್ಧವಾದ ಕರ್ಮವನ್ನು ತಡೆಯುವುದರಿಂದ ಎಂದರೆ ನಿವಾರಣೆಮಾಡುವುದರಿಂದ ಇದಕ್ಕೆ ವ್ರತವೆಂದು ಹೆಸರು ; ಮತ್ತು ಶರೀರವನ್ನು ವ್ಯಾಪಿಸುವುದರಿಂದ ಅನ್ನಕ್ಕೂ ವ್ರತವೆಂದು ಹೆಸರು ಎಂದು ವಿವರಿಸಿರುವರು.

(೧) ವ್ರತಶಬ್ದವು ನಿವಾರಿಸು, ತಡೆಗಟ್ಟು ರಕ್ಷಿಸು ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದು—

**ಯೋಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾ ನೋ ದೇವೀಃ ಸುಹವಾಃ ಶರ್ಮ ಯಚ್ಛತ ।**

(ಋ. ಸಂ. ೫-೪೬-೭)

ಎಂಬ ಋಕ್ಕಿನಲ್ಲಿರುವ ವ್ರತೇ ಎಂಬ ಶಬ್ದಕ್ಕೆ ವೃಜಿನ ಎಂದರೆ ಕೇಡಕನ್ನೂ **ನಿವಾರಿಸಿ** ಮಾಡುವ ರಕ್ಷಣೆ (protection) ಎಂದಭಿಪ್ರಾಯವು— ಭೂಮಿಯಲ್ಲಿ ಇರುವ ದೇವತೆಯರೂ, ನೀರಿನಲ್ಲಿ ಇರುವ ದೇವತೆಯರೂ ನಮ್ಮನ್ನು ಕಷ್ಟದಿಂದ ಬಿಡಿಸಿ ನಮಗೆ ರಕ್ಷಣೆಯನ್ನೂ ಸುಖವನ್ನೂ ಉಂಟುಮಾಡಲಿ ಎಂದು ಪ್ರಾರ್ಥಿಸಿದೆ. ಇಲ್ಲಿ ವ್ರತೇ ಎಂದರೆ ಕಷ್ಟದಿಂದ ಬಿಡಿಸಿ ಮಾಡುವ ಸಂರಕ್ಷಣೆ ಎಂದರ್ಥವು.

**ತಾಸಾಂ ನಿ ಚಿಕ್ಯುಃ ಕವಯೋ ನಿದಾನಂ ಪರೇಷು ಯಾ ಗುಹ್ಯೇಷು ವ್ರತೇಷು ।**

(ಋ. ಸಂ. ೧೦-೧೧೪-೨)

ಕವಿಗಳು (ನಿರ್ಋತಿಗಳು) ಯಾರಿಗೂ ಕಾಣದಂತೆ ಗುಹೆಗಳಲ್ಲಿ ಮುಚ್ಚಿಡಲ್ಪಟ್ಟಿರುವುದನ್ನು ಕಂಡುಹಿಡಿದರು—ಇಲ್ಲಿ ವ್ರತೇಷು ಎಂದರೆ ಮುಚ್ಚಿಡಲ್ಪಟ್ಟಿದ್ದ ಎಂಬ ಅರ್ಥದಿಂದ ಗುಹ್ಯೇಷು ಎಂಬ ಶಬ್ದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ

**ದದೃಶ್ರ ಏಷಾಮವಮಾ ಸದಾಂಸಿ ಪರೇಷು ಯಾ ಗುಹ್ಯೇಷು ವ್ರತೇಷು ।**

(ಋ. ಸಂ. ೩-೫೪-೫)

**ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।**

(ಋ. ಸಂ. ೧-೧೬೩-೩)

ಇಲ್ಲಿಯೂ ಸಹ ವ್ರತೇನ ಎಂಬ ಶಬ್ದವು ಮುಚ್ಚಿಡಲ್ಪಟ್ಟ ಎಂಬ ಅರ್ಥದಲ್ಲಿಯೇ ಪ್ರಯುಕ್ತವಾಗಿರುವುದು.

(೨) ವ್ರತವೆಂದರೆ ಇಂತಹ ಕೆಲಸವನ್ನು ಮಾಡಬಾರದು ಎಂದು **ನಿಷೇಧವಿಧಿಯನ್ನೂ** ಅಥವಾ ಇಂತಹ ಕೆಲಸವನ್ನೇ ಮಾಡಬೇಕು ಎಂಬ **ಧರ್ಮನಿಯಮವನ್ನೂ** (law or ordinance) ಸೂಚಿಸುವುದು—

**ಯಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಂ । ಮಿನೀಮಸಿ ದ್ಯವಿದ್ಯವಿ ॥**

(ಋ. ಸಂ. ೧-೨೫-೧)

ಎಲೈ ವರುಣನೇ, ನಾವು ಮನುಷ್ಯಮಾತ್ರದವರಾದ್ದರಿಂದ ನಿನ್ನ ಯಾವ **ನಿಯಮಗಳನ್ನು** ಉಲ್ಲಂಘಿಸುತ್ತೇವೆಯೋ (ಅದನ್ನು ಗಮನಿಸದೆ ಕರ್ಮವನ್ನು ಪೂರ್ಣಮಾಡು)

**ಯ ಉ ಶ್ರಿಯಾ ದಮೇಷ್ವಾ ದೋಷೋಷಸಿ ಪ್ರಶಸ್ಯತೇ । ಯಸ್ಯ ವ್ರತಂ ನ ಮೀಯತೇ ।**

(ಋ. ಸಂ. ೨-೮-೩)

ಯಾವ(ಅಗ್ನಿಯ) ನಿಯಮವು ಉಲ್ಲಂಘಿಸಲ್ಪಡುವುದಿಲ್ಲವೋ........... ।

**ಇಂದ್ರಸ್ಯ ಕರ್ಮ ಸುಕೃತಾ ಪುರೂಣಿ ವ್ರತಾನಿ ದೇವಾ ನ ಮಿನಂತಿ ವಿಶ್ವೇ ।**

(ಋ. ಸಂ. ೩-೩೨-೮)

ಇಂದ್ರನ ಸಾಹಸಕೃತ್ಯಗಳು ಬಹಳವಾಗಿರುವವು ಮತ್ತು ಚೆನ್ನಾಗಿ ಮಾಡಲ್ಪಟ್ಟಿರುವವು. ದೇವತೆಗಳು ಅಂತಹ ಇಂದ್ರನ ವಿಧಿನಿಯಮಗಳನ್ನು ಮುರಿಯುವುದಿಲ್ಲ (ಅತಿಕ್ರಮಿಸುವುದಿಲ್ಲ).

**ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರ ಮಿನಂತಿ ವ್ರತಂ ವಾಂ ।**

(ಋ ಸಂ. ೨-೨೪-೧೨)

ಎಲೈ ಬಲಶಾಲಿಗಳಾದ ದೇವತೆಗಳೇ, ನಿಮ್ಮದೆಲ್ಲವೂ ಸತ್ಯವು ನೀರುಗಳೂ ಸಹ ನಿಮ್ಮ ವಿಧಿನಿಯಮಗಳನ್ನು ಮೀರುವುದಿಲ್ಲ.

**ವನಾನಿ ವಿಭ್ಯೋ ನಕಿರಸ್ಯ ತಾನಿ ವ್ರತಾ ದೇವಸ್ಯ ಸವಿತುರ್ಮಿನಂತಿ ।**

(ಋ. ಸಂ. ೨-೩೮-೭)

ಈ ಸವಿತೃದೇವನ ನಿಯಮಗಳನ್ನು ಯಾರೂ ಉಲ್ಲಂಘಿಸುವುದಿಲ್ಲ.

**ಅಮಿನತೀ ದೈವ್ಯಾನಿ ವ್ರತಾನಿ ಸೂರ್ಯಸ್ಯ ಚೇತಿ ರಶ್ಮಿಭಿರ್ದೃಶಾನಾ ।**

(ಋ. ಸಂ. ೧-೯೨-೧೨)

**ಅಮಿನತೀ ದೈವ್ಯಾನಿ ವ್ರತಾನಿ ಪ್ರಮಿನತೀ ಮನುಷ್ಯಾ ಯುಗಾನಿ ।**

(ಋ. ಸಂ. ೧-೧೨೪-೨)

ಈ ಉಷೋ ದೇವಿಯು ದೇವತೆಗಳ ವಿಧಿನಿಯಮಗಳನ್ನು ಮೀರುವುದಿಲ್ಲ.

**ಕಿಂ ಸ್ವಿನ್ನೋ ರಾಜಾ ಜಗೃಹೇ ಕದಸ್ಯಾತಿ ವ್ರತಂ ಚಕೃಮಾ ಕೋ ವಿ ವೇದ ।**

(ಋ. ಸಂ. ೧೦-೧೨-೫)

(ಈ ಅಗ್ನಿಯ) ಯಾವ ನಿಯಮವನ್ನು ನಾವು ಉಲ್ಲಂಘಿಸುವೆವು ?

**ಅಯಮೇಕ ಇತ್ಥಾ ಪುರೂರು ಚಷ್ಟೇ ವಿ ವಿಶ್ಪತಿಃ । ತಸ್ಯ ವ್ರತಾನ್ಯನು ವಶ್ಚರಾಮಸಿ ।**

(ಋ. ಸಂ. ೮-೨೫-೧೬)

ಅವನ ನಿಯಮಗಳನ್ನು ನಾವು ಅನುಸರಿಸುವೆವು (ಪಾಲಿಸುವೆವು). ಇತ್ಯಾದಿ ಋಕ್ಕುಗಳಲ್ಲಿಯೂ ಮತ್ತು ಋ. ಸಂ. ೧೦-೩೩-೯ ; ೭-೫-೪ ; ೭-೮೭-೭ ; ೨-೨೮-೮ ; ಎಂಬ ಋಕ್ಕುಗಳಲ್ಲಿಯೂ ವ್ರತಶಬ್ದವು ವಿಧಿನಿಯಮುಗಳೆಂಬ ಅರ್ಥವನ್ನು ಸೂಚಿಸುವುದು. ಮತ್ತು ಋ. ಸಂ. ೨-೩೮-೩ ; ೨-೩೮-೬ ; ೮-೪೦-೮ ; ೧-೧೩೬-೫ ; ೩-೬೧-೧ ; ೪-೧೩-೨ ; ೫-೬೯-೧ ಇತ್ಯಾದಿ ಋಕ್ಕುಗಳಲ್ಲಿರುವ **ಅನುವ್ರತಂ** ಎಂಬ ಶಬ್ದವು ವಿಧಿನಿಯಮುಗಳಿಗನುಸಾರವಾಗಿ ಎಂಬರ್ಥವನ್ನು ಸೂಚಿಸುವುದು.

(೩) ದೇವತೆಗಳ ವಿಧಿನಿಯಮುಗಳು ಕೆಲವು ಸಂದರ್ಭಗಳಲ್ಲಿ ಯಜ್ಞ ಅಥವಾ ಯಜ್ಞಕರ್ಮಗಳೆಂಬ ಅರ್ಥದಲ್ಲಿ ವಿವರಿಸುವಾಗ ವ್ರತಶಬ್ದವನ್ನು ಉಪಯೋಗಿಸಲಾಗಿರುವುದು ಯಜ್ಞಾದಿಕರ್ಮಗಳನ್ನು ನೆರವೇರಿಸುವುದರಿಂದ ದೇವತೆಗಳ ಇಷ್ಟವನ್ನು ಅಥವಾ ವಿಧಿನಿಯಮುಗಳನ್ನು ಪಾಲಿಸಿದಂತಾಗುವುದೆಂದು ಹೇಳಲ್ಪಡುವುದು—

**ಯೋ ಅಗ್ನೀಷೋಮಾ ಹವಿಷಾ ಸಪರ್ಯಾದ್ದೇವದ್ರೀಚಾ ಮನಸಾ ಯೋ ಘೃತೇನ ।**
**ತಸ್ಯ ವ್ರತಂ ರಕ್ಷತಂ ಪಾತಮಂಹಸೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ॥**

(ಋ. ಸಂ. ೧–೯೩-೮)

ಎಲೈ ಅಗ್ನೀಸೋಮರೇ, ಯಾವ ಪುರುಷನು (ಯಜಮಾನನು) ಅಗ್ನಿಯನ್ನೂ, ಸೋಮನನ್ನೂ ಹವಿರಾದಿದ್ರವ್ಯಗಳಿಂದ ಮನಃಪೂರ್ವಕವಾಗಿ ಆರಾಧಿಸುವನೋ ಅವನ ಯಜ್ಞವನ್ನು ಸಂರಕ್ಷಿಸಿ, ಅವನಿಗೆ ಕೇಡಾಗದಂತೆ ಕಾಪಾಡಿ.

**ತ್ವಮಗ್ನೇ ಪ್ರಥಮೋ ಅಂಗಿರಸ್ತಮಃ ಕವಿರ್ದೇವಾನಾಂ ಪರಿ ಭೂಷಸಿ ವ್ರತಂ ।**

(ಋ. ಸಂ. ೧–೩೧–೨)

ಎಲೈ ಅಗ್ನಿಯೇ, ನೀನು ಅಂಗಿರಾಋಷಿಗಳಲ್ಲಿ ಶ್ರೇಷ್ಠನೂ, ಮೊದಲನೆಯವನೂ, ಕವಿಯೂ ಆಗಿದ್ದೀಯೆ. ನೀನು ದೇವತೆಗಳ ಯಜ್ಞವನ್ನು ನೆರವೇರಿಸು.

**ತಸ್ಯ ವ್ರತಾನಿ ಭೂರಿಪೋಷಿಣೋ ವಯಮುಪ ಭೂಷೇಮ ದಮ ಆ ಸುವೃಕ್ತಿಭಿಃ ।**

(ಋ. ಸಂ. ೩–೩–೯)

ಧನಾಢ್ಯೈಶ್ವರ್ಯಯುಕ್ತರಾದ ನಾವು ಸ್ತೋತ್ರಾದಿಗಳಿಂದ ಅಗ್ನಿಯ ಯಜ್ಞಕರ್ಮಗಳನ್ನು ನಮ್ಮ ಮನೆಯಲ್ಲಿ ನೆರವೇರಿಸೋಣ. ಇತ್ಯಾದಿ ಋಕ್ಕುಗಳಲ್ಲಿಯೂ ಋ. ಸಂ. ೩-೬-೫; ೮-೪೨-೧; ೬-೧೪-೩; ೧-೨೪-೧೫ ; ೬-೫೪-೯; ೧೦-೩೬-೧೩ ; ೫-೧೮-೫; ಎಂಬ ಋಕ್ಕುಗಳಲ್ಲಿಯೂ ಇರುವ ವ್ರತ ಶಬ್ದವು ಯಜ್ಞ, ಯಜ್ಞಕರ್ಮ ಅಥವಾ ಕರ್ಮ ಎಂಬ ಯಾವುದಾದರೂ ಒಂದು ಅರ್ಥದಲ್ಲಿ ಪ್ರಯುಕ್ತವಾಗಿರುವುದು ನಾನಾಮಂತ್ರಗಳಲ್ಲಿರುವ ಶಬ್ದಗಳಿಗೆ ಅರ್ಥವು ಹೊಂದಿಕೊಳ್ಳುವಂತೆ ಹೇಳುವಾಗ ವ್ರತಶಬ್ದಕ್ಕೆ ಸಂದರ್ಭಾನುಸಾರವಾಗಿ ಯಾಸ್ಕರು ಹೇಳಿರುವ ಮೂರು ವಿಧವಾದ ಅರ್ಥಗಳಲ್ಲಿ ಯಾವುದು ಸರಿಯಾಗಿ ಹೊಂದುವುದೋ ಅದನ್ನು ಹೇಳಬೇಕು. ಇದೇ ವ್ರತಶಬ್ದದ ಮುಖ್ಯಾರ್ಥವು ಮತ್ತು ಪ್ರಯೋಗವು.

**ದಾತ್ರಂ—ದಾನಂ ।** ದಾನವು, ಕೊಡುವುದು ಎಂದರ್ಥವು. ದಾ ದಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ದಾತಾ, ದಾತ್ರಂ ಮೊದಲಾದ ಶಬ್ದಗಳಿಗೆ ಕೊಡುವವನು, ಕೊಡುವುದು ಎಂದು ಅರ್ಥವು.

**ಅಸಿ ಭಗೋ ಅಸಿ ದಾತ್ರಸ್ಯ ದಾತಾಸಿ ಮಘವಾ ಮಘವದ್ಭ್ಯ ಇಂದೋ ।**

(ಋ. ಸಂ. ೯-೯೭-೫೫)

**ಅನೇಹೋ ದಾತ್ರಮದಿತೇರನರ್ವಂ ಹುವೇ ಸ್ವರ್ವದವಧಂ ನಮಸ್ವತ್ ।**

(ಋ. ಸಂ ೧-೧೮೫-೩)

**ಯುವಂ ಹಿ ಸ್ಥೋ ರಯಿದೌ ನೋ ರಯೀಣಾಂ ದಾತ್ರಂ ರಕ್ಷೇಥೇ ಅಕವೈರದಬ್ಧಾ ।**

(ಋ ಸಂ. ೩-೫೪-೧೬)

**ಸುದಾಮನ್ತದ್ರೇಕ್ಣೋ ಅಪ್ರಮೃಷ್ಯಮೃಜಿಶ್ವನೇ ದಾತ್ರಂ ದಾಶುಷೇ ದಾಃ ।**

(ಋ. ಸಂ. ೬-೨೦-೭)

ಇತ್ಯಾದಿ ಋಕ್ಕುಗಳಲ್ಲಿಯೂ, ಋ. ಸಂ. ೭-೫೬-೨೧; ೮-೪೩-೩೩; ೧೦-೬೯-೪; ೮-೪೪-೧೮ ಮೊದಲಾದ ಋಕ್ಕುಗಳಲ್ಲಿಯೂ ಇರುವ ದಾತ್ರ ಶಬ್ದಕ್ಕೆ ದಾನವು, ಕೊಡುವುದು ಎಂದೇ ಅರ್ಥವು.

**ಅದಿತೇರಿವ**— ಅದಿತಿ ಶಬ್ದವು ಪೃಥಿವೀನಾಮಗಳಲ್ಲಿಯೂ (ನಿ. ೨-೫), ವಾಙ್ನಾಮಗಳಲ್ಲಿಯೂ (ನಿ. ೨-೨೩), ಗೋನಾಮಗಳಲ್ಲಿಯೂ (ನಿ. ೩-೯), ದ್ಯಾವಾಪೃಥಿವೀನಾಮಗಳಲ್ಲಿಯೂ (ದ್ವಿವಚನಾಂತವಾಗಿ (ನಿ. ೩-೨೨) ಪಠಿತವಾಗಿದೆ. ಇದಲ್ಲದೆ ಯಾಸ್ಕರು— **ಅದಿತಿರದೀನಾ ದೇವಮಾತಾ** (ನಿ. ೪-೨೩) ಎಂದು ಹೇಳಿರುವರು. ಈ ಶಬ್ದದ ನಿರ್ವಚನಾದಿಗಳನ್ನೂ ಅರ್ಥವಿವರಣೆಯನ್ನೂ ನಾವು ಹಿಂದೆಯೇ ವಿಸ್ತಾರವಾಗಿ ವಿವರಿಸಿದೇವೆ.

**ಚನ— ಚನೇತ್ಯಯಂ ಯದ್ಯಪಿ ನಿಪಾತದ್ವಯಸಮುದಾಯರೂಪ ಏಕೋ ನಿಪಾತಃ ತಥಾಪ್ಯವಯವವಿಭಾಗೇನ ಚಶಬ್ದಃ ಸಮುಚ್ಚಯೇ ನಶಬ್ದೋ ನಿಷೇಧೇಽಧಿಗಂತವ್ಯಃ ।** ಚನ ಎಂಬ ಶಬ್ದವು ಎರಡು ನಿಪಾತಗಳಿಂದ ಕೂಡಿದ ಒಂದೇ ಶಬ್ದವೆಂದು ಪರಿಗಣಿಸಲ್ಪಡುವುದಾದರೂ ಇದರ ಅವಯವವಿಭಾಗವನ್ನು ಮಾಡಿದರೆ ಚ ಎಂಬ ನಿಪಾತವು ಸಮುಚ್ಚಯಾರ್ಥವನ್ನೂ, ನ ಎಂಬ ನಿಪಾತವು ನಿಷೇಧಾರ್ಥವನ್ನೂ ಸೂಚಿಸುವುದು. ನಿಷೇಧಾರ್ಥವನ್ನು ಒತ್ತಿ ಹೇಳುವುದಕ್ಕಾಗಿ (not even) ಈ ಶಬ್ದದ ಪ್ರಯೋಗವು ಅನೇಕ ಋಕ್ಕುಗಳಲ್ಲಿರುವುದು.

**ಯಸ್ಮಾದೃತೇ ನ ಸಿಧ್ಯತಿ ಯಜ್ಞೋ ವಿಪಶ್ಚಿತಶ್ಚನ । ಸ ಧೀನಾಂ ಯೋಗಮಿನ್ವತಿ ॥**

(ಋ. ಸಂ. ೧-೧೮-೭)

**ನ ಪಂಚಭಿರ್ದಶಭಿರ್ವಷ್ಟ್ಯಾರಭಂ ನಾಸುನ್ವತಾ ಸಚತೇ ಪುಷ್ಯತಾ ಚನ ।**

(ಋ. ಸಂ ೫-೩೪-೫)

**ನಹಿ ತೇ ಕ್ಷತ್ರಂ ನ ಸಹೋ ನ ಮನ್ಯುಂ ವಯಶ್ಚನಾಮೀ ಪತಯಂತ ಆಪುಃ ।**

(ಋ. ಸಂ. ೧-೨೪-೬)

**ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ ಪತತ್ರಿಣಃ ॥**

( ಋ. ಸಂ. ೧-೧೫೫-೫)

**ದಿವಶ್ಚಿದಸ್ಯ ವರಿಮಾ ವಿ ಪಪ್ರಥ ಇಂದ್ರಂ ನ ಮಹ್ನಾ ಪೃಥಿವೀ ಚನ ಪ್ರತಿ ।**

(ಋ ಸಂ. ೧-೫೫-೧)

ಇತ್ಯಾದಿ ಋಕ್ಕುಗಳಲ್ಲಿ ಚನ ಶಬ್ದವು ನಿಷೇಧಾರ್ಥವನ್ನು ವಿಶೇಷರೀತಿಯಿಂದ ತಿಳಿಸುವುದು. ಇನ್ನು ಕೆಲವು ಋಕ್ಕುಗಳಲ್ಲಿ ಈ ಶಬ್ದಕ್ಕೆ ನಿಷೇಧಾರ್ಥವಿರುವುದಿಲ್ಲ.

**ಪೂರ್ವೀಶ್ಚನ ಪ್ರಸಿತಯಸ್ತರಂತಿ ತಂ ಯ ಇಂದ್ರೇ ಕರ್ಮಣಾ ಭುವತ್ ।**

(ಋ. ಸಂ. ೭-೩೨-೧೩)

**ಉಕ್ಥ್ಯಂ ಚನ ಶಸ್ಯಮಾನಮಗೋರರಿರಾ ಚಿಕೇತ । ನ ಗಾಯತ್ರಂ ಗೀಯಮಾನಂ ॥**

(ಋ ಸಂ. ೮-೨-೧೪)

**ಅಧಾ ಚನ ಶ್ರದ್ದಧತಿ ತ್ವಿಷೀಮತ ಇಂದ್ರಾಯ ವಜ್ರಂ ನಿಘನಿಘ್ನತೇ ವಧಂ ।**

(ಋ. ಸಂ. ೧-೫೫-೫)

ಇತ್ಯಾದಿ ಋಕ್ಕುಗಳಲ್ಲಿಯೂ, ಋ. ಸಂ. ೮-೭೮-೧೦; ೧-೧೫೨-೨; ೪-೧೮-೯; ೧-೧೩೯-೨; ೫-೪೧-೧೩; ೭-೧೮-೯; ೮-೯೧-೩; ೧೦-೪೯-೫; ೬-೨೬-೭ ಇತ್ಯಾದಿ ಋಕ್ಕುಗಳಲ್ಲಿ ಚನ ಶಬ್ದಕ್ಕೆ ನಿಷೇಧಾರ್ಥವಿರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಸುಜಾತಾಃ**—ಶೋಭನಂ ಜಾತಂ ಯೇಷಾಂ ತೇ ಸುಜಾತಾಃ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಹಿತ್ವನಂ**—ಭಾವಾರ್ಥದಲ್ಲಿ **ತಸ್ಯಭಾವಸ್ತ್ವತಲೌ** ಎಂಬುದರಿಂದ ತ್ವ ಪ್ರತ್ಯಯ. ಇದಕ್ಕೆ ಅಮ್ ಪರವಾದಾಗ ಛಾಂದಸವಾಗಿ ಪ್ರಕೃತಿಗೆ ನಕಾರ ಬರುತ್ತದೆ.

**ದಾತ್ರಂ**—ಡುದಾಞ್ ದಾನೇ. ಧಾತು. ಇದಕ್ಕೆ ಭಾವಾರ್ಥದಲ್ಲಿ **ದಾದಿಭ್ಯಶ್ಛಂದಸಿ** (ಉ. ಸೂ. ೪-೬೦೯) ಎಂಬುದರಿಂದ ತ್ರ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಚನ**—ಪದಕಾಲದಲ್ಲಿ ಒಂದೇ ಪದವೆಂದು ಪರಿಗಣಿತವಾದರೂ ಇದರಲ್ಲಿ ಅವಯವ ವಿಭಾಗಮಾಡಿಕೊಂಡು ಚಕಾರವು ಸಮುಚ್ಚಯದಲ್ಲಿಯೂ ನಕಾರವು ನಿಷೇಧದಲ್ಲಿಯೂ ಪ್ರಯುಕ್ತವಾಗಿದೆ ಎಂದು ತಿಳಿಯಬೇಕು.

**ತ್ಯಜಸಾ**—ತ್ಯಜ ಹಾನೌ ಧಾತು. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಹೃಣಾತಿ**—ಇದು ಸೌತ್ರ ಧಾತು. ಕೌಟಿಲ್ಯಾರ್ಥದಲ್ಲಿ ಪ್ರಯುಕ್ತವಾಗಿದೆ. ವ್ಯತ್ಯಯದಿಂದ ಶ್ನಾ ವಿಕರಣ. ಲಟ್ ಪ್ರಥಮಪುರುಷ ಏಕವಚನಾಂತ ಪ್ರಯೋಗ ತಿಙಂತನಿಘಾತಸ್ವರ ಬರುತ್ತದೆ.

**ಸುಕೃತೇ**—ಶೋಭನಂ ಕರೋತಿ ಇತಿ ಸುಕೃತ್. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಬಂದಾಗ **ಹ್ರಸ್ವಸ್ಯ ಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಅರಾಧ್ವಂ**—ರಾ ದಾನೇ. ಅದಾದಿ. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಙ್ ಮಧ್ಯಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಆದ್ಯುದಾತ್ತವಾಗುತ್ತದೆ ॥ ೧೨ ॥

॥ ಸಂಹಿತಾಪಾಠಃ ॥

ತದ್ವೋ ಜಾಮಿತ್ವಂ ಮರುತಃ ಪರೇ ಯುಗೇ ಪುರೂ ಯಚ್ಛಂಸಮಮೃತಾಸ ಆವತ ।
ಅಯಾ ಧಿಯಾ ಮನವೇ ಶ್ರುಷ್ಟಿಮಾವ್ಯಾ ಸಾಕಂ ನರೋ ದಂಸನೈರಾ ಚಿಕಿತ್ರಿರೇ ॥

॥ ಪದಪಾಠಃ ॥

ತತ್ । ವಃ । ಜಾಮಿऽತ್ವಂ । ಮರುತಃ । ಪರೇ । ಯುಗೇ । ಪುರು । ಯತ್ । ಶಂಸಂ । ಅಮೃತಾಸಃ । ಆವತ ।
ಅಯಾ । ಧಿಯಾ । ಮನವೇ । ಶ್ರುಷ್ಟಿಂ । ಆವ್ಯ । ಸಾಕಂ । ನರಃ । ದಂಸನೈಃ । ಆ । ಚಿಕಿತ್ರಿರೇ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವೋ ಜಾಮಿತ್ವಂ ಬಂಧುತ್ವಮಸ್ಮದ್ವಿಷಯಪ್ರೇಮಾಧಿಕ್ಯಂ ತತ್ ಖಲು ಪ್ರಸಿದ್ಧಮಿತ್ಯರ್ಥಃ । ಕಿಯತ್ಪರ್ಯಂತಮಿತಿ ತದುಚ್ಯತೇ । ಪರೇ ಯುಗೇ । ಯುಗಶಬ್ದಃ ಕಾಲೋಪಲಕ್ಷಕಃ । ಉತ್ಕೃಷ್ಟೇ ಮಹತಿ ಕಾಲೇಽತೀತೇಽಪಿ ವರ್ತತ ಇತಿ ಶೇಷಃ । ತತ್ಕಥಮಧಿಗತಮಿತ್ಯತ ಆಹ । ಅಮೃತಾಸೋಽಮರಣಧರ್ಮಾಣೋ ಹೇ ಮರುತಃ ಯೂಯಂ ಯದ್ಯಸ್ಮಾಚ್ಛಂಸಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಪುರು ಪ್ರಭೂತಂ ಯಥಾ ಭವತಿ ತಥಾವತ ರಕ್ಷಥ । ತಸ್ಮಾದ್ಯುಷ್ಮತ್ಕೃತಂ ಜಾಮಿತ್ವಮವಿನಾಶೀತ್ಯರ್ಥಃ । ಕಿಂಚ ಯೂಯಮಯಾ ಧಿಯಾನಯಾನುಗ್ರಹಾತ್ಮಿಕಯಾ ಬುದ್ಧ್ಯಾ ಮನವೇ ಮನುಷ್ಯಾಯ ಸ್ತೋತ್ರೇ ಯಷ್ಟ್ರೇ ವಾಸ್ಮದಾದಯೇ ಶ್ರುಷ್ಟಿಮಾವ್ಯ ಕೀರ್ತಿಂ ಸ್ತುತಿಂ ವಾ ರಕ್ಷಿತ್ವಾ ಸಾಕಂ ಸಂಭೂಯ ನರೋ ನೇತಾರಃ ಸಂತೋ ದಂಸನೈಃ ಕರ್ಮಭಿರಿತ್ಥಂಭೂತಾ ಆ ಚಿಕಿತ್ರಿರೇ । ಸರ್ವತೋ ಜಾನೀಥ ॥

॥ ಪ್ರತಿಪದಾರ್ಥ ॥

**(ಹೇ) ಅಮೃತಾಸಃ**—ಅಮರರಾದ ಎಲೈ ಮರುದ್ದೇವತೆಗಳೇ (ನೀವು) । **ಯತ್**—ಯಾವಕಾರಣ । **ಶಂಸಂ**—ಅಸ್ಮತ್ಕೃತವಾದ ಸ್ತುತಿಯನ್ನು । **ಪುರು**—ಪ್ರಭೂತವಾಗುವಂತೆ । **ಆವತ**—ರಕ್ಷಿಸುತ್ತೀರೋ । **(ಕಿಂಚ**—ಮತ್ತು) । **ಅಯಾ ಧಿಯಾ**—ಈ ಅಸ್ಮದನುಗ್ರಹರೂಪ ಬುದ್ಧಿಯಿಂದ । **ಮನವೇ**—ಸ್ತುತಿಕರ್ತೃಗಳಾದ ಅಸ್ಮದಾದಿ ಮನುಷ್ಯರಿಗೆ । **ಶ್ರುಷ್ಟಿಂ ಆವ್ಯ**—ಕೀರ್ತಿಯನ್ನು (ಸ್ತುತಿಯನ್ನು) ರಕ್ಷಿಸಿ । **ಸಾಕಂ**—(ಎಲ್ಲರೂ) ಒಟ್ಟಾಗಿ । **ನರಃ**—(ನಮಗೆ) ನೇತೃಗಳಾಗಿ । **ದಂಸನೈಃ**—(ಅಸ್ಮತ್ಕೃತವಾದ) ಯಾವ ಕರ್ಮಗಳಿಂದ । **ಆ ಚಿಕಿತ್ರಿರೇ**—ಸರ್ವತಃ ತಿಳಿಯುವವರಾಗುತ್ತೀರೋ (ತೃಪ್ತರಾಗುತ್ತೀರೋ) । **(ಹೇ) ಮರುತಃ**—(ಎಲೈ) ಮರುದ್ದೇವತೆಗಳೇ । **ತತ್**—ಅಂತಹ । **ವಃ**—ನಿಮ್ಮ । **ಜಾಮಿತ್ವಂ**—ಬಾಂಧವ್ಯವು । **ಪರೇ ಯುಗೇ**—ಬಹಳಕಾಲದವರೆಗೂ (ಇರುವಂತಹುದು).

॥ ಭಾವಾರ್ಥ ॥

ಅಮರರಾದ ಎಲೈ ಮರುದ್ದೇವತೆಗಳೇ. ನಾವು ಮಾಡುವ ಸ್ತುತಿಯನ್ನು ಹೆಚ್ಚಾಗಿ ಭಾವಿಸುತ್ತೀರಿ ಮತ್ತು ಅನುಗ್ರಹಾತ್ಮಿಕವಾದ ಬುದ್ಧಿಯಿಂದ, ಸ್ತುತಿಕರ್ತೃಗಳಾದ ನಮ್ಮಂತಹವರಿಗೆ ಕೀರ್ತಿಯನ್ನುಂಟುಮಾಡಿ, ನಮಗೆ ನಾಯಕರಾಗಿ ಕರ್ಮಗಳನ್ನೂ ಮಾಡಿಸಿ, ಅವುಗಳಿಂದ ತೃಪ್ತರಾಗುತ್ತೀರಿ; ಇಂತಹ ನಿಮ್ಮ ಬಾಂಧವ್ಯವು ಚಿರಂತನವಾದುದು.

## English Translation.

Your alliance with us, Maruts, is of a long duration: on which account, immortals, accept our ample praise; and, having accepted our laudation, be gratified, leaders (of sacrfice), by our holy acts, through this (your) favourable disposition towards mankind.

॥ ವಿಶೇಷವಿಷಯಗಳು ॥

**ಜಾಮಿತ್ವಂ**—ಜಾಮಿ ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ (ನಿ. ೨-೨೪). ಆದರೆ ಇಲ್ಲಿ ಜಾಮಿತ್ವಂ ಎಂಬ ಶಬ್ದಕ್ಕೆ ಭಾಷ್ಯಕಾರರು ಬಂಧುತ್ವವೆಂದು ಅರ್ಥಮಾಡಿರುವರು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ನ ಜಾಮಯೇ ಭಗಿನ್ಯೈ । ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ । ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ॥**

(ನಿ. ೩-೬)

ಎಂದರೆ ಜಾಮಿ ಶಬ್ದಕ್ಕೆ ಭಗಿನೀ (ಸಹೋದರಿ) ಎಂದರ್ಥವು. ಏಕೆಂದರೆ, ಈ ಸ್ತ್ರೀಯಲ್ಲಿ ಇತರರು ಎಂದರೆ ಭರ್ತೃವು ಪುತ್ರರನ್ನು ಉತ್ಪಾದನೆ ಮಾಡುವುದರಿಂದ ಜಾಮಿ ಎಂದು ಹೆಸರು. ಅಥವಾ ಜಾಮಿ ಶಬ್ದಕ್ಕೆ ಗಮನಾರ್ಥವಿರುವುದರಿಂದ ಎಂದರೆ—ಈ ಸ್ತ್ರೀಯು ತಾನು ವಿವಾಹಾನಂತರ ಹುಟ್ಟಿದ ಮನೆಯನ್ನು ಬಿಟ್ಟು, ಭರ್ತೃವಿನ ಮನೆಗೆ ಹೋಗುವವಳಾದ್ದರಿಂದ ಸಹೋದರಿಗೆ ಜಾಮಿಯೆಂದು ಹೆಸರು ಎಂದ ನಿರ್ವಚನವನ್ನು ಹೇಳಿರುವರು. ಈ ಋಕ್ಕಿನಲ್ಲಿ ಬಂಧುತ್ವವೆಂದು ಸಾಮಾನ್ಯ ಅರ್ಥವನ್ನು ಹೇಳಿರುವುದು ಸಮಂಜಸವಾಗಿದೆ.

**ಯುಗೇ**—**ಯುಗಶಬ್ದಃ ಕಾಲೋಪಲಕ್ಷಕಃ । ಉತ್ಕೃಷ್ಟೇ ಮಹತಿ ಕಾಲೇಽತೀತೇಽಪಿ ।** ಯುಗ ಶಬ್ದವು ಕಾಲವನ್ನು ಸೂಚಿಸುವುದು. ಇಲ್ಲಿ **ಪರೇ ಯುಗೇ** ಎಂದರೆ ಬಹಳಕಾಲವು ಕಳೆದರೂ ಕೂಡ ಎಂದರ್ಥವು. ಯಜಮಾನರಾದ ನಮಗೂ ಮರುದ್ದೇವತೆಗಳಿಗೂ ಇರುವ ಸಂಬಂಧವು ಅಲ್ಪಕಾಲಮಾತ್ರನಿರತಕ್ಕದ್ದಲ್ಲ. ಬಹಳ ಕಾಲದವರೆಗೂ ಇರುವುದೆಂದಭಿಪ್ರಾಯವು.

**ಶಂಸಂ**—**ಅಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ।** ನಮ್ಮಿಂದ ಮಾಡಲ್ಪಡುವ ಸ್ತೋತ್ರವನ್ನು. ಶಂಸ್ ಧಾತುವಿಗೆ ಹೇಳು ಎಂದರ್ಥವಿರುವುದರಿಂದ ಶಂಸವೆಂದರೆ ಹೇಳುವುದು ಎಂದರ್ಥವು. ಈ ಅರ್ಥವನ್ನು ಸಂದರ್ಭಾನು ಸಾರವಾಗಿ ಸ್ತೋತ್ರವೆಂದೂ, ಶಾಪ (ಬೈಯ್ಯುವುದು) ವೆಂದೂ ಅನೇಕ ಋಕ್ಕುಗಳಲ್ಲಿ ಅರ್ಥವನ್ನು ವಿವರಿಸಿದೆ.

**ಯಜಾಮ ದೇವಾನ್ ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ।**
(ಋ. ಸಂ. ೧-೨೭-೧೩)

**ಅಪಾದಹೋ ದಿವ ಆ ದಸ್ಯುಮುಚ್ಚಾ ಪ್ರ ಸುನ್ವತಃ ಸ್ತುವತಃ ಶಂಸಮಾವಃ ॥**
(ಋ. ಸಂ. ೧-೩೩-೭)

**ಆ ವೋ ರುವಣ್ಯುಮೌಶಿಜೋ ಹುವಧ್ಯೈ ಘೋಷೇವ ಶಂಸಮರ್ಜುನಸ್ಯ ನಂಶೇ ।**
(ಋ. ಸಂ. ೧-೧೨೨-೫)

ಎಂಬ ಋಕ್ಕುಗಳಲ್ಲಿ ಶಂಸ ಶಬ್ದವು ಸ್ತುತಿ, ಪ್ರಶಂಸನೆ, ಹೊಗಳುವಿಕೆ ಎಂಬರ್ಥಗಳಲ್ಲಿಯೂ,

**ಮಾ ನಃ ಶಂಸೋ ಅರರುಷೋ ಧೂರ್ತಿಃ ಪ್ರಣಙ್ಮರ್ತ್ಯಸ್ಯ ।**
(ಋ. ಸಂ. ೧-೧೮-೩)

ಇತ್ಯಾದಿ ಋಕ್ಕುಗಳಲ್ಲಿ ಶಂಸ ಶಬ್ದಕ್ಕೆ—ದೂಷಣೆ, ಕೆಟ್ಟಮಾತು, ಶಾಪ ಎಂಬರ್ಥಗಳಲ್ಲಿಯೂ ಪ್ರಯೋಗವಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಜಾಮಿತ್ವಂ**—ಜಾಮೇಃ ಭಾವಃ ಜಾಮಿತ್ವಂ. **ತಸ್ಯಭಾವಸ್ತ್ವತಲೌ** ಎಂಬುದರಿಂದ ತ್ವ ಪ್ರತ್ಯಯ.

**ಯುಗೇ**—ಯುಜಿರ್ ಯೋಗೇ. ಧಾತು. ಘಞ್ ಪ್ರತ್ಯಯ. **ಚಜೋಃ ಕುಘಿಣ್ಣ್ಯತೋಃ** (ಪಾ. ಸೂ. ೭-೩-೫೨) ಎಂಬುದರಿಂದ ಧಾತು ಜಕಾರಕ್ಕೆ ಕುತ್ವ. ಕಾಲವಿಶೇಷಾರ್ಥದಲ್ಲಿ ಉಂಛಾದಿಯಲ್ಲಿ ಪಾಠಮಾಡಿರುವುದರಿಂದ **ಉಂಛಾದೀನಾಂ ಚ** (ಪಾ. ಸೂ. ೬-೧-೧೬೦) ಅಂತೋದಾತ್ತಸ್ವರ ಬರುತ್ತದೆ. ಪಾಠಸಾಮರ್ಥ್ಯದಿಂದಲೇ ಪ್ರತ್ಯಯ ನಿಮಿತ್ತವಾಗಿ ಬರಬೇಕಾದ ಲಘೂಪಧಗುಣವು ಬರುವುದಿಲ್ಲ.

**ಅಮೃತಾಸಃ**—ನ ವಿದ್ಯತೇ ಮೃತಂ ಮರಣಂ ಯೇಷಾಂ ತೇ. **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅವತ**— ಅವ ರಕ್ಷಣೇ ಧಾತು. **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲಙ್. ಮಧ್ಯಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತ ವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಯಾ** — ಅನಯಾ ಎಂದು ರೂಪವಾದಾಗ ವ್ಯತ್ಯಯದಿಂದ ಛಂದಸ್ಸಿನಲ್ಲಿ ನಕಾರಲೋಪ.

**ಧಿಯಾ**— ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅವ್ಯ**— ಆಙ್ ಉಪಸರ್ಗ. ಅವ ರಕ್ಷಣೇ. ಧಾತು. ಇದಕ್ಕೆ ಕ್ತ್ವಾಪ್ರತ್ಯಯ ಬಂದಾಗ **ಸಮಾಸೇನಞ್ ಪೂರ್ವೇ ಕ್ತ್ವೋ ಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಅದಕ್ಕೆ ಲ್ಯಬಾದೇಶ. ಪಿತ್ತಾದುದರಿಂದ ಅನುದಾತ್ತ ವಾಗುತ್ತದೆ.

**ನರಃ**— ನೃ ನಯೇ ಧಾತು. ಕ್ವಿಪ್ ಪ್ರತ್ಯಯ. ಜಸ್ ಪರವಾದಾಗ **ಋತೋಙಿ ಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ. ರಪರವಾಗಿ ಬರುತ್ತದೆ.

**ಚಿಕಿತ್ರಿರೇ**— ಕಿತ ಜ್ಞಾನೇ ಧಾತು. **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ಲಡರ್ಥದಲ್ಲಿ ಲಿಟ್. ವ್ಯತ್ಯಯದಿಂದ ಮಧ್ಯಮಪುರುಷ ಬಹುವಚನಕ್ಕೆ ಪ್ರಥಮಪುರುಷ ಬಹುವಚನ ಪ್ರತ್ಯಯ ಬರುತ್ತದೆ. **ಲಿಟಸ್ತಝಯೋಃ**—ಎಂಬುದರಿಂದ ಅದಕ್ಕೆ ಇರೇ ಆದೇಶ. **ಬಹುಲಂ ಛಂದಸಿ** (ಪಾ. ಸೂ. ೭-೧-೮) ಎಂಬುದ ರಿಂದ ಅದಕ್ಕೆ ರುಟಾಗಮ ಟಿತ್ತಾದುದರಿಂದ ಆದ್ಯವಯವಾಗಿ ಬರುತ್ತದೆ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚುತ್ವ. ಅತಿಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೧೩ ||

॥ ಸಂಹಿತಾಪಾಠಃ ॥

**ಯೇನ ದೀರ್ಘಂ ಮರುತಃ ಶೂಶವಾಮ ಯುಷ್ಮಾಕೇನ ಪರೀಣಸಾ ತುರಾಸಃ ।**
**ಆ ಯತ್ತತನನ್ವೃಜನೇ ಜನಾಸ ಏಭಿರ್ಯಜ್ಞೇಭಿಸ್ತದಭೀಷ್ಟಿಮಶ್ಯಾಂ ॥ ೧೪ ॥**

॥ ಪದಪಾಠಃ ॥

**ಯೇನ । ದೀರ್ಘಂ । ಮರುತಃ । ಶೂಶವಾಮ । ಯುಷ್ಮಾಕೇನ । ಪರೀಣಸಾ । ತುರಾಸಃ ।**
**ಆ । ಯತ್ । ತತನನ್ । ವೃಜನೇ । ಜನಾಸಃ । ಏಭಿಃ । ಯಜ್ಞೇಭಿಃ । ತತ್ । ಅಭಿ । ಇಷ್ಟಿಂ । ಅಶ್ಯಾಂ ॥ ೧೪ ॥**

॥ ಸಾಯಣಭಾಷ್ಯಂ ॥

**ಹೇ ತುರಾಸೋ ವೇಗವಂತೋ ಮರುತಃ ಯುಷ್ಮಾಕೇನ ಯುಷ್ಮತ್ಸಂಬಂಧಿನಾ ಯೇನ ಪರೀಣಸಾ । ಯದ್ಯಪ್ಯೇತಪ್ಪಹುನಾಮಸು ಪಠಿತಂ ತಥಾಪಿ ಯದ್ಬಹು ತನ್ಮಹದಪಿ ಭವತೀತ್ಯತ್ರ ಮಹದಿತ್ಯರ್ಥೋ ಗೃಹ್ಯತೇ । ಮಹತಾ ಯುಷ್ಮದಭಿಗಮನೇನೈಷಣೇನ ವಾ ದೀರ್ಘಮಾಯತಂ ಸತ್ರಾದಿರೂಪಂ ಕರ್ಮ ಶಶಮಾಮ ಪ್ರವರ್ಧಯಾಮಃ । ಕಿಂಚ ಯದ್ಯೇನ ಚಾಭಿಗಮನೇನೈಷಣೇನ ವಾ ಜನಾಸೋ ಜನಾ ಅಸ್ಮದೀಯಾ ವೃಜನೇ ಸಂಗ್ರಾಮ ಆ ತತನನ್ ಸರ್ವತೋ ವಿಸ್ತಾರಯಂತಿ । ಸ್ವಸಾಮರ್ಥ್ಯೇನ ಸಂಗ್ರಾಮಂ ಜಯಂತೀತ್ಯರ್ಥಃ । ತದಿಷ್ಟಿಮೇಷಣಂ ಗಮನಮೇಭಿರ್ಯಜ್ಞೈರಿದಾನೀಂ ಕ್ರಿಯಮಾಣೈಃ ಸ್ತೋತ್ರಾದಿರೂಪೈಃ ಪೂಜನೈರಭ್ಯಾಭಿಮುಖ್ಯೇನಾಶ್ಯಾಂ । ವ್ಯಾಪ್ನುಯಾಂ ॥**

॥ ಪ್ರತಿಪದಾರ್ಥ ॥

**ತುರಾಸಃ**—ವೇಗಶಾಲಿಗಳಾದ । **(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಯುಷ್ಮಾಕೇನ**—ನಿಮ್ಮ ಸಂಬಂಧವಾದ । **ಯೇನ ಪರೀಣಸಾ**—ಯಾವ ಮಹತ್ತ್ವವಿಶಿಷ್ಟವಾದ (ಆಗಮನದಿಂದ) । **ದೀರ್ಘಂ**—ವಿಸ್ತೃತವಾದ (ಸತ್ರಾದಿರೂಪಕರ್ಮವನ್ನು) । **ಶಶಮಾಮ**—ಪ್ರವೃದ್ಧವನ್ನಾಗಿ ಮಾಡುತ್ತೇವೆಯೋ । (ಮತ್ತು) **ಯತ್**—ಯಾವ (ನಿಮ್ಮ ಆಗಮನದಿಂದ ಅಥವಾ ಇಚ್ಛೆಯಿಂದ) । **ಜನಾಸಃ**—(ನಮ್ಮವರಾದ) ಜನಗಳು । **ವೃಜನೇ**—ಸಂಗ್ರಾಮದಲ್ಲಿ । **ಆ ತತನನ್**—ಸರ್ವತಃ ವಿಸ್ತರಿಸುತ್ತಾರೋ (ಜಯಶೀಲರಾಗುತ್ತಾರೋ) । **ತತ್**—ಅಂತಹ । **ಇಷ್ಟಿಂ**—ನಿಮ್ಮ (ಇಚ್ಛೆಯನ್ನು) ಆಗಮನವನ್ನು । **ಏಭಿಃ ಯಜ್ಞೇಭಿಃ**—ಈ ಯಜ್ಞಗಳಿಂದ । **ಅಭಿ ಅಶ್ಯಾಂ**—ಅಭಿಮುಖವಾಗಿ ಪಡೆಯೋಣ.

॥ ಭಾವಾರ್ಥ ॥

ಶೀಘ್ರಗಾಮಿಗಳಾದ ಎಲೈ ಮರುದ್ದೇವತೆಗಳೇ, ನಿಮ್ಮ ಮಹತ್ತ್ವಪೂರಿತ ಆಗಮನದಿಂದ ನಾವು ಆಚರಿಸುತ್ತಿರುವ ಸತ್ರಾದಿರೂಪವಾದ ದೀರ್ಘ ಕರ್ಮಗಳನ್ನು ವೃದ್ಧಿಪಡಿಸುತ್ತೇವೆ; ಮತ್ತು ನಿಮ್ಮ ಆಗಮನ (ಇಚ್ಛೆಯಿಂದ) ದಿಂದಲೇ ಜನಗಳು ಯುದ್ಧದಲ್ಲಿ ಜಯಶಾಲಿಗಳಾಗುತ್ತಾರೆ; ಇಂತಹ ನಿಮ್ಮ ಆಗಮನವನ್ನು ನಾವು ಈ ಯಾಗಗಳಿಂದ ಬಯಸುತ್ತೇವೆ.

## English Translation.

Quick-moving Maruts, we augment the long (offered ceremony) upon your mighty (approach), whereby men triumph in war.—May we obtain, by these our sacrfices, your wished-for (presence).

॥ ವಿಶೇಷವಿಷಯಗಳು ॥

**ದೀರ್ಘಂ**—ಯಜ್ಞಗಳಲ್ಲಿ ಕೆಲವು ದಿನಗಳಲ್ಲಿ ಮಾಡತಕ್ಕ ಯಜ್ಞಗಳೆಂದೂ, ದೀರ್ಘಕಾಲದವರೆಗೆ ಎಂದರೆ, ಸಂವತ್ಸರಪರ್ಯಂತವಾಗಿ ಮಾಡತಕ್ಕ ಯಜ್ಞಗಳೆಂದೂ ಎರಡುವಿಧವು. ದರ್ಶಪೂರ್ಣಮಾಸ, ಸೋಮಯಾಗಗಳು, ಪಶುಬಂಧ, ವಾಜಪೇಯ, ಅಭಿಪ್ಲವಷಡಹ, ಅಪ್ತೋರ್ಯಾಮ ಮೊದಲಾದ ಯಾಗಗಳನ್ನು ಕೆಲವು ದಿವಸಗಳಲ್ಲಿ

(ಎಂದರೆ, ನಿಯಮಿತ ಸಂಖ್ಯೆಯ ದಿನಗಳಲ್ಲಿ) ಮಾಡಿ ಮುಗಿಸಬೇಕಾಗಿರುವುದು. ಸತ್ರಯಾಗವು ಒಂದು ಸಂವತ್ಸರ ಅಥವಾ ಇನ್ನು ಹೆಚ್ಚಿನ ದೀರ್ಘಕಾಲ ಮಾಡಬೇಕಾಗಿರುವುದು. ಇಲ್ಲಿ ದೀರ್ಘಂ ಎಂದರೆ, ದೀರ್ಘಕಾಲ ಮಾಡತಕ್ಕ ಸತ್ರಯಾಗವು ನಿರ್ದಿಷ್ಟವಾಗಿದೆಯೆಂದು ಭಾಷ್ಯಕಾರರ ವಿವರಣೆಯು.

**ಪರೀಣಸಾ**—ಈ ಶಬ್ದವು ಉರು ತುವಿ ಮೊದಲಾದ ಹನ್ನೆರಡು ಬಹುನಾಮಗಳಲ್ಲಿ ಪಠಿತವಾಗಿರುವುದರಿಂದ ಇದಕ್ಕೆ ಬಹಳವಾಗಿ ಎಂದರ್ಥವು (ನಿ. ೩–೧೩). ಇಲ್ಲಿ ಭಾಷ್ಯಕಾರರು—**ಯದ್ಯಪ್ಯೇತದ್ಬಹುನಾಮಸು ಪಠಿತಂ ತಥಾಪಿ ಯದ್ಬಹು ತನ್ಮಹದಪಿ ಭವತೀತ್ಯತ್ರ ಮಹದಿತ್ಯರ್ಥೋ ಗೃಹ್ಯತೇ । ಮಹತಾ ಯುಷ್ಮದಭಿಗಮನೇನೈಷಣೇನ** ಎಂದು ಹೇಳಿರುವರು. ಎಂದರೆ—ಪರೀಣಸಾ ಎಂಬ ಶಬ್ದವು ಬಹ್ವರ್ಥಕನಾಮಗಳಲ್ಲಿ ಪಠಿತವಾಗಿರುವುದು. ಬಹುವೆಂದರೆ, **ಮಹತ್**—ದೊಡ್ಡದು ಎಂದೂ ಅರ್ಥವನ್ನು ಹೇಳಬಹುದು. ಆದುದರಿಂದ ಇಲ್ಲಿ ಈ ಶಬ್ದಕ್ಕೆ ಮಹತಾ ಎಂದರೆ ಮಹತ್ತ್ವಪೂರಿತವಾದ ನಿಮ್ಮ ಆಗಮನದಿಂದ ಎಂಬರ್ಥವನ್ನು ಹೇಳಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಶೂಶವಾಮ**—ಟುಓಶ್ವಿ ಗತಿವೃದ್ಧ್ಯೋಃ ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಲಙ್ವದ್ಭಾವವಿರುವುದರಿಂದ **ನಿತ್ಯಂ ಙಿತಃ** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಲೋಪ. ವ್ಯತ್ಯಯದಿಂದ ಶಪಿಗೆ ಶ್ಲು ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಅಥವಾ ಯಙ್‌ಲುಗಂತದ ಮೇಲೆ ಹಿಂದಿನಂತೆ ಪ್ರತ್ಯಯ ಬಂದಾಗ **ವಿಭಾಷಾಶ್ವೇಃ** ಎಂಬುದರಿಂದ ಸಂಪ್ರಸಾರಣ. ದ್ವಿತ್ವ. **ಆಡುತ್ತಮಸ್ಯ ಪಿಚ್ಚ** (ಪಾ. ಸೂ. ೩-೪-೯೨) ಎಂಬುದರಿಂದ ಪ್ರತ್ಯಯಕ್ಕೆ ಆಡಾಗಮ. ಪಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಅವಾದೇಶ. **ಯದ್ವೃತ್ತಾನ್ನಿತ್ಯಂ** (ಪಾ. ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ಯುಷ್ಮಾಕೇನ**—ಯುಷ್ಮಾಕಂ ಅಯಂ ಯುಷ್ಮಾಕಃ ಸಂಬಂಧಾರ್ಥದಲ್ಲಿ ಅಣ್ ಪ್ರತ್ಯಯ. **ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ** (ಪಾ. ಸೂ. ೪-೩-೨) ಎಂಬುದರಿಂದ ಪ್ರಕೃತಿಗೆ ಯುಷ್ಮಾಕಾದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಪ್ರತ್ಯಯ ನಿಮಿತ್ತವಾಗಿ ವೃದ್ಧಿ ಬರುವುದಿಲ್ಲ. ವ್ಯತ್ಯಯದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ತುರಾಸಃ**—ಛಾಂದಸವಾಗಿ ಮತ್ವರ್ಥ ಪ್ರತ್ಯಯಕ್ಕೆ ಲುಕ್. ಜಸಿಗೆ ಅಸುಕಾಗಮ. ಆಮಂತ್ರಿತ ನಿಘಾತ ಸ್ವರ ಬರುತ್ತದೆ.

**ತತನನ್**—ತನು ವಿಸ್ತಾರೇ. ಲೇಟ್ ಪ್ರಥಮಪುರುಷ ಬಹುವಚನವಲ್ಲಿ ಝಿ ಪ್ರತ್ಯಯ. **ಝೋಂತಃ** ಎಂಬುದರಿಂದ ಅಂತಾದೇಶ. **ಇತಶ್ಚ ಲೋಪಃ ಪ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ

**ವೃಜನೇ**—ವೃಜೀ ವರ್ಜನೇ ಧಾತು. **ಕ್ಯಾಪ್ಯವೃಜಿ**—(ಉ. ಸೂ. ೨-೨೫೪) ಎಂಬುದರಿಂದ ಕ್ಯು ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮ್ಯಂತರೂಪ.

**ಜನಾಸಃ**— **ಆಜ್ಜಸೇರಸುಕ್** ಎಂಬುದರಿಂದ ಜಸಿಗೆ ಅಸುಕಾಗಮ.

**ಯಜ್ಞೇಭಿಃ**— **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪ ವಿಹಿತವಾದುದರಿಂದ ಬರುವುದಿಲ್ಲ **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ ಬರುತ್ತದೆ.

**ಇಷ್ಟಿಂ**— ಇಷ ಗತೌ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಷ್ಟುತ್ವದಿಂದ ಅದಕ್ಕೆ ಟಕಾರಾದೇಶ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಶ್ಯಾಂ**— ಅಶೂ ವ್ಯಾಪ್ತೌ. ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ **ತಸ್‌ಥಸ್‌ಥಮಿಪಾಂ**— ಪಾ. ಸೂ. (೩-೪-೧೦೧) ಎಂಬುದರಿಂದ ಮಿಪಿಗೆ ಅಮಾದೇಶ. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಯಾಸುಟಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೧೪ ||



॥ ಸಂಹಿತಾಪಾಠಃ ॥

ಏಷ ವಃ ಸ್ತೋಮೋ ಮರುತ ಇಯಂ ಗೀರ್ಮಾಂದಾರ್ಯಸ್ಯ ಮಾನ್ಯಸ್ಯ ಕಾರೋಃ।
ಏಷಾ ಯಾಸೀಷ್ಟ ತನ್ವೇ ವಯಾಂ ವಿದ್ಯಾಮೇಷಂ ವೃಜನಂ ಜೀರದಾನುಂ || ೧೫ ||

॥ ಪದಪಾಠಃ ॥

ಏಷಃ । ವಃ । ಸ್ತೋಮಃ । ಮರುತಃ । ಇಯಂ । ಗೀಃ । ಮಾಂದಾರ್ಯಸ್ಯ । ಮಾನ್ಯಸ್ಯ । ಕಾರೋಃ ।
ಆ । ಇಷಾ । ಯಾಸೀಷ್ಟ । ತನ್ವೇ । ವಯಾಂ । ವಿದ್ಯಾಮ । ಇಷಂ । ವೃಜನಂ । ಜೀರऽದಾನುಂ || ೧೫ ||

॥ ಸಾಯಣಭಾಷ್ಯಂ ॥

ಅಯಂ ಮಂತ್ರಸ್ತೃತೀಯಾಧ್ಯಾಯಾಂತೇ ವ್ಯಾಖ್ಯಾತಃ । ಸೂಕ್ತೋಪಕ್ರಮಪ್ರಭೃತಿ ಕ್ರಿಯಮಾಣಾಂ ಸ್ತುತಿಂ ಮರುದ್ಭ್ಯಃ ಸಮರ್ಪ್ಯ ಸ್ವಾಭೀಷ್ಟಮಾಶಾಸ್ತೇ । ಹೇ ಮರುತಃ ಏಷ ಸ್ತೋಮ ಇದಾನೀಂ ಕೃತಂ ಸ್ತೋತ್ರಂ ವೋ ಯುಷ್ಮಾಕಂ । ಯುಷ್ಮದರ್ಥಮಿತ್ಯರ್ಥಃ । ತಥೇಯಂ ಗೀಃ ಸ್ತುತಿರೂಪಾ ವಾಗಪಿ ವೋ ಯುಷ್ಮಾಕಂ । ಕಸ್ಯ ಸಂಬಂಧೀದಮಿತಿ ತದುಚ್ಯತೇ । ಮಾಂದಾರ್ಯಸ್ಯ ॥ ಮಂದತೇರೀಯತೇಶ್ಚ ಮಾಂದಾರ್ಯಃ ॥ ಸ್ತುತಿಂ ಪ್ರೇರಯತೋ ಮಾನ್ಯಸ್ಯ ಮಾನನಾರ್ಹಸ್ಯ ಕಾರೋಃ । ಸ್ತೋತೃನಾಮೈತತ್ । ಸ್ತೋತುಃ ಸಂಬಂಧಿ । ಯದ್ವಾ । ಏತತ್ಪದತ್ರಯಮುತ್ತರತ್ರ ಸಂಬಧ್ಯತೇ ।

**ಉಕ್ತಲಕ್ಷಣಸ್ತೋತುರಿಷೇಚ್ಛಯಾ ಕಾಮನಯಾ ತನ್ವೇ ಯುಷ್ಮಚ್ಛರೀರವೃದ್ಧ್ಯೈ । ಸ್ತುತ್ಯಾ ಹಿ ಶರೀರಂ ವರ್ಧತೇ । ಆ ಯಾಸೀಷ್ಟ । ಅಭಿಗಚ್ಛತು ಸ್ತುತಿಃ । ವಯಾಂ ವಯಂ ಚೇಷಮನ್ನಂ ವೃಜನಂ ಬಲಂ ಜೀರದಾನುಂ ಚಿರಕಾಲಜೀವನಂ ಚ ವಿದ್ಯಾಮ । ಲಭೇಮಹಿ ॥**

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಏಷಃ**—ಈ (ಈ ವರೆಗೆ ಮಾಡಿದ) । **ಸ್ತೋಮಃ**—ಸ್ತೋತ್ರವು । **ವಃ**–ನಿಮಗೆ (ಪ್ರೀತಿಕರವಾಗಲಿ) । **ಇಯಂ ಗೀಃ**–ಈ ಸ್ತುತಿರೂಪವಾದ ವಾಕ್ಕು । **ವಃ**–ನಿಮಗೋಸ್ಕರ (ಆದುದರಿಂದ) । **ಮಾಂದಾರ್ಯಸ್ಯ**—(ಸ್ತುತಿಗಳಿಂದ ನಿಮಗೆ) ಹರ್ಷಜನಕನೂ । **ಮಾನ್ಯಸ್ಯ**—ವರಪ್ರದಾನಾದಿಗಳಿಂದ (ನಿಮ್ಮಿಂದ) ಮಾನನೀಯನೂ ಅಥವಾ ಮಾನ್ಯನೂ (ಪೂಜ್ಯನೂ) । **ಕಾರೋಃ**—ಸ್ತುತಿಕರ್ತೃವೂ ಆದವನ । **ಇಷಾ**—ಇಚ್ಛೆಯಿಂದ । **ತನ್ವೇ**—ಶರೀರ (ಪೋಷಣೆಗೋಸ್ಕರ) । **ಆ ಯಾಸೀಷ್ಟ**—ಆಗಮಿಸಿ । **ವಯಾಂ**—ನಾವೂ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—ಪಡೆಯೋಣ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಈ ವರೆಗೆ ಮಾಡಿದ ಸ್ತುತಿಯೂ, (ಈಗ ಮಾಡುತ್ತಿರುವ) ಈ ವಾಕ್ಕೂ ನಿಮಗೆ ತೃಪ್ತಿಯನ್ನುಂಟುಮಾಡಲಿ; ಸ್ತುತ್ಯಾದಿಗಳಿಂದ ನಿಮಗೆ ಹರ್ಷಜನಕನೂ, ಮಾನ್ಯನೂ ಆದ ಸ್ತುತಿಕರ್ತೃವಿನ ಇಚ್ಛೆಯಿಂದ ನಿಮ್ಮ ಶರೀರಪೋಷಣೆಗೋಸ್ಕರ ಆಗಮಿಸಿ; (ಆಗಮಿಸಿ) ನಮಗೂ, ಆಹಾರ, ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸಿ.

## English Translation.

This praise, Maruts, is for you : this hymn is for you ; (the work) of a venerable author, capable of conferring delight (by his laudationi) : may the praise reach you (for the good of your) persons, so that we may thence obtain food, strength, and long life.

॥ ವಿಶೇಷವಿಷಯಗಳು ॥

ಸೂಕ್ತದ ಕೊನೆಯದಾದ ಈ ಋಕ್ಕಿನಲ್ಲಿ ಋಷಿಯು ಸ್ತೋತ್ರವನ್ನು ದೇವತೆಗಳಿಗೆ ಅರ್ಪಿಸಿ ಅವರ ಅನುಗ್ರಹರೂಪವಾದ, ಅನ್ನ, ಬಲ, ದೀರ್ಘಾಯುಸ್ಸು. ಜಯ ಮೊದಲಾದವನ್ನು ಕೊಡಬೇಕೆಂದು ಪ್ರಾರ್ಥಿಸುವನು ಈ ಋಕ್ಕು ಹಿಂದಿನ ಸೂಕ್ತದಲ್ಲಿ ಎಂದರೆ ೧–೧೬೫. ರಲ್ಲಿಯೂ ೧-೧೬೬; ೧-೧೬೭; ೧–೧೬೮; ನೆಯ ಸೂಕ್ತಗಳಲ್ಲಿಯೂ ಅಂತ್ಯದಲ್ಲಿ ಪುನಃ ಪಠಿತವಾಗಿರುವುದು. ಇದಲ್ಲದೆ, ಈ ಋಕ್ಕಿನಲ್ಲಿ ಕೊನೆಯ ಪಾದವಾದ **ವಿದ್ಯಾಮೇಷಂ ವೃಜನಂ ಜೀರದಾನುಂ** ಎಂಬ ವಾಕ್ಯವು ಈ ಋಷಿದೃಷ್ಟವಾದ ಮುಂದಿನ ಅನೇಕ ಸೂಕ್ತಗಳಲ್ಲಿಯೂ ಪುನಃ ಪಠಿತವಾಗಿರುವುದು.

**ಮಾಂದಾರ್ಯಸ್ಯ—ಮಂದತೇರೀಯತೇಶ್ಚ ಮಾಂದಾರ್ಯಃ ।** ಸ್ತೋತ್ರಾದಿಗಳಿಂದ ನಿಮ್ಮನ್ನು ಪ್ರೇರಿಸುವ ಸ್ತೋತೃವಿನ ಎಂದರ್ಥವು.

**ಮಾನ್ಯಸ್ಯ**—ವರಪ್ರದಾನಾದಿಗಳಿಂದ (ನಿಮ್ಮಿಂದ) ಮಾನನೀಯನಾದ. ಸ್ತೋತ್ರಮಾಡುವವರಿಗೆ ನೀವು ವರಪ್ರದಾನಗಳನ್ನು ಮಾಡಿ ಅನುಗ್ರಹಿಸುವವರೆಂದಭಿಪ್ರಾಯವು.

**ಕಾರೋಃ**—ಕಾರುಶಬ್ದವು ರೇಭಃ ಜರಿತಾ ಮೊದಲಾದ ಹದಿಮೂರು ಸ್ತೋತ್ರನಾಮಗಳಲ್ಲಿ ಪಠಿತ ವಾಗಿರುವುದರಿಂದ (ನಿ. ೩-೧೯) ಕಾರೋಃ ಎಂದರೆ ಸ್ತೋತ್ರಮಾಡುವವನ ಎಂದರ್ಥವು. ಮತ್ತು ಕಾರೂ ಎಂಬ ಶಬ್ದಕ್ಕೆ—ಯಜ್ಞಸ್ಯ ಕರ್ತಾರೌ (ಋತ್ವಿಜೌ) ಯಜ್ಞದಲ್ಲಿ ಭಾಗವಹಿಸುವ ಋತ್ವಿಜರು ಎಂದೂ ನಿರ್ವಚನವನ್ನು ಹೇಳಿರುವರು. (ನಿ. ೮-೧೨).

**ತನ್ವೇ—ಯುಷ್ಮಚ್ಛರೀರವೃದ್ಧ್ಯೈ।** ನಿಮ್ಮ (ಶರೀರಗಳ) ಅಭಿವೃದ್ಧಿಗಾಗಿ; ದೇವತೆಗಳನ್ನು ಸ್ತೋತ್ರಮಾಡು ವುದರಿಂದ ಅವರು ವೃದ್ಧಿಯನ್ನೈದುವರು ಎಂದು ಪ್ರಸಿದ್ಧವು. ಅನೇಕ ಋಕ್ಕುಗಳಲ್ಲಿ ಸ್ತೋತ್ರಮಾಡು ಎಂಬರ್ಥವಿರುವ ಪದಪ್ರಯೋಗಕ್ಕೆ ಬದಲಾಗಿ ವೃದ್ಧಿಯನ್ನೈದು ಎಂಬ ಶಬ್ದವೇ ಉಪಯೋಗಿಸಿರುವುದು ಕಂಡುಬರುವುದು. ಉದಾ—

**ತ್ವಾಂ ಸ್ತೋಮಾ ಅವೀವೃಧನ್ ತ್ವಾಮುಕ್ಥಾ ಶತಕ್ರತೋ । ತ್ವಾಂ ವರ್ಧಂ ನೋ ಗಿರಃ ।**
(ಋ. ಸಂ. ೧-೫-೮)

**ಇಮಾ ಉ ತ್ವಾ ಪುರೂವಸೋ ಗಿರೋ ವರ್ಧಂತು ಯಾ ಮಮ ।**
(ಋ. ಸಂ. ೮-೩-೩)

**ಅಗ್ನಿಂ ವರ್ಧಂತು ನೋ ಗಿರೋ ಯತೋ ಜಾಯತ ಉಕ್ಥ್ಯಃ ।**
(ಋ. ಸಂ. ೩-೧೦-೬)

**ವರ್ಧಂ ತು ತ್ವಾ ಸುಷ್ಟುತಯೋ ಗಿರೋ ನೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ।**
(ಋ. ಸಂ. ೭-೯೯-೭)

ಇತ್ಯಾದಿ ಋಕ್ಕುಗಳಲ್ಲಿ ಋತ್ವಿಕ್ಕುಗಳು ಮಾಡುವ ಸ್ತೋತ್ರಗಳಿಂದ ದೇವತೆಗಳು ವೃದ್ಧಿಯಾಗುವರೆಂದು ಹೇಳಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಮಾಂದಾರ್ಯಸ್ಯ**—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು. ಧಾತು. ಈರ ಗತೌ ಪ್ರೇರಣೇ ಚ. ಧಾತು. ಇವುಗಳಿಂದ **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಸಿದ್ಧವಾಗುತ್ತದೆ.

**ಕಾರೋಃ**—ಡುಕೃಞ್ ಕರಣೇ. ಧಾತು. ಕರೋತೀತಿ ಕಾರುಃ. **ಕೃವಪಾಜಿಮಿ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಇಷಾ—ಇಷು ಇಚ್ಛಾಯಾಂ. ಧಾತು. **ಕ್ವಿಪ್ ಚ** ಎಂದುದರಿಂದ ಕ್ವಿಪ್ ಪ್ರತ್ಯಯ. ತೃತೀಯಾ ಏಕ ವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಾಸೀಷ್ಟ**—ಯಾ ಪ್ರಾಪಣೇ. ಧಾತು **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಿಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಸುಟ್ ತಿಥೋಃ** (ಪಾ. ಸೂ. ३-४-೧೦೭) ಎಂಬುದರಿಂದ ಸುಡಾಗಮ. **ಲಿಙಃ ಸೀಯುಟ್** (ಪಾ. ಸೂ. ३-४-೧೦೨) ಎಂಬುದರಿಂದ ಸೀಯುಟಾಗಮ. ಯಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತನ್ವೇ**—ತನ ಶಬ್ದಕ್ಕೆ ಚತುರ್ಥೀ ಏಕವಚನ ಪರವಾದಾಗ **ತನ್ವಾದೀನಾಂ ಛಂದಸ್ಯುಪಸಂಖ್ಯಾನಂ** ಎಂಬ ವಚನದಿಂದ ಯಣಾದೇಶ. **ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ** (ಪಾ. ಸೂ. ೮-೨-४) ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ವಯಾಂ**—ಅಸ್ಮದ್ ಜಸ್ ಎಂದಿರುವಾಗ **ಙೇ ಪ್ರಥಮಯೋರಮ್** ಎಂಬುದರಿಂದ ಪ್ರತ್ಯಯಕ್ಕೆ ಅಮಾದೇಶ. **ಯೂಯವಯೌ ಜಸಿ** ಎಂಬುದರಿಂದ ಪ್ರಕೃತಿಗೆ ವಯಾದೇಶ. ವ್ಯತ್ಯಯದಿಂದ ಆತ್ವ ಬರುತ್ತದೆ.

**ವಿದ್ಯಾಮ**—ವಿದ್ಲೃ ಲಾಭೇ. ಧಾತು. ಲಿಙ್ ಉತ್ತಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಜೀರದಾನುಂ**—ಜೀರಃ ದಾನುಃ ಯಸ್ಯ ಸಃ ಜೀರದಾನುಃ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೧೫ ॥

ನೂರ ಅರವತ್ತಾರನೇ ಸೂಕ್ತ ಮುಗಿದುದು.



# ನೂರ ಅರವತ್ತೇಳನೆಯ ಸೂಕ್ತವು

**ಸಹಸ್ರಂ ತ ಇತ್ಯೇಕಾದಶರ್ಚಂ ತೃತೀಯಂ ಸೂಕ್ತಮಾಗಸ್ತ್ಯಂ ತ್ರೈಷ್ಟುಭಂ । ಆದ್ಯೈಂದ್ರೀ ಶಿಷ್ಟಾ ಮರುದ್ದೇವತಾಕಾಃ ಪೂರ್ವತ್ರ ಹಿಶಬ್ದಾತ್ । ಸಹಸ್ರಮೇಕಾದಶಾದ್ಯೈಂದ್ರೀತ್ಯನುಕ್ರಮಣಿಕಾ ॥ ವಿಶೇಷವಿನಿಯೋಗೋ ಲೈಂಗಿಕಃ ॥**

ಅನುವಾದವು—**ಸಹಸ್ರಂ ತೇ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು. ತ್ರಿಷ್ಟುಪ್‌ಛಂದಸ್ಸು. ಮೊದಲನೆಯ ಋಕ್ಕು ಇಂದ್ರದೇವತಾಕವು. ಉಳಿದ ಋಕ್ಕುಗಳು ಮರುದ್ದೇವತಾಕವು. ಅನುಕ್ರಮಣಿಯಲ್ಲಿ– ಸಹಸ್ರಮೇಕಾದಶಾದ್ಯೈಂದ್ರೀ ಎಂದು ಹೇಳಿರುವುದು. ವಿಶೇಷವಿನಿಯೋಗವು ಲೈಂಗಿಕವು.

# ಸೂಕ್ತ—೧೬೭

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೬೭ ॥
ಅಷ್ಟಕ— ೨ ॥ ಅಧ್ಯಾಯ—೪ ॥ ವರ್ಗ—೪, ೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—೧, ಇಂದ್ರಃ । ೨-೧೧ ಮರುತಃ ॥
॥ ಛಂದಃ ೧-೧೩,ಜಗತೀ । ೧೪-೧೫, ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸಹಸ್ರಂ ತ ಇಂದ್ರೋತಯೋ ನಃ ಸಹಸ್ರಮಿಷೋ ಹರಿವೋ ಗೂರ್ತತಮಾಃ
ಸಹಸ್ರಂ ರಾಯೋ ಮಾದಯಧ್ಯೈ ಸಹಸ್ರಿಣ ಉಪ ನೋ ಯಂತು ವಾಜಾಃ ॥ ೧ ॥

॥ ಪದಪಾಠಃ ॥

ಸಹಸ್ರಂ । ತೇ । ಇಂದ್ರ । ಊತಯಃ । ನಃ । ಸಹಸ್ರಂ । ಇಷಃ । ಹರಿ್ವಃ । ಗೂರ್ತಽತಮಾಃ ।
ಸಹಸ್ರಂ । ರಾಯಃ । ಮಾದಯಧ್ಯೈ । ಸಹಸ್ರಿಣಃ । ಉಪ । ನಃ । ಯಂತು । ವಾಜಾಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವೋತಯೋ ರಕ್ಷಾಪ್ರಕಾರಾಃ ಸಹಸ್ರಂ । ಅಪರಿಮಿತಾ ಇತ್ಯರ್ಥಃ । ನೋಽಸ್ಮಭ್ಯಮುಪ ಯಂತ್ವಿತಿ ಸರ್ವತ್ರ ಯೋಜ್ಯಂ । ತಥಾ ಹೇ ಹರಿವಃ । ಹರೀ ಇಂದ್ರಸ್ಯಾಶ್ವೌ । ತಾಭ್ಯಾಂ ತದ್ವನ್ನಿಂದ್ರ ಗೂರ್ತತಮಾ ಅತ್ಯಂತಂ ಗೂರ್ಣಾನೀಷ ಏಷಣೀಯಾ ಅನ್ನಾನಿ ಸಹಸ್ರಂ ಬಹೂನಿ ತ್ವದೀಯಾನಿ । ತಥಾ ಸಹಸ್ರಂ ರಾಯೋಽಪರಿಮಿತಾನಿ ಧನಾನಿ ಮಣಿಮುಕ್ತಾದೀನಿ ಮಾದಯಧ್ಯಾ ಅಸ್ಮಾನ್ಮಾದಯಿತುಂ ಯಾನಿ ಸಂತಿ ತಾನ್ಯಸ್ಮಾನುಪ ಯಂತು । ತಥಾ ಸಹಸ್ರಿಣೋ ವಾಜಾ ಗಮನವಂತಶ್ಚತುಷ್ಪಾದ್ರೂಪಾಃ ಪಶವೋಽಪಿ ನೋಽಸ್ಮಾನುಪ ಯಂತು । ಸಮೀಪಂ ಪ್ರಾಪ್ನುವಂತು ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನದಾದ । **ಊತಯಃ**—ರಕ್ಷಣಾಕಾರ್ಯಗಳು **ಸಹಸ್ರಂ**—ಸಾವಿರಗಟ್ಟಲೆ । **ನಃ**—ನಮಗೋಸ್ಕರ । **ಉಪ ಯಂತು**—ಸಮೀಪಿಸಲಿ । **(ಹೇ) ಹರಿವಃ**—ಹರಿ ನಾಮಕ ಅಶ್ವಯುಕ್ತನಾದ ಎಲೈ ಇಂದ್ರನೇ । **ಗೂರ್ತತಮಾಃ**—(ಹೆಚ್ಚು ಬಲಕಾರವಾದ) ಅತ್ಯಂತ ಶ್ರೇಷ್ಠವಾದ । **ಸಹಸ್ರಂ**—ಅಪಾರವಾದ । **ಇಷಃ**—(ನಾನಾವಿಧವಾದ) ಅನ್ನಗಳು । **(ನಃ ಉಪ ಯಂತು**—ನಮ್ಮನ್ನು

ಸಮಿಾಪಿಸಲಿ) | **(ತಥಾ**—ಹಾಗೆಯೇ) | **ಸಹಸ್ರಂ ರಾಯಃ**—ಅಸಂಖ್ಯಾತವಾದ ಮಣಿಮುಕ್ತಾದಿ ಧನಗಳು | **ಮಾದಯಧ್ಯೈ**—ನಮ್ಮನ್ನು ಸಂತೋಷಪಡಿಸಲು | **(ನಃ ಉಪ ಯಂತು**—ನಮ್ಮನ್ನು ಸಮಿಾಪಿಸಲಿ) | **(ತಥಾ**—ಹಾಗೆಯೇ) | **ಸಹಸ್ರಿಣಃ**—ಸಾವಿರಾರು | **ವಾಜಾಃ**—ಗಮನಶೀಲಗಳಾದ ಪಶ್ವಾದಿಗಳು | **ನಃ**—ನಮ್ಮನ್ನು | **(ಉಪ ಯಂತು**—ಸಮಿಾಪಿಸಲಿ).

॥ ಭಾವಾರ್ಥ ॥

ಎಲೈ ಇಂದ್ರನೇ, ಸಾವಿರಾರು ವಿಧಗಳಲ್ಲಿ ನಮ್ಮನ್ನು ರಕ್ಷಿಸು; ಹರಿನಾಮಕ ಅಶ್ವವಿಶಿಷ್ಟನಾದ ಎಲೈ ಇಂದ್ರನೇ, ಅತ್ಯಂತ ಶ್ರೇಷ್ಠವೂ, ಅಪರಿಮಿತವೂ ಆದ ನಾನಾವಿಧಾನ್ನಗಳು ನಮ್ಮ ಸಂತೋಷಕ್ಕೋಸ್ಕರ ಅಸಂಖ್ಯಾತವಾದ ಮಣಿಮುಕ್ತಾದಿ ಧನಗಳು ಮತ್ತು ಸಹಸ್ರಾರು ಪಶುಗಳು, ಇವುಗಳೆಲ್ಲವನ್ನೂ ಅನುಗ್ರಹಿಸು.

English Translation.

May your thousand benefits, Indra, come to us: may a thousand kinds of abundant food come to us, lord of horses: may a thousand (sorts of) wealth come to exhilarate us: may thousands of horses be ours.

॥ ವಿಶೇಷವಿಷಯಗಳು ॥

**ಸಹಸ್ರಂ ಊತಯಃ**—ಇಲ್ಲಿ ಇಂದ್ರನನ್ನು ಸಂಬೋಧಿಸಿ ಸಹಶ್ರ ಶಬ್ದಕ್ಕೆ ಅಪರಿಮಿತಾಃ ಎಣಿಕೆಗೆ ಅಶಕ್ಯವಾದವು ಎಂದು ಅರ್ಥಮಾಡಿದೆ. ಇಂದ್ರನು ಎಣಿಕೆಯಾಗದಿರುವ ಮಟ್ಟಿಗೆ ತನ್ನ ರಕ್ಷಣಾಪ್ರಕಾರಗಳಿಂದ ಯಜಮಾನರಾದ ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

**ಹರಿವಃ**—ಯಾಸ್ಕರು **ಹರೀ ಇಂದ್ರಸ್ಯ** (ನಿ. ೬–೨೮) ಎಂದು ಇಂದ್ರನ ಅಶ್ವಗಳು ಹರೀ ಎಂದು ಪ್ರಸಿದ್ಧವಾಗಿರುತ್ತವೆ. ಎಂದು ವರ್ಣಿಸಿದ್ದಾರೆ. ಇಂದ್ರನು ಈ ಕುದುರೆಗಳನ್ನು ಹೊಂದಿರುವನಾದುದರಿಂದ ಹರಿವ ಶಬ್ದದಿಂದ ಇಂದ್ರನು ಸಂಬೋಧಿತನಾಗಿದ್ದಾನೆ.

**ಗೂರ್ತತಮಾಃ ಇಷಃ—ಅತ್ಯಂತಂ ಗೂರ್ಣಾನಿ ಏಷಣೀಯಾ ಅನ್ನಾನಿ** | ಪ್ರಾಣಿಗಳಿಂದ ಅಭಿಲಷಣೀಯವಾಗಿರುವುದರಿಂದ ಇಷಃ ಎಂಬ ಪದಕ್ಕೆ ಅನ್ನವೆಂದು ಅರ್ಥವನ್ನು ವಿವರಿಸಿದೆ. ಇಷಂ ಎಂದು ಅನ್ನನಾಮಗಳಲ್ಲಿ (ನಿ. ೩–೯) ಉಕ್ತವಾಗಿದೆ. ಇಂದ್ರನು ನಮಗೆ ಅಪರಿಮಿತವಾದ ಅನ್ನಗಳನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ಸಹಸ್ರಂ ರಾಯಃ ಮಾದಯಧ್ಯೈ ಉಪಯಂತು—ಅಪರಿಮಿತಾನಿ ಧನಾನಿ ಮಣಿಮುಕ್ತಾದೀನಿ ಅಸ್ಮಾನ್ ಮಾದಯಿತುಂ ಯಾನಿ ಸಂತಿ ತಾನಿ ಅಸ್ಮಾನ್ ಉಪಯಂತು** | ರಾಯಃ ಎಂಬ ಪದವು ಧನನಾಮಗಳಲ್ಲಿ (ನಿ. ೩–೯) ಪಠಿತವಾಗಿದೆ. ನಾವು ಮದದಿಂದ ಯುಕ್ತರಾಗಿ ಹರ್ಷಚಿತ್ತದಿಂದ ಇರುವಂತೆ ಮಾಡುವ ಅಸಂಖ್ಯಾತವಾದ ರತ್ನ ಮತ್ತು ಮುತ್ತು ಇವುಗಳೇ ಮೊದಲಾದ ರೂಪದಿಂದ ಇರುವ ಧನವೆಲ್ಲವೂ ಇಂದ್ರನ ಅನುಗ್ರಹದಿಂದ ನಮಗೆ ಉಂಟಾಗಲಿ ಎಂದು ಪ್ರಾರ್ಥಿಸಿದೆ.

**ಸಹಸ್ರಿಣಃ ವಾಜಾಃ— ಗಮನವಂತಶ್ಚತುಷ್ಪಾದ್ದ್ವಿಪಾಃ ಪಶವಃ** । ವಾಜ ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ.

**ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ ।**

(ಋ. ಸಂ. ೧-೩-೧೦)

ಇಲ್ಲಿ **ವಾಜಿನೀವತೀ** ಎಂಬ ಪದಕ್ಕೆ **ಅನ್ನೇನ ಹವಿಷಾ, ಉದಕೇನ ವಾ ತದ್ವತೀ,** ಹವಿಸ್ಸಿನ ರೂಪವಾದ ಅನ್ನದಿಂದ ಅಥವಾ ಉದಕಗಳಿಂದ ಯುಕ್ತವಾದುದು ಎಂಬ ಅರ್ಥವನ್ನು ವರ್ಣಿಸಿರುವುದರಿಂದ ವಾಜ ಶಬ್ದವು ಅನೇಕಾರ್ಥಗಳನ್ನು ಬೋಧಿಸುತ್ತದೆ. ಆದರೆ ಇಲ್ಲಿ ವಾಜಾಃ ಗಮನವಂತಃ ಸಂಚರಿಸುವ ಪ್ರಾಣಿಗಳು ಎಂಬ ಅರ್ಥವನ್ನು ವಿವರಿಸಿದೆ. ಸಂಚರಣಶೀಲರಾದ ಎರಡು ಪಾದಗಳುಳ್ಳ ಮತ್ತು ನಾಲ್ಕು ಪಾದಗಳನ್ನು ಹೊಂದಿರುವ ಗೋವುಗಳೇ ಮೊದಲಾದ ಪ್ರಾಣಿಗಳು ಇಂದ್ರನ ಅನುಗ್ರಹದಿಂದ ನಮಗೆ ಅಸಂಖ್ಯಾತವಾಗಿ ದೊರಕಲಿ ಎಂದು ಪ್ರಾರ್ಥಿಸಿದೆ.

ಇಂದ್ರ ಶಬ್ದದ ಅರ್ಥವನ್ನು ಯಾಸ್ಕರು (ನಿ. ೧೦-೮) ನಿರ್ವಚನಮಾಡಿದ್ದಾರೆ. **ಇರಾಂ ದೃಣಾತಿ,** ವೃಷ್ಟ್ಯುದಕದಿಂದ ಆರ್ದ್ರವಾದ ಬೀಜಗಳಿಂದ ಅಂಕುರಾದಿಗಳು ಉತ್ಪನ್ನವಾಗುವಂತೆ ಮಾಡುವವನು ಎಂದೂ, **ಇರಾಂ--ದದಾತಿ** ವೃಷ್ಟ್ಯುದಕಗಳಿಂದ ಅನ್ನವು ಉಂಟಾಗುವಂತೆ ಮಾಡಿ ಅವುಗಳನ್ನು ಲೋಕಕ್ಕೆ ಕೊಡುವವನು, ಎಂದೂ, **ಇರಾಂ ದಧಾತಿ** ಅನ್ನವನ್ನು ಲೋಕಾನುಗ್ರಹಕ್ಕಾಗಿ ಧರಿಸಿರುವವನು ಎಂದೂ, **ಇರಾಂ ದಾರಯತಿ** ಬೀಜವು ಅಂಕುರಾದಿಗಳ ರೂಪದಲ್ಲಿ ವೃದ್ಧಿಯಾಗುವಂತೆ ಪ್ರೇರಿಸುವವನು ಎಂದೂ, **ಇಂದವೇ ದ್ರವತೀತಿ ವಾ** ಸೋಮಪಾನಕ್ಕಾಗಿ ಯಾಗಶಾಲೆಗೆ ಬರುವವನೆಂದೂ, **ಇಂದೌ ರಮತೇ ಇತಿ ವಾ** ಸೋಮಪಾನದ ವಿಷಯದಲ್ಲಿ ಆನಂದವುಳ್ಳವನೆಂದೂ, **ಇಂಧೇ ಭೂತಾನೀತಿ ವಾ** ಪ್ರಾಣಿಗಳಿಗೆ ಅನ್ನಾದಿಗಳನ್ನು ಅನುಗ್ರಹಿಸಿ ಅಭಿವೃದ್ಧಿಗೊಳಿಸುವವನೆಂದೂ, ಅರ್ಥವನ್ನು ವಿವರಿಸಿ, **ಇದಂ ಕರಣಾದಿತ್ಯಾಗ್ರಯಣಃ** ಆಗ್ರಯಣ ಎಂಬವರ ಮತದಲ್ಲಿ ಇಂದ್ರನೇ ಸರ್ವ ಕಾರ್ಯಗಳನ್ನೂ ಪ್ರಪಂಚದ ವಿಷಯದಲ್ಲಿ ಆಚರಿಸತಕ್ಕವನು ಎಂದೂ, **ಇದಂ ದರ್ಶನಾದಿತ್ಯೌಪಮನ್ಯವಃ** ಉಪಮನ್ಯು ಎಂಬವರ ಶಿಷ್ಯರ ಮತದಲ್ಲಿ ಪ್ರಪಂಚದ ಎಲ್ಲಾ ವಿಷಯವನ್ನೂ ಇಂದ್ರನು ಪ್ರತ್ಯಕ್ಷವಾಗಿ ನೋಡುವವನೆಂದೂ, **ಇಂದತೇರ್ವೈಶ್ವರ್ಯಕರ್ಮಣಃ** ಅತಿಶಯವಾದ ಐಶ್ವರ್ಯದಲ್ಲಿರುವವನಾಗಿ, **ಇಂದನ್ ಶತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾ ಆದರಯಿತಾ ಚ ಯಜ್ವನಾಂ** । ಶತ್ರುಗಳನ್ನು ನಾಶಪಡಿಸುವವನು ಅಥವಾ ಶತ್ರುಗಳ ಐಶ್ವರ್ಯವನ್ನು ನಾಶಮಾಡಿ ತಾನೂ ಐಶ್ವರ್ಯವುಳ್ಳವನಾಗಿರುವವನು ಮತ್ತು ಯಾಗಶೀಲರ ವಿಷಯದಲ್ಲಿ ಆದರವುಳ್ಳವನು ಎಂದು ಅನೇಕ ವಿಧವಾಗಿ ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಊತಯೇಃ— ಊತಿಯೂತಿಜೂತಿ—**(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕಿನ್ನಂತದಿಂದ ನಿಪಾತಿತವಾಗಿದೆ. ಪ್ರಥಮಾ ಬಹುವಚನಾಂತರೂಪ.

**ಹರಿವಃ**— ಹರೀ ಅಸ್ಯ ಸ್ತ ಇತಿ ಹರಿವಾನ್. ಮತುಪ್ ಬಂದಾಗ **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ **ಉಗಿದಚಾಂ—**(ಪಾ. ಸೂ. ೭-೧-೭೦) ಎಂಬುದರಿಂದ ನುಮ್.

ಸಂಯೋಗಾಂತಕ್ಕೆ ಲೋಪ ಬಂದಾಗ **ಮತುವಸೋ ರು ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಗೂರ್ತತಮಾಃ**—ಅತ್ಯಂತ್ಯಂ ಗೂರ್ತಾಃ ಗೂರ್ತತಮಾಃ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ಅದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಮಾದಯಧ್ಯೈ**—ಮದ ತೃಪ್ತಿಯೋಗೇ. ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. ಣಿಜಂತದ ಮೇಲೆ ತುಮುನ್ ವಿವಕ್ಷಾಮಾಡಿದಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಅಧ್ಯೈ ಪ್ರತ್ಯಯ. ಏಜಂತವಾದುದರಿಂದ **ಕೃನ್ಮೇಜಂತಃ** ಎಂಬುದರಿಂದ ಅವ್ಯಯ ಸಂಜ್ಞಾ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಹಸ್ರಿಣಃ**—ಸಹಸ್ರಮೇಷಾಮಸ್ತಿ ಇತಿ ಸಹಸ್ರಿಣಃ **ಅತ ಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಯಂತು**— ಇಣ್ ಗತೌ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಾಜಾಃ**—ವೃಷಾದಿಯಲ್ಲಿ ಸೇರಿರುವುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ. ॥ ೧ ॥

---

॥ ಸಂಹಿತಾಪಾಠಃ ॥

**ಆ ನೋಽವೋಭಿರ್ಮರುತೋ ಯಾಂತ್ವಚ್ಛಾ ಜ್ಯೇಷ್ಠೇಭಿರ್ವಾ ಬೃಹದ್ದಿವೈಃ ಸುಮಾಯಾಃ ।**

**ಅಧ ಯದೇಷಾಂ ನಿಯುತಃ ಪರಮಾಃ ಸಮುದ್ರಸ್ಯ ಚಿದ್ಧನಯಂತ ಪಾರೇ ॥ ೨ ॥**

॥ ಪದಪಾಠಃ ॥

**ಆ । ನಃ । ಅವಃಽಭಿಃ । ಮರುತಃ । ಯಾಂತು । ಅಚ್ಛ । ಜ್ಯೇಷ್ಠೇಭಿಃ । ವಾ । ಬೃಹತ್ಽದಿವೈಃ । ಸುಽಮಾಯಾಃ ।**

**ಅಧ । ಯತ್ । ಏಷಾಂ । ನಿಽಯುತಃ । ಪರಮಾಃ । ಸಮುದ್ರಸ್ಯ । ಚಿತ್ । ಧನಯಂತ । ಪಾರೇ ॥ ೨ ॥**

॥ ಸಾಯಣಭಾಷ್ಯಂ ॥

ತೇ ಮರುತೋಽವೋಭೀ ರಕ್ಷಣೈಃ ಸಹಿತಾ ನೋಽಸ್ಮಾನಚ್ಛಾಭಿಮುಖ್ಯೇನಾ ಯಾಂತು । ಆಗಚ್ಛಂತು । ಸುಮಾಯಾಃ । ಮಾಯೇತಿ ಪ್ರಜ್ಞಾನಾಮ । ಶೋಭನಪ್ರಜ್ಞಾ ಏವ ಮರುತೋ ಜ್ಯೇಷ್ಠೇಭಿರ್ಬೃಹದ್ದಿವೈರ್ವಾ ಜ್ಯೇಷ್ಠೈಃ ಪ್ರಶಸ್ಯತಮೈರ್ಮಣಿಮುಕ್ತಾದಿಧನೈಶ್ಚ ಸಹಿತಾ ಆ ಯಾಂತು । ವಾಶಬ್ದಃ ಸಮುಚ್ಚಯೇ । ಆಗಮನೇ ಕಥಮೇಷಾಂ ಸಾಮರ್ಥ್ಯಮಿತಿ ಅತ ಆಹ । ಅಧಾಥೈಷಾಂ ಮರುತಾಂ ಯದ್ಯಸ್ಮಾನ್ನಿಯುತ ಏತನ್ನಾಮಕಾಃ ಪರಮಾ ಉತ್ಕೃಷ್ಟಾ ಅಶ್ವಾಃ ಸಮುದ್ರಸ್ಯ ಚಿತ್ ಚಿಚ್ಛಬ್ದೋಽಪ್ಯರ್ಥೇ । ಸಮುದ್ರಸ್ಯಾಪಿ ಪಾರೇ ಪರಸ್ಮಿಂಸ್ತೀರೇ ಧನಯಂತ ಧನಧಾರಣಂ ವಹನಂ ಕುರ್ವಂತಿ । ತಸ್ಮಾದ್ರಕ್ಷಣೈರ್ಧನೈಶ್ಚಾ ಯಾಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಧ**—ಅನಂತರ । **ಯತ್**—ಯಾವ ಕಾರಣ । **ಏಷಾಂ**—ಈ ಮರುದ್ದೇವತೆಗಳ । **ಪರಮಾಃ**—ಅತ್ಯಂತ ಉತ್ಕೃಷ್ಟವಾದ । **ನಿಯುತಃ**—ನಿಯುನ್ನಾಮಕ ಅಶ್ವಗಳು । **ಸಮುದ್ರಸ್ಯ**—ಸಮುದ್ರದ । **ಪಾರೇ ಚಿತ್**—ಎದುರು ದಡದಲ್ಲಿಯೂ (ಇರುವ) । **ಧನಯಂತ**—ಧನವನ್ನು ವಹಿಸುತ್ತವೆಯೋ । **(ತತ್**—ಆದುದರಿಂದ) । **(ತೇ) ಮರುತಃ**—ಆ ಮರುದ್ದೇವತೆಗಳು । **ಅವೋಭಿಃ**—(ನಮ್ಮ) ರಕ್ಷಣಾಕಾರ್ಯಗಳಿಂದ (ಸಹಿತರಾಗಿ) । **ನಃ**—ನಮಗೆ । **ಅಚ್ಛ**—ಎದುರಾಗಿ । **ಆ ಯಾಂತು** ಆಗಮಿಸಲಿ । **ಸುಮಾಯಾಃ**—ಸುಪ್ರಜ್ಞರಾದ ಮರುದ್ದೇವತೆಗಳು । **ಜ್ಯೇಷ್ಠೇಭಿಃ**—ಅತಿಶ್ರೇಷ್ಠವಾದ (ಮತ್ತು) । **ಬೃಹದ್ದಿವೈಃ ವಾ**—ಹೆಚ್ಚು ಪ್ರಶಂಸಾರ್ಹವಾದ ಮಣಿಮುಕ್ತಾದಿ ಧನಗಳಿಂದಲೂ ಸಹಿತರಾಗಿ । **(ಆ ಯಾಂತು**—ಆಗಮಿಸಲಿ ।

॥ ಭಾವಾರ್ಥ ॥

ಎಲೈ ಶೋಭನಜ್ಞಾನವಿಶಿಷ್ಟರಾದ ಮರುದ್ದೇವತೆಗಳೇ, ನಿಮ್ಮ ಉತ್ಕೃಷ್ಟವಾದ ನಿಯುನ್ನಾಮಕ ಅಶ್ವಗಳು ಸಮುದ್ರದ ಎದುರು ದಡದಲ್ಲಿರುವ ಧನವನ್ನು ವಹಿಸಿ ತರಲು ಸಮರ್ಥವಾಗಿವೆ ; ಆದುದರಿಂದ ಅತಿಶ್ರೇಷ್ಠವೂ, ಸ್ತುತ್ಯವೂ ಆದ ಧನಾದಿಗಳಿಂದ ಮತ್ತು ರಕ್ಷಣಾಕಾರ್ಯಗಳಿಂದ ಸಹಿತರಾಗಿ ನಮಗೆ ಅಭಿಮುಖವಾಗಿ ಬನ್ನಿ.

English Translation.

May the Maruts come to our presence with benefactions: may they who are possessed of knowledge (come) with most excellent and brilliant (treasures), since their glorious horses, the Niyutas, gather wealth even on the farther shore of the sea.

॥ ವಿಶೇಷವಿಷಯಗಳು ॥

**ಮರುತಃ ಅವೋಭಿಃ ನಃ ಆಯಾಂತು**—**ರಕ್ಷಣೈಃ ಸಹಿತಾಃ ಅಸ್ಮಾನ್ ಆಗಚ್ಛಂತು । ಮರುತಃ** ಎಂಬ ಪದವು ಋತ್ವಿಙ್ನಾಮಗಳಲ್ಲಿಯೂ (ನಿ. ೩-೧೮) **ಮರುತ್** ಎಂದು ಹಿರಣ್ಯನಾಮಗಳಲ್ಲಿಯೂ (ನಿ ೨-೧೦) ಪಠಿತವಾಗಿದೆ. **ಮರುತಃ ಮಿತರಾವಿಣೋ ವಾ, ಮಿತರೋಚಿನೋ, ವಾ ಮಹತ್ ದ್ರವಂತೀತಿ ವಾ** ಎಂದು

ವ್ಯಾಖ್ಯಾತವಾದ ಮರುಚ್ಛಬ್ದವು—ಯಾಸ್ಕರಿಂದ ಮಧ್ಯಸ್ಥಾನದಲ್ಲಿರುವ ದೇವಗಣಗಳಲ್ಲಿ ಪಠಿತವಾಗಿದೆ. ಮರುದ್ದೇವತೆಗಳೆಂದು ಅರ್ಥಮಾಡಿ ಮರುದ್ದೇವತೆಗಳು ಅವರ ಬಲಕ್ಕೆ ಅನುಗುಣವಾಗಿ ಶಬ್ದವನ್ನು ಮಾಡುವವರೆಂದೂ, ಕಾಂತಿಯಿಂದ ಪ್ರಕಾಶಿಸುವವರೆಂದೂ, ವೃಷ್ಟಿಪ್ರದರೆಂದೂ ಅನೇಕವಿಧವಾಗಿ ಅರ್ಥವನ್ನು ವರ್ಣಿಸಿ, ಈ ಮರುದ್ದೇವತೆಗಳು ನಮ್ಮನ್ನು ರಕ್ಷಿಸುವ ಉಪಾಯಗಳೊಡನೆ ನಮ್ಮ ಯಜ್ಞಕ್ಕೆ ಬರಲಿ ಎಂದು ಆಶಿಸಿದೆ.

**ಸುಮಾಯಾಃ—ಶೋಭನಪ್ರಜ್ಞಾಃ** ಮಾಯಾ ಶಬ್ದವು ಪ್ರಜ್ಞಾನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಮರುದ್ದೇವತೆಗಳು ಅಸಾಧಾರಣವಾದ ಪ್ರಜ್ಞೆಯುಳ್ಳವರು ಎಂದು ವರ್ಣಿಸಿದೆ.

**ಜ್ಯೇಷ್ಠೇಭಿಃ ಬೃಹದ್ದಿವೈಃ ಆ ಯಾಂತು ।** ಜ್ಯೇಷ್ಠೇಭಿಃ ಎಂಬ ಪದಕ್ಕೆ ಪ್ರಭೂತವಾದ ಕಾಂತಿಗಳಿಂದ ಯುಕ್ತರಾಗಿ ಅಥವಾ **ಪ್ರಶಸ್ಯತಮೈಃ ಮಣಿಮುಕ್ತಾದಿಧನೈಶ್ಚ ಸಹಿತಾಃ** ಶ್ಲಾಘಿಸಲರ್ಹವಾದ ಮಣಿ (ರತ್ನ) ಮುಕ್ತಾ (ಮುತ್ತು) ಇವೇ ಮೊದಲಾದ ಧನಗಳೆಂದು ಎರಡು ವಿಧವಾದ ಅರ್ಥವನ್ನು ಹೇಳಿ, ಇವುಗಳಿಂದ ಕೂಡಿ ಮರುದ್ದೇವತೆಗಳು ಬರಲಿ ಎಂದು ಆಶಿಸಿದೆ.

**ನಿಯುತಃ ಪರಮಾಃ ಸಮುದ್ರಸ್ಯ ಚಿತ್ ಪಾರೇ ಧನಯಂತಿ—ಏತನ್ನಾಮಕಾಃ ಉತ್ಕೃಷ್ಟಾಃ ಅಶ್ವಾಃ ಸಮುದ್ರಸ್ಯಾಪಿ ಪರಸ್ಮಿಂಸ್ತೀರೆ ಧನಧಾರಣಂ ವಹನಂ ಕುರ್ವಂತಿ ।** ಅತ್ಯುತ್ತಮವಾದ ನಿಯುತ ಎಂದು ಹೆಸರುಳ್ಳ ಕುದುರೆಗಳು ಸಮುದ್ರದ ಇನ್ನೊಂದು ದಡದಿಂದ ಧನವನ್ನು ಹೊತ್ತುತರುತ್ತವೆ ಎಂದು ವರ್ಣಿಸಿ ಮರುದ್ದೇವತೆಗಳು ಪ್ರಭೂತವಾದ ಈ ವಿಧವಾದ ಅಶ್ವಗಳನ್ನು ಹೊಂದಿರುವಕಾರಣ ಧನಗಳೊಡನೆ ನಮ್ಮ ಯಜ್ಞಕ್ಕಾಗಿ ಬರಲಿ ಎಂದು ಪ್ರಾರ್ಥಿಸಿದೆ ಸಮುದ್ರಶಬ್ದವು ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಪಠಿತವಾಗಿದೆ ಮತ್ತು ಪ್ರಸಿದ್ಧವಾದ ಉದಕಗಳಿಂದ ತುಂಬಿರುವ ಪಾರ್ಥಿವ ಸಮುದ್ರಕ್ಕೂ ಅಂತರಿಕ್ಷಕ್ಕೂ ಸಮುದ್ರದ ಶಬ್ದವು ವಾಚಕವೆಂಬ ವಿಷಯದಲ್ಲಿ ಸಂದೇಹವನ್ನು ವಿಶದಗೊಳಿಸಿ **ತತ್ರ ಸಮುದ್ರ ಇತ್ಯೇತತ್ ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ** ಎಂದು ಆಶಂಕಿಸಿ **ಸಮುದ್ರಃ ಕಸ್ಮಾತ್ ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತೇನಮಾಪಃ ಸಂಮೋದಂತೇ ಅಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ।** ಅಲೆಗಳು ನೀರಿನ ತುಂತುರುಗಳೂ ಇವರ ರೂಪದಿಂದ ಉದಕಗಳು ಅನೇಕವಿಧವಾಗಿ ಚಲಿಸುವುದರಿಂದಲೂ, ಅತಿಪ್ರಭೂತವಾದ ನಿಮ್ನ ಪ್ರದೇಶದಲ್ಲಿ ಇರುವುದರಿಂದ ಉದಕಗಳು ವೇಗವಾಗಿ ಹರಿದು ಬರುವುದರಿಂದಲೂ, ಅತಿ ಪ್ರಭೂತವಾದ ಉದಕಗಳು ತುಂಬಿರುವುದರಿಂದ ಜಲಚರ ಪ್ರಾಣಿಗಳಿಗೆ ಆನಂದವನ್ನು ಉಂಟುಮಾಡುವುದರಿಂದಲೂ, ಉದಕಗಳಿಂದ ಎಲ್ಲವನ್ನೂ ತೋಯಿಸುವುದರಿಂದಲೂ ಸಮುದ್ರವೆಂಬ ಹೆಸರು ಇದಕ್ಕೆ ಬಂದಿರುವುದೆಂದು ಯಾಸ್ಕರು ವ್ಯಾಖ್ಯಾನಮಾಡಿದ್ದಾರೆ. ಮತ್ತು ಅಂತರಿಕ್ಷವೆಂದೇ ಸಿದ್ಧಾಂತವನ್ನು ವರ್ಣಿಸಿದ್ದಾರೆ. ಮರುದ್ದೇವತೆಗಳು ಅಶ್ವಗಳನ್ನು ಹೊಂದಿರುವ ವಿಷಯವು ಯಜುರ್ವೇದದಲ್ಲಿ ಪ್ರಸಿದ್ಧವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅವೋಭಿಃ**—ಅವ ರಕ್ಷಣೇ. ಧಾತು **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಯಾಂತು**—ಯಾ ಪ್ರಾಪಣೇ. ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಚ್ಛ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಜ್ಯೇಷ್ಠೇಭಿಃ**—ಅತಿಶಯೇನ ಪ್ರಶಸ್ಯಾಃ ಎಂದು ಅರ್ಥವಿವಕ್ಷಾಮಾಡಿದಾಗ ಇಷ್ಠನ್ ಪ್ರತ್ಯಯ. **ಜ್ಯ ಚ** (ಪಾ. ಸೂ. ೫-೩-೬೧) ಎಂಬುದರಿಂದ ಜ್ಯಾದೇಶ. **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಅಲೋಪ ಬರುವುದಿಲ್ಲ. ಗುಣ. ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ.

ಬೃಹದ್ದಿವೈಃ—**ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸುಮಾಯಾಃ**—ಶೋಭನಾ ಮಯಾ ಯೇಷಾಂ ತೇ. ಸುಮಾಯಾಃ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಅಧ**—ಅಥ ಎಂಬಲ್ಲಿ ಛಾಂದಸವಾಗಿ ವರ್ಣವಿಕಾರ ಬರುತ್ತದೆ.

**ನಿಯುತಃ**—ಯು ಮಿಶ್ರಣಾಮಿಶ್ರಣಯೋಃ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿ ಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಧನಯಂತ**—ಧನ ಶಬ್ದದ ಮೇಲೆ **ತತ್ಕರೋತಿ ತದಾಚಷ್ಟೇ** ಎಂಬ ವಚನದಿಂದ ಣಿಚ್. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನದಲ್ಲಿ ಝಿಕ್ಕೆ ಅಂತಾದೇಶ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ. ಅಯಾದೇಶ. ಣಿಚನ್ನು ನಿಮಿತ್ತೀಕರಿಸಿ ಧನ ಎಂಬಲ್ಲಿ ಟಿಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ‖ ೨ ‖



‖ ಸಂಹಿತಾಪಾಠಃ ‖

**ಮಿಮ್ಯಕ್ಷ ಯೇಷು ಸುಧಿತಾ ಘೃತಾಚೀ ಹಿರಣ್ಯನಿರ್ಣಿಗುಪರಾ ನ ಋಷ್ಟಿಃ ।**
**ಗುಹಾ ಚರಂತೀ ಮನುಷೋ ನ ಯೋಷಾ ಸಭಾವತೀ ವಿದಥ್ಯೇವ ಸಂ ವಾಕ್ ‖ ೩ ‖**

॥ ಪದಪಾಠಃ ॥

ಮಿಮ್ಯಕ್ಷ । ಯೇಷು । ಸುऽಧಿತಾ । ಘೃತಾಚೀ । ಹಿರಣ್ಯऽನಿರ್ನಿಕ್ । ಉಪರಾ । ನ । ಋಷ್ಟಿಃ ।

ಗುಹಾ । ಚರಂತೀ ಮನುಷಃ । ನ । ಯೋಷಾ । ಸಭಾऽವತೀ । ವಿದಥ್ಯಾऽಇವ । ಸಂ । ವಾಕ್ ॥ ೩ ॥

॥ ಸಾಯಣಭಾಷ್ಯಂ ॥

ಸುಧಿತಾ ಸುಷ್ಠು ನಿಹಿತಾ ಸುಷ್ಠು ಹಿತಾ ವಾ ಲೋಕೇ ಘೃತಾಚೀ ಘೃತಂ ಕ್ಷರಣಶೀಲಮುದಕಮಂಚಂತೀ ಹಿರಣ್ಯನಿರ್ಣಿಗ್ಹಿತರಮಣೀಯರೂಪಾ । ನಿರ್ಣಿಗಿತಿ ರೂಪನಾಮ । ಏವಂರೂಪಾ ಋಷ್ಟಿರ್ವಿದ್ಯುದಾಖ್ಯಾಯುಧವಿಶೇಷೋ ವಾ ಉಪರಾ ನ ಮೇಘಮಾಲೇವ ಯೇಷು ಮರುತ್ಸು ಸಂ ಮಿಮ್ಯಕ್ಷ। ಮ್ಯಕ್ಷತಿರ್ಗತಿಕರ್ಮಾ । ಸಂಗತಾಭೂತ್ । ಮೇಘಪಂಕ್ತಿವಿದ್ಯುತಾವಿಮೇ ಅಪಿ ಸಂಗತೇ ಇತ್ಯರ್ಥಃ। ಮೇಘಪಂಕ್ತಿರ್ವಿದ್ಯುಚ್ಚೋಭೇ ದೃಷ್ಟಾಂತೇನ ವಿಶೇಷ್ಯೇತೇ । ಗುಹಾ ನಿಗೂಢಾ ಗುಹಾಯಾಂ ವಾಂತರಿಕ್ಷೇ ಚರಂತೀ । ತತ್ರ ದೃಷ್ಟಾಂತಃ । ಮನುಷೋ ನ ಯೋಷಾ ಮನುಷ್ಯಸ್ಯ ಪರಿವೃಢಾದೇರ್ಮಹಿಷೀವತ್ । ಸಾ ಯಥಾ ಸುವೇಷಾಂತಃಪುರ ಏವ ಮಧ್ಯೇ ಚರತಿ ತದ್ವತ್ । ಕಿಂ ಸರ್ವದೈವಮಿತಿ ನೇತ್ಯಾಹ। ಸಭಾವತೀ । ಸಭಾ ಜನಸಂಘಃ । ತದ್ವತೀ । ವರ್ಷಕಾಲ ಆವಿರ್ಭವಂತೀತ್ಯರ್ಥಃ । ತತ್ರ ದೃಷ್ಟಾಂತಃ । ವಿದಥ್ಯಾ ವಾಗಿವ । ವಿದಥೋ ಯಜ್ಞಃ । ತದರ್ಹತೀತಿ ವಿದಥ್ಯಾ ಪ್ರೈಷಸ್ತೋತ್ರಾದಿರೂಪಾ ವಾಕ್ । ಸಾ ಯಥಾ ಯಜ್ಞಸಭಾಂ ಪ್ರಾಪ್ಯಾವಿರ್ಭವತಿ ತದ್ವತ್ । ಯದ್ವಾ । ವಿದಥ್ಯಾ ವೇದನಾರ್ಹಾ ವಿವಿದಮಾನಯೋರ್ವಾಕ್ । ಸಾ ಯಥಾ ಸಭಾ ಭವತಿ ತದ್ವತ್ । ಸೈವಂರೂಪಾ ಯೇಷು ಮಿಮ್ಯಕ್ಷ ತೇ ಮರುತೋ ದೇವಯಜನಮಾಗಚ್ಛಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯೇಷು**—ಯಾವ ಮರುದ್ದೇವತೆಗಳಲ್ಲಿ । **ಸುಧಿತಾ**—ಚೆನ್ನಾಗಿ ನಿಹಿತವೂ । **ಘೃತಾಚೀ**—ಉದಕವನ್ನು ವರ್ಷಿಸುತ್ತಿರುವುದೂ । **ಹಿರಣ್ಯನಿರ್ಣಿಕ್**—ಹಿತರಮಣೀಯವಾದ (ಸುವರ್ಣವರ್ಣದ) ರೂಪವುಳ್ಳದ್ದೂ ಆದ । **ಋಷ್ಟಿಃ**—ವಿದ್ಯುತ್ತು । **ಮನುಷಃ**—(ಉತ್ತಮ) ಪುರುಷನ । **ಯೋಷಾ**—ಅಲಂಕೃತಳಾದ ಸ್ತ್ರೀಯು । (**ಗುಹಾ ಚರಂತೀನ**— ನಿಗೂಢಳಾಗಿ ಅಂತಃಪುರದಲ್ಲಿಯೇ ಸಂಚರಿಸುವಂತೆ ) । **ಗುಹಾ**—ಅಂತರಿಕ್ಷದಲ್ಲಿ । **ಚರಂತೀ**—ಸಂಚರಿಸುವ । **ವಿದಥ್ಯಾ**—ಯಜ್ಞಾರ್ಹವಾದ । **ವಾಕ್**—ಸ್ತೋತ್ರಾದಿರೂಪವಾದ ವಾಕ್ಕು (**ಸಭಾವತೀ ಇವ**—ಯಜ್ಞಸಭೆಯಲ್ಲಿ ಆವಿರ್ಭವಿಸುವಂತೆ) । **ವಿದಥ್ಯಾ**—ಚರ್ಚೆಮಾಡುತ್ತಿರುವವರ । **ವಾಕ್**—ಮಾತು । (**ಸಭಾವತೀ ಇವ**—ಸಭೆಯಲ್ಲಿ ಆವಿರ್ಭವಿಸುವಂತೆ) । **ಸಭಾವತೀ**—ವರ್ಷಾಕಾಲದಲ್ಲಿ ಆವಿರ್ಭವಿಸುವುದೂ ಆದ । **ಉಪರಾ ನಾ**—ಮೇಘಮಾಲೆಯು (ಹೇಗೆ ಮರುದ್ದೇವತೆಗಳೊಡನೆ ಮಿಶ್ರಿತವಾಗುತ್ತದೆಯೋ) ಹಾಗೆ । **ಸಂ ಮಿಮ್ಯಕ್ಷ**—ಚೆನ್ನಾಗಿ ಬೆರೆತುಹೋಗಿದೆಯೋ (ಆ ಮರುದ್ದೇವತೆಗಳು ನಮ್ಮ ಯಾಗಶಾಲೆಗೆ ಬರಲಿ).

॥ ಭಾವಾರ್ಥ ॥

ಉತ್ತಮ ಪುರುಷನ ಸ್ತ್ರೀಯು ಅಲಂಕೃತಳಾಗಿ ಅಂತಃಪುರದಲ್ಲಿಯೇ ಸಂಚರಿಸುವಂತೆ ಆಕಾಶದಲ್ಲಿ ಸಂಚರಿಸುತ್ತಿರುವುದೂ, ಯಜ್ಞಾರ್ಹವಾದ ಸ್ತೋತ್ರಾದಿವಾಕ್ಕು, ಸಭೆಗಳಲ್ಲಿ ಮಾತ್ರ ಬಹಿರಂಗಕ್ಕೆ ಬರುವಂತೆ ವರ್ಷಾಕಾಲದಲ್ಲಿ ಆವಿರ್ಭವಿಸುವುದೂ ಆದ ಮೇಘಮಾಲೆಯು ಮರುದ್ದೇವತೆಗಳೊಡನೆ ಮಿಶ್ರವಾಗುವಂತೆ, ಸುವರ್ಣವರ್ಣವೂ, ವೃಷ್ಟಿ ಕಾರಣವೂ ಆದ ವಿದ್ಯುತ್ತೂ ಅವರೊಡನೆ ಯೋಗ್ಯರೀತಿಯಲ್ಲಿ ಮಿಶ್ರಿತವಾಗಿದೆ. ಇಂತಹ ಮರುದ್ದೇವತೆಗಳು ನಮ್ಮ ಯಾಗಶಾಲೆಗೆ ಬರಲಿ.

## English Translation.

In whom the water-shedding, golden-coloured lightning, is fitly deposited like a chaplet (of clouds) moving in the firmament like the (splendidly-attired) wife of a man (of rank), and distinguished in assemblies like a sacrificial hymn.

॥ ವಿಶೇಷವಿಷಯಗಳು ॥

**ಸುಹಿತಾ—ಸುಷ್ಠು ನಿಹಿತಾ ಸುಷ್ಠು ಹಿತಾ ವಾ ।** ಲೋಕಕ್ಕೆ ಹಿತವನ್ನು ಉಂಟುಮಾಡುವುದು ಅಥವಾ ಲೋಕದಲ್ಲಿ ಎಲ್ಲರಿಂದಲೂ ರಮಣೀಯವಾಗಿರುವಂತೆ ತಿಳಿಯಲ್ಪಡುವ ಹಾಗೆ ಇರುವುದೆಂದೂ ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

**ಘೃತಾಚೀ ಹಿರಣ್ಯನಿರ್ಣಿಕ್ ಋಷ್ಟಿಃ—ಘೃತಂ ಕ್ಷರಣಶೀಲಂ ಉದಕಂ ಅಂಚತಿ ಹಿತರಮಣೀಯರೂಪಾ ವಿದ್ಯುದಾಖ್ಯಾಯುಧವಿಶೇಷೋ ವಾ ।** ನಿರ್ಣಿಕ್ ಎಂಬ ಪದವು ರೂಪನಾಮಗಳಲ್ಲಿ (ನಿ. ೩–೧೩) ಉಕ್ತವಾಗಿದೆ. **ಘೃತ** ಶಬ್ದವೂ ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ದ್ರವರೂಪದಿಂದ ಹರಿಯುವ ಸ್ವಭಾವವುಳ್ಳ ಉದಕದಿಂದ ಕೂಡಿರುವ, ಲೋಕದಲ್ಲಿರುವವರಿಗೆ ಸುಖಕರವಾಗಿರುವ ರೂಪವನ್ನು ಹೊಂದಿರುವ ವಿದ್ಯುತ್ (ಮಿಂಚು) ರೂಪವಾದ ಆಯುಧವನ್ನು ಮರುದ್ದೇವತೆಗಳು ಉಂಟುಮಾಡುವರು ಎಂದು ಅರ್ಥವನ್ನು ವರ್ಣಿಸಿದೆ. ಮರುದ್ದೇವತೆಗಳು ತಮ್ಮ ಗತಿ ವಿಶೇಷದಿಂದ ವಿದ್ಯುದ್ರೂಪವಾದ (ಅಶನಿ) ಆಯುಧವನ್ನು ಉದಕಗಳಲ್ಲಿ ಉಂಟುಮಾಡುವರು.

**ಉಪರಾ ನ ಸಂ ಮಿಮ್ಯಕ್ಷ—ಮೇಘಪಂಕ್ತಿವಿದ್ಯುತೌ ಇಮೇ ಅಪಿ ಸಂಗತೇ ಇತ್ಯರ್ಥಃ ।** ಉಪರಶಬ್ದವು—ಮೇಘನಾಮಗಳಲ್ಲಿ (ನಿ ೨–೨೨) ಉಕ್ತವಾಗಿದೆ. ಮರುದ್ದೇವತೆಗಳು ದ್ರವಭಾವ, ಮತ್ತು ಘನವಾಗುವ (ಘಟ್ಟಿಯಾಗುವ) ಸ್ವಭಾವ ಎಂಬ ಎರಡು ವಿಧವಾದ ಪರಿಣಾಮಗಳನ್ನು ಉದಕಗಳಿಗೆ ಉಂಟುಮಾಡಿ, ಅದರಿಂದ ಮೇಘಪಂಙ್ಕ್ತಿಯೂ ಅದರಲ್ಲಿ ಮಿಂಚೂ ಸಹ ಸೇರಿ ಇರುವಹಾಗೆ ತಾವು ಮಾಡುವುದಲ್ಲದೆ, ತಮ್ಮ ಆಕಾರವನ್ನೂ ಹೊಂದಿರುವ ಶರೀರದಲ್ಲಿ ಋಷ್ಟಿ ಎಂದು ಪ್ರಸಿದ್ಧವಾದ (ಅಶನಿ) ಆಯುಧವನ್ನು ಧರಿಸಿ, ವಿದ್ಯುತ್ತಿನಿಂದ ಕೂಡಿರುವ ಮೇಘಮಾಲೆಯು ಲೋಕದಲ್ಲಿ ಕಾಣಿಸುವಂತೆ ಕಾಣಿಸಿಕೊಳ್ಳುವರು, ಎಂದು ಮರುದ್ದೇವತೆಗಳ ಆಯುಧವಿಶಿಷ್ಟವಾದ ರೂಪವು ಮೇಘ ವಿದ್ಯುತ್ ಸಹಿತವಾದ ರೂಪಕ್ಕೆ ಹೋಲಿಸಿ ಹೇಳಿದೆ. ಯಾಸ್ಕರು—

**ಆ ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈ ರಥೇಭಿರ್ಯಾತ ಋಷ್ಟಿಮದ್ಭಿರಶ್ವಪರ್ಣೈಃ ।**
**ಆ ವರ್ಷಿಷ್ಠಯಾ ನ ಇಷಾ ವಯೋ ನ ಪಪ್ತತಾ ಸುಮಾಯಾಃ ॥**

(ಋ. ಸಂ. ೧-೮೮-೧)

ಇದೇ ಅಭಿಪ್ರಾಯವನ್ನು ಬೋಧಿಸುವ ಋಕ್ಕನ್ನು ಉದಹರಿಸಿ ಮರುದ್ದೇವತೆಗಳು ತಮ್ಮ ಆಯುಧವನ್ನು ಧರಿಸಿ ರಥಾರೂಢರಾಗಿ ಬರುವಕ್ರಮವನ್ನು ವಿವರಿಸಿದ್ದಾರೆ. ಮೇಘಪಂಕ್ತಿಯು ವಿದ್ಯುತ್ತಿನೊಡನೆ ಸಂಚರಿಸುವುದರ ವಿಷಯದಲ್ಲಿ **ಗುಹಾ ಚರಂತೀ ಮನುಷೋ ನ ಯೋಷಾ** ಎಂಬ ವಾಕ್ಯವನ್ನು ದೃಷ್ಟಾಂತರೂಪದಿಂದ ಹೇಳಿದೆ. ಮೇಘದಲ್ಲಿ (ವಿದ್ಯುತ್) ಮಿಂಚು ಗೂಢವಾಗಿ ಇರುವುದು. ಮತ್ತು ಅಂತರಿಕ್ಷದಲ್ಲಿ ಸಂಚರಿಸುವುದು ಎಂದು ಗುಹಾಶಬ್ದಕ್ಕೆ ರಹಸ್ಯವಾದ ಪ್ರದೇಶ ಮತ್ತು ಅಂತರಿಕ್ಷವೆಂದು ಎರಡು ಅರ್ಥವನ್ನು ವಿವರಿಸಿದೆ. ನ ಎಂಬ ನಿಪಾತವು ಯಾಸ್ಕರಿಂದ **ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ ಉಭಯಮನ್ವಧ್ಯಾಯಂ** (ನಿ. ೧-೪) ಎಂದು ವ್ಯಾಖ್ಯಾತವಾಗಿದೆ. ನ ಎಂಬ ನಿಪಾತವು ಲೋಕವ್ಯಾವಹಾರಿಕ ಶಬ್ದವಾದಾಗ ನಿಷೇಧ ಎಂಬ ಅರ್ಥವನ್ನು ಬೋಧಿಸುತ್ತದೆ. ವೇದದಲ್ಲಿ ನಿಷೇಧ, ಮತ್ತು ಉಪಮಾ ಎಂಬ ಎರಡುವಿಧವಾದ ಅರ್ಥಗಳಲ್ಲಿಯೂ ಪ್ರಯುಕ್ತವಾಗಿರುತ್ತದೆ. ಉದಾಹರಣೆಗೆ—

**ನೇಂದ್ರಂ ದೇವಮಮಂಸತ**—ಇಲ್ಲಿ ನ ಎಂಬುವ ಪದವು ನಿಷೇಧಾರ್ಥದಲ್ಲಿ ಪ್ರಯುಕ್ತವಾಗಿದೆ.

**ಹೃತ್ಸು ಪೀತಾಸೋ ಯುಧ್ಯಂತೇ ದುರ್ಮದಾಸೋ ನ ಸುರಾಯಾಂ । ಊಧರ್ನ ನಗ್ನಾ ಜರಂತೇ ॥**

(ಋ ಸಂ. ೮-೨-೧೦)

ಇಲ್ಲಿ ಮದ್ಯಪಾನಮಾಡಿದವರು ಪರಸ್ಪರಸ್ಪರ್ಧೆಯುಳ್ಳವರಹಾಗೆ ಯುದ್ಧಮಾಡುವರು ಎಂದು ಅರ್ಥಮಾಡಿ ನ ಎಂಬ ಪದಕ್ಕೆ ಉಪಮಾರ್ಥವನ್ನು ಹೇಳಿ ಉಪಮಾರ್ಥದಲ್ಲಿ ಪ್ರಯೋಗವನ್ನು ತೋರಿಸಿದೆ. ಇದರಂತೆಯೇ **ಊಧರ್ನ ನಗ್ನಾ** ಎಂಬಲ್ಲಿಯೂ ಉಪಮಾರ್ಥದಲ್ಲಿಯೇ ಪ್ರಯುಕ್ತವಾಗಿದೆ. ಇದನ್ನು ಅನುಸರಿಸಿ **ಮನುಷೋ ನ ಯೋಷಾ** ಎಂಬ ವಾಕ್ಯಕ್ಕೆ **ಮನುಷ್ಯಸ್ಯ ಪರಿವೃಢಾದೇಃ ಮಹಿಷೀವತ್** ವೀರನಾದವನ ಅಥವಾ ಉತ್ತಮನಾದವನ ಸ್ತ್ರೀಯು ಇರುವಂತೆ ಎಂದು ಅರ್ಥವನ್ನು ವರ್ಣಿಸಿ, **ಸಾ ಯಥಾ ಸುವೇಷಾ ಅಂತಃಪುರ ಏವ ಮಧ್ಯೇ ಚರತಿ** ಆಭರಣಾದಿಗಳಿಂದ ಅಲಂಕೃತಳಾಗಿ ಅಂತಃಪುರದಲ್ಲಿಯೇ ಗೂಢವಾಗಿ ಸಂಚರಿಸುವ ವೀರಪುರುಷನ ಸ್ತ್ರೀ (ಸಾದೃಶ್ಯ) ಹೋಲಿಕೆಯನ್ನು ಮೇಘಪಂಕ್ತಿ, ಮತ್ತು ವಿದ್ಯುತ್ತುಗಳ ಸಂಚಾರದ ವಿಷಯದಲ್ಲಿ ವಿವರಿಸಿದೆ.

**ಸಭಾವತೀ ವಿದಥ್ಯಾ ವಾಕ್ ಇವ—ಸಭಾ ಜನಸಂಘಃ । ತದ್ವತೀ । ವರ್ಷಾಕಾಲೇ ಆವಿರ್ಭವಂತಿ । ವಿದಥೋ ಯಜ್ಞಃ ತದರ್ಹತೀತಿ ವಿದಥ್ಯಾ ಪ್ರೈಷಸ್ತೋತ್ರಾದಿರೂಪಾ ವಾಕ್ । ಸಾ ಯಥಾ ಯಜ್ಞಸಭಾಂ ಪ್ರಾಪ್ಯ ಆವಿರ್ಭವತಿ ತದ್ವತ್ । ಯದ್ವಾ ವೇದನಾರ್ಹಾ ವಿವದಮಾನಯೋರ್ವಾಕ್ । ಸಾ ಯಥಾ ಸಭಾವತೀ ತದ್ವತ್ ।** ಮಿಂಚಿನಿಂದ ಕೂಡಿರುವ ಮೇಘಮಾಲೆಯು—ಸರ್ವಕಾಲದಲ್ಲಿಯೂ ಗೋಚರವಾಗುವುದಿಲ್ಲ ಎಂಬ ವಿಷಯವನ್ನು ಯಜ್ಞದಲ್ಲಿ ಪಠಿಸುವ ಪ್ರೈಷ ಮತ್ತು ಸ್ತುತಿರೂಪವಾದ ವಾಕ್ಕಿಗೆ ಹೋಲಿಸಿ ವರ್ಣಿಸಿದೆ. ಯಜ್ಞಸಭೆಯಲ್ಲಿ ಸೇರಿರುವ ಜನಸಮೂಹದ ಮಧ್ಯದಲ್ಲಿ ಯಜ್ಞಾಂಗವಾದ ಪ್ರೈಷ ಮತ್ತು ಸ್ತುತಿರೂಪವಾದ ವಾಕ್ಕುಗಳು ಆ ಕಾಲದಲ್ಲಿ ಮಾತ್ರವೇ ಪಠಿತವಾಗುತ್ತದೆ. ಇದರಂತೆಯೇ ಅಂತರಿಕ್ಷದಲ್ಲಿ ವಿದ್ಯುತ್ ಮತ್ತು ಮೇಘಮಾಲೆಯು

ವರ್ಷಾಕಾಲದಲ್ಲಿ ಮಾತ್ರವೇ ಗೋಚರವಾಗುತ್ತದೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ **ವಿದಥ್ಯಾ ವಾಕ್** ಎಂಬ ಪದಕ್ಕೆ **ವೇದನಾರ್ಹಾ ವಿವದಮಾನಯೋಃ ವಾಕ್** ಪೂರ್ವಪಕ್ಷ ಮತ್ತು ಸಿದ್ಧಾಂತಗಳ ವಿಮರ್ಶಾಪೂರ್ವಕವಾಗಿ ಅರ್ಥವನ್ನು ನಿಶ್ಚಯಮಾಡುವುದಕ್ಕಾಗಿ ವಾದವನ್ನು ಆಚರಿಸುವವರ ವಾಕ್ಕು ಸಭಾಮಧ್ಯದಲ್ಲಿರುವ ಜನಸಂದಣಿಯಲ್ಲಿ—ಆ ಕಾಲದಲ್ಲಿ ಮಾತ್ರವೇ—ಗೋಚರವಾಗುವ ಹಾಗೆ ಮೇಘಮಾಲೆಯು ವಿದ್ಯುತ್ ಇವುಗಳು ವರ್ಷಾಕಾಲದಲ್ಲಿ ಮಾತ್ರ ಗೋಚರವಾಗುತ್ತವೆ ಎಂದು ವರ್ಣಿತವಾಗಿದೆ. ಇದರಿಂದ ಇಲ್ಲಿ ಸಭಾವತೀ ಎಂಬ ಪದದಿಂದ ವಿವರಿಸಿದೆ. ಮರುದ್ದೇವತೆಗಳು ಈ ಪ್ರಕಾರವಾಗಿರುವ ಮೇಘಪಂಕ್ತಿಗಳೊಡನೆ ಸಂಚರಿಸುವವರೆಂದೂ, ಇವರು ತಮ್ಮ ಆಯುಧವನ್ನು ಧರಿಸಿಕೊಂಡು ಯಾಗಶಾಲೆಗೆ ಯಜ್ಞಕ್ಕಾಗಿ ಬರಲಿ ಎಂದೂ **ಸೈವಂ ರೂಪಾ ಯೇಷು ಮಿಮ್ಯಕ್ಷ ತೇ ಮರುತೋ ದೇವಯಜನಮಾಗಚ್ಛಂತು** ಎಂಬ ವಾಕ್ಯದಿಂದ ವಿವರಿಸಿದೆ. ವಿದಥ ಎಂಬ ಪದವು—ಯಜ್ಞನಾಮಗಳಲ್ಲಿ (ನಿ. ೩–೧೯) ಉಕ್ತವಾಗಿದೆ. **ವಿದಥಾನಿ ವೇದನಾನಿ** (ನಿ. ೬–೮) ವಿಜ್ಞಾನಾನಿ ಎಂದೂ ಅರ್ಥ ಬೋಧಕವಾಗಿದೆ.

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ । ವಿದಥಾನಿ ಪ್ರಚೋದಯನ್ ।**
(ಋ. ಸಂ. ೩–೨೭-೭)

ಈ ಉದಾಹರಣೆಯಲ್ಲಿ ವಿದಥಾನಿ ಎಂಬ ಪದಕ್ಕೆ ವಿಜ್ಞಾನ ಎಂದು ಅರ್ಥವನ್ನು ವಿವರಿಸಿದೆ.

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**
**ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ।**
(ಋ. ಸಂ. ೧-೧೬೨-೧)

ಇಲ್ಲಿ ವಿದಥ ಶಬ್ದವು ಯಜ್ಞ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸಾಯಣರು ಇಲ್ಲಿ ಈ ಎರಡುವಿಧವಾದ ಅರ್ಥಗಳನ್ನೂ ವಿದಥ್ಯಾ ಎಂಬ ಪದಕ್ಕೆ ವಿವರಿಸಿದ್ದಾರೆ. (ಪೇಜು 9–13 ಗಳನ್ನು ನೋಡಿ).

॥ ವ್ಯಾಕರಣಪ್ರಕ್ರಿಯಾ ॥

**ಮಿಮ್ಯಕ್ಷ**—ಮ್ಯಕ್ಷ ಗತೌ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ—** (ಪಾ. ಸೂ. ೩-೪-೮೨) ಎಂಬುದರಿಂದ ಣಲಾದೇಶ. ಧಾತುವಿಗೆ ದ್ವಿತ್ವ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಸಂಪ್ರಸಾರಣ. ಪೂರ್ವರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಸುಧಿತಾ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ವ್ಯತ್ಯಯದಿಂದ ಧಾತುವಿಗೆ ಹಿ ಆದೇಶ ಬಂದಾಗ ಧಿತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್.

**ಹಿರಣ್ಯನಿರ್ಣಿಕ್**—ಹಿರಣ್ಯಮಿವ ನಿರ್ಣಿಕ್ ಯಸ್ಯಾಃ ಸಾ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಗುಹಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್ ಬರುತ್ತದೆ.

**ಚರಂತೀ**—ಚರ ಗತಿಭಕ್ಷಣಯೋಃ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ಶಪ್‌ಶ್ಯನೋರ್ನಿತ್ಯಂ** ಎಂಬುದರಿಂದ ನುಮಾಗಮ. ಧಾತುಸ್ವರ ಉಳಿಯುತ್ತದೆ.

**ಸಭಾವತೀ**—ಸಭಾ ಅಸ್ಯಾ ಅಸ್ತಿ ಇತಿ ಸಭಾವತೀ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್. ಮತುಪ್ ಙೀಪ್. ಪಿತ್ತಾದುದರಿಂದ ಅನುದಾತ್ತವಾಗುತ್ತವೆ.

**ವಿದಥ್ಯಾ ಇವ**—ವಿದ ಜ್ಞಾನೇ. ಧಾತು. **ರುದಿವಿದಿಭ್ಯಾಂ ಙಿತ್** (ಉ. ಸೂ. ೩-೩೯) ಎಂಬುದರಿಂದ ಅಥ ಪ್ರತ್ಯಯ. ಙಿತ್ವವಿಧಾನಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ವಿದಥಂ ಅರ್ಹತಿ ಇತಿ ವಿದಥ್ಯಾ. ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. **ತಿತ್ ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್.

**ವಾಕ್**—ವಚ ಪರಿಭಾಷಣೇ. ಧಾತು. **ಕ್ವಿಬ್ವಚಿಪ್ರ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿನ ಉಪಧೆಗೆ ದೀರ್ಘ. ಧಾತುಸ್ವರದಿಂದ ಉದಾತ್ತವಾಗುತ್ತದೆ. || ೩ ||



॥ ಸಂಹಿತಾಪಾಠಃ ॥

**ಪರಾ ಶುಭ್ರಾ ಅಯಾಸೋ ಯವ್ಯಾ ಸಾಧಾರಣ್ಯೇವ ಮರುತೋ ಮಿಮಿಕ್ಷುಃ ।**
**ನ ರೋದಸೀ ಅಪ ನುದಂತ ಘೋರಾ ಜುಷಂತ ವೃಧಂ ಸಖ್ಯಾಯ ದೇವಾಃ ॥ ೪ ॥**

॥ ಪದಪಾಠಃ ॥

**ಪರಾ । ಶುಭ್ರಾಃ । ಅಯಾಸಃ । ಯವ್ಯಾ । ಸಾಧಾರಣ್ಯಾಽಇವ ಮರುತಃ । ಮಿಮಿಕ್ಷುಃ ।**
**ನ । ರೋದಸೀ ಇತಿ । ಅಪ । ನುದಂತ । ಘೋರಾಃ । ಜುಷಂತ । ವೃಧಂ । ಸಖ್ಯಾಯ । ದೇವಾಃ ॥**

॥ ಸಾಯಣಭಾಷ್ಯಂ ॥

**ಶುಭ್ರಾಃ ಶೋಭನಾಲಂಕಾರಾ ಅಯಾಸೋಽಭಿಗಂತಾರೋ ಮರುತೋ ಯವ್ಯಾ ಮಿಶ್ರಣಶೀಲಯಾ ವಿದ್ಯುತಾ ಪರಾ ಮಿಮಿಕ್ಷುಃ । ಪ್ರಕರ್ಷೇಣ ಸಿಂಚಂತ್ಯುದಕಸಂಸ್ತ್ಯಾಯಂ । ಸಾಧಾರಣ್ಯೇವ । ಯಥಾ ಲೋಕೇ ಸಾಧಾರಣ್ಯಾ ಸ್ತ್ರಿಯಾ ಸಂಗತಾ ಯುವಾನೋ ರೇತೋ ಮುಂಚಂತಿ ತದ್ವತ್ । ಏವಂ**

ಕುರ್ವಂತೋ ಘೋರಾ ಅತಿವೃಷ್ಟಿಪ್ರದಾನೇನ ಭಯಂಕರಾಸ್ತೇ ರೋದಸೀ ದ್ಯಾವಾಪೃಥಿವ್ಯೌ ನಾಪ ನುದಂತೆ। ಅಪನೋದನಂ ವರ್ಷಣರೂಪಂ ತಿರಸ್ಕಾರಂ ನ ಕುರ್ವಂತಿ। ದ್ಯಾವಾಪೃಥಿವೀವಚನೋ ರೋ-ದಸೀಶಬ್ದಃ ಸರ್ವತ್ರಾದ್ಯುದಾತ್ತಃ। ಅತ್ರ ತು ವ್ಯತ್ಯಯೇನಾಂತೋದಾತ್ತತ್ವಮಿತಿ ದ್ರಷ್ಟವ್ಯಂ। ಯದ್ವಾ। ರೋದಸಾ ಶಬ್ದೇನ ರೋದನಸ್ವಭಾವೋ ರುದ್ರಃ। ತಸ್ಯ ಸ್ತ್ರೀ ರೋದಸೀತಿ ಕೇಚಿದಾಹುಃ। ಅಪರೇ ತು ಮರುತಾಂ ಸ್ತ್ರಿಯೋ ರೋದಸೀತಿ ನಾಮಧೇಯಮಿತ್ಯಾಹುಃ। ಅಯಮೇವ ಪಕ್ಷೋ ಯುಕ್ತ ಉತ್ತರತ್ರೈವಂ ವ್ಯವಹಾರಾತ್। ತತ್ಪಕ್ಷೇ ರೋದಸೀ ರೋದಸ್ಯಾಂ॥ ಜುಷಂತಾತ್ಸಪ್ತಮ್ಯಾ ಈಕಾರೋ ಲುಗ್ವಾ। ಈದೂತೌ ಚ ಸಪ್ತಮ್ಯರ್ಥ ಇತಿ ಪ್ರಗೃಹ್ಯಸಂಜ್ಞಾ॥ ತಸ್ಯಾಂ ಪ್ರಿಯಂ ಧನಂ ಮುಂಚಂತಿ। ಕಿಂತು ದೇವಾ ಮೋದಯಿತಾರೋ ಮಾದಯಿತಾರೋ ವಾ ಮರುತಃ ಸಖ್ಯಾಯ ವೃಧಂ ವೃದ್ಧಿಂ ಜುಷಂತ। ಸೇವಂತೇ ದ್ಯಾವಾಪೃಥಿವೀಪಕ್ಷೇ ಸಖ್ಯಾಯ ಜಗತಾಂ ಸಖಿಭಾವಾಯ ತಯೋರ್ವೃದ್ಧಿಂ ಕುರ್ವಂತೀತ್ಯರ್ಥಃ॥

॥ ಪ್ರತಿಪದಾರ್ಥ ॥

**ಶುಭ್ರಾಃ**—ಶೋಭನಾಲಂಕಾರರೂ। **ಅಯಾಸಃ**—ಗಮನಶೀಲರೂ ಆದ। **ಮರುತಃ** - ಮರುದ್ದೇವತೆಗಳು। **ಯುವ್ಯಾ**—ಮಿಶ್ರಣಶೀಲಳಾದ (ವಿದ್ಯುತ್ತಿನೊಡನೆ ಸಂಗತರಾಗಿ)। **ಸಾಧಾರಣ್ಯಾ ಇವ**—ಸಾಧಾರಣ ಸ್ತ್ರೀಯೊಡನೆ (ಮಿಶ್ರಿತರಾದ ಯುವಕರು ರೇತಃಸಿಂಚನಮಾಡುವಂತೆ)। **ಪರಾ ಮಿಮಿಕ್ಷುಃ**—ಹೆಚ್ಚಾಗಿ ಉದಕವನ್ನು ವರ್ಷಿಸುತ್ತಾರೆ.(ಹೀಗೆ ಮಾಡುವಾಗ)। **ಘೋರಾಃ**—(ಅತಿವೃಷ್ಟಿಪ್ರದರಾಗಿ) ಘೋರರಾದ ಮರುದ್ದೇವತೆಗಳು **ರೋದಸೀ**—ದ್ಯಾವಾಪೃಥಿವಿಗಳನ್ನು। **ನ ಅಪ ನುದಂತೆ**—ತಿರಸ್ಕರಿಸುವುದಿಲ್ಲ (ಆದರೆ)। **ದೇವಾಃ**—ಸಂತೋಷ (ಮದ) ಕಾರಕರಾದ ಮರುದ್ದೇವತೆಗಳು। **ಸಖ್ಯಾಯ**—(ಲೋಕಗಳ) ಸ್ನೇಹಕ್ಕೋಸ್ಕರ। **ವೃಧಂ**—(ಅವುಗಳ) ವೃದ್ಧಿಯನ್ನು। **ಜುಷಂತ**—ಸೇವಿಸುತ್ತಾರೆ.

॥ ಭಾವಾರ್ಥ ॥

ಶುಭ್ರರೂ, ಗಮನಶೀಲರೂ ಆದ ಮರುದ್ದೇವತೆಗಳು ಲೋಕದಲ್ಲಿ ಯುವಕರು ಸಾಧಾರಣ ಸ್ತ್ರೀಯೊಡನೆ ಸಂಗತರಾಗಿ ರೇತಸ್ಸಿಂಚನಮಾಡುವಂತೆ, ತಮ್ಮ ಸಹಚಾರಿಣಿಯಾದ ವಿದ್ಯುತ್ತಿನೊಡನೆ ಮಿಶ್ರಿತರಾಗಿ ವೃಷ್ಟಿಯನ್ನುಂಟುಮಾಡುತ್ತಾರೆ. ಭಯಂಕರರಾದ ಇವರು ಅತಿವೃಷ್ಟಿಪ್ರದರಾಗಿ ದ್ಯಾವಾಪೃಥಿವಿಗಳನ್ನು ತೊಂದರೆಪಡಿಸುವುದಿಲ್ಲ. ಆದರೆ ಈ ಲೋಕಗಳ ಸಖ್ಯವನ್ನಪೇಕ್ಷಿಸುವವರಾಗಿ ಅವುಗಳ ಏಳಿಗೆಯನ್ನು ಬಯಸುತ್ತಾರೆ.

## English Translation.

The radiant, ever-moving Maruts, have mingled with (their) associate, (lightning), like (youths) with common women; the formidable divinities do not overwhelm heaven and earth (with rain), but promote their prosperity through (friendly) regard.

॥ ವಿಶೇಷವಿಷಯಗಳು ॥

**ಮರುತಃ ಯವ್ಯಾ ಸಾಧಾರಣ್ಯೇವ ಪರಾಮಿಮಿಕ್ಷುಃ—ಮಿಶ್ರಣಶೀಲಯಾ ವಿದ್ಯುತಾ ಪ್ರಕರ್ಷೇಣ ಸಿಂಚಂತ್ಯುದಕಸಂಸ್ತ್ಯಾಯಂ । ಯಥಾ ಲೋಕೇ ಸಾಧಾರಣ್ಯಾ ಸ್ತ್ರಿಯಾ ಸಂಗತಾ ಯುವಾನೋ ರೇತೋ ಮುಂಚಂತಿ ತದ್ವತ್ ।** ವಿದ್ಯುತ್ (ಮಿಂಚು) ಯಾವಾಗಲೂ ತನಗಿಂತ ಬೇರೆಯಾಗಿರುವ ಮೇಘದೊಡನೆ ಸೇರುವ ಸ್ವಭಾವವುಳ್ಳದ್ದಾಗಿಯೇ ಇರುವುದು. ಮಿಂಚಿನಿಂದ ಕೂಡಿದ ಮೇಘದಿಂದ ವೃಷ್ಟಿಯು ಉಂಟಾಗುವುದೂ ಸ್ವಾಭಾವಿಕವಾಗಿಯೇ ಇರುತ್ತದೆ. ವಾಯುವಿನ ಸಂಪರ್ಕದಿಂದ ವೃಷ್ಟ್ಯುದಕಗಳು ಭೂಮಿಗೆ ಬೀಳುತ್ತವೆ. ಈ ಅಂಶವನ್ನು ಕಾವ್ಯಶೈಲಿಯಿಂದ ಇಲ್ಲಿ ವರ್ಣಿಸಿದೆ. ವಿದ್ಯುತ್ ಶಬ್ದವೂ ಸ್ತ್ರೀಲಿಂಗವಾಗಿರುವುದರಿಂದ ಒಬ್ಬ ಸ್ತ್ರೀಯೆಂದೂ, ಮರುಚ್ಛಬ್ದವು ಪುಲ್ಲಿಂಗವಾದುದರಿಂದ ಒಬ್ಬ ಪುರುಷನೆಂದೂ, ಇವರಿಬ್ಬರಿಗೂ ಸಂಬಂಧವನ್ನು ಇಲ್ಲಿ ವರ್ಣಿಸಿದೆ. ಮರುದ್ದೇವತೆಗಳು **ಶುಭ್ರಾಃ—ಶೋಭನಾಲಂಕಾರಾಃ** ಉತ್ತಮವಾದ ಮಂಗಳಕರವಾದ ಆಭರಣಾದಿ ಅಲಂಕಾರವುಳ್ಳವರೆಂದೂ, **ಅಯಾಸಃ—ಅಭಿಗಂತಾರಃ** ಸಂಚರಣಶೀಲರೆಂದೂ ಅರ್ಥಮಾಡಿದೆ. ಲೋಕದಲ್ಲಿ ಆಭರಣಾದಿಗಳಿಂದ ಅಲಂಕೃತರಾದ ಯೌವ್ವನವುಳ್ಳ ಪುರುಷರು ಸ್ತ್ರೀಯರೊಡನೆ ಸಂಚರಿಸುತ್ತಾ ವಿಹರಣಶೀಲರಾಗಿ ಆ ಸ್ತ್ರೀಯರನ್ನು ಭೋಗಿಸುವಂತೆ ಮರುದ್ದೇವತೆಗಳಿಗೂ, ವಿದ್ಯುದ್ರೂಪದಲ್ಲಿರುವ ಸ್ತ್ರೀಯರೊಡಗೂಡಿ ವೃಷ್ಟ್ಯುದಕಗಳನ್ನು ಸುರಿಸುವರೆಂದು ವರ್ಣಿಸಿದೆ.

**ಘೋರಾಃ ರೋದಸೀ ನ ಅಪನುದಂತ—ಅತಿವೃಷ್ಟಿಪ್ರದಾನೇನ ಭಯಂಕರಾಃ ದ್ಯಾವಾಪೃಥಿವ್ಯಾ ಅಪನೋದನಂ ವರ್ಷಣರೂಪಂ ತಿರಸ್ಕಾರಂ ನ ಕುರ್ವಂತಿ । ಯದ್ವಾ ರೋದಸಾ ಶಬ್ದೇನ ರೋದನಸ್ವಭಾವೋ ರುದ್ರಃ । ತಸ್ಯ ಸ್ತ್ರೀ ರೋದಸೀತಿ ಕೇಚಿದಾಹುಃ । ಅಪರೇತು ಮರುತಾಂ ಸ್ತ್ರಿಯೋ ರೋದಸೀತಿ ನಾಮಧೇಯಮಿತ್ಯಾಹುಃ । ಅಯಮೇವಪಕ್ಷೋ ಯುಕ್ತಃ । ಉತ್ತರತ್ರೈವಂ ವ್ಯವಹಾರಾತ್ । ತತ್ಪಕ್ಷೇ ರೋದಸೀ ರೋದಸ್ಯಾಂ । ತಸ್ಯಾಂ ಪ್ರಿಯಂ ಧನಂ ಮುಂಚಂತಿ ।** ಮರುದ್ದೇವತೆಗಳು ಪ್ರಭೂತವಾದ ವೃಷ್ಟಿಯನ್ನು ಮೇಘಗಳಿಂದ ಸುರಿಸುವಾಗ ಇತರರಿಗೆ ಭಯವನ್ನು ಉಂಟುಮಾಡುವ ರೂಪವನ್ನು ಧರಿಸುವರು ಎಂದು ಅರ್ಥವನ್ನು ವರ್ಣಿಸಿದೆ. ರೋದಸೀ ಎಂಬ ಪದವು ದ್ಯಾವಾಪೃಥಿವೀನಾಮಗಳಲ್ಲಿ (ನಿ ೩–೨೨) ಉಕ್ತವಾಗಿದೆ.

**ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್ ।**
**ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ ಸಂಗೃಭ್ಣಾ ಮಘವನ್ ಕಾಶಿರಿತ್ತೇ ॥**

(ಋ. ಸಂ ೩-೩೦-೫)

ಇಲ್ಲಿ **ರೋದಸೀ ರೋಧಸೀ ದ್ಯಾವಾಪೃಥಿವ್ಯಾ ವಿವಿಧಾನಿ ಹಿ ಭೂತಾನಿ ಏತೇ ರುಂಧಃ ವಿರೋಧನಾತ್** ಅನೇಕ ವಿಧವಾದ ಪ್ರಾಣಿಗಳನ್ನೂ ತಡೆದು ಅಡಗಿಸಿಕೊಂಡಿರುವುದರಿಂದ ದ್ಯಾವಾಪೃಥಿವಿಗಳು ರೋಧಸೀ ಎಂಬ ಪದದಿಂದ ಬೋಧ್ಯವಾಗಿರುತ್ತವೆ ಎಂದು ಅರ್ಥವನ್ನು ವಿವರಿಸಿದೆ. (ನಿ ೬-೧) ಮರುದ್ದೇವತೆಗಳು ಉಗ್ರವಾದ ರೂಪದಿಂದ ಅತಿವೃಷ್ಟಿಪ್ರದರಾಗಿದ್ದಾಗ್ಯೂ ದ್ಯಾವಾಪೃಥಿವಿಗಳ ವಿಷಯದಲ್ಲಿ (ವೃಷ್ಟ್ಯಭಾವರೂಪವಾದ) ಅನಾವೃಷ್ಟಿರೂಪವಾದ ತಿರಸ್ಕಾರವನ್ನು ಮಾಡುವವರಾಗಿಲ್ಲ ಎಂದು ಒಂದು ವಿಧವಾಗಿ ಅರ್ಥವನ್ನು ಹೇಳಿದೆ. ಎರಡನೆಯ ಅರ್ಥದಲ್ಲಿ **ರೋದಸೀ** ಎಂಬ ಪದವು **ರುದ್ರಸ್ಯ ಪತ್ನೀ ರುದ್ರಸ್ಯ ವಿಭೂತಿಃ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ (ನಿ. ೧೧-೫೦) ಎಂದು ಹೇಳಿ,

**ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ ಗ್ನಾಯ್ಯಶ್ವಿನೀ ರಾಟ್ ।**
**ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥**
(ಋ. ಸಂ. ೫-೪೬-೮)

ಎಂಬಲ್ಲಿ ಪ್ರಯುಕ್ತವಾಗಿರುವ **ರೋದಸೀ** ಎಂಬ ಪದಕ್ಕೆ **ರುದ್ರಸ್ಯ ಪತ್ನೀ** ಎಂದು ಅರ್ಥವನ್ನು ವಿವರಿಸಿದ್ದಾರೆ. (ನಿ. ೧೧-೪೯) ಸಾಯಣರೂ ರೋದಸ್ ಶಬ್ದದಿಂದ ರೋದನಮಾಡುವ ಸ್ವಭಾವವುಳ್ಳವನಾದ ರುದ್ರನು ಬೋಧ್ಯನಾಗಿ ರುವನೆಂಬ ಅರ್ಥವನ್ನು ವರ್ಣಿಸಿ ತಸ್ಯ ಸ್ತ್ರೀ ರುದ್ರನ ಸ್ತ್ರೀಯು ರೋದಸೀ ಎಂಬ ಶಬ್ದದ ಅಭಿಧೇಯವಾಗಿರುವಳು ಎಂದು ಮತಾಂತರವನ್ನು ಬೋಧಿಸಿದ್ದಾರೆ. ಮತ್ತೂ —

ಅಪರೇ ತು ಎಂಬ ವಾಕ್ಯದಿಂದ ಮರುದ್ದೇವತೆಗಳ ಸ್ತ್ರೀಯು ರೋದಸೀ ಶಬ್ದದಿಂದ ಉಕ್ತವಾಗಿರುವ ಕಾರಣ ರೋದಸೀ ಎಂಬ ಪದದಿಂದ ಮರುದ್ದೇವತೆಗಳ ಸ್ತ್ರೀನಾಮಧೇಯವೆಂದೂ, ಈ ರೀತಿಯಾದ ವ್ಯಾಖ್ಯಾನವೇ ಮುಂದೆ ಅರ್ಥಕ್ಕನುಸಾರವಾಗಿರುವುದೆಂದೂ ವಿವರಿಸಿ, ಈ ವ್ಯಾಖ್ಯಾನದಲ್ಲಿ ರೋದಸೀ ಎಂಬ ರೂಪವು ಸಪ್ತಮೀ ವಿಭಕ್ತ್ಯಂತ ವಾಗಿರುವುದೆಂದೂ ಹೇಳಿ, **ತಸ್ಯಾಂ ಪ್ರಿಯಂ ಧನಂ ಮುಂಚಂತಿ** ಆ ಸ್ತ್ರೀಯಲ್ಲಿ ತಮ್ಮ ಪ್ರಿಯವಾದ ಧನವನ್ನು ಸುರಿಸುತ್ತಾರೆ ಎಂದು ವಿವರಿಸಿದ್ದಾರೆ ಯಾಸ್ಕರು—

**ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹವಾಮಹೇ ।**
**ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ॥**
(ಋ. ಸಂ. ೫-೫೬-೮)

ಈ ಋಕ್ಕನ್ನು ಉದಹರಿಸಿ ಉತ್ತಮವಾದ ಉದಕಗಳನ್ನು ಧರಿಸಿರುವ ರೋದಸೀಯಿಂದ ಕೂಡಿರುವ ಮರುದ್ದೇವತೆಗಳು ಉಪವಿಷ್ಟರಾದ ರಥವನ್ನು ನಾವು ಇಲ್ಲಿ ಆಹ್ವಾನಿಸುತ್ತೇವೆ ಎಂದು ಅರ್ಥವನ್ನು ವಿವರಿಸಿದ್ದಾರೆ. (ನಿ. ೧೧-೫೦)

**ದೇವಾಃ—ಮೋದಯಿತಾರೋ ಮಾದಯಿತಾರೋ ವಾ ಮರುತಃ ।** ಯಾಸ್ಕರು **ದೇವೋ ದಾನಾ ದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಸ್ಥಾನೋ ಭವತೀತಿ ವಾ** (ನಿ. ೭-೧೫) ಯಜಮಾನರಿಗೆ ಪ್ರಭೂತವಾಗಿ ಧನವನ್ನು ಅನುಗ್ರಹಿಸುವುದರಿಂದಲೂ, ಅಥವಾ ಯಜಮಾನರನ್ನು ಕಾಂತಿಯುಳ್ಳವರನ್ನಾಗಿ ಮಾಡುವುದರಿಂದಲೂ ತಾವೇನೇ ಪ್ರಕಾಶಿಸುತ್ತಿರುವುದರಿಂದಲೂ, ಉತ್ತಮವಾದ ಸ್ವರ್ಗದಲ್ಲಿ ವಾಸವಾಗಿರುವುದರಿಂದಲೂ ದೇವನಾಗಿರುವನು ಎಂದು ದೇವಶಬ್ದದ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಮರುತ್ತುಗಳಿಗೆ ದೇವಾಃ ಎಂಬ ಶಬ್ದದಿಂದ ಹೇಳಿ, ಈ ಮರುದ್ದೇವತೆಗಳು ಯಜಮಾನರನ್ನು ಸಂತೋಷದಿಂದ ಇರಿಸಿರುವವರು ಅಥವಾ ಮದದಿಂದ ಕೂಡಿದವರನ್ನಾಗಿ ಮಾಡುವವರು ಎಂಬರ್ಥವನ್ನು ವಿವರಿಸಿದೆ.

**ಸಖ್ಯಾಯ ವೃಧಂ ಜುಷಂತೆ—**ಈ ವಾಕ್ಯದಿಂದ ಮರುದ್ದೇವತೆಗಳು ತಮ್ಮ ಸ್ನೇಹವು ಇತರರಿಗೆ ಉಂಟಾಗುವುದಕ್ಕಾಗಿ ವೃದ್ಧಿಯನ್ನು ಹೊಂದುವರೆಂದು ವರ್ಣಿಸಿ ದ್ಯಾವಾಪೃಥಿವಿಗಳು ಜಗತ್ತಿನ ಹಿತಕ್ಕಾಗಿ ಅಭಿವೃದ್ಧಿಯನ್ನು ಹೊಂದುವರೆಂದೂ ದ್ಯಾವಾಪೃಥಿವಿಗಳ ಸ್ನೇಹಕ್ಕಾಗಿ ಎಂದರೆ ದ್ಯಾವಾ ಪೃಥಿವಿಗಳೊಡನೆ ಎಡಬಿಡದೆ ಇರುವುದಕ್ಕಾಗಿ ವೃದ್ಧಿಯನ್ನು ಹೊಂದುವರು ಎಂಬ ಅರ್ಥವನ್ನು ವಿವರಿಸಿ ದ್ಯಾವಾ ಪೃಥಿವಿಗಳನ್ನು ತಮ್ಮ ಸ್ನೇಹ ದಿಂದ ವೃದ್ಧಿಗೊಳಿಸುವರು ಎಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶುಭ್ರಾಃ**—ಶುಭ ದೀಪ್ತೌ ಧಾತು. **ಸ್ಫಾಯಿತಂಚಿ**—(ಉ. ಸೂ. ೨-೧೭೦ ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಯಾಸಃ**—ಅಯ ಗತೌ. ಧಾತು. ಅಯಂತೇ ಇತಿ ಅಯಾಃ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಯವ್ಯಾ** ಯು ಮಿಶ್ರಣಾಮಿಶ್ರಣಯೋಃ ಧಾತು. **ಅಚ ಇಃ** ಎಂಬುದರಿಂದ ಇ ಪ್ರತ್ಯಯ. ಧಾತುವಿಗೆ ಗುಣ, ಅವಾದೇಶ. ತೃತೀಯಾ ಏಕವಚನಾಂತರೂಪ.

**ಸಾಧಾರಣ್ಯಾ**—ಸಾಧಾರಣೀಶಬ್ದ ಙೀಷಂತವಾದುದರಿಂದ ಅಂತೋದಾತ್ತವಾಗಿದೆ. ತೃತೀಯಾವಲ್ಲಿ ಯಣಾದೇಶ ಬಂದುದರಿಂದ **ಉದಾತ್ತಯಣೋಹಲ್ ಪೂರ್ವಾತ್** (ಪಾ ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಿಮಿಕ್ಷುಃ**—ಮಿಹ ಸೇಚನೇ. ಈ ಧಾತುವಿಗೆ ಸಮಾನಾರ್ಥಕವಾದ ಮಿಮಿಕ್ಷ ಧಾತು. ಲಿಟ್ ಪ್ರಥಮ ಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ರೋದಸೀ**—ದ್ಯಾವಾಪೃಥಿವೀವಾಚಕವಾದ ಈ ಶಬ್ದವು ಆದ್ಯುದಾತ್ತವಾದರೂ ಇಲ್ಲಿ ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಅಥವಾ ಸ್ತ್ರೀತ್ವದಲ್ಲಿ ಙೀಷ್ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಪರವಾದಾಗ **ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ಅದಕ್ಕೆ ಈಕಾರಾದೇಶ. ಅಥವಾ ಲುಕ್. ಸಪ್ತಮ್ಯರ್ಥದಲ್ಲಿ ಈಕಾರವಿರುವುದರಿಂದ **ಈ ದೂತೌ ಚ ಸಪ್ತಮ್ಯರ್ಥೇ** ಎಂಬುದರಿಂದ ಪ್ರಗೃಹ್ಯ ಸಂಜ್ಞಾ ಬರುವುದರಿಂದ ಅಚ್ ಪರವಾದರೂ ಸಂಧಿ ಬರುವುದಿಲ್ಲ.

**ನುದಂತ**—ಣುದ ಪ್ರೇರಣೇ. ಧಾತು. **ಣೋನಃ** ಎಂಬುದರಿಂದ ಆದಿಗೆ ನತ್ವ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಜುಷಂತ**—ಜುಷೀ ಪ್ರೀತಿಸೇವನಯೋಃ. ಧಾತು. ಹಿಂದಿನಂತೇ ಛಾಂದಸವಾಗಿ ಲಙ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ವೃಧಂ**—ವೃಧು ವೃದ್ಧೌ ಧಾತು. ಕ್ವಿಪ್ ಪ್ರತ್ಯಯ ದ್ವಿತೀಯಾ ಏಕವಚನಾಂತರೂಪ.

**ಸಖ್ಯಾಯ**—**ಸಖ್ಯುರ್ಯಃ** ಎಂಬುದರಿಂದ ಭಾವಾರ್ಥದಲ್ಲಿ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಇಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೪ ॥



॥ ಸಂಹಿತಾಪಾಠಃ ॥

ಜೋಷದ್ಯದೀಮಸುರ್ಯಾ ಸಚಧ್ಯೈ ವಿಷಿತಸ್ತುಕಾ ರೋದಸೀ ನೃಮಣಾಃ ।
ಆ ಸೂರ್ಯೇವ ವಿಧತೋ ರಥಂ ಗಾತ್ತ್ವೇಷಪ್ರತೀಕಾ ನಭಸೋ ನೇತ್ಯಾ ॥ ೫ ॥

॥ ಪದಪಾಠಃ ॥

ಜೋಷತ್ । ಯತ್ । ಈಂ । ಅಸುರ್ಯಾ । ಸಚಧ್ಯೈ । ವಿಸಿತऽಸ್ತುಕಾ । ರೋದಸೀ । ನೃऽಮನಾಃ ।
ಆ । ಸೂರ್ಯಾऽಇವ । ವಿಧತಃ । ರಥಂ । ಗಾತ್ । ತ್ವೇಷऽಪ್ರತೀಕಾ । ನಭಸಃ । ನ । ಇತ್ಯಾ ॥ ೫ ॥

॥ ಸಾಯಣಭಾಷ್ಯಂ ॥

ರೋದಸೀ ಮರುತ್ಪತ್ನೀ ವಿದ್ಯುದ್ವಾ ಏತನ್ನಾಮಿಕೇಯಮುಷೀಮೇನಂ ಮರುತ್ಸಂಘಂ ಜೋಷತ್ ಸೇವತೇ ॥ ಜುಷೇರ್ಲೇಟ್ಯಡಾಗಮಃ ॥ ಕಿಮರ್ಥಂ । ಸಚಧ್ಯೈ ಸಂಗಮನಾರ್ಥಂ । ಕೀದೃಶೀ ಸಾ । ಅಸುರ್ಯಾ । ಅಸುರಾಃ ಕ್ಷೇಪ್ತಾರೋ ಮರುತಃ । ತೇಷಾಂ ಸ್ವಭೂತಾ ವಿಷಿತಸ್ತುಕಾ ವಿಶಿಷ್ಟಕೇಶಸಂಘಾ ವಿಪ್ರಕೀರ್ಣಕೇಶಸಂಘಾ ವಾ ಸಂಭೋಗವಶೇನ ತಥಾ ನೃಮಣಾ ನೃಷು ನೇತೃಷು ಮರುತ್ಸು ಮನನವತೀ ಮನುಷ್ಯೇಷು ವಾ ವೃಷ್ಟಿಪ್ರದಾನಮನೋಯುಕ್ತಾ ತ್ವೇಷಪ್ರತೀಕಾ ದೀಪ್ತೋಪಕ್ರಮಾ ದೀಪ್ತಾವಯವಾ । ಈದೃಶೀ ದೇವೀ ವಿಧತಃ ಪರಿಚರತೋ ಮರುತ್ಸಂಘಸ್ಯ ರಥಮಾ ಗಾತ್ । ಆಗಚ್ಛತಿ । ವ್ಯಾಪ್ನೋತಿ । ಯಾಗದೇಶಂ ಗಂತುಂ ರಥಮಾರುಹ್ಯ ವಾ ಯಜ್ಞಮಾಗಚ್ಛತಿ । ಕೇವ । ವಿಧತಃ ಸೂರ್ಯಸ್ಯ ರಥಂ ತ್ವೇಷಪ್ರತೀಕಾ ಸೂರ್ಯೇವ ಸೂರ್ಯಪತ್ನೀವ । ಯದ್ವಾ । ಸೂರ್ಯಸ್ಯ ದುಹಿತಾಶ್ವಿನೋ ರಥಮಿವ ಸಾ ಯಥಾರೋಹತಿ ತದ್ವತ್ । ಆಗಮನೇ ದೃಷ್ಟಾಂತಃ । ನಭಸ ಇತ್ಯಾ ನ । ಅಂತರಿಕ್ಷಾದಿತ್ಯಯೋಃ ಸಾಧಾರಣೋऽಯಂ ನಭಃಶಬ್ದಃ ನಭ ಇತಿ ಷಟ್ ಸಾಧಾರಣಾನಿ । ನೈ. ೧-೪ । ಇತ್ಯುಕ್ತತ್ವಾತ್ । ಅತ್ರಾದಿತ್ಯವಚನಃ । ತಸ್ಯ ಗತಿರಿವ । ಸಾ ಯಥಾ ಶೀಘ್ರಂ ತದ್ವತ್ ॥

॥ ಪ್ರತಿಪದಾರ್ಥ ॥

**ಅಸುರ್ಯಾ**—(ಮೇಘಗಳನ್ನು) ಚದುರಿಸುವ ಮರುತರ ಸ್ವಕೀಯಳೂ । **ವಿಷಿತಸ್ತುಕಾ**—ಚದುರಿಸುವ ಕೇಶಸಂಘವುಳ್ಳವಳೂ (ಮತ್ತು) । **ನೃಮಣಾಃ**—ನೇತೃಗಳಾದ ಮರುದ್ದೇವತೆಗಳಲ್ಲಿ ನೆಟ್ಟ ಮನಸ್ಸುಳ್ಳವಳೂ ಆದ । **ರೋದಸೀ**—ಮರುತ್ಪತ್ನಿಯಾದ ರೋದಸೀ ಎಂಬುವಳು (ವಿದ್ಯುತ್ತು) । **ಸಚಧ್ಯೈ**—ಸಂಗಮನಕ್ಕೋಸ್ಕರ । **ಈಂ**—ಈ ಮರುತ್ಸಂಘವನ್ನು । **ಯತ್**—ಯಾವಕಾರಣ । **ಜೋಷತ್**—ಸೇವಿಸುತ್ತಾಳೋ (ಅಪೇಕ್ಷಿಸುತ್ತಾಳೋ) । **ತತ್**—ಆದಕಾರಣ । **ತ್ವೇಷಪ್ರತೀಕಾ**—ದೀಪ್ತೋಪಕ್ರಮಳಾದ (ದೀಪ್ತಾವಯವಳಾದ) ರೋದಸಿಯು । **ಸೂರ್ಯಾ ಇವ**—ಸೂರ್ಯ ಪತ್ನಿಯು (ಸೂರ್ಯನ ರಥವನ್ನು ಏರುವಂತೆ) ಅಥವಾ ಸೂರ್ಯ

ಪುತ್ರಿಯು ಅಶ್ವಿನೀದೇವತೆಗಳ ರಥವನ್ನೇರುವಂತೆ । **ನಭಸಃ**—ಸೂರ್ಯನ । **ಇತ್ಯಾ ನ**—(ಗತಿಯು ಶೀಘ್ರವಾಗಿರುವಂತೆ) ಶೀಘ್ರಗತಿಯಿಂದ । **ವಿಧತೇಃ**—ಚಲನಸ್ವಭಾವದ ಮರುತರ । **ರಥಂ**—ರಥವನ್ನು । **ಆ ಗಾತ್**—ಪ್ರಾಪ್ತಳಾಗುತ್ತಾಳೆ.

॥ ಭಾವಾರ್ಥ ॥

ಮೇಘಗಳನ್ನು ಚದುರಿಸುವ ಮರುದ್ದೇವತೆಗಳ ಸಹಚಾರಿಣಿಯೂ, ಕೆದರಿರುವ ಕೇಶರಾಶಿಯುಳ್ಳವಳೂ ಮರುದ್ದೇವತೆಗಳಲ್ಲೇ ನೆಟ್ಟ ಮನಸ್ಸುಳ್ಳವಳೂ ಆದ ಮರುತ್ಪತ್ನಿಯಾದ ರೋದಸೀ (ವಿದ್ಯುತ್ತು) ಎಂಬುವಳು ಸಂಭೋಗ ಕೋಸ್ಕರ ಮರುತ್ಸಂಘವನ್ನು ಅಪೇಕ್ಷಿಸುತ್ತಾಳೆ; ಆದುದರಿಂದ ದೀಪ್ತಾವಯವಳಾದ ಇವಳು, ಸೂರ್ಯಪತ್ನಿಯು ಸೂರ್ಯನ ರಥವನ್ನೇರುವಂತೆ ಅಥವಾ ಸೂರ್ಯಪುತ್ರಿಯಾದ ಸೂರ್ಯೆಯು ಅಶ್ವಿನೀದೇವತೆಗಳ ರಥವನ್ನೇರುವಂತೆ, ಸೂರ್ಯನಷ್ಟು ಶೀಘ್ರಗತಿಯಿಂದ, ಮರುದ್ದೇವತೆಗಳ ರಥವನ್ನೇರುತ್ತಾಳೆ.

## English Translation.

Rodasi, the associate of the scatterers (of the clouds), with dishevelled tresses, and mind devoted to her lords, wooes them to associate (with her): Radiant in form, she has ascended the car of the restless (Maruts) as Surya (ascended the car of the Ashwins), and comes hither (with the celerity) of the sun.

॥ ವಿಶೇಷವಿಷಯಗಳು ॥

**ರೋದಸೀ ಈಂ ಜೋಷತ್—ಮರುತ್ಪತ್ನೀ ವಿದ್ಯುತ್ ವಾ ಏತೆನ್ನಾಮಿಕಾ ಇಯಮಪಿ ಏನಂ ಮರುತ್ಸಂಘಂ ಸೇವತೇ ।** ಮರುದ್ದೇವತೆಗಳ ಪತ್ನಿಯು ಆಗಿರುವ (ವಿದ್ಯುತ್ತು) ಮಿಂಚು, ಮರುತ್ತುಗಳ ಸಮೂಹ ವನ್ನು ಸೇವಿಸುತ್ತದೆ. ಕಾವ್ಯಶೈಲಿಯಿಂದ ಮರುತ್ತುಗಳಿಗೂ ವಿದ್ಯುತ್ತಿಗೂ ದಾಂಪತ್ಯಸಂಬಂಧವನ್ನು ವರ್ಣಿಸಿದೆ. ಮರುತ್ತಗಳಲ್ಲಿ ಸಪ್ತವಿಧಗಳು ಇರುವುದೆಂದು (ಆವಹ, ಉದ್ವಹ, ಸಂವಹ, ಪ್ರವಹ, ಪರಿವಹ ಎಂಬ ಇವೇ ಮೊದಲಾದ ನಾಮಧೇಯಗಳು ಸಪ್ತಮರುತ್ತುಗಳಿಗೆ ಪ್ರಸಿದ್ಧವಾಗಿದೆ ಎಂದು) ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಇದನ್ನು ಅನುಸರಿಸಿ ಇಲ್ಲಿ ಮರುತ್ಸಂಘವೆಂದು ಹೇಳಿವೆ. ಇದು ಒಂದು ವಿಧವಾದ ಅರ್ಥ. ಒಬ್ಬ ಸ್ತ್ರೀಯು ಸುಖಾಭಿಲಾಷೆಯಿಂದ ಅಲ್ಲಲ್ಲಿ ಸಂಚರಿಸುತ್ತಿರುವ ಪುರುಷರನ್ನು ನೋಡಿ ಅವರ ಸಂಘಗಳಲ್ಲಿಯೂ ಅನುರಕ್ತಳಾಗಿರುತ್ತಾಳೆ ಎಂಬ ಅರ್ಥಾಂತರವೂ ಇಲ್ಲಿ **ಏತೆನ್ನಾಮಿಕಾ ಮರುತ್ಸಂಘಂ ಏನಂ ಸೇವತೆ** ಎಂಬ ವಾಕ್ಯದಿಂದ ಪ್ರತೀತವಾಗಿರುತ್ತದೆ.

ಈಂ ಎಂಬ ನಿಪಾತವು ಯಾಸ್ಕರಿಂದ **ಅಥ ಯೇ ಪ್ರವೃತ್ತೇರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯ ಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ**— ವಾಕ್ಯರೂಪವಾದ ಗ್ರಂಥಗಳಲ್ಲಿ ನಿಪಾತಗಳು (ಅವ್ಯಯಗಳು) ವಾಕ್ಯಪೂರಣಕ್ಕಾಗಿ ಪ್ರಯುಕ್ತಗಳಾಗಿರುತ್ತವೆ. ಛಂದೋಬದ್ಧವಾದ ಗ್ರಂಥಗಳಲ್ಲಿ ಪದಪೂರಣ (ಪಾದಪೂರಣ) ರೂಪವಾದ ಅರ್ಥದಲ್ಲಿ ಪ್ರಯುಕ್ತವಾಗಿರುತ್ತವೆ ಎಂದು ವಿವೃತಾಗಿದೆ. ಇವುಗಳು ಕಂ, ಈಂ, ಇತ್, ಉ ಎಂಬುವ ನಿಪಾತಗಳು. ಇವುಗಳಲ್ಲಿ ಒಂದಾಗಿರುವ ಈಂ ಎಂಬ ನಿಪಾತವು ಇಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಸಾಯಣರು ಏ**ನಂ ಮರುತ್ಸಂಘಂ** ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಅಸುರ್ಯಾ—ಅಸುರಾಃ ಕ್ಷೇಪ್ತಾರೋ ಮರುತಃ ತೇಷಾಂ ಸ್ವಭೂತಾ |** ಮರುದ್ದೇವತೆಗಳು ತಮ್ಮ ವೇಗಕ್ಕನುಗುಣವಾಗಿ ಚಲಿಸುವವರು. ಈ ದೇವತೆಗಳ ಸ್ವತ್ತಿನ ರೂಪವಾಗಿ ಇವರ ಅಧೀನದಲ್ಲಿರುವವಳು ಎಂದು ಅರ್ಥ.

**ವಿಷಿತಸ್ತುಕಾ—ವಿಶಿಷ್ಟಕೇಶಸಂಘಾ ವಿಪ್ರಕೀರ್ಣಕೇಶಸಂಘಾ ವಾ ಸಂಭೋಗೇನ ತಥಾ |** ಮರುದ್ದೇವತೆಗಳ ಪತ್ನಿಯು ತನ್ನ ಕೇಶಗಳನ್ನು ಒಟ್ಟುಕೂಡಿಸಿ ಅಲಂಕರಿಸಿಕೊಂಡಿರುವವಳು ಅಥವಾ ಪತಿಯೊಡನೆ ಭೋಗವನ್ನು ಅನುಭವಿಸಿರುವುದರಿಂದ ಕೆದರಿದ ಕೇಶಗಳುಳ್ಳವಳಾಗಿರುವಳು ಎಂದು ಅರ್ಥ.

**ನೃಮಣಾಃ—ನೇತೃಷು ಮರುತ್ಸು ಮನನವತೀಃ ವೃಷ್ಟಿಪ್ರದಾನಮನೋಯುಕ್ತಾ ವಾ ಮನುಷ್ಯೇಷು |** ಮರುದ್ದೇವತೆಗಳ ಪತ್ನಿಯು ತನ್ನ ಪತಿಯ ವಿಷಯದಲ್ಲಿ ಸರ್ವದಾ ಹಿತವನ್ನು ಧ್ಯಾನಮಾಡುವವಳಾಗಿರುವಳು. ಮನುಷ್ಯರ ವಿಷಯದಲ್ಲಿ ವೃಷ್ಟಿಯ ಉದಕಗಳನ್ನು (ಸುರಿಸುವುದರಲ್ಲಿ) ಅನುಗ್ರಹಿಸುವ ಮನಸ್ಸುಳ್ಳವಳು ಎಂದು ಅರ್ಥವನ್ನು ವಿವರಿಸಿದೆ.

**ತ್ವೇಷಪ್ರತೀಕಾ—ದೀಪ್ತೋಪಕ್ರಮಾ, ದೀಪ್ತಾವಯವಾ |** ಕಾಂತಿಯಿಂದ ಕೂಡಿರುವ ಕಾರ್ಯಾರಂಭವುಳ್ಳವಳೂ ಮತ್ತು ಕಾಂತಿಯಿಂದ ಬೆಳಗುತ್ತಿರುವ ಅವಯವಗಳುಳ್ಳವಳೂ ಆದ ಮರುದ್ದೇವತೆಗಳ ಪತ್ನಿಯು, ತನ್ನನ್ನು ವ್ಯಾಪಿಸಿ ಸುತ್ತಲೂ ಸಂಚರಿಸುತ್ತಿರುವ ಮರುದ್ದೇವತೆಗಳ ರಥವನ್ನು ಹತ್ತಿ ಯಾಗವು ನಡೆಯುತ್ತಿರುವ ಪ್ರದೇಶಕ್ಕೆ ಬರಲು ಉತ್ಸುಕಳಾಗಿರುತ್ತಾಳೆ. ಈ ವಿಷಯದಲ್ಲಿ ಇಲ್ಲಿ ಉಪಮಾನವನ್ನು **ವಿಧತಃ ರಥಂ ಸೂರ್ಯೇವ** ಎಂಬ ವಾಕ್ಯದಿಂದ ಹೇಳಿದೆ. ಸಾಯಣರು ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಸೂರ್ಯನ ಪತ್ನಿಯು ಸೂರ್ಯನ ರಥವನ್ನು ಆರೋಹಣಮಾಡುವ ಹಾಗೆ ಎಂದು ಹೋಲಿಕೆಯನ್ನು ಉಪಪಾದಿಸಿದೆ.

ಎರಡನೆಯ ಅರ್ಥದಲ್ಲಿ **ಯದ್ವಾ ಸೂರ್ಯಸ್ಯ ದುಹಿತಾ ಅಶ್ವಿನೋಃ ರಥಮಿವ ಸಾ ಯಥಾ ಆರೋಹತಿ ತದ್ವತ್ |** ಸೂರ್ಯನ ಪುತ್ರಿಯು ತನ್ನ ಸ್ವಯಂವರದಲ್ಲಿ ಅಶ್ವಿನೀದೇವತೆಗಳ ರಥವನ್ನು ಆರೋಹಣಮಾಡುವ ಹಾಗೆ ಎಂದು ದೃಷ್ಟಾಂತದ ರೀತಿಯಿಂದ ಹೇಳಿದೆ. ಈ ವಿಷಯವು—

**ಆ ವಾಂ ರಥಂ ದುಹಿತಾ ಸೂರ್ಯಸ್ಯ ಕಾರ್ಷ್ಮೇವಾತಿಷ್ಠದರ್ವತಾ ಜಯಂತೀ |**
**ವಿಶ್ವೇ ದೇವಾ ಅನ್ವಮನ್ಯಂತ ಹೃದ್ಭಿಃ ಸಮು ಶ್ರಿಯಾ ನಾಸತ್ಯಾ ಸಚೇಥೆ ||**

(ಋ. ಸಂ. ೧-೧೧೬-೧೭)

ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿದೆ. ಮತ್ತು—

**ಆ ವಾಂ ರಥಂ ಯುವತಿಸ್ತಿಷ್ಠದತ್ರ ಜುಷ್ಟ್ವೀ ನರಾ ದುಹಿತಾ ಸೂರ್ಯಸ್ಯ ||**

ಈ ಋಕ್ಕಿನಲ್ಲಿಯೂ ಹೇಳಿದೆ. (ಋ. ಸಂ. ೧-೧೧೮-೫)

**ನಭಸಃ ಇತ್ಯಾ ನ—ಅಂತರಿಕ್ಷಾದಿತ್ಯಯೋಃ ಸಾಧಾರಣಃ ನಭಶ್ಶಬ್ದಃ ಅತ್ರ ಆದಿತ್ಯವಚನಃ | ತಸ್ಯ ಗತಿರಿವ | ಸಾ ಯಥಾ ಶೀಘ್ರಾ ತದ್ವತ್ |** ನಭಃ ಎಂಬ ಪದವು **ಸ್ವಃ ಪೃಶ್ನಿಃ** ಎಂಬವೇ ಮೊದಲಾದ ಆರು ಸಾಧಾರಣ ನಾಮಗಳ ಮಧ್ಯದಲ್ಲಿ (ನಿ. ೨-೧೩) ಉಕ್ತವಾಗಿದೆ. **ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ**

ಈ ಆರು ಸಾಧಾರಣ ನಾಮಗಳು ಅಂತರಿಕ್ಷ ಮತ್ತು ಆದಿತ್ಯ ಇವರನ್ನು ಬೋಧಿಸುವ ಪರ್ಯಾಯ ಪದಗಳೆಂದು ಯಾಸ್ಕರಿಂದ ವ್ಯಾಖ್ಯಾನಮಾಡಲ್ಪಟ್ಟಿದೆ. **ನಭ ಆದಿತ್ಯೋ ಭವತಿ ನೇತಾ ಭಾಸಾಂ ಜ್ಯೋತಿಷಾಂ ಪ್ರಣಯೋऽಪಿ ವಾ ಭನ ಏವ ಸ್ಯಾದ್ವಿಪರೀತೋ ನ ನ ಭಾತೀತಿ** । (ನಿ. ೨-೧೫) **ಸರ್ವಾಸು ದಿಕ್ಷು ಭಾಸಾಂನೇತಾ** ಎಲ್ಲಾ ದಿಕ್ಕುಗಳಲ್ಲಿಯೂ ಬೆಳಕನ್ನು ಹರಡುವವನು. ಇದರಿಂದ ಆದಿತ್ಯನಿಗೆ ನಭ ಎಂದು ಹೆಸರು ಬಂದಿದೆ. ಅದರೆ ಭನ ಎಂಬ ಶಬ್ದವು ವ್ಯತ್ಯಾಸವಾದ ಅಕ್ಷರದ ಯೋಜನೆಯಿಂದ ನಭ ಎಂದಾಗಿರುವುದು. ಭನಃ ಎಂಬುವ ಶಬ್ದವೂ ನಭಃ ಎಂದಾಗಿರುತ್ತದೆ. ಅಥವಾ **ನ ನ ಭಾತಿ** ಅಂದರೆ **ಭಾತ್ಯೇವ** ಯಾವಾಗಲೂ ಪ್ರಕಾಶವುಳ್ಳವನಾಗಿಯೇ ಇರುತ್ತಾನೆ ಎಂಬ ವ್ಯುತ್ಪತ್ತಿಯಿಂದ ನಭಶ್ಶಬ್ದಕ್ಕೆ ಇಲ್ಲಿ ಆದಿತ್ಯನೆಂದು ಅರ್ಥವನ್ನು ವರ್ಣಿಸಿದೆ.

ಈ ಆದಿತ್ಯನ ಗತಿಯು ಶೀಘ್ರವಾಗಿರುವಂತೆ ಮರುದ್ದೇವತೆಗಳ ಪತ್ನಿಯು ಮರುತ್ತುಗಳ ಶೀಘ್ರಗಮನವುಳ್ಳ ರಥವನ್ನು ಆರೋಹಣಮಾಡಿ ಯಾಗಶಾಲೆಗೆ ಮರುತ್ತುಗಳೊಡನೆ ಬರುವಳು ಎಂದು ಆದಿತ್ಯನ ಗತಿವೇಗವನ್ನೇ ಆಗಮನಕ್ಕೆ ಹೋಲಿಸಿ ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜೋಷತ್**—ಜುಷೀ ಪ್ರೀತಿಸೇವನಯೋಃ ಧಾತು. ತುದಾದಿ. ಲೇಟ್ ಪ್ರಥಮಪುರುಷ ಏಕವಚನದಲ್ಲಿ **ಇತಶ್ಚ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ, ವ್ಯತ್ಯಯದಿಂದ ತಿಪ್ ಬಂದಾಗ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ ಸೂ ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಛಾಂದಸವಾಗಿ ವಿಕರಣಕ್ಕೆ ಲೋಪ. **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಸಚಧ್ಯೈ**—ಷಚ ಸಮವಾಯೇ. ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**— (ಪಾ. ಸೂ. ೩-೪-೯) ಎಂಬುದರಿಂದ ಅಧ್ಯೈ ಪ್ರತ್ಯಯ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಅಸುರ್ಯಾ**—ಅಸುರಾಣಾಂ ಸಂಬಂಧಿನೀ. ಸಂಬಂಧಾರ್ಥದಲ್ಲಿ ಯತ್ ಪ್ರತ್ಯಯ. **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್.

**ವಿಷಿತಸ್ತುಕಾ**—ವಿಷಿತಾಃ ವಿಪ್ರಕೀರ್ಣಾಃ ಸ್ತುಕಾಃ ಕೇಶಸಂಘಾಃ ಯಸ್ಯಾಃ ಸಾ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನೃಮನಾಃ**—ನೃಷು ಮನಃ ಯಸ್ಯಾ ಸಾಃ. **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಸೂರ್ಯಾ**—ಸೂರ್ಯಸ್ಯ ಸ್ತ್ರೀ ದೇವತಾ. **ಸೂರ್ಯಾದ್ದೇವತಾಯಾಂ ಚಾಬ್ವಾಚ್ಯಃ** (ಪಾ. ಸೂ. ೪-೧-೪೮) ಎಂಬುದರಿಂದ ಚಾಪ್ ಪ್ರತ್ಯಯ.

**ವಿಧತಃ**-- ವಿಧ ವಿಧಾನೇ. ಧಾತು. ಶತೃಪ್ರತ್ಯಯ. ಷಷ್ಠೀ ಏಕವಚನಾಂತರೂಪ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಗಾತ್**—ಇಣ್ ಗತೌ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. **ಇಣೋ ಗಾ ಲುಙಿ** (ಪಾ ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘು**— (ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತ ನಿಘಾತ ಸ್ವರ ಬರುತ್ತದೆ.

**ಇತ್ಯಾ**—ಇಣ್ ಗತೌ. ಧಾತು. **ಏತಿ ಸ್ತುಶಾ**—(ಪಾ. ಸೂ. ೩-೧-೧೦೯) ಎಂಬುದರಿಂದ ಕ್ಯಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿ**—(ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಸ್ತ್ರೀತ್ವದಲ್ಲಿ ಟಾಪ್. ॥ ೫ ॥



॥ ಸಂಹಿತಾಪಾಠಃ ॥

ಆಸ್ಥಾಪಯಂತ ಯುವತಿಂ ಯುವಾನಃ ಶುಭೇ ನಿಮಿಶ್ಲಾಂ ವಿದಥೇಷು ಪಜ್ರಾಂ ।
ಅರ್ಕೋ ಯದ್ವೋ ಮರುತೋ ಹವಿಷ್ಮಾನ್ಗಾಯದ್ಗಾಥಂ ಸುತಸೋಮೋ ದುವಸ್ಯನ್ ॥ ೬ ॥

॥ ಪದಪಾಠಃ ॥

ಆ । ಅಸ್ಥಾಪಯಂತ । ಯುವತಿಂ । ಯುವಾನಃ । ಶುಭೇ । ನಿऽಮಿಶ್ಲಾಂ । ವಿದಥೇಷು । ಪಜ್ರಾಂ ।
ಅರ್ಕಃ । ಯತ್ । ವಃ । ಮರುತಃ । ಹವಿಷ್ಮಾನ್ । ಗಾಯತ್ । ಗಾಥಂ । ಸುತऽಸೋಮಃ ।
ದುವಸ್ಯನ್ ॥ ೬ ॥

॥ ಸಾಯಣಭಾಷ್ಯಂ ॥

ಯುವಾನೋ ಮಿಶ್ರಯಂತೋ ನಿತ್ಯತರುಣಾ ವಾ ಮರುತೋ ಯುವತಿಂ ಮಿಶ್ರಯಂತೀಂ ನಿತ್ಯತರುಣೀಂ ವಾ ವಿದ್ಯುದ್ರೂಪಾಂ ರೋದಸ್ಯಾಂ ಸ್ತ್ರಿಯಮಾಸ್ಥಾಪಯಂತ । ಆಸ್ಥಾಪಯಂತಿ । ದೇವತಾ-

**ತ್ವೇನ ರಥೇ ಧಾರಯಂತಿ । ಕೀದೃಶೀಂ ತಾಂ । ನಿಮಿಶ್ಲಾಂ । ನಿಯಮೇನ ಮಿಶ್ರಯಂತೀಂ ಪಜ್ರಾಂ । ಪಜ್ರೋ ಬಲಂ । ತದ್ವತೀಂ । ಶುಭೇ । ಶೋಭತೇ ದೀಪ್ಯತ ಇತಿ ಶುಬುದಕಂ । ವೃಷ್ಟ್ಯುದಕಾರ್ಥಂ । ಶುಭೇ ರಥ ಇತಿ ವಾ ಯೋಜ್ಯಂ । ಕಿಂ ನಿಮಿತ್ತಂ । ವಿದಥೇಷು ಯಾಗೇಷು ನಿಮಿತ್ತಭೂತೇಷು । ಕದಾ । ಯದ್ಯದಾ ಹೇ ಮರುತಃ ವೋ ಯುಷ್ಮಾನರ್ಕಃ ॥ ಮತ್ವರ್ಥೋ ಲುಪ್ಯತೇ । ಅರ್ಚನಸಾಧನ-ಮಂತ್ರೋಪೇತಃ ಸ್ತೋತಾ ವಾ ಹವಿಷ್ಮಾನ್ ಪ್ರದೇಯಾಜ್ಯಾದಿಹವಿರ್ಯುಕ್ತಃ ಸುತಸೋಮೋ ಹೋಮಾಯಾಭಿಷುತಸೋಮೋಽಯಂ ಯಜಮಾನೋ ದುವಸ್ಯನ್ । ಪರಿಚರನ್ ಗಾಥಂ ಗಾತವ್ಯಂ ಸ್ತೋತ್ರಂ ಗಾಯತ್ ಗಾಯತಿ । ತದೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಯತ್**—ಯಾವಾಗ । **ಹವಿಷ್ಮಾನ್**—ಪ್ರದೇಯ ಆಜ್ಯಾದಿ ಹವಿರ್ಯುಕ್ತನೂ । **ಸುತಸೋಮಃ**—ಹೋಮಾರ್ಥವಾಗಿ ಅಭಿಷುತವಾದ ಸೋಮಯುಕ್ತನೂ । **ಅರ್ಕಃ**—ಅರ್ಚನಸಾಧನಮಂತ್ರವಿಶಿಷ್ಟನೂ ಆದ ಯಜಮಾನನು । **ವಃ**—ನಿಮ್ಮನ್ನು । **ದುವಸ್ಯನ್**—ಉಪಚರಿಸುತ್ತಾ । **ಗಾಥಂ**—ಗಾತವ್ಯವಾದ ಸ್ತೋತ್ರವನ್ನು । **ಗಾಯತ್**—ಗಾನಮಾಡುತ್ತಾನೋ । **(ತದಾ**—ಆಗ) । **ಯುವಾನಃ**—ನಿತ್ಯತರುಣರಾದ ನೀವು । **ನಿಮಿಶ್ಲಾಂ**—(ನಿಮ್ಮೊಡನೆ) ಚೆನ್ನಾಗಿ ಮಿಶ್ರಿತಳಾಗುವವಳೂ । **ಪಜ್ರಾಂ**—ಬಲಿಷ್ಠಳೂ । **ಯುವತಿಂ**—(ಮಿಶ್ರಣಸ್ವಭಾವದವಳೂ) ನಿತ್ಯತರುಣಿಯೂ ಆದ ವಿದ್ಯುದ್ರೂಪ ಸ್ತ್ರೀಯನ್ನು । **ಶುಭೇ**—ವೃಷ್ಟ್ಯುದಕಕ್ಕೋಸ್ಕರ (ಮಂಗಳಕರವಾದ ನಿಮ್ಮ ರಥದಲ್ಲಿ) । **ವಿದಥೇಷು**—ಯಾಗಗಳು ನಿಮಿತ್ತವಾಗಿರಲು (ಯಾಗಗಳನ್ನು ಉದ್ದೇಶಿಸಿ ಹೊರಟಾಗ) । **ಆ ಅಸ್ಥಾಪಯಂತ**—(ಜೊತೆಯಲ್ಲಿ) ಕೂಡಿಸಿಕೊಳ್ಳುತ್ತೀರಿ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮ ಆರಾಧಕನು (ಯಾಗಕರ್ತೃವು), ಆಜ್ಯಾದಿಹವಿಸ್ಸುಗಳನ್ನು ಮತ್ತು ಸೋಮರಸವನ್ನು ಸಿದ್ಧಪಡಿಸಿಕೊಂಡು, ನಿಮ್ಮ ಸ್ತುತಿಗಳನ್ನುಚ್ಚರಿಸಿದಾಗ, ನಿತ್ಯತರುಣರಾದ ನೀವು, ನಿಮ್ಮೊಡನೆ ಚೆನ್ನಾಗಿ ಮಿಶ್ರಿತಳಾಗತಕ್ಕವಳೂ, ಮಹಾರಭಸಯುಕ್ತಳೂ, ನಿತ್ಯತರುಣಿಯೂ ಆದ ವಿದ್ಯುದ್ರೂಪ ಸ್ತ್ರೀಯೊಡನೆ (ಮಳೆಗರೆಯುತ್ತಾ) ಯಾಗಗಳನ್ನುದ್ದೇಶಿಸಿ, ನಿಮ್ಮ ರಥದಲ್ಲಿ ಹೊರಟುಬರುತ್ತೀರಿ.

## English Translation.

The youthful (Maruts) have placed the young (lightning) in (their) brilliant (car), commingling (with them), and vigorous (in yielding rain) on sacrifices (being solemnized); when, Maruts, your worshipper, presenting oblations, pouring out the Soma juice, and offering adoration, chants the sacred song.

॥ ವಿಶೇಷವಿಷಯಗಳು ॥

**ಯುವಾನಃ—ಮಿಶ್ರಯಂತೋ ನಿತ್ಯತರುಣಾ ವಾ** । ಯಾಸ್ಕರು—

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।**

**ನಿಷ್ಟೌಗ್ರ್ಯಮೂಹಥುರದ್ಭ್ಯಸ್ಪರಿ ವಿಶ್ವೇತ್ತಾ ವಾಂ ಸವನೇಷು ಪ್ರವಾಚ್ಯಾ ॥**

(ಋ. ಸಂ. ೧೦–೩೯–೪)

ಇಲ್ಲಿ ಯುವಾನಂ ಎಂಬ ಪದಕ್ಕೆ **ಯುವಾ ಪ್ರಯೌತಿ ಕರ್ಮಾಣಿ ಮಿಶ್ರಯತಿ** ಒಟ್ಟುಗೂಡಿಸುತ್ತಾನೆ ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಮರುದ್ದೇವತೆಗಳು ಯಾವಾಗಲೂ ಯೌವನದಿಂದಲೇ ಇರುವವರೆಂದೂ ಇನ್ನೊಬ್ಬರೊಡನೆ (ಸೇರುವ) ಕೂಡಿರುವರೆಂದೂ ಅರ್ಥವನ್ನು ವರ್ಣಿಸಿದ್ದಾರೆ.

**ಯುವತೀಂ ಅಸ್ಥಾಪಯಂತ-ಮಿಶ್ರಯಂತೀಂ ನಿತ್ಯತರುಣೀಂ ವಾ ವಿದ್ಯುದ್ರೂಪಾಂ ರೋದಸ್ಯಾಂ ಸ್ತ್ರಿಯಂ ಅಸ್ಥಾಪಯಂತಿ ದೇವತಾತ್ವೇನ ರಥೇ ಧಾರಯಂತಿ ।** ಸರ್ವಕಾಲದಲ್ಲಿಯೂ ಯೌವನದಿಂದಲೇ ಇರುವ ಮತ್ತು ಪುರುಷರೊಡನೆ ಸೇರುವ (ಅಭಿಲಾಷೆಯುಳ್ಳ) ಸ್ವಭಾವವುಳ್ಳ, ಮಿಂಚಿನಂತೆ ಪ್ರಕಾಶಿಸುವ ಅಥವಾ ಮಿಂಚಿನ ರೂಪವಾಗಿರುವ ರೋದಸೀ ಎಂಬ ಸ್ತ್ರೀಯನ್ನು ತಮ್ಮ ರಥದಲ್ಲಿ ಕೂಡಿಸಿಕೊಂಡಿರುವರು. ಇವರು ತಮ್ಮ ರಥವನ್ನೂ ತಮ್ಮನ್ನೂ ಸಹ ಪೂಜಿಸುವವರಿಗೆ ಈ ರೋದಸೀ ಎಂಬ ಸ್ತ್ರೀಯು ದೇವತಾರೂಪಳಾಗಿರುವಳೆಂಬ ಜ್ಞಾನವು ಉಂಟಾಗುವುದಕ್ಕಾಗಿ ಧರಿಸಿರುವರು ಎಂದು ಅರ್ಥ.

**ಶುಭೇ— ಶೋಭತೇ ದೀಪ್ಯತೇ ಇತಿ ಶುಬುದುಕಂ ವೃಷ್ಟ್ಯುದಕಾರ್ಥಂ ಶುಭೇ ರಥ ಇತಿ ವಾ ಯೋಜ್ಯಂ ।** ಕಾಂತಿಯುಳ್ಳದ್ದಾಗಿ ಪ್ರಕಾಶಿಸುವುದು ಎಂಬ ಅರ್ಥನಿರ್ವಚನದಿಂದ ಉದಕಕ್ಕೆ ಶುಬ್ ಎಂಬ ಹೆಸರು ಎಂದೂ, ವೃಷ್ಟಿರೂಪವಾದ ಉದಕವನ್ನು ಕೊಡುವುದಕ್ಕಾಗಿಯೂ ಎಂದೂ ಅರ್ಥವನ್ನು ಹೇಳಿದೆ. ಅಥವಾ ಮಂಗಳಕರವಾದ ತಮ್ಮ ರಥವೆಂದು ಇನ್ನೊಂದು ಅರ್ಥವನ್ನು ವರ್ಣಿಸಿದೆ.

**ಅರ್ಕಃ—ಅರ್ಚನಸಾಧನಮಂತ್ರೋಪೇತಃ ಸ್ತೋತಾ ವಾ ।** **ಅರ್ಕ** ಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯) ವಜ್ರನಾಮಗಳಲ್ಲಿಯೂ (ನಿ. ೩-೧೧) ಉಕ್ತವಾಗಿದೆ. **ಅರ್ಕೋ ದೇವೋ ಭವತಿ ಯದೇನಮರ್ಚತಿ । ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ । ಅರ್ಕಮನ್ನಂ ಭವತಿ ಅರ್ಚತಿ ಭೂತಾನಿ । ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ।** ಪೂಜೆಮಾಡು, ಗೌರವಿಸು ಎಂಬ ಅರ್ಥವುಳ್ಳ ಅರ್ಚಧಾತುವಿನಿಂದ ಅರ್ಕ ಎಂಬ ಪದವು ನಿಷ್ಪನ್ನವಾಗಿದೆ. **ಅರ್ಚತೀತ್ಯರ್ಕಃ** ಎಂಬ ವ್ಯುತ್ಪತ್ತಿಯಿಂದ ಅರ್ಕ ಎಂಬ ಪದವು ನಿಷ್ಪನ್ನವಾಗುವಂತೆ ಅರ್ಚನಸಾಧನ, ಅರ್ಚನಾರ್ಹ ಎಂಬ ಅರ್ಥಗಳನ್ನು ಬೋಧಿಸುವಾಗಲೂ ಅರ್ಕ ಶಬ್ದವು ಪ್ರಯುಕ್ತವಾಗಿರುವುದು ಎಂದು ವಿವರಿಸಿ, ಸ್ತೋತೃಗಳು ಪೂಜಿಸಲು ಅರ್ಹನಾದ ಕಾರಣ ದೇವನು ಅರ್ಕ ಶಬ್ದದ ಅರ್ಥವೆಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಮಂತ್ರವು ಅರ್ಚನಸಾಧನವಾದುದರಿಂದ ಅರ್ಕವೆಂಬುದಾಗಿಯೂ, ಪ್ರಾಣಿಗಳು ಪೂಜೆಯನ್ನು ಆಚರಿಸುವಾಗ ಅನ್ನವನ್ನೂ ಸಂಸ್ಕರಿಸುವುದರಿಂದ ಪೂಜ್ಯವಾಗಿರುವುದು ಎಂದು ಅನ್ನವೂ ಅರ್ಕ ಶಬ್ದಾರ್ಥವಾಗಿರುವುದೆಂದೂ ಅರ್ಥಮಾಡಿದೆ. ಕಟು (ಕಹಿ) ಭಾವದಿಂದ ಕೂಡಿರುವ ಕಾರಣ ಅರ್ಕವೆಂಬ ಪದವು ವೃಕ್ಷವನ್ನು ಬೋಧಿಸುವುದು ಎಂದು ವಿವರಿಸಿದೆ ಇಲ್ಲಿ ಅರ್ಕ ಶಬ್ದದ ಮೇಲೆ ಬಂದಿರುವ ಮತುಪ್ ಪ್ರತ್ಯಯಕ್ಕೆ ಲೋಪವು ಬಂದು ಇರುವುದರಿಂದ ಅರ್ಚನಸಾಧವಾದ ಮಂತ್ರವನ್ನು ಹೊಂದಿರುವವನಿಗೂ ಅರ್ಕ (ವೆಂದು) ಶಬ್ದವು

ಪ್ರಯುಕ್ತವಾಗಿದೆ ಎಂದು ಅರ್ಥವನ್ನು ಹೇಳಿದೆ. ಇದರಿಂದ ಯಜಮಾನರು ಅರ್ಚನೆಮಾಡುವ ಮಂತ್ರಗಳನ್ನು ತಿಳಿದವರಾಗಿ, ಅಥವಾ ಸ್ತುತಿಯನ್ನು ಪಠಿಸುವವರಾಗಿ, ಅಗ್ನಿಗೆ ಅರ್ಪಿಸುವ ಹವಿಸ್ಸುಗಳಿಂದ ಕೂಡಿ, ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಸೋಮರಸವನ್ನು ಸಿದ್ಧಮಾಡಿಕೊಂಡು ಅಗ್ನಿಪರಿಚರಣವನ್ನು ಮಾಡುತ್ತಾ ಸ್ತೋತ್ರಗಳನ್ನು ಪಠಿಸುವರೆಂದು ವಿವರಿಸಿದೆ

**ದುವಸ್ಯತ—ಪರಿಚರನ್** । ದುವಸ್ಯತಿ ಎಂಬುವುದು ಪರಿಚರಣ ಕರ್ಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಮತ್ತು

**ಪರೇಯಿವಾಂಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾ ಮನುಪಸ್ಪಶಾನಂ ।**
**ವೈವಸ್ವತಂ ಸಂಗಮನಂ ಜನಾನಾಂ ಯಮಂ ರಾಜಾನಾಂ ಹವಿಷಾ ದುವಸ್ಯ ।**
(ಋ. ಸಂ. ೧೦-೧೪-೧)

ಇಲ್ಲಿ ದುವಸ್ಯ ಎಂಬ ಪದಕ್ಕೆ ರಾಧ್ನುಹಿ ಎಂದು ಅರ್ಥಮಾಡಿದೆ. ದುರ್ಗಾಚಾರ್ಯರು ರಾಧ್ನುಹಿ ಎಂಬ ಪದಕ್ಕೆ ಪರಿಚರಸ್ವ ಎಂಬುದಾಗಿ ಅರ್ಥವನ್ನು ವಿವರಿಸಿದ್ದಾರೆ.

**ಗಾಥಂ—ಗಾತವ್ಯಂ ಸ್ತೋತ್ರಂ** । ಗಾಥಾ ಎಂಬ ಪದವು ವಾಙ್ನಾಮಗಳಲ್ಲಿ (ನಿ. ೨-೨೩) ಪಠಿತವಾಗಿದೆ. ಇಲ್ಲಿ ಗಾಥಂ ಎಂಬ ಪದವು ಪ್ರಯುಕ್ತವಾಗಿದೆ. ಸ್ತೋತ್ರವೆಂಬ ಅರ್ಥವನ್ನು ಅದಕ್ಕೆ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಥಾಪಯಂತ—**ಷ್ಠಾ ಗತಿನಿವೃತ್ತೌ. ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. **ಅರ್ತಿಹ್ರೀ—** (ಪಾ. ಸೂ. ೭-೩-೩೬) ಎಂಬುದರಿಂದ ಧಾತುವು ಆಕಾರಾಂತವಾದುದರಿಂದ ಪುಕಾಗಮ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಣಿಜಂತದ ಮೇಲೆ ಲಙ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಯುವತಿಂ**—ಯುವನ್ ಶಬ್ದ. ಸ್ತ್ರೀತ್ವದಲ್ಲಿ **ಯೂನಸ್ತಿಃ** (ಪಾ. ಸೂ. ೪-೧-೭೭) ಎಂಬುದರಿಂದ ತಿ ಪ್ರತ್ಯಯ. **ನಲೋಪಃಪ್ರಾತಿಪದಿಕಾಂತಸ್ಯ** ಎಂಬುದರಿಂದ ನಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶುಭೇ—**ಶೋಭತ ಇತಿ ಶುಪ್. ಶುಭ ದೀಪ್ತೌ. ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತ ರೂಪ. **ಸಾವೇಕಾಚಃ—** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿದಥೇಷು—**ವಿದ ಜ್ಞಾನೇ. ಧಾತು. **ರುದಿವಿದಿಭ್ಯಾಂ ಙಿತ್** (ಉ. ಸೂ. ೩-೫೫) ಎಂಬುದರಿಂದ ಅಥ ಪ್ರತ್ಯಯ. ಙಿತ್ವ ಅತಿದೇಶ ಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

**ಅರ್ಕೈಃ**—ಅರ್ಚ ಪೂಜಾಯಾಂ ಧಾತು. **ಕೃದಾಧಾರಾರ್ಚಿ**—(ಉ. ಸೂ. ೩-೩೧೦) ಎಂಬುದರಿಂದ ಕ ಪ್ರತ್ಯಯ. ಅರ್ಕವೆಂದರೆ ಮಂತ್ರ. ಇಲ್ಲಿ ಅದು ಉಳ್ಳದ್ದು ಎಂದು ಅರ್ಥವಾದುದರಿಂದ ಛಾಂದಸವಾಗಿ ಮತ್ವರ್ಥ ಪ್ರತ್ಯಯಕ್ಕೆ ಲೋಪ. ಅಥವಾ ಆರ್ಶಆದಿಯಲ್ಲಿ ಸೇರಿರುವುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ.

**ಗಾಯತ್**—ಗೈ ಶಬ್ದೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸುತಸೋಮಃ**—ಸುತಃ ಸೋಮಃ ಯೇನ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದುವಸ್ಯನ್**—ದುವಸ್ ಎಂಬುದು ಪರಿಚರಣಾರ್ಥದಲ್ಲಿದೆ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಯಗಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಯಕ್ ಸ್ವರ ಉಳಿಯುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಪ್ರ ತಂ ವಿವಕ್ಮಿ ವಕ್ಮ್ಯೋ ಯ ಏಷಾಂ ಮರುತಾಂ ಮಹಿಮಾ ಸತ್ಯೋ ಅಸ್ತಿ ।
ಸಚಾ ಯದೀಂ ವೃಷಮಣಾ ಅಹಂಯುಃ ಸ್ಥಿರಾ ಚಿಜ್ಜನೀರ್ವಹತೇ ಸುಭಾಗಾಃ ॥೭॥

॥ ಪದಪಾಠಃ ॥

ಪ್ರ । ತಂ । ವಿವಕ್ಮಿ । ವಕ್ಮ್ಯಃ । ಯಃ । ಏಷಾಂ । ಮರುತಾಂ । ಮಹಿಮಾ । ಸತ್ಯಃ । ಅಸ್ತಿ ।
ಸಚಾ । ಯತ್ । ಈಂ । ವೃಷಽಮನಾಃ । ಅಹಂಽಯುಃ । ಸ್ಥಿರಾ । ಚಿತ್ । ಜನೀಃ । ವಹತೇ । ಸುಽಭಾಗಾಃ ॥೭॥

॥ ಸಾಯಣಭಾಷ್ಯಂ ॥

ಏಷಾಂ ಮರುತಾಂ ಯೋ ಮಹಿಮಾ ಮಹತ್ತ್ವಾತಿಶಯೋ ವಕ್ಮ್ಯಃ ಸರ್ವೈಃ ಸ್ತುತ್ಯಃ ಸತ್ಯೋಽಬಾಧ್ಯೋಽನೋಘೋಽಸ್ತಿ ತಂ ಪ್ರ ವಿವಕ್ಮಿ । ಪ್ರವಚ್ಮಿ । ವರ್ಣಯಾಮಿ । ಕಥಮೇಷಾಂ ಮಹಿಮಾ ಪ್ರಾಪ್ತ ಇತಿ ಉಚ್ಯತೇ । ಯದ್ಯಸ್ಮಾದೀಮೇತೇಷಾಂ ಸಂಬಂಧಿನೀ ರೋದಸೀ ವೃಷಾಮಣಾ ವೃಷ್ಟ್ಯಾದಿವರ್ಷಣಮನಸ್ಕಾಹಂಯುರಹಂಕಾರವತೀ । ಜಗದುಪಕಾರಕರ್ತ್ರೀ ನ ಕದಾಚಿದಸ್ತೀತ್ಯ-ಹಂಕಾರಃ ।ಸ್ಥಿರಾ । ಚಿತ್ । ಚಿದಿತಿ ಪೂಜಾಯಾಂ । ಅತ್ಯಂತಮವಿನಶ್ವರಾ ಈದೃಶೀ ದೇವೀ ಸುಭಾಗಾಃ

**ಶೋಭನಭಾಗ್ಯೋಪೇತಾಃ ಜನೀರ್ಜನನಶೀಲಾಃ ಪ್ರಜಾ ವೃಷ್ಟ್ಯುತ್ಪತ್ತೀರ್ವಾ ವಹತೇ ಧಾರಯತಿ । ವೃಷ್ಟ್ಯಾ ಸತ್ಯಾಂ ಸರ್ವೇ ಪ್ರಾಣಿನ ಉತ್ಪದ್ಯಂತೇ । ಯಸ್ಮಾದೇವಂ ತಸ್ಮಾನ್ಮಹಿಮಾಸ್ತಿ । ತಂ ಮಹಿಮಾನಂ ಸ್ತೌಮೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಯತ್**—ಯಾವ ಮರುದ್ದೇವತೆಗಳ ಮಹಿಮೆಯಿಂದ । **ವೃಷಮಣಾಃ**—ಮಳೆಗರೆಯುವ ಮನಸ್ಸುಳ್ಳವಳೂ । **ಅಹಂಯುಃ**—ಅಹಂಕಾರಯುಕ್ತಳೂ । **ಸ್ಥಿರಾ ಚಿತ್**—ಶಾಶ್ವತಳೂ (ಆದ) । **ಈಂ**—ಈ ಮರುದ್ದೇವತೆಗಳಿಗೆ ಸ್ವಕೀಯಳಾದ ರೋದಸೀ ಎಂಬ ವಿದ್ಯುದ್ದೇವತೆಯು । **ಸುಭಾಗಾಃ**—ಮಂಗಳಕರವಾದ ಭಾಗ್ಯವಿಶಿಷ್ಟರೂ । **ಜನೀಃ**—ಜನನಶೀಲರೂ ಆದ ಪ್ರಜೆಗಳನ್ನು । [ಅಥವಾ **ಸುಭಾಗಾಃ**—ಶುಭಕರವಾದಭಾಗ್ಯಕ್ಕೆ ಕಾರಣವೂ । **ಜನೀಃ**—ಜನನಶೀಲವೂ ಆದ ವೃಷ್ಟಿಯನ್ನು । ] **ಸಚಾ ವಹತೇ**—ಸಂಪೂರ್ಣವಾಗಿ ಧರಿಸುತ್ತಾಳೋ । **ಏಷಾಂ**—ಇಂತಹ । **ಮರುತಾಂ**—ಮರುದ್ದೇವತೆಗಳ । **ಯಃ**—ಯಾವ । **ಮಹಿಮಾ**—(ಮಹತ್ವವು) ಮಹಿಮೆಯು । **ವಕ್ಮ್ಯಃ**—ಸರ್ವರಿಂದಲೂ ಸ್ತುತ್ಯವಾದುದೂ । **ಸತ್ಯಃ**—ಅಬಾಧ್ಯವೂ (ಅಮೋಘವೂ) । **ಅಸ್ತಿ**—ಆಗಿದೆಯೋ । **ತಂ**—ಆ ಮಹಿಮೆಯನ್ನು । **ಪ್ರ ವಿವಕ್ಮಿ**—ಚೆನ್ನಾಗಿ ವರ್ಣಿಸುತ್ತೇನೆ.

॥ ಭಾವಾರ್ಥ ॥

ಸತ್ಯವೂ, ಸ್ತುತ್ಯವೂ ಆದ ಮರುದ್ದೇವತೆಗಳ ಮಹಾಮಹಿಮೆಯನ್ನು ನಾನು ಚೆನ್ನಾಗಿ ವರ್ಣಿಸುತ್ತೇನೆ; ವೃಷ್ಟಿಜನನಮನಸ್ಕಳೂ, (ಜಗದುಪಕಾರಕಳೆಂಬ) ಅಹಂಕಾರಯುಕ್ತಳೂ, ಶಾಶ್ವತಳೂ ಆದ ಮರುದ್ದೇವತೆಗಳ ಸ್ತ್ರೀಯಾದ ರೋದಸೀ ಎಂಬುವಳು (ವಿದ್ಯುದ್ದೇವತೆಯು) ಇವರ ಈ ಮಹಾಮಹಿಮೆಯಿಂದಲೇ, ಭಾಗ್ಯಶಾಲಿಗಳೂ, ಜನನಶೀಲರೂ, ಆದ ಪ್ರಜೆಗಳನ್ನು ಮಳೆಯನ್ನುಂಟು ಮಾಡಿ, ರಕ್ಷಿಸುತ್ತಾಳೆ.

English Translation.

I celebrate that greatness of the Maruts, which is true, and worthy of celebration, inasmuch as their highminded, haughty, and ever-enduring (bride), supports a flourishing progeny.

॥ ವಿಶೇಷವಿಷಯಗಳು ॥

**ಮಹಿಮಾ ವಕ್ಮ್ಯಃ**—ಮಹತ್ತ್ವಾತಿಶಯಃ ಸರ್ವೈಃ ಸ್ತುತ್ಯಃ । ಈ ಮರುದ್ದೇವತೆಗಳ ಪ್ರಭೂತವಾದ ಮಹಿಮೆಯು ಎಲ್ಲರಿಂದಲೂ ಸ್ತುತಿಮಾಡತಕ್ಕದ್ದಾಗಿರುತ್ತದೆ. ಮತ್ತು **ಸತ್ಯಃ**--**ಅಬಾಧ್ಯಃ ಅಮೋಘಃ** ಯಾರಿಂದಲೂ ಬಾಧಿಸಲಶಕ್ಯವಾಗಿಯೂ, ವ್ಯರ್ಥವಾಗದಿರುವುದಾಗಿಯೂ ಇರುತ್ತದೆಯಾದಕಾರಣ ಈ ಮಹಿಮೆಯನ್ನು ವರ್ಣಿಸುತ್ತೇನೆ ಎಂದು ಮಂತ್ರದ್ರಷ್ಟೃವಾದ ಋಷಿಯು ವರ್ಣಿಸಿರುವನು.

**ಈಂ ವೃಷಮಣಾಃ ಅಹಂಯುಃ ಜನೀಃ ವಹತೇ**—**ಏತೇಷಾಂ ಸಂಬಂಧಿನೀ ರೋದಸೀ ವೃಷ್ಟ್ಯಾದಿ ವರ್ಷಣಮನಸ್ಕಾ ಅಹಂಕಾರವತೀ ಜಗದುಪಕಾರಕರ್ತ್ರೀ ಜನನಶೀಲಾಃ ಪ್ರಜಾಃ ವೃಷ್ಟ್ಯುತ್ಪತ್ತೀರ್ವಾ ಧಾರಯತಿ ।** ಈ ಮರುತ್ತುಗಳ ಸಂಬಂಧಿಯಾದ ದೇವಿಯು (ರೋದಸೀ ಎಂಬ ಹೆಸರಿನಿಂದ ಪ್ರಸಿದ್ಧಳಾದ ದೇವಿಯು)

ವೃಷ್ಟಿಯನ್ನು ಸುರಿಸುವುದರಲ್ಲಿ ಆಸಕ್ತಿಯುಳ್ಳ ಮನಸ್ಸುಳ್ಳವಳಾಗಿಯೂ, ಜಗತ್ತಿಗೆ ಉಪಕಾರವನ್ನು ಮಾಡುವ ವಿಷಯದಲ್ಲಿ ಅಹಂಭಾವವನ್ನು ಹೊಂದಿ, ಸರ್ವದಾ ಪೂಜ್ಯಳಾಗಿರುತ್ತಾ ಉತ್ಪತ್ತಿಯನ್ನು ಹೊಂದುತ್ತಿರುವ ಸ್ವಭಾವದಿಂದ ಕೂಡಿರುವ ಪ್ರಜೆಗಳನ್ನು ಧರಿಸಿರುತ್ತಾಳೆ. ಅಥವಾ ವೃಷ್ಟಿಯು ಉಂಟಾದಲ್ಲಿ ಪ್ರಾಣಿಗಳು ಎಲ್ಲರೂ ಉತ್ಪನ್ನರಾಗು ವುದರಿಂದ ವೃಷ್ಟಿಯು ಉತ್ಪನ್ನವಾಗುವಂತೆ ಮಾಡಿ ಸರ್ವವನ್ನೂ ಧರಿಸಿರುತ್ತಾಳೆ. ಆದುದರಿಂದ ಮರುದ್ದೇವತೆಗಳ ಮಹಿಮೆಯು ಈ ದೇವಿಯಿಂದ ವ್ಯಕ್ತವಾಗಿರುವ ಕಾರಣ ಈ ಮರುದ್ದೇವತೆಗಳ ಮಹಿಮೆಯನ್ನು ವರ್ಣಿಸುತ್ತೇನೆಂದು ಇಲ್ಲಿ ಉಕ್ತವಾಗಿದೆ.

**ಸ್ಥಿರಾಚಿತ್—ಚಿದಿತಿ ಪೂಜಾಯಾಂ । ಅತ್ಯಂತಮವಿನಶ್ವರಾ ।** ಯಾಸ್ಕರು ಚಿತ್ ಎಂಬ ನಿಪಾತವು **ಚಿದಿತ್ಯೇಷೋಽನೇಕಕರ್ಮಾ** ಅನೇಕ ವಿಧವಾದ ಅರ್ಥಗಳಲ್ಲಿಯೂ ಪ್ರಯುಕ್ತವಾಗಿರುವುದು ಎಂದು ಹೇಳಿ, **ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಂ, ದಧಿಚಿದಿತ್ಯುಪಮಾರ್ಥೇ, ಕುಲ್ಮಾಷಾಂಶ್ಚಿದಾಹರೇತ್ಯ-ವಕುತ್ಸಿತೇ ।** ಆಚಾರ್ಯಶ್ಚಿದ್ ಎಂಬ ವಾಕ್ಯದಲ್ಲಿ ಪೂಜಾರ್ಥವಾಗಿ ಪ್ರಯುಕ್ತವಾಗಿದೆ; ದಧಿಚಿತ್ ಎಂಬ ವಾಕ್ಯದಲ್ಲಿ ಉಪಮಾರ್ಥದಲ್ಲಿಯೂ, ಕುಲ್ಮಾಷಾಂಶ್ಚಿದ್ ಎಂಬಲ್ಲಿ ನಿಂದಾರ್ಥಕವಾಗಿಯೂ ಪ್ರಯುಕ್ತವಾಗಿದೆ ಎಂದು ಉದಾಹರಣೆ ಯನ್ನು ಹೇಳಿ ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸಾಯಣರು ಪೂಜಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವರ್ಣಿಸಿ ರೋದಸೀ ದೇವಿಯು ಪೂಜ್ಯಳೂ ನಾಶರಹಿತಳೂ ಆಗಿರುವವಳು ಎಂದು ಆ ದೇವಿಯ ಮಹಿಮೆಯನ್ನು ವರ್ಣಿಸುವುದರ ಮೂಲಕ ಮರುತ್ತುಗಳ ಮಹಿಮಾತಿಶಯವನ್ನು ವರ್ಣಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ವಿವಕ್ಮಿ**—ವಚ ಪರಿಭಾಷಣೇ. ಧಾತು. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶ್ಲು ವಿಕರಣ. ಧಾತುವಿಗೆ ದ್ವಿತ್ವ ಬಂದಾಗ **ಬಹುಲಂ ಛಂದಸಿ** (ಪಾ. ಸೂ. ೭-೪-೭೮) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಛಾಂದಸವಾಗಿ ಧಾತು ಚಕಾರಕ್ಕೆ ಕುತ್ವ. ತಿಙಂತನಿಘಾತಸ್ವರ ಬರುತ್ತದೆ.

**ಮಹಿಮಾ**—ಮಹ ಶಬ್ದದ ಮೇಲೆ ಅತಿಶಯಾರ್ಥದಲ್ಲಿ ಇಮನಿಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಅಸ್ತಿ**—ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ವೃಷಮನಾಃ**—ಬಹುವ್ರೀಹಿ ಸಮಾಸ. ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಹಂಯುಃ**—ಅಹಂ ಎಂಬುದು ಮಾಂತ ಅವ್ಯಯ. ಅಹಂಕಾರಾರ್ಥದಲ್ಲಿ ಪ್ರಯುಕ್ತವಾಗಿದೆ. **ಅಹಂ ಶುಭಮೋರ್ಯುಸ್** (ಪಾ. ಸೂ. ೫-೨-೪೦) ಎಂಬುದರಿಂದ ಮತ್ವರ್ಥದಲ್ಲಿ ಯುಸ್ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ಥಿರಾ**—ಷ್ಠಾ ಗತಿನಿವೃತ್ತೌ. ಧಾತು. **ಅಜಿರ ಶಿಶಿರ**—(ಉ. ಸೂ. ೧-೫೩) ಎಂಬುದರಿಂದ ಕಿರಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ಚಿತ್ತಾದುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ಜನೀಃ**–ಜನ್ಯಂತೇ ಆಸು ಇತಿ ಜನಯಃ, ಸ್ತ್ರಿಯಃ. ಜನೀ ಪ್ರಾದುರ್ಭಾವೇ. ಧಾತು. **ಇನ್ ಸರ್ವಧಾತುಭ್ಯಃ** ಎಂಬುದರಿಂದ ಇನ್‌ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ವಹತೇ**—ವಹ ಪ್ರಾಪಣೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುಭಾಗಾಃ**—ಶೋಭನಃ ಭಾಗಃ ಯಾಸಾಂ ತಾಃ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಪಾಂತಿ ಮಿತ್ರಾವರುಣಾವವದ್ಯಾಚ್ಚಯತ ಈಮರ್ಯಮೋ ಅಪ್ರಶಸ್ತಾನ್ ।
ಉತ ಚ್ಯವಂತೇ ಅಚ್ಯುತಾ ಧ್ರುವಾಣಿ ವಾವೃಧ ಈಂ ಮರುತೋ ದಾತಿವಾರಃ ॥ ೮ ॥

॥ ಪದಪಾಠಃ ॥

ಪಾಂತಿ । ಮಿತ್ರಾವರುಣೌ । ಅವದ್ಯಾತ್ । ಚಯತೇ । ಈಂ । ಅರ್ಯಮೋ ಇತಿ । ಅಪ್ರಽಶಸ್ತಾನ್ ।
ಉತ । ಚ್ಯವಂತೇ । ಅಚ್ಯುತಾ । ಧ್ರುವಾಣಿ । ವವೃಧೇ । ಈಂ । ಮರುತಃ । ದಾತಿಽವಾರಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯುಷ್ಮತ್ಸಂಬಂಧಿನೋ ದೇವಾ ಮಿತ್ರಾವರುಣಾವಹೋರಾತ್ರ್ಯಭಿಮಾನಿದೇವಾವರ್ಯಮೋ। ಅರ್ಯಮಾ ಉ ಇತಿ ನಿಪಾತಸಮುದಾಯಾತ್ಮಕಮೇಕಂ ಪದಂ। ಉಶಬ್ದೋಽಪಿಶಬ್ದಾರ್ಥೇ। ಅರ್ಯಮಾಪಿ। ಏತೇ ತ್ರಯೋಽಪೀಮಮುಂ ಲೋಕಂ ಯಜ್ಞಂ ವಾವದ್ಯಾದ್ಗರ್ಹ್ಯಾದಯಥಾನುಷ್ಠಾನಾತ್। ಜಗತ್ಪಕ್ಷೇ ವ್ಯವಹಾರಪ್ರತಿಬಂಧರೂಪಾತ್ ಪಾಂತಿ। ರಕ್ಷಂತಿ। ತಥೈತೇಷಾಮಪ್ರಶಸ್ತಾನ್ ಕ್ಷೀಣಾನಾಮಪಿ ಪದಾರ್ಥಾಂಶ್ಚಯತೇ। ಚಾತಯಂತಿ। ನಾಶಯಂತಿ। ಉತಾಪಿ ಚೈತೈಃ ಪ್ರೇರಿತಾನ್ಯಚ್ಯುತಾಚ್ಯುತಾನ್ಯಸ್ರಾವೀಣಿ ಅತ ಏವ ಧ್ರುವಾಣ್ಯವಿಚಲಾನಿ ಮೇಘಸ್ಥೋದಕಾನಿ ಚ್ಯವಂತೇ। ಚ್ಯಾವಯಂತಿ ವೈತೇ। ಅಹೋರಾತ್ರೇ ವೈ ಮಿತ್ರಾವರುಣಾವಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತೀತಿ ಶ್ರುತೇಃ। ಯದ್ವಾ। ಅಚ್ಯುತಾನಿ ಧ್ರುವಾಣಿ ಧನಾನಿ ಚ್ಯವಂತೇ। ಕದೇತಿ ಉಚ್ಯತೇ।

ಹೇ ಮರುತಃ ಯುಷ್ಮದೀಯ ಈಮಯಂ ಕಾಲೋ ದಾತಿವಾರಃ ಪ್ರದೇಯಜಲಃ ಖಂಡಿತಮೇಘೋ ವಾ ಯದಾ ವವೃಧೇ ವರ್ಧತೇ । ತದಾ ಮಿತ್ರಾದಯೋ ದೇವಾ ಯುಷ್ಮದನುಕೂಲವ್ಯಾಪಾರೇಣ ಜಗದ್ರಕ್ಷಂತೀತ್ಯರ್ಥಃ । ಯದ್ವಾ । ದಾತಿವಾರೋ ದತ್ತವರಣೀಯಹವಿರ್ಲಕ್ಷಣಧನೋ ಯಜಮಾನೋ ಹೇ ಮರುತಃ ಈಮೇನಾನ್ಯುಷ್ಮಾನ್ವವೃಧೇ ವರ್ಧಯತಿ ಯದಾ ತದೇತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **(ಯದಾ**—ಯಾವಾಗ । **ಈಂ**—ಈ ಕಾಲವು । **ದಾತಿವಾರಃ**-ಪ್ರದೇಯಜಲ ವಿಶಿಷ್ಟವಾಗಿ ಅಥವಾ ಭೇದಿಸಲ್ಪಟ್ಟ ಮೇಘವುಳ್ಳದ್ದಾಗಿ । **ವವೃಧೇ**-ವರ್ಧಿಸುತ್ತದೆಯೋ । [ಅಥವಾ । **ದಾತಿವಾರಃ**—(ನಿಮಗೆ) ದತ್ತವೂ (ನಿಮ್ಮಿಂದ) ವರಣೀಯವೂ ಆದ ಹವಿರೂಪ ಧನವಿಶಿಷ್ಟನಾದ ಯಜಮಾನನು । **ಈಂ**—ಈ ನಿಮ್ಮನ್ನು । **ವವೃಧೇ**—ಅಭಿವೃದ್ಧಿಪಡಿಸುತ್ತಾನೋ] । **(ತದಾ**-ಆಗ) । **ಮಿತ್ರಾವರುಣೌ**—ಮಿತ್ರ ಮತ್ತು ವರುಣರೂ । **ಅರ್ಯಮೋ**—ಅರ್ಯಮನೂ ಸಹ । **ಈಂ**—ಈ ಲೋಕವನ್ನು ಅಥವಾ ಯಜ್ಞವನ್ನು । **ಅವದ್ಯಾತ್**—ಗರ್ಹ್ಯವಾದದ್ದೆಲ್ಲದರಿಂದಲೂ । **ಪಾಂತಿ**—ರಕ್ಷಿಸುತ್ತಾರೆ । **(ತಥಾ**—ಹಾಗೆಯೇ) । **ಅಪ್ರಶಸ್ತಾ**—ಅಪ್ರಶಸ್ತವಾದ ಸಮಸ್ತ ಪದಾರ್ಥಗಳನ್ನೂ । **ಚಯತೇ**—ನಾಶಪಡಿಸುತ್ತಾರೆ । **ಉತ**—ಮತ್ತು । **ಅಚ್ಯುತಾ**—ಮಳೆಸುರಿಸದೇ ಇರುವ(ಆದುದರಿಂದಲೇ) । **ಧ್ರುವಾಣಿ**—ಚಲಿಸದೇ ಇರುವ ಮೇಘಸ್ಥೋದಕಗಳನ್ನು । **ಚ್ಯವಂತೇ**—ಸುರಿಸುತ್ತಾರೆ । [**ಅಥವಾ ಅಚ್ಯುತಾ**—ಚ್ಯುತಿಯಿಲ್ಲದ (ಆದುದರಿಂದಲೇ) । **ಧ್ರುವಾಣಿ**—ಸ್ಥಿರವಾದ ಧನಗಳನ್ನು । **ಚ್ಯವಂತೇ**—ವರ್ಷಿಸುತ್ತಾರೆ].

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಹವಿರಾದಿಗಳನ್ನು ಅರ್ಪಿಸಿ, ನಿಮ್ಮನ್ನು ಯಜಮಾನನು ಅಭಿವೃದ್ಧಿಪಡಿಸಿದಾಗ, ನಿಮ್ಮವರಾದ ಮಿತ್ರ, ವರುಣ ಮತ್ತು ಅರ್ಯಮರು ನಮ್ಮ ಯಜ್ಞವನ್ನು ಸಮಸ್ತ ದೋಷಗಳಿಂದಲೂ ರಕ್ಷಿಸಿ, ಅಪ್ರಶಸ್ತವಾದುದೆಲ್ಲವನ್ನೂ ನಾಶಮಾಡಿ, ಚ್ಯುತಿಯೇ ಇಲ್ಲದ ಮತ್ತು ಸ್ಥಿರವಾದ ಧನಾದಿಗಳನ್ನೂ ಅನುಗ್ರಹಿಸುತ್ತಾರೆ (ಈ ಲೋಕದಲ್ಲಿ, ಕ್ಷೀಣವಾದ ಪದಾರ್ಥಗಳೆಲ್ಲವನ್ನೂ ನಾಶಪಡಿಸಿ, ಮಳೆಸುರಿಸದೇ ಇರುವ ಮೇಘಗಳಲ್ಲಿರುವ ಉದಕಗಳನ್ನು ಸುರಿಸಿ ಅನುಗ್ರಹಿಸುತ್ತಾರೆ).

## English Translation

Mitra, and Varuna, and Aryaman, defend (this) sacrifice from (all that is) reprehensible, and destroy (all that are) unworthy. They cause the yet unfallen and showering (rains) to descend, when, Maruts, the water-yielding (season) gives increase to this (world).

॥ ವಿಶೇಷವಿಷಯಗಳು ॥

ಮಿತ್ರಾವರುಣೌ ಅರ್ಯಮೋ ಈಂ ಅವದ್ಯಾತ್ ಪಾಂತಿ—ಅಹೋರಾತ್ರ್ಯಭಿಮಾನಿದೇವೌ ಅರ್ಯಮಾಪಿ ಏತೇ ತ್ರಯಃ ಅಮುಂ ಲೋಕಂ ಯಜ್ಞಂ ವಾ ಅಯಥಾನುಷ್ಠಾನಾತ್ ಜಗತ್ಪಕ್ಷೇ

**ವ್ಯವಹಾರಪ್ರತಿಬಂಧರೂಪಾತ್ ರಕ್ಷಂತಿ ।** ಯಾಸ್ಕರು-ಮಿತ್ರಾವರುಣರಿಬ್ಬರಿಗೂ **ಸಹೈವ ಸಂಸ್ತವಃ** ಒಂದೇ ವಾಕ್ಯದಿಂದ ಸ್ತುತಿಯು ಉಂಟಾಗಿದೆ ಎಂದು ಹೇಳಿದ್ದಾರೆ. ಇಲ್ಲಿ ಮಿತ್ರಾವರುಣರು ಮರುತ್ತುಗಳಿಗೆ ಸಂಬಂಧಪಟ್ಟಿರುವ ದೇವತೆಗಳೆಂದು ವರ್ಣಿಸಿದೆ. ಈ ಮಿತ್ರಾವರುಣರೂ, ಅರ್ಯಮಾ ಎಂಬ ದೇವನೂ ಸೇರಿ ಮೂರು ಜನ ದೇವತೆಗಳು ಈ ಲೋಕವನ್ನೂ, ಯಜ್ಞವನ್ನೂ ರಕ್ಷಿಸುತ್ತಾರೆ. ಯಜ್ಞದಲ್ಲಿ ಕರ್ತವ್ಯನ್ಯೂನತೆಯೂ ಕರ್ತವ್ಯದಲ್ಲಿ ವ್ಯತ್ಯಾಸವು ಉಂಟಾಗದಂತೆಯೂ ಪ್ರಪಂಚದ ವ್ಯವಹಾರದಲ್ಲಿ ಪ್ರತಿಬಂಧಕವು ಯಾವುದೂ ಬರದಂತೆಯೂ ರಕ್ಷಿಸುವರು ಎಂದು ಸಾಯಣರು ಅರ್ಥವನ್ನು ವರ್ಣಿಸಿದ್ದಾರೆ. ಮತ್ತು ಇವರಿಬ್ಬರೂ ಅಹೋರಾತ್ರ್ಯಭಿಮಾನಿಗಳಾದ ದೇವತೆಗಳೆಂದೂ ಹೇಳಿದ್ದಾರೆ.

**ಅಪ್ರಶಸ್ತಾ ಚಯತೇ— ಕ್ಷೀಣಾನಪಿ ಪದಾರ್ಥಾನ್ ಚಾತಯಂತಿ ನಾಶಯಂತಿ ।** ಈ ಮಿತ್ರಾವರುಣರು ಅಹೋರಾತ್ರಭಿಮಾನಿಗಳಾದ ಕಾರಣ ಕಾಲಕ್ಕನುಗುಣವಾಗಿ ಆಯಾಯ ಪದಾರ್ಥಗಳಲ್ಲಿ (ಬದಲಾವಣೆ) ರೂಪಾಂತರಾಪತ್ತಿಯನ್ನು ಉಂಟುಮಾಡಿ ಅವುಗಳು ನಾಶವನ್ನು ಹೊಂದುವಂತೆ ಮಾಡುತ್ತಾರೆ ಎಂದು ಅರ್ಥಮಾಡಿದೆ. ಇದರಿಂದ ಅಹೋರಾತ್ರ್ಯಭಿಮಾನಿಗಳಾದ ಮಿತ್ರಾವರುಣರಿಗೆ ಸೃಷ್ಟಿ ಪ್ರಳಯ ಕರ್ತೃತ್ವರೂಪವಾದ ಕರ್ಮಾಚರಣೆಯ ಸಾಮರ್ಥ್ಯವನ್ನು ನಿರೂಪಿಸಿದೆ.

**ಅಚ್ಯುತಾ ಧ್ರುವಾಣಿ ಚ್ಯವಂತೇ** ಎಂಬ ವಾಕ್ಯದಿಂದ ಸ್ಥಿತಿಯನ್ನೂ ಇವರೇ ಉಂಟುಮಾಡುವವರೆಂದೂ ಹೇಳಿದೆ. **ಅಚ್ಯುತಾನಿ— ಅಸ್ರಾವೀಣಿ** ಘನಾವಸ್ಥೆಯನ್ನು ಹೊಂದಿ ದ್ರವರೂಪವಾಗಿರುವುದೆಂಬ ಅರ್ಥಮಾಡಿ ಘನೀಭೂತವಾದ ಕಾರಣ ಧ್ರುವಾಣಿ ಚಲಿಸದಿರುವ ಮೇಘದಲ್ಲಿರುವ ಉದಕಗಳನ್ನು ಇವರು **ಚ್ಯಾವಯಂತಿ** ಭೂಮಿಗೆ ವೃಷ್ಟಿಯರೂಪದಲ್ಲಿ ಸುರಿಯುವ ಹಾಗೆ ಮಾಡುತ್ತಾರೆ ಎಂದು ಒಂದು ವಿಧವಾದ ಅರ್ಥವೂ, **ಯದ್ವಾ ಅಚ್ಯುತಾನಿ ಧ್ರುವಾಣಿ ಧನಾನಿ ಚ್ಯವಂತೇ** ಅಕ್ಷಯವಾದ ಧನವನ್ನು (ಭೂಮಿಗೆ) ಅನುಗ್ರಹಿಸಿ ಪ್ರಪಂಚವ್ಯವಹಾರವು ನೆರವೇರುವಂತೆ ಮಾಡುತ್ತಾರೆ ಎಂದು ಸೃಷ್ಟಿಸ್ಥಿತಿಲಯಕರ್ತೃವೂ ಅಹೋರಾತ್ರಾಭಿಮಾನಿಗಳಾದ ಮಿತ್ರಾವರುಣರಿಗೆ ಇರುವುದೆಂಬ ಇನ್ನೊಂದು ಅರ್ಥವೂ ವರ್ಣಿತವಾಗಿದೆ. ಮಿತ್ರಾವರುಣರೇ ಅಹೋರಾತ್ರಿಗಳ ರೂಪದಿಂದ ಇರುವರು. ಅಹೋರಾತ್ರಗಳಲ್ಲಿ ವೃಷ್ಟಿಯೂ ಉಂಟಾಗುವುದು ಎಂಬ ವಿಷಯದಲ್ಲಿ " **ಅಹೋರಾತ್ರೇ ವೈ ಮಿತ್ರಾವರುಣಾವಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ ವರ್ಷತಿ** " ಎಂಬ ಶ್ರುತಿವಾಕ್ಯವನ್ನು ಉದಾಹರಿಸಿದೆ.

ಮರುದ್ದೇವತೆಗಳನ್ನು ಸಂಬೋಧಿಸಿ ಈ ಮಿತ್ರಾದಿದೇವತೆಗಳು ಜಗತ್ತಿನ ಸೃಷ್ಟಿರೂಪವಾದ ಕಾರ್ಯಗಳನ್ನೂ ಆಚರಿಸುವ ಕಾಲವನ್ನೂ ನಿರೂಪಿಸಿದೆ. **ಈಂ ದಾತಿವಾರಃ ವವೃಧೇ** ಈ ವಾಕ್ಯವು ಮಿತ್ರಾದಿಗಳ ಅನುಗ್ರಹಕಾಲವನ್ನೂ ಬೋಧಿಸುವುದಾಗಿದೆ. ಈಂ ಎಂಬ ನಿಪಾತಕ್ಕೆ ಇಲ್ಲಿ ಈ ಕಾಲವೆಂಬ ಅರ್ಥವನ್ನು ವಿವರಿಸಿದೆ. ದಾತಿವಾರ ಪದಕ್ಕೆ ಖಂಡಿತಮೇಘಃ ಪ್ರದೇಯಜಲಃ ಮೇಘಗಳಲ್ಲಿ ಘನೀಭಾವವು ಕಡಿಮೆಯಾಗಿ ವೃಷ್ಟಿಯು ಆಗುವ ರೀತಿಯನ್ನು ಉದಕವು ಹೊಂದಿರುವ ಕಾಲವು ವೃದ್ಧಿಯಾದಾಗ ಎಂದೂ, **ದತ್ತವರಣೀಯಹವಿರ್ಲಕ್ಷಣಧನೋ ಯಜಮಾನಃ** (ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸಿ) ದೇವತೆಗಳಿಗೆ ಅಭಿಲಷಣೀಯವಾದ ಹವಿಸ್ಸಿನ ರೂಪವಾದ ಧನವನ್ನು ಯಜ್ಞಮಾಡುವ ಯಜಮಾನನು ದೇವತೆಗಳ ಉದ್ದೇಶದಿಂದ ಅರ್ಪಿಸಿದ ಕಾಲಕ್ಕನುಗುಣವಾಗಿ ಮಿತ್ರನೇ ಮೊದಲಾದ ದೇವತೆಗಳು ಮರುದ್ದೇವತೆಗಳು ಆಚರಿಸಬೇಕಾದ ಕಾರ್ಯಗಳಿಗನುಕೂಲರಾಗಿ ಜಗತ್ತಿನ ವ್ಯಾಪಾರಗಳನ್ನೂ ನೆರವೇರಿಸಿ ರಕ್ಷಿಸುವರೆಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪಾಂತಿ**—ಪಾ ರಕ್ಷಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅವದ್ಯಾತ್**—ವದ ವ್ಯಕ್ತಾಯಾಂ ವಾಚಿ. ನಞ್ ಉಪಪದವಾಗಿರುವಾಗ **ಅವದ್ಯಪಣ್ಯವರ್ಯಾ**—(ಪಾ. ಸೂ. ೩-೧-೧೦೧) ಎಂಬುದರಿಂದ ಯದಂತವಾಗಿ ನಿಪಾತಿತವಾಗಿದೆ. ಪಂಚಮೀ ಏಕವಚನಾಂತರೂಪ.

**ಚಯತೇ**—ಚಿಞ್ ಚಯನೇ. ಧಾತು ಚುರಾದಿ. ಧಾತುವಿಗೆ ಇತ್ತ್ವ ಸಾಮರ್ಥ್ಯದಿಂದ ಣಿಚ್ ವಿಕಲ್ಪವಾಗಿ ಬರುತ್ತದೆ. ವ್ಯತ್ಯಯದಿಂದ ಝ ಪ್ರತ್ಯಯಕ್ಕೆ ಅತಾದೇಶ. ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಅಪ್ರಶಸ್ತಾನ್**—ಶಂಸು ಸ್ತುತೌ. ಧಾತು. ಕರ್ಮಣಿಯಲ್ಲಿ ನಿಷ್ಠಾ ಪ್ರತ್ಯಯ. ನಞ್ ತತ್ಪುರುಷ ಸಮಾಸ. **ತತ್ಪುರುಷೇ ತು**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಚ್ಯವಂತೇ**—ಚ್ಯುಙ್ ಗತೌ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅಚ್ಯುತಾ**—ನ ಚ್ಯುತಾನಿ ಅಚ್ಯುತಾನಿ. ನಞ್ ತತ್ಪುರುಷಸಮಾಸ. ಹಿಂದಿನಂತೆ ನಞ್ ಸ್ವರ ಉಳಿಯುತ್ತದೆ. **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕರೂಪದಲ್ಲಿ ಶಿಗೆ ಲೋಪ.

**ವವೃಧೇ**—ವೃಧು ವೃದ್ಧೌ. ಧಾತು. **ಛಂದಸಿ ಲುಙ್‌ಲಙ್**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದಾತಿವಾರಃ**—ಬಹುವ್ರೀಹಿಯಲ್ಲಿ **ಬಹುವ್ರೀಹೌ ಪ್ರಕೃತ್ಯಾ**—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೮ ॥

---

॥ ಸಂಹಿತಾಪಾಠಃ ॥

ನಹೀ ನು ವೋ ಮರುತೋ ಅಂತ್ಯಸ್ಮೇ ಆರಾತ್ತಾಚ್ಚಿಚ್ಛವಸೋ ಅಂತಮಾಪುಃ ।
ತೇ ಧೃಷ್ಣುನಾ ಶವಸಾ ಶೂಶುವಾಂಸೋಽರ್ಣೋ ನ ದ್ವೇಷೋ ಧೃಷತಾ
ಪರಿ ಷ್ಠುಃ ॥ ೯ ॥

॥ ಪದಪಾಠಃ ॥

ನಹಿ । ನು । ವಃ । ಮರುತಃ । ಅಂತಿ । ಅಸ್ಮೇ ಇತಿ । ಆರಾತ್ತಾತ್ । ಚಿತ್ । ಶವಸಃ । ಅಂತಂ । ಆಪುಃ ।

ತೇ । ಧೃಷ್ಣುನಾ । ಶವಸಾ । ಶುಶುವಾಂಸಃ । ಅರ್ಣಃ । ನ । ದ್ವೇಷಃ । ಧೃಷತಾ । ಪರಿ । ಸ್ಥುಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವಃ ಶವಸೋ ಯುಷ್ಮಾಕಂ ಸಂಬಂಧಿನೋ ಬಲಸ್ಯಾಂತಮವಸಾನಮಂತ್ಯಂತಿಕೇ ಆರಾತ್ತಾಚ್ಚಿದ್ದೂರಾದಪಿ । ಯದ್ವಾ । ಚಿದಿತಿ ಕುತ್ಸಾಯಾಂ । ಅತ್ಯಂತದೂರಾತ್ । ಅಸ್ಮೇ ಅಸ್ಮಾಸು ಮಧ್ಯ ಏಕೋಽಪಿ ನು ಕ್ಷಿಪ್ರಂ ನಹ್ಯಾಪುಃ । ನೈವ ಖಲು ಪ್ರಾಪ್ನುವಂತಿ । ಸಂನಿಧಾವಸಂನಿಧೌ ಚ ನ ಪ್ರಾಪ್ನುವಂತೀತ್ಯರ್ಥಃ । ಅಥ ಪರೋಕ್ಷೇ ಪ್ರಾಪ್ತಬಲವತ್ತ್ವಮಾಹ । ತೇ ಖಲು ಮರುತೋ ಧೃಷ್ಣುನಾ ಧರ್ಷಕೇಣ ಶವಸಾ ಬಲೇನ ಶೂಶುವಾಂಸೋ ವರ್ಧಮಾನಾಃ ಅತ ಏವ ಧೃಷತಾ ಪರಾಭಿಭಾವಕೇನ ಸಾಮರ್ಥ್ಯೇನ ದ್ವಿಷೋ ದ್ವೇಷ್ಟೄನ್ಪರಿ ಷ್ಮುಃ । ಪರಿಭವಂತಿ । ವಶೀಕುರ್ವಂತಿ । ತತ್ರ ದೃಷ್ಟಾಂತಃ । ಅರ್ಣೋ ನೋದಕಮಿವ । ಯಥೋದಕಂ ಸ್ವನಿರೋಧಿ ರಜಆದಿಕಮಭಿಭವತಿ ತದ್ವತ್ । ಯುಸ್ಮಾದೇವಂ ತಸ್ಮಾಚ್ಛವಸೋಽಂತಂ ನಾಪುಃ ॥

॥ ಪ್ರತಿಪದಾರ್ಥ ॥

**ತೇ**—ಆ ಮರುದ್ದೇವತೆಗಳು । **ಧೃಷ್ಣುನಾ**—ಧರ್ಷಕವಾದ । **ಶವಸಾ**—ಸ್ವಕೀಯ ಬಲದಿಂದ । **ಶೂಶುವಾಂಸಃ**—ವರ್ಧಮಾನರಾಗಿ । **ಧೃಷತಾ**—(ಆದುದರಿಂದಲೇ) ಪರಾಭಿಭಾವಕ ಸಾಮರ್ಥ್ಯದಿಂದ । **ದ್ವೇಷಃ**—ದ್ವೇಷಿಗಳನ್ನು । **ಅರ್ಣಃ ನ**—ಸಮುದ್ರೋದಕವು ಹೇಗೆ ರಜ ಆದಿಗಳನ್ನು ಆವರಿಸುತ್ತದೆಯೋ ಹಾಗೆ । **ಪರಿ ಷ್ಮುಃ**—ಸೋಲಿಸುತ್ತಾರೆ (ವಶಪಡಿಸಿಕೊಳ್ಳುತ್ತಾರೆ) ಆದುದರಿಂದ । **(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ವಃ**—ನಿಮ್ಮ । **ಶವಸಃ**—ಬಲದ । **ಅಂತಂ**—ಕೊನೆಯನ್ನು । **ಅಂತಿ**—ಸಮೀಪದಲ್ಲಿ (ಅಥವಾ) **ಆರಾತ್ತಾತ್ ಚಿತ್**—ಬಹಳ ದೂರದಿಂದ । **ಅಸ್ಮೇ**—ನಮ್ಮ (ಮಧ್ಯದಲ್ಲಿ ಯಾರೂ) । **ನು**—ಕ್ಷಿಪ್ರವಾಗಿ । **ನಹಿ ಆಪುಃ**—ಪ್ರಾಪ್ತರಾಗುವುದೇ ಇಲ್ಲ.

॥ ಭಾವಾರ್ಥ ॥

ಮರುದ್ದೇವತೆಗಳು ತಮ್ಮ ನೈಜವಾದ ಬಲದಿಂದ ಪ್ರವರ್ಧಮಾನರಾಗಿ, ಶತ್ರುಧರ್ಷಕವಾದ ಸಾಮರ್ಥ್ಯದಿಂದ ದ್ವೇಷಿಗಳೆಲ್ಲರನ್ನೂ, ಸಮುದ್ರೋದಕವು ಧೂಳು ಮೊದಲಾದುವನ್ನು ತನ್ನಧೀನಪಡಿಸಿಕೊಳ್ಳುವಂತೆ, ತಮ್ಮ ವಶಪಡಿಸಿಕೊಳ್ಳುತ್ತಾರೆ; ಆದುದರಿಂದಲೇ, ಇವರ ಬಲದ (ಪರಿಮಿತಿಯನ್ನು) ಅಂತವನ್ನು, ಹತ್ತಿರದಿಂದಲಾಗಲೀ ದೂರದಿಂದಲಾಗಲೀ ಯಾರೂ ತಿಳಿಯಲಾರರು.

## English Translation.

None of us, Maruts, have attained, either nearly or remotely the limit of your strength: those (Maruts), increasing in energy and vigour, overwhelm their enemies like an ocean.

॥ ವಿಶೇಷವಿಷಯಗಳು ॥

**ಶವಸಃ ಅಂತಂ ಅಸ್ಮೇ ನು ನಹಿ ಆಪುಃ—ಯುಷ್ಮಾಕಂ ಸಂಬಂಧಿನೋ ಬಲಸ್ಯ ಅವಸಾನಂ ಅಸ್ಮಾಸು ಮಧ್ಯೇ ಏಕೋಽಪಿ ಕ್ಷಿಪ್ರಂ ನೈವ ಖಲು ಪ್ರಾಪ್ನುವಂತಿ। ಸನ್ನಿಧಾವಸನ್ನಿಧೌ ಚ ನ ಪ್ರಾಪ್ನುವಂತಿ। ಶವಸ್** ಎಂಬ ಪದವು ಉದಕನಾಮುಗಳಲ್ಲಿ (ನಿ. ೧-೧೪) ಉಕ್ತವಾಗಿದೆ. ಬಲನಾಮುಗಲ್ಲಿ (ನಿ. ೩-೯) ಪಠಿತವಾಗಿದೆ. ಮರುದ್ದೇವತೆಗಳ ಬಲದ ಪರಿಮಿತಿಯನ್ನು ನಿಷ್ಕರ್ಷೆಮಾಡಲು ಮಂತ್ರದ್ರಷ್ಟೃಗಳಾಗಿರುವ ಋಷಿಗಳಾದವರ ನಮ್ಮಲ್ಲಿ ಯಾವ ಒಬ್ಬನಿಗೂ ನಿಮ್ಮ ಸನ್ನಿಧಿಯಲ್ಲಿಯಾಗಲಿ, ದೂರದಲ್ಲಿಯಾಗಲಿ ಜ್ಞಾನದಿಂದ ತಿಳಿಯಲು ಸಾಮರ್ಥ್ಯವಿಲ್ಲದುದರಿಂದ ಅಪರಿಮಿತವಾದ ಬಲವುಳ್ಳವರೆಂದು ಮರುತ್ತಗಳ ಮಾಹಾತ್ಮ್ಯವನ್ನು ಪ್ರಶಂಸಿಸಿದೆ.

**ಅಸ್ಮೇ** ಎಂಬ ಪದವು ಏಳು ವಿಭಕ್ತಿಗಳಲ್ಲಿಯೂ ಒಂದೇ ರೂಪದಿಂದ ಇರುತ್ತಾ ಆಯಾಯ ವಿಭಕ್ತಿಯ ಅರ್ಥವನ್ನು ಬೋಧಿಸುವುದು ಎಂದು ನಿರುಕ್ತಕಾರರು ನಿರ್ವಚನಮಾಡಿ ಉದಾಹರಣೆಯನ್ನು ಹೇಳಿದ್ದಾರೆ. **ಅಸ್ಮೇ ತೇ ಬಂಧುಃ** ಈ ವಾಕ್ಯದಲ್ಲಿ ಅಸ್ಮೇ ಎಂಬುದಕ್ಕೆ ವಯಂ ನಾವು ಎಂದು ಪ್ರಥಮಾವಿಭಕ್ತಿಯ ಅರ್ಥವನ್ನು ಹೇಳಿದೆ. **ಅಸ್ಮೇ ಯಾತಂ ನಾಸತ್ಯಾ ಸಜೋಷಾಃ** ಇಲ್ಲಿ **ಅಸ್ಮಾನ್**—ನಮ್ಮನ್ನು ಎಂದು ದ್ವಿತೀಯಾ ವಿಭಕ್ತಿಯ ಅರ್ಥವನ್ನು ಹೇಳಿದೆ. **ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ** ಇಲ್ಲಿ **ಅಸ್ಮಾಭಿಃ**—ನಮ್ಮಿಂದ ಎಂದು ತೃತೀಯಾ ವಿಭಕ್ತಿಯ ಅರ್ಥದಲ್ಲಿ ಪ್ರಯುಕ್ತವಾಗಿದೆ. **ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್—ಅಸ್ಮಭ್ಯಂ** ನಮಗೋಸ್ಕರ ಎಂದು ಚತುರ್ಥೀವಿಭಕ್ತಿಯ ಅರ್ಥವನ್ನು ವರ್ಣಿಸಿದೆ. **ಅಸ್ಮೇ ಆರಾತ್ ಚಿತ್ ದ್ವೇಷಃ ಸನುತರ್ಯುಯೋತು ಅಸ್ಮತ್**—ನಮ್ಮ ದೆಸೆಯಿಂದ ಎಂದು ಪಂಚಮೀ ಅರ್ಥವನ್ನು ವಿವರಿಸಿದೆ. **ಊರ್ವ ಇವ ಪಪ್ರಥೇ ಕಾಮೋ ಅಸ್ಮೇ। ಅಸ್ಮಾಕಂ**—ನಮ್ಮ ಎಂದು ಷಷ್ಠೀ ವಿಭಕ್ತಿಯ ಪ್ರಯೋಗವನ್ನು ತೋರಿಸಿದೆ. **ಅಸ್ಮೇ ಧತ್ತವಸವೋ ವಸೂನಿ—ಅಸ್ಮಾಸು**-ನಮ್ಮ ವಿಷಯದಲ್ಲಿ ಎಂದು ಸಪ್ತಮೀ ವಿಭಕ್ತಿಯ ಅರ್ಥವು ಇಲ್ಲಿ ಉಪಪಾದಿತವಾಗಿದೆ. (ನಿ. ೬-೭)

**ಆರಾಚ್ಚಿತ್—ದೂರಾದಪಿ। ಯದ್ವಾ। ಚಿದಿತಿ ಕುತ್ಸಾಯಾಂ ಅತ್ಯಂತದೂರಾತ್ ಚಿದಿತ್ಯೇಷೋಽನೇಕಕರ್ಮಾ** ಎಂದು ಚಿತ್ ಎಂಬ ನಿಪಾತವು ಅನೇಕಾರ್ಥಗಳಲ್ಲಿ ಪ್ರಯುಕ್ತವಾಗಿದೆ ಎಂದು ನಿರುಕ್ತಕಾರರು ವಿವರಿಸಿದ್ದಾರೆ. ಇಲ್ಲಿ ಚಿತ್ ಎಂಬ ಪದಕ್ಕೆ ಅಪಿ ಎಂದರೆ ಸಮುಚ್ಚಯ ರೂಪವಾದ ಅರ್ಥವನ್ನೂ ನಿಂದಾರೂಪವಾದ ಅರ್ಥವನ್ನೂ ಹೇಳಿದೆ. ದೂರದಲ್ಲಿಯಾಗಲಿ, ಬಹಳ ದೂರದಿಂದಲಾಗಲಿ ಎಂಬ ಅರ್ಥವನ್ನು ವಿವರಿಸಿದೆ

**ಶವಸಾ ಶುಶುವಾಂಸಃ**—ಇತರರನ್ನು ತಿರಸ್ಕರಿಸುವ ಸಾಮರ್ಥ್ಯದಿಂದ ಅಭಿವೃದ್ಧಿಯನ್ನು ಹೊಂದುತ್ತಿರುವ ಮರುದ್ದೇವತೆಗಳು ತಮ್ಮ ಶಕ್ತಿಯಿಂದಲೇ **ದ್ವೇಷಃ ಪರಿ ಷ್ಠುಃ** ಶತ್ರುಗಳನ್ನು ತಮ್ಮ ಅಧೀನದಲ್ಲಿ ಇರಿಸುವರೆಂದು ವರ್ಣಿಸಿದೆ. ಈ ವಿಷಯದಲ್ಲಿ **ಅರ್ಣಃ ನ** ಎಂದು ಉಪಮಾನವನ್ನು ಹೇಳಿದೆ. **ಯಥಾ ಉದಕಂ ರಜ ಆದಿಕಂ ಅಭಿಭವತಿ ತದ್ವತ್।** ಉದಕವು ತನ್ನ ಸಾಮರ್ಥ್ಯದಿಂದ ತನ್ನ ಶತ್ರುವಾದ ರಜಸ್ಸನ್ನು (ಧೂಳನ್ನು) ತನ್ನಲ್ಲಿ ಅಡಗಿಸುವ ಹಾಗೆಯೇ ಇವರೂ ಶತ್ರುಗಳನ್ನು ತಮ್ಮ ಅಧೀನದಲ್ಲಿರಿಸುವರು ಎಂದು ಅರ್ಥವನ್ನು ವಿವರಿಸಿದೆ. ಇದರಿಂದ ಇವರು ಅಪರಿಮಿತ ಬಲಶಾಲಿಗಳೆಂದು ಅರ್ಥವನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಹಿ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಂತಿ**—ಅಂತಿಕ ಶಬ್ದ. **ಕಾದಿಲೋಪೋ ಬಹುಲಮಿತಿ ವಕ್ತವ್ಯಂ** ಎಂಬ ವಚನದಿಂದ ಅದರ ಕಕಾರಕ್ಕೆ ಲೋಪ ಬರುತ್ತದೆ.

**ಅಸ್ಮೇ**—ಸಪ್ತಮೀ ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಶೇ ಆದೇಶ.

**ಆರಾತ್ತಾತ್**—ಆರಾತ್ ಎಂಬುದು ದೂರ ಮತ್ತು ಸಮೀಪಾರ್ಥವನ್ನು ಹೇಳುವ ಅವ್ಯಯ. ಇದಕ್ಕೆ ಸ್ವಾರ್ಥದಲ್ಲಿ ತಾತಿಲ್ ಪ್ರತ್ಯಯ. ಲಿತ್ತಾದುದರಿಂದ ಇದರ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಆಪುಃ**—ಆಪ್ಲೃ ವ್ಯಾಪ್ತೌ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನಾಂತರೂಪ. ನಹಿ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಧೃಷ್ಣುನಾ**—ಞಿಧೃಷಾ ಪ್ರಾಗಲ್ಭ್ಯೇ. ಧಾತು. **ತ್ರಸಿಗೃಧಿಧೃಷಿ ಕ್ಷಿಪೇಃ ಕ್ನುಃ** (ಪಾ. ಸೂ. ೩-೨-೧೪೦) ಎಂಬುದರಿಂದ ಕ್ನು ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ತೃತೀಯಾ ಏಕವಚನಾಂತರೂಪ.

**ಶೂಶುವಾಂಸಃ**—ಟು ಓಶ್ವಿ ಗತಿವೃದ್ಧ್ಯೋಃ ಧಾತು. ಲಿಟಿಗೆ ಕ್ವಸುರಾದೇಶ. **ವಿಭಾಷಾ ಶ್ವೇಃ** (ಪಾ. ಸೂ. ೬-೧ ೩೦) ಎಂಬುದರಿಂದ ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. **ವಸ್ವೇಕಾಜಾದ್ಘಸಾಂ** (ಪಾ. ಸೂ. ೭-೨-೬೭) ಎಂಬುದರಿಂದ ನಿಯಮಮಾಡಿರುವುದರಿಂದ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬಂದಾಗ **ತುಜಾದೀನಾಂ ದೀರ್ಘೋಽ-** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಪ್ರತ್ಯಯಸ್ವರ ಬರುತ್ತದೆ.

**ದ್ವೇಷಃ**—ದ್ವಿಷ ಅಪ್ರೀತೌ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** ಎಂಬುದರಿಂದ ವಿಚ್. **ಪುಗಂತ ಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. ಪ್ರತ್ಯಯದಲ್ಲಿ ಸರ್ವಲೋಪವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಸ್ಥುಃ**—ಷ್ಠಾ ಗತಿನಿವೃತ್ತೌ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್. ಪ್ರಥಮ ಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಚ್ಲಿಗೆ ಸಿಚಾದೇಶ **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಜುಸಾದೇಶ **ಗಾತಿಸ್ಥಾಘು—**(ಪಾ ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. **ಉಸ್ಯಪದಾಂತಾತ್** ಎಂಬುದರಿಂದ ಪರರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ನಿಘಾತಸ್ವರ ಬರುತ್ತದೆ. **ಉಪಸರ್ಗಾತ್ ಸುನೋ—**(ಪಾ. ಸೂ. ೮-೨-೬೫) ಎಂಬುದರಿಂದ ಷತ್ವ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ವಯಮದ್ಯೇಂದ್ರಸ್ಯ ಪ್ರೇಷ್ಠಾ ವಯಂ ಶ್ವೋ ವೋಚೇಮಹಿ ಸಮರ್ಯೇ ।
ವಯಂ ಪುರಾ ಮಹಿ ಚ ನೋ ಅನು ದ್ಯೂನ್ತನ್ನ ಋಭುಕ್ಷಾ ನರಾಮನು
ಷ್ಯಾತ್ ॥ ೧೦ ॥

॥ ಪದಪಾಠಃ ॥

ವಯಂ । ಅದ್ಯ । ಇಂದ್ರಸ್ಯ । ಪ್ರೇಷ್ಠಾಃ । ವಯಂ । ಶ್ವಃ । ವೋಚೇಮಹಿ । ಸಽಮರ್ಯೇ ।
ವಯಂ । ಪುರಾ । ಮಹಿ । ಚ । ನಃ । ಅನು । ದ್ಯೂನ್ । ತತ್ । ನಃ । ಋಭುಕ್ಷಾಃ । ನರಾಂ ।
ಅನು । ಸ್ಯಾತ್ ॥ ೧೦ ॥

॥ ಸಾಯಣಭಾಷ್ಯಂ ॥

ವಯಮದ್ಯೇತ್ಯೇತಾಂ ದಶಮೀಮಸ್ತಮಿತ ಆದಿತ್ಯೇ ಜಪೇತ್ । ತಥಾ ಚ ಸೂತ್ರಂ । ವಯಮದ್ಯೇಂದ್ರಸ್ಯ ಪ್ರೇಷ್ಠಾ ಇತ್ಯಸ್ತಂ ಯಾತ್ಯಾದಿತ್ಯೇ । ಆ. ಗೃ. ೨-೬-೧೪ । ಇತಿ ॥

ಅದ್ಯಾಸ್ಮಿನ್ದಿನೇ ವಯಂ ಯಷ್ಟಾರ ಇಂದ್ರಸ್ಯ ದೇವಸ್ಯ ಪ್ರೇಷ್ಠಾಃ ಪ್ರಿಯತಮಾ ಭವೇಮ । ಯದ್ವಾ । ಪ್ರಿಯತಮಾ ವಯಮಿಂದ್ರಸ್ಯ ಮಹತ್ತ್ವಂ ವೋಚೇಮಹಿ । ಸ್ತೋತುಂ ಸಮರ್ಥಾ ಭೂಯಾಸ್ಮ । ಕಿಂಚ ವಯಂ ಶ್ವಃ ಪರಸ್ಮಿನ್ನಪಿ ದಿನೇ ಸಮರ್ಯೇ । ಸಹ ಮರ್ಯಾ ಮರ್ತ್ಯಾ ಋತ್ವಿಜೋ ಯಸ್ಮಿನ್ ಸ ಸಮರ್ಯೋ ಯಜ್ಞಃ । ತಸ್ಮಿನ್ । ಸಂಗ್ರಾಮೇ ವಾ । ಇಂದ್ರಸ್ಯ ಮಹತ್ತ್ವಂ ವೋಚೇಮಹಿ । ಕಿಂಚ ವಯಂ ಪುರಾ ಪೂರ್ವಸ್ಮಿನ್ನತೀತೇಽಪಿ ಕಾಲೇ ಮಹಿ ಮಹದ್ಬಲಂ ನೋಽಸ್ಮದರ್ಥಂ ವೋಚೇಮಹಿ । ತಥಾ ದ್ಯೂನ್ದಿವಸಾನನು । ಪ್ರತಿದಿವಸಮಿತ್ಯರ್ಥಃ । ಅತೀತ ಆಗಾಮಿನಿ ಚ ದಿವಸೇ ಸರ್ವದಾ ವೋಚೇಮಹಿ । ತತ್ತಸ್ಮಾದೃಭುಕ್ಷಾಃ । ಮಹನ್ನಾಮೈತತ್ ಋಭುಕ್ಷಾ ಉಕ್ಷಾ ಇತಿ ತನ್ನಾಮಸು ಪಾಠಾತ್ । ಮಹಾನಿಂದ್ರೋ ನರಾಂ ಮನುಷ್ಯಾಣಾಂ ಮಧ್ಯೇ ನೋಽಸ್ಮಾನನು ಸ್ಯಾತ್ । ಅನು ಭವತು । ಅನುಕೂಲಮಭಿಮತಪ್ರದೋ ವಾ ಭವತು ॥

॥ ಪ್ರತಿಪದಾರ್ಥ ॥

**ಅದ್ಯ**—ಈ ದಿವಸ । **ಇಂದ್ರಸ್ಯ**—ಇಂದ್ರನಿಗೆ । **ಪ್ರೇಷ್ಠಾಃ**—ಪ್ರಿಯತಮರಾದ । **ವಯಂ**—(ಯಷ್ಟೃಗಳಾದ)ನಾವು । **ವೋಚೇಮಹಿ**—(ಇಂದ್ರನ ಮಹಾತ್ಮೆಯನ್ನು) ಸ್ತುತಿಸಲು ಸಮರ್ಥರಾಗೋಣ । [ಅಥವಾ **ವಯಂ**—ನಾವು । **ಇಂದ್ರಸ್ಯ**—ಇಂದ್ರನಿಗೆ । **ಪ್ರೇಷ್ಠಾಃ**—ಪ್ರಿಯತಮರು (ಆಗೋಣ) । **ಅದ್ಯ**—ಈ ದಿವಸ । **ವೋಚೇಮಹಿ**—(ಇಂದ್ರನ ಮಹಿಮೆಯನ್ನು) ಹೊಗಳೋಣ । ] **ವಯಂ**—ನಾವು । **ಶ್ವಃ**—ನಾಳೆಯೂ ।

**ಸಮರ್ಯೇ**— ಋತ್ವಿಗಾದಿಯುಕ್ತವಾದ ಯಜ್ಞದಲ್ಲಿ ಅಥವಾ ಸಂಗ್ರಾಮದಲ್ಲಿ | (**ವೋಚೇಮಹಿ**— ಅವನ ಮಹಿಮೆಯನ್ನು ಹೊಗಳೋಣ) | ಮತ್ತು | **ವಯಂ**— ನಾವು | **ಪುರಾ**— ಹಿಂದೆಯೂ | (**ವೋಚೇಮಹಿ**— ಅವನ ಮಹಿಮೆಯನ್ನು ಹೇಳುತ್ತಿದ್ದೆವು) | **ದ್ಯೂನ್ ಅನು**—(ಈಗ) ಪ್ರತಿದಿನವೂ | **ಮಹಿ**—(ಅವನ) ಮಹದ್ಬಲವನ್ನು | **ನಃ**— ನಮಗೆ (ಬಲದಾಯಕವಾಗಲೆಂದು) | (**ವೋಚೇಮಹಿ**— ಪ್ರಶಂಸಿಸುತ್ತೇವೆ) ! **ತತ್**— ಆದುದರಿಂದ | **ಋಭುಕ್ಷಾಃ**— ಮಹಾತ್ಮನಾದ ಇಂದ್ರನು | **ನರಾಂ**— ಮನುಷ್ಯರಲ್ಲಿ | **ನಃ**—(ಸ್ತೋತೃಗಳಾದ) ನಮಗೆ | **ಅನು ಸ್ಯಾತ್**— ಅನುಕೂಲನು (ಅಭಿಮತದಾಯಕನು) ಆಗಲಿ.

॥ ಭಾವಾರ್ಥ ॥

ಇಂದ್ರನಿಗೆ ಪ್ರಿಯರಾದ ನಾವು ಅವನನ್ನು ಈ ದಿನ ಸ್ತುತಿಸೋಣ; ನಾಳೆಯೂ ಯಾಗ ಕಾಲದಲ್ಲಿ ಅವನನ್ನು ಪ್ರಶಂಸಿಸೋಣ; ಹಿಂದಿನಂತೆಯೇ, ಪ್ರತಿದಿನಸವೂ, ನಮಗೆ ಅನುಕೂಲವಾಗುವುದಕ್ಕೋಸ್ಕರ ಅವನನ್ನು ಹೊಗಳೋಣ. ಇದರಿಂದ ತೃಪ್ತನಾಗಿ ಇಂದ್ರನು, ಮನುಷ್ಯರಲ್ಲಿ ಸ್ತೋತೃಗಳಾದ ನಮ್ಮನ್ನು ಅನುಗ್ರಹಿಸಲಿ.

English Translation.

Let us, who are beloved of Indra, glorify him to-day; let us glorify him tomorrow, at the sacred rite; let us glorify him for our gret (good), in future days as of old, so that Ribhukshin may ever be favourable to us amongst men.

॥ ವಿಶೇಷವಿಷಯಗಳು ॥

ಈ ಋಕ್ಕನ್ನು ಸೂರ್ಯಾಸ್ತಮಯವಾದ ಮೇಲೆ ಪಠಿಸಬೇಕೆಂದು ಆಶ್ವಲಾಯನಗೃಹಸೂತ್ರದಲ್ಲಿ ಹೇಳಿರುವುದು (ಆ. ಗೃ. ಸೂ. ೨-೬-೧೪).

**ವಯಂ ಅದ್ಯ ಇಂದ್ರಸ್ಯ ಪ್ರೇಷ್ಠಾಃ—ಯಷ್ಟಾರಃ ಅಸ್ಮಿನ್ ದಿನೇ ದೇವಸ್ಯ ಪ್ರಿಯತಮಾ ಭವೇಮ** ಯಜ್ಞವನ್ನು ಆಚರಿಸುವ ಯಜಮಾನರು ಈ ದಿವಸ ಯಾಗ ಮಾಡುವ ದಿನದಲ್ಲಿ ದೇವತೆಗಳಿಗೆ ಪ್ರೀತಿಪಾತ್ರರಾಗಿರೋಣ ಎಂದು ಆಶಿಸದೆ ಎಂದು ಮೊದಲನೆಯ ಅರ್ಥವನ್ನು ಈ ವಾಕ್ಯಕ್ಕೆ ಹೇಳಿದೆ. **ಯದ್ವಾ ವಯಂ ಇಂದ್ರಸ್ಯ ಮಹತ್ತ್ವಂ ಸ್ತೋತುಂ ಸಮರ್ಥಾ ಭೂಯಾಸ್ಮ |** ಅಥವಾ ನಾವು ಯಜ್ಞಮಾಡುವ ಯಜಮಾನರಾಗಿ ಇಂದ್ರನ ಮಹಿಮೆಯನ್ನು ಸ್ತುತಿಮಾಡಲು ಶಕ್ತರಾಗೋಣ ಎಂದು ಎರಡನೆಯ ಅರ್ಥವನ್ನೂ ವಿವರಿಸಿದೆ.

**ಶ್ವಃ ಸಮರ್ಯೇ ವೋಚೇಮಹಿ— ಪರಸ್ಮಿನ್ ದಿನೇ** ಯಾಗಮಾಡಿದ ಅನಂತರ ಇಂದ್ರನ ಮಹಿಮೆಯನ್ನು ಸ್ತುತಿಸುತ್ತೇವೆ. ಇಲ್ಲಿ ಸಮರ್ಯ ಶಬ್ದಕ್ಕೆ **ಸಹ ಮರ್ಯಾಃ ಮರ್ತ್ಯಾಃ ಋತ್ವಿಜಃ ಯಸ್ಮಿನ್ ಸ ಸಮರ್ಯೋ ಯಜ್ಞಃ ತಸ್ಮಿನ್ | ಸಂಗ್ರಾಮೇ ವಾ |** **ಮರ್ಯ** ಶಬ್ದವು ಮನುಷ್ಯನಾಮಗಳಲ್ಲಿ (ನಿ. ೩-೮) ಉಕ್ತವಾಗಿದೆ ಮನುಷ್ಯರೊಡನೆ ಯಾಗಶಾಲೆಯಲ್ಲಿ ಅವಶ್ಯಕರ್ತವ್ಯಗಳನ್ನು ಆಚರಿಸುವ ಋತ್ವಿಜರಿಂದ ಕೂಡಿರುವ ಸನ್ನಿವೇಶವು ಸಮರ್ಯ ಪದ ಬೋಧ್ಯವಾದ ಯಜ್ಞವಾಗಿರುವುದು ಅಥವಾ ಮನುಷ್ಯರು ತಮ್ಮ ಕಾರ್ಯವನ್ನು ಸಾಧಿಸುವುದಕ್ಕಾಗಿ ವಿವಾದ ಮಾಡುವ ಸನ್ನಿವೇಶವಾದ ಯುದ್ಧವೆಂದೂ ಅರ್ಥವನ್ನು ವಿವರಿಸಿ ಯಜ್ಞಗಳಲ್ಲಿಯೂ ಯುದ್ಧಗಳಲ್ಲಿಯೂ ಇಂದ್ರನ ಮಹಿಮೆಯನ್ನು ಸ್ತುತಿಮಾಡುತ್ತೇವೆ ಎಂದು ಅರ್ಥವನ್ನು ವರ್ಣಿಸಿದೆ.

**ಪುರಾ ಮಹಿ ನಃ— ಪೂರ್ವಸ್ಮಿನ್ ಅತೀತೇ ಕಾಲ್ಯೇಪಿ ಮಹದ್ಬಲಂ ಅಸ್ಮದರ್ಥಂ ವೋಚೇಮಹಿ ।** ಯಜ್ಞದ ಪೂರ್ವದಿನಗಳಲ್ಲಿಯೂ ಕೂಡ ನಮ್ಮನ್ನು ಅನುಗ್ರಹಿಸಿರುವ ಬಹಳ ಬಲಶಾಲಿಯಾದ ಇಂದ್ರನ ಮಹಿಮೆಯನ್ನು ಸ್ತುತಿಸುದ್ದೇವೆಯಾಗಿ, **ನಃ ಋಭುಕ್ಷಾಃ ಅನು ಸ್ಯಾತ್** ಸಾಧಾರಣವಾಗಿರುವ ಮನುಷ್ಯರು ಮಧ್ಯದಲ್ಲಿ ವಾಸಮಾಡುತ್ತಿರುವ ಯಾಜ್ಞಿಕರಾದ ನಮಗೆ ಇಂದ್ರನು ಇಷ್ಟಗಳನ್ನು ನೆರವೇರಿಸುವವನಾಗಿ ಇರಲಿ ಎಂದು ಆಶಿಸಿದೆ ಋಭುಕ್ಷಾಃ ಎಂಬ ಪದವು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಮತ್ತು—

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**
**ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ ॥**

(ಋ. ಸಂ. ೧-೧೬೨-೧)

ಈ ಋಕ್ಕಿನಲ್ಲಿ ಋಭುಕ್ಷಾಃ ಎಂಬ ಪದಕ್ಕೆ **ಉರಾವಂತರಿಕ್ಷೇ ಕ್ಷಿಯತಿ ನಿವಸತಿ** ಅಂತರಿಕ್ಷದಲ್ಲಿ ವಾಸಮಾಡುವವನೆಂದೂ, **ಅಥವಾ ಕ್ಷಯತಿರೈಶ್ವರ್ಯಾರ್ಥಃ** ಐಶ್ವರ್ಯದಿಂದ **ಋಭೂಣಾಂ ದೇವಾನಾಂ ರಾಜಾ** ದೇವತೆಗಳಿಗೆ ರಾಜನಾಗಿರುವನೆಂದೂ ಇಂದ್ರನ ಪ್ರಭೂತವಾದ ಮಾಹಾತ್ಮ್ಯವನ್ನು ಪ್ರತಿಪಾದಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರೇಷ್ಠಾಃ**— ಅತಿಶಯೇನ ಪ್ರಿಯಾಃ ಪ್ರೇಷ್ಠಾಃ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ ಇದು ಪರವಾದಾಗ **ಪ್ರಿಯಸ್ಥಿರ ಸ್ಫಿರೋರು**—(ಪಾ. ಸೂ. ೬-೪-೧೫೭) ಎಂಬುದರಿಂದ ಪ್ರಿಯ ಶಬ್ದಕ್ಕೆ ಪ್ರಾದೇಶ. **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಎಂಬುದರಿಂದ ಪ್ರಕೃತಿಭಾವ ಬರುತ್ತದೆ. ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೋಚೇಮಹಿ**— ವಚ ಪರಿಭಾಷಣೇ. ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ವ್ಯತ್ಯಯದಿಂದ ಮಹಿಙ್ ಪ್ರತ್ಯಯ ಬರುತ್ತದೆ. **ವ್ಯತ್ಯಯೋ ಬಹುಲಂ** ಎಂಬುದರಿಂದ ಅಙ್. ಲಿಙ್‌ಗೆ ಸೀಯುಟ್ ಬಂದು ಸಲೋಪ ಬಂದಾಗ ಗುಣ. ಅಙ್ ಪರವಾದುದರಿಂದ **ವಚಉಂ** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದಾಗ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಮರ್ಯೇ**— ಸಹ ಮರ್ಯಾಃ ಯಸ್ಮಿನ್. ತಸ್ಮಿನ್ ಸಮರ್ಯೇ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಋಭುಕ್ಷಾಃ**— ಉರು ಅಥವಾ ಋತು ಶಬ್ದವು ಉಪಪದವಾಗಿರುವಾಗ ಭಾ ದೀಪ್ತೌ ಅಥವಾ ಭೂ ಸತ್ತಾಯಾಂ ಧಾತುವಿಗೆ **ಮೃಗಯ್ವಾದಯಶ್ಚ** (ಉ. ಸೂ. ೧-೩೮) ಎಂಬುದರಿಂದ ಕು ಪ್ರತ್ಯಯ. ಪೂರ್ವಪದಕ್ಕೆ ಋ ಭಾವವು ನಿಪಾತದಿಂದ ಸಿದ್ಧವಾಗುತ್ತದೆ. ಋಭು ಎಂಬುದು ಉಪಪದವಾಗಿರುವಾಗ, ಕ್ಷಿ ನಿವಾಸಗತ್ಯೋಃ ಧಾತು. ಇದಕ್ಕೆ **ಪಥೇಸ್ಥ**—(ಉ. ಸೂ. ೪-೪೫೨) ಎಂಬುದರಿಂದ ವಿಧಿಸಲ್ಪಡುವ ಇನಿ ಪ್ರತ್ಯಯವು ಬಹುಲವಚನದಿಂದ ಬರುತ್ತದೆ. ಧಾತುವಿನ ಟಿಗೆ (ಇ) ಲೋಪ. ಸು ಪರವಾದಾಗ **ಪಥಿಮಥ್ಯೃಭುಕ್ಷಾಮಾತ್** (ಪಾ. ಸೂ. ೭-೧-೮೫) ಎಂಬುದರಿಂದ ಆತ್ವ. ಪ್ರತ್ಯಯ ಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಸ್ಯಾತ್**—ಅಸ ಭುವಿ. ಧಾತು. ವಿಧಿಲಿಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. ಶಪ್ ವಿಕರಣಕ್ಕೆ ಲುಕ್. ಲಿಙಿಗೆ ಯಾಸುಟಾಗಮ ಇದು ಙಿತ್ತಾದುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ಉಪಸರ್ಗಾತ್ ಸು**--(ಪಾ ಸೂ. ೮-೩-೬೫) ಎಂಬುದರಿಂದ ಸಂಹಿತಾದಲ್ಲಿ ಷತ್ವ ಬರುತ್ತದೆ.

**ನರಾಂ**—ನೄ ನಯೇ ಧಾತು. ವಿಟ್. ಪ್ರತ್ಯಯ. ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

**ಏಷ ವಃ ಸ್ತೋಮೋ ಮರುತ ಇಯಂ ಗೀರ್ಮಾಂದಾರ್ಯಸ್ಯ ಮಾನ್ಯಸ್ಯ ಕಾರೋಃ ।**
**ಏಷಾ ಯಾಸೀಷ್ಟ ತನ್ವೇ ವಯಾಂ ವಿದ್ಯಾಮೇಷಂ ವೃಜನಂ ಜೀರದಾನುಂ ॥ ೧೧ ॥**

॥ ಪದಪಾಠಃ ॥

**ಏಷಃ । ವಃ । ಸ್ತೋಮಃ । ಮರುತಃ । ಇಯಂ । ಗೀಃ । ಮಾಂದಾರ್ಯಸ್ಯ । ಮಾನ್ಯಸ್ಯ । ಕಾರೋಃ ।**
**ಆ । ಇಷಾ । ಯಾಸೀಷ್ಟ । ತನ್ವೇ । ವಯಾಂ । ವಿದ್ಯಾಮ । ಇಷಂ । ವೃಜನಂ । ಜೀರ್ಽದಾನುಂ ॥**

॥ ಸಾಯಣಭಾಷ್ಯಂ ॥

**ಏಷ ಇತ್ಯೇಕಾದಶೀ ವ್ಯಾಖ್ಯಾತಾ ॥** (69 ನೇ ಪುಟವನ್ನು ನೋಡಿ)

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಮಾಂದಾರ್ಯಸ್ಯ**--ಸ್ತುತಿಗಳಿಂದ ಆನಂದಪಡಿಸುವವನೂ । **ಮಾನ್ಯಸ್ಯ**—ಮಾನನೀಯನೂ (ಆದ) । **ಕಾರೋಃ**—ಸ್ತುತಿಕರ್ತೃವಿನ । **ಏಷಃ ಸ್ತೋಮಃ**—(ಈವರೆಗೆ ಮಾಡಿದ) ಈ ಸ್ತುತಿಯು । **ವಃ**—ನಿಮಗೆ (ಪ್ರೀತಿದಾಯಕವಾಗಲಿ) । (**ತಥಾ**—ಹಾಗೆಯೇ । **ಇಯಂ ಗೀಃ**—ಈ (ಸ್ತುತಿರೂಪ) ವಾಕ್ಯವೂ । (**ವಃ**—ನಿಮಗೋಸ್ಕರ ಆಗಲಿ । [**ಮಾಂದಾರ್ಯಸ್ಯ**—ಸ್ತುತಿಗಳಿಂದ ನಿಮ್ಮನ್ನು ತೃಪ್ತಿಪಡಿಸುವವನೂ, । **ಮಾನ್ಯಸ್ಯ**—ಆದುದರಿಂದಲೇ ಮನುಷ್ಯನೂ ಆದ । **ಕಾರೋಃ** ಈ ಸ್ತುತಿಕರ್ತೃವಿನ] । **ಇಷಾ**—ಇಚ್ಛೆಯಿಂದ । **ತನ್ವೇ**—ಶರೀರದ (ಅಭಿವೃದ್ಧಿಗೋಸ್ಕರ) । **ಆ ಯಾಸಿಷ್ಟ**—(ಸ್ತುತಿಯು ನಿಮ್ಮನ್ನು) ಸಮೀಪಿಸಲಿ । **ವಯಂ**—ನಾವೂ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯನನ್ನೂ । **ವಿದ್ಯಾಮ**—ಪಡೆಯೋಣ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಈವರೆಗೆ ಮಾಡಿದ ಸ್ತುತಿಯೂ (ಈಗ ಮಾಡುತ್ತಿರುವ) ಈ ಸ್ತುತಿವಾಕ್ಯವೂ ನಿಮಗೆ ತೃಪ್ತಿಯನ್ನುಂಟುಮಾಡಲಿ ; ಸ್ತುತ್ಯಾದಿಗಳಿಂದ ನಿಮಗೆ ಹರ್ಷಜನಕನೂ, ಮಾನ್ಯನೂ ಆದ ಸ್ತುತಿಕರ್ತೃವಿನ ಇಚ್ಛೆಯಿಂದ ನಿಮ್ಮ ಶರೀರಪೋಷಣೆಗೋಸ್ಕರ ಆಗಮಿಸಿ ; ನಮಗೂ ಆಹಾರ, ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸಿ

## English Translation.

This praise, Maruts, is for you ; this hymn is for you (the work) of a venerable author, capable of conferring delight (by his laudations) : may the praise reach you for (the good of your) persons, so that we may thence obtain food, strength, and long life.

॥ ವಿಶೇಷವಿಷಯಗಳು ॥

**ಏಷಃ ಸ್ತೋಮಃ ವಃ** ಈ ವಾಕ್ಯದಿಂದ ಮರುತ್ತುಗಳನ್ನೂ ಸಂಬೋಧಿಸಿ **ಇದಾನೀಂ ಕ್ರಿಯಮಾಣ ಪ್ರಕಾರಂ ಸ್ತೋತ್ರಂ ಯುಷ್ಮತ್‌ಪ್ರೀಣನಾಯ ಭವತು** ಈಗ ಯಜಮಾನರಾದ ನಾವು ಸ್ತೋತ್ರಮಾಡುವ ಪ್ರಕಾರಗಳಿಂದ ಮಹಿಮೆಯುಳ್ಳದ್ದಾದ ಈ ಸ್ತೋತ್ರವು ನಿಮಗೆ ಸಂತೋಷವನ್ನು ಉಂಟುಮಾಡುವುದಾಗಿ ಇರಲಿ ಎಂದು ವಿವರಿಸಿದೆ.

**ಇಯಂ ಗೀಃ—ಸ್ತುತಿರೂಪಾ ವಾಗಪಿ ಯುಷ್ಮದರ್ಥಾಯ** ಸ್ತುತಿರೂಪವಾದ ಈ ವಚನವೂ ಕೂಡ ದೇವತೆಗಳಾದ ನಿಮ್ಮ ಸಂತೋಷಕ್ಕಾಗಿ ಇರಲಿ ಎಂದೂ ಆಶಿಸಿದೆ.

**ಮಾಂದಾರ್ಯಸ್ಯ**—ಈ ಪದವನ್ನು ಕಾರೋಃ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯೋಗಿಸಿದೆ. ಕಾರುಃ ಎಂಬ ಪದವು–ಸ್ತೋತೃನಾಮಗಳಲ್ಲಿ (ನಿ. ೩-೧೬) ಪಠಿತವಾಗಿದೆ. ಮಾಂದಾರ್ಯಪದದಿಂದ ಸ್ತುತಿಮಾಡುವನು ತನ್ನ ಸ್ತುತಿಗಳಿಂದ ತನ್ನ ಸ್ತುತ್ಯನಾದ ದೇವತೆಯ ಮಹಿಮೆಯನ್ನು ಪ್ರಕಾಶಗೊಳಿಸುವವನೆಂದೂ, ಮದವನ್ನು ಅಭಿವೃದ್ಧಿಮಾಡುವವನೆಂದೂ ಅರ್ಥವನ್ನು ವಿವರಿಸಿ, **ಮಾನ್ಯಸ್ಯ** ಎಂಬ ಪದದಿಂದ ಸ್ತುತಿಮಾಡುವವನು ತನ್ನ ಸ್ತುತಿಯಿಂದ ಸಂತುಷ್ಟರಾದ ದೇವತೆಗಳ ಅನುಗ್ರಹದಿಂದ ವರವನ್ನು ಹೊಂದಿ ಮರ್ಯಾದೆಗೆ ಅರ್ಹನಾಗಿರುವವನೆಂಬ ಅರ್ಥವನ್ನೂ **ಸ್ತೋತ್ರವಿಶೇಷೈಃ ಮಂದಯಿತುಃ ಸ್ತುತಿಭಿಃ ಮದಸ್ಯ ಪ್ರೇರಯಿತುರ್ವಾ ವರಪ್ರದಾನಾದಿನಾ ಮಾನನೀಯಸ್ಯ** ಎಂಬ ಈ ವಿವರಣೆಯಿಂದ ವಿವರಿಸಿದೆ.

**ವಯಂ ತನ್ವೇ ಇಷಂ ವೃಜನಂ ಜೀರದಾನುಂ ವಿದ್ಯಾಮ—ವಯಂ ಶರೀರಾಯ ತತ್ಪೋಷಾಯ ಅನ್ನಂ ಬಲಂ ಜಯಶೀಲದಾನಂ ಯುಷ್ಮಾಸ್ವಾಗತೇಷು ಯಜ್ಞಸಂಪೂರ್ತ್ಯೇಷ್ಟಪ್ರಾಪ್ತ್ಯಾದಿದ್ವಾರಾ ಲಭೇಮಹಿ ।** ನಾವು ದೇವತೆಗಳ ಆಗಮನದಿಂದ ಯಜ್ಞವು ನಿರ್ವಿಘ್ನವಾಗಿ ನೆರವೇರಿದ ಕಾರಣ ನಮ್ಮ ಇಷ್ಟಗಳು ದೇವತೆಗಳಿಂದ

ಅನುಗ್ರಹೀತಳಾಗುವುದರಿಂದ ನಮ್ಮ ಶರೀರದ ಅಭಿವೃದ್ಧಿಗಾಗಿ ಅನ್ನವನ್ನೂ ಬಲವನ್ನೂ ಹೊಂದಿ ಜಯಶೀಲರಾಗಿ ಪ್ರಭೂತವಾದ ದಾನವನ್ನು ಆಚರಿಸುವ ಸ್ವಭಾವದಿಂದ ಇರುವಂತಾಗಲೆಂದು ದೇವತೆಗಳನ್ನು ಪ್ರಾರ್ಥಿಸಿದೆ.

ಇಷ ಎಂಬ ಪದವು ಅನ್ನನಾಮಗಳಲ್ಲಿ (ನಿ. ೨-೯) ಉಕ್ತವಾಗಿದೆ. ವೃಜನಶಬ್ದವೂ ಬಲನಾಮಗಳಲ್ಲಿ (ನಿ. ೨-೯) ಪಠಿತವಾಗಿದೆ. ಇಲ್ಲಿ ಬಲವೆಂದು ಅರ್ಥವನ್ನೂ ಹೇಳಿದೆ. ನಿರುಕ್ತಕಾರರು ಈ ಪದಕ್ಕೆ ಬೇರೆಯ ಅರ್ಥದಲ್ಲಿಯೂ ಪ್ರಯೋಗವನ್ನು ಉದಾಹರಿಸಿದ್ದಾರೆ.

**ಮಹಾಁ ಅಮತ್ರೋ ವೃಜನೇ ವಿರಪ್ಶ್ಯ೧ ಗ್ರಂ ಶವಃ ಪತ್ಯತೇ ಧೃಷ್ಣ್ವೋಜಃ ।**
**ನಾಹ ವಿವ್ಯಾಚ ಪೃಥಿವೀ ಚನೈನಂ ಯತ್ಸೋಮಾಸೋ ಹರ್ಯಶ್ವಮಮಂದನ್ ॥**

(ಋ. ಸಂ. ೩-೩೬-೪)

ಇಲ್ಲಿ ವೃಜನೇ ಸಂಗ್ರಾಮೇ ಎಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

ಇದು ಹಿಂದೆ ಋ. ಸಂ. ೧-೧೬೬-೧೫ ರಲ್ಲಿ ವ್ಯಾಖ್ಯಾತವಾಗಿದೆ.

ಇಲ್ಲಿಗೆ ನೂರ ಅರವತ್ತೇಳನೆಯ ಸೂಕ್ತ ಮುಗಿದುದು.



# ನೂರ ಅರವತ್ತೆಂಟನೆಯ ಸೂಕ್ತವು

**ಯಜ್ಞಾಯಜ್ಞೇತಿ ದಶರ್ಚಂ ಚತುರ್ಥಂ ಸೂಕ್ತಮಾಗಸ್ತ್ಯಂ ಮಾರುತಂ । ಅಂತ್ಯಾಸ್ತಿಸ್ರಸ್ತ್ರಿಷ್ಟುಭಃ । ಶಿಷ್ಟಾಃ ಸಪ್ತ ತಿಷ್ಟುಬಂತಪರಿಭಾಷಯಾ ಜಗತ್ಯಃ । ಯಜ್ಞಾಯಜ್ಞಾ ದಶ ತ್ರಿತ್ರಿಷ್ಟುಬಂತಮಿತ್ಯನುಕ್ರಾಂತಂ ॥ ವಿಶೇಷವಿನಿಯೋಗೋ ಲೈಂಗಿಕಃ ॥**

ಅನುವಾದವು— **ಯಜ್ಞಾಯಜ್ಞಾ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು, ಮರುತ್ತುಗಳು ದೇವತೆಯು. ಕೊನೆಯ ಮೂರು ಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ— **ಯಜ್ಞಾಯಜ್ಞಾ ದಶ ತ್ರಿತ್ರಿಷ್ಟುಬಂತಂ** ಎಂದು ಹೇಳಿರುವುದು. ವಿಶೇಷವಿನಿಯೋಗವು ಲೈಂಗಿಕವು.

## ಸೂಕ್ತ—೧೬೮

ಮಂಡಲ—೧ ‖ ಅನುವಾಕ—೨೩ ‖ ಸೂಕ್ತ—೧೬೮ ‖
ಅಷ್ಟಕ - ೨ ‖ ಅಧ್ಯಾಯ—೪ ‖ ವರ್ಗ—೬, ೭ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ‖
‖ ಋಷಿಃ—ಅಗಸ್ತ್ಯಃ ‖
‖ ದೇವತಾ—ಮರುತಃ ‖
‖ ಛಂದಃ .. ೧-೭, ಜಗತೀ । ೮-೧೦, ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಯಜ್ಞಾಯಜ್ಞಾ ವಃ ಸಮನಾ ತುತುರ್ವಣಿರ್ಧಿಯಂಧಿಯಂ ವೋ ದೇವಯಾ
ಉ ದಧಿಧ್ವೇ ।
ಆ ವೋಽರ್ವಾಚಃ ಸುವಿತಾಯ ರೋದಸ್ಯೋರ್ಮಹೇ ವವೃತ್ಯಾಮವಸೇ
ಸುವೃಕ್ತಿಭಿಃ ‖ ೧ ‖

‖ ಪದಪಾಠಃ ‖

ಯಜ್ಞಾಽಯಜ್ಞಾ । ವಃ । ಸಮನಾ । ತುತುರ್ವಣಿಃ । ಧಿಯಂಽಧಿಯಂ । ವಃ । ದೇವಽಯಾಃ । ಊಂ
ಇತಿ । ದಧಿಧ್ವೇ ।
ಆ । ವಃ । ಅರ್ವಾಚಃ । ಸುವಿತಾಯ । ರೋದಸ್ಯೋಃ । ಮಹೇ । ವವೃತ್ಯಾಂ । ಅವಸೇ ।
ಸುವೃಕ್ತಿಽಭಿಃ ‖ ೧ ‖

‖ ಸಾಯಣಭಾಷ್ಯಂ ‖

ಹೇ ಮರುತಃ ವಃ ಸಮನಾ ಸಮೀಕೃತಿನ್ಯೂನಾಧಿಕಾಭಾವಲಕ್ಷಣಾ ಯಜ್ಞಾ ಯಜ್ಞಾ ಸರ್ವೇಷ್ವಪಿ ಯಜ್ಞೇಷು ತುರ್ವಣಿಸ್ತೂರ್ಣವನಿಸ್ತ್ವರಮಾಣಾ ಸಂಭಜಮಾನಾ ಭವತಿ । ತುರ್ವಣಿಸ್ತೂರ್ಣವನಿರಿತಿ ಯಾಸ್ಕಃ ‖ ನಿ. ೬-೧೪ । ತತ್ತದ್ಯಾಗಾವಸರ ಆಗತ್ಯ ಹವಿಃ ಸ್ವೀಕೃತ್ಯ ವೈಕಲ್ಯಪರಿಹಾರೇಣ ಸಮಂ ಕುರುಥೇತ್ಯರ್ಥಃ । ಕಿಂ ಚ ವೋ ಯೂಯಂ ಧಿಯಂ ಧಿಯಂ ಯುಷ್ಮತ್ಸಂಬಂಧಿವೃಷ್ಟಿಪ್ರದಾ-

**ನಾದಿರೂಪಂ ಸರ್ವಂ ಕರ್ಮ ದೇವಯಾ ದೇವಾನ್ಪ್ರಾಪಯಿತಾರ ಏವ ಸಂತೋ ದಧಿಧ್ವೇ । ಧಾರಯಥ ಧಾರಯಧ್ವೇ ವಾ । ದೇವಾರ್ಥಹವಿರಾದ್ಯುತ್ಪಾದನಾಯ ವೃಷ್ಟಿಂ ಕುರುಥೇತ್ಯರ್ಥಃ । ಯಸ್ಮಾದೇವಂ ಕುರಥ ತಸ್ಮಾದ್ವೋ ಯುಷ್ಮಾನರ್ವಾಚೋಽಸ್ಮದಭಿಮುಖಾನಾ ವವೃತ್ಯಾಂ । ಆವರ್ತಯಾಮಿ । ಕಿಮರ್ಥಂ । ರೋದಸ್ಯೋರ್ದ್ಯಾವಾಪೃಥಿವ್ಯೋರ್ಮಹೇ ಮಹತೇಽವಸೇ ರಕ್ಷಣಾಯ ಪ್ರೀಣನಾಯ ವಾ । ತದಪಿ ಕಿಮರ್ಥಮಿತಿ । ಸುವಿತಾಯ ಸುಷ್ಠು ವ್ಯಾಪ್ತಾಯ । ಕೈಃ ಸಾಧನೈಃ । ಸುವೃಕ್ತಿಭಿಃ ಶೋಭನಾವರ್ಜನೈಃ ಸ್ತೋತ್ರೈಃ ॥**

॥ ಪ್ರತಿಪದಾರ್ಥ ॥

(**ಹೇ ಮರುತಃ**—ಎಲೈ ಮರುದ್ದೇವತೆಗಳೇ) । **ವಃ**—ನಿಮ್ಮ । **ಸಮನಾ**—(ಹೆಚ್ಚುಕಡಿಮೆಯೆಂಬ ಭಾವನೆಯಿಲ್ಲದ) ಸಮಾನವಾದ ಬುದ್ಧಿಯು । **ಯಜ್ಞಾಯಜ್ಞಾ**—ಪ್ರತಿಯಜ್ಞದಲ್ಲಿಯೂ । **ತುತುರ್ವಣಿಃ**—ತ್ವರೆಯಿಂದ ವ್ಯಾಪಿಸುತ್ತದೆ । (**ಕಿಂಚ**—ಮತ್ತು) । **ವಃ**—ನೀವು । **ಧಿಯಂಧಿಯಂ**—(ನಿಮ್ಮ ಸಂಬಂಧವಾದ ವೃಷ್ಟಿಪ್ರದಾನಾದಿರೂಪವಾದ ಪ್ರತಿಯೊಂದು ಕರ್ಮವನ್ನೂ । **ದೇವಯಾ ಉ**—ದೇವತೆಗಳಿಗೇ ಸೇರಿಸುವವರಾಗಿ । **ದಧಿಧ್ವೇ**—ಧರಿಸುತ್ತೀರಿ (ಆಚರಿಸುತ್ತೀರಿ) । (ಆದುದರಿಂದ) **ವಃ**—ನಿಮ್ಮನ್ನು । **ರೋಧಸ್ಯೋಃ**—ದ್ಯಾವಾಪೃಥಿವಿಗಳ । **ಸುವಿತಾಯ**—ಚೆನ್ನಾಗಿ ವ್ಯಾಪ್ತವಾದ । **ಮಹೇ ಅವಸೇ**—ಹೆಚ್ಚಾದ ರಕ್ಷಣೆಗೋಸ್ಕರ (ತೃಪ್ತಿಗೋಸ್ಕರ) । **ಸುವೃಕ್ತಿಭಿಃ**—ಮಂಗಳಕರವಾದ ಸ್ತುತಿಗಳಿಂದ । **ಅರ್ವಾಚಃ**—(ನಮಗೆ) ಅಭಿಮುಖರನ್ನಾಗಿ । **ಆ ವವೃತ್ಯಾಂ**—ತಿರುಗಿಸಿಕೊಳ್ಳುತ್ತೇನೆ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮ (ನ್ಯೂನಾಧಿಕಾಭಾವರೂಪವಾದ) ಸಮಬುದ್ಧಿಯು ಎಲ್ಲಾ ಯಾಗಗಳಲ್ಲಿ ವ್ಯಾಪ್ತವಾಗಿದೆ. ಮತ್ತು ನೀವು (ವೃಷ್ಟಿಪ್ರದಾನಾದಿ) ಸಮಸ್ತ ಕಾರ್ಯಗಳನ್ನೂ ದೇವತೆಗಳಿಗೆ (ಹವಿರಾದಿಪ್ರಾಪ್ತಿರೂಪ ಉಪಕಾರವಾಗಲೆಂದೇ) ಆಚರಿಸುತ್ತೀರಿ. ಆದುದರಿಂದ, ನಿಮ್ಮನ್ನು ತೃಪ್ತಿಗೋಸ್ಕರ ಮತ್ತು ಭೂಮ್ಯಾಕಾಶಗಳ ರಕ್ಷಣೆಗೋಸ್ಕರ, ಶುಭಕರವಾದ ಸ್ತುತಿಗಳಿಂದ ನಿಮ್ಮನ್ನು ಅಭಿಮುಖೀಕರಿಸಿಕೊಳ್ಳುತ್ತೇನೆ.

## English Translation.

Maruts, at every sacrifice your alacrity is uniform; you, verily, discharge your every function for the benefit of the gods: therefore, do I invite you to come hither, by sacred hymns, for (the sake of) your powerful protection of heaven and earth, and your beneficent praise.

॥ ವಿಶೇಷವಿಷಯಗಳು ॥

**ವಃ ಸಮನಾ ಯಜ್ಞಾಯಜ್ಞಾ ತುತುರ್ವಣಿಃ**—ಮರುದ್ದೇವತೆಗಳನ್ನು ಸಂಬೋಧಿಸಿ, ಅವರು ಸರ್ವಯಜ್ಞಗಳಲ್ಲಿಯೂ ಅಂದರೆ—ಆಯಾಯ ಯಜ್ಞಗಳು ಯಜಮಾನರಿಂದ ಆಚರಿಸಲ್ಪಡುವ ಕಾಲಗಳಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಸನ್ನಿಧಾನವನ್ನು ಅನುಗ್ರಹಿಸಿ, ಯಜ್ಞದಲ್ಲಿ ಸಂಭಾವಿತವಾಗಬಹುದಾದ ನ್ಯೂನಾತಿರೇಕ

ದೋಷಗಳನ್ನು ಪರಿಹರಿಸಿ, ಯಜ್ಞವನ್ನು ವಿಧ್ಯುಕ್ತಪ್ರಕಾರದಿಂದ ಪೂರ್ತಿಯಾಗುವಂತೆ ಮಾಡುವರೆಂದು ಅವರ ಮಹಿಮೆಯನ್ನೂ, ಯಜ್ಞದ ವಿಷಯದಲ್ಲಿ ಮರುದ್ದೇವತೆಗಳಿಗೆ ಇರುವ ತ್ವರಾತಿಶಯವನ್ನೂ ವರ್ಣಿಸಿದೆ. **ಸಮನಾ** ಎಂಬ ಪದದಿಂದ ಮರುದ್ದೇವತೆಗಳಿಗೆ ಇರುವ ಪ್ರತಿಯಜ್ಞವಿಷಯವಾದ ನ್ಯೂನಾಧಿಕಾಭಾವರೂಪವಾದ **ಸಮಾಕೃತಿಃ ಸಮಾನಭಾವವು** ವಿವೃತವಾಗಿದೆ. **ತುತುರ್ವಣಿಃ** ಎಂದು ಇಲ್ಲಿ ಪ್ರಯುಕ್ತವಾಗಿರುವ ಪದಕ್ಕೆ **ತುರ್ವಣಿಃ** ಎಂದು ಪಾಠವನ್ನು ವ್ಯಾಖ್ಯಾನಮಾಡಿದೆ. **ತುರ್ವಣಿಃ** ಎಂಬ ಪದವು ಯಾಸ್ಕರಿಂದ—

**ಸತುರ್ವಣಿರ್ಮಹಾಁ ಅರೇಣು ಪೌಂಸ್ಯೇ ಗಿರೇರ್ಭೃಷ್ಟಿರ್ನ ಭ್ರಾಜತೇ ತುಜಾ ಶವಃ |**
**ಯೇನ ಶುಷ್ಣಂ ಮಾಯಿನಮಾಯಸೋ ಮದೇ ದುಧ್ರ ಆಭೂಷು ರಾಮಯನ್ನಿ ದಾಮನಿ ||**

(ಋ. ಸಂ. ೧-೫೪-೩)

ಉದಾಹೃತವಾದ ಋಕ್ಕಿನಲ್ಲಿ **ತೂರ್ಣವನಿಃ** (ನಿ. ೬-೧೪) **ಸ್ತೋತಾರಂ ತೂರ್ಣಂ ಭಜತೇ** ಸ್ತೋತೃವಾದವನ ಸಮಾಪವನ್ನು ಹೊಂದುವ ತ್ವರೆಯುಳ್ಳವನು ಎಂದು ಅರ್ಥಮಾಡಿ ಪ್ರಯೋಗಿಸಲ್ಪಟ್ಟಿದೆ ಎಂಬ ಅರ್ಥವು ವಿವೃತ ವಾಗಿದೆ.

**ಧಿಯಂ ಧಿಯಂ**—ಎಂಬ ಪದಕ್ಕೆ **ಯುಷ್ಮತ್ಸಂಬಂಧಿವೃಷ್ಟಿಪ್ರದಾನಾದಿಕಂ ಸರ್ವಂ ಕರ್ಮ |** ಮರುದ್ದೇವತೆಗಳು ವೃಷ್ಟಿಯನ್ನು ಅನುಗ್ರಹಿಸುವುದೇ ಮುಂತಾದ ಕರ್ಮಗಳು ಎಂದು ಅರ್ಥವನ್ನು ವಿವರಿಸಿ, ಆ ಕರ್ಮ ಗಳೆಲ್ಲವೂ **ದೇವಾನ್ ಪ್ರಾಪಯಿತಾರ ಏವ** ದೇವತೆಗಳಿಗೆ ತೃಪ್ತಿಯನ್ನು ಉಂಟುಮಾಡುವವುಗಳಾಗಿ ಇರುತ್ತವೆ ಎಂಬ ಅರ್ಥವನ್ನು **ದೇವಯೋಃ** ಎಂಬ ಪದಕ್ಕೆ ವಿವರಿಸಿ, **ದೇವಾರ್ಥಂ ಹವಿರಾದ್ಯುತ್ಪಾದನಾಯ ವೃಷ್ಟಿಂ ಕುರುಥ** ಮರುದ್ದೇವತೆಗಳು ದೇವತೆಗಳಿಗೆ ಅರ್ಪಿಸುವ ಹವಿಸ್ಸೇ ಮೊದಲಾದವುಗಳು ಸಸ್ಯಾದಿರೂಪದಿಂದ ಉತ್ಪನ್ನವಾಗುವುದ ಕ್ಕಾಗಿಯೇ ವೃಷ್ಟಿಯನ್ನು ಉಂಟುಮಾಡುವರು ಎಂಬ ಅರ್ಥವನ್ನು ವರ್ಣಿಸಿದೆ.

**ರೋದಸ್ಯೋಃ ಮಹೇ ಅವಸೇ ಸುವಿತಾಯ—ದ್ಯಾವಾಪೃಥಿವ್ಯೋಃ ಮಹತೇ ರಕ್ಷಣಾಯ ಪ್ರೀಣನಾಯ ವಾ ಸುಷ್ಠು ವ್ಯಾಪ್ತ್ಯಾಯ |** ದ್ಯಾವಾಪೃಥಿವಿಗಳ ಪ್ರಭೂತವಾದ ರಕ್ಷಣೆಗಾಗಿಯೂ ಅಥವಾ ದ್ಯಾವಾ ಪೃಥಿವಿಗಳ ಸಂತೋಷಕ್ಕಾಗಿಯೂ ಕೂಡ ಮತ್ತು ದ್ಯಾವಾಪೃಥಿವಿಗಳ ಸರ್ವದೇಶಕಾಲಗಳಲ್ಲಿಯೂ ಸಮನಾಗಿರುವ ವ್ಯಾಪ್ತಿಗಾಗಿಯೂ ಕೂಡ ಮರುದ್ದೇವತೆಗಳನ್ನು **ಸುವೃಕ್ತಿಭಿಃ** ಉತ್ತಮವಾದ ಸ್ತುತಿಗಳಿಂದ, ಯಜ್ಞಮಾಡುವ ಯಜಮಾನರಾದ ನಮ್ಮ ಆಭಿಮುಖ್ಯತಾಸಂಪಾದನೆಗಾಗಿ ಆಹ್ವಾನಮಾಡುತ್ತೇವೆ ಎಂದು ಮಂತ್ರದ್ರಷ್ಟೃವಾದ ಋಷಿಯ ಪ್ರಾರ್ಥನೆಯು ಇಲ್ಲಿ ವರ್ಣಿತವಾಗಿದೆ. ನಿರುಕ್ತಕಾರರು ಸುವೃಕ್ತಿಭಿಃ ಎಂಬ ಪದಕ್ಕೆ ಇದೇ ಅರ್ಥದಲ್ಲಿ ಇರುವ ಪ್ರಯೋಗ ವನ್ನು ಉದಹರಿಸಿದ್ದಾರೆ.

**ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ |**
**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ||**

(ಋ. ಸಂ. ೬-೬೧-೨)

ಇಲ್ಲಿ **ಸುವೃಕ್ತಿಭಿಃ ಸುಪ್ರವೃತ್ತಾಭಿಃ ಸ್ವರಸೌಷ್ಠವಾದಿಯುಕ್ತಾಭಿಃ** ಉದಾತ್ತವೇ ಮೊದಲಾದ ಸ್ವರಗಳಿಂದಲೂ ಮೃದುವಾದ ಪದಗಳಿಂದಲೂ ಸರಿಯಾದ ಅರ್ಥವನ್ನು ಬೋಧಿಸುವ ಪದಗಳಿಂದಲೂ ಕೂಡಿರುವ ಸ್ತುತಿಗಳೆಂಬ ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯಜ್ಞಾಯಜ್ಞಾ—ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಪರದ ಆಮ್ರೇಡಿತಕ್ಕೆ ಸರ್ವಾನುದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್** ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಸಮನಾ**—ಸಮ್ಯಕ್ ಆನಯಿತ್ರೀ ಸಮನಾ. ಅನ ಪ್ರಾಣನೇ. ಧಾತು. ಪಚಾದಿ ನಿಮಿತ್ತವಾಗಿ ಅಚ್ ಪ್ರತ್ಯಯ. ಅಂತೋದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಟಾಪ್. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ದೇವಯಾಃ**—ಯಾ ಪ್ರಾಪಣೇ. ಧಾತು. ದೇವಾನ್ ಯಾಪಯಂತೀತಿ ದೇವಯಾಃ ಣಿಜಂತದ ಮೇಲೆ ಕ್ವಿಪ್ ಪ್ರತ್ಯಯ ಬಂದಾಗ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಧಿಧ್ವೇ**—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾಗಿ ಲಿಟ್. ಮಧ್ಯಮಪುರುಷ ಬಹು ವಚನಾಂತರೂಪ. ತಿಜಂತ ನಿಘಾತಸ್ವರ ಬರುತ್ತದೆ.

**ಸುವಿತಾಯ**—ಸುಷ್ಟು ಇತಾಯ. ಇಣ್ ಗತೌ ಧಾತು ಕ್ತ ಪ್ರತ್ಯಯ. **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಂ** (ಪಾ. ಸೂ. ೬-೪-೭೭-೧) ಎಂಬುದರಿಂದ ಉವಙಾದೇಶ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಮಹೇ**—ಮಹ ಪೂಜಾಯಾಂ ಧಾತು. ಕ್ವಿಪ್ ಪ್ರತ್ಯಯ. ಚತುರ್ಥಿಯಲ್ಲಿ **ಸಾವೇಕಾಚಸ್ತೃ**— (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವವೃತ್ಯಾಂ**—ವೃತು ವರ್ತನೇ. ಧಾತು. ಲಿಙ್ ಉತ್ತಮಪುರುಷ ಏಕವಚನದಲ್ಲಿ ವ್ಯತ್ಯಯದಿಂದ ಮಿಪ್ ಬಂದಾಗ ಅಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶ್ಲು ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಲಿಙಿಗೆ ಯಾಸುಟಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಸುವೃಕ್ತಿಭಿಃ**—ಶೋಭನಾ ವೃಕ್ತಿಃ ಯೇಷಾಂ ತೇ ತೈಃ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ವವ್ರಾಸೋ ನ ಯೇ ಸ್ವಜಾಃ ಸ್ವತವಸ ಇಷಂ ಸ್ವರಭಿಜಾಯಂತ ಧೂತಯಃ ।
ಸಹಸ್ರಿಯಾಸೋ ಅಪಾಂ ನೋರ್ಮಯ ಆಸಾ ಗಾವೋ ವಂದ್ಯಾಸೋ
ನೋಕ್ಷಣಃ ॥ ೨ ॥

॥ ಪದಪಾಠಃ ॥

ವವ್ರಾಸಃ । ನ । ಯೇ । ಸ್ವಽಜಾಃ । ಸ್ವಽತವಸಃ । ಇಷಂ । ಸ್ವಃ । ಅಭಿಽಜಾಯಂತ । ಧೂತಯಃ ।

ಸಹಸ್ರಿಯಾಸಃ । ಅಪಾಂ । ನ । ಊರ್ಮಯಃ । ಆಸಾ । ಗಾವಃ । ವಂದ್ಯಾಸಃ । ನ । ಉಕ್ಷಣಃ ॥ ೨ ॥

॥ ಸಾಯಣಭಾಷ್ಯಂ ॥

ಯೇ ಮರುತೋ ವವ್ರಾಸೋ ನ । ವವ್ರಿರಿತಿ ರೂಪನಾಮ । ರೂಪವಂತ ಇವ । ತೇ ಯಥಾ ಪ್ರಕೃಷ್ಟಾ ಲಕ್ಷ್ಯಂತೇ ತದ್ವತ್ । ಯದ್ವಾ । ಅರೂಪಾ ಅಪಿ ಸರೂಪಾ ಇವ । ಸ್ವಜಾಃ ಸ್ವಯಮೇವ ಸ್ವಸ್ಮಾದ್ವಾ ಜಾಯಮಾನಾಃ । ಅನನ್ಯಹೇತುಕಾ ಇತ್ಯರ್ಥಃ । ಧೂತಯಃ ಕಂಪನಶೀಲಾಃ ಸಂತಿ ತೇ ಇಷಮನ್ನಂ ಹವಿರ್ಲಕ್ಷಣಮನ್ನಸಾಧನಂ ಸಸ್ಯಾದಿಕಂ ವಾ ಸ್ವಃ ಸ್ವರ್ಗಂ ಚಾಭಿಜಾಯಂತ । ಅಭಿಲಕ್ಷ್ಯ ಪ್ರಾದುರ್ಭವಂತಿ । ತೇ ದೃಷ್ಟಾಂತಮುಖೇನ ಸ್ತೂಯಂತೇ । ಅಪಾಂ ನೋರ್ಮಯ ಉದಕಾನಾಮೂರ್ಮಯ ಇವ ಸಹಸ್ರಿಯಾಸಃ ಸಹಸ್ರಸಂಮಿತಾಃ । ತಥಾ ವಂದ್ಯಾಸೋ ಬಹುಕ್ಷೀರಾದಿಪ್ರದತ್ವೇನ ಸ್ತುತ್ಯಾ ಗಾವೋ ನ ಗಾವ ಇವಾಸಾ ಸಮೀಪ ಏವೋಕ್ಷಣೋ ವೃಷ್ಟ್ಯುದಕಸ್ಯ ಸೇಕ್ತಾರಃ । ತಾದೃಶಾ ಮರುತಃ ಪ್ರಾದುರ್ಭವಂತೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯೇ** — ಯಾವ ಮರುದ್ದೇವತೆಗಳು । **ವವ್ರಾಸಃ ನ**—(ರೂಪವಿಲ್ಲದಿದ್ದರೂ) ರೂಪವಿದ್ದವರಂತೆ ಇರುವವರೂ । **ಸ್ವಜಾಃ**—ಸ್ವಯಂಜಾತರೂ (ಅನ್ಯಸಂಭೂತರಲ್ಲದವರೂ) । **ಸ್ವತವಸಃ**—ಸಹಜವಾದ ಬಲವಿಶಿಷ್ಟರೂ । **ಧೂತಯಃ**—ಕಂಪನಶೀಲರೂ (ಆಗಿದ್ದಾರೋ) । **ತೇ**—ಅಂತಹ, । **ಅಪಾಂ**— ಉದಕಗಳ । **ಊರ್ಮಯಃ ನ**— ಅಲೆಗಳಂತೆ । **ಸಹಸ್ರಿಯಾಸಃ**— ಅಸಂಖ್ಯಾತರೂ । **(ತಥಾ**—ಹಾಗೆಯೇ) । **ವಂದ್ಯಾಸಃ**—(ಕ್ಷೀರಾದಿಪ್ರದಗಳೆಂದು) ಸ್ತುತ್ಯಗಳಾದ । **ಗಾವಃ ನ**—ಗೋವುಗಳಂತೆ । **ಆಸಾ**—ಸಮೀಪದಲ್ಲಿಯೇ ಇದ್ದು । **ಉಕ್ಷಣಃ**—ಉದಕಸೇಚಕರಾಗಿ । **(ವಂದ್ಯಾಸಃ**—ಸ್ತುತ್ಯರೂ) ಆದ । **ತೇ**—ಆ ಮರುದ್ದೇವತೆಗಳು । **ಇಷಂ**—(ನಮಗೆ ಪ್ರದೇಯವಾದ) ಅನ್ನವನ್ನೂ । **ಸ್ವಃ**—ಸ್ವರ್ಗವನ್ನೂ (ಕೊಡಬೇಕೆಂದು ಉದ್ದೇಶಿಸಿ) । **ಅಭಿ ಜಾಯಂತ**—ಆವಿರ್ಭವಿಸುತ್ತಾರೆ.

॥ ಭಾವಾರ್ಥ ॥

(ಅಮೂರ್ತರಾದರೂ) ಮೂರ್ತಿವಿಶಿಷ್ಟರಂತೆ ಇರುವವರೂ, ಸ್ವಯಂಜಾತರೂ, ಸ್ವಭಾವತಃ ಬಲಿಷ್ಠರೂ, ಕಂಪನಶೀಲರೂ, ನೀರಿನ ಅಲೆಗಳಂತೆ ಅಸಂಖ್ಯಾತರೂ, ಕ್ಷೀರಾದಿಪ್ರದಗಳಾದ ಗೋವುಗಳಂತೆ ಉದಕಸೇಚಕರಾಗಿದ್ದು ಸ್ತುತ್ಯರೂ ಆದ ಮರುದ್ದೇವತೆಗಳು ನಮಗೆ ಇಷ್ಟವಾದ ಅನ್ನ ಮತ್ತು ಸ್ವರ್ಗಗಳನ್ನು ಅನುಗ್ರಹಿಸುವುದಕ್ಕೋಸ್ಕರ (ಬರುತ್ತಾರೆ) ಆರ್ಭವಿಸುತ್ತಾರೆ.

## English Translation.

They who are as if embodied, self-born, self-invigorated, and (ever) tremulous (in movement), are generated (to confer) abundant food and heaven : they are numerous as the undulations of the waters ; they are to be praised when present, shedding water, like cows (yielding milk).

॥ ವಿಶೇಷವಿಷಯಗಳು ॥

**ಮರುತಃ ವವ್ರಾಸೋ ನ—ವವ್ರಿರಿತಿ ರೂಪನಾಮ ರೂಪವಂತ ಇವ ತೇ ಯಥಾ ಪ್ರಕೃಷ್ಟಾ ಲಕ್ಷ್ಯಂತೇ ತದ್ವತ್ । ಯದ್ವಾ ಅರೂಪಾ ಅಪಿ ಸರೂಪಾ ಇವ ।** ಇಲ್ಲಿ ನ ಎಂಬ ನಿಪಾತವು ಉಪಮಾರ್ಥದಲ್ಲಿ ಪ್ರಯುಕ್ತವಾಗಿದೆ. ವವ್ರಿ ಶಬ್ದವು ರೂಪನಾಮಗಳಲ್ಲಿ (ನಿ. ೩-೧೩)ಪಠಿತವಾಗಿದೆ ಮತ್ತು

**ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ ಮಿಮಾತಿ ಮಾಯುಂ ಧ್ವಂಸನಾವಧಿ ಶ್ರಿತಾ ।**
**ಸಾ ಚಿತ್ತಿಭಿರ್ನಿ ಹಿ ಚಕಾರ ಮರ್ತ್ಯಂ ವಿದ್ಯುದ್ಭವಂತೀ ಪ್ರತಿ ವವ್ರಿಮೌಹತ ॥**

(ಋ. ಸಂ. ೧-೧೬೪-೨೯)

ಈ ಋಕ್ಕಿನಲ್ಲಿರುವ ವವ್ರಿಪದಕ್ಕೆ **ವವ್ರಿರಿತಿ ರೂಪನಾಮ ವೃಣೋತೀತಿ ಸತಃ** ವೃಞ್ ಧಾತುವಿನಿಂದ ನಿಷ್ಪನ್ನವಾದ ವವ್ರಿ ಪದವು ರೂಪ ಎಂಬ ಅರ್ಥವನ್ನು ಬೋಧಿಸುವುದೆಂದು ವ್ಯಾಖ್ಯಾನಮಾಡಿದೆ. ಸಾಯಣರು- ಮರುದ್ದೇವತೆಗಳು ರೂಪವಂತರಾಗಿರುವರು, ಎಂಬ ಶ್ರುತಿಯ ಅರ್ಥವನ್ನು ಅನುಸರಿಸಿ **ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।** ಎಂಬ ಋಕ್ಕಿನಲ್ಲಿ **ದರ್ಶತ ದರ್ಶನೀಯ ವಾಯೋ** ಎಂಬ ಅರ್ಥಕ್ಕನುಸಾರವಾಗಿ **ರೂಪವಂತ ಇವ** ಆಕೃತಿಯನ್ನು ಹೊಂದಿರುವವರಹಾಗೆ ಎಂದೂ, **ತೇ ಯಥಾ ಪ್ರಕೃಷ್ಟಾ ಲಕ್ಷ್ಯಂತೇ** ದೇಹವುಳ್ಳವರು ಸುಂದರರಾಗಿ ಕಾಣಿಸಿಕೊಳ್ಳುವಂತೆ ಎಂದೂ ಅರ್ಥವನ್ನು ವಿವರಿಸಿ, ಶರೀರಿಗಳಾಗಿ ಮರುದ್ದೇವತೆಗಳು ರೂಪವಂತರಾಗಿರುವರು ಎಂದು ರೂಪವಂತರನ್ನು ಹೋಲಿಸಿ ಅರ್ಥವನ್ನು ವಿವರಿಸಿದ್ದಾರೆ. ವಾಯುದೇವತೆಗೆ ಆಕಾರವೇ ಇಲ್ಲದಿದ್ದರೂ ಕಾರ್ಯಕರ್ತೃತ್ವವು ಮಾತ್ರ ಗೋಚರವಾಗುತ್ತದೆ ಎಂಬ ಇನ್ನೊಂದು ಶ್ರುತಿವಚನದ ಆಧಾರದಿಂದ **ಅರೂಪಾ ಅಪಿ ಸರೂಪಾ ಇವ** ರೂಪವಿಲ್ಲದವರಾದರೂ, ಮರುದ್ದೇವತೆಗಳು ರೂಪವಂತರಹಾಗೆಯೇ ಕಾರ್ಯಗಳನ್ನು ಆಚರಿಸುವರು ಎಂದು ಎರಡನೆಯ ಅರ್ಥವನ್ನು ವಿವರಿಸಿದ್ದಾರೆ.

**ಸ್ವಜಾಃ—ಸ್ವಯಮೇವ ಸ್ವಸ್ಮಾತ್ ಜಾಯಮಾನಾಃ । ಅನನ್ಯಹೇತುಕಾಃ ।** ಮರುದ್ದೇವತೆಗಳು ಲೋಕದಲ್ಲಿ ಕರ್ಮಾಧೀನವಾದ ಫಲವನ್ನು ಅನುಭವಿಸುವುದಕ್ಕಾಗಿ ತಮ್ಮ ತಮ್ಮ ಪುಣ್ಯಪಾಪರೂಪವಾದ ಕರ್ಮಾನುಗುಣವಾದ ಕಾರಣಕ್ಕನುಗುಣವಾಗಿ ಜನ್ಮಗಳನ್ನು ಹೊಂದಿರುವ ಪ್ರಾಣಿಗಳಂತೆ ಉತ್ಪನ್ನರಾಗುವುದಿಲ್ಲ. ಇವರು ತಮ್ಮ ಮಹಿಮೆಯನ್ನು ಪ್ರಪಂಚಕ್ಕೆ ಅಭಿವ್ಯಕ್ತಿಗೊಳಿಸುವುದಕ್ಕಾಗಿಯೂ, ಪ್ರಪಂಚದ ಸುಖದ ಅಭಿವೃದ್ಧಿಯನ್ನು ಉಂಟುಮಾಡುವುದಕ್ಕಾಗಿಯೂ ತಾವಾಗಿ ಉತ್ಪತ್ತಿಯನ್ನು ಪಡೆದಿರುವರೆಂದು ಅರ್ಥವನ್ನು ವಿವರಿಸಿದೆ.

**ಧೂತಯಃ ಇಷಂ ಸ್ವಃ ಅಭಿಜಾಯಂತ—ಕಂಪನಶೀಲಾಃ ಸಂತಿ । ಅನ್ನಂ ಹವಿರ್ಲಕ್ಷಣಮನ್ನ-ಸಾಧನಂ ಸಸ್ಯಾದಿಕಂ ವಾ ಸ್ವರ್ಗಂ ಚ ಅಭಿಲಕ್ಷ್ಯ ಪ್ರಾದುರ್ಭವಂತಿ ।** ಮರುದ್ದೇವತೆಗಳು ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವರಾಗಿ ಇತರ ಪದಾರ್ಥಗಳನ್ನೂ (ವೃಕ್ಷಾದಿಗಳನ್ನೂ) ಅಲುಗಾಡುವಂತೆ ಮಾಡುತ್ತಾರೆ. ಮತ್ತು ಹವಿಸ್ಸಿನರೂಪವಾದ ಅನ್ನವೂ, ಈ ಅನ್ನಕ್ಕೆ ಸಾಧನವಾದ ಸಸ್ಯಾದಿಗಳ ಉತ್ಪತ್ತಿಯನ್ನು ನಿಮಿತ್ತಮಾಡಿಕೊಂಡು ಇವರು ತಮ್ಮ ಕಾರ್ಯದಲ್ಲಿ ಉದ್ಯುಕ್ತರಾಗುತ್ತಾರೆ ಮತ್ತು ದೇವತೆಗಳ ಉದ್ದೇಶದಿಂದ ಹವಿಸ್ಸನ್ನು ಅರ್ಪಿಸುವ ಯಜಮಾನರೇ ಮೊದಲಾದವರಿಗೆ ಸ್ವರ್ಗವೇ ಮೊದಲಾದ ಉತ್ತಮವಾದ ಗತಿಯನ್ನು ಉಂಟುಮಾಡುವುದಕ್ಕಾಗಿಯೂ ಇವರು ಪ್ರವೃತ್ತರಾಗಿರುತ್ತಾರೆ ಎಂದು ವರ್ಣಿಸಿ **ಅಪಾಂ ಊರ್ಮಯೋ ನ** ಸಮುದ್ರದಲ್ಲಿ ನೀರಿನ ಅಲೆಗಳು ಒಂದರ ಹಿಂದೆ ಮತ್ತೊಂದು ಏಳುತ್ತಾ ಅಸಂಖ್ಯಾತವಾಗಿರುವಂತೆ ಮರುದ್ದೇವತೆಗಳ ಸಂಖ್ಯೆಯೂ ಅನಂತವಾಗಿರುವುದು ಅಥವಾ ಇವರು ಅಸಂಖ್ಯಾತವಾದ ಉಪಕಾರಗಳನ್ನು ಮಾಡುವವರು ಎಂದು ಹೇಳಿದೆ.

**ಸಹಸ್ರಿಯಾಸಃ ವಂದ್ಯಾಸಃ ಗಾವೋ ನ—ಸಹಸ್ರಸಮ್ಮಿತಾಃ ಬಹುಕ್ಷೀರಾದಿ ಪ್ರದತ್ವೇನ ಸ್ತುತ್ಯಾಃ ಗಾವ ಇವ ।** ಬಹಳ ಸಂಖ್ಯೆಯಿಂದ ಇರುವ ಎಣಿಕೆಗೆ ಸಿಕ್ಕದಿರುವ ಮತ್ತು ಗೋವುಗಳು ಬಹಳ ಹಾಲು ಮೊದಲಾದವುಗಳನ್ನು ಕೊಡುವುದರಿಂದ ಇತರರಿಗೆ ಉಪಕಾರವನ್ನು ಮಾಡುತ್ತಾ ಶ್ಲಾಘನೆಗೆ ವಿಷಯವಾಗಿ ಸ್ತೋತ್ರಾರ್ಹವಾಗಿರುವ ಹಾಗೆ ಮರುತ್ತುಗಳ ಕರ್ಮವು ಪರೋಪಕಾರ ಪ್ರಯೋಜಕವುಳ್ಳದ್ದಾಗಿರುವ ಕಾರಣ ಮರುದ್ದೇವತೆಗಳು ಸ್ತುತ್ಯರಾಗಿರುವರೆಂದು ವರ್ಣಿಸಿದೆ. ಮತ್ತು

**ಆಸಾ ಉಕ್ಷಣಃ—ಸಮೀಪ ಏವ ವೃಷ್ಟ್ಯುದಕಸ್ಯ ಸೇಕ್ತಾರಃ । ಆಸಾತ್** ಎಂಬ ಪದವು ಅಂತಿಕ ನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಮರುದ್ದೇವತೆಗಳು ವೃಷ್ಟ್ಯುದಕಗಳನ್ನು ಪ್ರತ್ಯಕ್ಷವಾಗಿ ಲೋಕಕ್ಕೆ ಅನುಗ್ರಹಿಸುವುದೂ ಗೋವುಗಳು ಕ್ಷೀರಾದಿಗಳನ್ನು ಪ್ರತ್ಯಕ್ಷವಾಗಿ ಕೊಡುವುದೂ ಉಪಮಾನೋಪಮೇಯಭಾವದಿಂದ ಇಲ್ಲಿ ಉಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಪ್ರಾಸಃ**—ವಪ್ರಿಃ ಯೇಷಾಮಸ್ತಿ ವಪ್ರಾಸಃ **ಅರ್ಶ ಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಇಕಾರಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಸ್ವಜಾಃ**—ಸ್ವಯಮೇವ ಜಾಯಂತೇ ಇತಿ ಸ್ವಜಾಃ **ಅನ್ಯೇಷ್ವಪಿ ದೃಶ್ಯತೇ** (ಪಾ. ಸೂ. ೩-೨-೧೦೧) ಎಂಬುದರಿಂದ, ಜನೀ ಪ್ರಾದುರ್ಭಾವೇ. ಈ ಧಾತುವಿಗೆ ಡ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ವತವಸಃ**—ಸ್ವಂ ತವಃ ಯೇಷಾಂ ತೇ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಭಿಜಾಯಂತೆ**—ಜನೀ ಪ್ರಾದುರ್ಭಾವೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಶ್ಯನ್ ವಿಕರಣ **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಜಾದೇಶ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ತಿಙಿ ಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ (ಅಭಿ) ಸರ್ವಾನುದಾತ್ತಸ್ವರ ಬರುತ್ತದೆ.

**ಸಹಸ್ರಿಯಾಸಃ**—ಸಹಸ್ರೇಣ ತುಲ್ಯಾಃ ಸಹಸ್ರಿಯಾಸಃ. **ಸಹಸ್ರೇಣ ಸಂಮಿತೌ ಘಃ** (ಪಾ. ಸೂ. ೪-೪-೧೩೫) ಎಂಬುದರಿಂದ ಘ ಪ್ರತ್ಯಯ. **ಆಯನೇಯೀನೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿ ಚ** ಸೂತ್ರದಿಂದ ಪ್ರತ್ಯಯ ಪೂರ್ವದ ಅಕಾರಕ್ಕೆ ಲೋಪ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅಪಾಂ**—ಷಷ್ಠೀ ಬಹುವಚನಾಂತರೂಪ. **ಊಡಿದಂಪದಾ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಊರ್ಮಯಃ**—ಋ ಗತೌ. ಧಾತು. **ಅರ್ತೇರೂಚ್ಚ** (ಉ. ಸೂ. ೪-೪೪) ಎಂಬುದರಿಂದ ಮಿ ಪ್ರತ್ಯಯ. ಧಾತುವಿಗೆ ಊಕಾರಾದೇಶ. ರಪರವಾಗಿ ಬರುತ್ತದೆ. ಪ್ರತ್ಯಯಸ್ವರ ಬರುತ್ತದೆ. ಜಸ್ ಪರವಾದಾಗ **ಜಸಿ ಚ** ಎಂಬುದರಿಂದ ಗುಣ. ಅಯಾದೇಶ.

**ವಂದ್ಯಾಸಃ**—ವದಿ ಅಭಿವಾದನಸ್ತುತ್ಯೋಃ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಧಾತು ಇದಿತ್ತಾದುದರಿಂದ ಣ್ಯತ್ ಪ್ರತ್ಯಯ. **ಈಡವಂದವೃಶಂಸದುಹಾಂಣ್ಯತಃ** (ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ ಅದಕ್ಕೆ ಅಸುಕಾಗಮ.

**ಉಕ್ಷಣಃ**—**ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಜಸ್ ಪರವಾದಾಗ **ವಾ ಷಪೂರ್ವಸ್ಯ ನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಉಪಧಾದೀರ್ಘ ಬರುವುದಿಲ್ಲ. ॥ ೨ ॥



॥ ಸಂಹಿತಾಪಾಠಃ ॥

**ಸೋಮಾ॑ಸೋ॒ ನ ಯೇ ಸು॒ತಾಸ್ತೃ॒ಪ್ತಾಂಶ॑ವೋ ಹೃ॒ತ್ಸು ಪೀ॒ತಾಸೋ॑ ದು॒ವಸೋ॒**
**ನಾಸ॑ತೇ ।**
**ಐಷಾ॒ಮಂಸೇ॑ಷು ರಂ॒ಭಿಣೀ॑ವ ರಾರ॒ಭೇ ಹಸ್ತೇ॑ಷು ಖಾ॒ದಿಶ್ಚ॑ ಕೃ॒ತಿಶ್ಚ॒ ಸಂ ದ॑ಧೇ ॥ ೩ ॥**

॥ ಪದಪಾಠಃ ॥

ಸೋಮಾಸಃ । ನ । ಯೇ । ಸುತಾಃ । ತೃಪ್ತಽಅಂಶವಃ । ಹೃತ್ಽಸು । ಪೀತಾಸಃ । ದುವಸಃ । ನ । ಆಸತೇ ।

ಆ । ಏಷಾಂ । ಅಂಸೇಷು । ರಂಭಿಣೀಽಇವ । ರರಭೇ । ಹಸ್ತೇಷು । ಖಾದಿಃ । ಚ । ಕೃತಿಃ । ಚ । ಸಂ । ದಧೇ ॥ ೩ ॥

॥ ಸಾಯಣಭಾಷ್ಯಂ ॥

ಯೇ ಮರುತಃ ಸುತಾ ಅಭಿಷುತಾಸ್ತೃಪ್ತಾಂಶವಸ್ತರ್ಪಿತಾವಯವಾಃ ಸೋಮಾಸೋ ನ ಸೋಮಾ ಇವ ಯಥಾ ವಲ್ಲೀರೂಪಾಃ ಸೋಮಾ ಅಭಿಷವಾತ್ಪೂರ್ವಮಾಪ್ಯಾಯನೇನ ತೃಪ್ತಾವಯವಾಃ ಸಂತಃ ಪಶ್ಚಾತ್ಸುತಾ ಅಭಿಷುತಾ ರಸಭೂತಾಃ ಪೀತಾಸಃ ಪೀತಾಃ ಸಂತೋ ಹೃತ್ಸು ಪಾತೄಣಾಂ ಹೃದಯೇಷು ದುವಸೋ ನಾಸತೇ ಪರಿಚರಂತ ಇವಾಸತೇ ತದ್ವತ್ ಯೇ ಮರುತೋ ಯಜ್ಞ ಆಹೂತಾಸ್ತೃಪ್ತಾವಯವಾ ಭವಂತಿ ಧ್ಯಾಯಮಾನಾಃ ಸಂತೋ ಹೃತ್ಸು ಹೃದಯೇಷು ದುವಸೋ ನ ಪರಿಚರಂತ ಇವಾಸತೇ। ಯದ್ವಾ । ಪ್ರಾಣಾದಿರೂಪೇಣ ಶರೀರೇ ಸ್ಥಿತಾ ದುವಸಃ ಪರಿಚರಂತ ಇವ ಗಮನಾದಿಚೇಷ್ಟಾಃ ಕುರ್ವಂತ ಆಸತೇ । ಏಷಾಮಂಸೇಷು ರಂಭಿಣೀವ ಯುವತಮಾಂಸಾಲಂಬಿನೀ ಯೋಷಿದಿವಾ ರಾರಭೇ । ಆರೇಭೇ । ಆಶ್ಲಿಷ್ಯತಿ । ಅವಲಂಬನೇ ಸಾಮರ್ಥ್ಯಾಚ್ಛಕ್ತ್ಯಾಖ್ಯಾಯುಧವಿಶೇಷೋ ಭುಜಲಕ್ಷ್ಮೀರ್ವಾ । ಕಿಂಚ ಹಸ್ತೇಷು ಖಾದಿರ್ಹಸ್ತತ್ರಾಣಕಶ್ಚ ಕೃತಿಃ ಕರ್ತನೀ ಚ ಖಡ್ಗಲತಾಪ್ಯುಭೌ ಸಂ ದಧೇ । ಸಂಧೀಯತೇ । ಸಮ್ಯಗ್ಧೃತಾ ಭವತಿ । ಪರಸ್ಪರಸಮುಚ್ಚಯಾರ್ಥಾಶ್ಚಕಾರಾಃ । ಯೇ ಮರುತ ಉಕ್ತರೂಪಸ್ತ ಆವಿರ್ಭವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯೇ**—ಯಾವ ಮರುದ್ದೇವತೆಗಳು । [**ತೃಪ್ತಾಂಶವಃ**—ರಸದಿಂದ ಪೂರ್ಣವಾದ (ತೃಪ್ತವಾದ) ಅವಯವಗಳುಳ್ಳ) । **ಸೋಮಾಸಃ**—ಸೋಮಲತೆಗಳು । **ಸುತಾಃ**—ಅಭಿಷುತವಾಗಿ (ರಸರೂಪದಿಂದ) । **ಪೀತಾಸಃ**—ಪಾನಮಾಡಲ್ಪವುಗಳಾಗಿ । **ಹೃತ್ಸು**—(ಪಾನಮಾಡಿದವರ) ಹೃದಯಗಳಲ್ಲಿ । **ದುವಸಃ ನ**—ಪರಿಚರಿಸುತ್ತಿರುವವುಗಳಂತೆ (ತೃಪ್ತಿಯನ್ನುಂಟುಮಾಡುತ್ತಾರೆ) । **ಆಸತೇ ನ**—ಇರುವ ಹಾಗೆ] (ಯಜ್ಞಗಳಲ್ಲಿ ಆಹೂತರ) । **ತೃಪ್ತಾಂಶವಃ**—ತೃಪ್ತವಾದ (ಪೂರ್ಣವಾದ) ಅವಯವಗಳುಳ್ಳವರಾಗಿಯೂ । **ಹೃತ್ಸು**—(ಧ್ಯಾನ ಮಾಡುವವರ) ಹೃದಯಗಳಲ್ಲಿ । **ದುವಸಃ ನ**—ಪರಿಚರಿಸುತ್ತಿರುವವರಂತೆಯೂ । **ಆಸತೇ**—ಇರುತ್ತಾರೋ । ಅಥವಾ । [**ತೃಪ್ತಾಂಶವಃ**—(ಪ್ರಾಣಾದಿ ರೂಪದಿಂದ ಶರೀರಸ್ಥಿತರಾಗಿ) । **ದುವಸಃ ನ**—ಪರಿಚರಿಸುತ್ತಿರುವವರಂತೆ (ಗಮನಾದಿಚೇಷ್ಟಾಕಾರಣರಾಗಿ) । **ಆಸತೇ**—ಇರುತ್ತಾರೋ] ಅಂತಹ । **ಏಷಾಂ**—ಈ ಮರುದ್ದೇವತೆಗಳ । **ಅಂಸೇಷು ಆ**–ಭುಜಗಳಲ್ಲಿ । **ರಂಭಿಣೀ ಇವ**–(ಯುವಕನ ಭುಜವನ್ನು ಆಶ್ರಯಿಸಿರುವ) ತರುಣಿಯಂತೆ । **ರಾರಭೇ**–(ಶಕ್ತ್ಯಾಯುಧವು) ಧರಿಸಲ್ಪಟ್ಟಿದೆ । (**ಕಿಂಚ**—ಮತ್ತು) । **ಹಸ್ತೇಷು**—ಕೈಗಳಲ್ಲಿ । **ಖಾದಿಃ ಚ**—ಗುರಾಣಿಯೂ । **ಕೃತಿಃ ಚ**—ಖಡ್ಗವೂ । **ಸಂ ದಧೇ**-ಧೃತವಾಗಿದೆ (ಇಂತಹ ಮರುದ್ದೇವತೆಗಳು ಆವಿರ್ಭವಿಸುತ್ತಾರೆ).

॥ ಭಾವಾರ್ಥ ॥

(ಅಭಿಷುತವಾಗುವುದಕ್ಕೆ ಮೊದಲು) ತೃಪ್ತಾವಯವಗಳಾಗಿದ್ದು (ರಸವಿಶಿಷ್ಟವಾಗಿದ್ದು), ಅಭಿಷುತವಾದ ಮೇಲೆ ರಸರೂಪದಿಂದ ಇರುವ ಸೋಮರಸವನ್ನು ಪಾನಮಾಡಿದವರ ಮನಸ್ಸಿಗೆ ಹರ್ಷವನ್ನುಂಟುಮಾಡುವ ಸೋಮಲತೆಗಳಂತೆ ಯಜ್ಞಗಳಲ್ಲಿ ಆಹೂತರಾಗಿ, ಪೂರ್ಣಾವಯವರಾದ ಈ ಮರುದ್ದೇವತೆಗಳೂ (ಧ್ಯಾನಮಾಡುವವರ) ಮನಸ್ಸಿಗೂ ಹರ್ಷವನ್ನುಂಟುಮಾಡುತ್ತಾರೆ (ಶರೀರಸ್ಥಿತರಾಗಿ, ಗಮನಾದಿ ವ್ಯಾಪಾರಕಾರಣರಾಗಿ, ಸಂತೋಷವನ್ನುಂಟುಮಾಡುತ್ತಾರೆ); ಯುವಕನ ಭುಜವನ್ನು ತರುಣಿಯು ಆಶ್ರಯಿಸುವಂತೆ ಇವರ ಭುಜವನ್ನು ಶಕ್ತ್ಯಾಯುಧವು ಆಶ್ರಯಿಸಿದೆ. ಅಂದರೆ ಇವರು ಶಕ್ತ್ಯಾಯುಧಧಾರಿಗಳು ಮತ್ತು ಇವರು ಖಡ್ಗ ಮತ್ತು ಗುರಾಣಿಗಳನ್ನೂ ಧರಿಸಿದಾರೆ (ಇಂತಹ ಮರುದ್ದೇವತೆಗಳು ನಮಗೋಸ್ಕರ ಆವಿರ್ಭವಿಸುತ್ತಾರೆ)

## English Translation.

They, who are like the Soma plants, with well-nourished branches, and then poured out (in libations), are imbibed; they abide, like devoted adherents, in the hearts (of men); upon their shoulders hangs (a lance), like a youthful female, and in their hands a guard and sword are wielded.

॥ ವಿಶೇಷವಿಷಯಗಳು ॥

**ಸುತಾಃ ತೃಪ್ತಾಂಶವಃ ಸೋಮಾಸೋ ನ** ಎಂಬ ವಾಕ್ಯವೂ, **ಹೃತ್ಸು ಪೀತಾಸಃ ದುವಸೋ ನ** ಎಂಬ ವಾಕ್ಯವೂ ಉಪಮಾನವಾಕ್ಯಗಳಾಗಿರುತ್ತವೆ. ಸೋಮಲತೆಗಳು **ಸುತಾಃ ಅಭಿಷುತಾಃ** ಹಿಂಡಿರಸವನ್ನು ತೆಗೆಯಲ್ಪಟ್ಟವುಗಳೂ, **ತೃಪ್ತಾಂಶವಃ** ಹಿಂಡಿದ ಸೋಮರಸವನ್ನು ಪಾನಮಾಡಿದುದರಿಂದ **ತರ್ಪಿತಾವಯವಾಃ** ಸೋಮರಸವನ್ನು ಪಾನಮಾಡುವವರಿಗೆ ಆಪ್ಯಾಯನಮಾಡುವುದಕ್ಕಾಗಿ, ಮೊದಲು ಸೋಮಲತೆಗಳು ಆಪ್ಯಾಯಿತಗಳಾಗಿ ಇರುತ್ತವೆ ಎಂದು ಅರ್ಥ. **ಯಥಾ ವಲ್ಲೀರೂಪಾಃ ಸೋಮಾಃ ಅಭಿಷವಾತ್ಪೂರ್ವಂ ಆಪ್ಯಾಯನೇನ ತೃಪ್ತಾವಯವಾಃ ಪಶ್ಚಾತ್ ಸುತಾಃ ಅಭಿಷುತಾಃ ರಸಭೂತಾಃ** ಸೋಮಲತೆಯನ್ನು ತಂದು ಅದನ್ನು ಆಪ್ಯಾಯನವಾಗಿರುವಂತೆ (ಒಣಗದಂತೆ) ಮಾಡಿ, ಅನಂತರ ಅದನ್ನು ಹಿಂಡಿ ರಸವನ್ನು ಹಿಂಡುವರು. ಮರುದ್ದೇವತೆಗಳೂ ಕೂಡ ಯಾಗದಲ್ಲಿ ಸೋಮಪಾನಕ್ಕಾಗಿ ಸೋಮದಂತೆ **ಸುತಾಃ** ಆಹೂತಾಃ ಆಹ್ವಾನಿಸಲ್ಪಟ್ಟವರಾಗಿಯೂ, **ತೃಪ್ತಾಂಶವಃ ತರ್ಪಿತಾಸಂತಃ ವಯೋನಾಃ** ಸಂತೋಷಪಡಿಸಲ್ಪಟ್ಟ ಅವಯವಗಳುಳ್ಳವರಾಗಿಯೂ ಇರುವರು. ಇದರಿಂದ ಸುತಾಃ ತೃಪ್ತಾಂಶವಃ ಎಂಬ ಎರಡು ಧರ್ಮಗಳೂ (ಇವರಿಬ್ಬರಲ್ಲಿಯೂ ಉಪಮಾನೋಪಮೇಯಗಳೆರಡರಲ್ಲಿಯೂ ಇರುತ್ತವೆ ಎಂದು ವರ್ಣಿಸಿದೆ.

**ಹೃತ್ಸು ಪೀತಾಸಃ ದುವಸೋ ನ ಆಸತೇ—ಪೀತಾಸ್ಸಂತಃ ಪಾತ್ೃಣಾಂ ಹೃದಯೇಷು ಪರಿಚರಂತ ಇವಾಸತೇ** ಸೋಮರಸವು ಪಾನಮಾಡಲ್ಪಟ್ಟ ಮೇಲೆ ಪಾನಮಾಡಿದವರ ಹೃದಯದಲ್ಲಿ ಕಾರ್ಯಗಳನ್ನು ಆಚರಿಸುವಂತೆ ಇರುತ್ತದೆ. ಇದರ ಹಾಗೆಯೇ ಮರುದ್ದೇವತೆಗಳೂ ಕೂಡ ತಮ್ಮನ್ನು ಧ್ಯಾನಮಾಡಿದವರ ಹೃದಯದಲ್ಲಿ ಕ್ರಿಯೆಗಳನ್ನು ಆಚರಿಸುವಂತೆ ಕಾಣಿಸಿಕೊಳ್ಳುತ್ತಾರೆ ಎಂದು ಹೋಲಿಸಿದೆ. ಈ ಅರ್ಥವನ್ನು **ಯಜ್ಞೇ ಆಹೂತಾಃ ತೃಪ್ತಾವಯವಾಃ ಭವಂತಿ ಮರುತಃ ಧ್ಯಾಯಮಾನಾಃ ಸಂತಃ ಹೃತ್ಸು ಹೃದಯೇಷು ಪರಿಚರಂತ ಇವಾಸತೇ** ಎಂಬ ವಾಕ್ಯದಿಂದ ವಿವರಿಸಿದೆ. ಇದು ಒಂದು ವಿಧವಾದ ಅರ್ಥ.

**ಯದ್ವಾ ಪ್ರಾಣಾದಿರೂಪೇಣ ಶರೀರೇ ಸ್ಥಿತಾಃ ಗಮನಾದಿಚೇಷ್ಟಾಃ ಕುರ್ವಂತ ಆಸತೇ** ಎಂಬ ಎರಡನೆಯ ಅರ್ಥದಲ್ಲಿ ಮರುದ್ದೇವತೆಗಳು ಪ್ರಾಣವಾಯುವೇ ಮೊದಲಾದ ರೂಪಗಳಿಂದ ಶರೀರದಲ್ಲಿ ಇರುತ್ತಾ, ಗಮನಾಗಮನರೂಪವಾದ ಕ್ರಿಯೆಗಳನ್ನು ನಿರ್ವಹಿಸುವವರಾಗಿ ಇರುತ್ತಾರೆ ಎಂದು ಇನ್ನೊಂದು ಅರ್ಥವನ್ನೂ ವಿವರಿಸಿದೆ.

**ಏಷಾಮಂಸೇಷು ರಂಭಿಣೀವ ಆ ರಾರಭೇ—ಯುವತಿರ್ಯಥಾಂಸಾಲಂಬಿನೀ ಯೋಷಿದಿವ ಆಶ್ಲಿಷ್ಯತಿ। ಅವಲಂಬನೇ ಸಾಮರ್ಥ್ಯಾತ್ ಶಕ್ತ್ಯಾಖ್ಯಾಯುಧವಿಶೇಷೋ ಭುಜಲಕ್ಷ್ಮೀರ್ವಾ ।** ಮರುದ್ದೇವತೆಗಳು ಭುಜಗಳಲ್ಲಿ ಶಕ್ತಿಯೆಂಬ ಆಯುಧವನ್ನು ಧರಿಸಿರುವರು. ಪ್ರೀತಿಪಾತ್ರಳಾದ ಯುವತಿಯು ಅಥವಾ ಕಾಂತಿವಿಶೇಷವು ಭುಜಗಳನ್ನು ಅವಲಂಬಿಸಿರುವ ಹಾಗೆ ಎಂದು ಈ ಆಯುಧಧಾರಣೆಯು ವರ್ಣಿತವಾಗಿರುತ್ತದೆ.

**ಹಸ್ತೇಷು ಖಾದಿಃ ಕೃತಿಶ್ಚ ಸಂದಧೇ—ಹಸ್ತತ್ರಾಣಕಃ ಕರ್ತನೀ ಖಡ್ಗಲತಾ ಚ ಸಮ್ಯಕ್ ಧೃತಾ ।** ಮರುದ್ದೇವತೆಗಳು ಹಸ್ತಗಳಲ್ಲಿ ಗುರಾಣಿಯನ್ನೂ ಮತ್ತು ಖಡ್ಗವನ್ನೂ ಕೂಡ ಧರಿಸಿರುತ್ತಾರೆ ಎಂದು ಅವರ ಸ್ವರೂಪವನ್ನು ವರ್ಣಿಸಿ, ಈ ರೀತಿಯಾದ ಆಕೃತಿಯುಳ್ಳ ಮರುತ್ತುಗಳು ಯಜ್ಞದಲ್ಲಿ ಆವಿರ್ಭವಿಸುತ್ತಾರೆಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ತೃಪ್ತಾಂಶವಃ** -ತೃಪ್ತಾಃ ಅಂಶವಃ ಯೇಷಾಂ ತೇ. ತೃಪ್ತಾಂಶವಃ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಹೃತ್ಸು**—ಹೃದಯಶಬ್ದಕ್ಕೆ ಸಪ್ತಮೀ ಬಹುವಚನಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಹೃದಾದೇಶ. **ಊಡಿದಂಪದಾದಿ**—(ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೀತಾಸಃ**—ಪಾ ಪಾನೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ **ಘುಮಾಸ್ಥಾಗಾಪಾ**—(ಪಾ. ಸೂ. ೬ ೪-೬೬) ಎಂಬುದರಿಂದ ಧಾತುವಿಗೆ ಈತ್ವ. ಪ್ರತ್ಯಯಸ್ವರ ಬರುತ್ತದೆ. ಜಸ್ ಪರವಾದಾಗ ಅದಕ್ಕೆ ಅಸುಕಾಗಮ.

**ದುವಸಃ**—ದುವಸ್ ಧಾತುವು ಪರಿಚರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಕ್ವಿಪ್ ಪ್ರತ್ಯಯ. ಧಾತುವಿನ ಅಂತೋದಾತ್ತಸ್ವರ ಬರುತ್ತದೆ.

**ಆಸತೇ**—ಆಸ ಉಪವೇಶನೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ ಅತಾದೇಶ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಧಾತುವು ಅನುದಾತ್ತೇತ್ತಾದುದರಿಂದ **ತಾಸ್ಯನುದಾತ್ತೇತ್**—(ಪಾ ಸೂ ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ರಾರಭೇ**—ರಭ ರಾಭಸ್ಯೇ. ಧಾತು. ಲಿಟ್. **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ ಏತ್ವಾಭ್ಯಾಸ ಲೋಪಾದಿಗಳು ಬರುವುದಿಲ್ಲ. ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಖಾದಿಃ**— ಖಾದೃ ಭಕ್ಷಣೇ ಧಾತು. ಬಹುಲಗ್ರಹಣದಿಂದ ಔಣಾದಿಕ ಇ ಪ್ರತ್ಯಯ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ದಧೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

**ಅವ ಸ್ವಯುಕ್ತಾ ದಿವ ಆ ವೃಥಾ ಯಯುರಮರ್ತ್ಯಾಃ ಕಶಯಾ ಚೋದತ ತ್ಮನಾ ।**
**ಅರೇಣವಸ್ತುವಿಜಾತಾ ಅಚುಚ್ಯವುರ್ದೃಳ್ಹಾನಿ ಚಿನ್ಮರುತೋ ಭ್ರಾಜದೃಷ್ಟಯಃ ॥೪॥**

॥ ಪದಪಾಠಃ ॥

**ಅವ । ಸ್ವಽಯುಕ್ತಾಃ । ದಿವಃ । ಆ । ವೃಥಾ । ಯಯುಃ । ಅಮರ್ತ್ಯಾಃ । ಕಶಯಾ । ಚೋದತ । ತ್ಮನಾ ।**
**ಅರೇಣವಃ । ತುವಿಽಜಾತಾಃ । ಅಚುಚ್ಯವುಃ । ದೃಳ್ಹಾನಿ । ಚಿತ್ । ಮರುತಃ । ಭ್ರಾಜತ್ಽಋಷ್ಟಯಃ ॥೪॥**

॥ ಸಾಯಣಭಾಷ್ಯಂ ॥

ಏತೇ ಮರುತಃ ಸ್ವಯುಕ್ತಾಃ ಸ್ವೈರ್ಯುಕ್ತಾಃ ಪರಸ್ಪರಂ ಸಂಯುಕ್ತಾಃ ಸ್ವೇನ ಧನೇನ ವಾ ಯುಕ್ತಾಃ ಸಂತೋ ದಿವೋ ದ್ಯುಲೋಕಾದ್ವೃಥಾನಾಯಾಸೇನಾ ವಾ ಯಯುಃ । ಅವಾಙ್ಮುಖಮಾಗಚ್ಛಂತಿ । ಹೇ ಅಮರ್ತ್ಯಾ ಮರುತಃ ಯೂಯಂ ತ್ಮನಾತ್ಮನಾ ಸ್ವಯಮೇವ ಕಶಯಾ । ವಾಙ್ನಾಮೈತತ್ । ವಾಚಾ ಸ್ತುತಿರೂಪಯಾ ಚೋದತ । ಪ್ರೇರಯತ । ಸ್ತೋತೄನಿತಿ ಶೇಷಃ । ತೇ ಚ ಮರುತೋಽರೇಣವೋಽಪಾಪಾಸ್ತುವಿಜಾತಾ ಬಹುಯಜ್ಞೇಷು ಪ್ರಾದುರ್ಭೂತಾ ಭ್ರಾಜದೃಷ್ಟಯೋ ದೀಪ್ತಾ ಏವಂಭೂತಾಃ ಸಂತೋ ದೃಳ್ಹಾನಿ ಚಿದ್ದೃಢಾನ್ಯಪಿ ಪರ್ವತಾನ್ಯಚುಚ್ಯವುಃ । ಚ್ಯಾವಯಂತಿ । ಚಾಲಯಂತಿ ॥

॥ ಪ್ರತಿಪದಾರ್ಥ ॥

(**ಏತೇ**—ಈ ಮರುದ್ದೇವತೆಗಳು) । **ಸ್ವಯುಕ್ತಾಃ**—ಪರಸ್ಪರ ಸಂಗತರಾಗಿ (ಸ್ವಕೀಯಧನವಿಶಿಷ್ಟರಾಗಿ) । **ದಿವಃ**—ದೇವಲೋಕದಿಂದ । **ವೃಥಾ**—ಅನಾಯಾಸವಾಗಿ । **ಅವ**—ಅವಾಙ್ಮುಖರಾಗಿ । **ಆ ಯಯುಃ**—ಆಗಮಿಸುತ್ತಾರೆ । (**ಹೇ**) **ಅಮರ್ತ್ಯಾಃ**—ಅಮರರಾದ ಎಲೈ ಮರುದ್ದೇವತೆಗಳೇ (ನೀವು) । **ತ್ಮನಾ**—ನೀವೇ । **ಕಶಯಾ**—(ಸ್ತುತಿರೂಪ) ವಾಕ್ಕಿನಿಂದ । **ಚೋದತ**—(ಸ್ತುತಿಸುವಂತೆ ನಮ್ಮನ್ನು) ಪ್ರೇರಿಸಿರಿ । (**ತೇ**) **ಮರುತಃ**—

ಆ ಮರುದ್ದೇವತೆಗಳು । **ಅರೇಣವಃ**—ಪಾಪರಹಿತರೂ । **ತುವಿಜಾತಾಃ** (ಅನೇಕ ಯಜ್ಞಗಳಲ್ಲಿ) ಪ್ರಾದುರ್ಭವಿಸುವವರೂ । **ಭ್ರಾಜದೃಷ್ಟಯಃ**—ದೀಪ್ತರೂ (ಆಗಿ) । **ದೃಳ್ಹಾನಿ ಚಿತ್**—ಅತಿ ದೃಢವಾದ ಪರ್ವತಾದಿಗಳನ್ನೂ ಕೂಡ । **ಅಚುಚ್ಯವುಃ**—ಚಲ್ಲಾಡಿಸುತ್ತಾರೆ.

॥ ಭಾವಾರ್ಥ ॥

ಪರಸ್ಪರ ಸಂಗತರಾದ ಮರುದ್ದೇವತೆಗಳು ಅನಾಯಾಸವಾಗಿ ದೇವಲೋಕದಿಂದ ಈ ಲೋಕಕ್ಕೆ ಬರುತ್ತಾರೆ; ಎಲೈ ಅಮರರಾದ ಮರುದ್ದೇವತೆಗಳೇ, ನಿಮ್ಮ ಸ್ವಂತ ವಾಕ್ಕಿನಿಂದ (ಸ್ತುತಿಸುವಂತೆ ನಮ್ಮನ್ನು) ಪ್ರೇರಿಸಿರಿ; ಪಾಪರಹಿತರೂ, ಅನೇಕ ಯಜ್ಞಗಳಲ್ಲಿ ಆವಿರ್ಭವಿಸುವವರೂ, ದೀಪ್ತರೂ ಆದ ಆ ಮರುದ್ದೇವತೆಗಳು ಅತಿದೃಢವಾದ ಪರ್ವತಾದಿಗಳನ್ನೂ ಚಲಿಸುವಂತೆ ಮಾಡುತ್ತಾರೆ.

## English Translation

Mutually supported, they descend readily form the sky: immortal Maruts, animate us by your own words (to praise you): exempt from toil, present at many (sacrifices) brilliant-eyed, the Maruts have shaken the firmest mountains.

॥ ವಿಶೇಷವಿಷಯಗಳು ॥

**ಸ್ವಯುಕ್ತಾಃ**—ಮರುತ್ತುಗಳು ಏಕೋನಪಂಚಾಶತ್ ಸಂಖ್ಯಾಕರಾಗಿರುವರರು. (49 ಜನರಾಗಿರುವರು.) ಇವರು ತಮ್ಮಲ್ಲಿ ಅನ್ಯೋನ್ಯ ಪ್ರೀತಿಯಿಂದ ಇರುವರೆಂದೂ ಅಥವಾ ಸ್ವ ಶಬ್ದಕ್ಕೆ ಧನವೆಂದು ಅರ್ಥವನ್ನು ವಿವರಿಸಿ ಧನದಿಂದ ಯುಕ್ತರಾಗಿರುವವರೆಂದೂ, ಎರಡು ವಿಧವಾಗಿ ವರ್ಣಿಸಿದೆ.

**ವೃಥಾ ಅವ ಆಯಯುಃ**—ಸ್ವರ್ಗದಿಂದ ಯಾಗಶಾಲೆಗೆ ಅನಾಯಾಸದಿಂದ ಕೆಳಮುಖನಾಗಿ ಇಳಿದು ಬರುವರು ಎಂದು ಮರುತ್ತುಗಳು ಬರುವ ಕ್ರಮವನ್ನು ವರ್ಣಿಸಿದೆ.

**ತ್ಮನಾ ಕಶಯಾ ಚೋದತ—ಆತ್ಮನಾ ಸ್ತುತಿರೂಪಯಾ ವಾಚಾ ಸ್ತೋತುಂ ಪ್ರೇರಯತ** । ತ್ಮನಾ ಎಂಬ ಪದವು ಯಾಸ್ಕರಿಂದ ಆತ್ಮನಾ ಎಂಬರ್ಥದಲ್ಲಿ ಪ್ರಯುಕ್ತವಾಗಿ ಉದಾಹೃತವಾಗಿದೆ.

**ತನ್ನಸ್ತುರೀಪಮದ್ಭುತಂ ಪುರು ವಾರಂ ಪುರು ತ್ಮನಾ ।**
**ತ್ವಷ್ಟಾ ಪೋಷಾಯ ವಿ ಷ್ಯತು ರಾಯೇ ನಾಭಾ ನೋ ಅಸ್ಮಯುಃ ॥**

(ಋ. ಸಂ. ೧-೧೪೨-೧೦)

ಇಲ್ಲಿ ತ್ಮನಾ ಎಂಬುದಕ್ಕೆ ಆತ್ಮನಾ ಎಂಬ ಅರ್ಥವು ವಿವೃತವಾಗಿದೆ. ಕಶಾ ಎಂಬ ಪದವು ವಾಙ್ನಾಮಗಳಲ್ಲಿ (ನಿ. ೨-೧೩) ಉಕ್ತವಾಗಿವೆ. ಮರುದ್ದೇವತೆಗಳು ತಮ್ಮನ್ನು ಸ್ತುತಿಮಾಡುವವರಿಗೆ ಸ್ತುತಿಮಾಡುವ ಕ್ರಮವನ್ನು ಪ್ರೇರಿಸುವುದಕ್ಕಾಗಿ ಸ್ತುತಿರೂಪವಾದ ವಾಕ್ಕುಗಳನ್ನು ಅನುಗ್ರಹಿಸಲಿ ಎಂದು ಆಶಿಸಿದೆ.

**ಅರೇಣವಃ ತುವಿಜಾತಾಃ ಭ್ರಾಜದೃಷ್ಟಯಃ** ಈ ಪದಗಳು ಮರುತಃ ಎಂಬ ಪದಕ್ಕೆ ವಿಶೇಷಣವಾಗಿ ಮರುತ್ತುಗಳು ಪಾಪರಹಿತರಾಗಿರುವವರು, ಬಹಳ ಯಜ್ಞಗಳಲ್ಲಿ (ಪ್ರಕಟರಾದವರು) ಉತ್ಪನ್ನರಾದವರು, ಪ್ರಭೂತವಾದ ಕಾಂತಿಯುಳ್ಳವರು ಎಂದು ಅವರ ಮಾಹಾತ್ಮ್ಯವು ವರ್ಣಿತವಾಗಿದೆ. ಮತ್ತು ಇವರು ದೃಢವಾದ ಪರ್ವತವನ್ನೂ ಅಲುಗಾಡಿಸುವರು ಎಂದು ಇವರ ಸಾಮರ್ಥ್ಯವನ್ನೂ ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ವಯುಕ್ತಾಃ**—ಯುಜಿರ್ ಯೋಗೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಸ್ವೈಃ ಯುಕ್ತಾಃ ಸ್ವಯುಕ್ತಾಃ. **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

**ಯಯುಃ**—ಯಾ ಪ್ರಾಪಣೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಚೋದತ**—ಚುದ ಪ್ರೇರಣೇ. ಧಾತು. ಚುರಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ ತಾದೇಶ. ವ್ಯತ್ಯಯದಿಂದ ಶಪ್ ವಿಕರಣ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧೆಗೆ ಗುಣ. ತಿಙಂತನಿಘಾತಸ್ವರ ಬರುತ್ತದೆ.

**ತ್ಮನಾ—ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ತೃತೀಯಾ ಪರವಾದಾಗ ಆತ್ಮನ್ ಶಬ್ದದ ಆಕಾರಕ್ಕೆ ಲೋಪ.

**ಅರೇಣವಃ**—ನ ವಿದ್ಯತೇ ರೇಣುಃ ಯೇಷಾಂ ತೇ. ಅರೇಣವಃ **ನಞ್ ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಚುಚ್ಯವುಃ**—ಚುಙ್ ಗತೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥವಾಗಿದೆ. ಛಾಂದಸವಾಗಿ ಲಙ್ **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಝಿ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಧಾತುವಿಗೆ ದ್ವಿತ್ವ ಬಂದಾಗ **ಸಿಜಭ್ಯಸ್ತವಿದಿಭ್ಯಶ್ಚ** (ಪಾ. ಸೂ. ೩-೪-೧೦೯) ಎಂಬುದರಿಂದ ಝಿ ಗೆ ಜುಸಾದೇಶ. **ಜುಸಿ ಚ** (ಪಾ. ಸೂ. ೭-೩-೮೩) ಎಂಬುದರಿಂದ ಉಕಾರಕ್ಕೆ ಗುಣ. ಅವಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ದೃಳ್ಹಾನಿ**—ದೃಹ ವೃದ್ಧೌ ಧಾತು. ಕ್ತ ಪ್ರತ್ಯಯ. **ಹೋಢಃ** ಸೂತ್ರದಿಂದ ಹಕಾರಕ್ಕೆ ಢತ್ವ ಬಂದಾಗ **ಝಷಸ್ತಥೋ**-ಎಂಬುದರಿಂದ ತಕಾರಕ್ಕೆ ಧತ್ವ. ಷ್ಟುತ್ವದಿಂದ ಅದಕ್ಕೆ ಢತ್ವ ಬಂದಾಗ **ಢೋಢೇ ಲೋಪಃ** ಎಂಬುದರಿಂದ ಪೂರ್ವ ಢಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಭ್ರಾಜದೃಷ್ಟಯಃ— ಭ್ರಾಜೃ ದೀಪ್ತೌ. ಧಾತು. ವ್ಯತ್ಯಯದಿಂದ ಲಟ್ಟಿಗೆ ಶತ್ರಾದೇಶ. ತಾಸ್ಯನುದಾತ್ತೇತ್—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ಋಷೀ ಗತೌ. ಧಾತು. ಕ್ತಿಚ್‌ಕ್ತೌಚಸಂಜ್ಞಾಯಾಂ (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ ಬಂದಾಗ ಋಷ್ಟಿ ಎಂದು ರೂಪವಾಗುತ್ತದೆ. ಬಹುವ್ರೀಹಿ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಕೋ ವೋಽನ್ತರ್ಮರುತ ಋಷ್ಟಿವಿದ್ಯುತೋ ರೇಜತಿ ತ್ಮನಾ ಹನ್ವೇವ ಜಿಹ್ವಯಾ ।
ಧನ್ವಚ್ಯುತ ಇಷಾಂ ನ ಯಾಮನಿ ಪುರುಪ್ರೈಷಾ ಅಹನ್ಯೋ೩ ನೈತಶಃ ॥ ೫ ॥

॥ ಪದಪಾಠಃ ॥

ಕಃ । ವಃ । ಅಂತಃ । ಮರುತಃ । ಋಷ್ಟಿಽವಿದ್ಯುತಃ । ರೇಜತಿ । ತ್ಮನಾ । ಹನ್ವಾಽಇವ । ಜಿಹ್ವಯಾ ।
ಧನ್ವಽಚ್ಯುತಃ । ಇಷಾಂ । ನ । ಯಾಮನಿ । ಪುರುಽಪ್ರೈಷಾಃ । ಅಹನ್ಯಃ । ನ । ಏತಶಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮರುತೋ ಹೇ ಋಷ್ಟಿವಿದ್ಯುತೋ ಮೇಘಭೇದನಾಯುಧವಿಶೇಷೇಣ ವಿದ್ಯೋತಮಾನಾಃ ಯುಷ್ಮಾಕಮಂತರ್ಯುಷ್ಮಾಸು ಮಧ್ಯೇ ಸ್ಥಿತ್ವಾ ಕಃ ಪುಮಾನ್ರೇಜತಿ । ಚಾಲಯತಿ । ಪ್ರೇರಯತಿ । ತರ್ಹಿ ಕಥಂ ಚಾಲನಮಿತಿ ಉಚ್ಯತೇ । ತ್ಮನಾತ್ಮನೈವ । ಚಾಲನೇ ದೃಷ್ಟಾಂತಃ । ಜಿಹ್ವಯಾ ಹನ್ವೇವ ॥ ದ್ವಿವಚನಸ್ಯಾಕಾರಃ ॥ ಹನೂ ಇವ । ತೌ ಯಥಾ ರಸನಯಾ ಚಾಲ್ಯೇತೇ ತದ್ವತ್ । ಯದ್ಯಪ್ಯೇವಂ ತಥಾಪೀಷಾಮನ್ನಾನಾಂ ತತ್ಸಾಧನಾನಾಂ ಸಸ್ಯಾನಾಂ ಯಾಮನಿ ಪ್ರಾಪ್ತೌ ಸಮೃದ್ಧ್ಯರ್ಥಂ ಧನ್ವಚ್ಯುತೋ ನ । ಧನ್ವಶಬ್ದೋಽಂತರಿಕ್ಷಸ್ಯ ವಚನಃ । ತೇನ ತತ್ಸ್ಥಮುದಕಂ ಲಕ್ಷ್ಯತೇ । ಉದಕಸ್ರಾವಿಣೋ ಮೇಘಾ ಇವ । ತೇ ಯಥಾಕಾಂಕ್ಷ್ಯಂತೇ ತಥಾ ಯುಷ್ಮಾನನ್ನಾದಿಪ್ರಾಪ್ತಯೇ ಪುರುಪ್ರೈಷಾ ಬಹುವಿಧಂ ಫಲಮಿಚ್ಛನ್ ಯಜಮಾನಃ ಸ್ತೋತ್ರೈರ್ಬಹುಪ್ರಕಾರಮಾಕಾರಯತೀತ್ಯರ್ಥಃ । ತತ್ರ ದೃಷ್ಟಾಂತಃ ಅಹನ್ಯೋಽಹ್ನಿ ಭವ ಏತಶೋ ನಾಶ್ವ ಇವ । ಸ ಯಥಾ ಶಿಕ್ಷಕೇಣ ನಾನಾಪ್ರಕಾರಂ ಪ್ರಾಪ್ಯತೇ ತದ್ವತ್ ।

॥ ಪ್ರತಿಪದಾರ್ಥ ॥

ಋಷ್ಟಿವಿದ್ಯುತಃ— ಮೇಘಭೇದಕಾಯುಧ ವಿಶಿಷ್ಟರಾಗಿ ದ್ಯೋತಮಾನರಾದ । (ಹೇ) ಮರುತಃ—ಎಲೈ ಮರುದ್ದೇವತೆಗಳೇ । ವಃ— ನಿಮ್ಮ । ಅಂತಃ—ಮಧ್ಯದಲ್ಲಿ (ನಿಂತು) । ಕಃ— ಯಾವನು । ಹನ್ವಾ—ಎರಡು

ದವಡೆಗಳು । **ಜಿಹ್ವಯಾ ಇವ**—ನಾಲಗೆಯಿಂದ (ಆಡಿಸಲ್ಪಡುವಂತೆ) । **ತ್ಮನಾ**—ನಿಮ್ಮಿಂದ ನೀವೇ । **ರೇಜತಿ**—ಚಲಿತರಾಗುವಂತೆ ಮಾಡುತ್ತಾನೆ? । (**ತಥಾಪಿ**— ಹಾಗಾದರೂ) । **ಇಷಾಂ**—ಅನ್ನಗಳ (ಅನ್ನಸಾಧನವಾದ ಸಸ್ಯಗಳ) । **ಯಾಮನಿ**—ಪ್ರಾಪ್ತಿವಿಷಯದಲ್ಲಿ (ಸಮೃದ್ಧಿಗೆ) । **ಧನ್ವಚ್ಯುತಃ ನ**—ಆಕಾಶಸ್ಥೋದಕವನ್ನು ಸ್ರವಿಸುವ ಮೇಘಗಳಂತೆ । (**ವಃ**—ನಿಮ್ಮನ್ನು) । **ಅಹನ್ಯಃ**—ಪ್ರತಿ ದಿವಸದಲ್ಲಿಯೂ । **ಏತಶಃ ನ**—ಶಿಕ್ಷಕನಿಂದ ನಾನಾಪ್ರಕಾರವಾಗಿ ಪಳಗಿಸಲ್ಪಡುವ ಅಶ್ವದಂತೆ । **ಪುರುಪ್ರೈಷಾಃ**—(ಬಹುಫಲಾಪೇಕ್ಷಿಯಾದ ಯಜಮಾನನು) ಸ್ತುತಿಗಳಿಂದ ನಾನಾಪ್ರಕಾರ ನಿಮ್ಮನ್ನು ಪ್ರೇರಿಸುತ್ತಾನೆ.

॥ ಭಾವಾರ್ಥ ॥

ಮೇಘಭೇದಕಾಯುಧ ವಿಶಿಷ್ಟರಾದ ಎಲೈ ಮರುದ್ದೇವತೆಗಳೇ, ಎರಡು ದವಡೆಗಳನ್ನೂ ನಾಲಗೆಯು ಆಡಿಸುವಂತೆ ನಿಮ್ಮ ಮಧ್ಯದಲ್ಲಿಯೇ ಇದ್ದು, ನಿಮ್ಮನ್ನು ಚಲಿಸುವಂತೆ ಯಾವನು ತಾನೇ ಮಾಡಿಯಾನು? ಆದರೂ, ವ್ಯಾಯಾಮಕಾಲದಲ್ಲಿ ಶಿಕ್ಷಕನು ಅಶ್ವವನ್ನು ನಾನಾಪ್ರಕಾರ ತಿರುಗಿಸುವಂತೆ ಸಸ್ಯಗಳಿಗೆ ಮೋಡಗಳು ಹೇಗೆ ಅವಶ್ಯಕವೋ ಹಾಗೆ ಯಾಗಕರ್ತೃವಿನ ಬಹುವಿಧ ಫಲಗಳಿಗೆ ಅವಶ್ಯಕರಾದ ನಿಮ್ಮನ್ನು, ಆ ಯಾಗಕರ್ತೃವು ತನ್ನ ಸ್ತೋತ್ರಗಳಿಂದ ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳುತ್ತಾನೆ.

## English Translation.

Maruts, lightning-armed, who, (standing) amongst you, sets you of yourselves in motion, as the jaws are (set in motion) by the tongue: as falling rains (are essential) for the obtaining of food, so (those, desirous of sustenance), excite you in various ways, like a horse in (his) daily (training).

॥ ವಿಶೇಷವಿಷಯಗಳು ॥

**ಋಷ್ಟಿ ವಿದ್ಯುತಃ—ಮೇಘಭೇದನಾಯುಧವಿಶೇಷೇಣ ವಿದ್ಯೋತಮಾನಾಃ** ಋಷ್ಟಿ ಎಂಬ ಶಬ್ದವು ಆಯುಧವಿಶೇಷ ಬೋಧಕವಾಗಿದೆ ಎಂದು ಅರ್ಥವನ್ನು ವಿವರಿಸಿದೆ. ಈ ಆಯುಧದಿಂದ ಪ್ರಕಾಶಿಸುತ್ತಿರುವ ಮರುದ್ದೇವತೆಗಳು ಮೇಘವನ್ನು ಭೇದಿಸುವ ಕಾರ್ಯದಲ್ಲಿ ಇವರನ್ನು ಪ್ರೇರಿಸುವವರು ಯಾರು ಎಂಬ ಪ್ರಶ್ನೆಯನ್ನು **ಕೋ ರೇಜತಿ** ಎಂಬ ವಾಕ್ಯದಿಂದ ಪ್ರಶ್ನಿಸಿ ಅದಕ್ಕೆ ಉತ್ತರವಾಗಿ ಚಾಲನಕ್ರಿಯಾನುಪಪತ್ತಿ ಪರಿಹಾರಾರ್ಥವಾಗಿ **ತ್ಮನಾ** ಎಂದು ಸಮಾಧಾನವನ್ನು ಹೇಳಿದೆ. ಮರುತ್ತುಗಳು ಆಯುಧವನ್ನು ಧರಿಸಿ ಪ್ರಕಾಶಿಸುತ್ತಿದ್ದ ಮಾತ್ರದಿಂದ ಮೇಘಭೇದನವು ಉಂಟಾಗಿ ವೃಷ್ಟಿಯು ಆಗುವುದಿಲ್ಲ. ಮೇಘಭೇದನರೂಪವಾದ ಕ್ರಿಯೆಯು ಉಂಟಾಗುವಂತೆ ಮರುತ್ತುಗಳು ಕಾರ್ಯೋನ್ಮುಖರಾಗಲು ಇವರನ್ನು ಪ್ರೇರಿಸುವವರು ಇತರರು ಯಾರೂ ಇಲ್ಲದಿರುವಕಾರಣ ಇವರು ತಾವಾಗಿಯೇ ತಮ್ಮ ಆಯುಧದಿಂದ ಮೇಘವನ್ನು ಭೇದಿಸುವರು ಎಂಬ ಅರ್ಥವನ್ನು ವರ್ಣಿಸಿದೆ.

**ಜಿಹ್ವಯಾ ಹನ್ವೇವ**—ಜಿಹ್ವೆಯು (ನಾಲಗೆಯು) ದವಡೆಗಳನ್ನು ಪ್ರೇರಿಸುವಹಾಗೆ ಎಂದು ಹೋಲಿಸಿದೆ. ಮರುತ್ತುಗಳು ತಮ್ಮಿಂದ ತಾವೇ ಪ್ರೇರಿತರಾಗಿ ಮೇಘವನ್ನು ಭೇದಿಸುವಾಗ ಚಾಲನಕ್ರಿಯೆಯು ಉತ್ಪನ್ನವಾಗಲು ಪ್ರೇರಕತ್ವವು ಮರುನಿಷ್ಠವಾಗಿ ಉತ್ಪನ್ನವಾಗಿರುತ್ತದೆ ಈ ವಿಷಯದಲ್ಲಿ ಜಿಹ್ವೆಯ ಚಾಲನಕ್ರಿಯೆಯಿಂದ ಹನುವಿನ ಚಾಲನವು ತಾನಾಗಿಯೇ ಉತ್ಪನ್ನವಾಗುವುದು ಎಂದು ದೃಷ್ಟಾಂತರೂಪದಿಂದ ಹೇಳಿದೆ.

**ಇಷಾಂ ಯೋಮನಿ ಧನ್ವಚ್ಯುತೋ ನ—ಅನ್ನಾನಾಂ ತತ್ಸಾಧನಾನಾಂ ಸಸ್ಯಾನಾಂ ಪ್ರಾಪ್ತೌ ಸಮೃದ್ಧ್ಯರ್ಥಂ ಉದಕಸ್ರಾವಿಣೋ ಮೇಘಾ ಇವ।** ಧನ್ವನ್ ಎಂಬ ಪದವು ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಉಕ್ತವಾಗಿದೆ. ಮತ್ತು-ಯಾಸ್ಕರಿಂದ

**ಯಃ ಪರಸ್ಯಾಃ ಪರಾವತಸ್ತಿರೋ ಧನ್ವಾತಿ ರೋಚತೇ । ಸ ನಃ ಪರ್ಷದತಿ ದ್ವಿಷಃ ।**

(ಋ. ಸಂ. ೧೦-೧೮೭-೨)

ಈ ಋಕ್ಕು ಉದಾಹೃತವಾಗಿ **ಧನ್ವನ್ ಶಬ್ದವು ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪಃ** ಎಂದು ವ್ಯಾಖ್ಯಾತವಾಗಿದೆ. ಸಾಯಣರು **ಧನ್ವನ್ ಶಬ್ದೋ ಅಂತರಿಕ್ಷವಚನಃ । ತೇನ ತತ್ಸ್ಥಮುದಕಂ ಲಕ್ಷ್ಯತೇ ।** ಧನ್ವನ್ ಶಬ್ದವು ಅಂತರಿಕ್ಷ ವಾಚಕವಾಗಿದೆ. ಆದರೆ ಇಲ್ಲಿ ಶಬ್ದದಿಂದ ಅಂತರಿಕ್ಷ ದಲ್ಲಿರುವ ಉದಕವು ಎಂಬ ಅರ್ಥವನ್ನು ಹೇಳಿದೆ ಎಂದು ಅರ್ಥವನ್ನು ವಿವರಿಸಿದ್ದಾರೆ. ಅನ್ನವೇ ಮೊದಲಾದವುಗಳನ್ನಾಗಲಿ ಅಥವಾ ಅನ್ನವು ಉಂಟಾಗಲು ಕಾರಣವಾದ ಸಸ್ಯಾದಿಗಳ ಉತ್ಪತ್ತಿಗಾಗಿ ಉದಕಗಳನ್ನು ಸುರಿಸುವ ಮೇಘಗಳ ಅವಶ್ಯಕತೆಯನ್ನು ಜನರು ಆಶಿಸುವ ಹಾಗೆ ಯಜಮಾನನು ಪ್ರಭೂತವಾದ ಸ್ತುತಿಗಳಿಂದ ಮರುದ್ದೇವತೆಗಳ ಆಗಮನವನ್ನು ಆಶಿಸುತ್ತಾನೆ ಎಂದು ವರ್ಣಿಸಿದೆ.

**ಅಹನ್ಯಃ ಏತಶೋ ನ**—ಎಂಬ ವಾಕ್ಯದಿಂದ ಪ್ರತಿದಿನವೂ ಅಶ್ವವು ಶಿಕ್ಷಕನ ಆಜ್ಞೆಗೆ ಒಳಪಟ್ಟು ಅನೇಕ ವಿಧವಾದ ಗಮನಗಳನ್ನು ಕಲಿಯುವಂತೆ ಎಂದು ಮರುತ್ತುಗಳ ಆಗಮನವೂ ನಾನಾ ವಿಧವಾಗಿರುವುದೆಂಬ ಅರ್ಥವು ಉಪಮಿತವಾಗಿರುತ್ತದೆ.

**ಏತಶಃ**—ಎಂಬ ಪದವು ಅಶ್ವನಾಮಗಳಲ್ಲಿ (ನಿ. ೨-೨೭) ಪಠಿತವಾಗಿದೆ.

**ಪುರುಪ್ರೈಷಾಃ—ಬಹುವಿಧಂ ಫಲಮಿಚ್ಛನ್** ಬಹಳ ವಿಧವಾದ ಪ್ರಯೋಜನಗಳನ್ನು ಆಶಿಸುವ ಯಜಮಾನನು ಎಂದು ಅರ್ಥವನ್ನು ಈ ಪದಕ್ಕೆ ವರ್ಣಿಸಿದೆ. ಪುರುಪ್ರೈಷಃ ಸ್ತೋತ್ರಂ ಯಸ್ಯ ಎಂದು ವಿಗ್ರಹವಾಕ್ಯವನ್ನು ಹೇಳಿದೆ. ಯಜಮಾನನು ಅನೇಕ ವಿಧವಾದ ಸ್ತುತಿಗಳಿಂದ ಸ್ತೋತ್ರಮಾಡಿ ಮರುತ್ತುಗಳ ನಾನಾವಿಧವಾದ ಆಗಮನಗಳಿಂದ ಅನ್ನಾದಿಗಳನ್ನು ಹೊಂದಲು ಆಶಿಸುತ್ತಾನೆಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಋಷ್ಟಿವಿದ್ಯುತಃ**—ಋಷ್ಟ್ಯಾ ವಿದ್ಯೋತಂತೇ ಇತಿ ಋಷ್ಟಿವಿದ್ಯುತಃ. ಸಂಬೋಧನಾ ಬಹುವಚನಾಂತರೂಪ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ರೇಜತಿ**—ರೇಜೃ ಕಂಪನೇ. ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತ ರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಹನ್ವಾ**—ಹನು ಶಬ್ದ. ಇದಕ್ಕೆ ದ್ವಿವಚನ (ಔ) ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಯಣಾದೇಶ.

**ಧನ್ವಚ್ಯುತಃ—ಚ್ಯುತಿರ್ ಕ್ಷರಣೇ.** ಧಾತು. ಕ್ವಿಪ್ ಪ್ರತ್ಯಯ ಧನ್ವಾನಂ ಚ್ಯೋತಯಂತಿ ಇತಿ ಧನ್ವಚ್ಯುತಃ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಇಷಾಂ**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಹನ್ಯಃ**—ಅಹ್ನಿ ಭವಃ ಅಹನ್ಯಃ. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಏತಶಃ**—ಇಣ್ ಗತೌ. ಧಾತು. **ಇಣಸ್ತಶನ್ ತಶುನಸೌ** (ಉ. ಸೂ. ೪-೪೨೯) ಎಂಬುದರಿಂದ ತಶನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

**ಕ್ವ ಸ್ವಿದಸ್ಯ ರಜಸೋ ಮಹಸ್ಪರಂ ಕ್ವಾವರಂ ಮರುತೋ ಯಸ್ಮಿನ್ನಾಯಯ ।**
**ಯಚ್ಚ್ಯಾವಯಥ ವಿಥುರೇವ ಸಂಹಿತಂ ವ್ಯದ್ರಿಣಾ ಪತಥ ತ್ವೇಷಮರ್ಣವಂ ॥ ೬ ॥**

॥ ಪದಪಾಠಃ ॥

**ಕ್ವ । ಸ್ವಿತ್ । ಅಸ್ಯ । ರಜಸಃ । ಮಹಃ । ಪರಂ । ಕ್ವ । ಅವರಂ । ಮರುತಃ । ಯಸ್ಮಿನ್ । ಆऽಯಯ ।**
**ಯತ್ । ಚ್ಯವಯಥ । ವಿಥುರಾऽಇವ । ಸಂऽಹಿತಂ । ವಿ । ಅದ್ರಿಣಾ । ಪತಥ । ತ್ವೇಷಂ । ಅರ್ಣವಂ ॥೬॥**

॥ ಸಾಯಣಭಾಷ್ಯಂ ॥

**ಹೇ ಮರುತಃ ಯೂಯಂ ಯಸ್ಮಿನ್ನುದಕನಿಮಿತ್ತಭೂತೇ ಸತ್ಯಾಯಯ ಆಗಚ್ಛತ ಅಸ್ಯ ರಜಸೋ ವೃಷ್ಟ್ಯುದಕಸ್ಯ ಲೋಕಸ್ಯ ವಾ ಮಹೋ ಮಹತಃ ಪರಂ ಪಾರಮಂತಂ ಕ್ವ ಸ್ವಿತ್ । ಕುತ್ರಾಸ್ತೀತಿ । ನಾಸ್ತೀತ್ಯರ್ಥಃ । ತಥಾವರಮವಾಚ್ಛಾಗ ಆದಿಶ್ಚ ಕ್ವ ಸ್ವಿತ್ । ಕುತ್ರಾಸ್ತಿ । ಅದ್ಯಂತಂ ನ ಕೋऽಪಿ ಜಾನಾತೀತ್ಯರ್ಥಃ । ಯದ್ಯದಾ ಯೂಯಂ ವಿಥುರೇವ ವಿಥುರಾಣಿ ಶಿಥಿಲಾನಿ ತೃಣಾನೀವ ಸಂಹಿತಮೇಕೀಭೂತಮುದಕಂ ಚ್ಯಾವಯಥ ಸ್ವಸ್ಥಾನಾಚ್ಚಾಲಯಥ ತದಾದ್ರಿಣಾ ವಜ್ರೇಣ ತ್ವೇಷಂ ದೀಪ್ತಮರ್ಣವಮುದಕವಂತಂ ಮೇಘಂ ವಿ ಪತಥ । ವಿಶೀರ್ಣಂ ಪಾತಯಥ ॥**

॥ ಪ್ರತಿಪದಾರ್ಥ ॥

(**ಹೇ**) **ಮರುತಃ**—ಎಲೈ ಮರುದ್ದೇವತೆಗಳೇ (ನೀವು) । **ಯಸ್ಮಿನ್**—ಯಾವ ಉದಕ ನಿಮಿತ್ತವಾಗಿ । **ಆಯಯ**—ಆಗಮಿಸುತ್ತೀರೋ । **ಅಸ್ಯ**—ಆ । **ಮಹಃ**—ಅಪಾರವಾದ । **ರಜಸಃ**—ಉದಕದ (ಲೋಕದ) **ಪರಂ**—ಅಂತವು । **ಕ್ವ ಸ್ವಿತ್**—ಎಲ್ಲಿ ಇದೆ? । (**ತಥಾ** – ಹಾಗೆಯೇ) । **ಅವರಂ**—(ಅದರ) ಆದಿಭಾಗವು । **ಕ್ವ**—ಎಲ್ಲಿದೆ? । **ಯತ್**—ಯಾವಾಗ (ನೀವು) । **ಸಂಹಿತಂ**—ಒಟ್ಟಾಗಿ ಸೇರಿಕೊಂಡಿರುವ ಉದಕವನ್ನು । **ವಿಥುರಾ ಇವ**—ಶಿಥಿಲವಾದ (ಹಗುರವಾದ) ಹುಲ್ಲನ್ನು (ಚದುರಿಸುವಂತೆ) । **ಚ್ಯಾವಯಥ**—ಚದುರಿಸುತ್ತೀರೋ । (**ತತ್**—ಆಗ) । **ಅದ್ರಿಣಾ**—ವಜ್ರಾಯುಧದಿಂದ ! **ತ್ವೇಷಂ**—ದೀಪ್ತವಾದ । **ಅರ್ಣವಂ**—ಉದಕ ವಿಶಿಷ್ಟ ವಾದ ಮೇಘವನ್ನು । **ವಿ ಪತಥ**—(ಸೀಳಿ) ಬೀಳಿಸುತ್ತೀರಿ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನೀವು ಯಾವ ನೀರಿನ ಉದ್ದೇಶವಾಗಿ ಬರುತ್ತೀರೋ ಅದಕ್ಕೆ ಆದಿ ಅಂತಗಳಾವುವು? ಏಕತ್ರ ಸಂಘಟಿತವಾದ ಉದಕವನ್ನೂ, ನೀವು ಜಲವಾಹಕವಾದ ಮೇಘಗಳನ್ನೂ ವಜ್ರಾಯುಧದಿಂದ ಭೇದಿಸಿ ಕೆಳಗೆ ಬೀಳಿಸುತ್ತೀರಿ.

English Translation.

Where, Maruts, is the limit of the vast region (whenee you eome): where is the beginning of that to which you proceed : when you scatter the dense vapour like light grass, and hurl down the brilliant rain-cloud by the thunderbolt.

॥ ವಿಶೇಷವಿಷಯಗಳು ॥

**ಅಸ್ಯ ರಜಸಃ ಮಹಃ ಪರಂ ಕ್ವ ಸ್ವಿತ್—ವೃಷ್ಟ್ಯುದಕಸ್ಯ ಲೋಕಸ್ಯ ವಾ ಮಹತಃ ಪಾರಂ ಅಂತಂ ಕುತ್ರಾಸ್ತಿ** । ರಜಶ್ಶಬ್ದವು ರಾತ್ರಿನಾಮಗಳಲ್ಲಿ (ನಿ. ೨-೧೮) ಉಕ್ತವಾಗಿದೆ. ಯಾಸ್ಕರು ರಜಧಾತುವಿನಿಂದ ರಂಜನಾರ್ಥ ಬೋಧಕವಾದ ರಜಶ್ಶಬ್ದವು ನಿಷ್ಪನ್ನವಾಗಿದೆ ಎಂದು ನಿರ್ವಚನವನ್ನು ವಿವರಿಸಿ **ರಜೋ ರಜತೇರ್ಜ್ಯೋತಿೀ ರಜ ಉಚ್ಯತೇ** ವಸ್ತುಗಳೆಲ್ಲವನ್ನೂ ತನ್ನ ಪ್ರಕಾಶದಿಂದ ವ್ಯಾಪಿಸಿರುವುದರಿಂದ ಜ್ಯೋತಿಸ್ಸಿಗೆ ರಜಃ ಎಂದು ಹೆಸರು ಎಂದೂ, **ಉದಕಂ ರಜ ಉಚ್ಯತೇ ಲೋಕಾ ರಜಾಂಸ್ಯುಚ್ಯಂತೇ** ಉದಕಗಳೂ, ಲೋಕಗಳೂ ರಜಶ್ಶಬ್ದದಿಂದ ಬೋಧ್ಯವಾಗಿರುವುವು ಎಂಬ ಅರ್ಥವನ್ನು (ನಿ. ೪-೧೯) ವಿವರಿಸಿ ಆಯಾಯ ಅರ್ಥಬೋಧಕವಾದ (ಉದಾಹರಣೆಗಳ) ಪ್ರಯೋಗಗಳನ್ನು ಉದಾಹರಿಸಿದ್ದಾರೆ.

**ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಸ್ಸು ಸೀದನ್** ॥

(ಋ. ಸಂ. ೭-೩೪-೧೬)

ಇಲ್ಲಿ ರಜಸ್ಸು ಎಂಬ ಪದಕ್ಕೆ ಉದಕೇಷು ಎಂಬ ಅರ್ಥವನ್ನು ವಿವರಿಸಿದೆ.

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**

(ಋ. ಸಂ. ೧-೯೨-೧)

ಇಲ್ಲಿ **ರಜಸಃ ಅಂತರಿಕ್ಷಲೋಕಸ್ಯ** ಎಂದು ಅರ್ಥವನ್ನು ಹೇಳಿದೆ. ಸಾಯಣರು ಮರುತ್ತುಗಳನ್ನು ಸಂಬೋಧಿಸಿ ಉದಕಗಳನ್ನು ಲೋಕಕ್ಕೆ ಅನುಗ್ರಹಿಸುವುದಕ್ಕಾಗಿ ಅವರು ಆಗಮಿಸುವರೆಂದು ಅರ್ಥವನ್ನು ವಿವರಿಸಿದ್ದಾರೆ. ಉದಕಗಳ ಮತ್ತು ಲೋಕಗಳ ಮಹತ್ವ ಪೂರಿತವಾದ (ಕೊನೆಯು) ಅಂತ್ಯಭಾಗವು ಎಲ್ಲಿರುವುದು ಎಂದು ಪ್ರಶ್ನೆಮಾಡಿ ಅದು ಪ್ರತ್ಯಕ್ಷವಾಗಿರುವುದರಿಂದ ಅಪಾರವಾಗಿರುವುದು ಎಂಬ ಅರ್ಥವನ್ನು ವರ್ಣಿಸಿದ್ದಾರೆ. ಇದರ ಹಾಗೆಯೇ ಉದಕಗಳ **ಅವರಂ ಅವಾಙ್ ಭಾಗಃ ಆದಿಷ್ಟ ಕ್ವ ಸ್ವಿತ್** ಆದಿಯು ಎಲ್ಲಿದೆ ಎಂದು ಪ್ರಶ್ನೆಯ ಮೂಲಕವಾಗಿ ಕೇಳಿ, **ನ ಕೋಽಪಿ ಜಾನಾತಿ** ಉದಕಗಳ ಆದ್ಯಂತವನ್ನೇ ಯಾವನೂ ತಿಳಿದಿಲ್ಲ ಎಂದು ವಿವರಿಸಿದ್ದಾರೆ.

**ವಿಥುರೇವ ಸಂಹಿತಂ ಚ್ಯಾವಯಥ—ಶಿಥಿಲಾನಿ ತೃಣಾನೀವ ಏಕಭೂತಂ ಉದಕಂ ಸ್ವಸ್ಥಾನಾತ್ ಚಾಲಯಥ** ಮರುತ್ತುಗಳು ಶಿಥಿಲವಾದ ತೃಣಗಳನ್ನು (ಹುಲ್ಲುಕಡ್ಡಿಗಳನ್ನು) ಚಲಿಸುವಂತೆ ಘನೀಭೂತವಾದ ಉದಕಗಳನ್ನು ಅವುಗಳ ಸ್ಥಾನದಿಂದ ಚಲಿಸುವಂತೆ ಮಾಡುವಾಗ **ಅರ್ಣವಂ ವಿ ಪತಥ ಉದಕವಂತಂ ಮೇಘಂ ವಿಶೀರ್ಣಂ ಪಾತಯಥ** ವಜ್ರಾಯುಧದಿಂದ ಉದಕಪೂರ್ಣವಾಗಿ ಇರುವ ಮೇಘವನ್ನು ಹೊಡೆದು ಸೀಳಿ ವೃಷ್ಟ್ಯುದಕವು ಸುರಿಯುವಂತೆ ಮಾಡುತ್ತೀರಿ ಎಂದು ಮರುತ್ತುಗಳ ಅಸಾಧಾರಣವಾದ ಸಾಮರ್ಥ್ಯವು ಇಲ್ಲಿ ವಿವೃತವಾಗಿದೆ.

**ಅದ್ರಿಣಾ—ಅದ್ರಿ**ಶಬ್ದವು **ವಜ್ರ** ನಾಮಗಳಲ್ಲಿ (ನಿ. ೩-೧೧) ಪಠಿತವಾಗಿದೆ. ವಜ್ರಾಯುಧವೆಂಬ ಅರ್ಥವನ್ನು ವಿವರಿಸಿದೆ.

**ತ್ವೇಷಂ—ದೀಪ್ತಂ** ಈ ಪದವು ಯಾಸ್ಕರಿಂದ ಪ್ರಕಾಶವುಳ್ಳದ್ದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವೃತವಾಗಿದೆ

**ತ್ವೇಷಮಿತ್ಥಾ ಸಮರಣಂ ಶಿಮೀವತೋರಿಂದ್ರಾವಿಷ್ಣೂ ಸುತಪಾ ವಾಮುರುಷ್ಯತಿ ।**

(ಋ. ಸಂ. ೧-೧೫೫-೨)

ಇಲ್ಲಿ ತ್ವೇಷಂ ಎಂಬ ಪದಕ್ಕೆ ಕಾಂತಿಯುಳ್ಳದ್ದು ಎಂಬ ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಆಯಯ**—ಯಾ ಪ್ರಾಪಣೇ. ಧಾತು. ಛಾಂದಸವಾಗಿ ಲಿಟ್. ಮಧ್ಯಮಪುರುಷ ಬಹುವಚನದಲ್ಲಿ ಅ ಆದೇಶ. ದ್ವಿತ್ವ. **ಅಸಂಯೋಗಾಲ್ಲಿಟ್ ಕಿತ್** ಎಂಬುದರಿಂದ ಪ್ರತ್ಯಯಕ್ಕೆ ಕಿತ್ವವಿರುವುದರಿಂದ **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಆಙಿಗೆ ನಿಘಾತಸ್ವರ ಬರುತ್ತದೆ.

**ಚ್ಯಾವಯಥ**—ಚ್ಯುಙ್ ಗತೌ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಆವಾದೇಶ. ಲಟ್ ಮಧ್ಯಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ.

**ವಿಥುರಾ ಇವ**—ವ್ಯಥ ಭಯಸಂಚಲನಯೋಃ ಧಾತು. **ವ್ಯಥೇಃ ಸಂಪ್ರಸಾರಣಂ ಕಿಚ್ಚ** (ಉ. ಸೂ. ೧-೩೯) ಎಂಬುದರಿಂದ ಉರಚ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್.

**ಪತಥ**—ಪತ್ಲೃ ಗತೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. ಲಟ್ ಮಧ್ಯಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ತ್ವೇಷಂ**—ತ್ವಿಷ ದೀಪ್ತೌ. ಧಾತು. **ನಂದಿಗ್ರಹಪಚಾದಿಭ್ಯಃ**— ಎಂಬುದರಿಂದ ಅಚ್ ಪ್ರತ್ಯಯ. ಲಘೂಪಧಗುಣ. ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅರ್ಣವಂ**—ಅರ್ಣಃ ಅಸ್ಯ ಅಸ್ತಿ ಇತಿ ಅರ್ಣವಃ. **ಅರ್ಣಸೋ ಲೋಪಶ್ಚ** (ಕಾ. ೫-೨-೧೦೯-೨) ಎಂಬುದರಿಂದ ಮತ್ವರ್ಥದಲ್ಲಿ ವ ಪ್ರತ್ಯಯ. ಸಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೬ ॥

॥ ಸಂಹಿತಾಪಾಠಃ ॥

ಸಾತಿರ್ನ ವೋಽಮವತೀ ಸ್ವರ್ವತೀ ತ್ವೇಷಾ ವಿಪಾಕಾ ಮರುತಃ ಪಿಪಿಷ್ವತೀ ।
ಭದ್ರಾ ವೋ ರಾತಿಃ ಪೃಣತೋ ನ ದಕ್ಷಿಣಾ ಪೃಥುಜ್ರಯೀ ಅಸುರ್ಯೇವ
ಜಂಜತೀ ॥ ೭ ॥

॥ ಪದಪಾಠಃ ॥

ಸಾತಿಃ । ನ । ವಃ । ಅಮಽವತೀ । ಸ್ವಃಽವತೀ । ತ್ವೇಷಾ । ವಿಽಪಾಕಾ । ಮರುತಃ । ಪಿಪಿಷ್ವತೀ ।
ಭದ್ರಾ । ವಃ । ರಾತಿಃ । ಪೃಣತಃ । ನ । ದಕ್ಷಿಣಾ । ಪೃಥುಽಜ್ರಯೀ । ಅಸುರ್ಯಾಽಇವ । ಜಂಜತೀ ॥ ೭ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವೋ ಯುಷ್ಮಾಕಂ ಸಂಬಂಧಿನೀ ಸಾತಿರ್ನ ಸಂಭಕ್ತಿರಿವ ಯುಷ್ಮತ್ಸಂಭಜನಂ ಯಥಾ ಪ್ರಶಸ್ತಗುಣಂ ತದ್ವದ್ವೋ ರಾತ್ರಿರ್ವೃಷ್ಟ್ಯಾದಿವಿಷಯಾಮವತ್ಯಮಾತ್ಯವತೀಂ ದ್ರಾತಿಸಹಾಯವತೀ । ಯಥಾ ರಾಜೇವಾಮವಾನ್ । ಋ. ೪-೪-೧ । ಇತ್ಯತ್ರಾಮಶಬ್ದೋಽಮಾತ್ಯವಚನಃ ತದ್ವತ್ । ಯದ್ವಾ।

**ವಃ ಸಾತಿಃ ಸಂವಿಭಕ್ತಿರ್ನಾಮವತೀ । ರೋಗವತೀ ನ ಭವತಿ । ಕಿಂತು ಸ್ವರ್ವತೀ ಸುಖವತೀ ತ್ವೇಷಾ ದೀಪ್ತಾ ವಿಪಾಕಾ ಪರಿಪಕ್ವಫಲಾ ಪಿಪಿಷ್ವತೀ ಪ್ರೇಷಣವತೀ ಕೃಷೀವಲೈಃ ಕರ್ಷಣವತೀ । ವೃಷ್ಟೌ ಸತ್ಯಾಂ ಕರ್ಷಂತೀತಿ ಪ್ರಸಿದ್ಧಂ । ಸ್ವವಿರೋಧಿಪೇಷಣವತೀ ವಾ । ಭದ್ರಾ ಭಂದನೀಯಾ ಸ್ತುತ್ಯಾ । ಕಿಂಚ ಪೃಣತೋ ಧಾತುರ್ಧನಿಕಸ್ಯ ದಕ್ಷಿಣಾ ನ ದಕ್ಷಿಣೇವ ತದ್ವತ್ಸಮೃದ್ಧಕರೀ ಪೃಥುಜ್ರಯೀ ಪೃಥುಜವಾ ಶೀಘ್ರಗಾಮಿನೀ ಕಿಂಚಾಸುರ್ಯೇವಾಸುರಸ್ಯ ಸ್ವಭೂತಾ ಜಂಜತೀ ಸರ್ವಾನಭಿಭವಂತೀ ಶಕ್ತಿರಿವ । ಸಾ ಯಥಾನ್ಯೇಭ್ಯೋಽಪಹೃತ್ಯಾನ್ಯಸ್ಮೈ ದಾತುಂ ಸಮರ್ಥಾ ತದ್ವದಿಯಮಪಿ ಮೇಘಸ್ಥಮುದಕಮಪಹೃತ್ಯ ಜಗತೋ ದಾತುಂ ಶಕ್ತೇತ್ಯರ್ಥಃ । ಈದೃಶೀ ರಾತಿರಸ್ಮಭ್ಯಮಸ್ತ್ವಿತಿ ಭಾವಃ ॥**

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ವಃ**—ನಿಮ್ಮ ಸಂಬಂಧವಾದ । **ಸಾತಿಃ ನ**—ಆಗಮನವು (ಪ್ರಶಸ್ತವಾಗಿರುವಂತೆ) । **ರಾತಿಃ**—(ನಿಮ್ಮ) ವೃಷ್ಟ್ಯಾದಿ ದಾನವೂ । **ಅಮವತೀ**—ಇಂದ್ರಾದಿ ಸಹಚರಿತವಾಗಿ ಪ್ರಶಸ್ತವಾದುದು । **ವಃ**—ನಿಮ್ಮ । **ಸಾತಿಃ**—ಆಗಮನವು । **ನ ಅಮವತೀ**—ರೋಗವಿಶಿಷ್ಟವಾದುದಲ್ಲ (ಅನಿಷ್ಟವಾದುದಲ್ಲ) । (**ಕಿಂತು**—ಆದರೆ) । **ಸ್ವರ್ವತೀ**—ಸುಖ (ಸ್ವರ್ಗ) ವಿಶಿಷ್ಟವೂ । **ತ್ವೇಷಾ** – ಉಜ್ವಲವಾದುದೂ । **ವಿಪಾಕಾ**—ಪಕ್ವಫಲೋಪೇತವೂ । **ಪಿಪಿಷ್ವತೀ**—ಕೃಷೀವಲರಿಗೆ ಅನುಕೂಲವಾದುದೂ । **ಭದ್ರಾ**—ಶುಭಕರವೂ । **ಪೃಣತಃ**— (ದಾತೃವಿನ) ಧನಿಕನ । **ದಕ್ಷಿಣಾ ನ** — ದಕ್ಷಿಣೆಯಂತೆ (ಸಮೃದ್ಧಿಕರವೂ) । **ಪೃಥುಜ್ರಯೀ**—ಶೀಘ್ರಗಾಮಿಯೂ (ಶೀಘ್ರವಾಗಿ ಫಲ ಕೊಡುವುದೂ) । (ಮತ್ತು) **ಅಸುರ್ಯಾ**—ಅಸುರಸಂಬಂಧವಾದ । **ಜಂಜತೀ**—ಸರ್ವಾಭಿಭಾವಕಶಕ್ತಿಯಂತೆ ಇರತಕ್ಕುದೂ (ಆಗಿದೆ) । **ರಾತಿಃ**—(ಇಂತಹ) ದಾನವು (ನಮಗೆ ದೊರಕಲಿ) ।

॥ ಭಾವಾರ್ಥ

ಎಲೈ ಮರುದ್ದೇವತೆಗಳೇ, ಇಂದ್ರನ ಸಹಾಯದಿಂದ ನೀವು ಸುರಿಸುವ ವೃಷ್ಟಿಯು ನಿಮ್ಮ ಆಗಮನದಂತೆ ಸ್ವರ್ಗಸುಖಸಾಧನವೂ, ಉಜ್ವಲವೂ, ಪರಿಪಕ್ವಫಲಭೂತವೂ, ಕೃಷೀವಲರಿಗೆ ಅನುಕೂಲವೂ, ಶುಭಕರವೂ, ಧನಿಕನ ದಕ್ಷಿಣೆಯಂತೆ ಸಮೃದ್ಧಿಕರವೂ, ಅತ್ಯಲ್ಪಕಾಲದಲ್ಲಿ ಫಲಾವಹವೂ, ಮತ್ತು ಆಸುರೀಶಕ್ತಿಯಂತೆ ಸಮಸ್ತವನ್ನೂ ಪರಾಭವಗೊಳಿಸತಕ್ಕದೂ (ಆಸುರೀಶಕ್ತಿಯಿಂದ ಒಬ್ಬರಿಂದ ಕಸಿದು ದಾನಮಾಡಲು ಸಾಧ್ಯವಾಗುವಂತೆ) ಆಗಿದೆ. ಇಂತಹ ನಿಮ್ಮ ದಾನವು ನಮಗೆ ಲಭ್ಯವಾಗಲಿ.

English Translation.

Like your possession of treasure, Maruts, is your liberality: ministeral (of Indra's bounty), heaven-bestowing, brilliant, fruitful, favowable to the husbandman, propitions: : it is like the donation of a wealthy (donor), prompt (of distribution), and like the all-subduing force of the Asuras.

॥ ವಿಶೇಷವಿಷಯಗಳು ॥

**ವಃ ಸಾತಿರ್ನ ವಃ ರಾತಿಃ ಅಮವತೀ—ಯುಷ್ಮಾಕಂ ಸಂಬಂಧಿನೀ ಸಂಭಕ್ತಿರಿವ ಯುಷ್ಮತ್ಸಂ-ಭಜನಂ ಯಥಾ ಪ್ರಶಸ್ತಗುಣಂ ತದ್ವತ್ ವೃಷ್ಟ್ಯಾದಿವಿಷಯಾ ಅಮಾತ್ಯವತೀ ಇಂದ್ರಾದಿಸಹಾಯವತೀ। ಯದ್ವಾ ವಃ ಸಾತಿಃ ಸಂವಿಭಕ್ತಿಃ ನ ಅಮವತೀ ರೋಗವತೀ ನ ಭವತಿ** । ಸಾತಿ ಶಬ್ದಕ್ಕೆ ಸೇವೆಯೆಂದು ಅರ್ಥವನ್ನು ವಿವರಿಸಿದೆ. ರಾತಿ ಶಬ್ದಕ್ಕೆ ದಾನವೆಂದು ಅರ್ಥವನ್ನು ಹೇಳಿದೆ. ಅಮವತೀ ಎಂಬ ಶಬ್ದವು ಅಮಾತ್ಯವಜನವೆಂದು ನಿರುಕ್ತಕಾರರು ಅರ್ಥವನ್ನು ಮಾಡಿದ್ದಾರೆ.

**ಕೃಣುಷ್ವಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾँ ಇಭೇನ ।**
**ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥**

(ಋ. ಸಂ. ೪-೪-೧)

ಈ ಋಕ್ಕಿನಲ್ಲಿ **ಅಮವಾನ್** ಎಂಬ ಪದಕ್ಕೆ (ರಾಜೇವ) **ಅಮಾತ್ಯವಾನ್ ಅಭ್ಯಮನವಾನ್** ಎಂಬ ಅರ್ಥವನ್ನು ಹೇಳಿದೆ. ದುರ್ಗಾಚಾರ್ಯರು ರಾಜನು ನೀತಿಯನ್ನು ತಿಳಿದವನಾಗಿ ನೀತಿಯನ್ನು ತಿಳಿದಿರುವ ಮಂತ್ರಿಯೊಡನೆ ಜಯವನ್ನು ಸಂಪಾದಿಸುವುದಕ್ಕಾಗಿ ಹೊರಡುವನು ಎಂದು ಅರ್ಥವನ್ನೂ **ಅಥವಾ ಅಭ್ಯಮನವಾನ್-ರೋಗಭೂತಃ ಪರೇಭ್ಯೋ ಭಯದಾತಾ** ರೋಗವು ಇತರರಿಗೆ ಭಯವನ್ನು ಉಂಟುಮಾಡುವಂತೆ ಶತ್ರುಗಳಿಗೆ ಭಯವನ್ನು ಉಂಟುಮಾಡುವವನು ಎಂದೂ ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ ಇಲ್ಲಿ ಈ ಎರಡು ವಿಧವಾದ ಅರ್ಥವನ್ನೂ ಸಾಯಣರು ಸಮರ್ಥನೆ ಮಾಡಿದ್ದಾರೆ.

ಮರುದ್ದೇವತೆಗಳ ಸಂಬಂಧಿಯಾದ ಆಗಮನವು ಪ್ರಭೂತವಾದ ಮತ್ತು ಶ್ರೇಷ್ಠವಾದ ಗುಣಗಳುಳ್ಳದ್ದಾಗಿ ಇರುವಂತೆ, ಮರುದ್ದೇವತೆಗಳು ಆಚರಿಸುವ ವೃಷ್ಟ್ಯುದಕದಾನವು ಇಂದ್ರನ ಸಹಾಯವುಳ್ಳದ್ದಾಗಿರುತ್ತದೆ ಎಂದು ಅರ್ಥ ಮಾಡಿ ರಾಜನನ್ನು ಹೋಲಿಸಿದೆ. ರಾಜನು ನೀತಿಯುಳ್ಳವನಾಗಿ, ನೀತಿಯನ್ನು ತಿಳಿದ ಮಂತ್ರಿಯೊಡನೆ ಸೇರಿ, ಸಹಾಯಸಂಪತ್ತಿನಿಂದ ಕೂಡಿ ತನ್ನ ಶತ್ರುಗಳನ್ನು ಜಯಿಸುವುದಕ್ಕೆ ಹೊರಡುವಹಾಗೆ, ಮರುತ್ತುಗಳೂ ವೃಷ್ಟಿಯನ್ನು ದಾನಮಾಡುವಾಗ ಇಂದ್ರನನ್ನೇ ಅಮಾತ್ಯನನ್ನಾಗಿ (ಸಹಾಯಕನನ್ನಾಗಿ) ಇರಿಸಿಕೊಂಡಿರುವರು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ.

ಎರಡನೆಯ ಅರ್ಥದಲ್ಲಿ ಮರುದ್ದೇವತೆಗಳು ಆಚರಿಸುವ ವೃಷ್ಟ್ಯುದಕದಾನವು ರಾಜನು ಶತ್ರುಗಳಿಗೆ ರೋಗದಂತೆ ಭಯಜನಕನಾಗಿರುವನು ಇತರರಿಗೆ ಭಯಜನಕವಾಗಿರುವುದಿಲ್ಲ ಎಂದು ವರ್ಣಿಸಿದೆ. ಅಮವತೀ ಎಂಬ ಶಬ್ದದ ಎರಡು ವಿಧವಾದ ಅರ್ಥಗಳಲ್ಲಿ ಒಂದು ಅರ್ಥವು ರಾಜನ ಉಪಮಾನಕ್ಕೆ ಅನುಗುಣವಾಗಿಯೂ, ಇನ್ನೊಂದು ಅರ್ಥವು ಅನನುಗುಣವಾಗಿಯೂ ಇರುತ್ತದೆ ಎಂದು ಹೇಳಿದೆ.

ಮತ್ತು ಸಾಯಣರು ಇಲ್ಲಿ ಇನ್ನೊಂದು ವಿಧವಾದ ಅರ್ಥವನ್ನು ವಿವರಿಸಿದ್ದಾರೆ—ಇದರಲ್ಲಿ ರಾಜವಿಷಯಕವಾದ ವ್ಯತಿರೇಕವು ಸೂಚಿತವಾಗಿದೆ. ರಾಜನ ಆಗಮನವು ಭಯದಿಂದ ಕೂಡಿರುವುದು ಮರುದ್ದೇವತೆಗಳ ಆಗಮನದಲ್ಲಿ ರೋಗಭಯವು ಯಾವಾಗಲೂ ಉಂಟಾಗಲು ಅವಕಾಶವಿರುವುದಿಲ್ಲ ಎಂದು ವ್ಯತಿರೇಕವು ಸೂಚಿತವಾದರೂ ಇತರ ವಿಶೇಷಣಗಳಿಂದ ರಾಜಾಗಮನಕ್ಕಿಂತ ಆಧಿಕ್ಯವೂ ಉಕ್ತವಾಗಿದೆ.

ಮರುತ್ತುಗಳ ಆಗಮನವು–**ಸ್ವರ್ವತೀ**—ಯಾವಾಗಲೂ ಸುಖವನ್ನು ಉಂಟುಮಾಡುವುದು, **ತ್ವೇಷಾ**–ಕಾಂತಿಯುಳ್ಳದ್ದಾಗಿರುವುದು, **ವಿಪಾಕಾ**–ಉತ್ತಮವಾದ ಫಲವನ್ನೂ ಉಂಟುಮಾಡುವುದು, **ಪಿಪಿಷ್ವತೀ**–ವ್ಯವಸಾಯಗಾರರಿಂದ ಸಸ್ಯಾದಿಗಳ ಅಭಿವೃದ್ಧಿಗಾಗಿ ಭೂಮಿಯನ್ನು ಸೀಳುವುದು ಮತ್ತು ಶತ್ರುಗಳನ್ನು ನಾಶಮಾಡುವುದು, **ಭದ್ರಾ**–ಸ್ತುತ್ಯರ್ಹವಾಗಿರುವುದು ಎಂದು ವರ್ಣಿತವಾಗಿದೆ.

**ಪೃಣತಃ ದಕ್ಷಿಣಾ ನ—ದಾತುರ್ಧನಿಕಸ್ಯ ದಕ್ಷಿಣೇವ ಸಮೃದ್ಧಿಕರೀ** । ಪೃಣತಃ ಎಂಬ ಪದವು ನಿರುಕ್ತಕಾರರಿಂದ—**ತಮೂರ್ದರಂ ನ ಪೃಣತಾ ಯವೇನ** (ಋ ಸಂ. ೨-೧೪-೧೧) ಎಂಬಲ್ಲಿ ಯವೇನ ಪೂರಯತಿ ಎಂದು ಪೂರಣಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವಿವೃತವಾಗಿದೆ ಇಲ್ಲಿ ಧನದಿಂದ ಪೂರಿತನಾದ ಧನವಂತನೆಂದು ಅರ್ಥಮಾಡಿದೆ. ಧನವಂತನು ದಕ್ಷಿಣಾರೂಪದಿಂದ ಕೊಡುವ ಧನವು ಸಮೃದ್ಧಿಯು (ಅಭಿವೃದ್ಧಿಯು) ಆಗುವಂತೆ ಮರುದ್ದೇವತೆಗಳ ಆಗಮನದಿಂದ ಅಭಿವೃದ್ಧಿಯು ಉಂಟಾಗುವುದೆಂದು ಉಪಮಾನವನ್ನು ತೋರಿಸಿ ಹೇಳಿದೆ.

**ಅಸುರ್ಯೇವ ಜಂಜತೀ—ಅಸುರಸ್ಯ ಸ್ವಭೂತಾ ಸರ್ವಾನಭಿಭವಂತೀ ಶಕ್ತಿರಿವ** । ಅಸುರ್ಯಾ ಎಂಬ ಪದಕ್ಕೆ ಅಸುರಸಂಬಂಧಿಯಾದ ಎಂದು ಅರ್ಥವನ್ನು ವಿವರಿಸಿದೆ. **ಅಸುರ** ಶಬ್ದವು ಮೇಘನಾಮಗಳಲ್ಲಿ (ನಿ. ೨-೨೨) ಉಕ್ತವಾಗಿದೆ. ಮತ್ತು **ಅಸೋರಸುರಾನಸೃಜತ ತದಸುರಾಣಾಮಸುರತ್ವಮಿತಿ ವಿಜ್ಞಾಯತೇ** (ನಿ. ೩-೮) ಎಂದು ವಿವೃತವಾಗಿದೆ. ದುರ್ಗಾಚಾರ್ಯರು **ಅಸುರಾಃ ಅಸುರತಾಃ ಸ್ಥಾನೇಷು**—ತಮ್ಮ ತಮ್ಮ ಸ್ಥಾನಗಳಲ್ಲಿ ನಿಶ್ಚಲರಾಗಿ ಇಲ್ಲದವರು ಅಸುರರು ಅಥವಾ **ಅಸ್ತಾಃ ಸ್ಥಾನೇಭ್ಯಃ** ದೇವತೆಗಳಿಂದ ಅವರು ತಮ್ಮ ಸ್ಥಾನಗಳಿಂದ ಓಡಿಸಲ್ಪಟ್ಟವರು ಎಂಬ ಅರ್ಥವನ್ನು ವಿವರಿಸಿದ್ದಾರೆ.

ಈ ಅಸುರರ ಶಕ್ತಿಯು (ಸಾಮರ್ಥ್ಯವು) ಎಲ್ಲರನ್ನೂ ತಿರಸ್ಕರಿಸುವುದಾಗಿರುವುದು. ಮತ್ತು **ಅನ್ಯೇಭ್ಯೋ ಅಪಹೃತ್ಯ ಅನ್ಯಸ್ಮೈ ದಾತುಂ ಸಮರ್ಥಾ** ಒಬ್ಬರ ದ್ರವ್ಯವನ್ನಾಗಲಿ, ಸ್ವತ್ತನ್ನಾಗಲಿ ಅವರಿಂದ ಅಪಹರಿಸಿ, ಇನ್ನೊಬ್ಬರಿಗೆ ಅದನ್ನು ಕೊಡಲು ಸಮರ್ಥವಾಗಿರುವುದು ಎಂದು ಸಾಯಣರು ಅಸುರಶಕ್ತಿಯ ಸ್ವಭಾವವನ್ನು ವಿವರಿಸಿದ್ದಾರೆ. ಇದರಂತೆ, ಮರುದ್ದೇವತೆಗಳ ಶಕ್ತಿಯು **ಮೇಘಸ್ಥಮುದಕಂ ಅಪಹೃತ್ಯ ಜಗತಃ ದಾತುಂ ಸಮರ್ಥಾ** ಮೇಘಗಳಲ್ಲಿರುವ ಉದಕಗಳನ್ನು ಜಗತ್ತಿಗೆ ವೃಷ್ಟಿರೂಪದಲ್ಲಿ ದಾನಮಾಡಲು ಉದ್ಯುಕ್ತವಾಗಿರುವುದು ಎಂದು ವರ್ಣಿಸಿದೆ.

ಇಲ್ಲಿ **ಯುಷ್ಮಾಕಂ ಸಂಬಂಧಿನೀ ಸಾತಿಃ ಯಥಾ ಪ್ರಶಸ್ತಗುಣಂ ತದ್ವತ್ ವಃ ರಾತಿಃ** ಎಂದು ಮರುದ್ದೇವತೆಗಳನ್ನು ಸಂಬೋಧಿಸಿ, ನಿಮ್ಮ ಸಂಬಂಧಿಯಾದ ಆಗಮನವು ಪ್ರಶಸ್ತವಾದ ಗುಣವುಳ್ಳದ್ದಾಗಿರುವಂತೆ ನೀವು ಅನುಗ್ರಹಿಸುವ ವೃಷ್ಟ್ಯುದಕರೂಪವಾದ ದಾನವೂ ಇರುವುದು ಎಂದು ಉಪಮಾನವನ್ನು ಹೇಳಿರುವುದರಿಂದ ಸಾತಿಯ ವಿಷಯಕವಾದ ಇತರ ವಿಶೇಷಣಗಳೆಲ್ಲವೂ ರಾತಿಗೂ ಸಂಬಂಧಪಟ್ಟವುಗಳಾಗಿರುತ್ತವೆ ಎಂದು ಸೂಚಿತವಾಗಿದೆ. ಮತ್ತು **ಈದೃಶೀ ರಾತಿಃ ಅಸ್ಮಭ್ಯಂ ಅಸ್ತು** ಇತಿ ಈ ಪ್ರಕಾರವಾದ ನಿಮ್ಮ ದಾನವು ಯಜ್ಞಮಾಡುವ ಯಜಮಾನರಾದ ನಮಗಾಗಿ ಇರಲಿ ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸಾತಿಃ—ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ.

**ಅಮುವತೀ**—ಅಮಃ ಅಸ್ಯಾಃ ಅಸ್ತಿ. ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ವತ್ವ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಜೀಪ್.

**ಸ್ವರ್ವತೀ**—ಹಿಂದಿನಂತೇ ಮತುಪ್, ವತ್ವ. ಜೀಪ್. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. **ನ್ಯಜ್ಸ್ವರೌ ಸ್ವರಿತೌ** (ಫಿ. ಸೂ. ೭೫) ಎಂಬುದರಿಂದ ಸ್ವರ್ ಎಂಬುದು ಸ್ವರಿತವಾಗುತ್ತದೆ.

**ರಾತಿಃ**—ರಾ ಆದಾನೇ. ಧಾತು. ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷಪಚ**—(ಪಾ ಸೂ. ೩-೩-೯೬) ಎಂಬುದರಿಂದ ಪ್ರತ್ಯಯ ಉದಾತ್ತವಾಗುತ್ತದೆ.

**ಪೃಣತಃ**—ಪೃಣ ಪ್ರೀಣನೇ. ಧಾತು. ಲಟಿಗೆ ಶತ್ರಾದೇಶ. ನುಮ್ ರಹಿತವಾದ ಶತೃವಿನ ಪರದಲ್ಲಿ ಷಷ್ಠೀ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಅಸುರ್ಯಾ**—ಅಸುರಸ್ಯ ಇಯಂ. ಸಂಬಂಧಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ತಿತ್ಸ್ವರಿತಂ** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್. ॥ ೭ ॥



॥ ಸಂಹಿತಾಪಾಠಃ ॥

**ಪ್ರತಿ ಷ್ಟೋಭಂತಿ ಸಿಂಧವಃ ಪವಿಭ್ಯೋ ಯದಭ್ರಿಯಾಂ ವಾಚಮುದೀರಯಂತಿ । ಅವ ಸ್ಮಯಂತ ವಿದ್ಯುತಃ ಪೃಥಿವ್ಯಾಂ ಯದೀ ಘೃತಂ ಮರುತಃ ಪ್ರುಷ್ಣುವಂತಿ ॥ ೮ ॥**

॥ ಪದಪಾಠಃ ॥

**ಪ್ರತಿ । ಸ್ತೋಭಂತಿ । ಸಿಂಧವಃ । ಪವಿಽಭ್ಯಃ । ಯತ್ । ಅಭ್ರಿಯಾಂ । ವಾಚಂ । ಉತ್ಽಈರಯಂತಿ । ಅವ । ಸ್ಮಯಂತ । ವಿಽದ್ಯುತಃ । ಪೃಥಿವ್ಯಾಂ । ಯದಿ । ಘೃತಂ । ಮರುತಃ । ಪ್ರುಷ್ಣುವಂತಿ ॥ ೮ ॥**

॥ ಸಾಯಣಭಾಷ್ಯಂ ॥

**ಪವಿಭ್ಯೋ ಮರುತ್ಸಂಬಂಧಿವಜ್ರೇಭ್ಯಃ ಸಿಂಧವಃ ಸ್ಯಂದನಶೀಲಾ ಆಪಃ ಪ್ರತಿ ಷ್ಟೋಭಂತಿ । ಪ್ರತಿಚಲಂತಿ । ಕದಾ । ಯದ್ಯದಾಭ್ರಿಯಾಮಭ್ರಭವಾಂ ವಾಚಂ ಶಬ್ದಂ ಸ್ತನಿತಲಕ್ಷಣಮುದೀರಯಂತಿ ಉಚ್ಚಾರಯಂತಿ ವಜ್ರಾಣಿ । ಕಿಂ ಚ ವಿದ್ಯುತೋ ವಿದ್ಯೋತಮಾನಾಸ್ತಡಿತಃ ಪೃಥಿವ್ಯಾಮಂತರಿಕ್ಷೇ ।**

ಪೃಥಿವೀತ್ಯಂತರಿಕ್ಷನಾಮ । ಪೃಥಿವೀ ಭೂರಿತಿ ತೆನ್ನಾಮಸೂಕ್ತತ್ವಾತ್ । ತತ್ರಾವ ಸ್ಮಯಂತೆ। ಸ್ಮಯಂತೇ । ಅವಾಙ್ಮುಖಂ ಪ್ರಕಾಶಂತೇ । ಪೃಥಿವ್ಯಾಮಿತ್ಯೇತದುತ್ತರತ್ರ ವಾ ಯೋಜ್ಯಂ । ಯದಿ ಯದಾ ಪೃಥಿವ್ಯಾಂ ಭೂಮ್ಯಾಂ ಘೃತಂ ಕ್ಷರದುದಕಂ ಮರುತಃ ಪ್ರುಷ್ಣುವಂತಿ ಪ್ರುಷ್ಣಂತಿ ಸಿಂಚಂತಿ ॥ ಪ್ರುಷೇಃ ಕ್ರ್ಯಾದಿಕಸ್ಯ ವ್ಯತ್ಯಯೇನ ಶ್ನುಃ ॥ ಯದ್ಯೇವಂ ತದೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್**— ಯಾವಾಗ । (**ವಜ್ರಾಣಿ**— ವಜ್ರಾಯುಧಗಳು) । **ಅಭ್ರಿಯಾಂ**— ಮೇಘಗಳಲ್ಲಿರುವ । **ವಾಚಂ**—(ಗುಡುಗಿನ ರೂಪವಾದ) ಶಬ್ದವನ್ನು । **ಉತ್ ಈರಯಂತಿ**—ಹೊರಡಿಸುತ್ತವೆಯೋ । (**ತತ್**— ಆಗ) । **ಸಿಂಧವಃ**— ಹರಿಯುವ ಸ್ವಭಾವವುಳ್ಳ ಉದಕಗಳು । **ಪವಿಭ್ಯಃ**— ಮರುತ್ಸಂಬಂಧಿಯಾದ) ವಜ್ರಾಯುಧಗಳಿಂದ । **ಪ್ರತಿ ಸ್ತೋಭಂತಿ**— ಹೊರಡುತ್ತವೆ । (**ಕಿಂಚ**— ಮತ್ತೂ) । **ಯದಿ**— ಯಾವಾಗ । **ಪೃಥಿವ್ಯಾಂ**—ಭೂಮಿಯಮೇಲೆ । **ಘೃತಂ**—ಉದಕವನ್ನು । **ಮರುತಃ**—ಮರುದ್ದೇವತೆಗಳು । **ಪ್ರುಷ್ಣುವಂತಿ**— ಚುಮುಕಿಸುತ್ತಾರೋ । (**ತದಾ**—ಆವಾಗ) । **ವಿದ್ಯುತಃ**— ಹೊಳೆಯುವ ಮಿಂಚುಗಳು । (**ಪೃಥಿವ್ಯಾಂ**— ಅಂತರಿಕ್ಷದಲ್ಲಿ) । **ಅವ ಸ್ಮಯಂತೆ**—ಅವಾಙ್ಮುಖವಾಗಿ ನಗುತ್ತವೆ (ಪ್ರಕಾಶಿಸುತ್ತವೆ).

॥ ಭಾವಾರ್ಥ ॥

ಮೇಘ ಗರ್ಜನೆಯಾಗುತ್ತಿರುವಾಗ ಉದಕಗಳು (ಮರುತ್ಸಂಬಂಧವಾದ) ವಜ್ರಾಯುಧಗಳಿಂದ ಹೊರಡಿಸಲ್ಪಡುತ್ತವೆ; ಹೀಗೆ ಮರುದ್ದೇವತೆಗಳು ಭೂಮಿಯ ಮೇಲೆ ನೀರು ಚುಮುಕಿಸುತ್ತಿರುವಾಗ, ಆಕಾಶದಲ್ಲಿ ಮಿಂಚು ಹೊಳೆಯುತ್ತದೆ.

English Translation.

The rivers are arrested by the thunderbolts when they utter the voice of the clouds ; but the lightnings smile in the firmament when the Maruts sprinkle water on the earth.

॥ ವಿಶೇಷವಿಷಯಗಳು ॥

**ಅಭ್ರಿಯಾಂ ವಾಚಂ ಉದೀರಯಂತಿ** — **ಅಭ್ರಭವಾಂ ಸ್ತನಿತಲಕ್ಷಣಾಂ ವಾಚಂ ಶಬ್ದಂ ಉಚ್ಚಾರಯಂತಿ** ವಜ್ರಾಯುಧದಿಂದ ಮೇಘಗಳಲ್ಲಿ ಗುಡುಗಿನ ಧ್ವನಿಯು ಉತ್ಪನ್ನವಾಗಿ, ಮಿಂಚುಗಳು ಅಂತರಿಕ್ಷದಲ್ಲಿ ಅವಾಙ್ಮುಖವಾಗಿ ಪ್ರಕಾಶಿಸಿದಾಗ, ಮರುದ್ದೇವತೆಗಳು ಭೂಮಿಯಲ್ಲಿ ಹರಿಯುವಂತೆ ಉದಕಗಳನ್ನು ಹಿಂಡುವರು. ಆಗ **ಸಿಂಧವಃ ಪ್ರತಿ ಷ್ಟೋಭಂತಿ ಸ್ಯಂದನಶೀಲಾಃ ಆಪಃ ಪ್ರತಿಚಲಂತಿ** ಹರಿಯುವ ಸ್ವಭಾವದಿಂದ ಇರುವ ಉದಕಗಳು ಭೂಮಿಯಲ್ಲಿಯೂ ಅಂತರಿಕ್ಷದಲ್ಲಿಯೂ ಚಲಿಸುತ್ತವೆ ಎಂದು ಅರ್ಥವನ್ನು ವಿವರಿಸಿದೆ. ಎಂದರೆ ವೃಷ್ಟಿರೂಪದಿಂದ ಬಿದ್ದ ಮಳೆಯ ನೀರು ಭೂಮಿಯಮೇಲೆ ಬಿದ್ದು ಹರಿಯುತ್ತದೆ.

**ಪವಿಭ್ಯಃ—ಮರುತ್ಸಂಬಂಧಿ ವಜ್ರೇಭ್ಯಃ** । **ಪವಿ** ಶಬ್ದವು **ವಾಙ್ನಾ**ಮಗಳಲ್ಲಿಯೂ (ನಿ. ೨–೨೩) ವಜ್ರನಾಮಗಳಲ್ಲಿಯೂ (ನಿ. ೩–೧೧) ಉಕ್ತವಾಗಿದೆ ಮತ್ತು **ಪವಿಃ ರಥನೇಮಿರ್ಭವತಿ ಯದ್ವಿಪುನಾತಿ ಭೂಮಿಂ** ಭೂಮಿಯನ್ನು ಸೀಳುವ ರಥದ ಚಕ್ರದ ಅಲಗಿನಿಂದ ಉಂಟಾದ ಗುರುತು ಪವಿ ಎಂದು ಪ್ರಸಿದ್ಧವಾಗಿದೆ ಎಂದು ಯಾಸ್ಕರು ವಿವರಿಸಿ,

**ಉತ ಸ್ಮ ತೇ ಪರುಷ್ಣ್ಯಾಮೂರ್ಣಾ ವಸತ ಶುಂಧ್ಯವಃ ।**
**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ॥**

(ಋ. ಸಂ. ೫–೫೨–೯)

ಎಂಬ ಋಕ್ಕನ್ನು ಉದಹರಿಸಿ **ಪವಿಃ ರಥನೇಮಿರ್ಭವತಿ** ರಥಚಕ್ರದ ಪಟ್ಟಿಯು ಎಂದು ಅರ್ಥವನ್ನು ಹೇಳಿದ್ದಾರೆ. ದುರ್ಗಾಚಾರ್ಯರು **ದೇವಾ ವೈ ವೃತ್ರಸ್ಯ ಮರ್ಮ ನಾವಿದನ್ ತಂ ಮರುತಃ ಕ್ಷುರಪವಿನಾ ವ್ಯಯುಃ**— ದೇವತೆಗಳು ವೃತ್ರಾಸುರನ ಮರ್ಮವನ್ನು ತಿಳಿಯದಿರುವಾಗ ಮರುದ್ದೇವತೆಗಳು ಕ್ಷುರಧಾರಾಕೃತಿಯಾಗಿರುವ ಹರಿತವಾದ ಅಲಗುಗಳುಳ್ಳ ವಜ್ರಾಯುಧದಂತಿರುವ ಚಕ್ರದ ಪಟ್ಟಿಗಳಿಂದ ಸೀಳಿದರು ಎಂದರೆ, ಮರುತ್ತುಗಳು ಮೇಘವನ್ನು ತಮ್ಮ ರಥದ ತೀಕ್ಷ್ಣಧಾರೆಗಳಿಂದ (ಪವಿಗಳಿಂದ) ಸೀಳಿದರು ಎಂದು ಅರ್ಥವನ್ನು ವರ್ಣಿಸಿದ್ದಾರೆ. ಈ ಅರ್ಥವನ್ನು ಸಾಯಣರು ತಮ್ಮ ವ್ಯಾಖ್ಯಾನದಲ್ಲಿ ಅಂಗೀಕರಿಸಿ, **ಪವಿಭ್ಯಃ ಸಿಂಧವಃ ಪ್ರತಿ ಷ್ಟೋಭಂತಿ** ಎಂಬ ಈ ವಾಕ್ಯದಲ್ಲಿ **ಮರುತ್ಸಂಬಂಧಿ ವಜ್ರೇಭ್ಯಃ** ಮರುದ್ದೇವತೆಗಳಿಗೆ ಸಂಬಂಧಿಸಿದ ರಥಚಕ್ರದ ಪಟ್ಟಿಗಳೆಂಬ (ವೃಷ್ಟಿಧಾರೆಗಳೆಂಬ) ಅರ್ಥವನ್ನು ವಿವರಿಸಿದ್ದಾರೆ.

**ಸಿಂಧವಃ— ಸ್ಯಂದನಶೀಲಾಃ ಆಪಃ ಸಿಂಧವಃ** ಎಂದು ನದೀನಾಮಗಳಲ್ಲಿ (ನಿ. ೨–೨೪) ಉಕ್ತವಾಗಿದೆ. ಮತ್ತು—

**ಸುದೇವೋ ಅಸಿ ವರುಣ ಯಸ್ಯ ತೇ ಸಪ್ತ ಸಿಂಧವಃ ।**
**ಅನುಕ್ಷರಂತಿ ಕಾಕುದಂ ಸೂರ್ಮ್ಯಂ ಸುಷಿರಾಮಿವ ॥**

(ಋ. ಸಂ. ೮-೬೯-೧೨)

ಈ ಋಕ್ಕಿನಲ್ಲಿ **ಸಿಂಧುಃ ಸ್ರವಣಾತ್** ಸ್ರವಿಸುವುದರಿಂದ (ಹರಿಯುವುದರಿಂದ) ಉದಕಕ್ಕೆ ಸಿಂಧು ಎಂದು ಹೆಸರು ಪ್ರಸಿದ್ಧವಾಗಿದೆ ಎಂಬ ಅರ್ಥವನ್ನು ವಿವರಿಸಿದೆ.

**ಪೃಥಿವ್ಯಾಂ— ಅಂತರಿಕ್ಷೇ, ಭೂಮ್ಯಾಂ** । ಪೃಥಿವೀ ಎಂಬ ಪದವು ಪೃಥಿವೀನಾಮಗಳಲ್ಲಿಯೂ (ನಿ. ೨-೫) ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಉಕ್ತವಾಗಿದೆ. ಇಲ್ಲಿ ಎರಡು ವಿಧವಾದ (ಅಂತರಿಕ್ಷ, ಭೂಮಿ) ಅರ್ಥಗಳನ್ನು ವಿವರಿಸಿದೆ.

**ಘೃತಂ— ಕ್ಷರದುದಕಂ** । ಘೃತಶಬ್ದವು (ನಿ. ೨-೨೪) ಉದಕನಾಮಗಳಲ್ಲಿ, ಪಠಿತವಾಗಿದೆ. ಮತ್ತು

**ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ ।**
**ತ ಆವವೃತ್ರನ್ತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ।**

(ಋ ಸಂ.೧-೧೬೪-೪೭)

ಈ ಋಕ್ಕಿನಲ್ಲಿ ಘೃತೇನ ಎಂಬ ಪದಕ್ಕೆ ಉದಕೇನ ಎಂದು ಅರ್ಥವನ್ನು ಮಾಡಿದೆ. **ಘೃತಮಿತ್ಯುದಕನಾಮ ಜಿಘರ್ತೇಃ ಸಿಂಚತಿಕರ್ಮಣಃ** ಸೇಚನಮಾಡು ಎಂಬ ಅರ್ಥವನ್ನು ಬೋಧಿಸುವ ಘೃ ಧಾತುವಿನಿಂದ ನಿಷ್ಪನ್ನ ವಾದ ಘೃತ ಶಬ್ದಕ್ಕೆ ಉದಕ ಎಂದು ಅರ್ಥವನ್ನು ಯಾಸ್ಕರು ವರ್ಣಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ತೋಭಂತಿ**—ಷ್ಟುಭು ಸ್ತಂಭೇ. ಧಾತು. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಲಟ್ ಪ್ರಥಮ ಪುರುಷ ಏಕವಚನಾಂತರೂಪ. ಪ್ರತಿ ಎಂಬ ಉಪಸರ್ಗ ಹಿಂದೆ ಇರುವುದರಿಂದ **ಉಪಸರ್ಗಾತ್ ಸುನೋತಿ**—(ಪಾ. ಸೂ. ೮-೩-೬೫) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. ತಿಙಂತನಿಘಾತಸ್ವರ ಬರುತ್ತದೆ.

**ಪವಿಭ್ಯಃ**—ಪೂಙ್ ಪವನೇ. ಧಾತು. **ಅಚ ಇಃ** (ಉ. ಸೂ. ೫೭೮) ಎಂಬುದರಿಂದ ಇ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ, ಅವಾದೇಶ. ಪ್ರತ್ಯಯಸ್ವರ ಬರುತ್ತದೆ.

**ಅಭ್ರಿಯಾಂ**--ಅಭ್ರೇ ಭವಾ. ಅಭ್ರಿಯಾ. **ಸಮುದ್ರಾಭ್ರಾದ್ಘಃ** (ಪಾ. ಸೂ. ೪-೪-೧೧೮) ಎಂಬುದರಿಂದ ಘ ಪ್ರತ್ಯಯ. **ಆಯನೇಯೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಉದೀರಯಂತಿ**-ಈರ ಗತೌ ಪ್ರೇರಣೇ ಚ. ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. ಣಿಜಂತದ ಮೇಲೆ ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಉತ್) ನಿಘಾತ ಸ್ವರ ಬರುತ್ತದೆ.

**ಸ್ಮಯಂತೇ**—ಸ್ಮಿಙ್ ಈಷದ್ಧಸನೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮ ಪುರುಷ ಬಹುವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ

**ಯದಿ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಪೃಷ್ಣುವಂತಿ**—ಪೃಷ ಸ್ನೇಹನಸೇವನಪೂರಣೇಷು. ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ನು ವಿಕರಣ ಬರುತ್ತದೆ. ಪ್ರತ್ಯಯ ಗಳಿಗೆ ಙಿತ್ವಾದೇಶವಿರುವುದರಿಂದ ಗುಣ ಬರುವುದಿಲ್ಲ. **ಅಚಿಶ್ನುಧಾತು**—ಎಂಬುದರಿಂದ ಉವಙಾದೇಶ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ಯದಿ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಅಸೂತ ಪೃಶ್ನಿರ್ಮಹತೇ ರಣಾಯ ತ್ವೇಷಮಯಾಸಾಂ ಮರುತಾಮನೀಕಂ ।
ತೇ ಸಪ್ಸರಾಸೋಽಜನಯಂತಾಭ್ವಮಾದಿತ್ಸ್ವಧಾಮಿಷಿರಾಂ ಪರ್ಯಪಶ್ಯನ್ ॥ ೯ ॥

॥ ಪದಪಾಠಃ ॥

ಅಸೂತ । ಪೃಶ್ನಿಃ । ಮಹತೇ । ರಣಾಯ । ತ್ವೇಷಂ । ಅಯಾಸಾಂ । ಮರುತಾಂ । ಅನೀಕಂ ।
ತೇ । ಸಪ್ಸರಾಸಃ । ಅಜನಯಂತ । ಅಭ್ವಂ । ಆತ್ । ಇತ್ । ಸ್ವಧಾಂ । ಇಷಿರಾಂ । ಪರಿ । ಅಪಶ್ಯನ್ ॥

॥ ಸಾಯಣಭಾಷ್ಯಂ ॥

ಪೃಶ್ನಿರ್ಮರುನ್ಮಾತಾ ನಾನಾವರ್ಣಾ । ಪೃಶ್ನ್ಯೈ ವೈ ಪಯಸೋ ಮರುತೋ ಜಾತಾಃ । ತೈ. ಸಂ. ೨-೨-೧೧-೪ । ಪೃಶ್ನೇಃ ಪುತ್ರಾ ಉಪಮಾಸಃ । ಋ. ೫-೫೮-೫ । ಇತ್ಯಾದಿಶ್ರುತೇಃ । ತಾಮೇವಾಂತರಿಕ್ಷ-ದೇವತಾಂ ಕೇಚಿದಾಹುಃ । ಸಾ ದೇವೀ ತ್ವೇಷಂ ದೀಪ್ತಮಯಾಸಾಂ ಗಂತ್ರೀಣಾಂ ಮರುತಾಮನೀಕಂ ಸಮೂಹಮೇಕೋನಪಂಚಾಶತ್ಸಂಖ್ಯಾಕಮಸೂತ । ಉತ್ಪಾದಿತವತೀ । ಕಿಮರ್ಥಂ । ಮಹತೇ ರಣಾಯ ಸಂಗ್ರಾಮಾಯ । ಮೇಘಜಯಾಯೇತ್ಯರ್ಥಃ । ತೇ ಚ ಮರುತಃ ಸಪ್ಸರಾಸಃ ಸಮಾನರೂಪಾ ಹಿಂಸಕಾ ವಾ ಮೇಘಾನಾಮಭ್ವಂ ಮೇಘಂ ಜನಯಂತಿ । ಉತ್ಪಾದಿತವಂತಃ । ಆದಿದನಂತರಮೇವೇಷಿರಾಂ ಸರ್ವೈರೇಷ್ಟವ್ಯಾಂ ಸ್ವಧಾಮನ್ನಂ ಸಸ್ಯಾದಿಸಮೃದ್ಧಿಲಕ್ಷಣಂ ಪರ್ಯಪಶ್ಯನ್ । ಪರಿಪಶ್ಯಂತಿ ಸರ್ವೇ ಜನಾಃ ॥

॥ ಪ್ರತಿಪದಾರ್ಥ ॥

**ಪೃಶ್ನಿಃ**—ನಾನಾವರ್ಣವಾದ ಆಕಾಶವು (ಪೃಶ್ನಿನಾಮಕ ದೇವತೆಯು) । **ತ್ವೇಷಂ**—ಉಜ್ಜ್ವಲವಾದ । **ಅಯಾಸಾಂ**—ಗಮನಶೀಲರಾದ । **ಮರುತಾಂ**—ಮರುದ್ದೇವತೆಗಳ । **ಅನೀಕಂ**—ಸಮೂಹವನ್ನು । **ಮಹತೇ ರಣಾಯ**—(ಮೇಘಜಯರೂಪವಾದ) ದೊಡ್ಡಯುದ್ಧಕ್ಕೋಸ್ಕರ । **ಅಸೂತ**—ಉತ್ಪತ್ತಿಮಾಡಿತು । **ಸಪ್ಸರಾಸಃ**-ಸಮಾನರೂಪರಾದ ಅಥವಾ ಮೇಘಗಳ ಹಿಂಸಕರಾದ । **ತೇ**—ಆ ಮರುದ್ದೇವತೆಗಳು । **ಅಭ್ವಂ**—ಮೇಘವನ್ನು । **ಅಜನಯಂತ**—ಸೃಜಿಸಿದರು । **ಆತ್ ಇತ್**—ಅನಂತರವೇ । **ಇಷಿರಾಂ**— ಸರ್ವರಿಂದ ಅಪೇಕ್ಷಣೀಯವಾದ । **ಸ್ವಧಾಂ**—(ಸಸ್ಯಾದಿರೂಪವಾದ) ಅನ್ನವನ್ನು । **ಪರಿ ಅಪಶ್ಯನ್**—(ಜನರು) ನೋಡಿದರು.

॥ ಭಾವಾರ್ಥ ॥

ನಾನಾವರ್ಣವಾದ ಆಕಾಶವು (ಅಥವಾ ಪೃಶ್ನಿನಾಮಕದೇವತೆಯು) ಉಜ್ಜ್ವಲವಾದ ಮರುದ್ಗಣವನ್ನು ಮೇಘಜಯರೂಪವಾದ ಮಹಾರಣಕ್ಕೋಸ್ಕರ ಸೃಜಿಸಿದ ಮೇಲೆ, ಆ ಮರುದ್ದೇವತೆಗಳಿಂದ ಮೇಘವು ಸೃಷ್ಟವಾಯಿತು. ಅನಂತರವೇ (ಜನರು) ಸಸ್ಯಾದಿ ಸಮೃದ್ಧಿಯನ್ನು ಕಂಡರು.

English Translation.

Prishni bore the brilliant troop of the quick-moving Maruts for the great combat (with the clouds), whercupon (mankind) immediately beheld the desiderated food.

॥ ವಿಶೇಷವಿಷಯಗಳು ॥

**ಪೃಶ್ನಿಃ—ಮರುನ್ಮಾತಾ ನಾನಾವರ್ಣಾ । ತಾಮೇವಾಂತರಿಕ್ಷದೇವತಾಂ ಕೇಚಿದಾಹುಃ ।** ಪೃಶ್ನಿ ಎಂಬ ಶಬ್ದವು **ಸ್ವಃ ನಾಕಃ** ಎಂಬ ಅಂತರಿಕ್ಷ ಮತ್ತು ಆದಿತ್ಯರ ಸಾಧಾರಣ ನಾಮಗಳಲ್ಲಿ (ನಿ. ೨-೧೩) ಉಕ್ತವಾಗಿದೆ ಮತ್ತು **ಪೃಶ್ನಿರಾದಿತ್ಯೋ ಭವತಿ ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ** (ನಿ. ೨-೧೪). ಪ್ರಭೂತವಾದ ವರ್ಣವು ಇವನನ್ನು ಅತಿಶಯವಾದ ರೀತಿಯಿಂದ ವ್ಯಾಪಿಸುವ ಕಾರಣ ಆದಿತ್ಯನು ಪೃಶ್ನಿ ಎನಿಸುವನು ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಪೃಶ್ನಿ ಎಂಬ ದೇವಿಯು ಮರುತ್ತುಗಳ ಜನನಿಯು ಎಂದೂ, ಇವಳು ನಾನಾವರ್ಣವುಳ್ಳವಳಾಗಿರುವಳೆಂದೂ ಒಂದು ವಿಧವಾದ ಅರ್ಥವನ್ನು ವಿವರಿಸಿ, ಅಂತರಿಕ್ಷಾಭಿಮಾನಿಯಾದ ದೇವತೆಯಾಗಿ ಇವಳೇ ಇರುವಳೆಂದು ಹೇಳುವ ಕೆಲವರ ಮತವನ್ನು ಹೇಳಿದ್ದಾರೆ. ಮತ್ತು ಪೃಶ್ನಿಯು ಮರುತ್ತುಗಳ ಮಾತೃವೆಂಬ ವಿಷಯದಲ್ಲಿ **" ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ "** (ತೈ. ಸಂ. ೨-೨-೧೧-೪) ಎಂಬ ತೈತ್ತಿರೀಯ ಸಂಹಿತೆಯ ವಾಕ್ಯವನ್ನೂ, **ಪೃಶ್ನೇಃ ಪುತ್ರಾಃ ಉಪಮಾಸಃ** (ಋ. ಸಂ. ೫-೫೮-೫) ಎಂಬ ಋಕ್ಸಂಹಿತಾವಾಕ್ಯವನ್ನೂ ಉದಹರಿಸಿದ್ದಾರೆ.

**ಸಾ ದೇವೀ ತ್ವೇಷಂ ಅಯಾಸಾಂ ಮರುತಾಮನೀಕಂ ಅಸೂತ**—ಪೃಶ್ನಿದೇವಿಯು ಕಾಂತಿಯುಳ್ಳದಾಗಿಯೂ ಸಂಚರಣ ಶೀಲವಾಗಿಯೂ ಇರುವ ಏಕೋನಪಂಚಾಶತ್ ಸಂಖ್ಯಾತವಾಗಿರುವ (೪೯ ಜನರುಳ್ಳ) ಮರುತ್ತುಗಳ ಸಮೂಹವನ್ನು ಉತ್ಪನ್ನಮಾಡಿರುವಳು. ಎಂದು ಅರ್ಥವನ್ನು ವಿವರಿಸಿ, **ಮಹತೇ ರಣಾಯ ಸಂಗ್ರಾಮಾಯ ಮೇಘ ಜಯಾಯ**—ಈ ಮರುತ್ತುಗಳು ಮೇಘಗಳೊಡನೆ ಯುದ್ಧವನ್ನು ಮಾಡಿ ಜಯಶೀಲರಾಗಲು ಎಂದು ವರ್ಣಿಸಿದೆ.

**ಸಪ್ಸರಾಸಃ ಅಭ್ವಂ—ಸಮಾನರೂಪಾ ಹಿಂಸಕಾ ವಾ ಮೇಘಾನಾಂ । ಮೇಘಂ ಜನಯಂತಿ ಉತ್ಪಾದಿತವಂತಃ ।** ಮರುದ್ದೇವತೆಗಳು ಎಲ್ಲರೂ ಒಂದೇಸಮನಾದ ರೂಪವುಳ್ಳವರಾಗಿ ಇರುವರು ಮತ್ತು ಇವರು ಮೇಘಗಳನ್ನು ಹಿಂಸೆ ಪಡಿಸುವರು ಎಂದು ಸಪ್ಸರಾಸಃ ಎಂಬ ಪದಕ್ಕೆ ಅರ್ಥವನ್ನು ಮಾಡಿದೆ. ಅಭ್ವಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಪಠಿತವಾಗಿದೆ ಮತ್ತು ಮಹನ್ನಾಮಗಳಲ್ಲಿಯೂ (ನಿ. ೩-೧೩) ಉಕ್ತವಾಗಿದೆ. ಇಲ್ಲಿ ಈ ಪದಕ್ಕೆ ಮೇಘವೆಂಬ ಅರ್ಥವನ್ನು ವರ್ಣಿಸಿ, ಮರುತ್ತುಗಳು ಮೇಘವನ್ನು ಉತ್ಪತ್ತಿ ಮಾಡುವರೆಂದು ಹೇಳಿದೆ.

**ಆದಿತ್ ಇಷಿರಾಂ ಸ್ವಧಾಂ ಪರ್ಯಪಶ್ಯನ್—ಅನಂತರಮೇವ ಸರ್ವೈರೇಷ್ಟವ್ಯಾಂ ಅನ್ನಂ ಸಸ್ಯಾದಿ ಸಮೃದ್ಧಿ ಲಕ್ಷಣಂ ಪರಿಪಶ್ಯಂತಿ ಸರ್ವೇ ಜನಾಃ ।** ಮರುದ್ದೇವತೆಗಳು ಮೇಘವನ್ನು ಉತ್ಪನ್ನಮಾಡಿದನಂತರವೇ ಪ್ರಪಂಚದ ಜನರೆಲ್ಲರೂ ತಮಗೆ ಅಭಿಲಷಿತವಾದ ಅನ್ನವು ಸಸ್ಯವೇ ಮೊದಲಾದವುಗಳ ಸಮೃದ್ಧಿಯಿಂದ ಉಂಟಾಗುವುದೆಂದು ತಿಳಿಯುತ್ತಾರೆ ಎಂದು ವಿವರಿಸಿದೆ.

ಸ್ವಧಾ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಅನ್ನನಾಮಗಳಲ್ಲಿಯೂ (ನಿ. ೨-೯) ಪಠಿತವಾಗಿದೆ. ಸ್ವಧೆ ಎಂದು ದ್ಯಾವಾ ಪೃಥಿವೀ ನಾಮಗಳಲ್ಲಿ (ನಿ ೩ ೨೨) ಉಕ್ತವಾಗಿದೆ. ಇಲ್ಲಿ ಸಸ್ಯಾದಿ (ರೂಪ) ಗಳಿಂದ ಉತ್ಪನ್ನ ವಾಗುವ ಅನ್ನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ

॥ ವ್ಯಾಕರಣಪ್ರಕ್ರಿಯಾ ॥

**ಅಸೂತ**—ಷೂಙ್ ಪ್ರಾಣಿಗರ್ಭವಿಮೋಚನೇ. ಧಾತು. ಲಙ್‌ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ, ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಯಾಸಾಂ**—ಅಯ ಗತೌ. ಧಾತು. ಅಯಂತೇ ಇತಿ ಅಯಾಃ ಶೇಷಾಂ ಅಯಾಸಾಂ. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹ ಪಚಾ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಷಷ್ಠೀ ಬಹು ವಚನ ಪರವಾದಾಗ ವ್ಯತ್ಯಯದಿಂದ ಅದಕ್ಕೆ ಸುಟಾಗಮ.

**ಅನೀಕಂ**—ಅನ ಪ್ರಾಣನೇ ಧಾತು. **ಅನಿಹೃಷಿಭ್ಯಾಂ ಕಿಚ್ಚ** (ಉ. ಸೂ. ೪೫೭) ಎಂಬುದರಿಂದ ಈಕನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಪ್ಸರಾಸಃ**—ಪ್ಸಾ ಭಕ್ಷಣೇ. ಪ್ಸಾತಿ ಭಕ್ಷಯತಿ ಇತಿ ಪ್ಸರಃ ರೂಪಂ. ಔಣಾದಿಕ ಡರ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ (ಆಕಾರ) ಲೋಪ. ಸಮಾನಃ ಪ್ಸರಃ ಯೇಷಾಂ ತೇ ಸಪ್ಸರಾಸಃ | **ಸಮಾನಸ್ಯ ಛಂದಸಿ**—(ಪಾ. ಸೂ. ೬-೩-೮೪) ಎಂಬುದರಿಂದ ಸಮಾನಕ್ಕೆ ಸಭಾವ. **ಸಮಾನಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ.೭-೧-೬೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅಜನಯಂತ**—ಜನೀ ಪ್ರಾದುರ್ಭಾವೇ. ಧಾತು. **ಛಂದಸಿ ಲುಙ್**—(ಪಾ. ಸೂ. ೩-೪--೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. **ಹೇತುಮತಿ ಚ** ಎಂಬುದರಿಂದ ಣಿಚ್. ಉಪಧಾವೃದ್ಧಿ ಬಂದಾಗ ಮಿತ್ ಸಂಜ್ಞಾ ಇರುವುದರಿಂದ **ಮಿತಾಂ ಹ್ರಸ್ವಃ** ಎಂಬುದರಿಂದ ಹ್ರಸ್ವ ಬರುತ್ತದೆ. ಪ್ರಥಮ ಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಇಷಿರಾಂ**—ಇಷು ಇಚ್ಛಾಯಾಂ ಧಾತು. **ಇಷಿಮದಿಮುದಿ** (ಉ. ಸೂ. ೫೧) ಎಂಬುದರಿಂದ ಕಿರಚ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಅಪಶ್ಯನ್**—ದೃಶಿರ್ ಪ್ರೇಕ್ಷಣೇ. ಧಾತು. ಛಾಂದಸವಾಗಿ ವರ್ತಮಾನದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಏಷ ವಃ ಸ್ತೋಮೋ ಮರುತ ಇಯಂ ಗೀರ್ಮಾಂದಾರ್ಯಸ್ಯ ಮಾನ್ಯಸ್ಯ
ಕಾರೋಃ ।
ಏಷಾ ಯಾಸೀಷ್ಟ ತನ್ವೇ ವಯಾಂ ವಿದ್ಯಾಮೇಷಂ ವೃಜನಂ ಜೀರ-
ದಾನುಂ ॥ ೧೦ ॥

॥ ಪದಪಾಠಃ ॥

ಏಷಃ । ವಃ । ಸ್ತೋಮಃ । ಮರುತಃ । ಇಯಂ । ಗೀಃ । ಮಾಂದಾರ್ಯಸ್ಯ । ಮಾನ್ಯಸ್ಯ । ಕಾರೋಃ ।
ಆ । ಇಷಾ । ಯಾಸೀಷ್ಟ । ತನ್ವೇ । ವಯಾಂ । ವಿದ್ಯಾಮ । ಇಷಂ । ವೃಜನಂ । ಜೀರऽದಾನುಂ ॥ ೧೦ ॥

॥ ಸಾಯಣಭಾಷ್ಯಂ ॥

ಅಥ ಪಂಚದಶ್ಯಾಂ ಸೂಕ್ತೋಪಕ್ರಮಮಾರಭ್ಯ ಕೃತಾಂ ಸ್ತುತಿಂ ಮರುದ್ಭ್ಯೋ ನಿವೇದ್ಯಾಭಿಮತಮಾಶಾಸ್ತೇ ॥

ಹೇ ಮರುತಃ ಏಷ ಸ್ತೋಮ ಇದಾನೀಂಕ್ರಿಯಮಾಣಪ್ರಕಾರಂ ಸ್ತೋತ್ರಂ ವೋ ಯುಷ್ಮದರ್ಥಂ। ಯುಷ್ಮತ್ಪ್ರೀಣನಾಯ ಭವತ್ವಿತ್ಯರ್ಥಃ । ತಥೇಯಂ ಗೀಃ ಸ್ತುತಿರೂಪಾ ವಾಗಪಿ ವೋ ಯುಷ್ಮದರ್ಥಾಯ । ಯಸ್ಮಾದೇವಂ ತಸ್ಮಾನ್ಮಾಂದಾರ್ಯಸ್ಯ ಸ್ತುತಿವಿಶೇಷೈರ್ಮದಯಿತುಃ ಸ್ತುತಿಭಿರ್ಮದಸ್ಯ ಪ್ರೇರಯಿತುರ್ವಾ ಮಾನ್ಯಸ್ಯ ವರಪ್ರದಾನಾದಿನಾ ಮಾನನೀಯಸ್ಯ ಕಾರೋಃ ಸ್ತೋತುರಿಷೇಚ್ಛಯಾ ಯಾಸೀಷ್ಟ । ಆಗಚ್ಛತ । ಕಿಮರ್ಥಂ । ತನ್ವೇ ಶರೀರಾಯ । ತತ್ಪೋಷಾಯೇತ್ಯರ್ಥಃ । ವಯಾಂ ವಯಮಪೀಷಮನ್ನಂ ವೃಜನಂ ಬಲಂ ಜೀರದಾನುಂ ಜಯಶೀಲದಾನಮೇತತ್ಸರ್ವಂ ವಿದ್ಯಾಮ । ಯುಷ್ಮಾಸ್ವಾಗತೇಷು ಯಜ್ಞಸಂಪೂರ್ತ್ಯೇಷ್ಟ್ಯಾದಿದ್ವಾರಾ ಲಭೇಮಹಿ ॥

॥ ಪ್ರತಿಪದಾರ್ಥ ॥

(ಹೇ) **ಮರುತಃ**—ಎಲೈ ಮರುದ್ದೇವತೆಗಳೇ ।  **ಮಾಂದಾರ್ಯಸ್ಯ**—ಸ್ತುತಿಗಳಿಂದ ಆನಂದವನ್ನುಂಟುಮಾಡುವವನೂ । **ಮಾನ್ಯಸ್ಯ**—ಮಾನನೀಯನೂ ಆದ । **ಕಾರೋಃ**—ಸ್ತುತಿಕರ್ತೃವಿನ । **ಏಷಃ ಸ್ತೋಮಃ**—ಈವರೆಗೆ ಮಾಡಿದಸ್ತುತಿಯು । **ವಃ**—ನಿಮಗೋಸ್ಕರ (ಆಗಲಿ) । (**ತಥಾ**—ಹಾಗೆಯೇ) ' **ಇಯಂ ಗೀಃ**—ಈ (ಸ್ತುತಿರೂಪ) ವಾಕ್ಕೂ । (**ವಃ**—ನಿಮಗೋಸ್ಕರ ಆಗಲಿ) । [**ಮಾಂದಾರ್ಯಸ್ಯ**—ಸ್ತುತಿಗಳಿಂದ ನಿಮ್ಮನ್ನು ತೃಪ್ತಿಪಡಿಸುವವನೂ । **ಮಾನ್ಯಸ್ಯ**—ಆದುದರಿಂದಲೇ ಪೂಜಾರ್ಹನೂ ಆದ । **ಕಾರೋಃ**—ಈ ಸ್ತುತಿಕರ್ತೃವಿನ] ।

**ಇಷಾ**—ಇಚ್ಛೆಯಿಂದ । **ತನ್ವೇ**—(ನಿಮ್ಮ) ಶರೀರ ಅಭಿವೃದ್ಧಿಗೋಸ್ಕರ । **ಆ ಯಾಸೀಷ್ಟ**—(ಸ್ತುತಿಯು ನಿಮ್ಮನ್ನು) ಉದ್ದೇಶಿಸಿ ಗಮಿಸಲಿ । **ವಯಂ**—ನಾವೂ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಸ್ಸನ್ನೂ । **ವಿದ್ಯಾಮ**—ಪಡೆಯೋಣ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮನ್ನು ಸ್ತುತಿಗಳಿಂದ ತೃಪ್ತಿ ಪಡಿಸುವವರೂ, ಪೂಜಾರ್ಹರೂ ಆದ ಸ್ತುತಿ ಕರ್ತೃಗಳಾದ ನಮ್ಮ ಸ್ತುತಿಯು ನಿಮಗೆ (ಆನಂದದಾಯಕ) ವಾಗಲಿ; ನಮ್ಮ ಇಚ್ಛೆಯಿಂದ, ಈ ಸ್ತುತಿಯು ನಿಮ್ಮ ಶರೀರಾಭಿವೃದ್ಧಿಕಾರಕವಾಗಲಿ; ನಮಗೂ (ನಿಮ್ಮನುಗ್ರಹದಿಂದ) ಆಹಾರ, ಬಲ, ದೀರ್ಘಾಯುಸ್ಸುಗಳೂ ಅನುಗೃಹೀತವಾಗಲಿ.

## English Translation.

This praise, Maruts, is for you: this hymn is for you, (the work) of a venerable author, capable of conferring delight (by his laudations): may the praise reach you for (the good of your) persons, so that we may thence obtain food, strength, and long life.

॥ ವಿಶೇಷವಿಷಯಗಳು ॥

**ಮಾಂದಾರ್ಯಸ್ಯ ಮಾನ್ಯಸ್ಯ**—ಎಂಬುದಕ್ಕೆ ಸಾಯಣರು ಆ ಪದಗಳಿಗೆ ಅವಯವಾರ್ಥಗಳನ್ನು ಹೇಳುವಾಗ ಮಾಂದಾರ್ಯಸ್ಯ ಎಂದರೆ ಹರ್ಷವನ್ನುಂಟುಮಾಡುವವನೆಂದೂ, ಮಾನ್ಯನೆಂದರೆ ಪೂಜ್ಯನೆಂದೂ ಅರ್ಥ ಮಾಡಿದ್ದಾರೆ. ಇವೆರಡೂ ಅಗಸ್ತ್ಯನಿಗೆ ವಿಶೇಷಣಗಳು. ಇವೆರಡೂ ಅಂಕಿತನಾಮಗಳಾಗಿಯೂ ಉಪಯೋಗಿಸಲ್ಪಟ್ಟಿವೆ ಬೃಹದ್ದೇವತೆಯಲ್ಲಿ ಅಗಸ್ತ್ಯನ ಉತ್ಪತ್ತಿಯ ವಿಷಯವನ್ನು ತಿಳಿಸುವಾಗ,

**ಮಾನೇನ ಸಂಮಿತೋ ಯಸ್ಮಾತ್ ತಸ್ಮಾನ್ಮಾನ್ಯ ಇಹೋಚ್ಯತೇ ।**
**ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ॥**

(ಬೃ. ದೇ. ೫–೧೫೩)

ಪೂಜಾರ್ಹನಾಗಿರುವುದರಿಂದಲೂ ಅಥವಾ, ಮಾನ (ಅಳತೆ)ದ ಪ್ರಕಾರವನ್ನು ತಿಳಿಸುವ ಕುಂಭದಲ್ಲಿ ಉತ್ಪನ್ನನಾದುದರಿಂದ ಎಂದರೆ ಕುಂಭರೂಪವಾದ ಮಾನದಿಂದ ಉತ್ಪನ್ನನಾದುದರಿಂದಲೂ ಅಗಸ್ತ್ಯನಿಗೆ ಮಾನ್ಯನೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಸಿದೆ.

ಇದೇ ಆನುಪೂರ್ವಿಯಲ್ಲಿ **ಮಾಂದಾರ್ಯಸ್ಯ ಮಾನ್ಯಸ್ಯ ಕಾರೋಃ** ಎಂಬ ಪದಗಳು ೧೬೫, ೧೬೬ ೧೬೭ ನೇ ಸೂಕ್ತಗಳ ಕೊನೆಯ ಋಕ್ಕುಗಳಲ್ಲಿಯೂ ಇರುತ್ತವೆ.

**ಸ್ತೋಮಃ, ಗೀಃ** ಎಂದು ಸ್ತುತಿಪರ್ಯಾಯವಾದ ಎರಡು ಪದಗಳಿವೆ. ಇವು ಸ್ತುತಿಯ ಪ್ರಕಾರಾಂತರಗಳನ್ನು ಸೂಚಿಸುತ್ತವೆ. **ಸ್ತೋಮದ** ಮಹತ್ವದ ವಿಷಯವನ್ನೂ ಋಗ್ವೇದ ಸಂಹಿಯ ೧೧ನೇ ಭಾಗದ 50-52ನೇ ಪುಟದಲ್ಲಿ ವಿಶದವಾಗಿ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಇಷಾ ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ತೃತೀಯಾವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಾಸೀಷ್ಟ**— ಯಾ ಪ್ರಾಪಣೇ· ಧಾತು· **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಿಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಸೀಯುಟಾಗಮ **ಸುಟ್ ತಿಥೋಃ** (ಪಾ. ಸೂ· ೩-೪-೧೦೭) ಎಂಬುದರಿಂದ ಸುಟಾಗಮ ಯಲೋಪ· ವ್ಯತ್ಯಯದಿಂದಲೇ ಏಕವಚನ ಬಂದಿದೆ. ತಿಙಂತನಿಘಾತಸ್ವರ ಬರುತ್ತದೆ.

**ವಿದ್ಯಾಮ**—ವಿದ್ಲೃ ಲಾಭೇ ಧಾತು. ಲಿಟ್ ಉತ್ತಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂಬುದರಿಂದ ಆಕಾರ ಉದಾತ್ತವಾಗುತ್ತದೆ.

**ವೃಜನಂ**—ವೃಜೀ ವರ್ಜನೇ ಧಾತು. **ಕೃಪೃವೃಜಿ**—(ಉ ಸೂ ೨-೩೯) ಎಂಬುದರಿಂದ ಕ್ಯು ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಯುವೋರನಾಕೌ** (ಪಾ ಸೂ· ೭-೧-೧) ಎಂಬುದರಿಂದ ಅನಾದೇಶ· ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಜೀರದಾನುಂ**— ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

## ನೂರ ಅರವತ್ತೊಂಭತ್ತನೆಯ ಸೂಕ್ತವು

**ಮಹಶ್ಚಿತ್ತ್ವಮಿತ್ಯಷ್ಟರ್ಚಂ ಪಂಚಮಂ ಸೂಕ್ತಮೈಂದ್ರಮಾಗಸ್ತ್ಯಂ ತ್ರೈಷ್ಟುಭಂ । ದ್ವಿತೀಯಾ ಚತುಷ್ಪದಾ ವಿರಾಟ್ ಅಥ ಚತುಷ್ಪದಾ ವಿರಾಡ್ದಶಕೈರಿತ್ಯುಕ್ತತ್ವಾತ್ ವಿರಾಜೋ ದಿಶಃ । ಪಿಂ. ೩-೫ । ಇತಿ ಪಿಂಗಲನಾಗೇನ ಸೂತ್ರಿತತ್ವಾಚ್ಚ । ಮಹೋಽಷ್ಟೌ ದ್ವಿತೀಯಾ ವಿರಾಡಿತ್ಯನುಕ್ರಮಣಿಕಾ ॥ ಸಮೂಳ್ಹೇ ದಶರಾತ್ರೇ ದ್ವಿತೀಯೇ ಛಂದೋಮೇ ಮರುತ್ವತೀಯ ಇದಂ ವಿಶ್ವಜಿತೋಽಗ್ನಿಂ ನರ ಇತಿ ಖಂಡೇ ಸೂತ್ರಿತಂ । ದ್ವಿತೀಯಸ್ಯ ಶಂಸಾ ಮಹಾಂ ಮಹಶ್ಚಿತ್ತ್ವಮಿಂದ್ರ । ಆ. ೮-೭ । ಇತಿ ॥**

ಅನುವಾದವು – **ಮಹಶ್ಚಿತ್ತ್ವಂ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. **ವಿರಾಟ್ ದಶಕೈಃ**—ಹತ್ತು ಅಕ್ಷರಗಳ ನಾಲ್ಕು ಪಾದಗಳಿದ್ದರೆ ಆ ಋಕ್ಕಿಗೆ ವಿರಾಟ ಛಂದಸ್ಸೆಂದು ಹೆಸರು ಎಂದು ಪಿಂಗಲನಾಗರಿಂದ ಛಂದೋನುಕ್ರಮಣಿಕೆಯಲ್ಲಿ ಹೇಳಿರುವುದರಿಂದ (ಪಿ. ೩-೫) ಎರಡನೆಯ ಋಕ್ಕು ವಿರಾಟ್ ಛಂದಸ್ಕವು. ಅನುಕ್ರಮಣಿಕೆಯಲ್ಲಿಯೂ ಸಹ **ಮಹೋಽಷ್ಟೌ ದ್ವಿತೀಯಾ ವಿರಾಟ್** ಎಂದು ಹೇಳಿರುವುದು. ಹತ್ತುದಿನ ಪರ್ಯಂತರ ಮಾಡಬೇಕಾದ ಸಮೂಳ್ಹವೆಂಬ ಯಾಗದಲ್ಲಿ ದ್ವಿತೀಯ ಛಂದೋಮಾ ಮಂತ್ರ ಪಠನಕಾಲದಲ್ಲಿ ಮರುತ್ವತೀಯ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ವಿಶ್ವಜಿತೋಽಗ್ನಿಂ ನರ** ಎಂಬ ಖಂಡದಲ್ಲಿ **ದ್ವಿತೀಯಸ್ಯ ಶಂಸಾ ಮಹಾಂ ಮಹಶ್ಚಿತ್ತ್ವಮಿಂದ್ರ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೭)

## ಸೂಕ್ತ—೧೬೯

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೬೯ ॥
ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೮, ೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧, ೩-೮ ತ್ರಿಷ್ಟುಪ್ । ೨. ಚತುಷ್ಪದಾ ವಿರಾಟ್ ॥

॥ ಸಂಹಿತಾಪಾಠಃ ॥

ಮಹಶ್ಚಿತ್ತ್ವಮಿಂದ್ರ ಯತ ಏತಾನ್ಮಹಶ್ಚಿದಸಿ ತ್ಯಜಸೋ ವರೂತಾ ।
ಸ ನೋ ವೇಧೋ ಮರುತಾಂ ಚಿಕಿತ್ವಾನ್ತ್ಸುಮ್ನಾ ವನುಷ್ವ ತವ ಹಿ ಪ್ರೇಷ್ಠಾ ॥ ೧ ॥

॥ ಪದಪಾಠಃ ॥

ಮಹಃ । ಚಿತ್ । ತ್ವಂ । ಇಂದ್ರ । ಯತಃ । ಏತಾನ್ । ಮಹಃ । ಚಿತ್ । ಅಸಿ । ತ್ಯಜಸಃ । ವರೂತಾ ।
ಸಃ । ನಃ । ವೇಧಃ । ಮರುತಾಂ । ಚಿಕಿತ್ವಾನ್ । ಸುಮ್ನಾ । ವನುಷ್ವ । ತವ । ಹಿ । ಪ್ರೇಷ್ಠಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಯತಃ ಕಾರಣಾದೇತಾನ್ಮರುತೋ ಮಹಶ್ಚಿನ್ಮಹತೋಽಪಿ ಸಾಮರ್ಥ್ಯಾತಿಶಯ-ವತ್ತ್ವಾತ್ತ್ವಂ ನಿರಪೇಕ್ಷೇಣಾಪಿ ಸ್ನೇಹಾನ್ನ ತ್ಯಜಸೀತಿ ಶೇಷಃ । ಅತಃ ಕಾರಣಾನ್ಮಹಶ್ಚಿದಸಿ । ಚಿದಿತಿ ಪಾದಪೂರಣಃ । ಮಹತೋಽಪಿ ತ್ಯಜಸಸ್ತ್ಯಾಗಾತ್ । ಯದ್ವಾ । ಏತತ್ಕ್ರೋಧನಾಮ । ಕ್ರೋಧಾದ್ವಾ । ವರೂತಾ ವರಿತಾ ರಕ್ಷಿತಾಸಿ । ಭವಸಿ । ಯದ್ವಾ । ಮರುತೋಽಪಿ ತ್ಯಾಗಾದ್ವೃಷ್ಟ್ಯಾದಿವಿಷಯಾದ್ವಾರಯಿ-ತಾಸಿ । ಯಸ್ಮಾದೇವಂ ತಸ್ಮಾತ್ ಹೇ ಮರುತಾಂ ವೇಧೋ ವಿಧಾತಃ ಸ ತಾದೃಶಸ್ತ್ವಂ ಚಿಕಿತ್ವಾಂಶ್ಚೇತ-ನಾವಾನಸ್ಮದನುಗ್ರಹವಿಷಯಜ್ಞಾನೋಪೇತಃ ಸನ್ನೋಽಸ್ಮಭ್ಯಂ ಸುಮ್ನಾ ಸುಖಾನಿ ಮರುದಾಯತ್ತಾನಿ ವೃಷ್ಟ್ಯಾದಿರೂಪಾಣಿ ವನುಷ್ವ । ದೇಹಿ । ತಾನಿ ಸುಮ್ನಾನಿ ತವ ಹಿ ಪ್ರೇಷ್ಠಾ । ತವ ಖಲು ಪ್ರಿಯತಮಾನಿ । ಹಿಶಬ್ದಃ ಅಯಮಿಂದ್ರೋ ಮರುತ್ಸಖಾ । ಋ. ೮-೭೬-೨ । ಇತ್ಯಾದಿಶ್ರುತಿಷು ಪ್ರಸಿದ್ಧ್ಯರ್ಥಃ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ಯತಃ—ಯಾವಕಾರಣದಿಂದ । ತ್ವಂ—ನೀನು । ಮಹಃ ಚಿತ್—ಅತ್ಯಂತ ಮಹತ್ತ್ವ ವಿಶಿಷ್ಟರಾದಾಗ್ಯೂ । ಏತಾನ್—ಈ ಮರುದ್ದೇವತೆಗಳನ್ನು । ತ್ಯಜಸಃ—ಕ್ರೋಧ

ದಿಂದ (ವೃಷ್ಟ್ಯಾದಿ ವಿಷಯಕ ತ್ಯಾಗದಿಂದ) । **ವರೂತಾ (ಅಸಿ)**—ರಕ್ಷಿಸುವವನಾಗಿದ್ದೀಯೋ । (**ಅತಃ**—ಆಕಾರಣದಿಂದ) । **ಮಹಃ ಚಿತ್ ಅಸಿ**—ನಿಜವಾಗಿಯೂ ಮಹಾತ್ಮನೇ ಆಗಿದ್ದೀಯೆ । **ಹೇ ಮರುತಾಂ ವೇಧಃ**—ಮರುದ್ದೇವತೆಗಳ ವಿಧಾತೃವಾದ ಎಲೈ ಇಂದ್ರನೇ । **ಸಃ**—ಅಂತಹ ನೀನು । **ಚಿಕಿತ್ವಾನ್**—ಅಸ್ಮದನುಗ್ರಹ ರೂಪಜ್ಞಾನವುಳ್ಳವನಾಗಿ । **ನಃ**—ನಮಗೆ । **ಸುಮ್ನಾ**—(ಮರುತ್ಪ್ರಾಪ್ಯವಾದ)ವೃಷ್ಟ್ಯಾದಿ ರೂಪಸುಖಗಳನ್ನು । **ವನುಷ್ವ**—ಕೊಡುವವನಾಗು । (**ತಾನಿ**—ಆ ಸುಖಗಳು) । **ತವ**—ನಿನಗೆ । **ಪ್ರೇಷ್ಠಾ ಹಿ**—ಪ್ರಿಯತಮವೆಂದು ಪ್ರಸಿದ್ಧವಷ್ಟೇ.

॥ ಭಾವಾರ್ಥ ॥

ಎಲೈ ಇಂದ್ರನೇ, ಅತಿದೊಡ್ಡವರಾದ ಮರುದ್ದೇವತೆಗಳನ್ನೂ ಕೈ ಬಿಡದೆ ರಕ್ಷಿಸುವುದರಿಂದ, ನೀನು ನಿಜವಾಗಿಯೂ ಮಹಾತ್ಮನೇ ಅಹುದು; ಮರುದ್ದೇವತೆಗಳನ್ನು ಸೃಜಿಸುವ ಎಲೈ ಇಂದ್ರನೇ, ನಮ್ಮಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿ, ನಿನಗೆ ಅತಿಪ್ರಿಯವಾದ, ವೃಷ್ಟ್ಯಾದಿ ರೂಪ ಸುಖಗಳನ್ನು ನಮಗೆ ಅನುಗ್ರಹಿಸು.

English Translation.

You, Indra, are mighty from the might of those of whom you are the protector against abandonment: therefore, creator of the Maruts, favourably-minded towards us, grant us those blessings which are most dear to you

॥ ವಿಶೇಷವಿಷಯಗಳು ॥

**ಮರುತಃ ಮಹಶ್ಚಿತ್; ತ್ಯಜಸಃ ವರೂತಾ; ಮಹತೋಽಪಿ ಸಾಮರ್ಥ್ಯಾತಿಶಯವತ್ತ್ವಾತ್ ತ್ವಂ ನಿರಪೇಕ್ಷೇಣಾಪಿ ಸ್ನೇಹಾತ್ ನ ತ್ಯಜಸಿ । ಅತಃ ಕಾರಣಾತ್ ಮಹಶ್ಚಿದಸಿ ।** ಇಲ್ಲಿ ಇಂದ್ರನನ್ನು ಸಂಬೋಧಿಸಿದೆ. ಮರುತ್ತುಗಳ ಉತ್ಪತ್ತಿಯ ವಿಷಯವು ಬೃಹದ್ದೇವತೆಯಲ್ಲಿಯೂ ತೈತ್ತಿರೀಯ ಸಂಹಿತೆಯಲ್ಲಿಯೂ ಉಕ್ತವಾಗಿದೆ. ದಿತಿದೇವಿಯು ಇಂದ್ರನನ್ನು ನಿಗ್ರಹಮಾಡುವ ಪುತ್ರನನ್ನು ಹೊಂದಲಿಚ್ಛೆಯಿಂದ ಕಶ್ಯಪ ಋಷಿಯ ಅನುಗ್ರಹವನ್ನು ಪಡೆದು ನಿಯಮದಿಂದ ಇರುವಾಗ ಗರ್ಭಿಣಿಯಾದ ಅವಳ ಉದರವನ್ನು ಪ್ರವೇಶಿಸಿ ಇಂದ್ರನು ಆ ಗರ್ಭವನ್ನು ತನ್ನ ವಜ್ರಾಯುಧದಿಂದ ಏಳು ಭಾಗವಾಗಿ ಸೀಳಿದಕಾರಣ ಆ ಶಿಶುವು ರೋದಿಸಿದಾಗ (ಮಾರುದ–ಅಳಬೇಡ) ಎಂದು ಇಂದ್ರನು ಹೇಳಿದ್ದರಿಂದ ಮರುತ್ ಎಂದು ಇದಕ್ಕೆ ಹೆಸರು ಬಂದಿರುತ್ತದೆ. ಅನಂತರ ದಿತಿಗೆ ಎಚ್ಚರವಾಗಿ ಇಂದ್ರನ ಸಂಗಡ ಈ ಗರ್ಭಶಕಲಗಳು ಜೀವಂತವಾಗಿ ನಿನಗೆ ಸಹಾಯಕಗಳಾಗಿರಲಿ ಎಂದು ಹೇಳಿದಂತೆ ಇಂದ್ರನು ಒಪ್ಪಿಕೊಂಡು ಮರುತ್ತುಗಳನ್ನು ತನ್ನ ಸ್ನೇಹಿತರನ್ನಾಗಿ ಮಾಡಿಕೊಂಡಿದ್ದಾನೆ. ಇದು ಇಲ್ಲಿ ಸೂಚಿತವಾಗಿದೆ.

ಇಂದ್ರನೂ ಮರುತ್ತುಗಳೂ ಇಬ್ಬರೂ ಬಹಳ ಸಾಮರ್ಥ್ಯದಿಂದಲೇ ಇರುವವರು ಇವರು ಇಬ್ಬರೂ ಕಾರ್ಯಾಚರಣೆಯಲ್ಲಿ ನಿರಪೇಕ್ಷರಾಗಿರುತ್ತಾ ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸುವವರಲ್ಲ. ಹೀಗಿದ್ದರೂ, ಇಂದ್ರನು ತನ್ನ ಸಾಮರ್ಥ್ಯದಿಂದ ಬಹಳ ಸಾಮರ್ಥ್ಯವುಳ್ಳವನಾಗಿದ್ದರೂ ಈ ಮರುತ್ತುಗಳ ವಿಷಯದಲ್ಲಿ ಸ್ನೇಹದಿಂದ ಇರುವುದರಿಂದ ಇಂದ್ರನ ಪ್ರಭೂತವಾದ ಮಹಾತ್ಮ್ಯವು ಅಭಿವ್ಯಕ್ತವಾಗಿದೆ ಎಂದು ಒಂದು ವಿಧವಾದ ಅರ್ಥವು ತ್ಯಜಸಃ ಎಂಬ ಪದಕ್ಕೆ

ತ್ಯಾಗಾತ್ ಎಂಬ ಅರ್ಥವನ್ನು ಹೇಳಿರುವುದರಿಂದ ವರ್ಣಿತವಾಗಿದೆ. ಬಹಳ ಶೂರರಾದವರು ಸಾಮರ್ಥ್ಯವಂತರ ವಿಷಯದಲ್ಲಿರುವ ತಮ್ಮ ಸ್ನೇಹವನ್ನು ಯಾವುದಾದರೂ ಒಂದು ವಿಧವಾದ ಪ್ರಯೋಜನಾಕಾಂಕ್ಷೆಯಿಂದ ವೃದ್ಧಿಗೊಳಿಸುವುದು ರೂಢಿಯಾಗಿರುತ್ತದೆ. ಇಂದ್ರನು ಈ ರೀತಿಯಾಗಿರದೆ ನಿರಪೇಕ್ಷನಾಗಿ ಮೊದಲು ಅವರ ಉತ್ಪತ್ತಿಯ ಕಾಲದಲ್ಲಿಯೇ ಅವರನ್ನು (ಮರುತ್ತುಗಳ)ತ್ಯಾಗ ಮಾಡಿದ್ದರೂ ಅನಂತರದಲ್ಲಿ ಅವರೊಡನೆ ಸ್ನೇಹದಿಂದ ಇರುವುದು ಇಂದ್ರನ ಪ್ರಭೂತವಾದ ಮಹತ್ತ್ವ ದ್ಯೋತಕವಾಗಿರುತ್ತದೆ ಎಂದು ಅರ್ಥವನ್ನು ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ ತ್ಯಜಸಃ ಎಂಬ ಪದಕ್ಕೆ ಕ್ರೋಧ ಎಂದು ಅರ್ಥವನ್ನು ಹೇಳಿದೆ. **ತ್ಯಜಸ್** ಎಂಬ ಪದವು ಕ್ರೋಧನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇಂದ್ರನು ತನ್ನನ್ನು ಶತ್ರುವನ್ನಾಗಿ ತಿಳಿದು ಮುಂದೆ ತನ್ನ ನಿಗ್ರಹವನ್ನಾಚರಿಸುವವನೆಂದು ಮರುತ್ತುಗಳ ಉತ್ಪತ್ತಿಯಕಾಲದಲ್ಲಿಯೇ ತಿಳಿದು ಅವರ ವಿಷಯದಲ್ಲಿ ಕ್ರೋಧದಿಂದ ಇದ್ದರೂ ಅನಂತರದಲ್ಲಿ ಅವರನ್ನು **ವರೂತಾ** ರಕ್ಷಿಸುವವನು ಆದ್ದರಿಂದ ಇಂದ್ರನ ಮಹಿಮೆಯು ಸ್ತುತ್ಯವೆಂದು ಅರ್ಥವನ್ನು ವಿವರಿಸಿದೆ.

ಮೂರನೆಯ ಅರ್ಥದಲ್ಲಿ **ಮರುತೋಽಪಿ ತ್ಯಾಗಾತ್ ವೃಷ್ಟ್ಯಾದಿ ವಿಷಯಾತ್ ವಾರಯಿತಾಸಿ** ಮರುದ್ದೇವತೆಗಳು ವೃಷ್ಟಿಯನ್ನು ಉಂಟುಮಾಡುವ ಕಾರ್ಯದಲ್ಲಿ ನಿರತರನ್ನಾಗಿ ಇಂದ್ರನು ಮಾಡಿರುವ ಕಾರಣ ಇಂದ್ರನು **ಮರುತಾಂ ವೇಧಃ ವಿಧಾತಃ** ಮರುತ್ತುಗಳ ವಿಷಯದಲ್ಲಿ ಸೃಷ್ಟಿಕರ್ತನಾಗಿರುವನು ಎಂದು ಇಂದ್ರನ ಮಾಹಾತ್ಮ್ಯವು ವರ್ಣಿತವಾಗಿದೆ.

**ಚಿಕಿತ್ವಾನ್ ನ ಸುಮ್ನಾ ವನುಷ್ವ**— ಚಿಕಿತ್ವರ್ ಎಂಬ ಪದಕ್ಕೆ ಸಾಮಾನ್ಯವಾಗಿ ಚೇತನಾವಾನ್ ಜ್ಞಾನವುಳ್ಳವನು ಎಂಬ ಅರ್ಥವು ಇರುವುದಾದರೂ ಇಲ್ಲಿ **ಅಸ್ಮದನುಗ್ರಹ ವಿಷಯಜ್ಞಾನೋಪೇತಃ** ಯಾಜ್ಞಿಕರಾದ ನಮ್ಮನ್ನು ಅನುಗ್ರಹಿಸಿ ರಕ್ಷಿಸುವ ಜ್ಞಾನವುಳ್ಳವನು ಎಂದು ಅರ್ಥವನ್ನು ವಿವರಿಸಿದೆ. **ಸುಮ್ನಾ** ಎಂಬ ಪದವು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಯಜಮಾನರಿಗೆ ಇಂದ್ರನಿಂದ ಅನುಗೃಹೀತವಾಗುವ ಸುಖವು **ಮರುದಾಯತ್ತಾನಿ ವೃಷ್ಟಿರೂಪಾಣಿ** ಮರುದ್ದೇವತೆಗಳಿಂದ ಆಚರಿಸಲ್ಪಡುವ ಕಾರ್ಯಾಧೀನವಾದ ವೃಷ್ಟಿರೂಪವಾದುದು (ಸುಖವು ಆಗಿರುವುದು) ಎಂದು ವಿವರಿಸಿ ಅದರ ಮೂಲಕವಾಗಿ ಉತ್ಪನ್ನವಾಗುವ ಸುಖವೆಲ್ಲವನ್ನೂ ಯಜಮಾನರಾದ ನಮಗೆ ಇಂದ್ರನು ಅನುಗ್ರಹಿಸಲಿ ಎಂದು ಆಶಿಸಿದೆ.

**ತವ ಹಿ ಪ್ರೇಷ್ಠಾ**—ಎಂಬ ವಾಕ್ಯದಿಂದ ಈ ರೂಪದಿಂದ ಇರುವ ಸುಖವು ಇಂದ್ರನ ಸ್ನೇಹಿತರಾದ ಮರುತ್ತುಗಳಿಂದ ಉಂಟಾಗುವ ಕಾರಣ ಇಂದ್ರನ|ಪ್ರೀತಿಗೆ ವಿಷಯವಾಗಿರುವುದು ಎಂದು ವರ್ಣಿಸಿದೆ. ಮತ್ತು **ಅಯಮಿಂದ್ರೋ ಮರುತ್ಸಖಾ** (ಋ. ಸಂ. ೮-೭೬-೨) ಎಂಬ ಋಕ್ಕಿನಲ್ಲಿ ಇಂದ್ರನು ಮರುತ್ತುಗಳ ಸ್ನೇಹಿತನಾಗಿರುವ ವಿಷಯವು ಉಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಹಃ**—ಮಹತಃ ಎಂಬಲ್ಲಿ ಛಾಂದಸವಾಗಿ ಅತಿಗೆ ಲೋಪ.

**ಅಸಿ**—ಅಸ ಭುವಿ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ತ್ಯಜಸಃ**—ತ್ಯಜ ಹಾನೌ. ಧಾತು. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾಮದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ವರೂತಾಃ—**ವೃಞ್ ವರಣೇ. ಧಾತು. **ಗ್ರಸಿತಸ್ಕಭಿತ-**(ಪಾ. ಸೂ. ೭-೨-೩೪) ಎಂಬುದರಿಂದ ತೃಜಂತವಾಗಿ ನಿಪಾತಿತವಾಗಿದೆ. ಚಿತ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತಸ್ವರ ಬರುತ್ತದೆ ಪ್ರಥಮಾ ಏಕವಚನಾಂತರೂಪ.

**ಪ್ರೇಷ್ಠಾ—**ಅತಿಶಯೇನ ಪ್ರಿಯತಮಾನಿ. ಪ್ರಿಯಶಬ್ದಕ್ಕೆ ಅತಿಶಯಾರ್ಥ ತೋರುವಾಗ ಇಷ್ಠನ್ ಪ್ರತ್ಯಯ. **ಅತಿಶಾಯನೇತಮಬಿಷ್ಠನೌ** (ಪಾ.ಸೂ. ೫-೩-೫೫) ಸೂತ್ರದಿಂದ ಬರುತ್ತದೆ. **ಪ್ರಿಯಸ್ಥಿರ-**(ಪಾ.ಸೂ. ೬-೪-೧೫೭) ಎಂಬುದರಿಂದ ಪ್ರಿಯ ಶಬ್ದಕ್ಕೆ ಪ್ರಾದೇಶ. **ಪ್ರಕೃತ್ಯೈಕಾಚ್** ಎಂಬುದರಿಂದ ಪ್ರಕೃತಿಭಾವ. ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೇಧಃ—**ಡುಧಾಞ್ ಧಾರಣಪೋಷಣಯೋಃ ಧಾತು. ವಿಉಪಸರ್ಗ ಪೂರ್ವದಲ್ಲಿರುವಾಗ **ವಿಧಾಞೋ ವೇಧಚ** (ಉ. ಸೂ. ೬೬೪) ಎಂಬುದರಿಂದ ಅಸುನ್ ಪ್ರತ್ಯಯ. ಉಪಸರ್ಗವಿಶಿಷ್ಟಕ್ಕೆ ವೇಧಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಚಿಕಿತ್ವಾನ್—**ಕಿತ ಜ್ಞಾನೇ. ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸುರಾದೇಶ. ಧಾತುವಿಗೆ ದ್ವಿತ್ವಾದಿ. ವಸುವಿನ ಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಸುಮ್ನಾ—ಶೇಶ್ಛಂದಸಿ ಬಹುಲಂ** (ಪಾ ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ವನುಷ್ವ—**ವನು ದಾನೇ (ಅನೇಕಾರ್ಥಕ ಧಾತು.) ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಅಯುಜ್ರಂತ ಇಂದ್ರ ವಿಶ್ವಕೃಷ್ಟೀರ್ವಿದಾನಾಸೋ ನಿಷ್ಷಿಧೋ ಮರ್ತ್ಯತ್ರಾ ।
ಮರುತಾಂ ಪೃತ್ಸುತಿರ್ಹಾಸಮಾನಾ ಸ್ವರ್ಮೀಳ್ಹಸ್ಯ ಪ್ರಧನಸ್ಯ ಸಾತೌ ॥ ೨ ॥

॥ ಪದಪಾಠಃ ॥

ಅಯುಜ್ರನ್ । ತೇ । ಇಂದ್ರ । ವಿಶ್ವಽಕೃಷ್ಟೀಃ । ವಿದಾನಾಸಃ । ನಿಃಽಸಿಧಃ । ಮರ್ತ್ಯಽತ್ರಾ ।
ಮರುತಾಂ । ಪೃತ್ಸುತಿಃ । ಹಾಸಮಾನಾ । ಸ್ವಃಽಮೀಳ್ಹಸ್ಯ । ಪ್ರಽಧನಸ್ಯ । ಸಾತೌ ॥ ೨ ॥

॥ ಸಾಯಣಭಾಷ್ಯಂ ॥

ಪೂರ್ವಮಂತ್ರೇ ಮರುತಾಮಿಂದ್ರಸಾಹಾಯ್ಯಮುಕ್ತಂ । ಅತ್ರೇಂದ್ರಸ್ಯ ಮರುತ್ಸಾಹಾಯ್ಯಮುಚ್ಯತೇ । ಹೇ ಇಂದ್ರ ತೇ ಮರುತೋಽಯುಜ್ರನ್ । ಯುಜ್ಯಂತೇ । ತ್ವಯಾ ಯುಕ್ತಾ ಭವಂತೀತ್ಯರ್ಥಃ । ಕೀದೃಶಾಸ್ತೇ । ವಿಶ್ವಕೃಷ್ಟೀರ್ವಿಶ್ವಕೃಷ್ಟಯೋ ರಾಜ್ಯತ್ವೇನ ಸರ್ವಜನವಂತಃ । ಕಿಂಚ ಮರ್ತ್ಯತ್ರಾ ಮರ್ತ್ಯೇಷು ಮರ್ತ್ಯಾರ್ಥಂ ನಿಷ್ಷಿಧೋ ನಿಃಶೇಷೇಣೋದಕಸ್ಯ ಸೇಕ್ತೄನ್ಮೇಘಾನ್ವಿದಾನಾಸೋ ಜಾನಾನಾಃ । ಕಿಂಚ ಯೇಷಾಂ ಮರುತಾಂ ಪೃತ್ಸುತಿಃ ಸೇನಾ ಸ್ವರ್ಮೀಳ್ಹಸ್ಯ ಪ್ರಧನಸ್ಯ ಸುಖಸೇಕ್ತುಃ ಪ್ರಕೃಷ್ಟಧನವತೋ ವೃತ್ರಾದಿಸಂಗ್ರಾಮಸ್ಯ ಸಾತೌ ಲಾಭೇ ಜಯೇ ನಿಮಿತ್ತಭೂತೇ ಸತಿ ಸೇನಾ ಹಾಸಮಾನಾ ಹಾಸಂ ಕುರ್ವತೀ ಹರ್ಷಯುಕ್ತಾ ಭವತಿ । ಯದ್ವಾ । ಸುಖೇನ ಮಿಹ್ಯತೇ ಜಲಂ ಯಸ್ಮಿನ್ ತಾದೃಶಸ್ಯ ಪ್ರಧಾನಸ್ಯ ಪ್ರಕೃಷ್ಟೋದಕಾಖ್ಯಧನಸಾಧನಸ್ಯ ಸಂಗ್ರಾಮಸ್ಯ ಸಾತೌ । ಮೇಘಭೇದನಾಯೇತಿ ಯಾವತ್ । ಯೇಷಾಮೀದೃಶೀ ಸೇನಾಸ್ತಿ ತೇ ಮರುತೋಽಯುಜ್ರನ್ನಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **(ಯೇಷಾಂ) ಮರುತಾಂ**—ಯಾವ ಮರುದ್ದೇವತೆಗಳ । **ಪೃತ್ಸುತಿಃ**—ಸೇನೆಯು । **ಸ್ವರ್ಮೀಳ್ಹಸ್ಯ**—ಸ್ವರ್ಗಸಾಧಕವಾದ (ಸುಖಸಾಧಕವಾದ) । **ಪ್ರಧನಸ್ಯ**—ಪ್ರಕೃಷ್ಟ ಧನ ವಿಶಿಷ್ಟರಾದ (ವೃತ್ರಾದಿಗಳೊಡನೆ ಸಂಗ್ರಾಮದಲ್ಲಿ) । **ಸಾತೌ**—(ನಿನ್ನಿಂದ ಪ್ರಾಪ್ಯವಾದ) ಲಾಭ (ಜಯ) ವಿಷಯದಲ್ಲಿ । [ಅಥವಾ **ಸ್ವರ್ಮೀಳ್ಹಸ್ಯ**—ಸುಖವಾಗಿ ಪ್ರಾಪ್ಯವಾದ ಜಲವುಳ್ಳ । **ಪ್ರಧನಸ್ಯ**—ಪ್ರಕೃಷ್ಟವಾದ ಜಲರೂಪ ಧನವಿಶಿಷ್ಟವಾದ ಮೇಘದ । **ಸಾತೌ**—(ನೀನು ಗಳಿಸುವ) ಜಯ ವಿಷಯದಲ್ಲಿ ।] **ಹಾಸಮಾನಾ**—ನಗುತ್ತಿರುತ್ತದೆಯೋ) । **ತೇ**—ಅಂತಹ । **ವಿಶ್ವಕೃಷ್ಟೀಃ**—ಸರ್ವಜನವಿಶಿಷ್ಟರೂ । **ಮರ್ತ್ಯತ್ರಾ**—ಮನುಷ್ಯರಿಗೋಸ್ಕರ । **ನಿಷ್ಷಿಧಃ**—ಹೆಚ್ಚಾಗಿ ಉದಕವನ್ನು ಸುರಿಸುವ ಮೇಘಗಳನ್ನು । **ವಿದಾನಾಸಃ**—ತಿಳಿದಿರುವವರೂ ಆದ ಮರುದ್ದೇವತೆಗಳು । **ಅಯುಜ್ರನ್**—(ನಿನ್ನೊಡನೆ) ಸೇರುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸರ್ವಜನವಿಶಿಷ್ಟರೂ (ಮನುಷ್ಯರಿಗೆಲ್ಲಾ ಒಡೆಯರೂ) ವೃಷ್ಟಿಕಾರಕಗಳಾದ ಮೇಘಗಳನ್ನು ಮನುಷ್ಯರಿಗೋಸ್ಕರ ಪ್ರೇರಿಸುವವರೂ ಆದ ಮರುದ್ದೇವತೆಗಳು ನಿನ್ನೊಡನೆಯೇ ಇರುತ್ತಾರೆ; ನೀನು ಸಾಧಿಸುವ ವೃತ್ರಾದಿಜಯದಿಂದ ಅಥವಾ ಮೇಘ ಭೇದನದಿಂದ ಈ ಮರುತ್ತರು ಹೃಷ್ಟರಾಗುತ್ತಾರೆ.

English Translation.

Rulers over all men, and impelling towards man the water-shedding clouds, they are united, Indra, (with you) : the host of Maruts is delighted by (your) acquisition of heaven-bestowing wealth.

॥ ವಿಶೇಷವಿಷಯಗಳು ॥

ಇಂದ್ರನು ಮರುತ್ತುಗಳಿಗೆ ಮಾಡಿರುವ ಸಹಾಯವು ಹಿಂದಿನ ಮಂತ್ರದಲ್ಲಿ ಉಕ್ತವಾಗಿರುವುದರಿಂದ ಇಂದ್ರನಿಗೆ ಮರುತ್ತುಗಳಿಂದ ಆಗುವ ಸಹಾಯವು ಈ ಮಂತ್ರದಿಂದ ಉಕ್ತವಾಗಿರುತ್ತದೆ.

**ವಿಶ್ವಕೃಷ್ಟೀಃ**—ಸಾಯಣರು ಈ ಪದವನ್ನು ವಿಶ್ವಕೃಷ್ಟಯಃ ಎಂದು ಪ್ರಥಮಾ ಬಹುವಚನಾಂತವಾದ ಪದವನ್ನಾಗಿ ಪರಿವರ್ತಿಸಿ **ರಾಜ್ಯತ್ವೇನ ಸರ್ವಜನವಂತಃ** ಮರುದ್ದೇವತೆಗಳು ಎಲ್ಲವನ್ನೂ ರಾಜ್ಯವೆಂದು ತಿಳಿದು ಎಲ್ಲವೂ ರಕ್ಷಣಾವಿಷಯವಾಗಿರುವುದು ಎಂಬ ಭಾವನೆಯಿಂದ ಎಲ್ಲಾ ಪ್ರಾಣಿಗಳಲ್ಲಿಯೂ ಏಕರೂಪವಾದ ಪ್ರೀತಿಯಿಂದ ಇರುವರು ಎಂದು ಅರ್ಥವನ್ನು ವಿವರಿಸಿದೆ.

**ಮರ್ತ್ಯತ್ರಾ ನಿಷ್ಷಿಧಃ ವಿದಾನಾಸಃ—ಮತ್ಯಾರ್ಥಂ ನಿಶ್ಶೇಷೇಣ ಉದಕಸ್ಯ ಸೇಕ್ತ್ರ್ಯಾನ್ ಮೇಘಾನ್ ವಿದಾನಾಸಃ ಜಾನಾನಾಃ**—ಮೇಘಗಳು ಉದಕಗಳನ್ನು ಮನುಷ್ಯರ ಅಭಿವೃದ್ಧಿಗಾಗಿ ಸುರಿಸುವುವು ಎಂದು ತಿಳಿದು ಇರುವರು ಎಂಬ ಅರ್ಥವನ್ನೂ ವರ್ಣಿಸಿದೆ.

**ಮರುತಾಂ ಪೃತ್ಸುತಿಃ ಪ್ರಧನಸ್ಯ ಸಾತೌ ಹಾಸಮಾನಾ**—ಪೃತ್ಸುತಿ ಎಂಬ ಪದಕ್ಕೆ ಸೇನೆ ಎಂಬ ಅರ್ಥವನ್ನು ಹೇಳಿದೆ ನಿರುಕ್ತಕಾರರಿಂದ ಪ್ರಧನಶಬ್ದವು ವ್ಯಾಖ್ಯಾತವಾಗಿದೆ.

**ನ್ಯಕ್ರಂದಯನ್ನುಪಯಂತ ಏನಮಮೇಹಯನ್ವೃಷಭಂ ಮಧ್ಯ ಆಜೇಃ ।**
**ತೇನ ಸೂಭರ್ವಂ ಶತವತ್ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಗಾಯ ।**

(ಋ. ಸಂ. ೧೦-೧೦೨-೫)

ಇಲ್ಲಿ **ಪ್ರಧನ ಇತಿ ಸಂಗ್ರಾಮ ನಾಮ ಪ್ರಕೀರ್ಣಾನ್ಯಸ್ಮಿನ್ ಧನಾನಿ ಭವಂತಿ** ಧನವೂ ಇಲ್ಲಿ ಅತಿಶಯವಾಗಿ ವ್ಯಯಮಾಡಲ್ಪಡುವುದರಿಂದ (ಯುದ್ಧವು) ಸಂಗ್ರಾಮವು ಪ್ರಧನಶಬ್ದದ ಅರ್ಥವಾಗಿದೆ. ಎಂದು ನಿರುಕ್ತಕಾರರ ಅರ್ಥವನ್ನು ಅನುಸರಿಸಿ ಸಾಯಣರು ಸಂಗ್ರಾಮ ಎಂದು ಅರ್ಥವನ್ನು ವರ್ಣಿಸಿ ಇದು ಸುಖವನ್ನು ಉಂಟುಮಾಡುವುದೆಂದು ಅರ್ಥಮಾಡಿ, **ಸುಖಸೇಕ್ತುಃ ಪ್ರಕೃಷ್ಟಧನವತೋ ವೃತ್ರಾದಿಸಂಗ್ರಾಮಸ್ಯ ಲಾಭೇ ಜಯೇ ನಿಮಿತ್ತಭೂತೇ ಸತಿ ಸೇನಾ ಹರ್ಷಯುಕ್ತಾ ಭವತಿ** ಸುಖವನ್ನು ಉಂಟುಮಾಡುವ ಪ್ರಭೂತವಾದ ಧನವುಳ್ಳ ವೃತ್ರನೇ ಮೊದಲಾದ ಅಸುರರ ಸಂಗಡ ಆಚರಿಸಬೇಕಾದ ಯುದ್ಧದಲ್ಲಿ ಜಯವು ಲಭಿಸುವುದಕ್ಕಾಗಿ ಮರುದ್ದೇವತೆಗಳ ಸೇನೆಯು ಹರ್ಷದಿಂದ ಇರುತ್ತದೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

ಎರಡನೆಯ ಅರ್ಥದಲ್ಲಿ—ಸ್ವಮೀಳ್ಹಸ್ಯ ಎಂಬ ಪದವು ಪ್ರಧನಸ್ಯ ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದ **ಸುಷೇನ ಮಿಹ್ಯತೇ ಜಲಂ ಯಸ್ಮಿನ್ ತಾದೃಶಸ್ಯ ಪ್ರಧನಸ್ಯ ಪ್ರಕೃಷ್ಟೋದಕಾಖ್ಯಧನಸಾಧನಸ್ಯ ಸಂಗ್ರಾಮಸ್ಯ ಸಾತೌ ಮೇಘಭೇದನಾಯ**—ಸುಖದಿಂದ ಉದಕವು ದೊರೆಯುವ ಸನ್ನಿವೇಶವಾದ, ಎಂದರೆ ಉದಕವೆಂಬ ಧನವು ದೊರಕುವುದರಲ್ಲಿ ಕಾರಣವಾದ ಮೇಘಭೇದನರೂಪವಾದ ಸಂಗ್ರಾಮಕ್ಕಾಗಿ ಮರುದ್ದೇವತೆಗಳ ಸೇನೆಯು ಇಂದ್ರನ ಸಹಾಯಕ್ಕಾಗಿ ಸಿದ್ಧವಾಗಿ ಇರುವುದು ಎಂಬ ಅರ್ಥವು ವಿವೃತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಯುಜ್ರನ್**—ಯುಜಿರ್ ಯೋಗೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಕರ್ಮಣಿಯಲ್ಲಿ ವ್ಯತ್ಯಯದಿಂದ ವಿಕರಣಕ್ಕೆ ಲುಕ್. ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. ಇಕಾರಲೋಪ. **ಬಹುಲಂ ಛಂದಸಿ** ಎಂಬುವರಿಂದ ಅದಕ್ಕೆ ರುಟಾಗಮ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ವಿಶ್ವಕೃಷ್ಟಯಃ**—ವಿಶ್ವೇ-ಸರ್ವೇ ಕೃಷ್ಟಯಃ-ಜನಾ ಯಸ್ಯ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಜಸ್ ಪರವಾದಾಗ **ಸುಪಾಂ ಸುಲುಕ್**- (ಪಾ.ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣ ದೀರ್ಘ ಬರುತ್ತದೆ.

**ವಿದಾನಾಸಃ**—ವಿದ ಜ್ಞಾನೇ. ಧಾತು. ಲಟಿಗೆ ಶಾನಚಾದೇಶ. ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಲಘೂಪಧಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ.

**ನಿಷ್ಷಿಧಃ**—ಷಿಧ ಗತ್ಯಾಂ ಧಾತು. ಕ್ವಿಪ್ ಪ್ರತ್ಯಯ. ಪ್ರಾದಿ ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಮರ್ತ್ಯತ್ರಾ**—**ದೇವಮನುಷ್ಯಪುರುಷಪುರುಮರ್ತ್ಯೇ**- (ಪಾ. ಸೂ. ೫-೪-೫೬) ಎಂಬುದರಿಂದ ಸಪ್ತಮ್ಯಂತಕ್ಕೆ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹಾಸಮಾನಾ**—ಹಸೇ ಹಸನೇ. ಧಾತು. ಲಟಿಗೆ ಶಾನಚಾದೇಶ ಪ್ರತ್ಯಯದಿಂದ ಉಪಧಾವೃದ್ಧಿ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**-ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸ್ವಮೀಳ್ಹಸ್ಯ**—ಮಿಹ ಸೇಚನೇ. ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಹೋಢಃ** (ಪಾ. ಸೂ. ೮-೨-೩೧) ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋ**-ಎಂಬುದರಿಂದ ತಕಾರಕ್ಕೆ ಧತ್ವ. ಅದಕ್ಕೆ ಷ್ಟುತ್ವ ಬಂದಾಗ **ಢೋಢೇ ಲೋಪಃ** (ಪಾ.ಸೂ. ೮-೩-೧೩) ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. **ಢ್ರಲೋಪೇ ಪೂರ್ವಸ್ಯ**—(ಪಾ. ಸೂ ೬-೩-೧೧೧) ಎಂಬುದರಿಂದ ಪೂರ್ವಕ್ಕೆ ದೀರ್ಘ. **ನ್ಯಙ್ ಸ್ವರೌ ಸ್ವರಿತೌ** ಎಂಬುದರಿಂದ ಸ್ವರ್ ಎಂಬುದು ಸ್ವರಿತವಾಗುತ್ತದೆ. ಬಹುವ್ರೀಹಿಸಮಾಸವಾದಾಗ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಸಾತೌ**—ಷಣು ದಾನೇ. **ಊತಿಯೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ. ಸಪ್ತಮೀ ಏಕವಚನಾಂತರೂಪ ॥ ೨ ॥



॥ ಸಂಹಿತಾಪಾಠಃ ॥

ಅನ್ಯು॒ಕ್ಸಾ ತ ಇಂದ್ರ ಋ॒ಷ್ಟಿರ॒ಸ್ಮೇ ಸ॒ನೇಮ್ಯಭ್ವಂ ಮ॒ರುತೋ॑ ಜುನಂತಿ ।
ಅ॒ಗ್ನಿಶ್ಚಿ॒ದ್ಧಿ ಷ್ಮಾ॑ತ॒ಸೇ ಶು॒ಶುಕ್ವಾ॒ನಾಪೋ॒ ನ ದ್ವೀ॒ಪಂ ದಧ॑ತಿ ಪ್ರ॒ಯಾಂಸಿ ॥ ೩ ॥

॥ ಪದಪಾಠಃ ॥

ಅನ್ಯ॑ಕ್ । ಸಾ । ತೇ॒ । ಇಂ॒ದ್ರ॒ । ಋ॒ಷ್ಟಿಃ । ಅ॒ಸ್ಮೇ ಇತಿ॑ । ಸನೇ॑ಮಿ । ಅಭ್ವ॑ಂ । ಮ॒ರುತಃ॑ । ಜು॒ನಂ॒ತಿ॒ ।
ಅ॒ಗ್ನಿಃ । ಚಿ॒ತ್ । ಹಿ । ಸ್ಮ॒ । ಅ॒ತ॒ಸೇ । ಶು॒ಶು॒ಕ್ವಾನ್ । ಆಪಃ॑ । ನ । ದ್ವೀ॒ಪಂ । ದಧ॑ತಿ । ಪ್ರಯಾಂ॑ಸಿ ।

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸಾ ಪ್ರಸಿದ್ಧಾ ಋಷ್ಟಿರ್ವಜ್ರಾಖ್ಯಾಯುಧವಿಶೇಷೋಽಸ್ಮೇ ಅಸ್ಮದ್ವೃಷ್ಟ್ಯರ್ಥಮನ್ಯುಕ್ । ಪ್ರಾಪ್ನೋತಿ ಮೇಘಸಮೀಪೇ । ಏವಂ ಚ ಸತಿ ಮರುತೋಽಪಿ ಸನೇಮಿ । ಅಹ್ನಾಯೇತಿ ಷಟ್ ಪುರಾಣನಾಮಾನೀತ್ಯುಕ್ತತ್ವಾತ್ಸನೇಮೀತಿ ಪುರಾಣನಾಮ । ಪುರಾಣಂ ಚಿರಕಾಲಂ ಸಂಗೃಹೀತಮಭ್ವಮುದಕಂ ಜುನಂತಿ । ಕ್ಷಿಪಂತಿ । ವರ್ಷಂತೀತ್ಯರ್ಥಃ । ವೃಷ್ಟ್ಯಾ ಸಸ್ಯಾದಿಸಮೃದ್ಧೌ ಸತ್ಯಾಮಗ್ನಿಶ್ಚಿದ್ಧಿ ಷ್ಮ । ಹಿ ಸ್ಮೇತಿ ಪೂರಣೇ । ಅಗ್ನಿರಪ್ಯತಸೇ ಸಂತತೇ ಕರ್ಮಣಿ ನಿಮಿತ್ತಭೂತೇ ಸತಿ ಶುಶುಕ್ವಾನ್ದೀಪ್ಯಮಾನೋ ವರ್ತತೇ । ಪಶ್ಚಾತ್ಪ್ರಯಾಂಸಿ ಚರುಪುರೋಡಾಶಾದಿಹವೀಂಷಿ ದಧತಿ । ಧಾರಯಂತಿ ದದತಿ ವಾ ಯಜಮಾನಾಃ । ಕಿಮಿವ ಆಪೋ ನ ದ್ವೀಪಂ । ದ್ವಿಪಾರ್ಶ್ವಸ್ಥೋದಕವಾನ್ಪರ್ವತಾದಿರ್ದ್ವೀಪಃ । ತಂ ಯಥಾಪೋ ಧಾರಯಂತಿ ತದ್ವತ್ । ಯದ್ವಾ । ಆಯುಧಮೇವೋಚ್ಯತೇ । ವಜ್ರಾಖ್ಯಾಯುಧವಿಶೇಷೋತಸೇ ಕಾಷ್ಠಸಮೂಹೇ ಶುಶುಕ್ವಾನ್ದೀಪಯನ್ನಗ್ನಿಶ್ಚಿತ್ । ಚಿಚ್ಛಬ್ದ ಉಪಮಾರ್ಥೇ ದಧಿ ಚಿದಿತ್ಯುಪಮಾರ್ಥೇ । ನಿ. ೧-೪ । ಇತಿ ಯಾಸ್ಕೇನೋಪಮಾರ್ಥಸ್ಯೋಕ್ತತ್ವಾತ್ ॥ ಕಾಷ್ಠೇ ಜ್ವಲನ್ನಗ್ನಿರಿವ । ತದ್ವದ್ದೀಪ್ತೋ ವರ್ತತೇ । ಏತದೇವ ದೀಪ್ತತ್ವಮಪೇಕ್ಷ್ಯ ಸೇತ್ಯುಕ್ತಂ । ಏವಂ ಚ ಸತ್ಯಾಪೋ ದ್ವೀಪಮಿವ ವೃಷ್ಟ್ಯುದಕಾನಿ ಪ್ರಯಾಂಸಿ ಸಸ್ಯಾದ್ಯನ್ನಾನಿ ದಧತಿ । ಧಾರಯಂತಿ । ಏತತ್ಸರ್ವಂ ಮಹಾನುಭಾವಸ್ಯೇಂದ್ರಸ್ಯೈವ ಸಾಮರ್ಥ್ಯಮಿತೀಂದ್ರಸ್ಯ ಸ್ತುತಿಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಸಾ**—ಆ ಪ್ರಸಿದ್ಧವಾದ । **ಋಷ್ಟಿಃ**—ವಜ್ರಾಯುಧವು । **ಅಸ್ಮೇ**—ನಮಗೋಸ್ಕರ (ವೃಷ್ಟಿಯನ್ನುಂಟುಮಾಡಲು) । **ಅನ್ಯುಕ್**—(ಮೇಘಗಳನ್ನು) ಸಮೀಪಿಸುತ್ತದೆ । **ಮರುತಃ**—ಮರುದ್ದೇವತೆಗಳು । **ಸನೇಮಿ**—ಚಿರಕಾಲದಿಂದಲೂ (ಸಂಗೃಹೀತವಾದ) । **ಅಭ್ವಂ**—ಉದಕವನ್ನು । **ಜುನಂತಿ**—ಎಸೆಯುತ್ತಾರೆ (ಸುರಿಸುತ್ತಾರೆ) । **ಅಗ್ನಿಃ ಚಿತ್ ಹಿ ಸ್ಮ**—ಅಗ್ನಿಯೂ ಕೂಡ ।

**ಅತಸೇ**—ಸಂತತವಾದ (ಯಾಗರೂಪಕರ್ಮಕ್ಕೋಸ್ಕರ) | **ಶುಶುಕ್ವಾನ್**—ದೇದೀಪ್ಯಮಾನನಾಗಿ (ಇರುತ್ತಾನೆ) | **ಆಪಃ**—ಉದಕಗಳು | **ದ್ವೀಪಂ ನ**—ದ್ವೀಪವನ್ನು (ಧರಿಸಿರುವಂತೆ; ಎಂದರೆ ಸುತ್ತುಗಟ್ಟಿರುವಂತೆ) | **ಪ್ರಯಾಂಸಿ**—(ಚರುಪುರೋಡಶಾದಿ)ಹವಿಸ್ಸಗಳನ್ನು | **ದಧತಿ**—ಧರಿಸುತ್ತಾರೆ (ಅರ್ಪಿಸುತ್ತಾರೆ) | [ಅಥವಾ | (**ಋಷ್ಟಿಃ**—ವಜ್ರಾಯುಧವು) | **ಅತಸೇ**—ಕಾಷ್ಠಸಮೂಹದಲ್ಲಿ | **ಶುಶುಕ್ವಾನ್**—ದೀಪ್ತನಾಗಿ ಜ್ವಲಿಸುತ್ತಿರುವ | **ಅಗ್ನಿಃ ಚಿತ್**—ಅಗ್ನಿಯಂತೆ(ಜ್ವಲಿಸುತ್ತದೆ) | **ಆಪಃ**—ಉದಕಗಳು | **ದ್ವೀಪಂ ನ**—ದ್ವೀಪವನ್ನು (ಆವರಿಸುವಂತೆ) | **ಪ್ರಯಾಂಸಿ**—ಸಸ್ಯಾದಿರೂಪಾನ್ನವನ್ನು | **ದಧತಿ**—ಧರಿಸುತ್ತವೆ (ಆವರಿಸುತ್ತವೆ).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ವಜ್ರವೆಂಬ ಆಯುಧವು ನಮಗಾಗಿ (ಮಳೆಗರೆಯುವುದಕ್ಕೋಸ್ಕರ ಮೇಘಗಳನ್ನು) ಸಮೀಪಿಸುತ್ತದೆ; ಯಾಗಕರ್ಮಕ್ಕೋಸ್ಕರ ಅಗ್ನಿಯೂ ಪ್ರಜ್ವಲಿಸುತ್ತಿದೆ; (ಯಜಮಾನರೂ) ಚರುಪುರೋಡಾಶಾದಿ ಹವಿಸ್ಸುಗಳೊಡನೆ, ಉದಕಗಳು ದ್ವೀಪವನ್ನು ಆವರಿಸುವಂತೆ, ಅಗ್ನಿಯನ್ನು ಸುತ್ತುಗಟ್ಟಿ ನಿಲ್ಲುತ್ತಾರೆ.

## English Translation.

Your weapon, Indra, is at hand for our (good); the Maruts send down the long-accumulated rain; Agni is blazing for the ceremony; the oblations encompass him as the waters (surround) an island.

॥ ವಿಶೇಷವಿಷಯಗಳು ॥

**ಋಷ್ಟಿಃ ಅಸ್ಮೇ ಅನ್ಯಕ್**—ಇಲ್ಲಿ ಇಂದ್ರನನ್ನು ಸಂಬೋಧಿಸಿದೆ. ಋಷ್ಟಿ ಶಬ್ದಕ್ಕೆ **ವಜ್ರಾಖ್ಯಾಯುಧ ವಿಶೇಷಃ** ವಜ್ರಾಯುಧವೆಂಬ ಹೆಸರಿನಿಂದ ಪ್ರಸಿದ್ಧವಾದ ಇಂದ್ರನ ಆಯುಧವೆಂದು ಅರ್ಥಮಾಡಿ, ಆ ಆಯುಧವು **ಅಸ್ಮದ್ವೃಷ್ಟ್ಯರ್ಥಂ ಮೇಘಸಮೀಪೇ ಪ್ರಾಪ್ನೋತಿ** ಯಜಮಾನರಾದ ನಮಗಾಗಿ ವೃಷ್ಟಿಯ ಉದಕಗಳನ್ನು ಸುರಿಸುವುದಕ್ಕಾಗಿ ಮೇಘಗಳ ಸಮೀಪದಲ್ಲಿ ಪ್ರಯೋಗಿಸಲ್ಪಡುತ್ತದೆ ಎಂಬ ಅರ್ಥವನ್ನು ವರ್ಣಿಸಿದೆ. ನಿರುಕ್ತಕಾರರು–ಅನ್ಯಕ್ ಎಂಬ ಪದದ ಅರ್ಥವನ್ನು—

**ಅನ್ಯಕ್ ಸಾ ತ ಇಂದ್ರ ಋಷ್ಟಿರಸ್ಮೇ ಸನೇಮ್ಯಭ್ವಂ** ಎಂಬ ಈ ಋಕ್ಕನ್ನೇ ಉದಹರಿಸಿ **ಅನಾಕ್ತೇತಿ ವಾ ಅಭ್ಯಕ್ತೇತಿ ವಾ** ಎಂದು ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು **ಋಷ್ಟಿರಭಿಧೇಯಾ ನಾಮ ಏಷಾ ಪ್ರತ್ಯಂಚಿ ತಾನಾನೋಷಾಪ್ರತ್ಯಂಚಿತೇತಿ ಕ್ಷಿಪ್ತೇತಿ ಶತ್ರವಃ ಮನ್ಯಂತೇ** ಶತ್ರುಗಳು ಇಂದ್ರನ ಋಷ್ಟಿ ಎಂಬ ಆಯುಧವು ನನ್ನ ವಿಷಯದಲ್ಲಿ ಪ್ರಯುಕ್ತವಾಗಿದೆ ಎಂದು ತಿಳಿಯುತ್ತಾರಾದುದರಿಂದಲೂ, **ನಿತ್ಯಕಾಲಂ ಶತ್ರೂನ್ ಪ್ರತಿ ಅಭಿಗತೈವ ಭವತೀತಿ ಅನ್ಯಗಿತ್ಯುಚ್ಯತೇ** ಯಾವಾಗಲೂ ಶತ್ರುಗಳ ವಿಷಯದಲ್ಲಿ ಉಪಯೋಗಿಸಲ್ಪಡುವ ಕಾರಣದಿಂದಲೂಅನ್ಯಕ್, ಎಂದು ಪ್ರಸಿದ್ಧವಾಗಿದೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಮರುತಃ ಸನೇಮಿ ಅಭ್ವಂ ಜುನಂತಿ—ಚಿರಕಾಲಂ ಸಂಗೃಹೀತಂ ಉದಕಂ ವರ್ಷಂತಿ** | ಇಂದ್ರನ ಋಷ್ಟಿ ಎಂಬ ಆಯುಧವು ಮೇಘಸಮೀಪದಲ್ಲಿ ಪ್ರಯುಕ್ತವಾದಾಗ ಮೇಘಗಳು ಬಹಳಕಾಲದಿಂದಲೂ ಸಂಗ್ರಹಿಸಿರುವ

ಉದಕಗಳು ಹೊರಬೀಳುವಂತೆ ಮಾಡಿ ವೃಷ್ಟಿಯನ್ನು ಉಂಟುಮಾಡುತ್ತದೆ ಎಂದು ಅರ್ಥವನ್ನು ಹೇಳಿದೆ. **ಅಭ್ವ** ಎಂಬ ಪದವು ಉದಕನಾಮಗಳಲ್ಲಿಯೂ (ನಿ. ೨-೨೪) ಮಹನ್ನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ ಇಲ್ಲಿ ಉದಕವೆಂಬ ಅರ್ಥವನ್ನು ವಿವರಿಸಿದೆ.

**ಸನೇಮಿ**—ಎಂಬ ಪದವು ಪುರಾಣನಾಮಗಳಲ್ಲಿ (ನಿ. ೩-೨೦) ಉಕ್ತವಾಗಿದ್ದರೂ,

**ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।**
**ಜಂಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯುವನ್ನಮೀವಾಃ ॥**

(ಋ. ಸಂ. ೭-೩೮-೭)

ಎಂಬ ಈ ಋಕ್ಕಿನಲ್ಲಿರುವ ಸನೇಮಿ ಪದಕ್ಕೆ **ಕ್ಷಿಪ್ರಂ** ಎಂಬ ಅರ್ಥದಲ್ಲಿರುವ ಪ್ರಯೋಗವನ್ನು ತೋರಿಸಿದ್ದಾರೆ.

ನಿರುಕ್ತಕಾರರು ಸನೇಮಿ ಶಬ್ದಕ್ಕೆ ಪುರಾಣ ಅಥವಾ ಬಹಳ ಹಿಂದಿನಕಾಲದ್ದು, **ಕ್ಷಿಪ್ರ** (ಜಾಗ್ರತೆಯಾಗಿರುವುದು) ಎಂಬ ಎರಡು ಅರ್ಥಗಳನ್ನು ಹೇಳಿರುವುದರಲ್ಲಿ ಪುರಾಣ ಎಂಬ ಅರ್ಥವನ್ನೇ ಸಾಯಣರು ಅಂಗೀಕರಿಸಿದ್ದಾರೆ. ಮತ್ತು ಇದನ್ನೇ ತಮ್ಮ ವ್ಯಾಖ್ಯಾನದಲ್ಲಿ **ಸನೇಮಿ ಅಹ್ನಾಯ ಇತಿ ಷಟ್ ಪುರಾಣನಾಮಾನಿ ಇತ್ಯುಕ್ತತ್ವಾತ್ ಸನೇಮಿ ಇತಿ ಪುರಾಣನಾಮ ಪುರಾಣಂ ಚಿರಕಾಲಂ ಸಂಗೃಹೀತಂ**—ಆರು ಪುರಾಣನಾಮಗಳ ಮಧ್ಯದಲ್ಲಿ ನಿರುಕ್ತದಲ್ಲಿ ಪಾಠಮಾಡಿರುವುದರಿಂದ ಸನೇಮಿ ಶಬ್ದಕ್ಕೆ ಪುರಾಣ (ಹಳೆಯದು) ಎಂಬ ಅರ್ಥವನ್ನು ಸಮರ್ಥನೆ ಮಾಡಿ ಬಹಳ ಕಾಲದಿಂದಲೂ ಉದಕಗಳು ಸಂಚಿತವಾದವುಗಳೆಂಬ ಅರ್ಥವನ್ನು ವಿವರಿಸಿದ್ದಾರೆ.

ಈ ಋಕ್ಕಿನ ಉತ್ತರಾರ್ಧಕ್ಕೆ ಎರಡುವಿಧವಾದ ಅರ್ಥವನ್ನು ವಿವರಿಸಿದೆ. ಈ ಎರಡು ವಿಧವಾದ ಅರ್ಥವೂ **ಅಗ್ನಿಶ್ಚಿದ್ಧಿಷ್ವ** ಎಂಬಲ್ಲಿರುವ **ಚಿತ್** ಎಂಬ ಪದದ ಪೂರಣಾರ್ಥ ಉಪಮಾರ್ಥಗಳನ್ನು ಅನುಸರಿಸಿ ಉಂಟಾಗಿದೆ. ಮೊದಲನೆಯ ಅರ್ಥದಲ್ಲಿ ಅಗ್ನಿ ಪದವು ವಿಶೇಷ್ಯವಾಗಿದೆ. ಅಗ್ನಿಯು **ಅತಸೇ ಸಂತತೇ ಕರ್ಮಣಿ ನಿಮಿತ್ತ ಭೂತೇ ಸತಿ ಶುಶುಕ್ವಾನ್**–ವೃಷ್ಟ್ಯಾದಿಗಳಿಂದ ಸಸ್ಯಗಳು ಉತ್ಪನ್ನವಾದನಂತರ ಯಜ್ಞಾದಿ ಕರ್ಮಗಳ ನಿಮಿತ್ತವಾಗಿ ಕಾಂತಿಯುಳ್ಳವನಾಗಿ ಪ್ರಕಾಶಿಸುವನು ಎಂದೂ ಹೀಗೆ ಪ್ರಕಾಶಿಸುತ್ತಿರುವ ಅಗ್ನಿಯನ್ನು ತೃಪ್ತಿಪಡಿಸುವುದಕ್ಕಾಗಿ **ಪ್ರಯಾಂಸಿ ದಧತಿ ಚರುಪುರೋಡಾಶಾದಿಹವೀಂಷಿ ಧಾರಯಂತಿ ದದತಿ ವಾ ಯಜಮಾನಾಃ**–ಯಜ್ಞಮಾಡುವವರು ಹವಿಸ್ಸುಗಳನ್ನು ಧರಿಸಿರುತ್ತಾರೆ, ಅಥವಾ ಅಗ್ನಿಯಲ್ಲಿ ಅರ್ಪಿಸುತ್ತಾರೆ ಎಂದು ಅರ್ಥವನ್ನು ವಿವರಿಸಿ, ಯಜಮಾನರು ಧರಿಸಿರುವ ಹವಿಸ್ಸುಗಳನ್ನು **ಆಪೋ ನ ದ್ವೀಪಂ** ಉದಕಗಳು ದ್ವೀಪವನ್ನು ಧರಿಸಿರುವಂತೆ ಎಂದು ಹೋಲಿಸಿದೆ. **ದ್ವೀಪ** ಶಬ್ದದ ಅರ್ಥವೂ **ದ್ವಿಪಾರ್ಶ್ವಸ್ಥೋದಕವಾನ್ ಪರ್ವತಾದಿಃ** ಎರಡು ಕಡೆಗಳಲ್ಲಿಯೂ ಉದಕಗಳಿಂದ ಸುತ್ತುವರಿಯಲ್ಪಟ್ಟ ಭೂಭಾಗವು ದ್ವೀಪವೆಂದು ವಿವೃತವಾಗಿದೆ, **ತಂ ಯಥಾ ಆಪೋ ಧಾರಯಂತಿ** ಉದಕಗಳು ದ್ವೀಪವನ್ನು ಧರಿಸಿರುವಂತೆ ಅಗ್ನಿ ಮತ್ತು ಯಜಮಾನರುಗಳ ಮಧ್ಯದಲ್ಲಿ ಹವಿಸ್ಸು ಧೃತವಾಗಿರುವುದೆಂದು ಉಪಮಾನ ಪ್ರಕಾರವೂ ವರ್ಣಿತವಾಗಿದೆ.

ನಿರುಕ್ತಕಾರರು **ಚಿತ್** ಎಂಬ ನಿಪಾತದ ಅರ್ಥವನ್ನು ವಿವರಿಸುವಾಗ **ಚಿದಿತ್ಯೇಷೋ ಅನೇಕಕರ್ಮಾ ।** ಚಿತ್ ಎಂಬ ನಿಪಾತವು ಅನೇಕಾರ್ಥಗಳಲ್ಲಿ ಪ್ರಯುಕ್ತವಾಗಿರುವುದು ಎಂದು ವ್ಯಾಖ್ಯಾನಮಾಡಿ, ಅವುಗಳನ್ನು

ವಿವರಿಸುವಾಗ **ದಧಿಚಿದಿತ್ಯುಪಮಾರ್ಥೇ** ಎಂಬ ವಾಕ್ಯದಿಂದ ಚಿತ್ ಪದದ ಪ್ರಯೋಗವು ಉಪಮಾರ್ಥದಲ್ಲಿರುವುದನ್ನು ವಿವರಿಸಿದ್ದಾರೆ. ಸಾಯಣರು ಇದನ್ನು ಅನುಸರಿಸಿ, **ಚಿಚ್ಛಬ್ದಃ ಉಪಮಾರ್ಥೇ ದಧಿಚಿದಿತ್ಯುಪಮಾರ್ಥೇ** (ನಿ. ೧-೪) **ಇತಿ ಯಾಸ್ಕೇನೋಕ್ತತ್ವಾತ್** ಎಂದು ಉದಾಹರಿಸಿ, **ಯದ್ವಾ ಆಯುಧಮೇವೋಚ್ಯತೇ । ವಜ್ರಾಖ್ಯಾಯುಧವಿಶೇಷೋ ಅತಸೇ ಕಾಷ್ಠಸಮೂಹೇ ಶುಶುಕ್ವಾನ್ ದೀಪಯನ್ನಗ್ನಿಶ್ಚಿತ್** । ಇಂದ್ರನ ವಜ್ರವೆಂಬ ಹೆಸರುಳ್ಳ ಆಯುಧವು ಇಲ್ಲಿ ಉಕ್ತವಾಗಿದೆ. ಇದು ಕಟ್ಟಿಗೆಗಳ ರಾಶಿಯಲ್ಲಿ ಪ್ರಕಾಶಿಸುವ ಅಗ್ನಿಯ ಹಾಗೆ ಪ್ರಕಾಶಿಸುತ್ತಿರುತ್ತದೆ ಎಂಬ ಅರ್ಥವನ್ನು ವಿವರಿಸುವ **ಕಾಷ್ಠೇ ಜ್ವಲನ್ನಗ್ನಿರಿವ ತದ್ವದ್ದೀಪ್ತೋ ವರ್ತತೇ** ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ಅಗ್ನಿಯ ಪ್ರಭೂತವಾದ ದೀಪ್ತತ್ವವನ್ನು **ಸಾ** ಎಂಬ ಪದದಿಂದ ಉಕ್ತವಾಗಿದೆ ಎಂದು ವಿವರಿಸಿದ್ದಾರೆ. **ಆಪೋ ನ ದ್ವೀಪಂ** ಎಂಬ ಉಪಮಾನವಾಕ್ಯವನ್ನು **ಆಪಃ ದ್ವೀಪಮಿವ ವೃಷ್ಟ್ಯುದಕಾನಿ ಸಸ್ಯಾದ್ಯನ್ನಾನಿ ಧಾರಯಂತಿ** ಉದಕಗಳು ದ್ವೀಪವನ್ನು ಆವರಿಸಿಕೊಂಡು ಧರಿಸಿರುವಂತೆ, ವೃಷ್ಟ್ಯುದಕಗಳು ಸಸ್ಯಮೊದಲಾದುವುಗಳನ್ನೂ ಅನ್ನವನ್ನೂ ಧರಿಸಿರುತ್ತವೆ ಎಂಬಅರ್ಥವನ್ನು ವಿವರಿಸಿ ಸಮರ್ಥನೆ ಮಾಡಿದ್ದಾರೆ.

**ಅತಸೇ—ಸಂತತೇ ಕರ್ಮಣಿ.** ನಿರಂತರವಾಗಿ (ನಡೆಯುತ್ತಿರುವ) ಆಚರಿಸುವುದು ಎಂಬ ಅರ್ಥವನ್ನು ಅತಸ್ ಎಂಬ ಪದಕ್ಕೆ ವಿವರಿಸಿದೆ. ನಿರುಕ್ತಕಾರರು—

**ಆಸಾಂತಮನ್ಯುಸ್ತೃಪಲಪ್ರಭರ್ಮಾ ಧುನಿಶ್ಶಿಮೀವಾಞ್ಛರುಮಾँ ಋಜೀಷೀ ।**
**ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥**

(ಋ. ಸಂ ೧೦-೮೯-೫)

ಇಲ್ಲಿ **ಅತಸಾ** ಎಂಬ ಪದಕ್ಕೆ ದುರ್ಗಾಚಾರ್ಯರು **ಅನುಪಕ್ಷೀಣಾನಿ** ವೃದ್ಧಿಹೊಂದುತ್ತಿರುವ ಎಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು **ಸಂತತೇ** ಎಂದು ಇದೇ ಅರ್ಥವನ್ನೇ ಹೇಳಿದ್ದಾರೆ

॥ ವ್ಯಾಕರಣಪ್ರಕ್ರಿಯಾ ॥

**ಅಮ್ಯಕ್—** ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ಅಸ್ಮೇ—ಸುಪಾಂ ಸುಲುಕ್**- (ಪಾ. ಸೂ. ೭-೧-೩೯) ಎಂಬುದರಿಂದ ಚತುರ್ಥಿಗೆ ಶೇ ಆದೇಶ.

**ಜುನಂತಿ—** ಜು ಎಂಬುದು ಗತ್ಯರ್ಥಕವಾದ ಸೌತ್ರ ಧಾತು. ಲಟ್ ಪ್ರಥಮಪುರುಷ ಬಹುವಚನ ಝಿಗೆ ಅಂತಾದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಅದರ ಆಕಾರಕ್ಕೆ ಲೋಪ. ತಿಙಂತ ನಿಘಾತಸ್ವರ ಬರುತ್ತದೆ.

**ಅತಸೇ—** ಅತ ಸಾತತ್ಯಗಮನೇ. ಧಾತು. **ಅತ್ಯವಿಚಮಿತಮಿ—**(ಉ. ಸೂ. ೩೯೭) ಎಂಬುದರಿಂದ ಅಸಚ್ ಪ್ರತ್ಯಯ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮ್ಯಂತರೂಪ.

**ಶಶುಕ್ವಾನ್—** ಶುಚ ದೀಪ್ತೌ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭)

ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಪ್ರತ್ಯಯ ನಿಮಿತ್ತವಾಗಿ ದ್ವಿತ್ವಾದಿಗಳು ಬಂದಾಗ ವ್ಯತ್ಯಯದಿಂದ ಕುತ್ವ ಬರುತ್ತದೆ. ವಸುವಿನ ಸ್ವರ ಉಳಿಯುತ್ತದೆ.

**ದ್ವೀಪಂ**—ದ್ವಿರ್ಗತಾ ಆಪೋ ಯಸ್ಮಿನ್ ಇತಿ ದ್ವೀಪಂ. **ದ್ವ್ಯಂತರುಪಸರ್ಗೇಭ್ಯೋಽಪ ಈತ್** (ಪಾ. ಸೂ. ೬-೩-೯೭) ಎಂಬುದರಿಂದ ದ್ವಿ ಉಪಪದವಾಗಿರುವಾಗ ಅಪ ಎಂಬುದರ ಅಕಾರಕ್ಕೆ ಈತ್ವ.

**ದಧತಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ತ್ವಂ ತೂ ನ ಇಂದ್ರ ತಂ ರಯಿಂ ದಾ ಓಜಿಷ್ಠಯಾ ದಕ್ಷಿಣಯೇವ ರಾತಿಂ ।
ಸ್ತುತಶ್ಚ ಯಾಸ್ತೇ ಚಕನಂತ ವಾಯೋಃ ಸ್ತನಂ ನ ಮಧ್ವಃ ಪೀಪಯಂತ ವಾಜೈಃ ॥ ೪ ॥

॥ ಪದಪಾಠಃ ॥

ತ್ವಂ । ತು । ನಃ । ಇಂದ್ರ । ತಂ । ರಯಿಂ । ದಾಃ । ಓಜಿಷ್ಠಯಾ । ದಕ್ಷಿಣಯಾಽಇವ । ರಾತಿಂ ।
ಸ್ತುತಃ । ಚ । ಯಾಃ । ತೇ । ಚಕನಂತ । ವಾಯೋಃ । ಸ್ತನಂ । ನ । ಮಧ್ವಃ । ಪೀಪಯಂತ । ವಾಜೈಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ತು । ತುರವಧಾರಣೇ । ತ್ವಮೇವ ತಂ ರಯಿಂ ತ್ವದ್ದಾನಯೋಗ್ಯಂ ಗವಾದಿಧನಂ ದಾಃ । ದೇಹಿ । ಯಸ್ಮಾದಿತರೇಭ್ಯೋಽಪಿ ತ್ವಮೇವ ಬಹುಪ್ರದಃ ಅತೋಽತಿಮಹದ್ಧನಂ ದೇಹೀತ್ಯರ್ಥಃ । ವಯಂ ತ್ವೋಜಿಷ್ಠಯೌಜಸ್ವಿತಮಯಾ ಪರಿಕ್ರಮಣಾರ್ಹಯಾ ದಕ್ಷಿಣಯಾ ಸಮೃದ್ಧಿಸಾಧನಯಾ ಗವಾದಿಲಕ್ಷಣಯರ್ತ್ವಿಜಮಿ ವ ರಾತಿಂ ದಾತಾರಂ ತ್ವಾಂ ಪ್ರೀಣಯಾಮ ಇತಿ ಶೇಷಃ । ಯದ್ವಾ । ದಕ್ಷಿಣಾಶಬ್ದೋ ದೇಯದ್ರವ್ಯಸಾಮಾನ್ಯವಚನಃ । ರಾತಿಶಬ್ದೋ ಬಂಧುವಚನಃ । ಹಿರಣ್ಯಾದಿಸಾರವದ್ದ್ರವ್ಯಪ್ರದಾನೇನ ಬಂಧುಂ ಯಥಾ ವಶೀಕುರ್ವಂತಿ ತದ್ವತ್ತ್ವಾಂ ವಶೀಕುರ್ಮ ಇತ್ಯರ್ಥಃ । ಕಿಂಚ ವಾಯೋರ್ಗಂತಯುವಕ್ಷೇಪಿಷ್ಠಸ್ಯ ಶೀಘ್ರುವರಪ್ರದಸ್ಯ ತೇ ॥ ಕರ್ಮಣಿ ಷಷ್ಠೀ ॥ ವಾಯುಂ ತ್ವಾಂ ಸ್ತುತೋ ಯೇಽಸ್ಮದೀಯಾಃ ಸ್ತೋತಾರಶ್ಚಕನಂತ ಕಾಮಯಂತೇ ಅಸ್ತುವನ್ । ಯಾಃ ಸ್ತುತಯಸ್ತ್ವಾಮೇವಾ-

ಕಾಮಯಂತೇತಿ ವಾ ಯೋಜನಾ ॥ ಕನತೇರ್ಣ್ಯಂತಾಲ್ಲುಙಿ ಚಙಿ ರೂಪಂ । ಚಙ್ಯನ್ಯತರಸ್ಯಾಮಿತಿ ಚಙಃ ಪೂರ್ವಮಕ್ಷರಮುದಾತ್ತಂ ॥ ತ್ವಾಂ ಹೋತ್ರಾದಯೋ ವಾಜೈರ್ಹವಿರ್ಲಕ್ಷಣೈರನ್ನೈಃ ಪೀಪಯಂತ । ಆಪ್ಯಾಯಯಂತಿ । ತತ್ರ ದೃಷ್ಟಾಂತಃ । ಮಧ್ವೋ ಮಧುರಸ್ಯ ಸ್ತನ್ಯಸ್ಯ ಲಾಭಾಯ ವಾಜೈಃ ಸಾರವದ್ಭಿರನ್ನವಿಶೇಷೈಃ ಸ್ತನಂ ನ । ತಂ ಯಥಾಪ್ಯಾಯಯಂತಿ ತದ್ವದಯಂ ತ್ವಾಂ ಬಹುಕೃತಪ್ರದಾನಾಯ ಸ್ತುತ್ಯಾ ಹವಿಷಾಪ್ಯಾಯಯಾಮಃ । ತ್ವಂ ತು ದಾತವ್ಯತ್ವೇನ ಪ್ರಸಿದ್ಧಂ ಧನಂ ಸರ್ವದಾ ದೇಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಹೇ) **ಇಂದ್ರ**—ಎಲೈ ಇಂದ್ರನೇ । **ಓಜಿಷ್ಠಯಾ**—ಅತ್ಯಂತ ಓಜಸ್ವಿಯೂ (ಅತಿ ಶ್ರೇಷ್ಠವೂ) **ದಕ್ಷಿಣಯಾ ಇವ**—ಸಮೃದ್ಧಿ ಸಾಧನವೂ ಆದ (ಗವಾದಿಗಳಿಂದ ಋತ್ವಿಜನನ್ನು ತೃಪ್ತಿಪಡಿಸುವಂತೆ) । **ರಾತಿಂ**—ದಾತೃವಾದ ನಿನ್ನನ್ನು (ತೃಪ್ತಿಪಡಿಸುತ್ತೇವೆ) । [ ಅಥವಾ **ಓಜಿಷ್ಠಯಾ**—ಅತಿಶ್ರೇಷ್ಠವಾದ । **ದಕ್ಷಿಣಯಾ**—ದಕ್ಷಿಣೆಯಿಂದ **ರಾತಿಂ ಇವ**—ಬಂಧುಗಳನ್ನು (ವಶಪಡಿಸಿಕೊಳ್ಳುವಂತೆ ನಿನ್ನನ್ನೂ ಸ್ತುತಿ ಮತ್ತು ಹವಿರಾದಿಗಳಿಂದ ವಶಪಡಿಸಿ| ಕೊಳ್ಳುತ್ತೇವೆ) ] । (**ಕಿಂಚ**—ಮತ್ತು) । **ವಾಯೋಃ**—ಶೀಘ್ರ ವರಪ್ರದನಾದ । **ತೇ**—ನಿನ್ನನ್ನು । **ಸ್ತುತಃ**—(ಯಾವ ನಮ್ಮವರಾದ) ಸ್ತೋತೃಗಳು । **ಚಕನಂತ**—ಸ್ತುತಿಸುತ್ತಾರೋ (ಅಪೇಕ್ಷಿಸುತ್ತಾರೋ) । **ಯಾಃ ಸ್ತುತಃ ಚ**—ಯಾವ (ನಮ್ಮ) ಸ್ತುತಿಗಳೂ । **ಚಕನಂತ**—ಅಪೇಕ್ಷಿಸಿದವೋ । **ಮಧ್ವಃ**—ಮಧುರವಾದ (ಸ್ತನ್ಯದ ಲಾಭಕ್ಕೋಸ್ಕರ) । **ವಾಜೈಃ**—(ಸಾರವತ್ತಾದ) ಅನ್ನಾದಿಗಳಿಂದ । **ಸ್ತನಂ ನ**—(ಸ್ತ್ರೀಯ)ಸ್ತನವನ್ನು ಪೋಷಿಸುವಂತೆ (ನಿನ್ನನ್ನು) । (**ವಾಜೈಃ**—ಹವಿರಾದಿಗಳಿಂದ) । **ಪೀಪಯಂತ**—ತೃಪ್ತಿಪಡಿಸುತ್ತಾರೆ । **ತ್ವಂ ತು**—ನೀನೂ । **ತಂ**—ಆ (ನಿನಗೆ ಅರ್ಪಿಸಲು ಯೋಗ್ಯವಾದ) । **ರಯಿಂ**—(ಗವಾದಿರೂಪ) ಧನವನ್ನು । **ನಃ**—ನಮಗೆ । **ದಾಃ**—ಅನುಗ್ರಹಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಉತ್ತಮವಾದ ಗವಾದಿಲಕ್ಷಣ ದಕ್ಷಿಣೆಯಿಂದ ಋತ್ವಿಜರನ್ನು ಅಥವಾ ಬಂಧುಗಳನ್ನು ತೃಪ್ತಿಪಡಿಸುವಂತೆ ನಿನ್ನನ್ನು ತೃಪ್ತಿಪಡಿಸುತ್ತೇವೆ; ನಮ್ಮ ಸ್ತುತಿಗಳೂ ನಿನ್ನನ್ನೇ ಸ್ತುತಿಸುತ್ತವೆ; ಮಧುರವಾದ ಸ್ತನ್ಯವನ್ನು ಅಭಿವೃದ್ಧಿ ಪಡಿಸುವುದಕ್ಕೋಸ್ಕರ, ಸಾರವತ್ತಾದ ಅನ್ನಾದಿಗಳಿಂದ ಸ್ತ್ರೀಯಸ್ತನವನ್ನು ಪೋಷಿಸುವಂತೆ, ನಿನ್ನನ್ನು ಹೋತ್ರಾದಿ ಋತ್ವಿಜರು ಹವಿರಾದಿಗಳಿಂದ ಪೋಷಿಸುತ್ತಾರೆ; ನೀನೂ ಕೂಡ ನಿನಗೆ ಅರ್ಪಿಸಲು ಯೋಗ್ಯವಾದ ಗವಾದಿರೂಪ ಧನವನ್ನು ನಮಗೆ ಅನುಗ್ರಹಿಸು.

English Translation.

Indra, quickly grant us that wealth (which you possess, for we gratify) the donor with a most worthy present : we, your praisers, offer to you, the ready-giver of boons, the laudations that would propitiate you ; (and the priests) nourish you with sacrificial food, as they cherish the bosom (of a female for the sake of replenishing it) with sweet (milk).

॥ ವಿಶೇಷವಿಷಯಗಳು ॥

**ತಂ ರಯಿಂ ದಾಃ—ತ್ವದ್ದಾನಯೋಗ್ಯಂ ಗವಾದಿಧನಂ ದೇಹಿ** । ರಯಿ ಶಬ್ದವು ಉದಕನಾಮುಗಳಲ್ಲಿಯೂ (ನಿ. ೨-೨೪) ಧನನಾಮಗಳಲ್ಲಿಯೂ (ನಿ. -೩೯) ಪಠಿತವಾಗಿದೆ ಮತ್ತು **ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** (ನಿ. ೪-೧೭) ಎಂದು ವ್ಯಾಖ್ಯಾತವಾಗಿದೆ. ಇಂದ್ರನು ಇತರರಿಗಿಂತಲೂ ಪ್ರಭೂತವಾಗಿರುವ ಧನವನ್ನು ಅತಿಶಯವಾಗಿ ಕೊಡುವವನೆಂದೂ **ಯಸ್ಮಾದಿತರೇಭ್ಯೋಽಪಿ ತ್ವಮೇವ ಬಹುಪ್ರದಃ ಅತೋ ಅತಿ ಮಹದ್ಧನಂ ದೇಹಿ** ಎಂಬ ವಾಕ್ಯದಿಂದ ಧನವನ್ನು ನಮಗೆ ಅನುಗ್ರಹಿಸಲಿ ಎಂದೂ ಪ್ರಾರ್ಥಿಸಿದೆ.

**ಓಜಿಷ್ಠಯಾ ದಕ್ಷಿಣಯಾ ಇವ ರಾತಿಂ—**ಈವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಓಜಿಷ್ಠಯಾ ಎಂಬ ಪದವು ದಕ್ಷಿಣಾ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ಶಕ್ತಿಯಿಂದ ಕೂಡಿರುವ (ಚಲನ–ಕ್ರಿಯಾನ್ವಿತವಾದ) ಜಂಗಮರೂಪವಾದ ಅಭಿವೃದ್ಧಿಗೆ ಸಾಧನವಾದುದೂ ಆಗಿರುವ ಗೋರೂಪವಾದ ಧನವೆಂದು ದಕ್ಷಿಣಾ ಶಬ್ದಕ್ಕೆ ಅರ್ಥವನ್ನು ವಿವರಿಸಿದೆ. ಈ ಪ್ರಕಾರವಾಗಿರುವ ದಕ್ಷಿಣೆಯಿಂದ ಋತ್ವಿಜರನ್ನು ಸಂತೋಷ ಪಡಿಸುವಹಾಗೆ ದ್ರವ್ಯದಾತೃವಾಗಿರುವ ಇಂದ್ರನನ್ನು ಯಜಮಾನರಾದ ನಾವು ಸಂತೋಷಪಡಿಸುತ್ತೇವೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ನಿರುಕ್ತಕಾರರು–**ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣಃ ವ್ಯೃದ್ಧಂ ಸಮರ್ಧಯತೀತಿ** ಸಮೃದ್ಧಿಯನ್ನು ಉಂಟುಮಾಡುವ ದಾನಸಾಧನವು ದಕ್ಷಿಣೆಯು, ಅಥವಾ **ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣಃ** ಉತ್ಸಾಹವನ್ನು ಹೆಚ್ಚಿಸುವ ಬಲಗಡೆಯ ಹಸ್ತವು ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು ದಾನಕರ್ಮಗಳಲ್ಲಿ (ನಿ. ೩–೧೯) ರಾತಿ ಎಂಬ ಪದವು ಪಠಿತವಾಗಿದೆ.

**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।**
**ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥**

(ಋ. ಸಂ. ೬-೫೮-೧)

ಇಲ್ಲಿ **ರಾತಿ** ಶಬ್ದಕ್ಕೆ ದಾನ ಎಂದು ಅರ್ಥವನ್ನು ವರ್ಣಿಸಿದೆ.

ಸಾಯಣರು ಎರಡನೆಯ ಅರ್ಥವನ್ನು ವಿವರಿಸುವಾಗ **ದಕ್ಷಿಣಾಶಬ್ದೋ ದೇಯದ್ರವ್ಯಸಾಮಾನ್ಯವಚನಃ । ರಾತಿಶಬ್ದೋ ಬಂಧುವಚನಃ** ದಕ್ಷಿಣಾ ಎಂಬ ಪದವು ದಾನಮಾಡುವ ದ್ರವ್ಯವನ್ನು ಬೋಧಿಸುವುದು. ರಾತಿ ಶಬ್ದಕ್ಕೆ ಬಂಧು ಎಂದು ಅರ್ಥವು ಎಂದು ಈ ಪದಗಳಿಗೆ ಅರ್ಥವನ್ನು ವಿವರಿಸಿ, **ಹಿರಣ್ಯಾದಿಸಾರವದ್ದ್ರವ್ಯಪ್ರದಾನೇನ ಬಂಧುಂ ಯಥಾ ವಶೀಕುರ್ವಂತಿ—**ಸುವರ್ಣವೇ ಮೊದಲಾದ ಬೆಲೆಬಾಳುವ ಧನಾದಿಗಳನ್ನು ಕೊಟ್ಟು ಬಂಧುಗಳ ಪ್ರೀತಿಯನ್ನು ಸಂಪಾದಿಸುವ ಹಾಗೆ ಎಂದು ಅರ್ಥವನ್ನು ವರ್ಣಿಸಿ **ತದ್ವತ್ ತ್ವಾಂ ವಶೀಕುರ್ಮಃ** ಅದರಂತೆ ಸಾರವಾದ ಧನವನ್ನು ಇಂದ್ರನಿಗೆ ಅರ್ಪಿಸಿ ಇಂದ್ರನ ಪ್ರೀತಿಯನ್ನು ಸಂಪಾದಿಸುತ್ತೇವೆ ಎಂದು ಯಜಮಾನರ ಅಭಿಮತವು ವರ್ಣಿತವಾಗಿದೆ.

**ವಾಯೋಃ—ಧೌತೇಯುವಕ್ಷೇಪಿಷ್ಠಸ್ಯ ಶೀಘ್ರವರಪ್ರದಸ್ಯ ।** ಶತ್ರುವಾದ ಯೌವನವಯಸ್ಕನನ್ನು ನಾಶಮಾಡುವವನೂ, ಜಾಗ್ರತೆಯಾಗಿ ವರವನ್ನು ಅನುಗ್ರಹಿಸುವವನೂ, ವಾಯುವಾಗಿರುವನು ಎಂದು ವಾಯುಶಬ್ದಕ್ಕೆ ಅರ್ಥವನ್ನು ವಿವರಿಸಿದೆ. ಯಾಸ್ಕರು **ವಾಯುರ್ವಾತೇಃ ವೇತೇರ್ವಾ ಸ್ಯಾದ್ಗತಿಕರ್ಮಣಃ, ಏತೇರಿತಿ ಸ್ಥೌಲಾಷ್ಠೀವಿಃ ಅನರ್ಥಕೋ ವಕಾರಃ** (ನಿ. ೧೦-೩) ಗಮನಾರ್ಥಕವಾದ ವಾ ಧಾತುವಿನಿಂದಾಗಲೀ ಇಣ್ ಗತೌ ಎಂಬ

ಧಾತುವಿನಿಂದಾಗಲಿ ವಾಯು ಎಂಬ ಶಬ್ದವು ನಿಷ್ಪನ್ನವಾಗಿರುವುದು. ಸ್ಥೌಲಾಷ್ಠೀವಿ ಎಂಬುವರು ಇಣ್ ಧಾತುವಿನಿಂದ ವಾಯು ಎಂಬ ಪದವು ಸಿದ್ಧವಾಗಿದೆ. ಇದರಲ್ಲಿ ವಕಾರಕ್ಕೆ ಅರ್ಥವಿಲ್ಲವೆಂದು ಹೇಳುತ್ತಾರೆ ಎಂದು ವಾಯುಶಬ್ದದ ನಿರ್ವಚನವನ್ನು ಮಾಡಿದ್ದಾರೆ.

ಸಾಯಣರು **ವಾಯೋಃ ತೇ ಸ್ತುತಃ** ಎಂಬಲ್ಲಿ **ತೇ** ಎಂಬ ಪದವು **ಕರ್ಮಣಿ ಷಷ್ಠೀ ವಾಯುಂ ತ್ವಾ ಸ್ತುತಃ ಯೇ ಅಸ್ಮದೀಯಾಃ ಸ್ತೋತಾರಃ** ವಾಯುವಾಗಿರುವ ನಿನ್ನನ್ನು ಸ್ತುತಿಮಾಡುವ ಋತ್ವಿಜರಾದ ಸ್ತೋತೃಗಳು ಸ್ತುತಿಗಳಿಂದ ಸ್ತೋತ್ರಮಾಡಿರುವರು ಎಂದು ಒಂದು ವಿಧವಾದ ಅರ್ಥವನ್ನು ಹೇಳಿದ್ದಾರೆ.

ಎರಡನೆಯದಾಗಿ **ಯಾಃ ಸ್ತುತಯಃ ತ್ವಾಮೇವ ಅಕಾಮಯನ್ತ** ಋತ್ವಿಜರು ಪಠಿಸುವ ಸ್ತುತಿಗಳು ನಿನ್ನನ್ನೇ ವಿಷಯೀಕರಿಸಿರುತ್ತವೆ ಎಂದು ಅರ್ಥವನ್ನು ವಿವರಿಸಿದೆ.

**ವಾಜೈಃ ಪೀಪಯಂತ ಮಧ್ವಃ ಸ್ತನಂ ನ** ಇಲ್ಲಿ **ತ್ವಾಂ ಹೋತ್ರಾದಯಃ ಹವಿರ್ಲಕ್ಷಣೈರನ್ನೈಃ ಆಪ್ಯಾಯಯಂತಿ** ಎಂಬ ವಾಕ್ಯಕ್ಕೆ **ಮಧುರಸ್ಯ ಸ್ತನ್ಯಸ್ಯ ಲಾಭಾಯ ಸಾರವದ್ಭಿರನ್ನವಿಶೇಷೈಃ ಇವ ಆಪ್ಯಾಯಯಂತಿ** ಎಂದು ಉಪಮಾನವನ್ನು ಹೇಳಿದೆ. ಹೋತೃವೇ ಮೊದಲಾದವರು ಬಹಳವಾಗಿ ಅನುಗ್ರಹವನ್ನು ಮಾಡುವ ಇಂದ್ರನನ್ನು ಸ್ತುತಿಯಿಂದಲೂ, ಹವಿಸ್ಸಿನಿಂದಲೂ ಸ್ತುತಿಪಡಿಸುವರು ಎಂಬ ಅರ್ಥವು ಲೋಕದಲ್ಲಿ ಮಧುರವಾದ ಸ್ತನ್ಯವನ್ನು ಹೊಂದುವುದಕ್ಕಾಗಿ ಸಾರವತ್ತಾದ ಅನ್ನವೇ ಮೊದಲಾದವುಗಳಿಂದ ತೃಪ್ತಿಪಡಿಸುವಂತೆ ಇರುವುದು ಎಂದು ಹೋಲಿಸಿದೆ

॥ ವ್ಯಾಕರಣಪ್ರಕ್ರಿಯಾ ॥

**ದಾಃ**—ಡುದಾಞ್ ದಾನೇ. ಧಾತು. **ಛಂದಸಿಲುಙ್‌ಲಙ್‌ಲಿಟಃ** (ಪಾ ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರ ಲೋಪ. ಚ್ಲಿಗೆ ಸಿಜಾದೇಶ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. **ಬಹುಲಂ ಛಂದಸ್ಯ ಮಾಙ್**-(ಪಾ. ಸೂ ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ನಿಘಾತಸ್ವರ ಬರುತ್ತದೆ.

**ಓಜಿಷ್ಠಯಾಃ**—ಓಜಸ್ ಶಬ್ದಕ್ಕೆ ಮತ್ವರ್ಥದಲ್ಲಿ ವಿನಿ ಪ್ರತ್ಯಯ. ಇದರ ಮೇಲೆ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. **ವಿನ್‌ಮತೋರ್ಲುಕ್** (ಪಾ ಸೂ. ೫-೩-೬೫) ಎಂಬುದರಿಂದ ವಿನಿಗೆ ಲೋಪ **ಟೇಃ** (ಪಾ. ಸೂ. ೬-೪-೧೪೩) ಎಂಬುದರಿಂದ ಟಿಗೆ (ಅಸ್) ಲೋಪ. ಸ್ತ್ರೀತ್ವದಲ್ಲಿ ಟಾಪ್. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಾತಿಂ**—ಬಹುಲಗ್ರಹಣ ಸಾಮರ್ಥ್ಯದಿಂದ ಕರ್ತರಿಯಲ್ಲಿ ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷ**– (ಪಾ. ಸೂ. ೩-೩-೯೬) ಎಂಬುದರಿಂದ ಅದು ಉದಾತ್ತವಾಗುತ್ತದೆ.

**ಸ್ತುತಃ**—ಷ್ಟುಞ್ ಸ್ತುತೌ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಅದಕ್ಕೆ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಪ್ರಥಮಾ ಬಹುವಚನಾಂತರೂಪ.

**ಚಕನಂತ**— ಕನ ದೀಪ್ತಿಕಾಂತಿಗತಿಷು ಧಾತು. ಣ್ಯಂತದಮೇಲೆ ಲುಙ್. ಛಾಂದಸವಾಗಿ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ. **ಣಿಶ್ರಿದ್ರುಸ್ರು**-(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙ್. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚಕಾರದೇಶ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಅಭ್ಯಾಸಕ್ಕೆ ಇತ್ವಾದಿಗಳು ಬರುವುದಿಲ್ಲ. ಛಾಂದಸವಾಗಿ ಅಡಾಗಮ ಬರುವುದಿಲ್ಲ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. **ಚಙ್ಯನ್ಯತರಸ್ಯಾಂ** (ಪಾ. ಸೂ. ೬-೧-೨೧೮) ಎಂಬುದರಿಂದ ಚಙಿನ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ವಾಯೋಃ**— ವಾ ಗತಿಗಂಧನಯೋಃ ಧಾತು. **ಕೃವಾಪಾ**- (ಉ ಸೂ. ೧) ಎಂಬುದರಿಂದ ಉಣ್ ಪ್ರತ್ಯಯ. **ಆತೋ ಯುಕ್ ಚಿಣ್ ಕೃತೋಃ** ಎಂಬುದರಿಂದ ಯುಕಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಮಧ್ವಃ— ಜಸಾದಿಷು ಛಂದಸಿ ವಾವಚನಂ** ಎಂಬ ವಚನದಿಂದ ಷಷ್ಠೀ ಏಕವಚನ ಪರವಾದಾಗ ಗುಣಾದಿಗಳು ಬರುವುದಿಲ್ಲ. ಯಣಾದೇಶ.

**ಪೀಪಯಂತ**— ಪಾ ಪಾನೇ ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. **ಶಾಚ್ಛಾಸಾಹ್ವಾ**- (ಪಾ. ಸೂ. ೭-೩-೩೭) ಎಂಬುದರಿಂದ ಯುಕಾಗಮ. ಣ್ಯಂತದಮೇಲೆ ಛಾಂದಸವಾಗಿ ಲುಙ್. ಚ್ಲಿಗೆ ಚಙಾದಿಗಳು ಹಿಂದಿನಂತೆ ಬರುತ್ತವೆ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ತ್ವೇ ರಾಯ ಇಂದ್ರ ತೋಶತಮಾಃ ಪ್ರಣೇತಾರಃ ಕಸ್ಯ ಚಿದೃತಾಯೋಃ ।
ತೇ ಷು ಣೋ ಮರುತೋ ಮೃಳಯಂತು ಯೇ ಸ್ಮಾ ಪುರಾ ಗಾತೂಯಂತೀವ
ದೇವಾಃ ॥ ೫ ॥

॥ ಪದಪಾಠಃ ॥

ತ್ವೇ ಇತಿ । ರಾಯಃ । ಇಂದ್ರ । ತೋಶಽತಮಾಃ । ಪ್ರಽನೇತಾರಃ । ಕಸ್ಯ । ಚಿತ್ । ಋತಽಯೋಃ ।
ತೇ । ಸು । ನಃ । ಮರುತಃ । ಮೃಳಯಂತು । ಯೇ । ಸ್ಮ । ಪುರಾ । ಗಾತುಯಂತೀಽಇವ । ದೇವಾಃ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವೇ ತವ ರಾಯೋ ಧನವಿಶೇಷಾಸ್ತೋಶತಮಾಃ । ಅತಿಶಯೇನ ಪ್ರೀಣಯಿತಾರಃ ॥ ತುಷ್ಯತೇಸ್ತೋಷಃ । ಛಾಂದಸಂ ಶತ್ವಂ ॥ ಯದ್ವಾ। ತೇ ರಾಯೋ ರಾತಯೋ ಬಂಧವೋ ಬಂಧುಭೂತಾಃ ಸಖಿಭೂತಾ ಮರುತಸ್ತೋಶತಮಾಃ । ತೋಶತಿರ್ವಧಕರ್ಮಾ ನಿತೋಶಯತಿ ನಿಬರ್ಹಯತೀತಿ ತನ್ನಾಮಸು ಪಾಠಾತ್ । ತೋಶತಮಾ ಹಿಂಸಿತೃತಮಾ ಅವರ್ಷಕಾಣಾಂ ಮೇಘಾನಾಂ । ಕಸ್ಯ ಚಿದೃತಾಯೋಃ । ಋತಮಿತಿ ಯಜ್ಞನಾಮ । ಕಸ್ಯಾಪಿ ಯಜ್ಞೇಚ್ಛೋರ್ಯಜಮಾನಸ್ಯ ಪ್ರಣೇತಾರಃ ಪ್ರಕರ್ಷೇಣ ನಿರ್ವೋಢಾರಃ । ತೇ ಮರುತೋ ನೋಽಸ್ಮಾನ್ ಸುಷ್ಠು ಮೃಳಯಂತು । ಕೇ ತೇ । ಯೇ ಸ್ಮ ಯೇ ಖಲು ದೇವಾ ದ್ಯೋತನಶೀಲಾ ಮರುತಃ ಪುರಾ ಪೂರ್ವಂ ಗಾತುಯಂತೀವ । ಯಜ್ಞಗಮನಮಿಚ್ಛಂತೀವ । ತೆ ಆಗತ್ಯ ಮೃಳಯಂತು ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತ್ವೇ**—ನಿನ್ನ । **ರಾಯಃ**—ಧನವಿಶೇಷಗಳು । **ತೋಶತಮಾಃ**—ಹೆಚ್ಚಾದ ಸಂತೋಷವನ್ನುಂಟುಮಾಡುತ್ತವೆ । [ಅಥವಾ **ತ್ವೇ**—ನಿನ್ನ । **ರಾಯಃ**—ಬಂಧು ಭೂತರಾದ ಮರುದ್ದೇವತೆಗಳು । **ತೋಶತಮಾಃ**—(ಮಳೆ ಸುರಿಸದೇ ಇರುವ ಮೇಘಗಳನ್ನು) ವಿಶೇಷವಾಗಿ ಹಿಂಸಿಸತಕ್ಕವರು (ಮತ್ತು) ।] **ಕಸ್ಯಚಿತ್ ಋತಾಯೋಃ**—ಯಾವನಾದರೂ ಯಜ್ಞಮಾಡಲಿಚ್ಛಿಸುವವನಿಗೆ । **ಪ್ರಣೇತಾರಃ**—ಚೆನ್ನಾಗಿ ಯಜ್ಞನಿರ್ವಾಹ ಮಾಡುವವರು । **ಯೇ**—ಯಾವ । **ದೇವಾಃ ಸ್ಮ**—ಮರುದ್ದೇವತೆಗಳೇ । **ಪುರಾ**—ಮೊದಲು । **ಗಾತೂಯಂತಿ ಇವ**—ಯಜ್ಞಕ್ಕೆ ಹೋಗಲು ಇಚ್ಛೆಯುಳ್ಳವರಂತೆ ಇದ್ದರೋ । **ತೇ**—ಆ । **ಮರುತಃ**—ಮರುದ್ದೇವತೆಗಳು । **ನಃ**—ನಮಗೆ । **ಸು ಮೃಳಯಂತು**—ಹೆಚ್ಚು ಸುಖವನ್ನುಂಟುಮಾಡಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಐಶ್ವರ್ಯವು ಸುಖಕರವಾದುದು; (ಅಥವಾ ನಿನ್ನವರಾದ ಮರುದ್ದೇವತೆಗಳು ಅವರ್ಷಕಗಳಾದ ಮೇಘಗಳನ್ನು ಹೆಚ್ಚಾಗಿ ಹಿಂಸಿಸತಕ್ಕವರು); ಯಾಗ ಮಾಡಬೇಕೆಂದು ಇಚ್ಛಿಸುವವರಿಗೆಲ್ಲಾ (ಅನುಕೂಲರಾಗಿ) ಕಾರ್ಯನಿರ್ವಾಹಕರಾಗುತ್ತಾರೆ; ಅವರು ಮೊದಲು ಯಜ್ಞಕ್ಕೆ ಬರಬೇಕೆಂಬ ಇಚ್ಛೆಯುಳ್ಳವರು; ಇಂತಹ ಮರುದ್ದೇವತೆಗಳು ನಮಗೆ ಸುಖವನ್ನುಂಟುಮಾಡಲಿ.

English Translation

Your riches, Indra, are most delighting; the exciters of any one desirous to sacrifice : may those Maruts be propitious to us; the divine beings who were anxious to go first to the ceremony.

॥ ವಿಶೇಷವಿಷಯಗಳು ॥

**ತ್ವೇ ರಾಯಃ ತೋಶತಮಾಃ—ತವ ಧನವಿಶೇಷಾಃ ಅತಿಶಯೇನ ಪ್ರೀಣಯಿತಾರಃ**—ಇಂದ್ರನನ್ನು ಸಂಬೋಧಿಸಿ ಇಂದ್ರನು ಅನುಗ್ರಹಿಸುವ ಧನವು ಪ್ರಭೂತವಾದ ಆನಂದವನ್ನು ಉಂಟುಮಾಡುತ್ತವೆ ಎಂದು ಒಂದು

ವಿಧವಾದ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ **ತೋಶತಿರ್ವಧಕರ್ಮಾ ನಿತೋಶತೇ ನಿಬರ್ಹಯತಿ ಇತಿ** (ನಿ. ೭-೧೦) **ವಧಕರ್ಮಸು ಪಾಠಾತ್ ।** ವಧ ಕರ್ಮವಾಚಕಗಳಲ್ಲಿ **ತೋಶತೇ** ಎಂದು ಪಾಠಮಾಡಿರುವುದ ರಿಂದ **ತೋಶತಮಾಃ** ಎಂಬ ಪದಕ್ಕೆ **ಹಿಂಸಿತೃತಮಾಃ ಅವರ್ಷಕಾಣಾಂ ಮೇಘಾನಾಂ** (ಮಳೆಯನ್ನು ಹುಯ್ಯ ದಿರುವ) ವೃಷ್ಟ್ಯುದಕಗಳನ್ನು ಸುರಿಸದಿರುವ ಮೇಘಗಳನ್ನು ಹಿಂಸೆಮಾಡುವವರು ಎಂದು ಅರ್ಥವನ್ನು ವರ್ಣಿಸಿ, **ತೇ ರಾಯೋ ರಾತಯೋ ಬಂಧವೋ ಬಂಧುಭೂತಾಃ ಸಖಿಭೂತಾಃ ಮರುತಃ ತೋಶತಮಾಃ**— ಇಂದ್ರನ ಬಂಧುಗಳಾಗಿಯೂ ಸ್ನೇಹಿತರಾಗಿಯೂ, ದಾನಶೀಲರಾಗಿಯೂ, ಇರುವ ಮರುದ್ದೇವತೆಗಳು ವೃಷ್ಟಿಪ್ರದವಾಗದೆ ಇರುವ ಮೇಘಗಳನ್ನು ಹಿಂಸೆಪಡಿಸುವವರಾಗಿರುತ್ತಾರೆ ಎಂಬ ಅರ್ಥವನ್ನು ವಿವರಿಸಿದೆ.

**ಕಸ್ಯ ಚಿದೃತಾಯೋಃ ಪ್ರಣೇತಾರಃ— ಋತಮಿತಿ ಯಜ್ಞನಾಮ । ಕಸ್ಯಾಪಿ ಯಜ್ಞೇಚ್ಛೋರ್ಯ ಜಮಾನಸ್ಯ ಪ್ರಕರ್ಷೇಣ ನಿರ್ವೋಢಾರಃ**—ಉದಕ, ಕಾಲವಿಶೇಷ, ಸತ್ಯ, ಯಜ್ಞ ಎಂಬ ಅರ್ಥಬೋಧಕವಾದ ಋತಶಬ್ದವು ಇಲ್ಲಿ ಯಜ್ಞವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಋತಾಯು ಎಂಬ ಪದವು—

**ಮಾ ನೋಽಹಿರ್ಬುಧ್ನ್ಯೋ ರಿಷೇ ಧಾನ್ಮಾ ಯಜ್ಞೋ ಅಸ್ಯ ಸ್ರಿಧದೃತಾಯೋಃ ।**
(ಋ. ಸಂ. ೭-೩೪-೧೭)

ಎಂಬ ಋಕ್ಕಿನಲ್ಲಿ ಯಜ್ಞಕಾಮಸ್ಯ— ಯಜ್ಞಮಾಡಲಿಚ್ಛೆಯುಳ್ಳವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಮರುದ್ದೇವತೆಗಳು ಯಜ್ಞವನ್ನು ಆಚರಿಸಲು ಇಚ್ಛೆಯುಳ್ಳವನು ಯಾರೇ ಆದರೂ ಅವನ ಇಚ್ಛೆಯನ್ನು ನೆರವೇರಿಸುವರು ಎಂಬ ಅರ್ಥವನ್ನು ವರ್ಣಿಸಿದೆ.

**ಯೇ ದೇವಾಃ ಪುರಾ ಗಾತುಯಂತೀವ ತೇ ನಃ ಮೃಳಯಂತು— ದ್ಯೋತನಶೀಲಾಃ ಯಜ್ಞ- ಗಮನಮಿಚ್ಛಂತೀವ ಮರುತಃ ಅಸ್ಮಾನ್ ಮೃಳಯಂತು ।** ಯಜ್ಞಾರ್ಥವಾಗಿ ಆಗಮಿಸುವ ದೇವತೆಗಳು, ಎಲ್ಲರಿಗಿಂತಲೂ ಮೊದಲು ಯಜ್ಞಕ್ಕೆ ಬರುವವರ ಹಾಗೆ ಕಾಂತಿಯಿಂದ ಬೆಳಗುತ್ತಿರುವ ಮರುತ್ತುಗಳು ಯಜ್ಞಶೀಲ ರಾದ ನಮ್ಮನ್ನು ಬಹಳ ಸುಖದಿಂದ ಇರಿಸಲಿ ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ತೋಶತಮಾಃ**—ತುಷ ಪ್ರೀತೌ ಧಾತು. **ನಂದಿಗ್ರಹಪಚಾ-** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. ಛಾಂದಸವಾಗಿ ಷಕಾರಕ್ಕೆ ಶಕಾರಾದೇಶ. ಅತಿಶಯೇನ ತೋಶಾಃ ತೋಶತಮಾಃ. ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ. ಎರಡನೇ ಅರ್ಥದಲ್ಲಿ ತುಶ ಧಾತುವು ಹಿಂಸಾರ್ಥದಲ್ಲಿ ಪ್ರಯುಕ್ತವಾಗಿದೆ. ಪ್ರಕ್ರಿಯಾ ಹಿಂದಿನಂತೇ ಆಗುತ್ತದೆ.

**ಪ್ರಣೇತಾರಃ**—ಣೀಞ್ ಪ್ರಾಪಣೇ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಾದಿ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ಋತಾಯೋಃ**—ಋತಂ ಆತ್ಮನಃ ಇಚ್ಛತಿ ಋತಾಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಕ್ಕೆ ದೀರ್ಘ **ಕ್ಯಾಚ್ಛಂದಸಿ** (ಪಾ. ಸೂ. ೩- ೨-೧೭೦) ಎಂಬುದರಿಂದ ಕ್ಯಜಂತದಮೇಲೆ ಉ ಪ್ರತ್ಯಯ. **ಅತೋ ಲೋಪಃ** ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯ ಸ್ವರ ಬರುತ್ತದೆ.

**ಮೃಳಯಂತು**—ಮೃಡ ಸುಖನೇ ಧಾತು. ಣಿಜಂತದಮೇಲೆ ಲೋಟ್. ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಗಾತುಯಂತಿ**—ಗಾತುಂ ಗಮನಂ ಆತ್ಮನಃ ಇಚ್ಛಂತಿ. **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್. **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತು ಸಂಜ್ಞಾ. ಕ್ಯಜಂತದಮೇಲೆ ಲಟ್. ಪ್ರಥಮಪುರುಷ ಬಹುವಚನಾಂತ ರೂಪ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಕ್ಯಚ್ ಸ್ವರ ಉಳಿಯುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ಪ್ರತಿ ಪ್ರ ಯಾಹೀಂದ್ರ ಮೀಳ್ಹುಷೋ ನೄನ್ಮಹಃ ಪಾರ್ಥಿವೇ ಸದನೇ ಯತಸ್ವ ।
ಅಧ ಯದೇಷಾಂ ಪೃಥುಬುಧ್ನಾಸ ಏತಾಸ್ತೀರ್ಥೇ ನಾರ್ಯಃ ಪೌಂಸ್ಯಾನಿ ತಸ್ಥುಃ ॥ ೬ ॥

॥ ಪದಪಾಠಃ ॥

ಪ್ರತಿ । ಪ್ರ । ಯಾಹಿ । ಇಂದ್ರ । ಮೀಳ್ಹುಷಃ । ನೄನ್ । ಮಹಃ । ಪಾರ್ಥಿವೇ । ಸದನೇ । ಯತಸ್ವ ।
ಅಧ । ಯತ್ । ಏಷಾಂ । ಪೃಥುऽಬುಧ್ನಾಸಃ । ಏತಾಃ । ತೀರ್ಥೇ । ನ । ಅರ್ಯಃ । ಪೌಂಸ್ಯಾನಿ । ತಸ್ಥುಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮೀಳ್ಹುಷ ಉದಕಸೇಕ್ತ್ರ್ಯಾನ್ನೄಞ್ಜಗನ್ನೇತ್ರ್ಯಾನ್ನರಾಕಾರಾನ್ಮಾ ಮಹೋ ಮಹತೋ ಮೇಘಾನ್ಪ್ರತಿ ಪ್ರ ಯಾಹಿ । ಅಭಿಗಚ್ಛ । ಮೇಘಾನಾಂ ವೃತ್ರರೂಪೇಣ ನರಾಕಾರತ್ವಂ ಯುಕ್ತಂ । ಗತಾ ಚ ಪಾರ್ಥಿವೇ ಸದನೇ । ಪೃಥಿವೀತ್ಯಂತರಿಕ್ಷನಾಮ । ತತ್ಸಂಬಂಧಿನಿ ಸ್ಥಾನೇ ಯತಸ್ವ । ಪ್ರಯತ್ನಂ ಕುರು। ತೈಃ ಸಹ ಯುಧ್ಯಸ್ವೇತ್ಯರ್ಥಃ । ಯದ್ವಾ । ಹವಿಷ್ಪ್ರದಾತ್ನ್ಯಾನ್ ಕರ್ಮನಿರ್ವಾಹಕಾನ್ಮಹತೋ ಯಜಮಾ-

ನಾನ್ಪ್ರತಿ ಗಚ್ಛ । ಗತ್ವಾ ಚ ಪಾರ್ಥಿವೇ ಸದನೇ ದೇವಯಜನೇ ಯತಸ್ವ । ಯತ್ನಂ ಕುರು ಹವಿರ್ಭೋಜನಾಯ । ಅಥಾಪಿ ಯದ್ಯದ್ಯೈಷಾಂ ತ್ವತ್ಸಾಹಾಯ್ಯಕಾರಿಣಾಂ ಮರುತಾಂ ಸಂಬಂಧಿನಃ ಪೃಥುಬುಧ್ನಾಸೋ ವಿಸ್ತೀರ್ಣಮೂಲಾ ಏತಾಃ ಪೃಷದ್ವರ್ಣಾ ಗಂತಾರೋ ವಾಶ್ವಾ ಅರ್ಯೋಽರೇಃ ಶತ್ರೋಃ ಪೌಂಸ್ಯಾನಿ ತೀರ್ಥೇ ನ ಯುದ್ಧಮಾರ್ಗ ಇವ ತಸ್ಥುಃ ತಿಷ್ಠಂತಿ ಮೇಘಾನಾಕ್ರಮಿತುಂ ತೇ । ಯದ್ವಾ । ಯೇಷಾಂ ಮರುತಾಂ ಪೃಥುಬುಧ್ನಾಸೋ ಬೃಹನ್ಮೂಲಾ ಏತಾಃ ಕೃಷ್ಣವರ್ಣಾ ಮೇಘಾಸ್ತಿಷ್ಠಂತಿ । ತತ್ರ ದೃಷ್ಟಾಂತಃ॥ ಅರ್ಯೋಽರಣೀಯಸ್ಯ ಸ್ವಾಮಿನಃ ಪೌಂಸ್ಯಾನಿ ಬಲಾನಿ ತೀರ್ಥೇ ನ ರಾಜವೀಥ್ಯಾಂ ಯಥಾ ತಿಷ್ಠಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಅಥ ಯತ್**—ಯಾವಾಗ। **ಏಷಾಂ**—(ನಿನಗೆ ಸಹಾಯಕರಾದ) ಈ ಮರುದ್ದೇವತೆಗಳ (ಸಂಬಂಧವಾದ)। **ಪೃಥುಬುಧ್ನಾಸಃ**—ವಿಸ್ತೀರ್ಣ ಮೂಲಗಳಾದ ಮತ್ತು । **ಏತಾಃ**—ನಾನಾವರ್ಣದ ಅಶ್ವಗಳು । **ಅರ್ಯಃ**—ಶತ್ರುವಿನ । **ಪೌಂಸ್ಯಾನಿ**—ಸೈನ್ಯಗಳು । **ತೀರ್ಥೇ ನ**—ಯುದ್ಧಮಾರ್ಗದಲ್ಲಿ (ನಿಂತಿರುವಂತೆ)। [ಅಥವಾ **ಪೃಥುಬುಧ್ನಾಸಃ** ಬೃಹನ್ಮೂಲಗಳಾದ । **ಏತಾಃ**—ಕೃಷ್ಣವರ್ಣದ ಮೇಘಗಳು । **ಅರ್ಯಃ**—ಯಜಮಾನನ । **ಪೌಂಸ್ಯಾನಿ**—ಸೈನ್ಯಗಳು । **ತೀರ್ಥೇ ನ**—ರಾಜಮಾರ್ಗದಲ್ಲಿ ನಿಂತಿರುವಂತೆ । ] **ತಸ್ಥುಃ**—ನಿಂತಿರುತ್ತವೆಯೋ । (**ತದಾ**—ಆವಾಗ)। **(ಹೇ) ಇಂದ್ರ**—ಎಲೈ ಇಂದ್ರನೇ । (ನೀನು) **ಮಿಹಳ್ಳುಷಃ**—ಉದಕವನ್ನು ವರ್ಷಿಸದೇ ಇರತಕ್ಕವೂ । **ನೄನ್**—ಜಗನ್ನೇತೃಗಳೂ (ನರಾಕಾರಗಳೂ) ಆದ । **ಮಹಃ ಪ್ರತಿ**—ದೊಡ್ಡ ಮೇಘಗಳನ್ನು ಎದುರಿಸಿ । **ಪ್ರ ಯಾಹಿ**—ಹೋಗು । (ಅನಂತರ) **ಪಾರ್ಥಿವೇ ಸದನೇ**—ಅಂತರಿಕ್ಷಸ್ಥಾನದಲ್ಲಿ । **ಯತಸ್ವ**—ಪ್ರಯತ್ನಿಸು (ಯುದ್ಧಪ್ರಯತ್ನಮಾಡು)। [ಅಥವಾ **ಮಿಹಳ್ಳುಷಃ**—ಹವಿಃಪ್ರದಾತೃಗಳೂ । **ನೄನ್**—ಕರ್ಮನಿರ್ವಾಹಕರೂ । **ಮಹಃ**—ಮಾನ್ಯರೂ ಆದ ಯಜಮಾನರನ್ನು। **ಪ್ರತಿ ಪ್ರಯಾಹಿ**—ಉದ್ದೇಶಿಸಿ ಗಮಿಸು । (ಅನಂತರ) **ಪಾರ್ಥಿವೇ ಸದನೇ**—ಪೃಥಿವೀಸಂಬಂಧವಾದ ಯಾಗಶಾಲೆಯಲ್ಲಿ । **ಯತಸ್ವ**—(ಹವಿರ್ಭೋಜನಕ್ಕೆ) ಯತ್ನಿಸು.]

॥ ಭಾವಾರ್ಥ ॥

ಎಲೈ ಇಂದ್ರನೇ, ವರ್ಷಿಸದೇ ಇರುವ ಮತ್ತು (ವೃತ್ರಾದಿರೂಪದಿಂದ) ನರಾಕಾರಗಳಾಗಿರುವ ದೊಡ್ಡದೊಡ್ಡ ಮೇಘಗಳನ್ನು ಎದುರಿಸಿ, ಅಂತರಿಕ್ಷದಲ್ಲಿ ಅವುಗಳೊಡನೆ ಯುದ್ಧಮಾಡು (ಅಥವಾ ಹವಿರಾದ್ಯರ್ಪಣೆ ಮಾಡುವ ಮಾನ್ಯರಾದ ಯಜಮಾನರನ್ನುದ್ದೇಶಿಸಿ ಹೊರಟು, ಅವರ ಯಾಗಗೃಹಗಳಲ್ಲಿ ಹವಿರ್ಭೋಜನ ಮಾಡು); ಅದೇಕಾಲದಲ್ಲಿ ಮರುತ್ಸಂಬಂಧಿಗಳೂ ಬೃಹನ್ಮೂಲಗಳೂ ಆದ ಅಶ್ವಗಳು, ಶತ್ರುವಿನ ಸೈನ್ಯಗಳು ಯುದ್ಧಮಾರ್ಗದಲ್ಲಿ ಸಿದ್ಧವಾಗಿ ನಿಂತಿರುವಂತೆ, ನಿನ್ನ ಸಹಾಯಾರ್ಥವಾಗಿ ನಿಂತಿರುತ್ತವೆ.

## English Translation.

Go, Indra, to the mighty rain-shedding leaders (of the clouds), and exert yourself in (your) aerial dwelling; for their broad-footed steeds stand (firm) like the manly energies of an enemy in the field of battle.

॥ ವಿಶೇಷವಿಷಯಗಳು ॥

**ಮೀಳ್ಹುಷಃ— ಉದಕಸೇಕ್ತ್ರೂನ್** ಮೀಳ್ಹು ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಇಲ್ಲಿ ಉದಕಗಳನ್ನು ಸುರಿಸುವವರು ಎಂದು ಅರ್ಥವನ್ನು ವಿವರಿಸಿದೆ.

**ನೄನ್— ಜಗನ್ನೇತ್ರೂನ್ ನರಾಕಾರಾನ್ ವಾ ।** ನರಃ ಎಂಬ ಪದವು ಮನುಷ್ಯನಾಮಗಳ ಮಧ್ಯದಲ್ಲಿ (ನಿ. ೩-೭) ಪಠಿತವಾಗಿದೆ. (ಜಗತ್ತನ್ನು) ಪ್ರಪಂಚವನ್ನು ಪೋಷಿಸುವ ಅಥವಾ ಮನುಷ್ಯರ ಆಕಾರವನ್ನು ಹೊಂದಿ ಇರುವ ಎಂದು ಅರ್ಥಮಾಡಿ, **ಮಹಃ ಮಹತಃ** ಮಹತ್ವಪೂರಿತವಾದ ಮೇಘಗಳನ್ನು ಇಂದ್ರನು ಎದುರಿಸಲಿ ಎಂದು ಆಶಿಸಿದೆ. ಮೇಘಗಳನ್ನು ವೃತ್ರಶಬ್ದದಿಂದ ನಿರುಕ್ತಕಾರರು ವ್ಯವಹಸಿರುವ ಕಾರಣ **ಮೇಘಾನಾಂ ವೃತ್ರರೂಪೇಣ ನರಾಕಾರತ್ವಂ ಯುಕ್ತಂ** ವೃತ್ರರೂಪದಿಂದ ಇರುವ ಮೇಘಗಳಿಗೆ ಮನುಷ್ಯರ ಆಕಾರದಿಂದ ಇರುವುದು ಉಚಿತ ವಾಗಿದೆ ಎಂದು ಸಮರ್ಥಿಸಿದೆ.

**ಪಾರ್ಥಿವೇ ಸದನೇ ಯತಸ್ವ—ಪೃಥಿವೀ** ಶಬ್ದವು ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಪಠಿತವಾಗಿರುವುದ ರಿಂದ **ಪೃಥಿವೀತ್ಯಂತರಿಕ್ಷನಾಮ ತತ್ಸಂಬಂಧಿನಿ ಸ್ಥಾನೇ ಯತ್ನಂ ಕುರು ತೈಸ್ಸಹ ಯುಧ್ಯಸ್ವ ।** ಪೃಥಿವೀ ಸಂಬಂಧಿಯಾದ ಸ್ಥಾನವು ಅಂತರಿಕ್ಷವಾಗಿರುವುದೆಂದೂ ಆ ಅಂತರಿಕ್ಷದಲ್ಲಿ ಮೇಘಗಳೊಡನೆ ಯುದ್ಧಮಾಡಬೇಕೆಂದು ಇಂದ್ರನನ್ನು ಸಂಬೋಧಿಸಿ ಹೇಳಿದೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿರುವ ಸಾಯಣರು **ಯದ್ವಾ ಹವಿಷ್ಪ್ರದಾತ್ರೂನ್ ಕರ್ಮನಿರ್ವಾಹಕಾನ್ ಮಹತೋ ಯಜಮಾನಾನ್ ಪ್ರತಿಗಚ್ಛ ಗತ್ವಾ ಚ ಪಾರ್ಥಿವೇ ಸದನೇ ದೇವಯಜನೇ ಯತಸ್ವ । ಹವಿರ್ಭೋಜನಾಯ ಯತ್ನಂ ಕುರು** ಹವಿಸ್ಸುಗಳನ್ನು ಅರ್ಪಿಸುವವರೂ ಯಜ್ಞಕರ್ಮಗಳನ್ನು ನೆರವೇರಿಸುವ ಮಹತ್ತ್ವದಿಂದ ಪೂರ್ಣರಾದವರೂ ಆದ ಯಜಮಾನರನ್ನು ಇಂದ್ರನು ಸಮೀಪಿಸಿ, ದೇವತೆಗಳನ್ನು ಉದ್ದೇಶಮಾಡಿ ಯಾಗಮಾಡುವ ಪೃಥ್ವೀರೂಪವಾದ ವೇದಿಯಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಇಂದ್ರನು ಯತ್ನಿಸಲಿ ಎಂದು ಎರಡನೆಯ ಅರ್ಥವನ್ನೂ ವಿವರಿಸಿದ್ದಾರೆ. ಇದರಿಂದ **ಪಾರ್ಥಿವೇ ಸದನೇ** ಎಂಬ ಶಬ್ದಕ್ಕೆ ಮೊದಲನೆಯ ಅರ್ಥದಲ್ಲಿ ಅಂತರಿಕ್ಷ ಪ್ರದೇಶವೆಂದೂ, ಎರಡನೆಯ ಅರ್ಥದಲ್ಲಿ ದೇವಯಜನಪ್ರದೇಶ ಅಥವಾ ಪೃಥ್ವೀರೂಪವಾದ ಯಜ್ಞವೇದಿ ಎಂದೂ ಅರ್ಥವನ್ನು ವರ್ಣಿಸಿದೆ. ಪೃಥಿವಿಯು ಯಜ್ಞವೇದಿಯಾಗಿರುವ ವಿಷ ಯವು ತೈತ್ತರೀಯ ಸಂಹಿತೆಯಲ್ಲಿ ಉಕ್ತವಾಗಿದೆ.

**ಏಷಾಂ ಪೃಥುಬುಧ್ನಾಸಃ ಏತಾಃ ಅರ್ಯಃ ಪೌಂಸ್ಯಾನಿ ತೀರ್ಥೇ ನ ತಸ್ಥುಃ— ಮರುತಾಂ ಸಂಬಂಧಿನಃ ವಿಸ್ತೀರ್ಣಮೂಲಾಃ ಪೃಷದ್ವರ್ಣಾ ಗಂತಾರೋ ವಾ ಅಶ್ವಾಃ ಅರೇಶ್ಶತ್ರೋಃ ಯುದ್ಧಮಾರ್ಗ ಇವ ಮೇಘಾನಾಕ್ರಮಂತೇ । ಏತಶಃ** ಎಂಬ ಪದವು ಅಶ್ವನಾಮಗಳಲ್ಲಿ (ನಿ. ೧-೧೭) ಉಕ್ತವಾಗಿದೆ. **ಪೃಷತ್ಯೋ ಮರುತಾಂ** ಮರುದ್ದೇವತೆಗಳ ವಾಹನಗಳನ್ನು ಪೃಷತ್ಯಃ (ಬೊಟ್ಟುಗಳಿರುವ ಜಿಂಕೆಗಳು) ಎಂಬ ಪದದಿಂಪ (ನಿ. ೨-೨೮) ನಿರ್ದೇಶಿಸಿದೆ. ಇಲ್ಲಿ ಮರುದ್ದೇವತೆಗಳ ಅಶ್ವಗಳು ಪೃಷದ್ವರ್ಣಾಃ ಎಂದೂ, ವಿಸ್ತಾರವಾದ ಮೂಲ(ಪೃಷ್ಠ) ಪ್ರದೇಶಗಳುಳ್ಳವೆಂದೂ ವರ್ಣಿಸಿ, ಇಂದ್ರನ ಸಹಾಯಕಾರಿಗಳಾದ ಮರುದ್ದೇವತೆಗಳ ಅಶ್ವಗಳು ಶತ್ರುವಿನ ಯುದ್ಧ ಮಾರ್ಗವನ್ನು ಸೇನೆಗಳು ತಡೆಯುವಂತೆ ಮೇಘಗಳನ್ನು ಆಕ್ರಮಿಸುತ್ತವೆ ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ.

ಎರಡನೆಯ ಅರ್ಥದಲ್ಲಿ — **ಅರ್ಯಃ** ಎಂಬ ಪದವು ಈಶ್ವರನಾಮಗಳಲ್ಲಿ (ನಿ. ೩-೧೧) ಪಾಠಮಾಡಿರುವುದರಿಂದ **ಅರಣೀಯಸ್ಯ ಸ್ವಾಮಿನಃ** (ಯುದ್ಧೋದ್ಯಮದಿಂದ) ಗಮನಶೀಲನಾದ ಪ್ರಭುವಿನ (ಬಲವು) ಸೇನೆಯು **ರಾಜವೀಥ್ಯಾಂ ಯಥಾ ತಿಷ್ಠಂತಿ** ರಾಜಬೀದಿಯಲ್ಲಿ ಒಟ್ಟುಗೂಡಿ ನಿಲ್ಲುವಂತೆ **ಏಷಾಂ ಮರುತಾಂ ಪೃಥುಬುಧ್ನಾಸೋ ಬೃಹನ್ಮೂಲಾಃ ಏತಾಃ ಕೃಷ್ಣವರ್ಣಾಃ ಮೇಘಾಸ್ತಿಷ್ಠಂತಿ** ಇಂದ್ರನಿಗೆ ಸಹಾಯವನ್ನು ಆಚರಿಸುವ ಮರುತ್ತಗಳ ಸಂಬಂಧಿಯಾದವೂ, ವಿಸ್ತಾರವಾದ ಮೂಲಪ್ರದೇಶಗಳುಳ್ಳವುಗಳೂ ಕೃಷ್ಣವರ್ಣದಿಂದ ಕೂಡಿದುವುಗಳೂ ಆದ ಮೇಘಗಳು ಒಟ್ಟಾಗಿ ಇರುತ್ತವೆ ಎಂದು ಅರ್ಥವನ್ನು ವರ್ಣಿಸಿದೆ.

**ಪೌಂಸ್ಯಾನಿ** ಎಂಬ ಪದವು ಬಲನಾಮಗಳಲ್ಲಿಯೂ, **ಪೌಂಸ್ಯೇ** ಎಂದು ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇಲ್ಲಿ ಸೇನೆ ಎಂಬ ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮೀಢುಷಃ**— ಮಿಹ ಸೇಚನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ದ್ವಿತೀಯಾ ಬಹುವಚನ ಶಸ್ ಪರವಾದಾಗ **ವಸೋಃ ಸಂಪ್ರಸಾರಣಂ** ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಪಾರ್ಥಿವೇ**— ಪೃಥಿವ್ಯಾಃ ಇದಂ ಪಾರ್ಥಿವಂ. ತಸ್ಮಿನ್. **ಪೃಥಿವ್ಯಾ ಞಾ ಞೌ** ಎಂಬುದರಿಂದ ಸಂಬಂಧಾರ್ಥದಲ್ಲಿ ಅಞ್ ಪ್ರತ್ಯಯ. ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಆದಿವೃದ್ಧಿ ಈಕಾರಲೋಪ.

**ಯತಸ್ವ**— ಯತೀ ಪ್ರಯತ್ನೇ ಧಾತು ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ** (ಪಾ. ಸೂ. ೩-೪-೮೦) ಎಂಬುದರಿಂದ ಟಿಗೆ ವಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪೃಥುಬುಧ್ನಾಸಃ**— ಕರ್ಮಧಾರಯ ಸಮಾಸ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ತೀರ್ಥೇ**— ತೄ ಪ್ಲವನತರಣಯೋಃ ಧಾತು. **ಪಾತೄತುದಿ**—(ಉ. ಸೂ. ೧೬೪) ಎಂಬುದರಿಂದ ಥಕ್ ಪ್ರತ್ಯಯ. **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿಗೆ ಈತ್ವ. ರಪರವಾಗಿ ಬರುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮ್ಯಂತರೂಪ.

**ಅರ್ಯಃ**— ಅರಿ ಶಬ್ದ. ಇದಕ್ಕೆ ಷಷ್ಠೀ ಪರವಾದಾಗ **ಜಸಾದಿಷು ಛಂದಸಿ ವಾವಚನಂ** ಎಂಬುದರಿಂದ ಗುಣಾದಿಗಳು ಬರುವುದಿಲ್ಲ. ಯಣಾದೇಶ. **ಉದಾತ್ತಯಣೋಹಲ್ ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತಸ್ಥುಃ**—ಷ್ಠಾ ಗತಿ ನಿವೃತ್ತೌ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಪ್ರತಿ ಘೋರಾಣಾಮೇತಾನಾಮಯಾಸಾಂ ಮರುತಾಂ ಶೃಣ್ವ ಆಯತಾಮುಪಬ್ದಿಃ ।
ಯೇ ಮರ್ತ್ಯಂ ಪೃತನಾಯಂತಮೂಮೈರ್ಋಣಾವಾನಂ ನ ಪತಯಂತ ಸರ್ಗೈಃ ॥ ೭ ॥

॥ ಪದಪಾಠಃ ॥

ಪ್ರತಿ । ಘೋರಾಣಾಂ । ಏತಾನಾಂ । ಅಯಾಸಾಂ । ಮರುತಾಂ । ಶೃಣ್ವೇ । ಆऽಯತಾಂ । ಉಪಬ್ದಿಃ ।
ಯೇ । ಮರ್ತ್ಯಂ । ಪೃತನಾऽಯಂತಂ । ಊಮೈಃ । ಋಣऽವಾನಂ । ನ । ಪತಯಂತ । ಸರ್ಗೈಃ ॥೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ಸಂಬಂಧಿನಾಂ ಘೋರಾಣಾಂ ಭಯಾನಕಾನಾಂ ಶಬ್ದಾಭಿಮಾನಾನಾಂ ವೈತಾನಾಮೇತವರ್ಣಾನಾಮಯಾಸಾಮಯಮಾನಾನಾಂ ಗಮನಶೀಲಾನಾಂ ಮರುತಾಮಾಯತಾಮಾಗಂತೄಣಾಂ ಮರುತಾಮುಪಬ್ದಿಃ । ಉಪ ಗುರ್ವಾದಿಸಮೀಪೇ ಗಮ್ಯತೇ ಜ್ಞಾಯತೆ ಉಪಪದ್ಯತ ಇತಿ ವೋಪಬ್ದಿರ್ವಾಕ್ । ಶೃಣ್ವೇ । ಶ್ರೂಯತೇ । ಕರ್ಮಣಿ ಕರ್ತೃಪ್ರತ್ಯಯಃ ॥ ತ ಏವ ವಿಶಿಷ್ಯಂತೇ । ಯೇ ಮರುತೋ ಮರ್ತ್ಯಂ ಮರಣಧರ್ಮಾಣಮೂಮೈಃ ಸ್ವರಕ್ಷಣೈರುದಕನಿಗಮನಸಾಧನೈರ್ವಾ ಪೃತನಾಯಂತಂ ಪೃತನಾಮಾತ್ಮನ ಇಚ್ಛಂತಂ ವೈರಿಣಂ ಮೇಘಂ ವಾ ಸರ್ಗೈಃ ಸೃಷ್ಟೈಃ ಸ್ವಕೀಯಪ್ರಹಾರವಿಶೇಷೈಃ ಪತಯಂತ । ಪಾತಯಂತಿ । ತೇಷಾಮೇವ ಧ್ವನಿಃ ಶ್ರೂಯತ ಇತ್ಯರ್ಥಃ । ಪಾತನೇ ದೃಷ್ಟಾಂತಃ । ಸರ್ಗೈರ್ಋಣವಾನಂ ನ ॥ ಛಂದಸೀವನಿಪಾವಿತಿ ವನಿಪ್ ॥ ಋಣವಂತಮಧಮರ್ಣಮಿವ । ತಂ ಯಥಾ ಪೀಡಯಿತ್ವಾ ತದೀಯಂ ಧನಮಪಹರಂತಿ ತದ್ವತ್ । ಏವಂ ಮಹಾನುಭಾವಾ ಮರುತಸ್ತವಾನುಗಾ ಇತೀಂದ್ರಸ್ಯ ಸ್ತುತಿಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಯೇ**—ಯಾವ ಮರುದ್ದೇವತೆಗಳು । **ಊಮ್ಯೈಃ**—ರಕ್ಷಣಾ ಕಾರ್ಯಗಳಿಂದ । **ಪೃತನಾಯಂತಂ**—ಯುದ್ಧದಲ್ಲಿ ಜಯವನ್ನ ಪೇಕ್ಷಿಸುವ । **ಮರ್ತ್ಯಂ**—ಮರಣಸ್ವಭಾವದ ವೈರಿಯನ್ನು । [ಅಥವಾ **ಊಮ್ಯೈಃ**—ಉದಕ ನಿಗಮುಸಾಧನಗಳಿಂದ । **ಪೃತನಾಯಂತಂ**—ಯುದ್ಧದಲ್ಲಿ ಜಯಾಪೇಕ್ಷಿಯಾದ (ಉದಕವನ್ನುವರ್ಷಿಸಲಿಚ್ಛಿಸದೇ ಇರುವ) । **ಮರ್ತ್ಯಂ**—ಅನಿತ್ಯವಾದ ಮೇಘವನ್ನು] **ಸರ್ಗೈಃ**—(ಆತ್ಮರಕ್ಷಕಗಳಾದ) ಪ್ರಹಾರಗಳಿಂದ । **ಋಣವಾನಂ ನ**—ಅಧಮನಾದ ವೈರಿಯನ್ನು (ಪೀಡಿಸುವಂತೆ) । **ಪತಯಂತ**—ಕೆಳಗೆ (ವೃಷ್ಟಿರೂಪವಾಗಿ) ಬೀಳಿಸುತ್ತಾರೋ । **(ತೇಷಾಂ**—ಅಂತಹ) । **ತೇ**—ನಿನ್ನವರೂ । **ಘೋರಾಣಾಂ**—ಭಯಾವಹರೂ (ಶಬ್ದಾಭಿಮಾನಿಗಳೂ) । **ಏತಾನಾಂ**—ನಾನಾವರ್ಣರೂ । **ಅಯಾಸಾಂ**—ಗಮನಶೀಲರೂ । **ಆಯತಾಂ**—ಮುಂದೆ ಬರುತ್ತಿರುವವರೂ ಆದ । **ಮರುತಾಂ**—ಮರುದ್ದೇವತೆಗಳ । **ಉಪಬ್ದಿಃ**—ಸಮೀಪಿಸುತ್ತಿರುವ ಶಬ್ದವು । **ಪ್ರತಿ**—ಪ್ರತಿಧ್ವನಿತವಾಗಿ । **ಶೃಣ್ವೇ**—ಕೇಳಿಸುತ್ತಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಭಯಾನಕರೂ, ನಾನಾವರ್ಣದವರೂ, ಗಮನಶೀಲರೂ, ಮೇಲೇರಿ ಬರುತ್ತಿರುವವರೂ ಆದ ನಿನ್ನವರಾದ ಮರುದ್ದೇವತೆಗಳ ಶಬ್ದವು ಪ್ರತಿಧ್ವನಿತವಾಗಿ ಕೇಳಿಸುತ್ತಿವೆ; ಇವರು (ಮೇಘಭೇದನರೂಪ) ಯುದ್ಧದಲ್ಲಿ ಜಯವನ್ನಪೇಕ್ಷಿಸುವ ಅನಿತ್ಯವಾದ ಮೇಘವನ್ನು ಬಡಿದು ಕೆಳಗೆ ಬೀಳಿಸುತ್ತಾರೆ.

English Translation.

The noise of the formidable, dark-coloured, swift-moving, and advancing Maruts, is everywhere echoed ; (the noise) of them who strike down their mortal (foes) gathering in a host against them, by their self-defending blows, as (they strike down) a contemptible enemy.

॥ ವಿಶೇಷವಿಷಯಗಳು ॥

**ಘೋರಾಣಾಂ—ಭಯಾನಕಾನಾಂ ಶಬ್ದಾಭಿಮಾನಾನಾಂ ವಾ** । ಭಯವನ್ನು ಉಂಟುಮಾಡುವವರೂ, ಪ್ರಭೂತವಾದ ಧ್ವನಿಯನ್ನು ಮಾಡುವವರೆಂದು ಪ್ರಸಿದ್ಧರೂ ಆಗಿರುವ ಎಂದು **ಮರುತಾಂ** ಮರುದ್ದೇವತೆಗಳ ಎಂದು ಅರ್ಥವನ್ನು ವಿವರಿಸಿದೆ. ಮತ್ತು ಮರುದ್ದೇವತೆಗಳು ಚಿತ್ರವಾದವರ್ಣವುಳ್ಳವರೆಂದೂ, ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವರೆಂದೂ, ಇವರ ಮಹಿಮೆಯನ್ನು ವಿವರಿಸಿ, **ಆಯತಾಂ ಉಪಬ್ದಿಃ ಆಗಂತ್ರೈಣಾಂ, ವಾಕ್ ಶೃಣ್ವೇ ಶ್ರೂಯತೇ** ಇವರು ಯಜ್ಞಕ್ಕಾಗಿ ಆಗಮಿಸುವ ಧ್ವನಿಯು ಕೇಳಲ್ಪಡುತ್ತದೆ ಎಂದೂ ವರ್ಣಿಸಿದೆ.

**ಉಪಬ್ದಿಃ**—ಈ ಪದವು ವಾಙ್ನಾಮಗಳಲ್ಲಿ (ನಿ. ೨-೨೩) ಪಠಿತವಾಗಿದೆ. **ಉಪ ಗುರ್ವಾದಿಸಮೀಪೇ ಗಮ್ಯತೇ ಜ್ಞಾಯತೇ ಉಪಪದ್ಯತ ಇತಿ ವಾ**—ಗುರುವೇ ಮೊದಲಾದವರ ಸಮೀಪದಲ್ಲಿ ತಿಳಿಯಲ್ಪಡುವುದು ಅಥವಾ ಉಪಪನ್ನವಾಗುವುದೂ, ಆಗಿರುವುದರಿಂದ ವಾಕ್ಕಾಗಿರುವುದೆಂದು ಸಾಯಣರಿಂದ ವ್ಯಾಖ್ಯಾತವಾಗಿರುತ್ತದೆ.

**ಮರ್ತ್ಯಾನಾಂ**— ಈ ಶಬ್ದವು ಮನುಷ್ಯನಾಮಗಳಲ್ಲಿ (ನಿ. ೩-೮) ಪಠಿತವಾಗಿದೆ. ಇಲ್ಲಿ **ಮರಣಧರ್ಮಾಣಾಂ** ಮರಣವನ್ನು ಹೊಂದುವ ಧರ್ಮದಿಂದ ಕೂಡಿದವನು ಎಂಬ ಅರ್ಥವನ್ನು ವಿವರಿಸಿ ಪೃತನಾಯಂತಂ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ.

**ಊರ್ಮ್ಯಃ ಪೃತನಾಯಂತಂ— ಪೃತನಾ** ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯದಾಗಿ— ಮೇಘವು (ಉದಕರೂಪದಿಂದ ಸಂಚರಿಸಲು ಸಾಧನವಾದ ಕ್ರಮಗಳಿಂದ) ಉದಕ ಸಂಚರಣರೂಪವಾದ ಸಾಧನಗಳಿಂದ ತಾನೇ ಯುದ್ಧವನ್ನು ಆಚರಿಸುವ ಇಚ್ಛೆಯುಳ್ಳದ್ದಾಗಿರುವುದು ಎಂದು ಅರ್ಥವನ್ನು ವರ್ಣಿಸಿದೆ. ಎರಡನೆಯದಾಗಿ— ಶತ್ರುವಾದನು ತನ್ನ ರಕ್ಷಣೆಯ ಸಾಧನಗಳಿಂದ ಯುದ್ಧವನ್ನು ಮಾಡಲು ಇಷ್ಟವುಳ್ಳವನಾಗಿರುವನು ಎಂದು ವಿವರಿಸಿದೆ. ಮರುದ್ದೇವತೆಗಳು ಶತ್ರುವಿನಹಾಗೆ ಯುದ್ಧವನ್ನು ಮಾಡಲು ಇಚ್ಛೆಯಿಂದ ಇರುವ ಮೇಘಗಳನ್ನು **ಸರ್ಗೈಃ**— ತಾವು ಸೃಷ್ಟಿಮಾಡಿರುವ ಪ್ರಹಾರಗಳಿಂದ (ಏಟುಗಳಿಂದ) ಪಾತಯಂತಿ— ಬೀಳುಸುತ್ತಾರೆಂದು ಎಂದು ಅರ್ಥಮಾಡಿ **ತೇಷಾಮೇವ ಧ್ವನಿಃ ಶ್ರೂಯತೇ** ಮರುದ್ದೇವತೆಗಳು ಮೇಘಗಳನ್ನು ಪ್ರಹರಿಸಿದ ಧ್ವನಿಯು ಕೇಳಲ್ಪಡುತ್ತದೆ ಎಂದು ವಿವರಿಸಿದೆ.

**ಸರ್ಗೈಃ ಋಣವಾನಂ ನ— ಋಣವಂತಂ ಅಧಮರ್ಣಮಿವ** ಋಣವನ್ನು (ಸಾಲವನ್ನು) ತೀರಿಸದೆ ಇರುವ ನೀಚರಾದ ಶತ್ರುವನ್ನು (ಲೋಕದಲ್ಲಿ) ಪ್ರಹಾರಗಳಿಂದ (ಪತನಮಾಡುವಂತೆ) ಬೀಳಿಸುವಹಾಗೆ ಮೇಘಗಳನ್ನು ತಮ್ಮ ಪ್ರಹಾರಗಳಿಂದ ಬೀಳಿಸುವರುಎಂದು ಮರುತ್ಕೃತ ಮೇಘಪಾತನ ವಿಷಯದಲ್ಲಿ ಉಪಮಾನವನ್ನು ವಿವರಿಸಿದೆ. **ಏವಂ ಮಹಾನುಭಾವಾ ಮರುತಸ್ತ್ವದನುಗಾ ಇತಿ ಇಂದ್ರಸ್ಯ ಸ್ತುತಿಃ** ಹೀಗೆ ಪ್ರಭೂತವಾದ ಮಾಹಾತ್ಮ್ಯದಿಂದ ಕೂಡಿರುವ ಮರುತ್ ದೇವತೆಗಳು ಇಂದ್ರನ ಸಹಾಯಕರಾಗಿರುವರೆಂದೂ ಆದ್ದರಿಂದ ಇಂದ್ರನ ಮಹಿಮೆಯು ಅತಿಶಯವಾದುದೆಂದೂ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಘೋರಾಣಾಂ**— ಹನ ಹಿಂಸಾಗತ್ಯೋಃ ಧಾತು **ಹಂತೇರಚ್ ಘುರ್ ಚ** (ಉ. ಸೂ. ೭೪೨) ಎಂಬುದರಿಂದ ಅಚ್ ಪ್ರತ್ಯಯ. ಧಾತುವಿಗೆ ಘುರ್ ಆದೇಶ. ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠ್ಯಂತರೂಪ.

**ಏತಾನಾಂ**— ಇಣ್ ಗತೌ. ಧಾತು. **ಹಸಿಮೃಗ್ರಿಣ್ವಾ**—(ಉ. ಸೂ. ೩೬೬) ಎಂಬುದರಿಂದ ತನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಗುಣ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಯಸಾಂ**— ಅಯ ಗತೌ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಬಹುವಚನ ಪರವಾದಾಗ ವ್ಯತ್ಯಯದಿಂದ ಸುಟಾಗಮ.

**ಶೃಣ್ವೇ**— ಶ್ರು ಶ್ರವಣೇ. ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಕರ್ಮಣಿಯಲ್ಲಿ ಕರ್ತೃಪ್ರತ್ಯಯ ಬರುತ್ತದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. **ಶ್ರುವಃ ಶೃ ಚ** ಎಂಬುದರಿಂದ ಧಾತುವಿಗೆ ಶೃ ಆದೇಶ. ಶ್ನು ವಿಕರಣ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯದ ತಕಾರಕ್ಕೆ ಲೋಪ. ಯಣಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಆಯತಾಂ**—ಆಙ್ ಉಪಸರ್ಗ. ಇಣ್ ಗತೌ ಧಾತು. ಶತೃ ಪ್ರತ್ಯಯ. **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ ನುಮ್‌ರಹಿತವಾದ ಶತೃವಿನ ಪರದಲ್ಲಿ ಷಷ್ಠೀ ವಿಭಕ್ತಿ ಬಂದುದರಿಂದ **ಶತುರನುಮೋ**—(ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೃತನಾಯಂತಂ**—ಪೃತನಾಂ ಆತ್ಮನಃ ಇಚ್ಛತಿ ಪೃತನಾಯತಿ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ದ್ವಿತೀಯಾ ಏಕ ವಚನಾಂತರೂಪ. ಕ್ಯಚ್ ಸ್ವರ ಉಳಿಯುತ್ತದೆ.

**ಊನ್ಮೈಃ**—ಅವ ರಕ್ಷಣಾದೌ. ಧಾತು. **ಅವಿಸಿವಿಸಿ**—(ಉ. ಸೂ. ೧೪೧) ಎಂಬುದರಿಂದ ಮನ್ ಪ್ರತ್ಯಯ. ಅದು ಕಿತ್ತಾಗುತ್ತದೆ. **ಜ್ವರತ್ವರಸ್ರಿ**—(ಪಾ. ಸೂ. ೬-೪-೨೦) ಎಂಬುದರಿಂದ ಊಠ್. ಸವರ್ಣದೀರ್ಘ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಋಣಾವಾನಾಂ**—ಋಣಮಸ್ಯ ಅಸ್ತಿ ಇತಿ ಋಣಾವಾನ್. **ಛಂದಸೀವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ ೬-೩-೧೩೭) ಎಂಬುದರಿಂದ ಪೂರ್ವಕ್ಕೆ ದೀರ್ಘ. ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪತಯಂತ**—ಪತಲೃ ಗತೌ. ಧಾತು. ಣಿಜಂತದ ಮೇಲೆ ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಣಿಚ್ ಸ್ವರ ಉಳಿಯುತ್ತದೆ. ಸಂಜ್ಞಾಪೂರ್ವಕಕಾರ್ಯ ಅನಿತ್ಯವಾದುದರಿಂದ ಉಪಧಾ ವೃದ್ಧಿ ಬರಲಿಲ್ಲ.

**ಸರ್ಗೈಃ**—ಸೃಜ ವಿಸರ್ಗೇ. ಧಾತು. ಬಹುಲಗ್ರಹಣದಿಂದ ಕರ್ಮಣಿಯಲ್ಲಿ ಘಞ್ ಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. **ಚಜೋಃಕುಘಿಣ್ಯತೋಃ** (ಪಾ. ಸೂ. ೭-೩-೫೨) ಎಂಬುದರಿಂದ ಕುತ್ವ. ಪ್ರತ್ಯಯ ಘಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ತ್ವಂ ಮಾನೇಭ್ಯ ಇಂದ್ರ ವಿಶ್ವಜನ್ಯಾ ರದಾ ಮರುದ್ಭಿಃ ಶುರುಧೋ ಗೋಅಗ್ರಾಃ ।
ಸ್ತವಾನೇಭಿಃ ಸ್ತವಸೇ ದೇವ ದೇವೈರ್ವಿದ್ಯಾಮೇಷಂ ವೃಜನಂ ಜೀರದಾನುಂ ॥ ೮ ॥

॥ ಪದಪಾಠಃ ॥

ತ್ವಂ । ಮಾನೇಭ್ಯಃ । ಇಂದ್ರಃ । ವಿಶ್ವಽಜನ್ಯಾ । ರದ । ಮರುತ್ಽಭಿಃ । ಶುರುಧಃ । ಗೋಽಅಗ್ರಾಃ ।
ಸ್ತವಾನೇಭಿಃ । ಸ್ತವಸೇ । ದೇವ । ದೇವೈಃ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥ ೮ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಮಾನೇಭ್ಯೋ ಮಾನಾರ್ಥಂ । ಚಿತ್ತೇನೇತ್ಯರ್ಥಃ ॥ ತಾದರ್ಥ್ಯೇ ಚತುರ್ಥೀ ॥ ವಿಶ್ವಜನ್ಯಾ ವಿಶ್ವಜನ್ಯಃ ॥ ಸೋರಾಕಾರಃ ॥ ವಿಶ್ವೇ ಪ್ರಾಣಿನ ಉತ್ಪಾದನೀಯಾ ಯಸ್ಯ ತಾದೃಶಸ್ತ್ವಂ ಸರ್ವಜನಹಿತಶಕ್ತ್ಯಾ ವಾ ಮರುದ್ಭಿಃ ಸಹ ಶುರಧಃ ಶೋಕಸ್ಯ ರೋಧಯಿತ್ರೀಃ ಶೋಷಿಕಾ ಗೋಅಗ್ರಾ ಗರ್ಜಿತಮುದಕಂ ವಾಗ್ರೇ ಪುರುತೋ ಯಾಸಾಂ ತಾ ಮೇಘಪಂಕ್ತೀ ರದ । ವಿಲಿಖ । ವಿದಾರಯ । ಹೇ ದೇವ ದ್ಯೋತಮಾನ ತ್ವಂ ಸ್ತವಾನೇಭಿಃ ಸ್ತೂಯಮಾನೈರ್ದೇವೈರನ್ಯೈರ್ಮರುದಾದಿಭಿರ್ಋತ್ವಿಗ್ಭಿರ್ವಾ ಸ್ತವಸೇ । ಸ್ತೂಯಸೇ ॥ ಉಭಯತ್ರ ಕರ್ಮಣಿ ಕರ್ತೃಪ್ರತ್ಯಯಃ ॥ ವಿದ್ಯಾಮೇತ್ಯಯಂ ವ್ಯಾಖ್ಯಾತಃ ॥**

॥ ಪ್ರತಿಪದಾರ್ಥಃ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ವಿಶ್ವಜನ್ಯಾ**—ಸಮಸ್ತರಿಗೂ ಹಿತನಾದ । **ತ್ವಂ**—ನೀನು । **ಮರುದ್ಭಿಃ**—ಮರುದ್ದೇವತೆಗಳಿಂದ (ಯುಕ್ತನಾಗಿ) । **ಶುರುಧಃ**—ಶೋಕವನ್ನು ಅಡ್ಡಿಮಾಡುವ (ವೃಷ್ಟ್ಯಾದಿಗಳಿಂದ ಶೋಕಪರಿಹಾರಮಾಡುವ) । **ಗೋಅಗ್ರಾಃ**—ಅಗ್ರಭಾಗದಲ್ಲಿ ಉದಕವನ್ನು ಹೊಂದಿರುವ ಮೇಘಗಳನ್ನು । **ಮಾನೇಭ್ಯಃ**—ನಿನ್ನ ಸ್ವಂತ ಗೌರವಕ್ಕೋಸ್ಕರ (ಮತ್ತು) । **(ವಿಶ್ವಜನ್ಯಾ**—ಸಮಸ್ತರ ಹಿತಕ್ಕೋಸ್ಕರ) । **ರದ**—ಸೀಳು । **(ಹೇ) ದೇವ**—ದ್ಯೋತಮಾನನಾದ ಎಲೈ ಇಂದ್ರನೇ । **ತ್ವಂ**—ನೀನು । **ಸ್ತವಾನೇಭಿಃ**—ಸ್ತೂಯಮಾನರಾದ । **ದೇವೈಃ**—ಮರುದಾದಿ ಇತರ ದೇವತೆಗಳಿಂದ । [ಅಥವಾ **ಸ್ತವಾನೇಭಿಃ**—ಸ್ತುತಿಸುತ್ತಿರುವ । **ದೇವೈಃ**—ಋತ್ವಿಜರಿಂದ] । **ಸ್ತವಸೇ**—ಸ್ತುತನಾಗುತ್ತೀಯೆ । **(ವಯಂ**—ನಾವು) । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**-ದೀರ್ಘಾಯುಷ್ಯವನ್ನೂ । **ವಿದ್ಯಾಮ**-(ನಿನ್ನನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ಮರುದ್ದೇವತೆಗಳಿಂದ ಸಹಚರಿತನಾಗಿ, ನಿನ್ನ ಸ್ವಂತ ಗೌರವ ಮತ್ತು ಸಮಸ್ತ ಪ್ರಪಂಚದ ಹಿತ ಇವೆರಡಕ್ಕೋಸ್ಕರ, (ಉದಕದಿಂದ) ಶೋಕಪರಿಹಾರಮಾಡುವ ಮತ್ತು ನೀರಿಗೆ ಆಶ್ರಯಗಳಾದ ಮೇಘಗಳನ್ನು ಸೀಳಿ (ಮಳೆಯನ್ನುಂಟುಮಾಡು); ದ್ಯೋತಮಾನನಾದ ನಿನ್ನನ್ನು (ಸ್ವತಃ) ಸ್ತುತ್ಯರಾದ ಮರುದಾದಿ ಇತರ ದೇವತೆಗಳು (ಅಥವಾ ಋತ್ವಿಜರು) ಸ್ತುತಿಸುತ್ತಾರೆ; ನಾವೂ ನಿನ್ನನುಗ್ರಹದಿಂದ ಆಹಾರ, ಬಲ ಮತ್ತು ದೀರ್ಘಾಯುಸ್ಸುಗಳನ್ನು ಪಡೆಯುತ್ತೇವೆ.

## English Translation

Associated with the Maruts, Indra, for your own honour and the good of all, pierce the exhilarating receptacles of the waters, for you, Indra, are glorified by the lauded divinities : may we obtain for you food, strength, and long life.

॥ ವಿಶೇಷವಿಷಯಗಳು ॥

**ಮಾನೇಭ್ಯಃ—ಮಾನಾರ್ಥಂ** । **ಚಿತ್ತೇನ** । ನಿರುಕ್ತಕಾರರು—

**ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ ।**
**ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ॥**

(ಋ. ಸಂ ೧೦-೨೭-೨೩)

ಇಲ್ಲಿ **ದೇವಾನಾಂ ಮಾನೇ ನಿರ್ಮಾಣೇ** ಎಂದು ಮಾನ ಶಬ್ದಕ್ಕೆ ನಿರ್ಮಾಣ ಎಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಮಾನಾರ್ಥಂ ಎಂದು ಅರ್ಥವನ್ನು ಮಾಡಿ ಚಿತ್ತದಿಂದ ಎಂದು ವಿವರಣೆ ಮಾಡಿದ್ದಾರೆ.

**ವಿಶ್ವಜನ್ಯಾ—ವಿಶ್ವಜನ್ಯಃ** । ಯಾಸ್ಕರು ಉದಹರಿಸಿರುವ **ಉದು ಜ್ಯೋತಿರಮೃತಂ ವಿಶ್ವಜನ್ಯಂ ವಿಶ್ವಾನರಃ ಸವಿತಾ ದೇವೋ ಅಶ್ರೇತ್** ॥ ಎಂಬ ಈ ಋಕ್ಕಿನಲ್ಲಿರುವ ವಿಶ್ವಜನ್ಯ ಶಬ್ದಕ್ಕೆ **ಸರ್ವಲೋಕಹಿತಂ** ಎಂಬ ಅರ್ಥವನ್ನು ದುರ್ಗಾಚಾರ್ಯರು ವರ್ಣಿಸಿದ್ದಾರೆ **ವಿಶ್ವೇ ಪ್ರಾಣಿನಃ ಉತ್ಪಾದನೀಯಾ ಯಸ್ಯ**—ಸರ್ವ ಪ್ರಾಣಿಗಳನ್ನೂ ಉತ್ಪನ್ನಮಾಡುವ ಶಕ್ತಿಯುಳ್ಳವನು ವಿಶ್ವಜನ್ಯನೆನಿಸಿರುವನು ಎಂದೂ, ಈ ವಿಶ್ವಜನ್ಯಸಂಬಂಧಿಯಾದ ಶಕ್ತಿಯು ವಿಶ್ವಜನೀಯವಾದುದು ಎಂದೂ ಅರ್ಥವಿವರಣೆಯನ್ನು ವಿವರಿಸಿ, ಅಥವಾ **ಸರ್ವಜನ ಹಿತಶಕ್ತ್ಯಾ** ಎಲ್ಲಾ ಪ್ರಾಣಿಗಳಿಗೂ ಹಿತವನ್ನು ಉಂಟುಮಾಡುವ ಶಕ್ತಿಯಿಂದ ಕೂಡಿರುವ ಇಂದ್ರನು **ಗೋ ಅಗ್ರಾಃ ಗರ್ಜಿತಮುದಕಂ ವಾ ಅಗ್ರೇ ಯಾಸಾಂ ತಾ ಮೇಘಪಂಕ್ತೀಃ** ಗರ್ಜಿತವನ್ನಾಗಲಿ, ಉದಕವನ್ನಾಗಲಿ ಮುಂದಾಗಿ ಹೊಂದಿರುವ ಮೇಘಪಂಕ್ತಿಗಳನ್ನು ಮರುತ್ತುಗಳೊಡಗೂಡಿ, **ರದ-ವಿದಾರಯ** ಸೀಳಲಿ ಎಂದು ಅರ್ಥವನ್ನು ವಿವರಿಸಿದೆ.

**ಶುರುಧಃ—ಶೋಕಸ್ಯ ರೋಧಯಿತ್ರೀಃ .ಶೋಷಿಕಾಃ** ಯಾಸ್ಕರು **ಋತಸ್ಯ ಹಿ ಶುರುಧಃ ಸಂತಿ ಪೂರ್ವೀಃ** (ಋ. ಸಂ. ೪-೨೩-೮) ಈ ಋಕ್ಕನ್ನು ಉದಹರಿಸಿ, **ಶುರುಧ ಆಪೋ ಭವಂತಿ ಶುಚಂ ಸಂರುಂಧಂತಿ** ಉದಕಗಳು ದುಃಖಗಳನ್ನು ನಾಶಪಡಿಸುತ್ತವೆ ಎಂಬ ಅರ್ಥವನ್ನು ಶುರಧ ಶಬ್ದಕ್ಕೆ ಹೇಳಿರುತ್ತಾರೆ. ಇಲ್ಲಿ ದುಃಖಗಳನ್ನು ತಡೆಯುವವು ಅಥವಾ ನಾಶಪಡಿಸುವವು ಎಂದು ಇದೇ ಅರ್ಥವನ್ನು ಸಾಯಣರು ವರ್ಣಿಸಿದ್ದಾರೆ.

ಕಾಂತಿಗಳಿಂದ ಇಂದ್ರನು ಪ್ರಕಾಶಿಸುತ್ತಿರುವುದರಿಂದ ದೇವಶಬ್ದದಿಂದ ಸಂಬೋಧಿಸಿ, **ದೇವೈಃ ಅನ್ಯೈಃ ಮರುದಾದಿಭಿಃ ಋತ್ವಿಗ್ಭಿರ್ವಾ ಸ್ತೂಯಸೇ**—ಸ್ತುತಿಗಳನ್ನು ಪಠಿಸುವ ಇತರ ದೇವತೆಗಳೇ ಮೊದಲಾದವರುಗಳಿಂದಲೂ, ಋತ್ವಿಕ್ಕುಗಳಿಂದಲೂ ಸ್ತುತಿಮಾಡಲ್ಪಡುವನೆಂದು ಇಂದ್ರನ ಪ್ರಭೂತವಾದ ಮಹಿಮೆಯು ವರ್ಣಿತವಾಗಿದೆ.

**ವಿದ್ಯಾಮೇಷಂ ವೃಜನಂ ಜೀರದಾನುಂ**—ಎಂಬ ವಾಕ್ಯದಿಂದ ಯಜಮಾನರಾದ ನಾವು ಇಂದ್ರನ ಅನುಗ್ರಹದಿಂದ ಅನ್ನವನ್ನೂ, ಬಲವನ್ನೂ, ಜಯವನ್ನೂ, ಸಂಪಾದಿಸುವ ದಾನಶಕ್ತಿಯನ್ನೂ, ದೇವತೆಗಳ ಆಗಮನದಿಂದಲೇ ಯಜ್ಞವು ಪೂರ್ಣವಾಗುವುದರಿಂದ ಹೊಂದೋಣ ಎಂದು ಆಶಿಸಿದೆ. ವೃಜನ ಶಬ್ದವು ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಾನೇಭ್ಯಃ—ತಾದರ್ಥ್ಯೇ ಚತುರ್ಥೀ ವಾಚ್ಯಾ** ಎಂಬ ವಚನದಿಂದ ತಾದರ್ಥ್ಯದಲ್ಲಿ ಚತುರ್ಥೀ ಬಂದಿದೆ.

**ವಿಶ್ವಜನ್ಯಾ**—ವಿಶ್ವೇ ಜನ್ಯಾಃ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಸುವಿಭಕ್ತಿ ಆಕಾರಾದೇಶ.

**ಶುರುಧಃ**—ರುಧಿರ್ ಆವರಣೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಶುಚಃ ರೋಧಯಿತ್ರ್ಯಃ. ಎಂದು ಅರ್ಥ ಪೂರ್ವಪದದ ಅಂತ್ಯಕ್ಕೆ **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಲೋಪ ಬರುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೪೬) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಗೋ ಅಗ್ರಾಃ—ಸರ್ವತ್ರ ವಿಭಾಷಾ ಗೋಃ** (ಪಾ. ಸೂ. ೬-೧-೧೨೨) ಎಂಬುದರಿಂದ ಪ್ರಕೃತಿಭಾವ ಬರುತ್ತದೆ

**ಸ್ತವಾನೇಭಿಃ**—ಷ್ಟುಞ್ ಸ್ತುತೌ. ಧಾತು. ವ್ಯತ್ಯಯದಿಂದ ಕರ್ಮಣಿಯಲ್ಲಿ ಕರ್ತೃ ಪ್ರತ್ಯಯ ಶಾನಚ್ ಬಂದಿದೆ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. ಧಾತುವಿನ ಇಕಿಗೆ ಗುಣ ಅವಾದೇಶ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಬರುತ್ತದೆ. ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಐಸ್ ವಿಕಲ್ಪವಾದುದರಿಂದ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ.

**ಸ್ತವಸೇ**—ಹಿಂದಿನಂತೇ ವ್ಯತ್ಯಯದಿಂದ ಕರ್ಮಣಿಯಲ್ಲಿ ಕರ್ತೃಪ್ರತ್ಯಯ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೮ ॥

ಇಲ್ಲಿಗೆ ನೂರ ಅರವತ್ತೊಂಭತ್ತನೇ ಸೂಕ್ತ ಮುಗಿದುದು.

# ನೂರ ಎಪ್ಪತ್ತನೆಯ ಸೂಕ್ತವು

**ನ ನೂನಮಸ್ತೀತಿ ಪಂಚರ್ಚಂ ಷಷ್ಠಂ ಸೂಕ್ತಮಾಗಸ್ತ್ಯಮೈಂದ್ರಂ । ಅತ್ರಾನುಕ್ರಮಣಿಕಾ । ನ ನೂನಂ ಪಂಚಾಗಸ್ತ್ಯೇಸ್ಯೈಂದ್ರೇ ಹವಿಷಿ ಮರುತಾಮುದ್ಯತ ಇಂದ್ರಾಗಸ್ತ್ಯಯೋಃ ಸಂವಾದ ಐಂದ್ರಸ್ತ್ವಾದ್ಯಾ ತೃತೀಯಾ ಚೇಂದ್ರವಾಕ್ಯಂ ಚತುರ್ಥೀ ಚಾದೌ ಬೃಹತೀ ತಿಸ್ರೋಽನುಷ್ಟುಭ ಇತಿ। ಸೂಕ್ತಸ್ಯೇಂದ್ರಾಗಸ್ತ್ಯಸಂವಾದರೂಪತ್ವಾದಾದ್ಯಾ ತೃತೀಯಾ ಚತುರ್ಥೀ ಚೇಂದ್ರವಾಕ್ಯಂ । ಅತಸ್ತಾಸಾಂ ಯಸ್ಯ ವಾಕ್ಯನ್ಯಾಯೇನ ಸ ಋಷಿಃ । ಶಿಷ್ಟೇ ಅಗಸ್ತ್ಯವಾಕ್ಯೇ । ಅತಸ್ತಯೋಃ ಸ ಏವರ್ಷಿಃ । ಆದ್ಯಾ ಚ ಬೃಹತೀ ತತಸ್ತಿಸ್ರೋಽನುಷ್ಟುಭಃ । ಅಂತ್ಯಾವಿಶೇಷಾತ್ತ್ರಿಷ್ಟುಪ್ ॥ ವಿಶೇಷವಿನಿಯೋಗೋ ಲೈಂಗಿಕಃ ॥ ಅತ್ರ ಯಾಸ್ಕಃ । ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂ ಚಕಾರ ಸ ಇಂದ್ರ ಏತ್ಯ ಪರಿದೇವಯಾಂ ಚಕ್ರೇ । ನಿ. ೧. ೫. । ಇತಿ ॥**

ಅನುವಾದವು—**ನ ನೂನಮಸ್ತಿ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯ ಮತ್ತು ಇಂದ್ರನು ಋಷಿಗಳು ಅನುಕ್ರಮಣಿಕೆಯಲ್ಲಿ-**ನ ನೂನಂ ಪಂಚಾಗಸ್ತ್ಯೋನ್ಯೆಂದ್ರೇ ಹವಿಷಿ ಮರುತಾಮುದ್ಯತ ಇಂದ್ರಾಗಸ್ತ್ಯಯೋಃ ಸಂವಾದ ಐಂದ್ರಸ್ತತ್ರಾದ್ಯಾ ತೃತೀಯಾ ಚೇಂದ್ರವಾಕ್ಯಂ ಚತುರ್ಥೀ ಚಾದೌ ಬೃಹತೀ ತಿಸ್ರೋಽನುಷ್ಟುಭಃ** ಎಂದು ಹೇಳಿರುವುದು. ಈ ಸೂಕ್ತವು ಇಂದ್ರ ಮತ್ತು ಅಗಸ್ತ್ಯರಿಗೆ ನಡೆದ ಸಂವಾದರೂಪವಾಗಿರುವುದರಿಂದ ಮೊದಲನೆಯ, ಮೂರು ಮತ್ತು ನಾಲ್ಕನೆಯ ಋಕ್ಕುಗಳು ಇಂದ್ರನ ವಾಕ್ಯಗಳು. ಆದುದರಿಂದ ಆ ಋಕ್ಕುಗಳಿಗೆ ಇಂದ್ರನು ಋಷಿಯು. ಉಳಿದ ಋಕ್ಕುಗಳು ಎಂದರೆ ಎರಡು ಮತ್ತು ಐದನೆಯ ಋಕ್ಕುಗಳು ಅಗಸ್ತ್ಯವಾಕ್ಯಗಳಾದ್ದರಿಂದ ಆ ಋಕ್ಕುಗಳಿಗೆ ಅಗಸ್ತ್ಯನೇ ಋಷಿಯು. ಮೊದಲನೆಯ ಋಕ್ಕು ಬೃಹತೀಛಂದಸ್ಕವು; ಅಲ್ಲಿಂದ ಮುಂದಿನ ಮೂರು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು; ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ವಿಶೇಷವಿನಿಯೋಗವು ಲೈಂಗಿಕವು. ಈ ಋಕ್ಕಿನ ವಿಷಯದಲ್ಲಿ ಯಾಸ್ಕರು ತಮ್ಮ ನಿರುಕ್ತದಲ್ಲಿ—**ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯಸ್ಯ ಮರುದ್ಭ್ಯಃ ಸಂಪ್ರದಿತ್ಸಾಂ ಚಕಾರ ಸ ಇಂದ್ರ ಏತ್ಯ ಪರಿದೇವಯಾಂ ಚಕ್ರೇ** (ನಿ. ೧-೫) ಎಂದು ಹೇಳಿರುವರು-ಎಂದರೆ ಅಗಸ್ತ್ಯಋಷಿಯು ಇಂದ್ರನಿಗಾಗಿ ಉದ್ದೇಶಿಸಿದ ಹವಿಸ್ಸನ್ನು ಮರುದ್ದೇವತೆಗಳಿಗೆ ಅರ್ಪಿಸಿದನು ಆಗ ಇಂದ್ರನು ಬಂದು ಕೋಪದಿಂದ ಅಗಸ್ತ್ಯಋಷಿಯ ಈ ಕಾರ್ಯವನ್ನು ಆಗ್ರಹಪೂರ್ವಕವಾಗಿ ನಿಂದಿಸಿದನು ಎಂದು ಹೇಳಿರುವುದು

## ಸೂಕ್ತ—೧೭೦

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೦ ॥

ಅಷ್ಟಕ - ೨ ॥ ಅಧ್ಯಾಯ—೪ ॥ ವರ್ಗ—೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—೧, ೩. ೪. ಇಂದ್ರಃ । ೨, ೫. ಅಗಸ್ತ್ಯಃ ॥

॥ ದೇವತಾ—ಇಂದ್ರಃ ॥

॥ ಛಂದಃ—೧. ಬೃಹತೀ । ೨-೪. ಅನುಷ್ಟುಪ್ । ೫. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।

ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿ ನಶ್ಯತಿ ॥ ೧ ॥

॥ ಪದಪಾಠಃ ॥

ನ । ನೂನಂ । ಅಸ್ತಿ । ನೋ ಇತಿ । ಶ್ವಃ । ಕಃ । ತತ್ । ವೇದ । ಯತ್ । ಅದ್ಭುತಂ ।

ಅನ್ಯಸ್ಯ । ಚಿತ್ತಂ । ಅಭಿ । ಸಂಽಚರೇಣ್ಯಂ । ಉತ । ಆಽಧೀತಂ । ವಿ । ನಶ್ಯತಿ ॥ ೧ ॥

॥ ಸಾಯಣಭಾಷ್ಯಂ ॥

ಪರಿದೇವನಪ್ರಕಾರಃ ಪ್ರತಿಪಾದ್ಯತೇ । ಇಂದ್ರ ಆಹ । ಅದ್ಯತನಂ ಯದಸ್ತಿ ತನ್ನೂನಮದ್ಯ ನಾಸ್ತಿ । ನೂನಮತ್ರ ವಿಚಿಕಿತ್ಸಾರ್ಥೇ । ಅತ್ರಾದ್ಯೇತಿ ಯದ್ಯಪಿ ನಾಸ್ತಿ ತಥಾಪ್ಯುತ್ತರವಾಕ್ಯೇ ಶ್ವ ಇತಿ ದರ್ಶನಾದತ್ರಾದ್ಯೇತಿ ಗಮ್ಯತೇ । ತಥಾ ಶ್ವೋಽಪಿ ನೂನಂ ನೋ । ಉಶಬ್ದೋಽವಧಾರಣೇ । ಶ್ವಸ್ತನಮಪಿ ನೈವ ನಾಸ್ತಿ । ಅದ್ಯ ಯಥಾಸ್ಮದರ್ಥನಿರುಪ್ತಮಸ್ಮಭ್ಯಂ ನಾಸ್ತಿ ಕಿಲ ಶ್ವಃ ಕಥಂ ಲಪ್ಸ್ಯತ ಇತಿ ಭಾವಃ । ಯದದ್ಭುತಮನ್ಯಸ್ಮೈ ನಿರುಪ್ಯಾನ್ಯಸ್ಮೈ ದತ್ತಮಿತಿ ಯದಸ್ತಿ ವೈಪರೀತ್ಯಂ ತತ್ಕೋ ವೇದ । ಯದ್ವಾ । ಯದದ್ಭುತಂ ಭಾವಿ ಕಾರ್ಯಂ ಯದಸ್ತಿ ತತ್ಕೋ ವೇದ । ಅದ್ಯ ಶ್ವೋ ವಾ ಲಭ್ಯತ ಇತ್ಯಾಶಾ ನ ಕಾರ್ಯೇತ್ಯುಕ್ತಂ ಭವತಿ । ತದೇವಾಹ । ಅಭಿ ಸಂಚರೇಣ್ಯಂ ಸರ್ವತಃ ಸಂಚಾರ್ಯನ್ಯಸ್ಯ ಚಿತ್ತಂ ಮಾನಸಂ ಜಾನಾತೀತಿ ಶೇಷಃ । ಉತಾಪಿ ಚಾಧೀತಮಾಧ್ಯಾತಂ ಚಿಂತಿತಮಪಿ ನ ದೃಶ್ಯಂ ಕಿಮು ಸಕೃತ್ಸ್ಮೃತಂ ವಿ ನಶ್ಯತೀತಿ ॥

॥ ಪ್ರತಿಪದಾರ್ಥ ॥

(**ಅದ್ಯ**—ಈಗ ಏನು ಸಂಭವಿಸಬಹುದೆಂಬುವುದು) । **ನೂನಂ**—ನಿಶ್ಚಯವಾಗಿ । **ನಾಸ್ತಿ**—ಗೊತ್ತಾಗುವುದಿಲ್ಲ । **ಶ್ವಃ**—ನಾಳೆಯ ದಿವಸ (ಏನು ಸಂಭವಿಸಬಹುದೆಂಬುವುದೂ ಸಹ) । **ನೊ**—ಗೊತ್ತಾಗುವುದಿಲ್ಲ (ಹೀಗಿರುವಾಗ) । **ಯತ್ ಅದ್ಭುತಂ**—ಯಾವ ಆಶ್ಚರ್ಯಕರವಾದ ಇಂತಹ ವಿಷಯವುಂಟೋ । **ತತ್**– ಅದನ್ನು । **ಕಃ**— ಯಾವ ಮನುಷ್ಯನು ತಾನೇ । **ವೇದ**—ತಿಳಿಯಬಲ್ಲನು ? । **ಅಭಿ**—ಎಲ್ಲಾ ಕಡೆಯಲ್ಲಿಯೂ (ಎಲ್ಲ ವಿಷಯಗಳಲ್ಲಿಯೂ, । **ಸಂಚರೇಣ್ಯಂ**—ಪ್ರವರ್ತಿಸುತ್ತಿರುವ । **ಅನ್ಯಸ್ಯ**—ಇನ್ನೊಬ್ಬ ಮನುಷ್ಯನ । **ಚಿತ್ತಂ**—ಮನಸ್ಸನ್ನು । (**ಜಾನಾತಿ**—ತಿಳಿಯಲಾಗುವುದೇ ?) **ಉತ**—ಇದಲ್ಲದೆ । **ಆಧೀತಂ**—ಚೆನ್ನಾಗಿ ಅಭ್ಯಾಸಮಾಡಿರುವ ವಿಷಯವೂ ಸಹ (ಕಾಲಕ್ರಮದಲ್ಲಿ) । **ವಿ ನಶ್ಯತಿ**—ನಾಶವಾಗುತ್ತದೆ (ಮರೆತುಹೋಗುತ್ತದೆ)

॥ ಭಾವಾರ್ಥ ॥

(ಇಂದ್ರನು ಹೀಗೆ ಹೇಳುವನು—ಎಲೈ ಅಗಸ್ತ್ಯನೇ) ಈ ದಿವಸ ಅಥವಾ ನಾಳೆ ಏನು ನಡೆಯುವುದೆಂಬುದು ಯಾರಿಗೂ ತಿಳಿಯುವಂತಿಲ್ಲ. ಇಂತಹ ಆಶ್ಚರ್ಯಕರವಾದ (ಎಂದರೆ ಮುಂದೆ ಸಂಭವಿಸಬಹುದಾದ ಸಂಗತಿಯನ್ನು, ಯಾವ ಮನುಷ್ಯನು ತಾನೇ ತಿಳಿಯಬಲ್ಲನು ? ಹೀಗಿರುವಾಗ ನಾನಾ ವಿಷಯಗಳಲ್ಲಿ ಪ್ರವರ್ತಿಸುತ್ತಿರುವ ಪರಪುರುಷನ ಮನಸ್ಸನ್ನು ತಿಳಿಯಲಾದೀತೇ ? ಆಗುವುದಿಲ್ಲ. ಏಕೆಂದರೆ ಎಷ್ಟೇ ಚೆನ್ನಾಗಿ ಅಭ್ಯಾಸಮಾಡಿದ ವಿಷಯವೂ ಸಹ ಕಾಲಕ್ರಮದಲ್ಲಿ ಮರೆತುಹೋಗುವುದು.

## English Translation.

(Indra Speaks),— It is not certain what to-day or what tomorrow will yield to us : who comprehends this mystery ? Verily, the mind of any other (being) is of an unsteady (nature), and even that which has been profoundly studied, is (in time) forgotten.

॥ ವಿಶೇಷವಿಷಯಗಳು ॥

**ನ ನೂನಂ— ಅದ್ಯತನಂ ಯದಸ್ತಿ ತತ್ ಅದ್ಯ ನಾಸ್ತಿ । ನೂನಮತ್ರ ವಿಚಿಕಿತ್ಸಾರ್ಥೀಯಃ ।** ಭೂತ ವರ್ತಮಾನ ಭವಿಷ್ಯತ್ ಎಂಬ ಮೂರು ವಿಧವಾದ ಕಾಲಕೃತಭೇದಗಳಲ್ಲಿ ಅದ್ಯತನ ಈಗ ನಡೆಯುತ್ತಿರುವುದು ಎಂಬ ವರ್ತಮಾನಕಾಲಕೃತವಾದ ಭೇದವು ಇರುವುದಿಲ್ಲ ಎಂದು ಅರ್ಥ. ಈ ಋಕ್ಕಿನಲ್ಲಿ ಅದ್ಯ ಎಂಬ ಪದವು ಪ್ರಯುಕ್ತ ವಾಗಿಲ್ಲ. ಆದಾಗ್ಯೂ ಮುಂದಿನ ವಾಕ್ಯದಲ್ಲಿ ಭವಿಷ್ಯತ್ಕಾಲಬೋಧಕವಾದ ಶ್ವಃ (ನಾಳೆ) ಎಂಬ ಪದವು ಪ್ರಯುಕ್ತ ವಾಗಿರುವುದರಿಂದ ಈ ವಾಕ್ಯದಲ್ಲಿ ಅದ್ಯ ಎಂಬ ಪದವನ್ನು ಅಧ್ಯಾಹಾರಮಾಡುವುದು ಯುಕ್ತವಾಗಿದೆ ಎಂದು ಸಾಯಣರು **ಅದ್ಯ ಇತಿ ಯದ್ಯಪಿ ನಾಸ್ತಿ ತಥಾಪಿ ಉತ್ತರವಾಕ್ಯೇ ಶ್ವಃ ಇತಿ ದರ್ಶನಾತ್ ಅದ್ಯೇತಿ ಗಮ್ಯತೇ** ಎಂದು ವ್ಯಾಖ್ಯಾನಮಾಡಿ ವಿವರಿಸಿದ್ದಾರೆ. ಯಾಸ್ಕರು—

**ನೂನಮಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಮುಭಯಮನ್ವಧ್ಯಾಯಂ ವಿಚಿಕಿತ್ಸಾರ್ಥೀಯಶ್ಚ ಪದಪೂರಣಶ್ಚ ।** (ನಿ. ೧—೫)

ನೂನಂ ಎಂಬ ಪದವು ಛಂದಸ್ಸುಗಳಲ್ಲಲ್ಲದೆ ಬೇರೆ ಕಡೆಗಳಲ್ಲಿಯೂ ವಿಚಿಕಿತ್ಸಾರ್ಥದಲ್ಲಿ ಪ್ರಯುಕ್ತವಾಗಿರುವುದು. ಛಂದಸ್ಸಿನಲ್ಲಿ ವಿಚಿಕಿತ್ಸಾರ್ಥದಲ್ಲಿಯೂ ಪದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ ಎಂದು ವರ್ಣಿಸಿದ್ದಾರೆ. ದುರ್ಗಾ ಚಾರ್ಯರು **ವಿಚಿಕಿತ್ಸಾ ನಾಮ ವಿವೇಕಪೂರ್ವಕೋ ಅವಧಾರಣಾಭಿಪ್ರಾಯಃ**-ಸಂಶಯವು ಉಂಟಾಗಿರುವ ಸನ್ನಿವೇಶಗಳಲ್ಲಿ ವಿಮರ್ಶೆಯಿಂದ ನಿಶ್ಚಯಮಾಡುವುದಕ್ಕೆ ವಿಚಿಕಿತ್ಸಾಪದಬೋಧ್ಯವಾಗಿರುವುದು ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಇಲ್ಲಿ ನೂನಂ ಎಂಬ ಪದವು ವಿಚಿಕಿತ್ಸಾ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಸಮರ್ಥನೆ ಮಾಡಿದ್ದಾರೆ.

**ಶ್ವಃ ನೂನಂ ನ—ತಥಾ ಶ್ವಸ್ತನಮಪಿ ನೈವ ನಾಸ್ತಿ**-ವರ್ತಮಾನಕಾಲಕೃತವಾದ ಭೇದವೂ ಇಲ್ಲದಿರುವಂತೆ ಶ್ವಃ ನಾಳೆ ಎಂಬ ಭವಿಷ್ಯತ್ಕಾಲ ನಿರ್ದೇಶವೂ ಕೂಡ ಇರುವುದಿಲ್ಲವೆಂದು ಅರ್ಥವನ್ನು ವಿವರಿಸಿದೆ. ಇಲ್ಲಿ ಸಾಯಣರು

**ಅತ್ರ ಯಾಸ್ಕಃ—ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ ಸ ಇಂದ್ರ ಏತ್ಯ ಪರಿದೇವಯಾಂಚಕ್ರೇ** (ನಿ. ೧-೫)

ಯಾಸ್ಕರು ಅಗಸ್ತ್ಯಋಷಿಯು ಇಂದ್ರನಿಗಾಗಿ ಹವಿಸ್ಸನ್ನು ಸಿದ್ಧಪಡಿಸಿ ಅದರಿಂದ ಮರುದ್ದೇವತೆಗಳಿಗೆ ಅರ್ಪಿಸಲು ಇಚ್ಛೆ ಮಾಡಿದಾಗ ಇಂದ್ರನು ತನಗೆ ಅರ್ಪಿತವಾಗಬೇಕಾದ ಹವಿಸ್ಸು ಬೇರೆಯವಿಧವಾಗಿ ಅರ್ಪಿತವಾಗುವ ಕಾರಣ ತನ್ನ ಮನಸ್ಸಿನ ಖೇದವನ್ನು ಈ ಮಂತ್ರದಿಂದ ಸೂಚಿಸಿರುವನು ಎಂದು ಅರ್ಥವನ್ನು ಮಾಡಿ ಆ ವಚನವನ್ನೂ ಉದಾಹರಿಸಿದ್ದಾರೆ.

**ಅದ್ಯ ಯಥಾ ಅಸ್ಮದರ್ಥಂ ನಿರುಪ್ತಂ ಅಸ್ಮಭ್ಯಂ ನಾಸ್ತಿ ಕಿಲ ಶ್ವಃ ಕಥಂ ಲಪ್ಸ್ಯತೇ ।** ಈಗ ನನಗಾಗಿ ಸಿದ್ಧಮಾಡಿದ ಹವಿಸ್ಸು ನನಗೆ ಸಿಕ್ಕದಿರುವಾಗ ನಾಳೆಯಾದರೂ ನಾನು ಹವಿಸ್ಸನ್ನು ಹೊಂದುತ್ತೇನೆ ಎಂದು ನಿಶ್ಚಯ ವಾಗಿ ನಂಬಿಕೆಯನ್ನು ಹೊಂದುವುದು ಹೇಗೇ? ಎಂದು ಇಂದ್ರನ ಖೇದಪ್ರಕಾರವು ವರ್ಣಿತವಾಗಿದೆ.

**ಯದದ್ಭುತಂ ತತ್ ಕೋ ವೇದ-ಅನ್ಯಸ್ಮೈ ನಿರುಪ್ಯ ಅನ್ಯಸ್ಮೈ ದತ್ತಮಿತಿ ಯದಸ್ತಿ ವೈಪರೀತ್ಯಂ ತತ್ ಕೋ ವೇದ ।** ಒಬ್ಬರ ಉದ್ದೇಶದಿಂದ ಹವಿಸ್ಸನ್ನು ಸಿದ್ಧಮಾಡಿ ಅದನ್ನು ಇನ್ನೊಬ್ಬರಿಗೆ ಅರ್ಪಿಸಿರುವ ಬದ

ಲಾವಣೆಯು ಉಂಟಾಗುವುದೆಂದು ತಿಳಿದವರು ಯಾರೂ ಇಲ್ಲವು ಎಂದು ಒಂದು ವಿಧವಾದ ಅರ್ಥವು ವಿವೃತವಾಗಿದೆ. **ಯದ್ವಾ ಯದದ್ಭುತಂ ಭಾವಿ ಕಾರ್ಯಂ ಯದಸ್ತಿ ತತ್ಕೋ ವೇದ ಅದ್ಯ ಶ್ವೋ ವಾ ಲಭ್ಯತೇ ಇತ್ಯಾಶಾ ನ ಕಾರ್ಯಾ** । ಭವಿಷ್ಯತ್ಕಾಲದಲ್ಲಿ ಯಾವ ಕಾರ್ಯವು ಆಶ್ಚರ್ಯವನ್ನುಂಟುಮಾಡುವುದಾಗಿ ಸಂಭವಿಸುವುದು ಎಂಬುದನ್ನು ಯಾರೂ ತಿಳಿಯದಿರುವ ಕಾರಣ ಈಗಲಾದರೂ ಅಥವಾ ನಾಳೆಯಾದರೂ ನನಗೆ ಸಿದ್ಧವಾದ ಹವಿಸ್ಸು ದೊರಕುವ ವಿಷಯದ ಆಸೆಯನ್ನು ಹೊಂದಲಾಗುವುದಿಲ್ಲ ಎಂದು ಇಂದ್ರನ ಖೇದಸೂಚಕವಾದ ವಚನವು ಉಕ್ತವಾಗಿದೆ ಎಂದು, ಎರಡನೆಯ ಅರ್ಥವನ್ನೂ ವಿವರಿಸಿದ್ದಾರೆ.

**ಅಭಿ ಸಂಚರೇಣ್ಯಂ ಚಿತ್ತಂ—ಸರ್ವತಃ ಸಂಚಾರಿ ಅನ್ಯಸ್ಯ ಮಾನಸಂ**—ಇತರರ ಮನಸ್ಸು ಯಾವಾಗಲೂ ಸಂಚರಿಸುವ ಸ್ವಭಾವವುಳ್ಳದ್ದಾಗಿರುವುದೇ ಹೊರತು ಸ್ಥಿರವಾಗಿರುವುದಿಲ್ಲ ಎಂದು ತಿಳಿಯುತ್ತದೆ. **ಉತ ಅಪಿ ಚ ಆಧೀತಂ ವಿನಶ್ಯತಿ**—ಆದಾಗ್ಯೂ ಇಂದ್ರನಾದ ನಾನು ನನಗೋಸ್ಕರವಾಗಿ ಸಿದ್ಧಪಡಿಸಿರುವ ಹವಿಸ್ಸು ನನಗೆ ದೊರಕುವುದು ಎಂದು ನಿಶ್ಚಯವಾಗಿ ತಿಳಿದುಕೊಂಡಿದ್ದರೂ ಅದು (ನಾಶವಾಗುವುದೆಂದು) ನನಗೆ ದೊರಕುವುದಿಲ್ಲವೆಂದೂ ಮುಂದೆ ಸಂಭಾವಿತವಾಗುವ ಆಶ್ಚರ್ಯಕರವಾದ ಈ ಹವಿಸ್ಸಿನ ಅಪ್ರಾಪ್ತಿಯನ್ನು ಯಾರು ತಾನೇ ತಿಳಿದಿರುವರು ಎಂದೂ ಇಂದ್ರನ ಪರಿತಾಪಸೂಚಕವಾದ ವಚನವು ವರ್ಣಿತವಾಗಿದೆ.

ಯಾಸ್ಕರು ಈ ಋಕ್ಕನ್ನು ಉದಹರಿಸಿ ವ್ಯಾಖ್ಯಾನಮಾಡಿದ್ದಾರೆ. ಈ ವ್ಯಾಖ್ಯಾನದಲ್ಲಿ ನೂನಂ ಎಂಬ ಪದವು ವಿಚಿಕಿತ್ಸಾರ್ಥದಲ್ಲಿ (ಅವಧಾರಣಾರ್ಥದಲ್ಲಿ) ಪ್ರಯುಕ್ತವಾಗಿದೆ ಎಂಬ ಅರ್ಥವನ್ನು ವ್ಯಕ್ತಗೊಳಿಸಿದ್ದಾರೆ.

**ನ ನೂನಮಸ್ತ್ಯದ್ಯತನಂ ನೋ ಏವ ಶ್ವಸ್ತನಂ । ಅದ್ಯ ಅಸ್ಮಿನ್ ದ್ಯವಿ ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತ ಇತಿ ಸತಃ । ಶ್ವ ಉಪಾಶಂಸನೀಯಃ ಕಾಲಃ । ಹ್ಯೋ ಹೀನಃ ಕಾಲಃ । ಕಸ್ತದ್ವೇದಯದದ್ಭುತಂ ಕಸ್ತದ್ವೇದ ಯದಭೂತ್ । ಇದಮಪೀತರದದ್ಭುತಮಭೂತಮಿವ । ಅನ್ಯಸ್ಯ ಚಿತ್ತಮಭಿಸಂಚರೇಣ್ಯಂ ಅಭಿಸಂಚಾರಿ ॥ ಅನ್ಯೋ ನಾನೇಯಃ । ಚಿತ್ತಂ ಚೇತತೇಃ । ಉತಾಧೀತಂ ವಿನಶ್ಯತೀತಿ । ಅಪ್ಯಾಧ್ಯಾತಂ ವಿನಶ್ಯತೀತಿ । ಆಧ್ಯಾತಂ ಅಭಿಪ್ರೇತಂ** (ನಿ. ೧–೬)

ನೂನಂ ಎಂಬ ಪದವು ವಿವೇಕಪೂರ್ವಕವಾಗಿ ವಿಮರ್ಶೆಮಾಡಿ ನಿಶ್ಚಯವನ್ನು ಬೋಧಿಸುವುದು. ಪ್ರಕಾಶ ಅಥವಾ ಬೆಳಕಿನಿಂದ ಬೆಳಗುತ್ತಿರುವುದು ಎಂಬ ಅರ್ಥವನ್ನು ಬೋಧಿಸುವ ದ್ಯುತ್ ಧಾತುವಿನಿಂದ ನಿಷ್ಪನ್ನವಾದ ದ್ಯವಿ ಶಬ್ದವು ಅಹಸ್ಸಿನ (ಹಗಲಿನ) ವಾಚಕವಾಗಿ ಇಲ್ಲಿ ಅದ್ಯತನಶಬ್ದದಿಂದ ನಿರ್ದಿಷ್ಟವಾಗಿದೆ. ಈ ಹಗಲಿನಲ್ಲಿ ದೊರಕುವುದೆಂಬುದಾಗಿ ನಿಶ್ಚಯ ವಿಷಯವಾದುದು ದೊರಕದೆ ಇರುತ್ತದೆ. ಇದೇ ಇಲ್ಲದಿರುವಾಗ (ಮುಂದೆ) ಮುಂದೆ ಆಶಂಸೆಯು ಪೂರ್ಣವಾಗಬಹುದೆಂದು ಸಂಭಾವನಾ ವಿಷಯವಾದ ಕಾಲದಲ್ಲಿಯೂ ಹವಿಸ್ಸು ನನಗೆ ದೊರಕುವುದೆಂಬ ನಿಶ್ಚಯವೂ ಇಲ್ಲ ಎಂದು ಅರ್ಥವನ್ನು ವರ್ಣಿಸಿ, ಶ್ವಃ ಎಂಬ ಪದವು ಆಶಂಸೆಯನ್ನು ಪೂರ್ಣಮಾಡಬಹುದಾದ ಆಶಂಸನೀಯ ಕಾಲವಾಚಕವೆಂದೂ, ಹ್ಯಃ ಎಂಬ ಪದವು ಕಳೆದುಹೋದ ಕಾಲವಾಚಕನೆಂದೂ ವಿವೃತವಾಗಿದೆ. ಅದ್ಭುತ ಶಬ್ದಕ್ಕೆ ಅಭೂತ್ (ಆಯಿತು) ಎಂದು ಭೂತಕಾಲದ ಅರ್ಥವನ್ನು ವಿವರಿಸಿ, ಈಗ ನನಗೋಸ್ಕರ ಸಿದ್ಧವಾದುದು ನನಗೇ ಇಲ್ಲದಿರುವಾಗ, ಮುಂದೆಯಾದರೂ ನನಗೆ ಆಗಲಿ ಇನ್ನೊಬ್ಬನಿಗಾಗಲಿ ದೊರಕುವುದೆಂಬ ನಿಶ್ಚಯವು ಯಾರಿಗೆ ತಾನೇ ಉಂಟಾಗುವುದು ಎಂದು ಅರ್ಥವನ್ನು ಹೇಳಿದೆ. **ಅನ್ಯಸ್ಯ ಚಿತ್ತಂ** ಇತರರ ಮನಸ್ಸು **ಅಭಿಸಂಚರೇಣ್ಯಂ**—

ಸಂಚಾರಶೀಲವಾಗಿ, ಚಂಚಲವಾದ ಸ್ವಭಾವದಿಂದ ಇರುವುದು. ಆದಕಾರಣ ಈಗ ಸಿದ್ಧವಾದುದು ನನಗೆ ದೊರಕುವುದಿಲ್ಲವೆಂದು ಅರ್ಥಮಾಡಿದೆ. ಮತ್ತು ಉತ, ಅಪಿ, ಅಥ ಎಂಬ ಪದಗಳು ವೇದದಲ್ಲಿ ಒಂದೇ ವಿಧವಾದ ಅರ್ಥವನ್ನು ಬೋಧಿಸುವ ಪರ್ಯಾಯ ಪದಗಳಾಗಿರುತ್ತವೆ ಎಂದು ಉಕ್ತವಾಗಿದೆ. ಅದ್ಯ, ಶ್ವಃ, ಹ್ಯಃ, ಅದ್ಭುತಂ, ಅನ್ಯಃ, ಚಿತ್ತಂ, ಆಧೀತಂ, ಈ ಪದಗಳಿಗೆ ಅರ್ಥವನ್ನು ದ್ಯೋತತ ಇತಿ ಸತಃ, ಶ್ವಃ ಉಪಾಶಂಸನೀಯಃ ಕಾಲಃ, ಹ್ಯಃ ಹೀನಃ ಕಾಲಃ, ಅದ್ಭುತಂ ಅಭೂತ್, ಅನ್ಯಃ ನಾನೇಯಃ, ಚಿತ್ತಂ ಚೇತತೇಃ, ಆಧ್ಯಾತಂ ಅಭಿಪ್ರೇತಂ ಎಂದು ಅರ್ಥವಿವರಣೆಯನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ತಿ—ನಿಪಾತೈರ್ಯದ್ಯದಿ—** (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ವೇದ—**ವಿದ ಜ್ಞಾನೇ. ಧಾತು. **ವಿದೋ ಲಟೋ ವಾ** (ಪಾ.ಸೂ.೩-೪-೮೩) ಎಂಬುದರಿಂದ ಲಟಿನ ತಿಪ್ಪಿಗೆ ಣಲಾದೇಶ. ಧಾತುವಿನ ಲಘೂಪಧೆಗೆ ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಅದ್ಭುತಂ—**ಭೂ ಸತ್ತಾಯಾಂ ಧಾತು. ಇದಕ್ಕೆ ಅದ್ ಎಂಬುದು ಉಪಪದವಾಗಿರುವಾಗ **ಅದಿ ಭುವೋ ಡುತಚ್** (ಉ.ಸೂ. ೬೭೯) ಎಂಬುದರಿಂದ ಡುತಚ್ ಪ್ರತ್ಯಯ. ಡಿತ್ತಾದುದರಿಂದ ಟಿಗೆ (ಊ) ಲೋಪ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಂಚರೇಣ್ಯಂ—**ಚರ ಗತಿಭಕ್ಷಣಯೋಃ ಧಾತು. ಸಮ್ ಉಪಸರ್ಗ. ಬಹುಲಗ್ರಹಣದಿಂದ ಔಣಾದಿಕ ಏಣ್ಯಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಆಧೀತಂ—**ಇಙ್ ಅಧ್ಯಯನೇ. ಧಾತು ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ನಶ್ಯತಿ—**ಣಶ ಅದರ್ಶನೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

**ಕಿಂ ನ ಇಂದ್ರ ಜಿಘಾಂಸಸಿ ಭ್ರಾತರೋ ಮರುತಸ್ತವ ।**

**ತೇಭಿಃ ಕಲ್ಪಸ್ವ ಸಾಧುಯಾ ಮಾ ನಃ ಸಮರಣೇ ವಧೀಃ ॥ ೨ ॥**

॥ ಪದಪಾಠಃ ॥

ಕಿಂ । ನಃ । ಇಂದ್ರ । ಜಿಘಾಂಸಸಿ । ಭ್ರಾತರಃ । ಮರುತಃ । ತವ ।

ತೇಭಿಃ । ಕಲ್ಪಸ್ವ । ಸಾಧುऽಯಾ । ಮಾ । ನಃ । ಸಂऽಅರಣೇ । ವಧೀಃ ॥ ೨ ॥

॥ ಸಾಯಣಭಾಷ್ಯಂ ॥

ಇದಮಗಸ್ತ್ಯವಾಕ್ಯಂ । ಹೇ ಇಂದ್ರ ನೋऽಸ್ಮಾನನಪರಾಧಿನಃ ಕಿಂ ಜಿಘಾಂಸಸಿ । ಹಂತುಮಿಚ್ಛಸಿ। ಕಥಮವಧ್ಯತ್ವಮಿತಿ ಅತ ಆಹ। ಮರುತಸ್ತವ ಭ್ರಾತರಃ। ತ್ವಯಾ ಭೋಗಪ್ರದಾನೇನ ಭರಣೀಯಾ ಇತ್ಯರ್ಥಃ। ಅತೋ ವಯಮವಧ್ಯಾ ಇತ್ಯುಕ್ತಂ ಭವತಿ। ಮರುತಾಮಿಂದ್ರಭ್ರಾತೃತ್ವಮೇಕಸ್ಮಿನ್ನೇವಾದಿತಿಗರ್ಭ ಉತ್ಪನ್ನತ್ವಾತ್ । ಸಾ ಚೋತ್ಪತ್ತಿಃ ಪುರಾಣೇಷು ಪ್ರಸಿದ್ಧಾ। ಸಂತು ಭ್ರಾತರಸ್ತತಶ್ಚ ಕಿಮಿತಿ ಅತ ಆಹ। ತೇಭಿಸ್ತೈರ್ಮರುದ್ಭಿಃ ಸಹ ಸಾಧುಯಾ ಸಾಧು ತ್ವಂ ಕಲ್ಪಸ್ವ । ಕಲ್ಪಯ ಹವಿರ್ಭಾಗಂ ತೈಃ ಸಹ ಯುದ್ಧಂ ವಾ। ನೋऽಸ್ಮಾನ್ ಸಮರಣೇ ಸಂಗ್ರಾಮೇ ಮಾ ವಧೀಃ। ಮಾ ಹಿಂಸೀಃ । ಯದ್ವಾ। ಲುಪ್ತೋ ದೃಷ್ಟಾಂತಃ। ಸಂಗ್ರಾಮೇ ಯಥಾ ವಿರೋಧಿನಂ ಹಂಸಿ ನ ತಥಾಸ್ಮಾನಿತಿ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ। **ಮರುತಃ**—ಮರುದ್ದೇವತೆಗಳು। **ತವ ಭ್ರಾತರಃ**—ನಿನ್ನ ಭ್ರಾತೃಗಳು (ನಿನ್ನಿಂದ ಪೋಷಣೀಯರು)। **ನಃ**—(ಅನಪರಾಧಿಗಳಾದ) ನಮ್ಮನ್ನು। **ಕಿಂ**—ಯಾತಕ್ಕೋಸ್ಕರ। **ಜಿಘಾಂಸಸಿ**—ವಧಿಸಲು ಇಚ್ಛಿಸುತ್ತೀಯೇ? । **ತೇಭಿಃ**—ಆ ಮರುದ್ದೇವತೆಗಳೊಡನೆ। **ಸಾಧುಯಾ**—ಶಾಂತ ರೀತಿಯಿಂದ। **ಕಲ್ಪಯ**—(ಹವಿರ್ಭಾಗವನ್ನು) ಕಲ್ಪಿಸಿಕೋ (ಹಂಚಿಕೋ)। **ನಃ**—ನಮ್ಮನ್ನು। **ಸಂ ಅರಣೇ**—ಸಂಗ್ರಾಮದಲ್ಲಿ (ಯುದ್ಧದಲ್ಲಿ)। **ಮಾ ವಧೀಃ**—ಹಿಂಸಿಸಬೇಡ (ವಧಿಸಬೇಡ).

॥ ಭಾವಾರ್ಥ ॥

(ಅಗಸ್ತ್ಯರು ಇಂದ್ರನಿಗೆ ಹೇಳುವುದು) ಎಲೈ ಇಂದ್ರನೇ, ಮರುದ್ದೇವತೆಗಳು ನಿನ್ನ ಪೋಷಣೆಗೆ ಒಳಪಟ್ಟವರು (ನಿನ್ನ ಭ್ರಾತೃಗಳು); ಅನಪರಾಧಿಗಳಾದ ನಮ್ಮನ್ನು ಏಕೆ ಕೊಲ್ಲಲಿಚ್ಛಿಸುತ್ತೀಯೇ? ಶಾಂತರೀತಿಯಿಂದ ಹವಿಸ್ಸನ್ನು ಅವರೊಡನೆ ಹಂಚಿಕೋ; ಸಂಗ್ರಾಮದಲ್ಲಿ (ದ್ವೇಷದಿಂದ) ನಮ್ಮನ್ನು ಕೊಲ್ಲಬೇಡ.

## English Translation.

(Agastya),— Why, Indra, do you purpose to slay us : the Maruts are your brethren : share with them (the offering) in peace ; destroy us not in enmity.

‖ ವಿಶೇಷವಿಷಯಗಳು ‖

ಇಂದ್ರನಿಗೂ ಅಗಸ್ತ್ಯಋಷಿಗೂ ನಡೆದಿರುವ ಸಂವಾದರೂಪವಾದ ಈ ಸೂಕ್ತದಲ್ಲಿ ಮೊದಲನೆಯ ಮಂತ್ರದಿಂದ ಇಂದ್ರನು ಅಗಸ್ತ್ಯಋಷಿಯು ತನಗಾಗಿ ಸಿದ್ಧಮಾಡಿದ ಹವಿಸ್ಸನ್ನು ಮರುದ್ದೇವತೆಗಳಿಗೆ ಅರ್ಪಿಸುವ ಇಚ್ಛೆಯುಳ್ಳವನಾಗಿರುವನೆಂದು ತಿಳಿದು ತನ್ನ ಪಶ್ಚಾತ್ತಾಪವನ್ನು ವ್ಯಕ್ತಗೊಳಿಸಿರುವುದು ಉಕ್ತವಾಗಿದೆ. ಅಗಸ್ತ್ಯಋಷಿಯು ಇಂದ್ರನಿಗೆ ಉತ್ತರವನ್ನು ಹೇಳಿರುವುದು ಈ ಮಂತ್ರದಿಂದ ವ್ಯಕ್ತವಾಗುತ್ತದೆ. ಇದನ್ನೇ ಸಾಯಣರು ಭಾಷ್ಯದಲ್ಲಿ ಇದಮಗಸ್ತ್ಯವಾಕ್ಯಂ ಎಂದು ವರ್ಣಿಸಿದ್ದಾರೆ.

ಇಂದ್ರನನ್ನು ಸಂಬೋಧಿಸಿ **ನಃ ಕಿಂ ಜಿಘಾಂಸಸಿ—ಅಸ್ಮಾನ್ ಅನಪರಾಧಿನಃ** ಹಂತುಮಿಚ್ಛಸಿ ಕಿಂ-ತಪ್ಪುಮಾಡದೆ ಇರುವಕಾರಣ ತಪ್ಪಿತಸ್ಥರಲ್ಲದ ನಮ್ಮನ್ನು ಶಿಕ್ಷೆಗೆ ಗುರಿಮಾಡಬೇಡವೆಂದು ಪ್ರಶ್ನೆಯ ಮೂಲಕವಾಗಿ ಉತ್ತರವನ್ನೂ ಹೇಳಿ, ಋಷಿಗಳಾದ ನಾವು ಶಿಕ್ಷೆಗೆ ಅರ್ಹರಲ್ಲ ಎಂಬುದಕ್ಕೆ ಕಾರಣವನ್ನು ತಿಳಿಸಲು **ಮರುತಃ ತವ ಭ್ರಾತರಃ** ಎಂಬ ವಾಕ್ಯವನ್ನೂ ಹೇಳಿದೆ. **ತ್ವಯಾ ಭೋಗಪ್ರದಾನೇನ ಭರಣೀಯಾಃ** ಮರುದ್ದೇವತೆಗಳು, ನೀನು ಭೋಗವನ್ನು ಉಂಟುಮಾಡುವುದರ ಮೂಲಕ ನಿನ್ನಿಂದ ಪೋಷ್ಯರಾಗಿರುವ ಕಾರಣ ನಿನ್ನ ಪೋಷ್ಯವರ್ಗದರಿಗೆ ಹವಿಸ್ಸನ್ನು ಅರ್ಪಿಸಲು ಇಚ್ಛೆಯುಳ್ಳ ನಾವು (ಅವಧ್ಯ ರಾಗಿ) ವಧೆಗೆ ಅನರ್ಹರಾಗಿರುವೆವು ಎಂದು ಅರ್ಥವನ್ನು ವರ್ಣಿಸಿದೆ. ಯಾಸ್ಕರು **ಭ್ರಾತಾ ಭರತೇರ್ಹರತಿಕರ್ಮಣೋ ಹರತೇ ಭಾಗಂ ಭರ್ತವ್ಯೋ ಭವತೀತಿ ವಾ** (ನಿ.೪-೨೬) ಭೃಞ್ ಧಾತುವಿನಿಂದ ನಿಷ್ಪನ್ನವಾದ ಭ್ರಾತೃಶಬ್ದಕ್ಕೆ ಭಾಗವನ್ನು ಹೊಂದತಕ್ಕವನು ಅಥವಾ ಪೋಷಣೆಗೆ ಅರ್ಹನೆಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು—ಮರುದ್ದೇವತೆಗಳು ಇಂದ್ರನಿಗೆ ಭ್ರಾತೃಗಳಾಗಿರುವ ಅಂಶವು **ಏಕಸ್ಮಿನ್ನೇವಾದಿತೇರ್ಗರ್ಭೆ ಉತ್ಪನ್ನತ್ವಾತ್** ಇಂದ್ರನ ತಾಯಿಯಾದ ಅದಿತಿದೇವಿಯ ಗರ್ಭದಲ್ಲಿಯೇ ಉತ್ಪತ್ತಿಯನ್ನು ಪಡೆದಕಾರಣ ಇಂದ್ರನ ಭ್ರಾತೃಗಳು ಎಂದೂ, **ಸಾ ಚ ಉತ್ಪತ್ತಿಃ ಪುರಾಣಾದಿಷು ಪ್ರಸಿದ್ಧಾ** ಮರುತ್ತುಗಳು ಉತ್ಪನ್ನರಾದಕ್ರಮವು ಪುರಾಣವೇ ಮೊದಲಾದ ಗ್ರಂಥಗಳಲ್ಲಿಯೂ ಪ್ರಸಿದ್ಧವಾಗಿದೆ ಎಂದೂ ವಿವರಿಸಿದ್ದಾರೆ. ಬೃಹದ್ದೇವತೆಯಲ್ಲಿಯೂ ಈ ವಿಷಯವು ಉಕ್ತವಾಗಿದೆ.

**ತೇಭಿಃ ಸಾಧುಯಾ ಕಲ್ಪಸ್ವ— ತೈರ್ಮರುದ್ಭಿಸ್ಸಹ ಸಾಧುತ್ವಂ ಕಲ್ಪಯ ಹವಿರ್ಭಾಗಂ ತೈಸ್ಸಹ ಯುದ್ಧಂ ವಾ**- ಅಗಸ್ತ್ಯಋಷಿಗಳು ಇಂದ್ರನನ್ನು ಸಂಬೋಧಿಸಿ, ನಿನ್ನ ಸಹೋದರರೊಡನೆ ಸಾಧುಭಾವವನ್ನು ವಹಿಸಿ, ಹವಿರ್ಭಾಗವನ್ನಾದರೂ ಅನುಗ್ರಹಿಸು, ಅಥವಾ ಅವರೊಡನೆ ಯುದ್ಧವನ್ನಾದರೂ ಮಾಡು ಎಂದು ಹೇಳಿ,

**ನಃ ಸಮರಣೇ ಮಾ ವಧೀಃ**—ನಮ್ಮನ್ನು **ಸಂಗ್ರಾಮೇ ಯಥಾ ವಿರೋಧಿನಂ ಹಂಸಿ,** ಯುದ್ಧದಲ್ಲಿ ಶತ್ರುವನ್ನು ಕೊಲ್ಲುವಂತೆ, ಹಿಂಸೆಮಾಡಬೇಡ ಎಂದು ಉತ್ತರವನ್ನೂ ಹೇಳಿದ್ದಾರೆ. ಈ ವಾಕ್ಯದಲ್ಲಿ ಉಪಮಾವಾಚಕವು ಲುಪ್ತವಾಗಿರುರುವುದೆಂದೂ ಒಂದು ವಿಧವಾದ ವ್ಯಾಖ್ಯಾನವನ್ನೂ ಉಪಮಾನಸಂಬಂಧವಿಲ್ಲದಿರುವ ಯುದ್ಧಮಾಡಿ ನಮ್ಮನ್ನು ಕೊಲ್ಲಬೇಡ ಎಂದು ಬೇರೊಂದು ಅರ್ಥವನ್ನೂ ಹೇಳಿದೆ. **ಸಮರಣ**ಶಬ್ದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿ **ಸಹ ಮರಣಂ ಯಸ್ಮಿನ್** ಅನೇಕ ಪ್ರಾಣಿಗಳಿಗೆ ಮರಣವು ಒಟ್ಟಿಗೆ ಉಂಟಾಗುವ ಸನ್ನಿವೇಶವು ಯುದ್ಧವಾಗಿರುವುದೆಂದು ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜಿಘಾಂಸಸಿ**—ಹನ ಹಿಂಸಾಗತ್ಯೋಃ ಧಾತು. **ಧಾತೋಃ ಕರ್ಮಣಃ ಸಮಾ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಅಜ್ಝನಗಮಾಂ ಸನಿ** (ಪಾ. ಸೂ. ೬-೪-೧೬) ಎಂಬುದರಿಂದ ಧಾತುವಿನ ಉಪಧೆಗೆ ದೀರ್ಘ. **ಸನ್ಯಜಿತೋಃ** ಎಂಬುದರಿಂದ ದ್ವಿತ್ವ. **ಅಭ್ಯಾಸಾಚ್ಚ** (ಪಾ. ಸೂ. ೭-೩-೫೫) ಎಂಬುದರಿಂದ ಧಾತುವಿನ ಹಕಾರಕ್ಕೆ ಕುತ್ವ. **ಸನ್ಯತಃ** ಸೂತ್ರದಿಂದ ಅಭ್ಯಾಸಕ್ಕೆ ಇತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಭ್ರಾತರಃ**—ಭ್ರಾಜೃ ದೀಪ್ತೌ. ಧಾತು. **ನಪ್ತೃನೇಷ್ಟೃ**—(ಉ.ಸೂ. ೨೫೨) ಎಂಬುದರಿಂದ ತೃನ್ನಂತವಾಗಿ ನಿಪಾತಿತವಾಗಿದೆ.

**ತೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಐಸ್‌ಭಾವ ವಿಕಲ್ಪಿತವಾದುದರಿಂದ ಏತ್ವ.

**ಕಲ್ಪಸ್ವ**—ಕೃಪೂ ಸಾಮರ್ಥ್ಯೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ಥಾಸಃ ಸೇ** ಎಂಬುದರಿಂದ ಪ್ರತ್ಯಯಕ್ಕೆ ಸೇ ಆದೇಶ ಬಂದಾಗ **ಸವಾಭ್ಯಾಂವಾಮೌ** ಎಂಬುದರಿಂದ ಟಿಗೆ ವತ್ವ. ಶಪ್ ನಿಮಿತ್ತ ವಾಗಿ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬಂದಾಗ **ಕೃಪೋ ರೋಲಃ** (ಪಾ. ಸೂ. ೮-೨-೧೮) ಎಂಬುದರಿಂದ ಲತ್ವ. ತಿಙಂತನಿಘಾತಸ್ವರ ಬರುತ್ತದೆ.

**ಸಾಧುಯಾ**—ಸಾಧುಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಯಾಚಾದೇಶ. **ಚಿತಃ** (ಪಾ.ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಧೀಃ**—ಹನ ಹಿಂಸಾಗತ್ಯೋಃ ಧಾತು. **ಮಾಙಿಲುಙ್** (ಪಾ. ಸೂ ೩-೩-೧೭೫) ಎಂಬುದರಿಂದ ಮಾಙ್ ಉಪಪದವಾಗಿರುವಾಗ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದಾಗ ಇಕಾರ ಲೋಪ. **ಹನೋವಧಲಿಙಿ** ಎಂದು ಅನುವೃತ್ತವಾಗುವಾಗ **ಲುಙಿಚ** (ಪಾ. ಸೂ. ೨-೪-೪೩) ಎಂಬುದರಿಂದ ಧಾತುವಿಗೆ ವಧಾದೇಶ. ಚ್ಲಿಗೆ ಸಿಚಾದೇಶ. **ಇಟ ಈಟಿ** (ಪಾ.ಸೂ. ೮-೨-೨೮) ಎಂಬುದರಿಂದ ಅದಕ್ಕೆ ಲೋಪ. **ನ ಮಾಙ್ ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

**ಕಿಂ ನೋ ಭ್ರಾತರಗಸ್ತ್ಯ ಸಖಾ ಸನ್ನತಿ ಮನ್ಯಸೇ ।**

**ವಿದ್ಮಾ ಹಿ ತೇ ಯಥಾ ಮನೋಽಸ್ಮಭ್ಯಮಿನ್ನ ದಿತ್ಸಸಿ ॥ ೩ ॥**

॥ ಪದಪಾಠಃ ॥

ಕಿಂ । ನಃ । ಭ್ರಾತಃ । ಅಗಸ್ತ್ಯ । ಸಖಾ । ಸನ್ । ಅತಿ । ಮನ್ಯಸೇ ।

ವಿದ್ಮ । ಹಿ । ತೇ । ಯಥಾ । ಮನಃ । ಅಸ್ಮಭ್ಯಂ । ಇತ್ । ನ । ದಿತ್ಸಸಿ ॥ ೩ ॥

॥ ಸಾಯಣಭಾಷ್ಯಂ ॥

ಇದಮಿಂದ್ರವಾಕ್ಯಂ । ಹೇ ಭ್ರಾತಃ ಹೇ ಅಗಸ್ತ್ಯ । ಹವಿಷ್ಪ್ರದಾನವರಪ್ರದಾನಾಭ್ಯಾಂ ಪರಸ್ಪರೋಪಕಾರತ್ವಾದ್ಭ್ರಾತೃತ್ವಂ । ತಾದೃಶಸ್ತ್ವಂ ಸಖಾ ಸನ್ನಸ್ಮದ್ಧಿತಕಾರ್ಯಪಿ ಸನ್ನೋಽಸ್ಮಾನ್ಕಿಮತಿ ಮನ್ಯಸೇ । ಕಸ್ಮಾದಪರಾಧಾದತಿಕ್ರಮ್ಯ ಮನುಷೇ । ಅಪಲಪಸಿ । ನಾಯಮುಪಲಾಪಃ ಕಿಂತು ತಥ್ಯ-ಮೇವೇತಿ ಚೇತ್ ಉಚ್ಯತೇ । ಗಂತವ್ಯಂ ತೇ ತವ ಮನೋ ಮಾನಸಂ ಯಥಾ ಯಥಾವಸ್ತು ವಿದ್ಮ । ಜಾನೀಮಃ । ಕಥಂ ಜಾನೀಥೇತಿ ಉಚ್ಯತೇ । ಅಸ್ಮಭ್ಯಮಿನ್ನ ದಿತ್ಸಸಿ । ಅಸ್ಮದರ್ಥಂ ನಿರುಪ್ತಮಸ್ಮಭ್ಯಂ ದಾತುಂ ನೇಚ್ಛಸ್ಯೇವ । ಇದೇವಾರ್ಥೇ ॥

॥ ಪ್ರತಿಪದಾರ್ಥ ॥

**ಹೇ ಭ್ರಾತಃ ಅಗಸ್ತ್ಯ**—ಎಲೈ ಭ್ರಾತೃವಾದ ಅಗಸ್ತ್ಯನೇ । **ಸಖಾ ಸನ್**—ನನಗೆ ಸ್ನೇಹಿತನಾಗಿದ್ದರೂ (ಉಪಕಾರಿಯಾಗಿದ್ದರೂ) । **ನಃ**—ನಮ್ಮನ್ನು । **ಕಿಂ ಅತಿ ಮನ್ಯಸೇ**—(ಏಕೆ) ಅಲಕ್ಷ್ಯಮಾಡುತ್ತೀ ? । **ತೇ**—ನಿನ್ನ । **ಮನಃ**—ಮನಸ್ಸನ್ನು । **ಯಥಾ**—ಯಥಾರ್ಥವಾಗಿ । **ವಿದ್ಮ ಹಿ**—ತಿಳಿದಿದ್ದೇವಷ್ಟೇ । **ಅಸ್ಮಭ್ಯಂ**—ನಮಗೆ । **ನ ದಿತ್ಸಸಿ ಇತ್**—(ಹವಿರಾದಿಗಳನ್ನು) ಕೊಡಲಿಚ್ಛಿಸುವುದೇ ಇಲ್ಲ.

॥ ಭಾವಾರ್ಥ ॥

ಎಲೈ ಸೋದರನೇ (ಅಗಸ್ತ್ಯನೇ), ನೀನು ನನಗೆ ಸಖನಾದರೂ (ಉಪಕಾರಿಯಾದರೂ) ನನ್ನನ್ನು ಏಕೆ ಅನಾದರ ಮಾಡುತ್ತೀ ? ನಮಗೆ ಹವಿರಾದಿಗಳನ್ನು ನಿನಗೆ ಕೊಡಲು ಇಚ್ಛೆಯಿಲ್ಲವೆಂಬುದು ನಮಗೆ ಚೆನ್ನಾಗಿ ತಿಳಿದಿದೆ.

## English Translation.

(Indra),—Wherefore, brother Agastya, do you, who are my friend, treat me with disregard ? Verily, we know what is in your mind : you do not intend to give us anything.

॥ ವಿಶೇಷವಿಷಯಗಳು ॥

ಇಂದ್ರನು ಈ ವಚನವನ್ನು ಹೇಳಿರುವನು ಎಂದು ಸಾಯಣರು ವ್ಯಾಖ್ಯಾನಮಾಡಿ ಅಗಸ್ತ್ಯಋಷಿಯನ್ನು **ಹೇ ಭ್ರಾತಃ** ಎಂದು ಸಂಬೋಧಿಸಿದ್ದಾನೆಂದೂ, ಇಂದ್ರಭ್ರಾತೃತ್ವವು ಅಗಸ್ತ್ಯಋಷಿಗೆ **ಹವಿಷ್ಪ್ರದಾನವರಪ್ರದಾ-**

**ನಾಭ್ಯಾಂ ಪರಸ್ಪರೋಪಕಾರಕತ್ವಾತ್**--ಇಂದ್ರನು ವರವನ್ನು ಅನುಗ್ರಹಿಸುವುದು, ಅಗಸ್ತ್ಯಋಷಿಯು ಹವಿಸ್ಸನ್ನು ಇಂದ್ರನಿಗೆ ಅರ್ಪಿಸುವುದು ಎಂಬ ಅನ್ಯೋನ್ಯ ಉಪಕಾರಕವಾದ ಕರ್ಮಾಚರಣೆಯಿಂದ ಉಂಟಾಗಿದೆ ಎಂದು ಸಮರ್ಥಿಸಿದ್ದಾರೆ.

**ಸಖಾಸರ್ನಃ ಕಿಂ ಅತಿಮನ್ಯಸೇ**--ಈ ವಾಕ್ಯದಿಂದ ಇಂದ್ರನು:ಹೇಳುವ ಆಕ್ಷೇಪವು ವ್ಯಕ್ತವಾಗುತ್ತದೆ. ನಮ್ಮಿಬ್ಬರಿಗೂ ಪರಸ್ಪರೋಪಕಾರಕ ಭಾವವು ಇರುವಾಗ, **ಅಸ್ಮದ್ಧಿತಕಾರ್ಯ್ಯೇಪಿ ಸರ್ನ** ನಮಗೆ ಹಿತವನ್ನು ಆಚರಿಸುವುದರಲ್ಲಿ ಆಸಕ್ತನಾದ ನೀನು (ಅಗಸ್ತ್ಯನು) ನಮ್ಮ ವಿಷಯದಲ್ಲಿ ಹೊಂದಿರುವ ಅಭಿಪ್ರಾಯವನ್ನು ಮರೆಮಾಚಿ **ಕೆಸ್ಮಾದಪರಾಧಮತಿಕ್ರಮ್ಯ ಮನುಷೇ**— ಅಪರಾಧವನ್ನು ಮಾಡದಿರುವೆನೆಂದು ತಿಳಿಯುತ್ತೀಯೆ. ನೀನು ಹಿಂದೆ ಹೇಳಿರುವ ಪ್ರಕಾರ ನಿನ್ನ ವಚನದಲ್ಲಿ ನಂಬಿಕೆಯನ್ನು ಇರಿಸಿದರೆ ನಮ್ಮ ಹವಿರ್ಭಾಗವು ಮರುತ್ತುಗಳಿಗೆ ಅರ್ಪಿತವಾಗುವುದು. ಇದಕ್ಕಾಗಿ ನೀನು ನನ್ನ ವಿಷಯದಲ್ಲಿ ಅತಿಕ್ರಮವನ್ನು ಆಚರಿಸಿ ಅದನ್ನು ನನ್ನ ಅಪರಾಧವನ್ನಾಗಿ ನನಗೆ ಆರೋಪಿಸುತ್ತೀಯೆ (ಇಂದ್ರನು ಮರುದ್ದೇವತೆಗಳಿಗೆ ಹವಿಸ್ಸಿಲ್ಲದಂತೆ ಮಾಡಿರುವನೆಂದು) ಎಂಬ ಅರ್ಥವು **ಅಪಲಪಸಿ** ಎಂಬ ಪದದಿಂದ ಗಮ್ಯವಾಗಿದೆ.

ಹಿಂದಿನ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವ ಅಭಿಪ್ರಾಯವು ಇಂದ್ರನ ತಪ್ಪನ್ನು (ಹೊರಗೆಡವಿ) ಪ್ರಕಾಶಮಾಡಿ ಅಗಸ್ತ್ಯಕೃತವಾದ ಇಂದ್ರನ ವಿಷಯಕವಾದ ಅಪರಾಧವೆಂದು **ನಾಯಂ ಅಪಲಾಪಃ ಕಿಂತು ತಥ್ಯಮೇವ** ಅರ್ಥಮಾಡಿ, ಅದಕ್ಕೆ ಉತ್ತರವು ಮುಂದಿನ ವಾಕ್ಯದಿಂದ ಉಕ್ತವಾಗಿದೆ ಎಂದು ವಿವರಿಸಿದೆ.

**ಗನ್ತವ್ಯಂ, ತೇ ಮನಃ ಯಥಾ ವಿದ್ಮ**— ಗಂತವ್ಯಂ ಎಂಬ ಪದದಿಂದ ಇಂದ್ರನು ಅಗಸ್ತ್ಯ ಋಷಿಯ ಅಭಿಪ್ರಾಯವನ್ನು ತಿಳಿದು ಅದನ್ನು ಸಮ್ಮತಿಸಿದ, ಅಥವಾ ಅಲಕ್ಷ್ಯದಿಂದ ತಿರಸ್ಕರಿಸಿದ ಭಾವವು ಸೂಚಿತವಾಗಿದೆ. ನಿನ್ನ ಮನಸ್ಸಿನ ಅಭಿಪ್ರಾಯವು ಎಲ್ಲವೂ ನನಗೆ ಪೂರ್ತಿಯಾಗಿ ತಿಳಿದಿರುತ್ತದೆ ಎಂದು ಅರ್ಥಮಾಡಿದೆ. ಈ ನಿನ್ನ ಮನಸ್ಸಿನ ಅಭಿಪ್ರಾಯವು **ಅಸ್ಮಭ್ಯಮಿನ್ನ ದಿತ್ಸಸಿ** ನಮಗೆ ಹವಿಸ್ಸನ್ನು ಸಿದ್ಧಪಡಿಸಿ ಅದನ್ನು ನಮಗೆ ಅರ್ಪಿಸಲು ಇಚ್ಛೆಯುಳ್ಳವನಾಗಿ ಇರುವುದಿಲ್ಲ ಎಂಬ ಅರ್ಥವನ್ನು ಬೋಧಿಸುವ **ಅಸ್ಮದರ್ಥಂ ನಿರುಪ್ತಮಸ್ಮಭ್ಯಂ ದಾತುಂ ನೇಚ್ಛಸ್ಯೇವ** ಎಂಬ ವಾಕ್ಯದಿಂದ ಇಂದ್ರನು ನಮಗಾಗಿ ಸಿದ್ಧಮಾಡಿರುವುದನ್ನು ನಮಗೆಕೊಡಲು ಇಚ್ಛೆಯಿಲ್ಲದಿರುವುದು ನಿನ್ನ ಅಪರಾಧ ಎಂದು ಸಮರ್ಥಿಸಿದ್ದಾನೆ ಎಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮನ್ಯಸೇ**—ಮನ ಜ್ಞಾನೇ. ಧಾತು. ದಿವಾದಿ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಿದ್ಮ**—ವಿದ ಜ್ಞಾನೇ. ಧಾತು. ಅದಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ವಿದೋ ಲಟೋ ವಾ** (ಪಾ. ಸೂ. ೩-೪-೮೩) ಎಂಬುದರಿಂದ ಅದಕ್ಕೆ ಮಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ದ್ವ್ಯಚೋಽತಸ್ತಿಙಃ** (ಪಾ.ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದಿತ್ಸಸಿ**—ಡುದಾಞ್ ದಾನೇ ಧಾತು. **ಧಾತೋಃ ಕರ್ಮಣಃ ಸ**-(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. **ಸನಿಮೀಮಾಘುರಭ**—(ಪಾ. ಸೂ. ೭-೪-೫೪) ಎಂಬುದರಿಂದ ಧಾತುವಿನ ಆಕಾರಕ್ಕೆ ಇಸಾದೇಶ. **ಅತ್ರಲೋಪೋಽಭ್ಯಾಸಸ್ಯ** (ಪಾ. ಸೂ. ೭-೪-೫೮) ಎಂಬುದರಿಂದ ಅಭ್ಯಾಸಕ್ಕೆ ಲೋಪ. **ಸಃ ಸ್ಯಾರ್ಧಧಾತುಕೇ** (ಪಾ. ಸೂ. ೭-೪-೪೯) ಎಂಬುದರಿಂದ ಪೂರ್ವ ಸಕಾರಕ್ಕೆ ತಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಅರಂ ಕೃಣ್ವಂತು ವೇದಿಂ ಸಮಗ್ನಿಮಿಂಧತಾಂ ಪುರಃ ।
ತತ್ರಾಮೃತಸ್ಯ ಚೇತನಂ ಯಜ್ಞಂ ತೇ ತನವಾವಹೈ ॥ ೪ ॥

॥ ಪದಪಾಠಃ ॥

ಅರಂ । ಕೃಣ್ವಂತು । ವೇದಿಂ । ಸಂ । ಅಗ್ನಿಂ । ಇಂಧತಾಂ । ಪುರಃ ।
ತತ್ರ । ಅಮೃತಸ್ಯ । ಚೇತನಂ । ಯಜ್ಞಂ । ತೇ । ತನವಾವಹೈ ॥ ೪ ॥

॥ ಸಾಯಣಭಾಷ್ಯಂ ॥

ಇದಮಿಂದ್ರವಾಕ್ಯಂ । ಅಪರೇಽಗಸ್ತ್ಯವಾಕ್ಯಮಾಹುಃ । ಹೇ ಋತ್ವಿಜೋ ಯೂಯಂ ಅಗಸ್ತ್ಯೋಽ ಙ್ಗೀಕೃತವಾನ್ ತಸ್ಮಾದ್ವೇದಿಮರಂಕೃಣ್ವಂತು । ಸಂಮಾರ್ಜನಪರ್ಯುಕ್ಷಣಾದಿನಾ ಪರಿಚರಂತು । ತಥಾ ಪುರಃ ಪುರಸ್ತಾದಗ್ನಿಮಾಹವನೀಯಾದಿಕಂ ಸಮಿಂಧತಾಂ । ಇಧ್ಮಪ್ರಕ್ಷೇಪೇಣ ಪ್ರಜ್ವಾಲಯಂತು । ತತ್ರಾಗ್ನಾವಮೃತಸ್ಯಾಮರಣಲಕ್ಷಣಸ್ಯ ವೇದತ್ವಸ್ಯ ಚೇತನಂ ಪ್ರಜ್ಞಾಪಕಂ ಯಜ್ಞಂ ಹೇ ಅಗಸ್ತ್ಯ ತೇ ತ್ವದೀಯಂ ತ್ವಂ ಚಾಹಂ ಚ ತನವಾವಹೈ ॥ ಅಗಸ್ತ್ಯವಾಕ್ಯಪಕ್ಷೇ ಶಿಷ್ಟಮುವಶಿಷ್ಟಂ । ತತ್ರ ವೇದ್ಯಾಮಮೃತಸ್ಯ ತತ್ಸಾಧನಸ್ಯ ಹವಿಷೋ ವಾ ಚೇತನಂ ಪ್ರಜ್ಞಾಪನಮಾಸಾದನಂ ಕುರುತ । ಆವಾಂ ಪತ್ನೀಯಜಮಾನೌ ಅಧ್ವರ್ಯುರ್ಯಜಮಾನೌ ವಾ ಹೇ ಇಂದ್ರ ತೇ ತ್ವದರ್ಥಂ ಯಜ್ಞಂ ತನವಾವಹೈ ॥

॥ ಪ್ರತಿಪದಾರ್ಥ ॥

(**ಹೇ ಋತ್ವಿಜಃ**—ಎಲೈ ಋತ್ವಿಜರೇ ನೀವು) । **ವೇದಿಂ**—ವೇದಿ ಭೂಮಿಯನ್ನು । **ಅರಂ ಕೃಣ್ವಂತು**—ಸಂಮಾರ್ಜನಾದಿಗಳಿಂದ ಅಲಂಕರಿಸಿ । **ಪುರಃ**—ಮುಂದೆ । **ಅಗ್ನಿಂ**—ಆಹವನೀಯಾದ್ಯಗ್ನಿಯನ್ನು । **ಸಂ ಇಂಧಂತು**—ಸಮಿದಾದಿಗಳಿಂದ ಪ್ರಜ್ವಲಗೊಳಿಸಿ; (ಎಲೈ ಅಗಸ್ತ್ಯನೇ) । **ತತ್ರ**—ಆ ಪ್ರಜ್ವಲಿತವಾದ ಅಗ್ನಿಯಲ್ಲಿ । **ಅಮೃತಸ್ಯ**—ಅಮರವಾದ (ಜ್ಞಾನದ) । **ಚೇತನಂ**—ಜ್ಞಾಪಕವಾದ (ಮತ್ತು) । **ತೇ**—ನಿನ್ನ

ಸಂಬಂಧವಾದ | **ಯಜ್ಞಂ**—ಯಜ್ಞವನ್ನು | **ತನವಾವಹೈ**—ಆಚರಿಸೋಣ. [**ತತ್ರ**—ವೇದಿಭೂಮಿಯಲ್ಲಿ | **ಅಮೃತಸ್ಯ**—ಅಮರತ್ವಸಾಧಕವಾದ ಹವಿಸ್ಸಿನ | **ಚೇತನಂ**—ಆ ಆಸ್ವಾದನೆಯನ್ನು ಮಾಡಿ (ಹವಿಸ್ಸನ್ನು ಸಿದ್ಧಗೊಳಿಸಿ) | (**ಆವಾಂ**—ಯಜಮಾನನಾದ; ನಾನು ಮತ್ತು ನನ್ನ ಪತ್ನಿಯೂ ಅಥವಾ ಋತ್ವಿಗ್ಯಜಮಾನರಾದ ನಾವಿಬ್ಬರೂ) | **ತೇ**—ನಿನಗೋಸ್ಕರ | **ಯಜ್ಞಂ**—ಯಜ್ಞವನ್ನು | **ತನವಾವಹೈ**—ಆಚರಿಸುತ್ತೇವೆ.]

॥ ಭಾವಾರ್ಥ ॥

ಎಲೈ ಋತ್ವಿಜರೇ, ವೇದಿಭೂಮಿಯನ್ನು ಅಲಂಕರಿಸಿ, ಆಹವನೀಯಾದ್ಯಗ್ನಿಗಳನ್ನು ಸಮಿಧಾದಿಗಳಿಂದ ಪ್ರಜ್ವಲಗೊಳಿಸಿ; ಆ ಅಗ್ನಿಯಲ್ಲಿ ಅಮರತ್ವಜ್ಞಾಪಕವಾದ ಯಜ್ಞವನ್ನು, ಎಲೈ ಅಗಸ್ತ್ಯನೇ, ನಾನೂ (ಇಂದ್ರನೂ) ನೀನೂ ಒಟ್ಟಾಗಿ ಆಚರಿಸೋಣ [ಅಥವಾ ಆ ವೇದಿಭೂಮಿಯಲ್ಲಿ ಅಮರತ್ವ ಸಾಧನಭೂತವಾದ ಹವಿರಾದಿಗಳನ್ನೂ ಸಿದ್ಧಗೊಳಿಸಿ. ಅನಂತರ ಎಲೈ ಇಂದ್ರನೇ, ನಾನೂ-ಅಗಸ್ತ್ಯನೂ ಅಥವಾ ನಾನೂ ನನ್ನ ಪತ್ನಿಯೂ, ಅಥವಾ ನಾನೂ ಋತ್ವಿಜರೂ ಸೇರಿ ಯಜ್ಞವನ್ನು ನಿನ್ನ ಉದ್ದೇಶವಾಗಿ ಆಚರಿಸುತ್ತೇವೆ.]

## English Translation·

(Agastya),—Let the priests decorate the altar ; let them kindle the fire to the east ; and then let us both consummate the sacrifice, the inspirer of immortal (wisdom).

॥ ವಿಶೇಷವಿಷಯಗಳು ॥

**ಅರಂ ಕೃಣ್ವಂತು ವೇದಿಂ, ಸಮಗ್ನಿಮಿಂಧತಾಂ ಪುರಃ, ಯಜ್ಞಂ ತೇ ತನವಾವಹೈ** | ಎಂಬ ಈ ವಾಕ್ಯಗಳು ಇಂದ್ರನು ಅಗಸ್ತ್ಯಋಷಿಗೆ ಹೇಳಿದವುಗಳೆಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಅಗಸ್ತ್ಯ ಋಷಿಯೇ ಇಂದ್ರನಿಗೆ ಹೇಳಿದನೆಂದು ಎರಡನೆಯ ವಿಧವಾಗಿ ವರ್ಣಿಸಿದೆ.

ಇಂದ್ರನು ಋತ್ವಿಜರನ್ನು ಸಂಬೋಧಿಸಿ **ಅಗಸ್ತ್ಯೇ ಅಂಗೀಕೃತೇರ್ವಾ ತಸ್ಮಾತ್ ವೇದಿಂ ಅರಂ ಕೃಣ್ವಂತು**—ಅಗಸ್ತ್ಯಋಷಿಯು ನಾನು ಹೇಳಿದ ಮಾತುಗಳನ್ನು ಕೇಳಿ ನನಗೆ ಹವಿಸ್ಸನ್ನು ಅರ್ಪಿಸಲು ಒಪ್ಪಿರುತ್ತಾನೆಯಾದ ಕಾರಣ ನೀವು ಯಜ್ಞವೇದಿಯನ್ನು ಸಮ್ಮಾರ್ಜನ ಪರ್ಯುಕ್ಷಣಾದಿಗಳಿಂದ (ಸಮ್ಮಾರ್ಜನ-ಗುಡಿಸುವುದು, ಪರ್ಯುಕ್ಷಣನೀರಿನಿಂದ ತೊಳೆಯುವುದು) ಅಲಂಕಾರಮಾಡಿರಿ, ಮತ್ತು **ಪುರಸ್ತಾತ್ ಆಹವನೀಯಾಗ್ನಿಂ ಇಧ್ಮಪ್ರಕ್ಷೇಪೇಣ ಪ್ರಜ್ವಾಲಯಂತು** ದೇವತೆಗಳನ್ನು ಉದ್ದೇಶಮಾಡಿ ಸಮಿತ್ತುಗಳನ್ನು ಆಹವನೀಯವೆಂಬ ಅಗ್ನಿಯಲ್ಲಿ ಅರ್ಪಿಸುವುದರಿಂದ ಈ ಅಗ್ನಿಯನ್ನು ಉದ್ದೀಪ್ತವಾಗುವಂತೆ ಮಾಡಿರಿ, ಎಂದು ಹೇಳಿರುವನೆಂದು ಅರ್ಥವನ್ನು ವರ್ಣಿಸಿದೆ.

**ಅಮೃತಸ್ಯ— ಅಮರಣಲಕ್ಷಣಸ್ಯ ದೇವತ್ವಸ್ಯ**—ಅಮೃತ ಶಬ್ದವು ಉದಕನಾಮಗಳಲ್ಲಿ (ನಿ. ೨-೧೪) ಉಕ್ತವಾಗಿದೆ. ಹಿರಣ್ಯನಾಮಗಳಲ್ಲಿ (ನಿ. ೨-೧೦) ಪಠಿತವಾಗಿದೆ.

**ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ |**
**ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ ||**

(ಋ. ಸಂ. ೧—೧೧೩—೨)

ಇಲ್ಲಿ **ಅಮೃತೆ** ಎಂಬ ಪದಕ್ಕೆ **ಅಮರಣಧರ್ಮಾಣೌ** ಯಾವಾಗಲೂ ಮರಣವನ್ನು ಹೊಂದದೇ ಇರುವವರು ಎಂದು ಅರ್ಥವನ್ನು ವರ್ಣಿಸಿದೆ.

**ವನಸ್ಪತೇ ರಶನಯಾ ನಿಯೂಯ ಪಿಷ್ಟತಮಯಾ ವಯುನಾನಿ ವಿದ್ವಾನ್ ।**
**ವಹಾ ದೇವತ್ರಾ ದಿಧಿಷೋ ಹವೀಂಷಿ ಪ್ರ ಚ ದಾತಾರಮಮೃತೇಷು ವೋಚಃ ॥**

(ನಿ. ೮-೨೦)

ಇಲ್ಲಿ **ಅಮೃತೇಷು ದೇವೇಷು** ಎಂಬ ಅರ್ಥವನ್ನು ವಿವರಿಸಿದೆ. ಮರಣವನ್ನು ಹೊಂದದೇ ಇರುವ, ದೇವಸ್ವರೂಪವನ್ನು ಹೊಂದಿರುವ ಎಂದು ಅರ್ಥವನ್ನು ಹೇಳಿ **ಅಮೃತಸ್ಯ ಚೇತನಂ ಯಜ್ಞಂ** ಎಂಬ ವಾಕ್ಯದಿಂದ ಯಜ್ಞದ ಮಹಿಮೆಯು ವಿವೃತವಾಗಿದೆ.

**ತೇ** ಎಂಬ ಪದವು ಸರ್ವನಾಮವಾಗಿರುವುದರಿಂದ ಇಂದ್ರನ ವಾಕ್ಯದಲ್ಲಿ ಯಜ್ಞವು ಅಗಸ್ತ್ಯ ಋಷಿಗೆ ಸಂಬಂಧಿಸಿರುವುದೆಂದೂ, ಇಂದ್ರನೂ ಅಗಸ್ತ್ಯ ಋಷಿಯೂ ಕೂಡ ಸೇರಿ ಯಜ್ಞವನ್ನು ನೆರವೇರಿಸುವುದಾಗಿ ಅರ್ಥವನ್ನು ವರ್ಣಿಸಿದೆ.

ಅಗಸ್ತ್ಯಋಷಿಯು ಇಂದ್ರನಿಗೆ ಹೇಳುವ ವಾಕ್ಯವಾಗಿರುವ ಪಕ್ಷದಲ್ಲಿ, ತೇ ಎಂಬ ಪದಕ್ಕೆ ತ್ವದರ್ಥಂ—ಇಂದ್ರನಿಗಾಗಿ ಎಂದು ಅರ್ಥವನ್ನು ಮಾಡಿದೆ. ವೇದ್ಯಾಮಮೃತಸ್ಯ ತತ್ಸಾಧನಸ್ಯ ಹವಿಷೋ ವಾ ಚೇತನಂ ಪ್ರಜ್ಞಾಪನಂ ಆಸಾದನಂ ಕುರುತ—ಯಜ್ಞವೇದಿಯಲ್ಲಿ ಅಮರಣತ್ವಸಂಪಾದಕವಾದ ಯಜ್ಞವನ್ನು ಸಾಧಿಸುವ ಸಾಮಗ್ರಿಗಳನ್ನೂ, ಹವಿಸ್ಸುಗಳನ್ನೂ ಸಿದ್ಧಮಾಡಿರಿ ಎಂದೂ, **ಅವಾಂ ಪತ್ನೀ ಯಜಮಾನೌ ಅಧ್ವರ್ಯುರ್ಯಜಮಾನೌ ವಾ ಯಜ್ಞಂ ತನವಾವಹೈ** ಪತ್ನಿಯೂ ಯಜಮಾನನೂ, ಅಥವಾ ಅಧ್ವರ್ಯು ಯಜಮಾನರೂ ಸೇರಿ ಯಜ್ಞವನ್ನು ಇಂದ್ರನಿಗಾಗಿಯೇ ನೆರವೇರಿಸುವರೆಂದು ಅರ್ಥವನ್ನು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಕೃಣ್ವಂತು**—ಕೃವಿ ಹಿಂಸಾಕರಣಯೋಶ್ಚ ಧಾತು. ಲೋಟ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ, ಉತ್ವ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಾಂತಾದೇಶ ಉ ವಿಕರಣ. ಇದಿತ್ತಾದುದರಿಂದ ನುಮಾಗಮ. ತಿಙಂತ ನಿಘಾತಸ್ವರ ಬರುತ್ತದೆ.

**ವೇದಿಂ**—ವಿದ ಜ್ಞಾನೇ. ಧಾತು. **ಹೃಪಿಷಿರುಹಿವೃತಿ**— (ಉ. ಸೂ. ೫೫೮) ಎಂಬುದರಿಂದ ಇನ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಇಂಧತಾಂ**—ಞಿಇಂಧೀ ದೀಪ್ತೌ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಚೇತನಂ**—ಚಿತೀ ಸಂಜ್ಞಾನೇ. ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ -೧-೧) ಎಂಬುದರಿಂದ ಅನಾದೇಶ. ಧಾತು ಲಘೂಪಧೆಗೆ ಗುಣ. **ಲಿತಿ** (ಪಾ. ಸೂ ೬-೧-೧೯೩) ಎಂಬುದರಿಂದ. ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ತನವಾವಹೈ—** ತನು ವಿಸ್ತಾರೇ. ಧಾತು. ಲೋಟ್ ಉತ್ತಮಪುರುಷ ದ್ವಿವಚನದಲ್ಲಿ ವಹಿಙ್ ಪ್ರತ್ಯಯ. ಟಿಗೆ ಏತ್ವ ಬಂದಾಗ **ಏತಐ** (ಪಾ. ಸೂ. ೩-೪-೯೩) ಎಂಬುದರಿಂದ ಅದಕ್ಕೆ ಐಕಾರಾದೇಶ. **ಆಡುತ್ತಮಸ್ಯಪಿಚ್ಚ** (ಪಾ. ಸೂ. ೩-೪-೯೨) ಎಂಬುದರಿಂದ ಆಟಾಗಮ. **ತನಾದಿಕೃಞ್ಭ್ಯಉಃ** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. ಪಿತ್ ಪರವಾದುದರಿಂದ ಅದಕ್ಕೆ ಗುಣ, ಅವಾದೇಶ. ತಿಙಂತನಿಘಾತಸ್ವರ ಬರುತ್ತದೆ ॥ ೪ ॥



॥ ಸಂಹಿತಾಪಾಠಃ ॥

ತ್ವಮೀಶಿಷೇ ವಸುಪತೇ ವಸೂನಾಂ ತ್ವಂ ಮಿತ್ರಾಣಾಂ ಮಿತ್ರಪತೇ ಧೇಷ್ಠಃ ।

ಇಂದ್ರ ತ್ವಂ ಮರುದ್ಭಿಃ ಸಂ ವದಸ್ವಾಧ ಪ್ರಾಶಾನ ಋತುಥಾ ಹವೀಂಷಿ ॥ ೫ ॥

॥ ಪದಪಾಠಃ ॥

ತ್ವಂ । ಈಶಿಷೇ । ವಸುಽಪತೇ । ವಸೂನಾಂ । ತ್ವಂ । ಮಿತ್ರಾಣಾಂ । ಮಿತ್ರಽಪತೇ । ಧೇಷ್ಠಃ ।

ಇಂದ್ರ । ತ್ವಂ । ಮರುತ್ಽಭಿಃ । ಸಂ । ವದಸ್ವ । ಅಧ । ಪ್ರ । ಅಶಾನ । ಋತುಽಥಾ । ಹವೀಂಷಿ ॥

॥ ಸಾಯಣಭಾಷ್ಯಂ ॥

ಇದಮಗಸ್ತ್ಯವಾಕ್ಯಂ । ಹೇ ವಸೂನಾಂ ವಸುಪತೇಽತಿಪ್ರಭೂತಾನಾಂ ಪುರೋಡಾಶಾಜ್ಯಾದಿಧನಾನಾಂ ಸ್ವಾಮಿನ್ ಹೇ ಇಂದ್ರ ತ್ವಮೀಶಿಷೇ । ಈಶ್ವರೋ ಭವಸಿ । ಸರ್ವಸ್ಯ ವೃತ್ತ್ಯವೃತ್ತಿಭ್ಯಾಂ ಬಹುತ್ವಂ ನಿತ್ಯಂ ಸಂಬಂಧಶ್ಚ ಪ್ರತಿಪದ್ಯತೇ । ಯದ್ವಾ । ಹೇ ವಸುಪತೇ ವಸೂನಾಮೀಶಿಷ ಇತಿ ಯೋಜನಾ । ದ್ವಿತೀಯೋ ವಸುಶಬ್ದೋಽನುವಾದೋ ವಾ । ತಥಾ ಹೇ ಮಿತ್ರಾಣಾಂ ಮಿತ್ರಪತೇಽಸ್ಮದಾದಿಮಿತ್ರಸ್ಯ ನಿತ್ಯಂ ಪಾಲಕೇಂದ್ರ್ಯಸ್ತ್ವಂ ಧೇಷ್ಠಃ । ಸರ್ವಸ್ಯಾತಿಶಯೇನ ಧಾರಕೋಽಸಿ । ಹೇ ಇಂದ್ರ ತ್ವಮುಕ್ತಮಹಿಮಸ್ತ್ವಂ ಮರುದ್ಭಿಃ ಸಂ ವದಸ್ವ । ತೈಃ ಸಾಕಂ ಸಮ್ಯಕ್ಕೃತಮಿತಿ ವದಸ್ವ । ಅಥಾಪಿ ಚ ತ್ವಮೃತುಥಾ ಋತಾವೃತೌ । ಉಪಲಕ್ಷಣಮೇತತ್ಕಾಲಸ್ಯ । ತತ್ತದ್ಯಾಗಕಾಲೇ ಹವೀಂಷ್ಯಾಜ್ಯಚರ್ವಾದೀನಿ ಪ್ರಾಶಾನ ಪ್ರಕರ್ಷೇಣ ಭುಂಕ್ಷ್ವ ॥

॥ ಪ್ರತಿಪದಾರ್ಥ ॥

**(ಹೇ) ವಸೂನಾಂ ವಸುಪತೇ**— ಪುರೋಡಾಶಾಜ್ಯಾದಿಧನಗಳಿಗೆಲ್ಲಾ ಅಧಿಪತಿಯಾದ ಎಲೈ ಇಂದ್ರನೇ, **ತ್ವಂ**—ನೀನು । **ಈಶಿಷೇ**—ಈಶ್ವರನಾಗಿದ್ದೀ । **(ಹೇ) ವಸುಪತೇ**—ಧನಾಧಿಪನಾದ ಎಲೈ ಇಂದ್ರನೇ । **ತ್ವಂ**—ನೀನು । **ವಸೂನಾಂ**—ಪುರೋಡಾಶಾಜ್ಯಾದಿರೂಪಧನಗಳಿಗೆ । **ಈಶಿಷೇ**—ಈಶ್ವರನಾಗಿದ್ದೀ । **(ತಥಾ**—ಹಾಗೆಯೇ) । **ಮಿತ್ರಪತೇ**—ಮಿತ್ರರಿಗೆಲ್ಲಾ ಪಾಲಕನಾದ ಎಲೈ ಇಂದ್ರನೇ । **ಮಿತ್ರಾಣಾಂ**—ನಿನ್ನ ಸ್ನೇಹಿತರಾದ

ನಮ್ಮಗಳಿಗೆ । **ಧೇಷ್ಠ**—ಪ್ರಬಲನಾದ ಆಧಾರನಾಗಿದ್ದೀಯೆ । **(ಹೇ) ಇಂದ್ರ**—ಎಲೈ ಇಂದ್ರನೇ । **ಮರುದ್ಭಿಃ**—ಮರುದ್ದೇವತೆಗಳಿಂದ ಸಹಿತನಾಗಿ । **ತ್ವಂ**—ನೀನು । **ಸಂ ವದಸ್ವ**—(ಕರ್ಮವು ಚೆನ್ನಾಗಿ ಮಾಡಲ್ಪಟ್ಟಿತೆಂದು) ಹೇಳು । **ಅಧ**—ಮತ್ತು । **ಋತುಥಾ**—ಋತುವನ್ನನುಸರಿಸಿ (ಆಯಾ ಯಾಗಕಾಲದಲ್ಲಿ) । **ಹವೀಂಷಿ**—ಆಜ್ಯಚರ್ವಾದಿ ಹವಿಸ್ಸುಗಳನ್ನು । **ಪ್ರ ಅಶಾನ**—ಹೆಚ್ಚಾಗಿ ಭುಂಜಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನೇ ಸಮಸ್ತ ಪುರೋಡಾಶಾದಿರೂಪಧನಕ್ಕೂ ಸ್ವಾಮಿಯು. ಮತ್ತ್ತು ನಮ್ಮಂಥಾ ಮಿತ್ರರಿಗೆಲ್ಲಾ ಪ್ರಬಲಾಶ್ರಯನು ; ಇಂತಹ ನೀನು ಮರುತ್ಸಹಿತನಾಗಿ ನಮ್ಮ ಕರ್ಮವನ್ನು ಸಾಧುಕೃತವೆಂದು ಪ್ರಶಂಸಿಸಿ, (ನಮ್ಮಿಂದ ಅರ್ಪಿತವಾದ) ಹವಿರಾದಿಗಳನ್ನು ಆಯಾ ಕಾಲದಲ್ಲಿ ಹೆಚ್ಚಾಗಿ ಭಕ್ಷಿಸು.

English Translation.

(Agastya),—You, Vasupati, are the lord of riches ; you, Mitrapati, are the firm stay (of us), your friends : Declare, Indra, along with the Maruts, (your approval of our acts), and partake of the oblation offered in due season.

॥ ವಿಶೇಷವಿಷಯಗಳು ॥

ಈ ಮಂತ್ರವನ್ನು ಇಂದ್ರನ ವಚನಕ್ಕೆ ಉತ್ತರವಾಗಿ ಅಗಸ್ತ್ಯಋಷಿಯು ಹೇಳಿರುವನು ಎಂದು ವ್ಯಾಖ್ಯಾನ ಮಾಡಿದೆ.

**ವಸೂನಾಂ ವಸುಪತೇ — ತ್ವಂ ಈಶಿಷೇ— ಅತಿಪ್ರಭೂತಾನಾಂ ಪುರೋಡಾಶಾಜ್ಯಾದಿಧನಾನಾಂ ಸ್ವಾಮೀ ತ್ವಂ ಈಶ್ವರೋ ಭವಸಿ ಸರ್ವಸ್ಯ । ಯದ್ವಾ ವಸೂನಾಂ ಈಶಿಷೇ । ದ್ವಿತೀಯ ವಸುಶಬ್ದೋ ಅನುವಾದೋ ವಾ**— ಈ ವಾಕ್ಯಕ್ಕೆ ಎರಡುವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯದಾಗಿ ಇಂದ್ರನು ಅತಿಶಯವಾದ ಸಮೃದ್ಧಿಯಿಂದ ಇರುವ ಪುರೋಡಾಶ, ಆಜ್ಯ ಇವೇ ಮೊದಲಾದ ಧನಗಳಿಗೆ ಪ್ರಭುವೆಂದೂ, ಮತ್ತು ಸರ್ವಕ್ಕೂ ಅಧಿಪತಿಯಾಗಿರುವವನೆಂದೂ ಅರ್ಥವನ್ನು ವರ್ಣಿಸಿದೆ. ಈ ಅರ್ಥದಲ್ಲಿ ಮೊದಲನೆಯ ವಸು ಶಬ್ದವು ಅತಿಶಯವನ್ನು ಬೋಧಿಸುವುದು ಎಂದು ಹೇಳಿದೆ. ಎರಡನೆಯ ಅರ್ಥದಲ್ಲಿ ಇಂದ್ರನು ವಸುಗಳಿಗೆ ಅಧಿಪತಿಯಾಗಿ ಇರುವನೆಂದು ಅರ್ಥವನ್ನು ವಿವರಿಸಿದೆ. ಎರಡನೆಯ ವಸು ಶಬ್ದವು ಅನುವಾದವಾಗಿ ಪಠಿತವಾಗಿದೆ ಎಂದು ಉಕ್ತವಾಗಿದೆ. ಯಾಸ್ಕರು—ವಸುಶಬ್ದವು ಅನುವಾದವಾಗಿ ಪಠಿತವಾಗಿದೆ ಎಂದು ಉದಾಹರಣೆಗಳನ್ನು ಪ್ರದರ್ಶಿಸಿದ್ದಾರೆ. ರಶ್ಮಿನಾಮಗಳಲ್ಲಿ ವಸವಃ ಎಂಬ ಪದವು ಉಕ್ತವಾಗಿದೆ.

**ಸುಗಾ ವೋ ದೇವಾಃ ಸುಪಥಾ ಅಕರ್ಮ ಯ ಆಜಗ್ಮುಃ ಸವನಮಿದಂ ಜುಷಾಣಾಃ ।**
**ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ॥**

(ನಿ. ೧೨-೪೨)

ಇಲ್ಲಿ ದೇವತೆಗಳನ್ನು ವಸವಃ ಎಂಬ ಪದದಿಂದ ಸಂಬೋಧಿಸಿದೆ. ಎರಡನೆಯ ವಸು ಶಬ್ದಕ್ಕೆ ಧನವೆಂದು ಅರ್ಥವನ್ನು ಹೇಳಿದೆ.

**ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥**
(ಋ. ಸಂ. ೭-೩೯-೩)

ಇಲ್ಲಿ ವಸವಃ ಎಂಬ ಪದಕ್ಕೆ ಅಗ್ನಿ ಎಂದು ಅರ್ಥವನ್ನು ವಿವರಿಸಿದೆ.

**ವಸವ ಆದಿತ್ಯರಶ್ಮಯಃ ವಿವಸನಾತ್ತಸ್ಮಾತ್ ದ್ಯುಸ್ಥಾನಾಃ** (ನಿ. ೧೨-೪೨) ಆದಿತ್ಯರಶ್ಮಿಗಳಿಗೆ ವಸು ಎಂದು ಪ್ರಯೋಗವು ಇರುತ್ತದೆ ಎಂದು ವರ್ಣಿಸಿದೆ.

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ**
(ಋ. ಸಂ. ೧-೧೨೫-೨)

ಇಲ್ಲಿ **ವಸುನಾ ಅನ್ನೇನ** ಎಂದು ಅರ್ಥವನ್ನು ಹೇಳಿದೆ. **ವೃತ್ತ್ಯವೃತ್ತಿಭ್ಯಾಂ ಬಹುತ್ವಂ ನಿತ್ಯಸಂಬಂಧಶ್ಚ ಪ್ರತಿಪಾದ್ಯತೇ**—ಎಂಬ ವಾಕ್ಯದಿಂದ ಧನಗಳ ಬಹುತ್ವವೂ ಇಂದ್ರನಿಗೂ ಧನಗಳಿಗೂ ನಿತ್ಯವಾದ ಸಂಬಂಧವೂ ಪ್ರತಿಪಾದಿತವಾಗಿದೆ.

**ಮಿತ್ರಪತೇ**— ಈ ಪದಕ್ಕೆ **ಅಸ್ಮದಾದಿಮಿತ್ರಸ್ಯ ನಿತ್ಯಂ ಪಾಲಕನಾದ** ಅಗಸ್ತ್ಯನೇ ಮೊದಲಾಗಿ ಇರುವ ಮಿತ್ರರನ್ನು ರಕ್ಷಿಸುವವನು ಎಂದು ಅರ್ಥವನ್ನುಮಾಡಿ ಇಂದ್ರನನ್ನು ಈಪದದಿಂದ ಸಂಬೋಧಿಸಿದೆ. **ತ್ವಂ ಧೇಷ್ಠಃ ಸರ್ವಸ್ಯಾತಿಯೇನ ಧಾರಕೋಽಸಿ** ಎಲ್ಲವನ್ನೂ ಇತರರು ಧರಿಸುವುದಕ್ಕಿಂತಲೂ ಅತಿಶಯವಾಗಿ ಇಂದ್ರನು ಧರಿಸಿರುವನು ಎಂಬ ಅರ್ಥವನ್ನು ವರ್ಣಿಸಿದೆ.

**ಮರುದ್ಭಿಃ ಸಂವದಸ್ವ— ತೈಃ ಸಾಕಂ ಸಮ್ಯಕ್ ಕೃತಮಿತಿ ವದಸ್ವ ।** ಪ್ರಭೂತವಾದ ಮಹಿಮೆಯುಳ್ಳ ಇಂದ್ರನು ಮರುದ್ದೇವತೆಗಳೊಡನೆ ಯಜ್ಞವು (ಸಾಧುವಾಗಿ) ಸಮೀಚೀನವಾಗಿ ಆಚರಿಸಲ್ಪಟ್ಟಿತು ಎಂದು ಹೇಳಲಿ ಎಂದು ಆಶಿಸಿದೆ.

**ಋತುಥಾ ಹವೀಂಷಿ ಪ್ರಾಶಾನ— ಋತಾವೃತೌ ತತ್ತದ್ಯಾಗಕಾಲೇ ಆಜ್ಯಚರ್ವಾದೀನಿ ಪ್ರಕರ್ಷೇಣ ಭುಂಕ್ಷ್ವ ।** ಆಯಾಯ ಋತುಗಳಲ್ಲಿ ಅಂದರೆ ಆಯಾಯ ಯಾಗಕಾಲಗಳಲ್ಲಿ ಇಂದ್ರನು ಯಾಗಕ್ಕೆ ಆಗಮಿಸಿ ಅಗ್ನಿಯಲ್ಲಿ ಅರ್ಪಿತವಾಗುವ ಹವಿರಾಜ್ಯಾದಿಗಳನ್ನು ಅತಿಶಯನಾಗಿ ಭಕ್ಷಿಸಲಿ ಎಂದು ಆಶಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಈಶಿಷೇ**— ಈಶ ಐಶ್ವರ್ಯೇ. ಧಾತು. ಲಟ್ ಮಧ್ಯಮಪುರುಷ ಏಕವಚನಕ್ಕೆ ಸೇ ಆದೇಶ. **ಈಶಃ ಸೇ** (ಪಾ. ಸೂ. ೭-೨-೭೭) ಎಂಬುದರಿಂದ ಅದಕ್ಕೆ ಇಡಾಗಮ. ಪ್ರತ್ಯಯಕ್ಕೆ ಷತ್ವ. ತಿಙಂತ ನಿಘಾತಸ್ವರ ಬರುತ್ತದೆ.

**ಧೇಷ್ಠಃ**—ಧಾತೃ ಎಂಬ ತೃಜಂತದ ಮೇಲೆ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ. **ಪ್ರಕೃತ್ಯೈಕಾಚ್** ಸೂತ್ರದಿಂದ ಪ್ರಕೃತಿಭಾವ ಬರುವುದರಿಂದ ಟಿ ಲೋಪಬರುವುದಿಲ್ಲ. ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವದಸ್ವ**—ವದ ವ್ಯಕ್ತಾಯಾಂ ವಾಚಿ. ಧಾತು. **ವ್ಯಕ್ತವಾಚಾಂ ಸಮುಚ್ಚಾರಣೇ** (ಪಾ.ಸೂ. ೧-೩-೪೮) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶಾನ**—ಅಶ ಭೋಜನೇ, ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಹಲಃಶ್ನಃ ಶಾನಜ್ಝೌ** (ಪಾ. ಸೂ. ೩-೧-೮೩) ಎಂಬುದರಿಂದ ವಿಕರಣಕ್ಕೆ ಶಾನಚಾದೇಶ. **ಅತೋಹೇಃ** (ಪಾ. ಸೂ. ೬-೪-೧೦೫) ಸೂತ್ರದಿಂದ ಹಿ ಗೆ ಲುಕ್. ತಿಙಂತ ನಿಘಾತಸ್ವರ ಬರುತ್ತದೆ.

**ಋತುಥಾ**—ಕಾಲಾರ್ಥದಲ್ಲಿ ಆವೃತ್ತಿ ತೋರುವಾಗ ಥಾ ಪ್ರತ್ಯಯ. ॥ ೫ ॥

ಇಲ್ಲಿಗೆ ನೂರಎಪ್ಪತ್ತನೇ ಸೂಕ್ತ ಮುಗಿದುದು.



# ನೂರ ಎಪ್ಪತ್ತೊಂದನೆಯ ಸೂಕ್ತವು.

**ಪ್ರತಿ ವ ಇತಿ ಷಡೃಚಂ ಸಪ್ತಮಂ ಸೂಕ್ತಮಾಗಸ್ತ್ಯಂ ತ್ರೈಷ್ಟುಭಂ ಮಾರುತಂ । ಆದ್ಯೇ ದ್ವೇ ಕೇವಲಮಾರುತೇ । ಶಿಷ್ಟಾಶ್ಚತಸ್ರೋ ಮರುತ್ವದಿಂದ್ರದೇವತಾಕಾಃ । ಪ್ರತಿ ವಃ ಷಣ್ಮಾರುತಂ ತು ಚತಸ್ರೋಽನ್ತ್ಯಾ ಮರುತ್ವತೀಯಾ ಇತ್ಯನುಕ್ರಮಣಿಕಾ । ವಿಶೇಷವಿನಿಯೋಗೋ ಲೈಂಗಿಕಃ ॥**

ಅನುವಾದವು—**ಪ್ರತಿ ವ ಏನಾ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಮರುತ್ತುಗಳು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಮೊದಲನೆಯ ಎರಡು ಋಕ್ಕುಗಳು ಕೇವಲ ಮರುದ್ದೇವತಾಕವು. ಉಳಿದ ನಾಲ್ಕು ಋಕ್ಕುಗಳು ಮರುತ್ತು ಮತ್ತು ಇಂದ್ರದೇವತಾಕವು. ಅನುಕ್ರಮಣಿಕೆಯಲ್ಲಿ **ಪ್ರತಿ ವಃ ಷಣ್ಮಾರುತಂ ತು ಚತಸ್ರೋಽನ್ತ್ಯಾ ಮರುತ್ವತೀಯಾ** ಎಂದು ಹೇಳಿರುವುದು. ಈ ಸೂಕ್ತದ ವಿಶೇಷವಿನಿಯೋಗವು ಲೈಂಗಿಕವು.

## ಸೂಕ್ತ—೧೭೧

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೧ ॥
ಅಷ್ಟಕ— ೨ ॥ ಅಧ್ಯಾಯ—೪ ॥ ವರ್ಗ—೧೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಆಗಸ್ತ್ಯಃ ॥
॥ ದೇವತಾ—೧-೨ ಮರುತಃ । ೩-೬. ಮರುತ್ವಾನಿಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

ಪ್ರಥಮಮಂಡಲದಲ್ಲಿ ಕೊನೆಯ ೨೭ ಸೂಕ್ತಗಳನ್ನು ಬೃಹದ್ದೇವತೆಯಲ್ಲಿ ಎರಡು ಪಂಗಡಗಳಾಗಿ ವಿಭಾಗಿಸಿದೆ. ೧೬೫ ನೇ ಸೂಕ್ತದಿಂದ ೧೭೦ ರ ವರೆಗೆ ಇಂದ್ರನಿಗೂ ಮರುತ್ತಗಳಿಗೂ ನಡೆದ ಸಂಭಾಷಣೆಯನ್ನೂ ಮತ್ತು ಇವರ ನಡುವೆ ಅಗಸ್ತ್ಯಋಷಿಯು ಪ್ರವೇಶಿಸಿ ಮರುತ್ತುಗಳನ್ನೂ ಇಂದ್ರನನ್ನೂ ಸ್ತುತಿಸಿ ಅವರಿಗೆ ಸಮಾಧಾನವನ್ನುಂಟು ಮಾಡಿದುದನ್ನೂ ಕಥಾರೂಪದಲ್ಲಿ ತಿಳಿಸಿದೆ. ೧೭೧ ರಿಂದ ೧೯೧ ರ ವರೆಗೆ ಅಗಸ್ತ್ಯನಿಗೂ ಲೋಪಾಮುದ್ರೆಗೂ ಇರುವ ಸಂಬಂಧವನ್ನೂ ಪ್ರೇಮವನ್ನೂ ತಿಳಿಸುವ ಸಂದರ್ಭದಲ್ಲಿ ನಿರ್ಮಿತವಾದ ಸೂಕ್ತಗಳಾಗಿವೆ. ಇಂದ್ರನಿಗೂ ಮರುತ್ತುಗಳಿಗೂ ನಡೆದ ಸಂಭಾಷಣೆಯ ಸ್ವರೂಪವನ್ನೂ ಅದು ಬೃಹದ್ದೇವತೆಯಲ್ಲಿ ವರ್ಣಿತವಾಗಿರುವುದನ್ನೂ ಹಿಂದೆ ತಿಳಿಸಿದೆ. (ಋಗ್ವೇದ ಸಂಹಿತಾ. ಭಾಗ ೧೨, ಪುಟ 679).

**ಸ ತಾನಭಿಜಗಾಮಾಶು ನಿರೂಪ್ಯೈಂದ್ರಂ ಹವಿಸ್ತದಾ ।**
**ಮರುತಶ್ಚಾಭಿತುಷ್ಟಾವ ಸೂಕ್ತೈಸ್ತ್ವನ್ನಿತಿ ಚ ತ್ರಿಭಿಃ ॥**

(ಬೃ. ದೇ. ೪–೪೮).

ಅಗಸ್ತ್ಯನು ಅವರ ಸಂಭಾಷಣೆಯನ್ನು ಗ್ರಹಿಸಿದೊಡನೆಯೇ ತಾನೂ ಅವರಿಗಭಿಮುಖವಾಗಿ ಹೋಗಿ ಇಂದ್ರನಿಗಾಗಿ ಹವಿಸ್ಸನ್ನು ಸಿದ್ಧಪಡಿಸಿದನು. ಜೊತೆಯಲ್ಲಿಯೇ **ತನ್ನು ವೋಚಾಮ** ಇತ್ಯಾದಿ ಮಂತ್ರಗಳಿಂದ ಕೂಡಿದ ಮೂರು ಸೂಕ್ತಗಳನ್ನು (೧-೧೬೬ ರಿಂದ ೧೬೮) ರಚಿಸಿ ಮರುತ್ತುಗಳನ್ನೂ ಸ್ತುತಿಸಿದನು ಎಂಬ ವಿವರಣೆಯಿದೆ, ಮತ್ತು

**ಮಹಶ್ಚಿದಿತಿ ಚೈವೇಂದ್ರಂ ಸಹಸ್ರಮಿತಿ ಚೈತಯಾ ।**
**ನಿರುಪ್ತಂ ತದ್ಧವಿಶ್ಚೈಂದ್ರಂ ಮರುದ್ಭ್ಯೋ ದಾತುಮಿಚ್ಛತಿ ॥**

(ಬೃ. ದೇ. ೪–೪೯).

"**ಮಹಶ್ಚಿತ್**" (೧-೧೬೯) ಎಂಬ ಮಂತ್ರದಿಂದ ಇಂದ್ರನನ್ನು ಸ್ತುತಿಸಿ, "**ಸಹಸ್ರಂ**" (೧-೧೬೭-೧) ಎಂಬ ಮಂತ್ರದಿಂದ ಇಂದ್ರನಿಗೆ ನಿರುಪ್ತವಾದ ಹವಿಸ್ಸನ್ನು ಮರುತ್ತುಗಳಿಗೂ ಅರ್ಪಿಸಲು ಸಿದ್ಧವಾದನು. ಈ ಅಂಶವನ್ನು ನಿರುಕ್ತದಲ್ಲಿ ಈ ರೀತಿ ತಿಳಿಸಿದೆ.

**"ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ । ಸ ಇಂದ್ರ ಏತ್ಯ ಪರಿದೇವಯಾಂಚಕ್ರೇ"** (ನಿ. ೧–೫).

ಇದರಿಂದ ಅಸಮಾಧಾನವನ್ನು ಹೊಂದಿದ ಇಂದ್ರನು ಅದನ್ನು ಪ್ರತಿಭಟಿಸಿದನು.

**ವಿಜ್ಞಾಯಾವೇಕ್ಷ್ಯ ತದ್ಭಾವಂ ಇಂದ್ರೋ ನೇತಿ ತಮಬ್ರವೀತ್ ।**
**ನ ಶ್ವೋ ನಾದ್ಯತನಂ ಹ್ಯಸ್ತಿ ವೇದ ಕಸ್ತದ್ಯದದ್ಭುತಂ ॥**

(ಬೃ. ದೇ. ೪–೫೦).

ಈ ಭಾವವನ್ನು ಇಂದ್ರನು ತಿಳಿದು "**ನ ನೂನಮಸ್ತಿ**" (೧–೧೭೦) ಎಂದು ನಿಷೇಧಿಸಿದನು. ಆದರೆ ಉದ್ದಿಶ್ಯವನ್ನು ತಿಳಿಸದೇ ನಿಷೇಧಿಸಿದುದರಿಂದ ಅಗಸ್ತ್ಯನು ಪ್ರಶ್ನಿಸುತ್ತಾನೆ.

**ಕಸ್ಯಚಿತ್ತ್ವರ್ಥಸಂಚಾರೇ ಚಿತ್ತಮೇವ ವಿನಶ್ಯತಿ ।**
**ಕಿಂ ನ ಇತ್ಯಬ್ರವೀದಿಂದ್ರಂ ಅಗಸ್ತ್ಯೋ ಭ್ರಾತರಸ್ತವ ॥**

**ಮರುದ್ಭಿಃ ಸಂಪ್ರಕಲ್ಪಸ್ವ ವಧೀರ್ಮಾ ನಃ ಶತಕ್ರತೋ ।**
**ಕಿಂ ನೋ ಭ್ರಾತರಿತಿ ತ್ವಸ್ಯಾಂ ಇಂದ್ರೋ ಮಾನ್ಯಮುಪಾಲಭತ್ ॥**
**ಅಗಸ್ತ್ಯಸ್ತ್ವರಮಿತ್ಯಸ್ಯಾಂ ಕ್ಷುಬ್ಧಮಿಂದ್ರಂ ಪ್ರಶಾಮಯತ್ ।**
**ಸ್ವಾದಾತ್ಸಂವನನಂ ಕೃತ್ವಾ ತೇಭ್ಯ ಏವ ಚ ತದ್ಧವಿಃ ॥**

(ಬೃ. ದೇ. ೪-೫೧ ರಿಂದ ೫೩).

ಈ ನಿಷೇಧದಲ್ಲಿ ನಿನ್ನ ಉದ್ದಿಶ್ಯವನ್ನು ತಿಳಿಸದೇ ಇರುವುದು ಪ್ರಯೋಜನಕಾರಿಯಾಗುವುದಿಲ್ಲವೆಂದು ಸೂಚಿಸಿ **ಕಿಂ ನಃ** (೧-೧೭೦-೨) ಎಂಬ ಮಂತ್ರದಿಂದ ಮರುತ್ತುಗಳೂ ಸಹ ಇಂದ್ರನ ಮಿತ್ರರೆಂದು ತಿಳಿಸುತ್ತಾನೆ. ಅನಂತರ "**ಕಿಂ ನೋ ಭ್ರಾತಃ**" ಎಂಬ ಮಂತ್ರದಿಂದ ಇಂದ್ರನನ್ನು ಪ್ರಾರ್ಥಿಸಿದಾಗ ಇಂದ್ರನು ಕೊಂಚ ಕ್ರುದ್ಧನಾಗಿ ಆಕ್ಷೇಪಿಸುತ್ತಾನೆ. ಆದರೂ ಸಹ "**ಅರಂ**" (೧-೧೭೦-೪) ಎಂಬ ಮಂತ್ರದಿಂದ ಇಂದ್ರನನ್ನು ಸಮಾಧಾನಪಡಿಸಿ ಹವಿಸ್ಸಿನ ಭಾಗವನ್ನು ಮರುತ್ತುಗಳಿಗೂ ಅರ್ಪಿಸಿದನು.

**ಸುತೇ ಚಕಾರ ಸೋಮೇಽಥ ತಾನಿಂದ್ರಃ ಸೋಮಪೀಥಿನಃ ।**
**ತಸ್ಮಾದ್ವಿದ್ಯಾನ್ನಿಪಾತೇನ ಐಂದ್ರೇಷು ಮರುತಃ ಸ್ತುತಾನ್ ॥**

(ಬೃ ದೇ ೪-೫೪)

ಸೋಮವು ಅಭಿಷುತವಾದೊಡನೆಯೇ ಇಂದ್ರನು ಅದನ್ನು ಮರುತ್ತುಗಳಿಗೂ ವಿಭಾಗಮಾಡಿ ಅವರಿಗೂ ಪಾನಮಾಡಿಸಿದನು. ಆದುದರಿಂದ ಯಾವ ಸೂಕ್ತದಿಂದ ಇಂದ್ರನು ಸ್ತುತನಾದರೂ ಸಹ ಮರುತ್ತುಗಳೂ ಆನುಷಂಗಿಕವಾಗಿಯೇ ಅವನ ಜೊತೆಯಲ್ಲಿ ಸ್ತುತರಾಗುತ್ತಾರೆಂದರಿಯಬೇಕು.

**ಪ್ರೀತಾತ್ಮಾ ಪುನರೇವರ್ಷಿಸ್ತಾಂಸ್ತುಷ್ಟಾವ ಪೃಥಕ್ ಪೃಥಕ್ ।**
**ಮರುತಃ ಪ್ರತಿ ಸೂಕ್ತಾಭ್ಯಾಂ ಇಂದ್ರಂ ಷಡ್ಭಿಃ ಪರೈಸ್ತು ಸಃ ॥**

(ಬೃ.ದೇ. ೪-೫೫).

ಇದರಿಂದ ಅಗಸ್ತ್ಯನು ತುಷ್ಟನಾಗಿ (೧-೧೭೧ ಮತ್ತು ೧-೧೭೨) ಎರಡು ಸೂಕ್ತಗಳಿಂದ ಮರುತ್ತುಗಳನ್ನು ಪೃಥಕ್ಕಾಗಿ ಸ್ತುತಿಸಿದನು. ಮತ್ತು ೧೭೩ ರಿಂದ ೧೭೮ ರ ವರೆಗೆ ಆರು ಸೂಕ್ತಗಳಿಂದ ಇಂದ್ರನನ್ನು ಸ್ತುತಿಸಿದನು.

**ಸ್ತುತಶ್ಚ ತಸ್ಯಭಿಶ್ಚೇಂದ್ರ ಸ್ತುತಾಸ ಇತಿ ತೈಃ ಸಹ ।**
**ಮರುದ್ಭಿಃ ಸಹ ಮರುತ್ವಾಂಸ್ತತ್ರ ಸೋಽಭವತ್ ॥**

(ಬೃ. ದೇ. ೪-೫೬).

(೧೭೩-೩ ರಿಂದ ೬) ನಾಲ್ಕು ಮಂತ್ರಗಳಿಂದ ಇಂದ್ರನ ಸ್ತುತಿಯಿದೆ. ಆದರೆ ಇಂದ್ರನಿರುವೆಡೆಗಳಲ್ಲೆಲ್ಲಾ ಮರುತ್ತುಗಳಿರಬೇಕಾದುದರಿಂದ ಇವನಿಗೆ **ಮರುತ್ವಾನ್** ಎಂಬ ವಿಶೇಷಣವು ಸಹಜವಾಗಿರುತ್ತದೆ ಇತ್ಯಾದಿಯಾಗಿ ಬೃಹದ್ದೇವತೆಯಲ್ಲಿ ತಿಳಿಸಿ ಅನಂತರ ಮುಂದೆ ಅಗಸ್ತ್ಯನಿಗೂ ಲೋಪಾಮುದ್ರೆಗೂ ನಡೆದ ಪ್ರೇಮಪೂರಿತವಾದ ಸಂಭಾಷಣೆಯನ್ನು ವರ್ಣಿಸಿದೆ.



॥ ಸಂಹಿತಾಪಾಠಃ ॥

ಪ್ರತಿ ವ ಏನಾ ನಮಸಾಹಮೇಮಿ ಸೂಕ್ತೇನ ಭಿಕ್ಷೇ ಸುಮತಿಂ ತುರಾಣಾಂ ।

ರರಾಣತಾ ಮರುತೋ ವೇದ್ಯಾಭಿರ್ನಿ ಹೇಳೋ ಧತ್ತ ವಿ ಮುಚಧ್ವಮಶ್ವಾನ್ ॥

॥ ಪದಪಾಠಃ ॥

ಪ್ರತಿ । ವಃ । ಏನಾ । ನಮಸಾ । ಅಹಂ । ಏಮಿ । ಸುಽಉಕ್ತೇನ । ಭಿಕ್ಷೇ । ಸುಽಮತಿಂ । ತುರಾಣಾಂ ।

ರರಾಣತಾ । ಮರುತಃ । ವೇದ್ಯಾಭಿಃ । ನಿ । ಹೇಳಃ । ಧತ್ತ । ವಿ । ಮುಚಧ್ವಂ । ಅಶ್ವಾನ್ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವೋ ಯುಷ್ಮಾನಹಂ ಪ್ರತ್ಯೇಮಿ । ಅಭಿಗಚ್ಛಾಮಿ । ಕೇನ ಸಾಧನೇನ । ನಮಸಾ ನಮಸ್ಕಾರೇಣ ಹವಿಷಾ ವಾ । ನಮ ಇತ್ಯನ್ನನಾಮ । ತಥಾ ಸೂಕ್ತೇನ ಶೋಭನವಚನೇನ ಸ್ತುತಿರೂಪೇಣ । ತುರಾಣಾಂ ತ್ವರಮಾಣಾನಾಂ ಶತ್ರೂಣಾಂ ಹಿಂಸಕಾನಾಂ ವಾ ಯುಷ್ಮಾಕಂ ಸಮತಿಂ ಶೋಭನಮತಿಮನುಗ್ರಹಬುದ್ಧಿಂ ಭಿಕ್ಷೇ । ಯಾಚೇ । ಇಂದ್ರಸ್ಯೈವ ಪುನರ್ಹವಿಷ್ಪ್ರದಾನಾದಿದಂ ಯಾಚ್ಯತೇ । ಕಿಂಚ ಹೇ ಮರುತಃ ಯೂಯಂ ವೇದ್ಯಾಭಿರ್ವೇದಿತವ್ಯಾಭಿಃ ಸ್ತುತಿಭೀ ರರಾಣತಾ ರಮಮಾಣೇನ ಮನಸೇತ್ಥಂಭೂತಾಃ ಸಂತೋ ಹೇಳಃ । ಕ್ರೋಧನಾಮೈತತ್ । ಕ್ರೋಧಂ ಯುಷ್ಮದಭಿಕ್ರಮಜನಿತಂ ನಿ ಧತ್ತ । ನಿಕೃಷ್ಟಂ ಧಾರಯತ । ತ್ಯಜತೇತ್ಯರ್ಥಃ । ತಥಾಶ್ವಾನ್ವಿಮುಚಧ್ವಂ । ರಥೇಭ್ಯೋ ವಿಯೋಜಯತ । ಕ್ರೋಧಾತ್ಪುನರ್ಗಮನಂ ಮಾ ಕುರತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ಅಹಂ**—ನಾನು । **ಏನಾ ನಮಸಾ**—ಈ ನಮಸ್ಕಾರದಿಂದ ಅಥವಾ ಹವಿಸ್ಸಿನಿಂದ (ಸಹಿತನಾಗಿ) । **ವಃ**—ನಿಮ್ಮನ್ನು । **ಪ್ರತಿ ಏಮಿ**—ಉದ್ದೇಶಿಸಿ ಬರುತ್ತೇನೆ । **(ತಥಾ**—ಹಾಗೆಯೇ) । **ಸೂಕ್ತೇನ**—ಶುಭವಾದ (ಸ್ತುತಿರೂಪ) ಮಾತಿನಿಂದ । **ತುರಾಣಾಂ**—ಆತುರರಾಗಿರುವ ಶತ್ರುಗಳ (ವಿಷಯದಲ್ಲಿ) ಅಥವಾ ಹಿಂಸಕರಾದ ನಿಮ್ಮ । **ಸುಮತಿಂ**—(ನಮ್ಮಲ್ಲಿ) ಅನುಗ್ರಹ ಬುದ್ಧಿಯನ್ನು । **ಭಿಕ್ಷೇ**—ಯಾಚಿಸುತ್ತೇನೆ । **(ಕಿಂಚ**—ಮತ್ತು) । **(ಹೇ ಮರುತಃ**—ಎಲೈ ಮರುದ್ದೇವತೆಗಳೇ) । **ವೇದ್ಯಾಭಿಃ**—(ನಮ್ಮ) ಸ್ತುತಿಗಳಿಂದ । **ರರಾಣತಾ**—ರಮಿಸುವ ಮನಸ್ಸಿನಿಂದ (ಯುಕ್ತರಾಗಿ) । **ಹೇಳಃ**—ನಿಮ್ಮ ಕ್ರೋಧವನ್ನು । **ನಿ ಧತ್ತ**—ನಿಕೃಷ್ಟವಾಗಿ ಧರಿಸಿ (ತ್ಯಜಿಸಿಬಿಡಿ) । (ಹಾಗೆಯೇ) **ಅಶ್ವಾನ್**—(ರಥದ) ಅಶ್ವಗಳನ್ನೂ । **ವಿ ಮುಚಧ್ವಂ**—(ಕ್ರೋಧಾವಿಷ್ಟರಾದ ನೀವು ಹಿಂದಕ್ಕೆ ಬರದಂತೆ ರಥದಿಂದ) ಬಿಚ್ಚಿಬಿಡಿ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಾನು ನಿಮ್ಮನ್ನು ನಮಸ್ಕಾರಪೂರ್ವಕವಾಗಿ ಸಮೀಪಿಸುತ್ತೇನೆ; ನಿಮ್ಮನ್ನು ಸ್ತುತಿಸಿ, ನಮ್ಮಲ್ಲಿ ಅನುಗ್ರಹ ಮಾಡಬೇಕೆಂದು ಬೇಡುತ್ತೇನೆ. ಎಲೈ ಮರುತರೇ, ನಮ್ಮ ಸ್ತುತಿಯಿಂದ ಹರ್ಷಚಿತ್ತರಾಗಿ, ಕೋಪವನ್ನು ಬಿಡಿ; ಕೋಪಿಸಿಗೊಂಡು ನಮ್ಮಲ್ಲಿಗೆ ಬರದೇ ಇರುವಂತೆ, ನಿಮ್ಮ ರಥಾಶ್ವಗಳನ್ನೂ ಬಿಚ್ಚಿಬಿಡಿ,

## English Translation.

I approach you, Maruts, with this reverential homage, and with a hymn implore your favour against eager (foes) : with minds pacified by our praises, suppress your anger, and let loose your horses.

॥ ವಿಶೇಷವಿಷಯಗಳು ॥

**ನಮಸಾ—ನಮಸ್ಕಾರೇಣ ಹವಿಷಾ ವಾ—** ನಮಃ ಎಂದು ಅನ್ನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಅಗಸ್ತ್ಯಋಷಿಯು ಮರುದ್ದೇವತೆಗಳನ್ನು ನಮಸ್ಕಾರ ಮಾಡುವುದರಿಂದಲೂ, ಹವಿಸ್ಸನ್ನು ಅರ್ಪಿಸುವುದರಿಂದಲೂ, ಸಂತೋಷಪಡಿಸುವನೆಂದು ಅರ್ಥವನ್ನು ವಿವರಿಸಿದೆ.

**ಸೂಕ್ತೇನ ತುರಾಣಾಂ ಸುಮತಿಂ ಭಿಕ್ಷೇ—ಶೋಭನವಚನೇನ ಸ್ತುತಿರೂಪೇಣ ತ್ವರಮಾಣಾನಾಂ ಶತ್ರೂಣಾಂ ಹಿಂಸಕಾನಾಂ ವಾ ।** ತುರ ಎಂಬ ಶಬ್ದವು ಯಾಸ್ಕರಿಂದ ಉದಾಹೃತವಾದ

**ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ ಪುತ್ರಮದಿತೇರ್ಯೋ ವಿಧರ್ತಾ ।**
**ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿದ್ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ ॥**
(ಋ. ಸಂ. ೭-೪೧-೨).

ಎಂಬ ಈ ಋಕ್ಕಿನಲ್ಲಿ **ತುರ ಇತಿ ಯಮನಾಮ ತರತೇರ್ವಾ ತ್ವರತೇರ್ವಾ—** ತೄಧಾತು, ಅಥವಾ ತ್ವರಧಾತುವಿನಿಂದ ನಿಷ್ಪನ್ನವಾದ ತುರ ಶಬ್ದವು ಪ್ರಾಣಿಗಳನ್ನು ಉಪಸಂಹಾರಮಾಡುವುದರಲ್ಲಿ ಶೀಘ್ರಗತಿಯಿಂದ ಇರುವ ಯಮನನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಈ ಪದಕ್ಕೆ ಹಿಂಸೆಮಾಡುವವರು ಅಥವಾ ಶತ್ರುಗಳು ಎಂಬ ಅರ್ಥವನ್ನು ವರ್ಣಿಸಿ, ಅಗಸ್ತ್ಯಋಷಿಯು ಇಂದ್ರನಿಗಾಗಿ ಸಿದ್ಧಮಾಡಿದ ಹವಿಸ್ಸನ್ನು ಮರುದ್ದೇವತೆಗಳಿಗಾಗಿ ಅರ್ಪಿತಮಾಡಲು ಉದ್ದೇಶ ಮಾಡಿದಾಗ ಇಂದ್ರನು ಅದನ್ನು ತಾನೇ ಸ್ವೀಕರಿಸಿದಕಾರಣ ಮರುದ್ದೇವತೆಗಳು ತನ್ನ ವಿಷಯದಲ್ಲಿ ಶತ್ರುಗಳ ಅಥವಾ ಹಿಂಸಕರ ಕಾರ್ಯವನ್ನು ಆಚರಿಸದೆ (ಎಂದರೆ ಕೋಪಮಾಡದೆ) ಇರಲಿ ಎಂದು ತ್ವರಾಯುಕ್ತರಾದ ಮರುದ್ದೇವತೆಗಳನ್ನು ನಮಸ್ಕರಿಸಿ, ಹವಿಸ್ಸನ್ನು ಅರ್ಪಿಸಿ, ಉತ್ತಮವಾದ ವಾಕ್ಯಗಳಿಂದ ಸ್ತುತಿಮಾಡಿ, ಅವರ **ಶೋಭನಮತಿಂ—ಅನುಗ್ರಹಬುದ್ಧಿಂ** ಸಂತೋಷಸೂಚಕವಾದ ಅನುಗ್ರಹವನ್ನು ಮಾಡುವ ಬುದ್ಧಿಯು ತನ್ನ ವಿಷಯದಲ್ಲಿ ಉಂಟಾಗುವುದಕ್ಕಾಗಿ ಪ್ರಾರ್ಥಿಸುವನು ಎಂದು ವರ್ಣಿಸಿದ್ದಾರೆ. **ತುರ** ಶಬ್ದವನ್ನು ಶಕ್ತಿಪರ್ಯಾಯವಾಗಿಯೂ ಉಪಯೋಗಿಸುವುದುಂಟು.

**ಸದಿದ್ಧಿ ತೇ ತುವಿಜಾತಸ್ಯ ಮನ್ಯೇ ಸಹಃ ಸಹಿಷ್ಠ ತುರತಸ್ತುರಸ್ಯ ।**
**ಉಗ್ರಮುಗ್ರಸ್ಯ ತವಸಸ್ತವೀಯೋಽರಧ್ರಸ್ಯ ರಧ್ರತುರೋ ಬಭೂವ ॥**
(ಋ. ಸಂ. ೬-೧೮-೪).

ಎಂಬ ಋಕ್ಕಿನಲ್ಲಿ ಶಕ್ತ್ಯರ್ಥದಲ್ಲೂ, ಹಿಂಸಾರ್ಥದಲ್ಲೂ ಈ ಪದದ ಪ್ರಯೋಗವಿದೆ. **ತುರತಃ ತುರಸ್ಯ** ಎಂಬ ಪದಗಳಿಗೆ **ಅಸ್ಮಾನ್ ಹಿಂಸತಃ; ಶತ್ರೂಣಾಂ ಹಿಂಸಿತುಃ ಬಲವತೋ ವಾ** ಎಂದು ವಿವರಣೆಯಿದೆ ಹಿಂಸಕರಾದ ಶತ್ರುಗಳ ದಮನವನ್ನು ಮಾಡುವ ಸಾಮರ್ಥ್ಯವುಳ್ಳ ಎಂದು ಇಂದ್ರನಿಗೆ ವಿಶೇಷಣವಾಗಿ ಪೂರ್ವಾರ್ಧದಲ್ಲೂ; ಮತ್ತು **ರಧ್ರತುರಃ—ವಶೀಕರಣೀಯಾನಾಂ ಸಪತ್ನಾನಾಂ ಹಿಂಸಕಸ್ಯ ತವ ಬಲಂ ।** ಶತ್ರುಹಿಂಸಕನಾದ ನಿನ್ನ ಬಲವು ಎಂದು ಉತ್ತರಾರ್ಧದಲ್ಲೂ ಉಪಯೋಗಿಸಲ್ಪಟ್ಟಿದೆ. ಮತ್ತು,

**ಯಂ ವರ್ಧಯಂತೀದ್ಗಿರಃ ಪತಿಂ ತುರಸ್ಯ ರಾಧಸಃ ।**
**ತಮಿನ್ನ್ವಸ್ಯ ರೋದಸೀ ದೇವೀ ಶುಷ್ಮಂ ಸಪರ್ಯತಃ ॥**
(ಋ. ಸಂ. ೬-೪೪-೫).

ಎಂಬಲ್ಲಿ **ಬಲವತಃ ಶತ್ರೋಃ** ಎಂದರ್ಥಮಾಡಿದೆ. ಅಲ್ಲದೇ,

**ತಾ ವಾಮೇಷೇ ರಥಾನಾಮಿಂದ್ರಾಗ್ನೀ ಹವಾಮಹೇ ।**
**ಪತೀ ತುರಸ್ಯ ರಾಧಸೋ ವಿದ್ವಾಂಸಾ ಗಿರ್ವಣಸ್ತಮಾ ॥**
(ಋ. ಸಂ. ೫-೮೬-೪).

ಇತ್ಯಾದಿ ಋಕ್ಕುಗಳಲ್ಲಿ **ತುರಸ್ಯ ರಾಧಸಃ ।** ಎನ್ನುವುದಕ್ಕೆ **ಜಂಗಮರೂಪಸ್ಯ ಧನಸ್ಯ ।** ಚಲಿಸತಕ್ಕ; ಅಸ್ಥಿರವಾದ ಧನದ ಎಂದು ಚರಾತ್ಮಕವಾದುದೂ, ವ್ಯವಹಾರಗಳಿಗೆ ಯೋಗ್ಯವಾದುದೂ, ಶೀಘ್ರವಾಗಿ ಸಂಚರಿಸತಕ್ಕದ್ದೂ ಆದ ವಸ್ತುಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. (೧-೬೧-೧೩) ಇತ್ಯಾದಿ ಋಕ್ಕುಗಳಲ್ಲಿ ಯಮನ ಪರ್ಯಾಯ ವಾಗಿಯೇ ಪ್ರಯುಕ್ತವಾಗಿದೆ. ಪ್ರಕೃತದಲ್ಲಿ ಶತ್ರುಹಿಂಸಕರಾದ ಎಂದು **ಮರುದ್ದೇವತೆಗಳಿಗೆ** ವಿಶೇಷಣವಾಗಿದೆ.

ಸುಮತಿ ಶಬ್ದವು ಯಾಸ್ಕರಿಂದ--

**ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ ।**
**ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ ॥**
(ಅಥ. ಸಂ. ೭-೧೭-೨).

ಉದಾಹೃತವಾದ ಈ ಋಕ್ಕಿನಲ್ಲಿಯೂ ಇನ್ನೂ ಇತರ ಕಡೆಗಳಲ್ಲಿಯೂ **ಕಲ್ಯಾಣೀ ಮತಿಃ** ಎಂಬ ಅರ್ಥ ಬೋಧಕವೆಂದು ಸಾಯಣರು ವಿವರಿಸಿದ್ದಾರೆ.

ಆದರೆ, **ಸುಮತಿ** ಶಬ್ದವು ಕೇವಲ ದೈವಿಕವಾದ ಅನುಗ್ರಹಾತ್ಮಕ ಬುದ್ಧಿಯೆಂದು ಮಾತ್ರವಲ್ಲದೇ, ಮಾನವ ಕೃತಪ್ರಾರ್ಥನಾ ಅಥವಾ ಮಾನವನ **ಶ್ರೇಷ್ಠವಾದ ಅಭಿಲಾಷೆ** ಎಂಬರ್ಥದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ,

**ತುಭ್ಯಂ ಭರಂತಿ ಕ್ಷಿತಯೋ ಯವಿಷ್ಠ ಬಲಿಮಗ್ನೇ ಅಂತಿತ ಓತ ದೂರಾತ್ ।**
**ಆ ಭಂದಿಷ್ಠಸ್ಯ ಸುಮತಿಂ ಚಿಕಿದ್ಧಿ ಬೃಹತ್ತೇ ಅಗ್ನೇ ಮಹಿ ಶರ್ಮ ಭದ್ರಂ ॥**
(ಋ. ಸಂ. ೫-೧-೧೦).

**ಪ್ರ ವೋ ಮಹೇ ಮಹಿವೃಧೇ ಭರಧ್ವಂ ಪ್ರಚೇತಸೇ ಪ್ರ ಸುಮತಿಂ ಕೃಣುಧ್ವಂ ।**
**ವಿಶಃ ಪೂರ್ವೀಃ ಪ್ರ ಚರಾ ಚರ್ಷಣಿಪ್ರಾಃ ॥**
(ಋ. ಸಂ. ೭-೩೧-೧೦).

ಇತ್ಯಾದಿ ಋಕ್ಕುಗಳಲ್ಲಿ **ಸ್ತೋತುಃ ಸ್ತುತಿಂ ಆ ಜಾನೀಹಿ ।** ಸ್ತೋತೃವಿನ ಶ್ರೇಷ್ಠವಾದ ಸ್ತುತಿಯನ್ನು ಆಲಿಸು ಎಂದೂ, **ಇಂದ್ರಾಯ ಸುಷ್ಟುತಿಂ ಪ್ರ ಕುರುತ** ಇಂದ್ರನನ್ನುದ್ದೇಶಿಸಿ ಶ್ರೇಷ್ಠವಾದ ಸ್ತುತಿಯನ್ನು ಪಠಿಸು ಎಂದೂ ಅರ್ಥಮಾಡಿದೆ. ಮತ್ತು

**ಯೂಯಂ ನ ಉಗ್ರಾ ಮರುತಃ ಸುಚೇತುನಾರಿಷ್ಟಗ್ರಾಮಾಃ ಸುಮತಿಂ ಪಿಪರ್ತನ ।**
**ಯತ್ರಾ ವೋ ವಿದ್ಯುದ್ರದತಿ ಕ್ರಿವಿರ್ದತೀ ರಿಣಾತಿ ಪಶ್ವಃ ಸುಧಿತೇವ ಬರ್ಹಣಾ ॥**
(ಋ. ಸಂ. ೧-೧೬೬-೬).

ಎಂದು ಹಿಂದೆ ವಿವರಿಸಿರುವ ಋಕ್ಕಿನಲ್ಲಿ **ಸುಮತಿಂ ಪಿಪರ್ತನ** ಎಂಬುದಕ್ಕೆ ಸಾಯಣರು **ಶೋಭನಬುದ್ಧಿಂ ಪೂರಯತ** ಎಂದರ್ಥಮಾಡಿದ್ದಾರೆ ಇಲ್ಲಿ ಶೋಭನಬುದ್ಧಿಯೆಂದರೆ ದೇವತೆಗಳ ಅನುಗ್ರಹಾತ್ಮಕವಾದ ಬುದ್ಧಿಯೆಂದಾಗಲಾರದು. **ಪಿಪರ್ತನ** ಎಂದಿರುವುದರಿಂದ ನಮ್ಮ ಶ್ರೇಷ್ಠವಾದ ಇಷ್ಟಾರ್ಥಗಳನ್ನು ನೆರವೇರಿಸು ಎಂಬರ್ಥವು ಸಹಜವಾಗಿರುತ್ತದೆ. ಇದೇ ೧-೧೬೬-೬ ನೇ ಋಕ್ಕಿಗೆ ವಿವರಣೆಯನ್ನು ಕೊಡುತ್ತಾ Max Muller ಎಂಬ ಪಂಡಿತನು ಈ ರೀತಿ ತಿಳಿಸಿದ್ದಾನೆ.

In our passage the Verb ಪಿಪರ್ತನ, fill or fulfil, indicates in what sense **ಸುಮತಿ** ought to be taken. **ಸುಮತಿಂ ಪಿಪರ್ತನ** is no more than **ಕಾಮಂ ಪಿಪರ್ತನ.**

[S. B. E. XXXII. P. 221].

ಎಂದರೆ ನಮ್ಮ ಇಷ್ಟಾರ್ಥವನ್ನು ನೆರವೇರಿಸು ಎಂದರ್ಥ. ಈ ಅರ್ಥವೂ ಸಹಜವಾಗಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಸುಮತಿಂ ಭಿಕ್ಷೇ** ಎಂಬುದಕ್ಕೆ ಮರುದ್ದೇವತೆಗಳ ಅನುಗ್ರಹಾತ್ಮಕವಾದ ಬುದ್ಧಿಯನ್ನು ಅಪೇಕ್ಷಿಸುತ್ತೇನೆ ಎಂದರ್ಥವಾಗುತ್ತದೆ.

ಹೇ ಮರುತಃ ಎಂದು ಮರುದ್ದೇವತೆಗಳನ್ನು ಸಂಬೋಧಿಸಿ ಅವರು, **ವೇದ್ಯಾಭಿಃ ರರಾಣತಾ,** ಅಗಸ್ತ್ಯ ಋಷಿಯು ಪಠಿಸಿದ ಸ್ತುತಿಗಳಿಂದ ಅಗಸ್ತ್ಯಋಷಿಯ ಅಭಿಮತವನ್ನು ತಿಳಿದು **ರಮಮಾಣೇನ ಮನಸಾ** ಸಂತೋಷದಿಂದ ಕೂಡಿರುವ ಮನಸ್ಸುಳ್ಳವರಾಗಿ ಇರಲಿ ಎಂದು ಅರ್ಥವನ್ನು ವಿವರಿಸಿದೆ.

**ರರಾಣತಾ—ರಣ ಶಬ್ದೇ** ಎಂಬ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಸಾಧಾರಣವಾಗಿ ಸ್ತೋತ್ರರೂಪವಾದ ಶಬ್ದವೆಂದರ್ಥ. ಆದರೆ ಕೆಲವು ಸನ್ನಿವೇಶಗಳಲ್ಲಿ ಹರ್ಷಾರ್ಥದಲ್ಲೂ ಈ ಪದದ ಪ್ರಯೋಗವಿದೆ. ನಿರುಕ್ತಕಾರರು ಈ ಪದದ ಪ್ರಯೋಗವಿರುವ,

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ।**
**ಯಸ್ಯೇದಮಪ್ಯಂ ಹವಿಃ ಪ್ರಿಯಂ ದೇವೇಷು ಗಚ್ಛತಿ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೧೨)

ಎಂಬ ಋಕ್ಕನ್ನುದಹರಿಸುತ್ತಾ **ರಾರಣ** ಶಬ್ದಕ್ಕೆ **ರಮೇ** ಎಂಬರ್ಥವನ್ನು ಮಾಡಿದ್ದಾರೆ. ಸಾಯಣರು ಕೆಲವೆಡೆಗಳಲ್ಲಿ **ಶಬ್ದ**ವೆಂಬರ್ಥವನ್ನೇ ಹೇಳಿದ್ದಾರೆ. ಉದಾಹರಣೆಗೆ—

**ಯಃ ಸೋಮ ಸಖ್ಯೇ ತವ ರಾರಣದ್ದೇವ ಮರ್ತ್ಯಃ ।**
**ತಂ ದಕ್ಷಃ ಸಚತೇ ಕವಿಃ ॥**

(ಋ. ಸಂ. ೧–೯೧-೧೪)

ಇತ್ಯಾದಿ ಋಕ್ಕುಗಳಲ್ಲಿ **ರಣತಿ ಏತತ್ಸೂಕ್ತರೂಪೇಣ ತ್ವಾಂ ಸ್ತೌತಿ ।** ಈ ಸೂಕ್ತರೂಪದ (ಶಬ್ದ) ದಿಂದ ನಿನ್ನನ್ನು ಸ್ತುತಿಸುತ್ತಾರೆ ಎಂದು ಅರ್ಥಮಾಡಿದ್ದಾರೆ. ಪ್ರಾಯಃ ಹರ್ಷಾರ್ಥದ ಪ್ರಯೋಗವೇ ಅಧಿಕವಾಗಿದೆ.

**ಹೇಳಃ ನಿಧತ್ತ ಅಶ್ವ್ಯಾ ವಿ ಮುಚಧ್ವಂ—**ಹೇಳಸ್ ಎಂಬ ಪದವು ಕ್ರೋಧನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಮರುದ್ದೇವತೆಗಳು **ಯುಷ್ಮದತಿಕ್ರಮಜನಿತಂ ಕ್ರೋಧಂ ನಿಕೃಷ್ಟಂ ಧಾರಯತ ತ್ಯಜತ ।**

ತಮ್ಮನ್ನು ಅತಿಕ್ರಮಿಸಿದಕಾರಣ ತಮಗೆ ಉಂಟಾಗಿರುವ ಕೋಪವನ್ನು ಬಿಡಬೇಕೆಂದು ಪ್ರಾರ್ಥಿಸಿದೆ. ಮತ್ತು **ಕ್ರೋಧಾತ್ ಪುನರ್ಗಮನಂ ಮಾ ಕುರುತ** ಯಜ್ಞಕ್ಕಾಗಿ ಆಗಮಿಸಲು ಸಿದ್ಧಪಡಿಸಿರುವ ರಥಗಳಿಂದ ಅಶ್ವಗಳನ್ನು ಬಿಚ್ಚಿಬಿಡಲಿ ಎಂದೂ, ಕೋಪದಿಂದ ಹಿಂದಕ್ಕೆ ಬರದಿರಲಿ ಎಂದೂ ಅಗಸ್ತ್ಯಋಷಿಯ ಪ್ರಾರ್ಥನೆಯು ಇಲ್ಲಿ ಉಕ್ತ ವಾಗಿದೆ ಎಂಬ ಅರ್ಥವು ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಮಸಾ**—ಣಮು ಪ್ರಹ್ವತ್ವೇ ಶಬ್ದೇ ಚ ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಏಮಿ**—ಇಣ್ ಗತೌ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸೂಕ್ತೇನ**—ವಚ ಪರಿಭಾಷಣೇ. ಧಾತು. ಕ್ತಪ್ರತ್ಯಯ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. **ನಞ್ಸುಭ್ಯಾಮ್** (ಪಾ.ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಭಿಕ್ಷೇ**—ಭಿಕ್ಷ ಯಾಚ್ಞಾಯಾಂ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಸುಮತಿಮ್**—ಮನ ಜ್ಞಾನೇ. **ಮಂತ್ರೇ ವೃಷೇಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗಿ ಬರುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ತುರಾಣಾಂ**—ತುರ ತ್ವರಣೇ. ಧಾತು. **ಇಗುಪಧಜ್ಞಾ ಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಅಥವಾ ತುರ್ವೀ ಹಿಂಸಾಯಾಂ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಛಾಂದಸವಾಗಿ ವಕಾರಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತ ವಾಗುತ್ತದೆ. ಷಷ್ಠೀ ಬಹುವಚನಾಂತರೂಪ.

**ರರಾಣತಾ**—ರಮು ಕ್ರೀಡಾಯಾಂ ಧಾತು. ಇದಕ್ಕೆ ಲಡರ್ಥದಲ್ಲಿ ಶಾನಚ್. **ಬಹುಲಂ ಛಂದಸಿ** ಎಂಬುದ ರಿಂದ ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬಂದಾಗ ವ್ಯತ್ಯಯದಿಂದ ಧಾತು ಮಕಾರಕ್ಕೆ ಆತ್ವ. ತೃತೀಯಾ **ಟಾ** ಪರವಾದಾಗ ತಕಾರ ಅಧಿಕವಾಗಿ ಬರುತ್ತದೆ.

**ಧತ್ತ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮುಚಧ್ವಂ**—ಮುಚ್ಲೃ ಮೋಕ್ಷಣೇ. ಧಾತು. ತುದಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. ಟಿಗೆ ಏತ್ವ ಬಂದಾಗ **ಸವಾಭ್ಯಾಂವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ **ಅಮಾದೇಶ.** ತಿಙಂತನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಏಷ ವಃ ಸ್ತೋಮೋ ಮರುತೋ ನಮಸ್ವಾನ್ಹೃದಾ ತಷ್ಟೋ ಮನಸಾ ಧಾಯಿ ದೇವಾಃ ।

ಉಪೇಮಾ ಯಾತ ಮನಸಾ ಜುಷಾಣಾ ಯೂಯಂ ಹಿ ಷ್ಠಾ ನಮಸ ಇದ್ವೃಧಾಸಃ ॥ ೨ ॥

॥ ಪದಪಾಠಃ ॥

ಏಷಃ । ವಃ । ಸ್ತೋಮಃ । ಮರುತಃ । ನಮಸ್ವಾನ್ । ಹೃದಾ । ತಷ್ಟಃ । ಮನಸಾ । ಧಾಯಿ । ದೇವಾಃ ।

ಉಪ । ಈಂ । ಆ । ಯಾತ । ಮನಸಾ । ಜುಷಾಣಾಃ । ಯೂಯಂ । ಹಿ । ಸ್ಥ । ನಮಸಃ । ಇತ್ । ವೃಧಾಸಃ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಏಷ ವಃ ಸ್ತೋಮ ಇದಾನೀಂ ಕ್ರಿಯಮಾಣಪ್ರಕಾರೋ ವೋ ಯುಷ್ಮಾಕಂ । ಯುಷ್ಮದರ್ಥ ಇತ್ಯರ್ಥಃ । ಕೀದೃಶೋಽಯಂ । ನಮಸ್ವಾನ್ । ನಮ ಇತ್ಯನ್ನನಾಮ । ಹವಿರ್ಲಕ್ಷಣಾನ್ನ-ವಾನ್ । ನ ಕೇವಲಂ ಸ್ತುತಿಮಾತ್ರಂ ಭಕ್ಷಣಾಯ ಹವಿರಪಿ ಯುಷ್ಮಾಕಮಿತ್ಯರ್ಥಃ । ಕಿಂಚ ಹೃದಾ ತಷ್ಟೋ ಯುಷ್ಮನ್ನಿವೇದನಬುದ್ಧ್ಯಾ ಸಂಪಾದಿತಃ । ತಾದೃಶಃ ಸ್ತೋಮೋ ಹೇ ದೇವಾ ದೇವನಶೀಲಾಃ ಮನಸಾಸ್ಮದನುಗ್ರಹವತಾ ಚಿತ್ತೇನ ಧಾಯಿ । ಧಾರ್ಯತಾಂ । ತದರ್ಥಂ ಮನಸಾದರಯಾ ಬುದ್ಧ್ಯಾ ಜುಷಾಣಾ ಈಮೇನಾಂ ಸ್ತುತಿಂ ತದ್ಧವಿಶ್ಚ ಸೇವಮಾನಾ ಉಪಾ ಯಾತ । ಉಪಾಗಚ್ಛತೈವ । ಮಾ ವಿಲಂಬಂ ಕುರುತ । ಯೂಯಂ ನಮಸೋಽನ್ನಸ್ಯ ಹವೀರೂಪಸ್ಯ ವೃಧಾಸಃ ಸ್ಥ ಹ । ವರ್ಧಯಿತಾರೋ ಭವಥ ಖಲು । ಅತೋ ಗಂತವ್ಯಮೇವ । ಇತ್ಪೂರಣಃ ॥

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ನಮಸ್ವಾನ್**—ನಮಸ್ಕಾರ (ಹವಿಸ್ಸು) ಯುಕ್ತವಾದ । **ಏಷಃ ಸ್ತೋಮಃ**—ಈ ಸ್ತುತಿಯು । **ವಃ**—ನಿಮಗೋಸ್ಕರವಾಗಿ । **ಹೃದಾ**—ಮನಃಪೂರ್ವಕವಾಗಿ । **ತಷ್ಟಃ**—ಸಂಪಾದಿತವಾಗಿದೆ (ಅಂತಹಸ್ತುತಿಯು) । **(ಹೇ) ದೇವಾಃ**—ಎಲೈ ದ್ಯೋತನಶೀಲರಾದ ಮರುತರೇ । **ಮನಸಾ**—ಆದರಪೂರ್ವಕವಾದ ಬುದ್ಧಿಯಿಂದ । **ಧಾಯಿ**—ಧರಿಸಲ್ಪಡಲಿ (ಸ್ವೀಕರಿಸಲ್ಪಡಲಿ) । **ಯೂಯಂ**—ನೀವು । **ನಮಸಃ**—ಹವೀರೂಪಾನ್ನದ । **ವೃಧಾಸಃ ಸ್ಥ ಹಿ ಇತ್**—ವರ್ಧಕರಪ್ಪೇ (ಆದುದರಿಂದ) । **ಮನಸಾ**—ಆದರ ಬುದ್ಧಿಯಿಂದ । **ಈಂ**—(ನಮ್ಮಿಂದ ಅರ್ಪಿತವಾದ) ಇದನ್ನು (ನಮಸ್ಕಾರ ಅಥವಾ ಸ್ತುತಿ) । **ಜುಷಾಣಾಃ**—ಸೇವಿಸುವವರಾಗಿ । **ಉಪ ಆಯಾತ**—ಆಗಮಿಸಿ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮಗೋಸ್ಕರ ನಮಸ್ಕಾರ (ಹವಿಸ್ಸು) ಯುಕ್ತವಾದ ಈ ಸ್ತುತಿಯು ಹೃತ್ಪೂರ್ವಕ ವಾಗಿ ಸಂಪಾದಿತವಾಗಿದೆ. ಆದರಪೂರ್ವಕವಾಗಿ ಈ ನಮ್ಮ ಸ್ತುತಿಯನ್ನು ಸ್ವೀಕರಿಸಿ ನೀವು ಹವಿವರ್ಧಕರಾದುದರಿಂದ, ನಮ್ಮ ಹವಿಸ್ಸನ್ನು ಸ್ವೀಕರಿಸಲು ಪ್ರಸನ್ನ ಹೃದಯರಾಗಿ, ಆಗಮಿಸಿ.

English Translation.

This praise, accompanied by offerings, Maruts, ir for you, offered from the heart : accept it, divinities, with favour, and come with willing minds (to receive) these (laudations), for you are the augmenters of sacrificial food.

॥ ವಿಶೇಷವಿಷಯಗಳು ॥

**ವಃ ಸ್ತೋಮಃ ನಮಸ್ವಾನ್ ಹೃದಾ ತಷ್ಟಃ**---**ಇದಾನೀಂ ಕ್ರಿಯಮಾಣಪ್ರಕಾರಃ ಹವಿರ್ಲಕ್ಷಣಾನ್ನ-ವಾನ್ ಯುಷ್ಮನ್ನಿವೇದನಬುದ್ಧ್ಯಾ ಸಂಪಾದಿತಃ ।** ಮರುದ್ದೇವತೆಗಳನ್ನು ಸಂಬೋಧಿಸಿ ಅವರನ್ನು ಉದ್ದೇಶಮಾಡಿ ಪಠಿಸುತ್ತಿರುವ ಮತ್ತು ಹವಿಸ್ಸನ್ನು ಅವರಿಗಾಗಿ ಸಿದ್ಧಪಡಿಸಿ ಅರ್ಪಿತವಾಗಿ ಮಾಡುವ ನಮ್ಮ ಬುದ್ಧಿಯು ಅವರ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿಯೇ ಇರುವ ಕಾರಣ **ಮನಸಾ ಧಾಯಿ ಅಸ್ಮದನುಗ್ರಹವತಾ ಚಿತ್ತೇನ ಧಾರ್ಯತಾಂ** ಪ್ರಕಾಶಮಾನರಾದ ಮರುದ್ದೇವತೆಗಳು ನಮ್ಮ ವಿಷಯದಲ್ಲಿ ಅನುಗ್ರಹವನ್ನು ಮಾಡುವ ಮನಸ್ಸಿನಿಂದ ನಮ್ಮ ಸ್ತುತಿಗಳನ್ನು ಕೇಳಲಿ, ನಮ್ಮ ಹವಿಸ್ಸುಗಳನ್ನು ಸ್ವೀಕರಿಸಲಿ ಎಂದು ಪ್ರಾರ್ಥಿಸಿದೆ.

ಇಲ್ಲಿ **ಹೃದಾ ತಷ್ಟಃ ಮನಸಾ ಧಾಯಿ** ಎಂಬ ಪದಗಳು ಕೃತಿಯ ಆಶಯವನ್ನು ಸ್ಪಷ್ಟಪಡಿಸುತ್ತವೆ. ಇವು ಕೃತಿಯ ಕೌಶಲ್ಯವನ್ನೂ ಆಹ್ಲಾದಕತ್ವವನ್ನೂ ಸೂಚಿಸುತ್ತವೆ.

**ತಷ್ಟಃ— ತಕ್ಷತಿಃ ಕರೋತಿಕರ್ಮಾ** (ನಿ. ೪-೧೯) ನಿರ್ಮಾಣಕೌಶಲ್ಯವನ್ನು ಸೂಚಿಸುವಾಗಲೆಲ್ಲಾ ಈ ಪದವನ್ನು ಪ್ರಯೋಗಿಸಿದೆ.

**ಆ ತೇ ಅಗ್ನ ಋಚಾ ಹವಿರ್ಹೃದಾ ತಷ್ಟಂ ಭರಾಮಸಿ ।**
(ಋ. ಸಂ. ೬-೧೬-೪೭)

**ಹೃದಿಸ್ಪೃಶೋ ಮನಸಾ ವಚ್ಯಮಾನಾ ಅಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ।**
(ಋ. ಸಂ. ೧೦-೪೭-೭)

ಇತ್ಯಾದಿ ಸ್ಥಳಗಳಲ್ಲಿ ವರ್ಣಿತವಾಗಿರುವಂತೆ ಮನಸ್ಸಿಗೆ ಅಹ್ಲಾದವನ್ನುಂಟುಮಾಡುವ ಗುಣವೂ ಭಕ್ತಿಪೂರ್ವಕವಾದ ಕೌಶಲವೂ ಸೇರಿರುವುದೆಂದರ್ಥ.

**ಮನಸಾ ಜುಷಾಣಾಃ ಈಂ ಉಪಾ ಯಾತ— ಆದರಯಾ ಬುದ್ಧ್ಯಾ ಏನಾಂ ಸ್ತುತಿಂ ತದ್ಧವಿಶ್ಚ ಸೇವ-ಮಾನಾಃ ಮಾ ವಿಲಂಬಂ ಕುರುತ ।** ಮರುದ್ದೇವತೆಗಳು ಸ್ತುತಿಮಾಡುವ ನಮ್ಮ ವಿಷಯದಲ್ಲಿ ಪ್ರೀತಿಯುಳ್ಳ ಬುದ್ಧಿಯಿಂದ ನಮ್ಮ ಸ್ತುತಿಯನ್ನು ಕೇಳುವುದಕ್ಕಾಗಿಯೂ, ನಮ್ಮ ಹವಿಸ್ಸನ್ನು ಸೇವನೆಮಾಡುವುದಕ್ಕಾಗಿಯೂ ತ್ವರೆಯಿಂದ

ನಮ್ಮ ಯಜ್ಞಕ್ಕೆ ಬರಲಿ ಎಂದು ಪ್ರಾರ್ಥಿಸಿದೆ. ಇಲ್ಲಿ ಈಂ ಎಂಬ ನಿಪಾತವು **ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ, ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ।** (ನಿ. ೧-೯) ಕಂ, ಈಂ, ಇತ್, ಉ ಎಂಬ ನಿಪಾತಗಳು ವಾಕ್ಯಗಳಲ್ಲಿ ವಾಕ್ಯಪೂರಣಾರ್ಥವಾಗಿಯೂ ಛಂದಸ್ಸುಗಳಲ್ಲಿ ಪದಪೂರಣಾರ್ಥವಾಗಿಯೂ ಪ್ರಯುಕ್ತವಾಗಿರುವುದು ಎಂದು ನಿರುಕ್ತಕಾರರಿಂದ ಉಕ್ತವಾಗಿದೆ. ಆದರೆ **ಏವಮುಚ್ಚಾವಚೇಷ್ವರ್ಥೇಷು ನಿಪತಂತಿ ತ ಉಪೇಕ್ಷಿತವ್ಯಾಃ ಬಹುಪ್ರಕಾರೇಷು ಸಮಾಹೃತಾಶ್ಚಾನ್ಯೇಷ್ಯೇವಂ ಬಹುಪ್ರಕಾರಾ ಪ್ರಯುಜ್ಯಮಾನಾ ಅರ್ಥನಿರ್ವಚನಶಾಸ್ತ್ರಮುಪಗವ್ಯ ಈಕ್ಷಿತವ್ಯಾಃ** ಆಯಾಯ ಗ್ರಂಥಗಳಲ್ಲಿ ಆಯಾಯ ಅರ್ಥಕ್ಕನುಸಾರವಾಗಿ ಪ್ರಯೋಗವಿರುವುದನ್ನು ಆಯಾಯ ಶಾಸ್ತ್ರಮರ್ಯಾದೆಯನ್ನು ಅನುಸರಿಸಿ ತಿಳಿಯಬೇಕು ಎಂದು ಉಕ್ತವಾಗಿರುವುದರಿಂದ ಇಲ್ಲಿ ಈಂ ಎಂಬ ನಿಪಾತಕ್ಕೆ **ಏನಾಂ ಸ್ತುತಿಂ** ಈ ಸ್ತುತಿಯನ್ನು ಎಂಬ ಅರ್ಥವನ್ನು;ಹೇಳಿದೆ. ಇತ್ಎಂಬ ಪದವು ಪದಪೂರಣಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿ, **ಯೂಯಂ ನಮಸಃ ವೃಧಾಸಃ ಸ್ಥ ಹಿ ಹವೀರೂಪಸ್ಯ ಅನ್ನಸ್ಯ ವರ್ಧಯಿತಾರೋ ಭವಥ ಖಲು ।** ಮರುದ್ದೇವತೆಗಳು ಹವಿಸ್ಸಿನ ರೂಪವಾದ ಅನ್ನವನ್ನೂ ವೃದ್ಧಿಮಾಡುವವರೆಂದುಬುದು ಪ್ರಸಿದ್ಧವಾದ ವಿಷಯವಾಗಿದೆ.

**ರೋದಸೀ ಹಿ ಮರುತಶ್ಚಕ್ರಿರೇ ವೃಧೇ ಮದಂತಿ ವೀರಾ ವಿದಥೇಷು ಘೃಷ್ವಯಃ ।**

(ಋ. ಸಂ ೧-೮೫-೧)

ದ್ಯಾವಾಪೃಥಿವಿಗಳ ವೃದ್ಧಿಗೆ ಮರುತ್ತುಗಳು ಕಾರಣರಾಗಿಯೂ, ಅನ್ನಾಭಿವೃದ್ಧಿಗೆ ಹೇತುವಾಗಿಯೂ ಇರುವುದರಿಂದ ಇವರ ಅನುಗ್ರಹದಿಂದ ಯಜ್ಞಕರ್ತರು ಯಜ್ಞಾದಿಕರ್ಮನಿರ್ವಹಣದಲ್ಲೂ ಜೀವನಸಂಪತ್ತನ್ನನುಭವಿಸುವುದರಲ್ಲೂ ಸೌಖ್ಯವನ್ನೂ ಸಂತೋಷವನ್ನೂ ಪಡೆಯುತ್ತಾರೆಂದು ನಾನಾಕಡೆಗಳಲ್ಲಿ ವರ್ಣಿತವಾಗಿದೆ ಆದರೆ ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಮರುತ್ತುಗಳು ಹವಿಸ್ಸಿಗೆ ಉಪಯುಕ್ತವಾದ ಅನ್ನಕ್ಕೆ ಸಂಪಾದಕರಾಗಿರುವವರೇ ವಿನಹ ಇತರ ದೇವತೆಗಳಂತೆ ತಾವೂ ಸಹ ಹವಿಸ್ಸನ್ನು ಉಪಭೋಗಿಸುವುದಿಲ್ಲ ಎಂಬ ಅಂಶವು ಒಂದೆರಡು ಕಡೆಗಳಲ್ಲಿ ತಿಳಿಸಿದೆ. ಉದಾಹರಣೆಗೆ—

**ಅಹುತಾದೌ ವಾ ದೇವಾನಾಂ ಮರುತಃ ।**

(ಶ. ಬ್ರಾ ೪-೫-೨-೧೬)

ಮರುತ್ತುಗಳು ಹುತಾನ್ನವನ್ನು ಭಕ್ಷಿಸುವುದಿಲ್ಲ ಎಂಬುದಾಗಿ ನಿಸ್ಪೃಷ್ಟವಾಗಿ ಹೇಳಿದೆಯಾದರೂ ಆ ಸ್ಥಳಗಳಲ್ಲಿ **ಅಹುತವಾದ** ಅನ್ನವೆಂಬುದಕ್ಕೆ ಸಾಮಾನ್ಯವಾಗಿ ಅರ್ಪಿತವಾಗುವ ಹವಿಸ್ಸಲ್ಲವೆಂಬುದನ್ನು ಗಮನಿಸಬೇಕು. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ವಃ ಸ್ತೋಮಃ ನಮಸ್ವಾನ್ ಹೃದಾ ತಷ್ಟಃ** ಎಂಬುದಕ್ಕೆ ಹವಿರನ್ನದ ಜೊತೆಯಲ್ಲಿ ಸ್ತೋಮವು ನಿರ್ಮಿತವಾಗಿದೆಯೆಂಬ ಅರ್ಥವು ಸಹಜವಾಗಿದೆ.

**ಸೀದತಾ ಬರ್ಹಿರುರು ವಃ ಸದಸ್ಕೃತಂ ಮಾದಯಧ್ವಂ ಮರುತೋ ಮಧ್ವೋ ಅಂಧಸಃ ।**

(ಋ ಸಂ. ೧-೮೫-೬)

ಇತ್ಯಾದಿ ಸ್ಥಳಗಳಲ್ಲಿ "ಮಧುರವಾದ ಸೋಮರಸದ ಪಾನದಿಂದ ತೃಪ್ತಿಯನ್ನು ಪಡೆಯಿರಿ" ಎಂಬ ಪ್ರಾರ್ಥನೆಯು ಸ್ಪಷ್ಟವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಮಸ್ವಾನ್**— ನಮಃ ಅನ್ನಂ ಅಸ್ಯ ಅಸ್ತಿ ಇತಿ ನಮಸ್ವಾನ್. ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**— ಎಂಬುದರಿಂದ ಮಕಾರಕ್ಕೆ ವತ್ವ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಹೃದಾ** - ಹೃದಯಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಹೃದಾದೇಶ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತಷ್ಟಃ**—ತಕ್ಷೂ ತನೂಕರಣೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಸ್ಕೋಃ ಸಂಯೋಗಾ**— ಎಂಬುದರಿಂದ ತಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಧಾಯಿ**— ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಛಾಂದಸವಾಗಿ ಲುಙ್. ಚ್ಲಿಗೆ ಚಿಣ್. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ತ ಶಬ್ದಕ್ಕೆ ಲುಕ್. **ಆತೋ ಯುಕ್ ಚಿಣ್ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಯುಕಾಗಮ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಯಾತ**— ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಜುಷಾಣಾಃ**—ಜುಷೀಪ್ರೀತಿ ಸೇವನಯೋಃ ಧಾತು. ಲಟಿಗೆ ಶಾನಚಾದೇಶ. **ಅಟ್‌ಕುಪ್ವಾಙ್**—ಸೂತ್ರದಿಂದ ಅದರ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸ್ಥ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ಬಹುವಚನಾಂತರೂಪ. ನಿಘಾತಸ್ವರ ಬರುತ್ತದೆ.

**ವೃಧಾಸಃ**—ವೃಧು ವೃದ್ಧೌ. ಧಾತು. **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ವೃಧ ಎಂಬುದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭.೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಕ ಪ್ರತ್ಯಯಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಸ್ತುತಾಸೋ ನೋ ಮರುತೋ ಮೃಳಯಂತೂತ ಸ್ತುತೋ ಮಘವಾ ಶಂಭವಿಷ್ಠಃ।
ಊರ್ಧ್ವಾ ನಃ ಸಂತು ಕೋಮ್ಯಾ ವನಾನ್ಯಹಾನಿ ವಿಶ್ವಾ ಮರುತೋ ಜಿಗೀಷಾ ॥ ೩ ॥

॥ ಪದಪಾಠಃ ॥

**ಸ್ತುತಾಸಃ । ನಃ । ಮರುತಃ । ಮೃಳಯಂತು । ಉತ । ಸ್ತುತಃ । ಮಘವಾ । ಶಂಽಭವಿಷ್ಠಃ ।**

**ಊರ್ಧ್ವಾ । ನಃ । ಸಂತು । ಕೋಮ್ಯಾ । ವನಾನಿ । ಅಹಾನಿ । ವಿಶ್ವಾ । ಮರುತಃ । ಜಿಗೀಷಾ ॥ ೩ ॥**

॥ ಸಾಯಣಭಾಷ್ಯಂ ॥

**ತೇ ಮರುತಃ ಸ್ತುತಾಸಃ ಸ್ತುತಾಃ ಸಂತೋ ನೋಽಸ್ಮಾನ್ಮೃಳಯಂತು ಸುಖಯಂತು । ಉತಾಪಿ ಚ ಮಘವಾ । ಮಘಮಿತಿ ಧನನಾಮ । ಅಸ್ಮದ್ದಾತವ್ಯಬಹುಧನೇನ ತದ್ವಾನಿಂದ್ರಃ ಸ್ತುತಃ ಶಂಭವಿಷ್ಠಃ ಸುಖಸ್ಯ ಭಾವಯಿತೃತಮಃ ಸನ್ನಸ್ಮಾನ್ಮೃಳಯತು । ಕಿಂಚ ಹೇ ಮರುತಃ ನೋಽಸ್ಮಾಕಂ ಜಿಗೀಷಾ ॥ ಜಿಗಾತೇರ್ಗತಿಕರ್ಮಣೋ ಜಿಗೀಷಾ ॥ ಜಿಗೀಷಿತವ್ಯಾನಿ ಪ್ರಾಪ್ತವ್ಯಾನ್ಯುತ್ತರತ್ರಾನುಭೂಯಮಾನಾನಿ ವಿಶ್ವಾ ಸರ್ವಾಣ್ಯಹಾನಿ ದಿವಸಾನ್ಯೂರ್ಧ್ವಾಽನ್ನತಾನ್ಯುಪರ್ಯುಪರಿ ಶ್ರಿಯಾ ಯಶಸಾ ವೋತ್ಕೃಷ್ಟಾನಿ ಕೋಮ್ಯಾ ಕಾಮ್ಯಾನಿ ಸ್ಪೃಹಣೀಯಾನಿ ವನಾನಿ ಸರ್ವೈಃ ಸಂಭಜನೀಯಾನಿ ಸಂತು । ಜಿಗೀಷಾ ಜೇತುಮಿಷ್ಟಾನಿ ಜೇತವ್ಯಾನಿ ಚ ಸಂತ್ವಿತಿ ವಾ ಯೋಜ್ಯಂ । ಏವಂ ಕೃತ್ವಾ ಮರುತ ಇಂದ್ರಶ್ಚ ಸುಖಯಂತ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ತೇ) ಮರುತಃ**—ಆ ಮರುದ್ದೇವತೆಗಳು । **ಸ್ತುತಾಸಃ**—(ನಮ್ಮಿಂದ) ಸ್ತುತರಾಗಿ । **ನಃ**—ನಮ್ಮನ್ನು । **ಮೃಳಯಂತು**—ಸುಖಪಡಿಸಲಿ । **ಉತ**—ಮತ್ತು । **ಸ್ತುತಃ**—ಸ್ತುತನಾದ । **ಮಘವಾ**—(ನಮಗೆ ದಾತವ್ಯವಾದ) ಧನವಿಶಿಷ್ಟನಾದ ಇಂದ್ರನು । **ಶಂಭವಿಷ್ಠಃ**—ಅತ್ಯಂತ ಸುಖಕರನಾಗಿ । **(ಮೃಳಯತು**—ನಮಗೆ ಸುಖವನ್ನು ಅನುಗ್ರಹಿಸಲಿ) ! **(ಕಿಂಚ**—ಮತ್ತು) । **(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ನಃ**—ನಮಗೆ । **ಜಿಗೀಷಾ**—ಪ್ರಾಪ್ತವ್ಯವಾದ । **ವಿಶ್ವಾ ಅಹಾನಿ**—ಸಮಸ್ತ ದಿನಗಳೂ । **ಊರ್ಧ್ವಾ**—ಉತ್ಕೃಷ್ಟಗಳೂ । **ಕೋಮ್ಯಾ**—ಕಾಮ್ಯ (ಅಪೇಕ್ಷಣೀಯ)ಗಳೂ । **ವನಾನಿ**—(ಸರ್ವರಿಗೂ) ಸುಖಹೇತುಗಳೂ ಮತ್ತು । **(ಜಿಗೀಷಾ**—ಜಯಾರ್ಹಗಳೂ) । **ಸಂತು**—(ನಿಮ್ಮನುಗ್ರಹದಿಂದ) ಆಗಲಿ.

॥ ಭಾವಾರ್ಥ ॥

ಎಲೈ ಮರುತರೇ, ನಮ್ಮಿಂದ ಸ್ತುತರಾಗಿ, ನೀವು ನಮಗೆ ಸುಖವನ್ನುಂಟುಮಾಡಿ; ಧನಾಧಿಪತಿಯಾದ ಇಂದ್ರನೂ, ಸ್ತುತನಾಗಿ ಸುಖಾವಹನಾಗಲಿ; ಮತ್ತು ಎಲೈ ಮರುದ್ದೇವತೆಗಳೇ, ಇದೇ ರೀತಿ ಇರಲಿ ಎಂದು ಸಮಸ್ತರೂ ಇಚ್ಛಿಸುವಂತೆ, ನಾವು ಇನ್ನು ಮುಂದೆ (ನಿಮ್ಮನುಗ್ರಹದಿಂದ) ಸುಖವಾಗಿ, ಉತ್ತಮ ರೀತಿಯಲ್ಲಿ, ಜೀವಿಸೋಣ.

## English Translation

May the Maruts, now hymned, bestow happiness upon us : may Maghavan, now glorified, be propitious to us : Maruts, may all the

ensuing days that may be expected by us prove gratifying, and full of enjoyment.

‖ ವಿಶೇಷವಿಷಯಗಳು ‖

**ಹೇ ಮರುತಃ**—ಎಂದು ಮರುದ್ದೇವತೆಗಳನ್ನು ಸಂಬೋಧಿಸಿ ಅವರು ಯಾಗ ಮಾಡುವ ಯಜಮಾನರಿಂದ **ಸ್ತುತಾಸಃ**—ಸ್ತುತಿಸಲ್ಪಟ್ಟವರಾಗಿ ನಮ್ಮನ್ನು **ಮೃಳಯಂತು**—ಸುಖವುಳ್ಳವರನ್ನಾಗಿ ಮಾಡಲಿ ಎಂದು ಪ್ರಾರ್ಥಿಸಿದೆ. ಯಾಸ್ಕರು—

**ಕ್ಷೇತ್ರಸ್ಯ ಪತೇ ಮಧುಮಂತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।**
**ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥**

(ಋ. ಸಂ. ೪-೫೭-೨)

ಈ ಋಕ್ಕಿನಲ್ಲಿರುವ **ಮೃಳಯಂತು** ಎಂಬ ಪದಕ್ಕೆ **ಮೃಳಯತಿರುಪದಯಾಕರ್ಮಾ ವಾ** ಎಂಬ ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು—**ಮೃಳಯಂತು ನಿತ್ಯಮಸ್ಮಾನ್ ರಕ್ಷಂತು ಪೂಜಯಂತು ವಾ**—ರಕ್ಷಿಸಲಿ, ಅಥವಾ ನಮಗೆ (ಪೂಜೆಯು) ಮನ್ನಣೆಯು ಉಂಟಾಗುವಂತೆ ಮಾಡಲಿ ಎಂಬ ಅರ್ಥವನ್ನು ಹೇಳಿದ್ದಾರೆ.

**ಮಘವಾ ಸ್ತುತಃ ಶಂಭವಿಷ್ಠಃ**—ಮಘ ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ** (ನಿ. ೧-೭) ದಾನಮಾಡು ಎಂಬ ಅರ್ಥವುಳ್ಳ ಮಂಹಧಾತುವಿನಿಂದ ನಿಷ್ಪನ್ನವಾದ ಮಘಪದವು ಧನ ಎಂಬ ಅರ್ಥವನ್ನು ಬೋಧಿಸುವುದು ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ. ಸಾಯಣರು ಈ ಪದಕ್ಕೆ **ಮಘಮಿತಿ ಧನನಾಮ ಅಸ್ಮದ್ದಾತವ್ಯಬಹುಧನೇನ ತದ್ವಾನಿಂದ್ರಃ** ಮಘವೆಂದರೆ ಧನವೆಂಬ ಅರ್ಥವನ್ನು ವಿವರಿಸಿ, ಯಜಮಾನರಿಗೆ ಉಚಿತವಾಗಿ ಕೊಡುವುದಕ್ಕಾಗಿ ಪ್ರಭೂತವಾದ ಧನವನ್ನು ಹೊಂದಿರುವವನಾದುದರಿಂದ ಇಂದ್ರನು ಮಘವಾ ಎಂದು ಪ್ರಸಿದ್ಧನಾಗಿ ಇರುವನೆಂದು ಅರ್ಥವನ್ನು ವರ್ಣಿಸಿದೆ.

**ಮಘವತ್** ಎಂಬ ಪದವು ಯಜ್ಞಕರ್ತರ ಪರವಾಗಿಯೂ ಅನ್ವಯವಾಗಬಹುದೆಂದು ಹಿಂದೆ ತಿಳಿಸಿದೆ ಇನ್ನು ಕೆಲವು ಕಡೆಗಳಲ್ಲಿ **ಮಘವಾ** ಎನ್ನುವುದಕ್ಕೆ ವಿಷ್ಣುವಿನೊಡನೆ ಕೂಡಿಕೊಂಡಿರುವ ಇಂದ್ರನೆಂದರ್ಥವಾಗುತ್ತದೆ. ಇಂದ್ರನು ಅಸುರಾದಿಗಳೊಂದಿಗೆ ಯುದ್ಧಮಾಡುವಾಗ ವಿಷ್ಣುವಿನ ಸಹಾಯವನ್ನು ಪಡೆಯುವುದರಿಂದಲೂ ಸಹ ಈ ಅರ್ಥವನ್ನು ಹೇಳುವುದಕ್ಕೆ ಶ್ರುತಿಯ ಆಧಾರವಿರುತ್ತದೆ.

**ಸ ಉ ಏವ ಮಖಃ ಸ ವಿಷ್ಣುಃ । ತತ ಇಂದ್ರೋ ಮಖವಾನಭವನ್ಮಖವಾನ್ಹ ವೈ ತಂ ಮಘವಾನಿತ್ಯಾ ಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾಃ ।**

(ಶ. ಬ್ರಾ. ೧೪-೧-೧-೧೩).

**ಮಖನೇ** (ಯಜ್ಞವೇ) ವಿಷ್ಣುವಾದುದರಿಂದಲೂ ಇಂದ್ರನು ಮಖವಂತನಾದುದರಿಂದ ಇವನನ್ನೇ **ಮಘವಂತ**ನೆಂದು ಪರೋಕ್ಷಕಾಮಿಗಳಾದ ದೇವತೆಗಳು ಕರೆಯುತ್ತಾರೆ ಎಂದು ಶತಪಥ ಬ್ರಾಹ್ಮಣದಲ್ಲಿ ವಿವರಿಸಿದೆ. ಕೆಲವೆಡೆಗಳಲ್ಲಿ ಇಂದ್ರ, ಮರುದ್ದೇವತೆಗಳು ಮತ್ತು ವಿಷ್ಣು ಇವರುಗಳೆಲ್ಲರ ಸಾಹಚರ್ಯವೂ ಪ್ರಸಿದ್ಧವಾಗಿದೆ. ಉದಾಹರಣೆಗೆ—

**ಏತಾ ಅಗ್ನ ಆಶುಷಾಣಾಸ ಇಷ್ಟೀರ್ಯುವೋಃ ಸಚಾಭ್ಯಶ್ಯಾಮ ವಾಜಾನ್ ।**
**ಮೇಂದ್ರೋ ನೋ ವಿಷ್ಣುರ್ಮರುತಃ ಪರಿ ಖ್ಯನ್ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**
(ಋ. ಸಂ. ೭. ೯೩. ೮.)

ಎಂಬಲ್ಲಿ ಇಂದ್ರ ಮತ್ತು ಮರುತ್ತುಗಳು ವಿಷ್ಣುವಿನೊಡನೆ ಪ್ರಾರ್ಥಿತರಾಗಿದ್ದಾರೆ. ಇದಲ್ಲದೆ **ಮಾರುತ**ವೆಂಬ ಪದವು ವಿಷ್ಣುವಿಗೆ ವಿಶೇಷಣವಾಗಿರುವುದೆಂದು ಕೆಲವೆಡೆಗಳಲ್ಲಿ ಸೂಚಿತವಾಗಿದೆ. ಉದಾಹರಣೆಗೆ—

**ಅಗ್ನ ಇಂದ್ರ ವರುಣ ಮಿತ್ರ ದೇವಾಃ ಶರ್ಧಃ ಪ್ರ ಯಂತ ಮಾರುತೋತ ವಿಷ್ಣೋ ।**
**ಉಭಾ ನಾಸತ್ಯಾ ರುದ್ರೋ ಅಧ ಗ್ನಾಃ ಪೂಷಾ ಭಗಃ ಸರಸ್ವತೀ ಜುಷಂತ ॥**
(ಋ. ಸಂ. ೫-೪೬-೨)

**ತಮಸ್ಯ ರಾಜಾ ವರುಣಸ್ತಮಶ್ವಿನಾ ಕ್ರತುಂ ಸಚಂತ ಮಾರುತಸ್ಯ ವೇಧಸಃ ॥**
(ಋ. ಸಂ ೧-೧೫೬-೪)

ಇತ್ಯಾದಿ ಸ್ಥಳಗಳಲ್ಲಿ **ಮಾರುತ ಮಾರುತಸ್ಯ** ಎಂಬ ಪದಗಳು ವಿಷ್ಣುವಿಗೆ ವಿಶೇಷಣವೆಂದು ಕೆಲವರ ಮತ. ಇದನ್ನೇ ವಿವರಿಸುತ್ತಾ Max Muller ಎಂಬ ಪಂಡಿತನು ಹೀಗೆ ಹೇಳಿದ್ದಾನೆ.

Vishnu, whose character in the hymns of the Veda is very different from that assumed by him in later periods of Hindu religion, must be taken here as the friend and companion of Indra. Like Maruts, he assisted Indra in his battle against Vritra and the conquest of the clouds. When Indra was forsaken by all the Gods, Vishnu came to his help.

In VII. 68. 8. Indra, Vishnu and Maruts are called upon to-gether Nay, **ಮಾರುತ,** belonging to the **Maruts** becoms actually an epithet of Vishnu. (V. 46. 2.) and in I 156. 4, **ಮಾರುತಸ್ಯ** has been pointed out by Roth as an appellation of Vishnu.

(S. B. E. Vol. XXXII. P. 134)

ಆದರೆ ಕೆಲವರ ಮತದಲ್ಲಿ ಮಾತ್ರ ಈ ಪದಗಳು ವಿಷ್ಣುವಿಗೆ ವಿಶೇಷಣವಾಗಿವೆ. ಸಾಯಣರು ಈ ಅಭಿಪ್ರಾಯವನ್ನು ಹೇಳಿಲ್ಲ. ಪ್ರಕೃತವಾದ ಋಕ್ಕಿನಲ್ಲಿ **ಮಘವಾ** ಎಂಬ ಪದವನ್ನು ಮಾತ್ರ ಧನವಂತನಾದ ಇಂದ್ರನೆಂದಾಗಲಿ ಅಥವಾ ವಿಷ್ಣುವಿನೊಡಗೂಡಿದ ಇಂದ್ರನೆಂದಾಗಲಿ ಅರ್ಥಮಾಡಬಹುದು.

ಈ ಇಂದ್ರನು (ಯಜಮಾನರಿಂದ ಸ್ತುತನಾಗಿ) ಯಜಮಾನರು ಪಠಿಸುವ ಸ್ತುತಿಗಳನ್ನು ಕೇಳಿ, ತನ್ನನ್ನು ಸ್ತುತಿಮಾಡಿದ ಯಜಮಾನರಿಗೆ **ಸುಖಸ್ಯ ಭಾವಯಿತೃತಮಃ** ಸುಖವು ಉಂಟಾಗಲಿ ಎಂದು ಬಹಳವಾಗಿ ಹರಸುತ್ತಾ **ಅಸ್ಮಾನ್ ಮೃಳಯತು**=ಯಜ್ಞಮಾಡುವ ನಮ್ಮನ್ನು ಸುಖದಿಂದ ಇರುವಂತೆ ಮಾಡಲಿ ಎಂದು ಪ್ರಾರ್ಥಿಸಿದೆ.

**ಜಿಗೀಷಾ—ಜಿಗೀಷಿತವ್ಯಾನಿ ಪ್ರಾಪ್ತವ್ಯಾನಿ ಉತ್ತರತ್ರಾನುಭೂಯಮಾನಾನಿ**—ಯಜಮಾನರಿಂದ ಹೊಂದಲ್ಪಡುವುವುಗಳೂ, ಅನುಭವಿಸಲು ಸಿದ್ಧವಾದವುಗಳೂ, ಅಥವಾ ಮುಂದೆ ಕಳೆಯುವುವುಗಳೂ ಆಗಿರುವ **ವಿಶ್ವಾ**

**ಅಹಾನಿ** ದಿನಗಳು ಎಲ್ಲವೂ **ಊರ್ಧ್ವಾ ಸಂತು ಯಶಸಾ ಶ್ರೀಯಾ ವಾ ಉನ್ನತಾನಿ ಉತ್ಕೃಷ್ಟಾನಿ**—ಯಶಸ್ಸಿನಿಂದಲೂ, ಐಶ್ವರ್ಯದಿಂದಲೂ ಒಂದಕ್ಕಿಂತ ಒಂದು ಉತ್ಕೃಷ್ಟವಾಗಿರಲಿ ಎಂದು ಆಶಿಸಿದೆ.

**ಕ್ಯೋವಯಾ** ಎಂಬ ಪದಕ್ಕೆ **ಕಾಮ್ಯಾನಿ, ಸ್ಪೃಹಣೀಯಾನಿ**—ಮುಂದೆ ಅನುಭವಿಸುವ ದಿನಗಳಲ್ಲಿ ನಮ್ಮ ಇಷ್ಟಾರ್ಥಗಳೆಲ್ಲವೂ ನೆರವೇರುವುದರಿಂದ ಶ್ಲಾಘ್ಯಗಳಾಗಿಯೂ, **ವನಾನಿ**—ಸರ್ವರಿಂದಲೂ ಹೊಂದತಕ್ಕವುಗಳಾಗಿಯೂ ಇರಲಿ ಎಂದು ಆಶಿಸಿದೆ.

**ವನ** ಶಬ್ದವನ್ನು **ರಶ್ಮಿ** (ಕಿರಣ) ನಾಮಗಳಲ್ಲಿಯೂ (ನಿ ೨-೧೫) **ಉದಕ** ನಾಮಗಳಲ್ಲಿಯೂ (ನಿ. ೨-೨೩) ಪಠಿಸಿದೆ. ಇವುಗಳ ಜೊತೆಗೆ ಇನ್ನೂ ಅನೇಕ ಅರ್ಥಗಳಲ್ಲಿಯೂ ಈ ಪದವನ್ನು ಋಕ್ಸಂಹಿತೆಯಲ್ಲಿ ಪ್ರಯೋಗಿಸಿದೆ. **ವನ ಸಂಭಕ್ತೌ** । ಅತ್ಯುತ್ಕಟವಾದ ಇಚ್ಛೆ, ಆಕಾಂಕ್ಷೆಯೆಂಬರ್ಥವನ್ನು ಕೊಡುವ **ವನ್** ಧಾತುವಿನಿಂದಾಗಲಿ, ಅಥವಾ **ವನು ಯಾಚನೇ** ಯಾಚಿಸು, ಪ್ರಾರ್ಥಿಸು ಎಂಬರ್ಥವನ್ನು ಕೊಡುವ **ವನ್** ಧಾತುವಿನಿಂದಾಗಲಿ **ವನಾನಿ, ವನಾಮಹೇ, ವನೇಮ** ಇತ್ಯಾದಿ ನಾಮಗಳೂ, ಕ್ರಿಯಾಪದಗಳೂ ನಿಷ್ಪನ್ನವಾಗಿ ಪ್ರಯೋಗಿಸಲ್ಪಟ್ಟಿರುವುದರಿಂದ ಈ ಅರ್ಥವ್ಯತ್ಯಾಸಗಳನ್ನು ತಿಳಿಯಲು ಕೆಲವು ಉದಾಹರಣೆಗಳನ್ನು ಕೊಡಬಹುದು. ನಾಮಪದಗಳ ಅಥವಾ ವಿಶೇಷಣ ಪದಗಳ ಪ್ರಯೋಗಗಳಲ್ಲಿ,

**ವೃಷಂ ಪಾವಕಂ ವನಿನಂ ವಿಚರ್ಷಣಿಂ ರುದ್ರಸ್ಯ ಸೂನುಂ ಹವಸಾ ಗೃಣೀಮಸಿ ।**

(ಋ. ಸಂ. ೧-೬೪-೧೨)

ಎಂಬಲ್ಲಿ **ವನವಂತಂ, ಉದಕವಂತಂ** ಎಂದು **ವನ** ಶಬ್ದಕ್ಕೆ ಉದಕವೆಂದೂ,

**ವನಾನಿ ವಿಭ್ವೋ ನಕಿರಸ್ಯ ತಾನಿ ವ್ರತಾ ದೇವಸ್ಯ ಸವಿತುರ್ಮಿನಂತಿ ।**

(ಋ. ಸಂ. ೨-೩೮-೭)

ಇತ್ಯಾದಿ ಋಕ್ಕುಗಳಲ್ಲಿ **ವನಾನಿ** ಎಂದರೆ ವೃಕ್ಷಗಳೆಂದೂ,

**ಪಾರಾವತಸ್ಯ ರಾತಿಷು ದ್ರವಚ್ಚಕ್ರೇಷ್ವಾಶುಷು ।**
**ತಿಷ್ಠಂ ವನಸ್ಯ ಮಧ್ಯ ಆ ॥**

(ಋ. ಸಂ. ೮-೩೪-೧೮)

ಎಂಬಲ್ಲಿ ರಥದ ಒಂದು ಭಾಗವೆಂದೂ ಅರ್ಥವಾಗುತ್ತದೆ. ಹೀಗೆಯೇ ಕ್ರಿಯಾಪದ ಪ್ರಯೋಗಗಳನ್ನೂ ನೋಡಿದರೆ, ನಿರುಕ್ತದಲ್ಲಿ ಉದಾಹೃತವಾಗಿರುವ (ನಿ. ೫-೨)

**ತ್ವಯಾ ವಯಂ ಮಘವನ್ಪೂರ್ವ್ಯೇ ಧನ ಇಂದ್ರತ್ವೋತಾಃ ಸಾಸಹ್ಯಾಮ ಪೃತನ್ಯತೋ ವನುಯಾಮ ವನುಷ್ಯತಃ ॥**

(ಋ. ಸಂ. ೧-೧೩೨-೧)

ಮತ್ತು,

**ಅಸ್ಮಾಕೇಭಿರ್ನೃಭಿರ್ವಯಂ ಸಾಸಹ್ಯಾಮ ಪೃತನ್ಯತೋ ವನುಯಾಮ ವನುಷ್ಯತೋ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೦-೭)

ಎಂಬ ಋಕ್ಕುಗಳಲ್ಲಿ ಕೊಲ್ಲು ಎಂಬರ್ಥವೂ,

**ಕುವಿದ್ದೇವಸ್ಯ ಸಹಸಾ ಚಕಾನಃ ಸುಮ್ನಮಗ್ನಿ ರ್ವನತೇ ವಾವೃಧಾನಃ ।**

(ಋ. ಸಂ. ೫-೩-೧೦)

ಎಂಬಲ್ಲಿ **ಪ್ರಯಚ್ಛತಿ** ಕೊಡುತ್ತಾನೆ ಎಂಬರ್ಥವೂ,

**ವನೇಮ ಪೂರ್ವೀರರ್ಯೋ ಮನೀಷಾ ಅಗ್ನಿಃ ಸುಶೋಕೋ ವಿಶ್ವಾನ್ಯಶ್ಯಾಃ ।**

(ಋ. ಸಂ. ೧-೭೦-೧)

ಇತ್ಯಾದಿ ಕಡೆಗಳಲ್ಲಿ **ವನೇಮ** ಎಂದರೆ ಪೂಜ್ಯಭಾವದಿಂದ ಸೇವಿಸೋಣ ಎಂತಲೂ,

**ಪ್ರಿಯಾಁ ಅಪಿಧೀರ್ವನಿಷೀಷ್ಟ ಮೇಧಿರ ಆ ವನಷೀಷ್ಟ ಮೇಧಿರಃ ।**

(ಋ. ಸಂ. ೧-೧೨೭-೭)

ಎಂಬಲ್ಲಿ ಪ್ರೀತಿಯಿಂದ ಸ್ವೀಕರಿಸಿ ಸೇವಿಸಲಿ ಎಂದೂ ಹೀಗೆಯೇ ಇನ್ನೂ ಕೆಲವು ಅರ್ಥಗಳೂ ಇರುತ್ತವೆ. ಹೀಗೆ ಅನೇಕಾರ್ಥಗಳು ಸಾಧ್ಯವಾಗುವುದರಿಂದ ಪ್ರಕೃತವಾದ ಈ ಋಕ್ಕಿನಲ್ಲಿ **ವನಾನಿ** ಎಂಬುದಕ್ಕೆ **ಸಂಭಜನೀಯಾನಿ** ಎಂದರ್ಥವನ್ನೂ ಹೇಳಬಹುದು.

ಎರಡನೆಯ ಅರ್ಥದಲ್ಲಿ **ವಿಶ್ವಾ ಅಹಾನಿ ಸರ್ವಾಣಿ ದಿವಸಾನಿ ಜಿಗೀಷಾ ಸಂತು—ಜೇತುಮಿಷ್ಟಾನಿ ಜೇತವ್ಯಾನಿ ಚ ಸಂತು**—ಯಜಮಾನರು ಅನುಭವಿಸಬೇಕಾದ ದಿವಸಗಳು ಎಲ್ಲವೂ ಅವರಿಗೆ ಜಯಪ್ರದವಾಗಿರಲಿ ಎಂದು ಅರ್ಥವನ್ನು ವರ್ಣಿಸಿದೆ. ಇಂದ್ರನೂ ಮರುದ್ದೇವತೆಗಳೂ ಕೂಡ ಯಜಮಾನರ ವಿಷಯದಲ್ಲಿ ಈ ರೀತಿಯಾಗಿ ಇರುವ ಅನುಗ್ರಹವನ್ನು ಮಾಡಿ ಅವರನ್ನು ಸುಖದಿಂದ ಇರಿಸಲಿ ಎಂದು ಮುಖ್ಯಾಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಸ್ತುತಾಸಃ**—ಷ್ಟುಞ್ ಸ್ತುತೌ. ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ.

**ಮೃಳಯಂತು**—ಮೃಡ ಸುಖನೇ. ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಶಂಭವಿಷ್ಠಃ**—ಶಂ ಭಾವಯಿತಾ. ಶಂಭವಿತೃ ಎಂಬ ತೃಜಂತದ ಮೇಲೆ **ತುಶ್ಛಂದಸಿ** ಎಂಬುದರಿಂದ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಃಸು** ಎಂಬುದರಿಂದ ಇದು ಪರವಾದಾಗ ತೃಚಿಗೆ ಲೋಪ. **ಓರ್ಗುಣಃ** (ಪಾ. ಸೂ. ೬-೪-೧೪೬) ಎಂಬುದರಿಂದ ಉಕಾರಕ್ಕೆ ಗುಣ. ಅವಾದೇಶ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಊರ್ಧ್ವಾ**—ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಕೋಮ್ಯಾ, ವಿಶ್ವಾ, ಎಂಬಲ್ಲಿಯೂ ಹೀಗೆ ಶಿಗೆ ಲುಕ್.

**ಕೋಮ್ಯಾ**—ಕಮು ಕಾಂತೌ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಸೂತ್ರದಿಂದ ಣ್ಯತ್ ಪ್ರತ್ಯಯ. ಆದಿವೃದ್ಧಿ ಬಂದಾಗ ಛಾಂದಸವಾಗಿ ಓತ್ವ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಜಿಗೀಷಾ**—ಗಾ ಸ್ತುತೌ. ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇಚ್ಛಾರ್ಥದಲ್ಲಿ **ಧಾತೋಃ ಕರ್ಮಣಃ**—(ಪಾ. ಸೂ. ೩-೧-೭) ಎಂಬುದರಿಂದ ಸನ್. ವ್ಯತ್ಯಯದಿಂದ ಈತ್ವ. ಅಥವಾ ಜಿ ಜಯೇ. ಧಾತು. ಸನ್ ಪರವಾದಾಗ **ಅಜ್ಝನಗಮಾಂ ಸನಿ** (ಪಾ. ಸೂ. ೬-೪-೧೬) ಎಂಬುದರಿಂದ ದೀರ್ಘ. ಸನ್ನಂತದ ಮೇಲೆ ಅಚ್ ಪ್ರತ್ಯಯ. ನಪುಂಸಕದಲ್ಲಿ ಹಿಂದಿನಂತೆ ಶಿ ಆದೇಶ ಬಂದು ರೂಪವಾದಾಗ ಅದಕ್ಕೆ ಲೋಪ. ‖ ೩ ‖



‖ ಸಂಹಿತಾಪಾಠಃ ‖

**ಅಸ್ಮಾದಹಂ ತವಿಷಾದೀಷಮಾಣ ಇಂದ್ರಾದ್ಭಿಯಾ ಮರುತೋ ರೇಜಮಾನಃ ।**
**ಯುಷ್ಮಭ್ಯಂ ಹವ್ಯಾ ನಿಶಿತಾನ್ಯಾಸನ್ತಾನ್ಯಾರೇ ಚಕೃಮಾ ಮೃಳತಾ ನಃ ‖**

‖ ಪದಪಾಠಃ ‖

**ಅಸ್ಮಾತ್ । ಅಹಂ । ತವಿಷಾತ್ । ಈಷಮಾಣಃ । ಇಂದ್ರಾತ್ । ಭಿಯಾ । ಮರುತಃ । ರೇಜಮಾನಃ ।**
**ಯುಷ್ಮಭ್ಯಂ । ಹವ್ಯಾ । ನಿಽಶಿತಾನಿ । ಆಸನ್ । ತಾನಿ । ಆರೇ । ಚಕೃಮ । ಮೃಳತ । ನಃ ‖ ೪ ‖**

‖ ಸಾಯಣಭಾಷ್ಯಂ ‖

**ಹೇ ಮರುತಃ ಶೃಣುತ । ಅಹಮಸ್ಮಾತ್ಪ್ರಸಿದ್ಧಾತ್ತವಿಷಾದ್ಬಲವತ ಇಂದ್ರಾತ್ತತ್ಸಕಾಶಾದ್ಭಿಯಾ ಭೀತ್ಯೇಷಮಾಣಃ ಪಲಾಯಮಾನಃ ಪುರತಃ ಸ್ಥಾತುಮಶಕ್ತಃ ತಥಾ ರೇಜಮಾನೋ ವೇಪಮಾನಶ್ಚಾಭವಂ । ತತಶ್ಚ ಕಿಮಾಯಾತಮಿತಿ ಅತ ಆಹ । ಯಾನಿ ಯುಷ್ಮಭ್ಯಂ ಹವ್ಯಾ ಹವೀಂಷಿ ನಿಶಿತಾನಿ ಸಂಸ್ಕೃತಾನ್ಯಾಸನ್ ತಾನಿ ತಾನ್ಯೇವಾರೇ ಚಕೃಮ । ದೂರೇ ಕೃತವಂತೋ ವಯಮಿಂದ್ರಭಯಾತ್। ಅತೋ ನೋಽಸ್ಮಾನನಪರಾಧಿನೋ ಮೃಳತ । ಮೃಳಯತ । ಸುಖಯತ ‖**

‖ ಪ್ರತಿಪದಾರ್ಥ ‖

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ.। **ಅಹಂ**—ನಾನು । **ಅಸ್ಮಾತ್**—ಈ ಪ್ರಸಿದ್ಧನಾದ (ಮತ್ತು) । **ತವಿಷಾತ್**—ಬಲಿಷ್ಠನಾದ । **ಇಂದ್ರಾತ್**—ಇಂದ್ರನಿಂದ (ಇಂದ್ರನ ಸಮೀಪದಿಂದ) । **ಭಿಯಾ**—ಭಯದಿಂದ । **ಈಷಮಾಣಃ**—(ಅವನೆದುರಿಗೆ ನಿಲ್ಲಲು ಅಸಮರ್ಥನಾಗಿ) ಓಡುತ್ತಾ । **ರೇಜಮಾನಃ**—ನಡುಗುತ್ತಾ (ಇದ್ದೇನೆ); । **(ಯಾನಿ**—ಯಾವ) । **ಹವ್ಯಾ**—ಹವಿಸ್ಸುಗಳು । **ಯುಷ್ಮಭ್ಯಂ**—ನಿಮಗೋಸ್ಕರ । **ನಿಶಿತಾನಿ**--ಸಂಸ್ಕೃತವಾಗಿ । **ಆಸನ್**—ಇದ್ದುವೋ, । **ತಾನಿ**—ಅವುಗಳನ್ನು । **ಆರೇ**--ದೂರದಲ್ಲಿ । **ಚಕೃಮ**—(ಇಂದ್ರನ ಭಯದಿಂದ) ಇಟ್ಟಿದ್ದೇವೆ; । (ಆದುದರಿಂದ) । **ನಃ**— (ಅಪರಾಧಿಗಳಲ್ಲದ) ನಮ್ಮನ್ನು । **ಮೃಳತ** – ಸುಖಿಗಳನ್ನಾಗಿ ಮಾಡಿ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಬಲಿಷ್ಠನಾದ ಈ ಇಂದ್ರನ ಭಯದಿಂದ (ಅವನೆದುರಿಗೆ ನಿಲ್ಲಲಾರದೆ) ನಡುಗುತ್ತಾ, ಓಡುತ್ತಿದ್ದೇನೆ; ಅವನ ಭಯದಿಂದಲೇ, ನಿಮಗೋಸ್ಕರ ಸಿದ್ಧಪಡಿಸಿಟ್ಟಿದ್ದ ಹವಿಸ್ಸನ್ನು ದೂರ ತೆಗೆದಿಟ್ಟಿದ್ದೇನೆ. ಆದುದರಿಂದ, ಅಪರಾಧಿಯಲ್ಲದ ನನ್ನನ್ನು ಸುಖಿಯಾಗಿ ಮಾಡಿ.

## English Translation

Maruts, through fear of that violent Indra, I fly, trembling, (from his presence) : the oblations that had been prepared for you have been put away : nevertheless, have patience with us.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗಸ್ತ್ಯ ಋಷಿಯು ಇಂದ್ರನಿಂದ ಭೀತನಾದುದೂ ತನ್ನ ಭಯದ ನಿವಾರಣೆಗಾಗಿ ಪ್ರಯತ್ನಿಸಿ ಮರುತ್ತುಗಳನ್ನು ಪ್ರಾರ್ಥಿಸುವುದೂ ತಿಳಿಸಿದೆ. ಈ ಸಂದರ್ಭವು ಸಮಸ್ಯಾತ್ಮಕವಾದುದು. ಇಂದ್ರನಿಗೂ ಮರುತ್ತುಗಳಿಗೂ ಇರುವ ಸಾಹಚರ್ಯವೂ ಸೌಹಾರ್ದವೂ ಶ್ರುತಿಪ್ರಸಿದ್ಧವಾಗಿದೆ. ಆದರೂ ಸಹ ಇಂದ್ರನು ಮರುತ್ತುಗಳೊಂದಿಗೆ ತನ್ನ ಪರಾಕ್ರಮವನ್ನು ಪ್ರಕಟಿಸಿ ಅವರಿಂದ ತನಗೇನೂ ಸಹಾಯವೇ ಆಗಲಿಲ್ಲವೆಂದೂ ಅವರಿಂದ ತಾನು ಉಪಕೃತನಾಗಿಲ್ಲವೆಂದೂ ಸಹ ಸ್ಪಷ್ಟವಾಗಿ ಹೇಳಿಬಿಡುತ್ತಾನೆ. ಆ ಸಂದರ್ಭದಲ್ಲಿ ಅವನು ಕ್ರುದ್ಧನಾದುದರಿಂದ ಮರುತ್ತುಗಳಿಗೆ ಹವಿಸ್ಸನ್ನರ್ಪಿಸುತ್ತಿದ್ದ ಅಗಸ್ತ್ಯಋಷಿಯು ಭೀತಿಯಿಂದ ನಡಗುತ್ತಾನೆ. ಇಲ್ಲಿ ಆ ಭೀತಿಯನ್ನು ಸೂಚಿಸುತ್ತಾನೆ. ಪ್ರಕೃತದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ಇರುವ ಮೈತ್ರಿಯ ಸ್ವರೂಪವೇನು ? ಆದರೂ ಸಹ ಈ ವೈಷಮ್ಯಕ್ಕೆ ಕಾರಣವೇನು ಎಂಬುದನ್ನು ವಿಮರ್ಶಿಸಬೇಕು.

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವೂ, ಅವರವರಿಗೆ ಇರುವ ರಾಜ ಪ್ರಜಾ ಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡಿರುವುದೂ ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ಸ್ತುತಿಸಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿ ಇದ್ದುದನ್ನು ತಿಳಿಸುವ ಪೂರ್ವಕಥೆಯೊಂದನ್ನು ಶತಪಥ ಬ್ರಾಹ್ಮಣದಲ್ಲಿ ಹೇಳಿದೆ.

**ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮುದವಿಂದತ್ತೇ ಚತುರ್ಧಾವ್ಯದ್ರವನ್ನನ್ಯೋಽನ್ಯಸ್ಯ ಶ್ರಿಯಾ ತಿಷ್ಠಮಾನಾ ಅಗ್ನಿರ್ವಸುಭಿಃ ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೇದೇವೈಃ ।**

(ಶ. ಬ್ರಾ. ೩-೪-೨-೧)

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೋಲಲಿಷ್ಟಪಡದೇ ನಾಲ್ಕು ಗುಂಪು ಮಾಡಿಕೊಂಡು ಬೇರೆಬೇರೆಯಾದರು. ಅಗ್ನಿಯು ವಸುಗಳೊಂದಿಗೂ ಸೋಮನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ ಮತ್ತು ಬೃಹಸ್ಪತಿಯು

ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾದ ಗುಂಪುಮಾಡಿಕೊಂಡರು, ಎಂಬ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿದೆ. ಇದೂ ಅಲ್ಲದೇ, ಇಂದ್ರನೇ ದೊರೆಯೆಂದೂ, ಮರುತ್ತುಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ ಅದೇ ಶತಪಥಬ್ರಾಹ್ಮಣದಲ್ಲಿ

**ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।**

(ಶ. ಬ್ರಾ. ೪-೩-೩-೬)

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು. ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯನ್ನು ಪಡೆಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನೂ ಅರ್ಪಿಸುವ ಕ್ರಮವು ಶ್ರುತಿಗಳಲ್ಲಿ ಕಂಡುಬರುತ್ತದೆ. ಮತ್ತು

**ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ।**

(ಋ. ಸಂ. ೧-೧೭೧-೫)

ಎಂಬಿವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ ಮರುತ್ತಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಈರೀತಿಯಾದ ಸಾಹಚರ್ಯವನ್ನು ವರ್ಣಿಸಿ ಬೃಹದ್ದೇವತೆಯಲ್ಲಿ –

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।**

(ಬೃ ದೇ. ೪-೫೬)

ಇತ್ಯಾದಿ ವಾಕ್ಯಗಳಿಂದ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ. ಆದರೆ ಪ್ರಕೃತವಾದ ಸೂಕ್ತದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದದ ಫಲವಾಗಿ ಅವರವರ ವೈಷಮ್ಯವೂ ಇಂದ್ರನ ಕ್ರೋಧವೂ ಸೂಚಿತವಾಗಿದೆ. ಈ ಕ್ರೋಧಕ್ಕೆ ಮೂಲವಾದ ಅವರವರ ವಾಗ್ವಾದವನ್ನು ಹಿಂದೆ ಈ ರೀತಿ ತಿಳಿಸಿದೆ.

**ಕ್ವ೧ಸ್ಯಾ ವೋ ಮರುತಃ ಸ್ವಧಾಸೀದ್ಯನ್ಮಾಮೇಕಂ ಸಮಧತ್ತಾಹಿಹತ್ಯೇ ।**
**ಅಹಂ ಹ್ಯು೧ಗ್ರಸ್ತವಿಷಸ್ತುವಿಷ್ಮಾನ್ವಿಶ್ವಸ್ಯ ಶತ್ರೋರನಮಂ ವಧಸ್ನೈಃ ॥**

(ಋ. ಸಂ. ೧-೧೬೫-೬)

ಎಲೈ ಮರುತ್ತುಗಳೇ, ನಿಮ್ಮ ಸಹಾಯದಿಂದ ನಾನು ಅಹಿಹನನವನ್ನು ಮಾಡಿದೆನು ಎಂದು ಹೇಳುವುದು ಸುಳ್ಳು. ನಿಮಗೆ ಆ ಶಕ್ತಿಯು ತಾನೇ ಎಲ್ಲಿದ್ದಿತು ? ನನ್ನ ಶಕ್ತಿಯೇ ಅಸಾಧಾರಣವಾದುದರಿಂದ ಇತರ ಶಕ್ತಿಯ ಸಹಾಯವನ್ನು ಅಪೇಕ್ಷಿಸದೆ ವೃತ್ರಹನನಕಾಲದಲ್ಲಿ ಅದು ನನಗೆ ಸಹಾಯಮಾಡಿತು. ಕೇವಲ ನಾನು ಮಾತ್ರ ಭಯಂಕರನೂ, ಅದ್ಭುತವಾದ ಶಕ್ತಿಯುಳ್ಳವನೂ ಮಹತ್ತ್ವದಿಂದ ಕೂಡಿದವನೂ ಆಗಿದ್ದೇನೆ, ಎಂದು ಮರುತ್ತುಗಳನ್ನು ತಿರಸ್ಕೃತವಾದ ದೃಷ್ಟಿಯಿಂದ ಕಂಡು ತನ್ನ ಕ್ರೋಧವನ್ನು ಪ್ರಕಟಿಸುತ್ತಾನೆ. ಇಲ್ಲಿ ಆ ಕ್ರೋಧವು ಸೂಚಿತವಾಗಿದೆ. ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳ ಸಹಾಯವನ್ನು ಇಂದ್ರನು ಪಡೆದನೆಂಬುದು ಪ್ರಸಿದ್ಧವಾಗಿದೆ. ಆದರೂ ಸಹ ಮರುತ್ತುಗಳು ಆ ವಿಷಯವನ್ನು ತಿಳಿಸಿ ಆ ಸಹಾಯದ ಜ್ಞಾಪಕಾರ್ಥವಾಗಿ ಇಂದ್ರನಿಗೆ ಸೇರಬೇಕಾದ ಹವಿಸ್ಸಿನಲ್ಲಿ ತಮಗೂ ಭಾಗವನ್ನು ಕೊಡಬೇಕೆಂದು ಕೇಳಿದಾಗ ಇಂದ್ರನು ಮರುತ್ತುಗಳಿಂದ ಯಾವ ಸಹಾಯವೂ ಆಗಿಯೇ ಇಲ್ಲವೆಂದೂ, ತಾನು ತನ್ನ ಸ್ವಶಕ್ತಿಯಿಂದಲೇ ಸಕಲಶತ್ರುಗಳನ್ನೂ ಕೊಂದನೆಂದೂ ಹೇಳಿಕೊಳ್ಳುತ್ತಾನೆ.

ಇದೇ ವಿಷಯವನ್ನು ನಿರುಕ್ತಕಾರರು ತಿಳಿಸುತ್ತಾ ಈ ರೀತಿ ಹೇಳಿದ್ದಾರೆ.

**ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ । ಸ ಇಂದ್ರ ಏತ್ಯ ಪರಿದೇವಯಾಂಚಕ್ರೇ ।** (ನಿ. ೧-೫)

ಅಗಸ್ತ್ಯಮುನಿಯು ಇಂದ್ರನನ್ನುದ್ದೇಶಿಸಿ ಹವಿಸ್ಸನ್ನು ಸಿದ್ಧಪಡಿಸಿದಾಗ ಮರುತ್ತುಗಳಿಗೂ ಅದರಲ್ಲಿ ಭಾಗವನ್ನರ್ಪಿಸಲು ಅಪೇಕ್ಷಿಸಿದೊಡನೆಯೇ ಇಂದ್ರನು ಆ ವಿಷಯದಲ್ಲಿ ಆಕ್ಷೇಪಿಸಿದನು ಎಂದು ಸಂದರ್ಭವನ್ನು ತಿಳಿಸಿ ನಿರುಕ್ತಕಾರರು ಈ ಅಂಶವನ್ನು ತಿಳಿಸುವ

**ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।**
**ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿನಶ್ಯತಿ ॥**

(ಋ. ಸಂ. ೧-೧೭೦-೧)

ಎಂಬ ಋಕ್ಕನ್ನುದಹರಿಸಿದ್ದಾರೆ. ಆ ಕ್ರೋಧದ ವೇಗವು ಕಡಿಮೆಯಾಗಿ ತನಗೆ ಅದರಿಂದ ಬಾಧಕವಾಗದಿರಲೆಂದೂ ಮತ್ತು ಮರುತ್ತುಗಳಿಗೆ ನ್ಯಾಯವಾಗಿ ಸಲ್ಲಬೇಕಾದ ಹವಿರ್ಭಾಗವು ಅವರಿಗೆ ಸೇರಲೇಬೇಕೆಂಬ ಉದ್ದಿಶ್ಯದಿಂದೂ ಇಲ್ಲಿ ಮರುತ್ತುಗಳನ್ನುದ್ದೇಶಿಸಿ ಪ್ರಾರ್ಥಿಸಿದೆ. ಈ ವಿಧವಾದ ಸಾಂತ್ವನವಚನವಾದನಂತರ ಇಂದ್ರನ ಮೈತ್ರಿಯು ಹಿಂದಿನಂತೆಯೇ ಬೆಳೆದು ತನ್ನ ಹವಿಸ್ಸಿನ ಭಾಗವನ್ನು ಮರುತ್ತುಗಳಿಗೂ ತಾನೇ ಕೊಡುತ್ತಾನೆ ಇದೇ ವಿಷಯವನ್ನು ಎಂಟನೇ ಮಂಡಲದಲ್ಲಿ ಋಷಿಯು ಈ ರೀತಿ ಹೇಳಿ ಸ್ತುತಿಸಿದ್ದಾನೆ.

**ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।**
**ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸಿ ॥**

(ಋ. ಸಂ. ೮-೯೬-೭)

ಎಲೈ ಇಂದ್ರನೇ, ಮರುತ್ತುಗಳೊಡನಿರುವ ನಿನ್ನ ಸಖ್ಯವು ಪ್ರಸಿದ್ಧವಾದುದು. ಅವರಿಗೂ ನಿನ್ನ ಹವಿಸ್ಸಿನಲ್ಲಿ ಭಾಗವನ್ನು ಕೊಟ್ಟು ಅವರ ಸಹಾಯದಿಂದ ಶತ್ರುಗಳನ್ನೆಲ್ಲಾ ಜಯಿಸು ಎಂದು ಪ್ರಾರ್ಥಿಸಿದೆ.

**ಈಷಮಾಣಃ—ಈಷ** ಧಾತುವನ್ನು ಗತ್ಯರ್ಥದಲ್ಲೂ, ಹಿಂಸಾರ್ಥದಲ್ಲೂ ಅದರ್ಶನಾರ್ಥದಲ್ಲೂ ಪ್ರಯೋಗಿಸುವುದು ವಾಡಿಕೆಯಲ್ಲಿದ್ದರೂ ಋಕ್ಸಂಹಿತೆಯಲ್ಲಿ ಗತ್ಯರ್ಥದಲ್ಲಿ ಮಾತ್ರ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ಸಮ್ಯಕ್ಸ್ರವಂತಿ ಸರಿತೋ ನ ಧೇನಾ ಅಂತರ್ಹೃದಾ ಮನಸಾ ಪೂಯಮಾನಾಃ ।**
**ಏತೇ ಅರ್ಷನ್ತ್ಯೂರ್ಮಯೋ ಘೃತಸ್ಯ ಮೃಗಾ ಇವ ಕ್ಷಿಪಣೋರೀಷಮಾಣಾಃ ॥**

(ಋ. ಸಂ. ೪-೫೮-೬)

ಎಂಬ ಋಕ್ಕಿನಲ್ಲಿ ಈ ಪದದ ಅರ್ಥವು ವಿಶದವಾಗಿದೆ. ವ್ಯಾಧನಿಂದ ಬೆದರಿ ಮೃಗಗಳು ದೂರವಾಗಿ ಓಡಿಹೋಗಿ ಮರೆಸಿಕೊಳ್ಳುವಂತೆ ಎಂಬ ಉಪಮಾನದಿಂದ ಗತ್ಯರ್ಥವೂ ಅದರ್ಶನಾರ್ಥವೂ ಒಟ್ಟಿಗೆ ಸೂಚಿತವಾಗಿದೆ. ಅದರಂತೆಯೇ,

**ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।**

(ಋ. ಸ. ೮-೯೬-೭)

ಎಂಬ ಮೇಲೆ ಉದಾಹೃತವಾಗಿರುವ ಋಕ್ಕಿನಲ್ಲಿಯೂ ಸಹ ವೃತ್ರನಿಗೆ ಬೆದರಿ ಸಕಲ ದೇವತೆಗಳೂ ಓಡಿಹೋಗುವ ಅವಸ್ಥೆಯನ್ನು **ಈಷಮಾಣಾಃ** ಎಂಬ ಪದದಿಂದ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಇಂದ್ರನ ಕ್ರೋಧಕ್ಕೆ ಬೆದರಿ ಪಲಾಯನ ಮಾಡಿದ ಅಗಸ್ತ್ಯನ ಅವಸ್ಥೆಯನ್ನು ಋಷಿಯು ತಾನೇ ವರ್ಣಿಸಿಕೊಳ್ಳುತ್ತಾನೆ.

**ನಿಶಿತಾನಿ—ನಿಶಿತ** ಶಬ್ದವು ಹರಿತ, ತೀಕ್ಷ್ಣ ಎಂಬರ್ಥದಲ್ಲಿ ಪ್ರಯೋಗವಿರುವುದು ವಾಡಿಕೆಯಲ್ಲಿದೆ. ಕಠೋಪನಿಷತ್ತಿನಲ್ಲಿ,

**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂಪಥಸ್ತತ್ಕವಯೋ ವದಂತಿ ।**

(ಕಠ. ಉ. ೧-೩-೧೪)

ಎಂಬ ವಾಕ್ಯದಲ್ಲಿ ಕ್ಷುರದ (ಕ್ಷೌರಮಾಡುವ ಕತ್ತಿಯ) ತೈಕ್ಷ್ಣ್ಯವನ್ನು ವರ್ಣಿಸುವುದು ಪ್ರಸಿದ್ಧವಾಗಿದೆ. ಋಕ್ಸಂಹಿತೆಯಲ್ಲಿ ಪ್ರಾಯಶಃ ಈ ಪದವು ಸುಸಂಸ್ಕೃತವಾದುದು ಎಂಬರ್ಥದಲ್ಲೇ ಪ್ರಯೋಗಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಸಂಸ್ಕೃತವಾದ ಹವಿಸ್ಸುಗಳು ಎಂದು ಹವ್ಯಾ ಎಂಬುದಕ್ಕೆ ವಿಶೇಷಣವಾಗಿದೆ.

**ಅಹಂ ಅಸ್ಮಾತ್ ತವಿಷಾತ್ ಇಂದ್ರಾತ್ ಭಿಯಾ ಈಷಮಾಣಃ ರೇಜಮಾನಃ—ಪ್ರಸಿದ್ಧಾತ್ ಬಲವತಃ ಇಂದ್ರಾತ್ ಭೀತ್ಯಾ ಪಲಾಯಮಾನಃ ಪುರತಃ ಸ್ಥಾತುಮಶಕ್ತಃ ನೇಪಮಾನಶ್ಚಾಭವಂ ।** ಅಗಸ್ತ್ಯಋಷಿಯು ಶಕ್ತಿಯುಳ್ಳ ಇಂದ್ರನಿಂದ ಹೆದರಿ, ಅವನ ಎದುರಿಗೆ ನಿಲ್ಲುವುದಕ್ಕೂ ಶಕ್ತಿಯಿಲ್ಲದವನಾಗಿ ನಡುಗುತ್ತಿದ್ದನು ಎಂದು ಇಲ್ಲಿ ಅರ್ಥವು ವರ್ಣಿತವಾಗಿದೆ. ಮಂತ್ರದ್ರಷ್ಟೃವಾದ ಅಗಸ್ತ್ಯಋಷಿಯು ತಾನಾಗಿ ಇಂದ್ರನ ವಿಷಯದಲ್ಲಿ ಅತಿಕ್ರಮಿಸಿ ನಡೆದಿರುವುದೂ, ಅದಕ್ಕಾಗಿ ಪಶ್ಚಾತ್ತಾಪವೂ, ೧-೧೭೧-೧ ನೇ ಋಕ್ಕಿನಲ್ಲಿ ಉಕ್ತವಾಗಿದೆ. ಇಂದ್ರನು ಅಗಸ್ತ್ಯಋಷಿಯ ಸಂಗಡ ತನ್ನ ವಿಷಯದಲ್ಲಿ ಅತಿಕ್ರಮಾಚರಣೆಯನ್ನು ವ್ಯಕ್ತಗೊಳಿಸಿದುದಕ್ಕಾಗಿ ಅಗಸ್ತ್ಯಋಷಿಯು ಇಂದ್ರನ ಸಂಗಡ ನಡೆಸಿದ ಸಂಭಾಷಣೆಯು ೧-೧೭೧-೨ ನೆಯ ಋಕ್ಕಿನಲ್ಲಿ ಉಕ್ತವಾಗಿದೆ. ಪುನಃ ಅಗಸ್ತ್ಯಋಷಿಯ (ವಾಕ್ಯವನ್ನು) ಉತ್ತರವನ್ನು ಕೇಳಿದ ಇಂದ್ರನು ಋತ್ವಿಜರೊಡನೆಯೂ ಅಗಸ್ತ್ಯಋಷಿಯೊಡನೆಯೂ ತನ್ನ ಹವಿರ್ಭಾಗವನ್ನು ಹೊಂದುವುದಕ್ಕಾಗಿ ಸಂಭಾಷಣೆ ಮಾಡಿರುವುದು ೧-೧೭೧-೩ ನೆಯ ಋಕ್ಕಿನಲ್ಲಿ ಉಕ್ತವಾಗಿದೆ. ಈ ವಿಷಯದಲ್ಲಿ ಇಂದ್ರನಿಂದ ತನಗಾಗಿರುವ ಪರಾಭವವನ್ನು ಅಗಸ್ತ್ಯಋಷಿಯು ಮರುತ್ತುಗಳನ್ನು ಸಂಬೋಧಿಸಿ ಇಲ್ಲಿ ಹೇಳಿರುವನು ಎಂದು ಕಥಾ ಸಂಧರ್ಭವು ಇಲ್ಲಿ ಸೂಚಿತವಾಗಿದೆ.

**ಯುಷ್ಮಭ್ಯಂ ಹವ್ಯಾ ನಿಶಿತಾನಿ ತಾನಿ ಆರೆ ಚಕೃಮ ।** ಮರುದ್ದೇವತೆಗಳನ್ನು ಸಂಬೋಧಿಸಿ ನಿಮಗಾಗಿ **ಯುಷ್ಮಭ್ಯಂ ಸಂಸ್ಕೃತಾನಿ ಹವೀಂಷಿ ದೂರೆ ಕೃತವಂತೋ ವಯಂ ಇಂದ್ರಭಯಾತ್ ।** ಸಿದ್ಧಮಾಡಿರುವ ಹವಿಸ್ಸುಗಳನ್ನೂ ಇಂದ್ರನ ಭಯದಿಂದ ನಾವು ದೂರದಲ್ಲಿಯೇ ತ್ಯಾಗಮಾಡಿದೆವು ಎಂದು ತಮ್ಮ ಅಪರಾಧವನ್ನು ವ್ಯಕ್ತಗೊಳಿಸಿ, **ನಃ ಮೃಳತ ಅತಃ ಅಪರಾಧಿನಃ ಅಸ್ಮಾನ್ ಸುಖಯತ** ಈ ಕಾರಣದಿಂದ ನಿಮ್ಮ ವಿಷಯದಲ್ಲಿ ಅಪರಾಧಿಗಳಾದ (ನಿಮ್ಮನ್ನು ತಿರಸ್ಕರಿಸಿದ ತಪ್ಪನ್ನು ಅಥವಾ ನಿಮ್ಮ ತಿರಸ್ಕಾರ ರೂಪವಾದ ಅಪರಾಧವನ್ನು ಆಚರಿಸಿದ) ನಮ್ಮ ಅಪರಾಧವನ್ನು ಮರುದ್ದೇವತೆಗಳು ಮನ್ನಿಸಿ ನಮ್ಮನ್ನು ಸುಖದಿಂದ ಇರಿಸಲಿ ಎಂದು ಮಂತ್ರದ್ರಷ್ಟೃವಾದ ಅಗಸ್ತ್ಯಋಷಿಯ ಪ್ರಾರ್ಥನೆಯು ಇಲ್ಲಿ ವಿವೃತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ತವಿಷಾತ್**—ತವ ಎಂಬುದು ಸೌತ್ರಧಾತು. ಇದಕ್ಕೆ **ತವೇರ್ಣಿದ್ವಾ** (ಉ. ಸೂ. ೪೮) ಎಂಬುದರಿಂದ ಟಿಷಚ್ ಪ್ರತ್ಯಯ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಈಷಮಾಣಃ**—ಈಷ ಗತಿಹಿಂಸಾದರ್ಶನೇಷು. ಲಟಿಗೆ ಶಾನಚಾದೇಶ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಭಿಯಾ**—ಞಿಭೀ ಭಯೇ. ಧಾತು. ಕ್ವಿಪ್ ಪ್ರತ್ಯಯ. ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರೇಜಮಾನಃ**—ರೇಜೃ ಕಂಪನೇ. ಧಾತು. ಲಟಿಗೆ ಶಾನಚ್. ಹಿಂದಿನಂತೆ ಮುಕಾಗಮ ಸ್ವರ ಬರುತ್ತದೆ.

**ನಿಶಿತಾನಿ**—ಶೋ ತನೂಕರಣೇ. ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. **ಶಾಚ್ಛೋರನ್ಯತರಸ್ಯಾಮ್** (ಪಾ. ಸೂ. ೭-೪-೪೧) ಎಂಬುದರಿಂದ ಧಾತುವಿಗೆ ಇಕಾರಾಂತಾದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಉದಾತ್ತಸ್ವರ ಬರುತ್ತದೆ.

**ಚಕ್ರಮ**—ಡುಕೃಞ್ ಕರಣೇ. ಧಾತು. ಲಿಟ್ ಉತ್ತಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮೃಳತ**—ಮೃಡ ಸುಖನೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಯೇನ ಮಾನಾಸಶ್ಚಿತಯಂತ ಉಸ್ರಾ ವ್ಯುಷ್ಟಿಷು ಶವಸಾ ಶಶ್ವತೀನಾಂ ।
ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ॥

॥ ಪದಪಾಠಃ ॥

ಯೇನ । ಮಾನಾಸಃ । ಚಿತಯಂತೇ । ಉಸ್ರಾಃ । ವಿಽಉಷ್ಟಿಷು । ಶವಸಾ । ಶಶ್ವತೀನಾಂ ।
ಸಃ । ನಃ । ಮರುತ್ಽಭಿಃ । ವೃಷಭ । ಶ್ರವಃ । ಧಾಃ । ಉಗ್ರಃ । ಉಗ್ರೇಭಿಃ । ಸ್ಥವಿರಃ । ಸಹಃಽದಾಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯೇನ ಶವಸಾ ಬಲಭೂತೇನ ತ್ವಯಾನುಗೃಹೀತಾ ಮಾನಾಸೋ ಮಾನ್ಯಾಸ್ತ್ವಯಾಭಿಮಾನಿತಾ ವೋಸ್ರಾ ರಶ್ಮಯಃ ಶಶ್ವತೀನಾಂ ನಿತ್ಯಾನಾಂ ಬಹ್ವೀನಾಮುಷಸಾಂ ವ್ಯುಷ್ಟಿಷು ಸತೀಷು ಪ್ರಕಾಶೇಷು ಸತ್ಸು ಚಿತಯಂತೇ ಚೇತಯಂತೇ ಪ್ರಾಣಿನಾಂ ಸ್ವಸ್ವವ್ಯವಹಾರಾಯ ಪ್ರಜ್ಞಾಪಯಂತಿ । ಐಂದ್ರ್ಯಾಂ ದಿಶಿ ತೇನೈವಾನುಗೃಹೀತಾ ಉಷಸೋ ರಶ್ಮಯ ಉದ್ಗಚ್ಛಂತೀತಿ ಪ್ರಸಿದ್ಧಂ । ಹೇ ವೃಷಭ ವರ್ಷಿತರಿಂದ್ರ ಸ ತಾದೃಶಸ್ತ್ವಂ ಮರುದ್ಭಿಃ ಸಹಿತಃ ಶ್ರವೋ ಧಾಃ । ಸರ್ವತ್ರ ಶ್ರೂಯಮಾಣಮನ್ನಂ ಧೇಹಿ । ಸ್ಥಾಪಯ । ದೇಹೀತ್ಯರ್ಥಃ । ಕೀದೃಶಸ್ತ್ವಂ । ಉಗ್ರ ಉದ್ಗೂರ್ಣಬಲಃ ಸಹೋದಾಃ । ಪರಾಭಿಭವಸಾಮರ್ಥ್ಯಂ ಬಲಂ ಸಹಃ । ತಸ್ಯ ದಾತಾ ಸ್ಥವಿರಃ ಪುರಾತನಃ । ಕೀದೃಶೈರ್ಮರುದ್ಭಿಃ । ಉಗ್ರೇಭಿಃ ಕ್ರೂರಬಲೈಃ । ಏವಂ ಮಹಾನುಭಾವೋಽನ್ನಂ ದೇಹಿ ॥

॥ ಪ್ರತಿಪದಾರ್ಥ ॥

**ಹೇ ಇಂದ್ರ**—ಎಲೈ ಇಂದ್ರನೇ । **ಮಾನಾಸಃ**—ಮಾನ್ಯಗಳಾದ (ನಿನ್ನ ಅಭಿಮಾನಪಾತ್ರವಾದ) । **ಉಸ್ರಾಃ**—ರಶ್ಮಿಗಳು । **ಶಶ್ವತೀನಾಂ**—ನಿತ್ಯವಾದ ಉಷಸ್ಸುಗಳ । **ವ್ಯುಷ್ಟಿಷು**— ಪ್ರಕಾಶವುಂಟಾಗಲು । **ಶವಸಾ** ಬಲಸ್ವರೂಪನಾದ । **ಯೇನ**—ಯಾವ ನಿನ್ನಿಂದ (ಅನುಗೃಹೀತಗಳಾಗಿ) । **ಚಿತಯಂತೇ**—ಪ್ರಾಣಿಗಳನ್ನು (ಸ್ವಸ್ವವ್ಯಾಪಾರಗಳಲ್ಲಿ) ಆಸಕ್ತರನ್ನಾಗಿ ಮಾಡುತ್ತವೆಯೋ । **(ಹೇ) ವೃಷಭ**— ಕಾಮವರ್ಷಕನಾದ ಎಲೈ ಇಂದ್ರನೇ । **ಸಃ**—ಅಂತಹ । **ಉಗ್ರಃ**—ಕ್ರೂರವಾದ ಬಲವುಳ್ಳವನೂ । **ಸಹೋದಾಃ**—ಬಲದಾಯಕನೂ । **ಸ್ಥವಿರಃ**—ಪುರಾತನನೂ (ಆದ ನೀನು) । **ಉಗ್ರೇಭಿಃ**— ಉಗ್ರಸ್ವಭಾವದವರಾದ । **ಮರುದ್ಭಿಃ**— ಮರುದ್ದೇವತೆಗಳಿಂದ ಸಹಿತನಾಗಿ । **ನಃ**—ನಮಗೋಸ್ಕರ । **ಶ್ರವಃ**—ಅನ್ನವನ್ನು । **ಧಾಃ**—ಸ್ಥಾಪಿಸು (ಅನುಗ್ರಹಿಸು).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಅಭಿಮಾನಪಾತ್ರವಾದ ಪ್ರಾತಃಕಾಲದ ಕಿರಣಗಳು ಶಾಶ್ವತವಾದ ಉಷಸ್ಸಿನ ಉದಯಕಾಲದಲ್ಲಿ, ಸಮಸ್ತ ಪ್ರಾಣಿಗಳನ್ನೂ ಸ್ವಸ್ವವ್ಯಾಪಾರರತರನ್ನಾಗಿ ಮಾಡುತ್ತವೆ. ಎಲೈ ಇಷ್ಟಾರ್ಥಪ್ರದನಾದ ಇಂದ್ರನೇ, ಕ್ರೂರಸ್ವಭಾವದವನೂ, ಬಲದಾಯಕನೂ, ಪುರಾತನನೂ ಆದ ನೀನು ಕ್ರೂರರಾದ ಮರುದ್ದೇವತೆಗಳಿಂದ ಸಹಿತನಾಗಿ, ನಮಗೋಸ್ಕರ ಅನ್ನವನ್ನು ಅನುಗ್ರಹಿಸು.

English Translation·

The rays of the ever-recurring mornings· favoured, Indra, by your vigour, confer consciousness as they shine : showerer of benefits, ancient (of days), bestower of strength, fierce, (and attended) by the fierce Maruts, grant us (abundant) food.

॥ ವಿಶೇಷವಿಷಯಗಳು ॥

**ಉಸ್ರಾಃ ಶವಸಾ ಮಾನಾಸಃ—ರಶ್ಮಯಃ ಬಲಭೂತೇನ ತ್ವಯಾ ಅನುಗೃಹೀತಾಃ ಮಾನ್ಯಾಃ ತ್ವಯಾ ಅಭಿಮಾನಿತಾ ವಾ** । ಶವಸ್ ಎಂಬ ಶಬ್ದವು ಉದಕನಾಮಗಳಲ್ಲಿಯೂ (ನಿ. ೨–೨೪) ಬಲನಾಮಗಳಲ್ಲಿಯೂ

(ನಿ. ೩-೯) ಉಕ್ತವಾಗಿದೆ. ಇಲ್ಲಿ ಇಂದ್ರನನ್ನು ಸಂಬೋಧಿಸಿ ಇಂದ್ರನು ಬಲವೇ ಅಥವಾ ಬಲವುಳ್ಳವನೇ ಆಗಿರುವನೆಂದು ಹೇಳಿದೆ. ಉಸ್ರಾಃ ಎಂಬ ಪದಕ್ಕೆ ವಿಶೇಷಣವಾಗಿ ಈ ಪದವು ಪ್ರಯುಕ್ತವಾಗಿದೆ. ರಶ್ಮಿಗಳು ಬಲರೂಪಿಯಾಗಿರುವ ಇಂದ್ರನಿಂದ ಅನುಗೃಹೀತಗಳಾಗಿ ಸತ್ಕಾರಾರ್ಹವಾಗಿವೆ ಎಂದೂ, ಅಥವಾ ಬಲರೂಪಿಯಾದ ಇಂದ್ರನಿಂದ ಅಭಿಮಾನವುಳ್ಳವುಗಳಾಗಿವೆ ಎಂದೂ ಎರಡು ವಿಧವಾದ ಅರ್ಥವನ್ನೂ ವಿವರಿಸಿದೆ. ಉಸ್ರಶಬ್ದವು ರಶ್ಮಿನಾಮಗಳಲ್ಲಿ (ನಿ. ೨-೧೫) ಉಕ್ತವಾಗಿದೆ.

ಸಾಯಣರ ವಿವರಣೆಯಂತೆ **ಮಾನಾಸಃ** ಎಂಬ ಪದವು **ಉಸ್ರಾಃ** ಎಂಬುದಕ್ಕೆ ವಿಶೇಷಣವಾಗಿದೆ. ಆದರೆ, Max Muller ಎಂಬ ಪಂಡಿತನು ಇದನ್ನು ಬೇರೆ ವಿಧವಾಗಿ ಅರ್ಥಮಾಡಿದ್ದಾನೆ. ಅವನ ಪರಿವರ್ತನೆಯು ಈ ರೀತಿಯಿದೆ.

Thou, through whom the Manas see the Mornings, whenever the eternal dawns flash forth with power, O Indra, O Strong hero, grant thou glory to us with the Maruts, terrible with the terrible ones, strong and a giver of victory.

[S. B. E. XXXII. P. 289].

ಈ ಪರಿವರ್ತನೆಯ ಪ್ರಕಾರ **ಮಾನಾಸಃ** ಎಂಬ ಪದಕ್ಕೆ **ಮಾನ್ಯ** ಸಂತತಿಯ ಋಷಿಗಳೆಂದರ್ಥವಾಗುತ್ತದೆ. ಇದೇ ಅರ್ಥವನ್ನು ಮುಂದೆ ಸಾಯಣರೂ ಬೇರೆ ಸಂದರ್ಭದಲ್ಲಿ ಹೇಳಿರುವುದರಿಂದ ಇಲ್ಲಿ ಈ ಪರಿವರ್ತನವು ತಪ್ಪೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ—

**ತದ್ವಾಂ ನರಾ ನಾಸತ್ಯಾವನು ಷ್ಯಾದ್ಯದ್ವಾಂ ಮಾನಾಸ ಉಚಥಮವೋಚನ್ ।**
**ಅಸ್ಮಾದದ್ಯ ಸದಸಃ ಸೋಮ್ಯಾದಾ ವಿದ್ಯಾಮೇಷಂ ವೃಜನಂ ಜೀರದಾನುಂ ॥**

(ಋ. ಸಂ. ೧-೧೮೨-೮)

ಎಂಬ ಋಕ್ಕಿನಲ್ಲಿ ಸಾಯಣರು ಮಾನಾಸಃ ಎಂಬ ಪದಕ್ಕೆ **ಪೂಜಾವಂತೋಽಸ್ಮದೀಯಾ ಹೋತ್ರಾದಯಃ** ಎಂದು ಅರ್ಥಮಾಡಿದ್ದಾರೆ. ಅದರಂತೆಯೇ ಇಲ್ಲಿಯೂ ಹೇಳಿದರೆ ಆಗ ಋಕ್ಕಿಗೆ—

"ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ **ಮಾನಸರು** ಪ್ರತಿದಿನವೂ ಉಷಸ್ಸಿನ ಆವಿರ್ಭಾವವಾದೊಡನೆಯೇ ಪ್ರಾತಃಕಾಲದ ಪ್ರಕಾಶವನ್ನು ಕಂಡು ತಮ್ಮ ಕಾರ್ಯತತ್ಪರರಾಗುತ್ತಾರೆ."

ಎಂದು ತಾತ್ಪರ್ಯವಾಗುತ್ತದೆ. ಈ ಸಂದರ್ಭಗಳಲ್ಲಿ **ಮಾನಸ್ಯ, ಮಾನ್ಯಸ್ಯ, ಮಾನಾಸಃ** ಎಂಬ ಪದಗಳಿಗೆ ಆಂಗ್ಲ ಪಂಡಿತರು ಹೇಳುವ ಅರ್ಥಕ್ಕೂ ಸಾಯಣರ ವಿವರಣೆಗೂ ವ್ಯತ್ಯಾಸವಿದ್ದೇ ಇರುತ್ತದೆ. ಉದಾಹರಣೆಗೆ—

**ಏಷ ವಃ ಸ್ತೋಮೋ ಮರುತ ಇಯಂ ಗೀರ್ಮಾನ್ದಾರ್ಯಸ್ಯ ಮಾನ್ಯಸ್ಯ ಕಾರೋಃ ।**

(ಋ. ಸಂ. ೧-೧೬೫-೧೫)

ಎಂಬ ಋಕ್ಕಿನಲ್ಲಿ **ಮಾನ್ಯಸ್ಯ** ಎಂಬ ಪದವು ಅಗಸ್ತ್ಯನಿಗೆ ವಿಶೇಷಣವಾದರೂ ಸಾಯಣರು **ವರಪ್ರದಾನಾದಿನಾ ಮಾನ್ಯಸ್ಯ** ಎಂದರೆ ಪೂಜ್ಯನಾದ ಎಂದರ್ಥ ಮಾಡಿರುವರು. Max Muller ಎಂಬ ಪಂಡಿತನು ಹೀಗೆ ಹೇಳಿದ್ದಾನೆ.

"I translate ಮಾನ್ಯ, the son of ಮಾನ, because, the poet so called in I. 189-8 is in all probability, the same as our ಮಾಂದಾರ್ಯ ಮಾನ್ಯ. But it may also be Manya the descendant of ಮಾಂದಾರಿ.

[S. B. E. XXXII. P. 206].

ಎಂದು ಹೇಳಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಮಾನಾಸಃ** ಎಂಬ ಪದದ ಅರ್ಥವನ್ನು ವಿವರಿಸಿರುವಾಗ,

The **ಮಾನಾಸಃ** are the people of ಮಾನ್ಯ and there is no necessity for taking **ಮಾನ** with Grassmann as a general name for poet.

[S. B. E. XXXII. P. 291].

ಎಂದು ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ.

ಇಲ್ಲಿ ಸಾಯಣರು ಅರ್ಥಮಾಡುವಂತೆ **ಮಾನಾಸಃ** ಎಂಬ ಪದವನ್ನು **ಉಸ್ರಾಃ** ಎಂಬುದಕ್ಕೆ ವಿಶೇಷಣವನ್ನಾಗಿ ಮಾಡಿದರೆ ಆಗ ಇಂದ್ರನ ಅನುಗ್ರಹದಿಂದ ರಶ್ಮಿಗಳು ಉಷಸ್ಸಿನ ಆವಿರ್ಭಾವವಾದೊಡನೆಯೇ ಪ್ರಾಣಿಗಳನ್ನು ತಮ್ಮ ತಮ್ಮ ವ್ಯಾಪಾರಗಳಲ್ಲಿ ನಿರತವಾಗುವಂತೆ ಮಾಡುತ್ತವೆಯೆಂದು ತಾತ್ಪರ್ಯವಾಗುತ್ತದೆ. ಇಲ್ಲಿ ಸೂರ್ಯರಶ್ಮಿಗಳಿಗೂ ಇಂದ್ರನಿಗೂ ಏನು ಸಂಬಂಧವೆಂಬ ಪ್ರಶ್ನೆ ಬರಲು ಕಾರಣವಿಲ್ಲ. ಇಂದ್ರನೇ ಪೂರ್ವದಿಕ್ಕಿಗೆ ಅಭಿಮಾನದೇವತೆಯೆಂಬುದು ಪ್ರಸಿದ್ಧವಾಗಿದೆ. ಅಲ್ಲದೇ,

**ಭಗಶ್ಚೈವಾರ್ಯಮಾಂಶಶ್ಚ ಮಿತ್ರೋ ವರುಣ ಏವ ಚ ।**
**ಧಾತಾ ಚೈವ ವಿಧಾತಾ ಚ ವಿವಸ್ವಾಂಶ್ಚ ಮಹಾದ್ಯುತಿಃ ॥**
**ತ್ವಷ್ಟಾ ಪೂಷಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ ।**

(ಬೃ. ದೇ. ೫-೧೪೭-೧೪೮)

ಎಂದು ಬೃಹದ್ದೇವತೆಯಲ್ಲಿ ಇಂದ್ರನು ದ್ವಾದಶಾದಿತ್ಯರಲ್ಲೊಬ್ಬನಾಗಿ ಪರಿಗಣಿತನಾಗಿದ್ದಾನೆ. ಅಲ್ಲದೇ,

**ತದ್ವಾ ಏಷ ಏವೇಂದ್ರಃ । ಯ ಏಷ ತಪತಿ ।**

(ಶ. ಬ್ರಾ. ೧-೬-೪-೧೮)

ಎಂಬುದಾಗಿ ಶತಪಥಬ್ರಾಹ್ಮಣದಲ್ಲಿ ಇಂದ್ರನಿಗೂ ಪ್ರಜ್ವಲಿಸುವ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿದೆ. ಮತ್ತು ಇಂದ್ರನ ಮಾಹಾತ್ಮ್ಯವನ್ನು ವರ್ಣಿಸುವಾಗ,

**ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ । ರೋಚಂತೇ ರೋಚನಾ ದಿವಿ ।**

(ಋ. ಸಂ. ೧-೬-೧).

ಎಂದು ವರ್ಣಿಸುವಾಗ ಇಂದ್ರನು ಅಗ್ನಿ, ವಾಯು, ಆದಿತ್ಯ ಮುಂತಾದ ಸಕಲ ದೇವತೆಗಳ ರೂಪದಲ್ಲೂ ತಾನೇ ಇದ್ದು ಎಲ್ಲರ ವ್ಯವಹಾರವನ್ನೂ ನೆರವೇರಿಸುತ್ತಾನೆಂದು ಸ್ತುತಿಸಿದೆ. ಆದುದರಿಂದ ಉಷಸ್ಸಿನ ಆವಿರ್ಭಾವವೂ, ಅನಂತರ ಆದಿತ್ಯಕಿರಣಗಳ ಪ್ರಕಾಶವೂ ಇಂದ್ರನ ಅನುಗ್ರಹದಿಂದಲೇ ಸಾಧ್ಯವೆಂದು ತಾತ್ಪರ್ಯವಾಗುತ್ತದೆ.

**ಶಶ್ವತೀನಾಂ ವ್ಯುಷ್ಟಿಷು ಚೇತಯಂತೇ—ನಿತ್ಯಾನಾಂ ಬಹ್ವೀನಾಮುಷಸಾಂ ಪ್ರಕಾಶೇಷು ಸತ್ಸು ಪ್ರಾಣಿನಾಂ ಸ್ವಸ್ವವ್ಯವಹಾರಾಯ ಪ್ರಜ್ಞಾಪಯಂತಿ ।** ಆಯಾಯ (ಅಹಸ್ಸುಗಳ) ದಿನಗಳ ಭೇದವನ್ನು ನಿಮಿತ್ತ ಮಾಡಿಕೊಂಡು ಉಷಸ್ಸುಗಳೂ ಅನೇಕವಾಗಿವೆ ಎಂದು ಅರ್ಥಮಾಡಿದೆ. ಆಯಾಯ ಉಷಸ್ಸುಗಳ ಪ್ರಕಾಶವು

ಉಂಟಾದಾಗ ಇಂದ್ರನಿಂದ ಅನುಗೃಹೀತಗಳಾದ ರಶ್ಮಿಗಳು ಆಯಾಯ ಪ್ರಾಣಿಗಳು ಆಚರಿಸುವ ಅವರವರ ವ್ಯವಹಾರಕ್ಕನುಗುಣವಾದ ಚೈತನ್ಯವನ್ನು ಆಯಾಯ ಪ್ರಾಣಿಗಳಿಗೆ ಉಂಟುಮಾಡುತ್ತವೆ ಎಂದು ಅರ್ಥವನ್ನು ವಿವರಿಸಿ, **ಐಂದ್ರ್ಯಾಂ ದಿಶಿ ತೇನೈವಾನುಗೃಹೀತಾಃ ಉಷಸೋ ರಶ್ಮಯಃ ಉದ್ಗಚ್ಛಂತೀತಿ ಪ್ರಸಿದ್ಧಂ ।** ಪೂರ್ವದಿಕ್ಕಿನಲ್ಲಿ ಇಂದ್ರನಿಂದ ಅನುಗೃಹೀತವಾದ ಉಷಸ್ಸಿನ ಕಿರಣಗಳು ಉದಯಿಸುತ್ತವೆ ಎಂದು ಉಷಸ್ಸಿನ ಉದಯವನ್ನು ವರ್ಣಿಸಿ, ಈ ಉಷಸ್ಸಿನ ಉದಯವಾದ ಕೂಡಲೆ ಪ್ರಾಣಿಗಳು ಅವರವರ ವ್ಯವಹಾರಕ್ಕನುಗುಣವಾದ ಜ್ಞಾನವನ್ನು ಹೊಂದುವ ಶಕ್ತಿಯನ್ನು ಈ ರಶ್ಮಿಗಳು ಉಂಟುಮಾಡುತ್ತವೆ ಎಂದು ವಿವರಿಸಿದೆ.

ಅನಾದಿಯಾದ ಉಷಸ್ಸು ಪ್ರತಿದಿನವೂ ಉದಯಿಸಿ ತನ್ನ ನಿಯಮಕ್ಕನುಸಾರವಾಗಿ ಲೋಕವನ್ನೆಬ್ಬಿಸುತ್ತಾಳೆ. ಇದೇ ಅಭಿಪ್ರಾಯವನ್ನು ಅನೇಕ ಕಡೆ ಪ್ರಶಂಸಿಸಿದೆ.

**ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ಚರಸಿ ವಿಶ್ವವಾರೇ ।**

(ಋ. ಸಂ. ೩-೬೧-೧).

**ಈಯುಷೀಣಾಮುಪಮಾ ಶಶ್ವತೀನಾಂ ವಿಭಾತೀನಾಂ ಪ್ರಥಮೋಷಾ ವ್ಯಶ್ವೈತ್ ।**

(ಋ. ಸಂ. ೧-೧೧೩-೧೫).

ಅನಾದಿಯಾಗಿಯೂ, ಶಾಶ್ವತಗಳಾಗಿಯೂ ಇರತಕ್ಕ ಉಷಸ್ಸು ಕಾಂತಿಯುತಳಾಗಿಯೂ ಪ್ರಕಾಶಸಾಧನಳಾಗಿಯೂ ಇದ್ದಾಳೆ ಎಂದು ಸ್ತುತಿಸಿದೆ. ಮತ್ತು

**ವಾಜಿನೀವತೀ ಸೂರ್ಯಸ್ಯ ಯೋಷಾ ಚಿತ್ರಾಮಘಾ ರಾಯ ಈಶೇ ವಸೂನಾಂ ।**

(ಋ. ಸಂ. ೭-೭೫-೫).

ಇತ್ಯಾದಿ ಋಕ್ಕುಗಳಲ್ಲಿ ಆದಿತ್ಯಾತ್ಮಕನಾದ ಇಂದ್ರನಿಗೂ ಉಷಸ್ಸಿಗೂ ಇರತಕ್ಕ ಪತಿಪತ್ನಿಯರ ಸಂಬಂಧವೂ ವರ್ಣಿತವಾಗಿದೆ. ಇಂತಹ ಉಷಸ್ಸಿನ ಆವಿರ್ಭಾವವಾದೊಡನೆಯೇ ಆದಿತ್ಯರಶ್ಮಿಗಳು ಪ್ರಸರಿಸಿ ಮೃತಪ್ರಾಯರಾಗಿ ಮಲಗಿರತಕ್ಕ ಸಕಲ ಜೀವರಾಶಿಗಳನ್ನೂ ಎಬ್ಬಿಸಿ ಚೈತನ್ಯವನ್ನು ಕೊಡುತ್ತವೆಯೆಂದು ತಾತ್ಪರ್ಯ.

**ವ್ಯುಷಾ ಆವಃ ಪಥ್ಯಾ೩ ಜನಾನಾಂ ಪಂಚ ಕ್ಷಿತೀರ್ಮಾನುಷೀರ್ಬೋಧಯಂತೀ ।**

(ಋ. ಸಂ. ೭-೭೯-೧).

ಇತ್ಯಾದಿ ನಾನಾ ಕಡೆಗಳಲ್ಲಿ ಉಷೋದೇವಿಯಿಂದ ಜಗತ್ತಿಗೆ ಆಗತಕ್ಕ ಉಪಕಾರದ ವರ್ಣನೆಯಿದೆ. ಆ ಪ್ರಯೋಜನವೆಲ್ಲವೂ ಲೋಕಕ್ಕೆಲ್ಲಾ ಪ್ರಭುವಾದ ಇಂದ್ರನ ಅನುಗ್ರಹದಿಂದಲೇ ಸಾಧ್ಯವೆಂದು ಪ್ರಕೃತವಾದ ಋಕ್ಕಿನ ಆಶಯವಾಗಿದೆ. ಆದುದರಿಂದಲೇ **ಶವಸಾ ಯೇನ ಚಿತಯಂತೇ** ಎಂದು ವರ್ಣಿತವಾಗಿದೆ.

**ವೃಷಭ—ವರ್ಷಿತಃ**—ವೃಷ್ಟಿಯನ್ನು ಸುರಿಸುವವನೆಂದು ಇಂದ್ರನನ್ನು ವೃಷಭ ಶಬ್ದದಿಂದ ಸಂಬೋಧಿಸಿದೆ. ಮತ್ತು ಇಂದ್ರನು, **ಉಗ್ರಃ—ಉದ್ಗೂರ್ಣಬಲಃ** ಬಲದಿಂದ ತುಂಬಿ ಇರುವನೆಂದೂ, **ಸಹೋದಾಃ—ಪರಾಭಿಭವಸಾಮರ್ಥ್ಯಂ ಬಲಂ ಸಃ ತಸ್ಯ ದಾತಾ**—ಇನ್ನೊಬ್ಬರನ್ನು ತಿರಸ್ಕರಿಸುವ ಸಾಮರ್ಥ್ಯಕ್ಕೆ ಸಹಃ ಎಂದು ಪ್ರಸಿದ್ಧವಾಗಿರುವುದರಿಂದ ಆ ವಿಧವಾದ ಪರಾಭಿಭವ ಬಲವನ್ನು (ಇನ್ನೊಬ್ಬರನ್ನು ತಿರಸ್ಕರಿಸುವ ಸಾಮರ್ಥ್ಯವನ್ನು) ಇಂದ್ರನು ಅನುಗ್ರಹಿಸುವವನು ಎಂದೂ, **ಸ್ಥವಿರಃ—ಪುರಾತನಃ** ಇಂದ್ರನು ಬಹಳ ಕಾಲದಿಂದ ಇರುವವನೆಂದೂ ವರ್ಣಿಸಿದೆ.

**ಸಃ—ತಾದೃಶಃ** ಈ ಪ್ರಕಾರವಾದ ಮಾಹಾತ್ಮ್ಯದಿಂದ ಪೂರಿತನಾದ ಇಂದ್ರನು **ಉಗ್ರೇಭಿಃ ಕ್ರೂರಬಲೈಃ ಮರುದ್ಭಿಃ** ಕ್ರೂರವಾದ ಶಕ್ತಿಯುಳ್ಳವರಾದ ಮರುದ್ದೇವತೆಗಳೊಡಗೂಡಿ, **ಶ್ರವೋ ಧಾಃ ಸರ್ವತ್ರ ಶ್ರೂಯಮಾಣಂ ಅನ್ನಂ ದೇಹಿ** ಎಲ್ಲಾ ಕಡೆಯಲ್ಲಿಯೂ ಪ್ರಸಿದ್ಧವಾಗಿ ಎಲ್ಲರಿಗೂ ಅವಶ್ಯವಾಗಿರುವ ಅನ್ನವನ್ನು ನಮಗೆ ಅನುಗ್ರಹಿಸಲಿ ಎಂದು ವರ್ಣಿಸಿದೆ.

**ಸಹೋದಾಃ— ಪರಾಭಿಭವಸಾಮರ್ಥ್ಯಂ ಸಹಃ । ತಸ್ಯ ದಾತಾ ।** ಸಹಃ ಎಂಬ ಪದವು ಬಲನಾಮಗಳಲ್ಲಿ ಉಕ್ತವಾಗಿದೆ. ಆದರೆ ಇಲ್ಲಿ ಇತರರನ್ನು ತಿರಸ್ಕರಿಸುವ ಶಕ್ತಿಗೆ **ಸಹಃ** ಎಂದು ಅರ್ಥವನ್ನು ವಿವರಿಸಿ ಅದನ್ನು ಇಂದ್ರನು ಅನುಗ್ರಹಿಸುವವನು ಎಂದು ಅರ್ಥವನ್ನು ವರ್ಣಿಸಿದೆ.

**ವೃಷಭ—ವರ್ಷಿತಃ** ವೃಷ್ಟಿಯನ್ನು ಸುರಿಸುವವನೆಂದು ಸಾಯಣರು ಅರ್ಥವನ್ನು ವರ್ಣಿಸಿದ್ದಾರೆ. ನಿರುಕ್ತ ಕಾರರು—**ಪ್ರಜಾಂ ವರ್ಷತೀತಿ ವಾ ಅತಿಬೃಹತಿರೇತ ಇತಿ ವಾ, ತತ್ ವೃಷಕರ್ಮಾ, ವರ್ಷಣಾತ್ ವೃಷಭಃ,** ಎಂದು ಹೇಳಿದ್ದಾರೆ. ದುರ್ಗಾಚಾರ್ಯರು **ಪ್ರಜೋತ್ಪತ್ತಿಕಾರಣಂ ರೇತಸ್ಸಿಂಚತಿ,** ಪ್ರಜೆಯು ಉತ್ಪನ್ನವಾಗಲು ರೇತಸ್ಸನ್ನು ಸೇಚನಮಾಡುವುದರಿಂದಲೂ ಅಥವಾ **ರೇತಸ್ಸೇಕ್ತುಮತಿಶಯೇನಾತ್ಮಾನಮುಸಾವುದ್ಯಚ್ಛತಿ**— ರೇತಸ್ಸನ್ನು ಸೇಚನಮಾಡುವುದಕ್ಕೆ ತನ್ನ ಶರೀರವನ್ನು ಬಹಳವಾಗಿ ಉದ್ಯುಕ್ತವನ್ನಾಗಿ ಮಾಡುವುದರಿಂದಲೂ ವೃಷಭ ಶಬ್ದವು ಪ್ರಯುಕ್ತವಾಗಿದೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।**
**ಆ ಸಿಞ್ಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ ॥**

(ಋ. ಸಂ. ೩-೪೭-೧).

ಇಲ್ಲಿ ವೃಷಭಃ **ವರ್ಷಿತೃರಪಾಂ** ಎಂದು ಅರ್ಥವನ್ನು ವಿವರಿಸಿದೆ.

ಪ್ರ **ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**
**ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾँ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥**

(ಋ. ಸಂ. ೧-೫೯-೬).

ಈ ಋಕ್ಕಿನಲ್ಲಿಯೂ ಕೂಡ ವೃಷಭಸ್ಯ ವರ್ಷಿತುರಪಾಂ ಎಂದೇ ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಾನಾಸಃ**—ಮನ ಜ್ಞಾನೇ. ಧಾತು. ಬಹುಲಗ್ರಹಣದಿಂದ ಕರ್ತರಿಯಲ್ಲಿ ಘಞ್ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಆದಿವೃದ್ಧಿ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅದಕ್ಕೆ ಅಸುಕಾಗಮ.

**ಚಿತಯಂತೇ**—ಚಿತೀ ಸಂಜ್ಞಾನೇ ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಲಘೂಪಧಗುಣ ಬರುವುದಿಲ್ಲ. ಣಿಜಂತದ ಮೇಲೆ ಲಟ್ ಪ್ರಥಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಣಿಚ್ ಸ್ವರ ಉಳಿಯುತ್ತದೆ.

**ವ್ಯುಷ್ಟಿಷು**—ವಶ ಕಾಂತೌ ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. **ವ್ರಶ್ಚಭ್ರಸ್ಜ**—ಎಂಬುದರಿಂದ ಶಕಾರಕ್ಕೆ ಷತ್ವ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ವಿ) ಉದಾತ್ತಸ್ವರ ಬರುತ್ತದೆ. ಉದಾತ್ತಕ್ಕೆ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**— (ಪಾ. ಸೂ. ೮-೨-೪) ಎಂಬುದರಿಂದ ಅದಕ್ಕೆ ಸ್ವರಿತಸ್ವರ ಬರುತ್ತದೆ.

**ವೃಷಭ**—ವೃಷು ಸೇಚನೇ. ಧಾತು. **ಋಷಿವೃಷಿಭ್ಯಾಂ ಕಿತ್** (ಉ. ಸೂ. ೪೦೩) ಎಂಬುದರಿಂದ ಅಭಚ್ ಪ್ರತ್ಯಯ. ಅದಕ್ಕೆ ಕಿತ್ತ್ವ ಅತಿದೇಶ ಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಸಿಪ್ ಪರವಾದಾಗ **ಗಾತಿಸ್ಥಾಘು**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಉಗ್ರೇಭಿಃ**—ಉಚ ಸಮವಾಯೇ. ಧಾತು. **ಋಜ್ರೇಂದ್ರ**—(ಉ. ಸೂ. ೧೮೬) ಎಂಬುದರಿಂದ ರಗಂತವಾಗಿ ನಿಪಾತಿತವಾಗಿದೆ. ಭಿಸಿಪರವಾದಾಗ ಐಸ್‌ಭಾವ ವಿಕಲ್ಪಿತವಾದುದರಿಂದ ಏತ್ವ.

**ಸ್ಥವಿರಃ**—ಷ್ಠಾ ಗತಿನಿವೃತ್ತೌ. ಧಾತು. **ಅಜಿರಶಿಶಿರ**—(ಉ. ಸೂ. ೧-೫೩) ಎಂಬುದರಿಂದ ಕಿರಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ಸಹೋದಾಃ**— ಡುದಾಞ್ ದಾನೇ. ಧಾತು. ಸಹಃ ಬಲಂ ದದಾತೀತಿ ಸಹೋದಾಃ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

**ತ್ವಂ ಪಾಹೀಂದ್ರ ಸಹೀಯಸೋ ನೄನ್ಭವಾ ಮರುದ್ಭಿರವಯಾತಹೇಳಾಃ ।**

**ಸುಪ್ರಕೇತೇಭಿಃ ಸಾಸಹಿರ್ದಧಾನೋ ವಿದ್ಯಾಮೇಷಂ ವೃಜನಂ ಜೀರದಾನುಂ ॥**

॥ ಪದಪಾಠಃ ॥

**ತ್ವಂ । ಪಾಹಿ । ಇಂದ್ರ । ಸಹೀಯಸಃ । ನೄನ್ । ಭವ । ಮರುತ್ಽಭಿಃ । ಅವಯಾತಽಹೇಳಾಃ ।**

**ಸುಽಪ್ರಕೇತೇಭಿಃ । ಸಸಹಿಃ । ದಧಾನಃ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥ ೬ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಪಾಹಿ । ರಕ್ಷ । ಕಾನ್ । ಸಹೀಯಸೋ ನೄನ್ ಸಹಸ್ವಿತಮಾಂಸ್ತ್ವದನುಗ್ರಹೇಣಾತಿಪ್ರವೃದ್ಧಬಲಾನ್ನೇತೄನ್ಮನುಷ್ಯಾನಸ್ಮಾನ್ ಮರುತೋ ವಾ । ಕಿಂಚ ಮರುದ್ಭಿಃ ಸಾಕಮಸ್ಮಾಸ್ವವಯಾತಹೇಳಾ ಭವ । ಅಪಗತಮನ್ಯುರ್ಭವ । ಮರುತ್ಸು ವಾ ತಥಾ ಭವ । ಕಿಂಚ ಸುಪ್ರಕೇತೇಭಿಃ ಶೋಭನಪ್ರಜ್ಞಾನೈರ್ಮರುದ್ಭಿಃ ಸಹ ಸಾಸಹಿಃ ಶತ್ರೂಣಾಮಭಿಭವಿತಾ ಸಂದಧಾನೋಽಸ್ಮದಭಿಮತಸ್ಯ ಧಾರಯಿತಾ ಭವೇತಿ ಶೇಷಃ । ಶಿಷ್ಟೋ ವ್ಯಾಖ್ಯಾತಃ ॥**

॥ ಪ್ರತಿಪದಾರ್ಥ ॥

**ಹೇ ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಸಹೀಯಸಃ**—(ನಿನ್ನನುಗ್ರಹದಿಂದ) ಅತಿ ಬಲಾಢ್ಯರಾದ । **ನೄನ್**—ಮನುಷ್ಯರಾದ ನಮ್ಮನ್ನು ಅಥವಾ ನೇತೃಗಳಾದ ಮರುತರನ್ನು । **ಪಾಹಿ**—ರಕ್ಷಿಸು; । (**ಕಿಂಚ**—ಮತ್ತು) । **ಮರುದ್ಭಿಃ**—ಮರುದ್ದೇವತೆಗಳಿಂದ ಯುಕ್ತನಾಗಿ । **ಅವಯಾತಹೇಳಾಃ**—(ನಮ್ಮಲ್ಲಿ) ಕ್ರೋಧವಿಲ್ಲದವನು । **ಮರುದ್ಭಿಃ**—ಮರುದ್ದೇವತೆಗಳಲ್ಲಿ । **ಅವಯಾತಹೇಳಾಃ**—ಕ್ರೋಧವಿಲ್ಲದವನಾಗಿ । **ಭವ**—ಆಗು; । (ಮತ್ತೂ) । **ಸುಪ್ರಕೇತೇಭಿಃ**—ಶುಭವಾದ ಜ್ಞಾನವಿಶಿಷ್ಟರಾದ ಮರುದ್ದೇವತೆಗಳೊಡನೆ । **ಸಾಸಹಿಃ**—(ಶತ್ರುಗಳನ್ನು) ಪರಾಭವಗೊಳಿಸುವವನಾಗಿ । **ದಧಾನಃ (ಭವ)**—(ನಮಗೆ ಅಭಿಮತವಾದುದನ್ನು) ಧರಿಸುವವನಾಗು (ಅನುಗ್ರಹಿಸು); । (ನಾವೂ ನಿನ್ನನುಗ್ರದಿಂದ) । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನುಗ್ರಹದಿಂದ ಮಹಾಬಲಾಢ್ಯರಾದ ನಮ್ಮನ್ನು ರಕ್ಷಿಸು; ಮರುದ್ದೇವತೆಗಳಿಂದ ಸಹಚರಿತನಾದ ನೀನು ನಮ್ಮಮೇಲೆ ಕೋಪವನ್ನು ಬಿಡು; ಒಳ್ಳೆಯಜ್ಞಾನಿಗಳಾದ ಮರುತರಿಂದ ಯುಕ್ತನಾಗಿ ಶತ್ರುಗಳನ್ನು ಪರಾಭವಗೊಳಿಸಿ, ನಮಗೆ, ಆಹಾರ, ಬಲ, ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸು.

## English Translation.

Do you, Indra, cherish the vigorous leaders (of the rains), be free from displeasure against the Maruts: overcoming (our) enemies along with the intelligent (Muruts), support us (so that) we may obtain food, strength, and long life.

॥ ವಿಶೇಷವಿಷಯಗಳು ॥

**ಸಹೀಯಸೋ ನೄ್ನ್**—ಇಲ್ಲಿ ಇಂದ್ರನನ್ನು ಸಂಬೋಧಿಸಿದೆ. ಸಹಃ ಎಂಬ ಪದವು ಬಲನಾಮಗಳಲ್ಲಿ ನಿರುಕ್ತಕಾರರಿಂದ (ನಿ. ೩-೯) ಉಕ್ತವಾಗಿದೆ. ಇದರಿಂದ **ಸಹಸ್ವಿತಮಾನ್ ತ್ವದನುಗ್ರಹೇಣ ಅತಿಪ್ರವೃದ್ಧಬಲಾನ್**—ಇಂದ್ರನ ಅನುಗ್ರಹದಿಂದ ಬಹಳವಾಗಿ ವೃದ್ಧಿಹೊಂದಿರುವ ಬಲವುಳ್ಳ ಯಜಮಾನರಾದ ನಮ್ಮ ವಿಷಯದಲ್ಲಿ ಇಂದ್ರನು ರಕ್ಷಕನಾಗಿರಲಿ ಎಂದುಪ್ರಾರ್ಥಿಸಿದೆ.

**ನೄನ್** ಎಂಬ ಪದಕ್ಕೆ ಸಾಯಣರು **ನೇತೄನ್ ಮನುಷ್ಯಾನಸ್ಮಾನ್ ಮರುತೋ ವಾ**—ನೇತೃಗಳಾದ ನಮ್ಮನ್ನು ಅಥವಾ ಮರುತ್ತುಗಳನ್ನು ಎಂದು ಎರಡು ವಿಧವಾಗಿ ಅರ್ಥಮಾಡಿದ್ದಾರೆ. **ಸಹೀಯಸಃ** ಎಂದರೆ ಅತ್ಯಂತ ಬಲಶಾಲಿಗಳಾದ ಎಂಬ ವಿಶೇಷಣವು ಎರಡು ಅರ್ಥಗಳಲ್ಲಿಯೂ ಹೊಂದಿಕೊಳ್ಳುತ್ತದೆ. ಋಷಿಯು ತನ್ನನ್ನೂ ತನ್ನ ವಂಶದವರನ್ನೂ ಉದ್ದೇಶಿಸಿ ಹೇಳಿದ್ದರೆ ಆಗ ಇಂದ್ರನ ಅನುಗ್ರಹದಿಂದ ತಮಗೆ ಪ್ರಬಲವಾದ ಬಲವು ಲಭಿಸಿತೆಂದರ್ಥ. ಅಥವಾ **ಮರುತಃ** ಎಂಬುದಕ್ಕೆ ವಿಶೇಷಣವಾದರೆ ಸಹಜವಾದ ಮರುತ್ತುಗಳ ಶಕ್ತಿಯನ್ನು ವರ್ಣಿಸಿದಂತಾಯಿತು. ಮರುತ್ತುಗಳ ಸ್ವಾಭಾವಿಕವಾದುದೂ, ಸಂಘಾತಾತ್ಮಕವಾದುದೂ ಆದ ಶಕ್ತಿಯೂ, ಆ ಶಕ್ತಿಯಿಂದ ನೆರವೇರಿಸಿದ ವೀರ್ಯ ಕರ್ಮಗಳೂ **ಯುಜ್ಯೇಭಿಃ ಪೌಂಸ್ಯೇಭಿಃ** ಇತ್ಯಾದ್ಯನೇಕವಿಶೇಷಣಗಳಿಂದ ಸೂಚಿತವಾಗಿದೆ.

**ಸಪ್ತ ಸಪ್ತ ಹಿ ಮರುತೋ ಗಣಸ್ತಸ್ಮಾನ್ಮಾರುತಃ ಸಪ್ತಕಪಾಲಃ ।**

(ಶ. ಬ್ರಾ. ೨-೫-೧-೧೩)

**ಸಪ್ತ ಸಪ್ತ ಹಿ ಮಾರುತೋ ಗಣಃ ಸರ್ವಮೇವೈತೇನ ರಥಂ ಪ್ರೀಣಾತಿ ।**

(ಶ. ಬ್ರಾ. ೫-೪-೩-೧೭)

ಇತ್ಯಾದಿ ವಾಕ್ಯಗಳಿಂದ ಮರುತ್ತುಗಳು ಯಾವಾಗಲೂ ಗುಂಪುಕಟ್ಟಿಕೊಂಡೇ ಇರುವರೆಂದೂ, ಆ ವಿಧವಾದ ಗುಂಪಿನಲ್ಲಿ ಒಂದು ವಿಧವಾದ ಚೈತನ್ಯವೂ ಶಕ್ತಿಯೂ ಸಹಜವಾಗಿರುತ್ತದೆಂದೂ ತಿಳಿಯುತ್ತದೆ. ಆದುದರಿಂದ **ಸಹೀಯಸಃ** ಎಂಬ ವಿಶೇಷಣವು ಪ್ರಕೃತವಾದ ಋಕ್ಕಿನಲ್ಲಿ ಉಚಿತವಾಗಿರುತ್ತದೆ.

**ನೄನ್** ಎಂದರೆ ನೇತೃಗಳೂ, ಪ್ರಜಾರೂಪಿಗಳೂ ಆದ ಮರುತ್ತುಗಳು ಎಂದೂ ಅರ್ಥವಾಡಿದೆ. ಮರುತ್ತುಗಳು ದೇವತೆಗಳ ಪ್ರಜೆಗಳೆಂದು ಪ್ರಸಿದ್ಧರಾಗಿದ್ದಾರೆ.

**ಸ ಏತಾನ್ಮೈಂದ್ರೀಂ ಮರುತ್ವತೀಮನ್ವಾಸತ್ । ಕ್ಷತ್ರಂ ವಾ ಇಂದ್ರೋ ವಿಶೋ ಮರುತಃ ಕ್ಷತ್ರಂ ವೈ ವಿಶೋ ನಿಷೇದ್ಧಾ ॥** (ಶ. ಬ್ರಾ. ೨-೫-೨-೨೭)

ಇತ್ಯಾದಿ ವಾಕ್ಯಗಳಲ್ಲಿ ಈ ಅರ್ಥವು ತಿಳಿಸಿದೆ. ಆದುದರಿಂದ **ನೄನ್** ಎಂಬ ಪದಕ್ಕೆ **ಮರುತಃ** ಎಂಬ ಅರ್ಥಾಂತರವನ್ನೂ ಹೇಳುವ ಔಚಿತ್ಯವಿದೆ. **ನರಃ** ಎಂಬ ಪದವು ಮರುತ್ತುಗಳಿಗೆ ವಿಶೇಷಣರೂಪದಲ್ಲಿ ಋಕ್ಸಂಹಿತೆಯಲ್ಲಿಯೇ ಅನೇಕಕಡೆಗಳಲ್ಲಿ ಪ್ರಯೋಗಿಸಿರುವುದನ್ನು ನೋಡಬಹುದು. ಉದಾಹರಣೆಗಾಗಿ—

**ಚಿತ್ರೈರಂಜಿಭಿರ್ವಪುಷೇ ವ್ಯಂಜತೇ ವಕ್ಷಃಸು ರುಕ್ಮಾಁ ಅಧಿ ಯೇತಿರೇ ಶುಭೇ ।**
**ಅಂಸೇಷ್ವೇಷಾಂ ನಿ ಮಿಮೃಕ್ಷುರೃಷ್ಟಯಃ ಸಾಕಂ ಜಜ್ಞಿರೇ ಸ್ವಧಯಾ ದಿವೋ ನರಃ ॥**

(ಋ. ಸಂ. ೧-೬೪-೪).

**ವಿಶ್ವವೇದಸೋ ರಯಿಭಿಃ ಸಮೋಕಸಃ ಸಂಮಿಶ್ಲಾಸಸ್ತವಿಷೀಭಿರ್ವಿರಪ್ಶಿನಃ ।**
**ಅಸ್ತಾರ ಇಷುಂ ದಧಿರೇ ಗಭಸ್ತ್ಯೋರನಂತಶುಷ್ಮಾ ವೃಷಖಾದಯೋ ನರಃ ॥**

(ಋ. ಸಂ. ೧-೬೪-೧೦).

ಇತ್ಯಾದ್ಯನೇಕ ಋಕ್ಕುಗಳಲ್ಲಿ **ನರಃ** ಎಂಬ ಪದವು ಮರುತ್ತುಗಳ ಸ್ವರೂಪವನ್ನು ತಿಳಿಸುತ್ತದೆ ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ನೄನ್** ಎಂದರೆ ಮರುತ್ತುಗಳನ್ನು ಎಂದರ್ಥವಾಗಬಹುದು.

**ಮರುದ್ಭಿಃ ಅವಯಾತಹೇಳಾಃ ಭವ**—ಇಂದ್ರನು ಮರುತ್ತುಗಳೊಡನೆ ನಮ್ಮ ವಿಷಯದಲ್ಲಿ ಕೋಪವಿಲ್ಲದವನಾಗಿರಲಿ ಅಥವಾ **ಮರುತ್ಸು ವಾ ಅಪಗತಮನ್ಯುರ್ಭವ**—ಮರುದ್ದೇವತೆಗಳ ವಿಷಯದಲ್ಲಿ ಇಂದ್ರನು ಸಮಾಧಾನವಾದ ಮನಸ್ಸಿನಿಂದ ಇರಲಿ ಎಂದು ಆಶಿಸಿದೆ. ಹೇಳಸ್ ಎಂಬ ಪದವು ಕ್ರೋಧನಾಮಗಳಲ್ಲಿ (ನಿ ೩-೯) ಉಕ್ತವಾಗಿರುವುದರಿಂದ ಕೋಪವೆಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದೆ.

**ಸುಪ್ರಕೇತೇಭಿಃ ಸಾಸಹಿಃ**— ಇಂದ್ರನು ಉತ್ತಮವಾದ ಜ್ಞಾನವುಳ್ಳವರಾದ ಮರುದ್ದೇವತೆಗಳೊಡನೆ ನಮ್ಮ ಶತ್ರುಗಳನ್ನು ತಿರಸ್ಕರಿಸಲಿ ಎಂದೂ, **ಅಸ್ಮದಭಿಮತಸ್ಯ ಧಾರಯಿತಾ ಭವ** ಯಜಮಾನರಾದ ನಮ್ಮ ಇಷ್ಟಗಳನ್ನು ಸಾಧಿಸುವವನಾಗಿಯೂ ಇರಲಿ ಎಂದೂ ಪ್ರಾರ್ಥಿಸಿದೆ ಪ್ರಕೇತ ಎಂಬ ಪದವು ನಿರುಕ್ತಕಾರರಿಂದ—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**

**ಯಥಾ ಪ್ರಸೂತಾ ಸವಿತುಃ ಸವಾಯ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥**

(ಋ. ಸಂ ೧-೧೧೩-೧)

ಈ ಋಕ್ಕಿನಲ್ಲಿ **ಪ್ರಕೇತಃ ಪ್ರಕೃಷ್ಟತಮಃ** ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು ಪ್ರಜ್ಞಾತತಮಃ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ವಿದ್ಯಾಮೇಷಂ ವೃಜನಂ ಜೀರದಾನುಂ** ಎಂಬ ವಾಕ್ಯದಿಂದ ಯಜಮಾನರಾದ ನಾವು ಇಂದ್ರನ ಅನುಗ್ರಹದಿಂದ ಅನ್ನವನ್ನೂ, ಬಲವನ್ನೂ ದಾನಮಾಡುವ ಶಕ್ತಿಯನ್ನೂ ಹೊಂದೋಣವೆಂದು ಆಶಿಸಿದೆ. ಅಗಸ್ತ್ಯಋಷಿಯು ತಾನು ಪಠಿಸಿರುವ ಸೂಕ್ತಗಳ ಕೊನೆಯಲ್ಲಿ ಈ ವಾಕ್ಯನ್ನು ಪಠಿಸಿದ್ದಾನೆ. ಇಷು ಶಬ್ದವು ಅನ್ನನಾಮಗಳಲ್ಲಿಯೂ, ವೃಜನ ಶಬ್ದವು ಬಲನಾಮಗಳಲ್ಲಿಯೂ ಯಾಸ್ಕರಿಂದ ಪಠಿತವಾಗಿದೆಯೆಂದು ಹಿಂದೆ ಅನೇಕಕಡೆಗಳಲ್ಲಿ ತಿಳಿಸಿದೆ.

ಆದರೆ ಕೇವಲ ಬಲ ಎಂಬರ್ಥದಲ್ಲಿ ಮಾತ್ರ ವೃಜನ ಶಬ್ದದ ಪ್ರಯೋಗವಿಲ್ಲ. ಇನ್ನೂ ಇತರ ಅರ್ಥಗಳೂ ಈ ಪದದಿಂದ ಸೂಚಿತವಾಗುವಂತೆ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿದೆ. ಹಿಂಸೆ, ಯುದ್ಧ. ಬಲಯುತನಾದ ಶತ್ರು, ಬಲಯುತನಾದ ದೇವತೆ ಇತ್ಯಾದ್ಯರ್ಥಗಳು ಈ ಪದದಿಂದ ಸೂಚಿತವಾಗುತ್ತವೆ. ಉದಾಹರಣೆಗೆ—

**ಅಷಾಳ್ಹಂ ಯುತ್ಸು ಪೃತನಾಸು ಪಪ್ರಿಂ ಸ್ವರ್ಷಾಮಪ್ಸಾಂ ವೃಜನಸ್ಯ ಗೋಪಾಂ ।**

(ಋ. ಸಂ. ೧-೯೧-೨೧).

ಎಂಬಲ್ಲಿ **ವೃಜ್ಯತೇಽನೇನೇತಿ ವೃಜನಂ ಬಲಂ** ಆವರಿಸಲ್ಪಡುತ್ತದೆ (ಅಥವಾ ರಕ್ಷಿಸಲ್ಪಡುತ್ತದೆಯಾದುದರಿಂದ ಬಲವೆಂಬರ್ಥವೆಂದು ವಿವರಿಸಿದೆ.) ಮತ್ತು,

**ಮರುತ್‌ಸ್ತೋತ್ರಸ್ಯ ವೃಜನಸ್ಯ ಗೋಪಾ ವಯಮಿಂದ್ರೇಣ ಸನುಯಾಮ ವಾಜಂ ।**

(ಋ. ಸಂ. ೧-೧೦೧-೧೧).

ಇತ್ಯಾದಿ ಋಕ್ಕುಗಳಲ್ಲಿ **ಶತ್ರೂಣಾಂ ಕ್ಷೇಪ್ತುಃ ಇಂದ್ರಸ್ಯ,** ಶತ್ರುನಿರಸನ ಮಾಡತಕ್ಕ ಇಂದ್ರನೆಂದು ಅರ್ಥಮಾಡಿ ಆ ಇಂದ್ರನ ಬಲವನ್ನು ತಿಳಿಸುತ್ತದೆ. ಅಲ್ಲದೇ, ಆವರಣವೆಂಬರ್ಥದಲ್ಲಿ ಇದರ ಪ್ರಯೋಗವಿರುವಾಗ, ಸತ್ಯಾರ್ಥವನ್ನು ಮುಚ್ಚತಕ್ಕ ವಂಚನೆಯೆಂದಾಗುತ್ತದೆ. ಅಥವಾ ರಕ್ಷಣೆಯನ್ನು ನೀಡತಕ್ಕ ಗೃಹವೆಂದರ್ಥವಾಗುತ್ತದೆ ಉದಾಹರಣೆಗೆ—

**ಯದ್ವಾ ಮರುತ್ವಃ ಪರಮೇ ಸಧಸ್ಥೇ ಯದ್ವಾವಮೇ ವೃಜನೇ ಮಾದಯಾಸೇ ।**

(ಋ. ಸಂ. ೧-೧೦೧-೮).

ಇತ್ಯಾದಿ ಋಕ್ಕುಗಳಲ್ಲಿ ಸಾಯಣರು ಗೃಹವೆಂದರ್ಥಮಾಡಿದ್ದಾರೆ. ಸ್ಕಂದಸ್ವಾಮಿಗಳು **ವರ್ಜಿತೇ ದೋಷೈಃ** ದೋಷ ವರ್ಜಿತವಾದ ಯಜ್ಞವೆಂದು ತಿಳಿಸಿದ್ದಾರೆ.

**ದಶಸ್ಯಾ ನಃ ಪುರ್ವಣೀಕ ಹೋತರ್ದೇವೇಭಿರಗ್ನೇ ಅಗ್ನಿಭಿರಿಧಾನಃ ।**
**ರಾಯಃ ಸೂನೋ ಸಹಸೋ ವಾವಸಾನಾ ಅತಿ ಸ್ರಸೇಮ ವೃಜನಂ ನಾಂಹಃ ॥**

(ಋ. ಸಂ. ೬-೧೧-೬)

ಎಂಬಲ್ಲಿ ಹಿಂಸಕವಾದ ಶತ್ರುವೆಂದೂ,

**ಮಾ ನೋ ಅಜ್ಞಾತಾ ವೃಜನಾ ದುರಾಧ್ಯೋ೩ಮಾಶಿವಾಸೋ ಅವ ಕ್ರಮುಃ ।**

(ಋ. ಸಂ. ೭-೩೨-೨೭)

ಇತ್ಯಾದಿ ಋಕ್ಕುಗಳಲ್ಲಿ ಹಿಂಸೆಯೆಂದೂ,

**ವಿಶ್ವೇಷ್ವೇನಂ ವೃಜನೇಷು ಪಾಮಿ ಯೋ ಮೇ ಕುಕ್ಷೀ ಸುತಸೋಮಃ ಪೃಣಾತಿ ।**

(ಋ. ಸಂ. ೧೦-೨೮-೨)

ಇವೇ ಮುಂತಾದ ಅನೇಕ ಋಕ್ಕುಗಳಲ್ಲಿ ಹಿಂಸಾಯುತವಾದ ಅಥವಾ ಬಲಯುತವಾದ ಸಂಗ್ರಾಮವೆಂದೂ ಅರ್ಥ ವಾಗುತ್ತದೆ. ಮತ್ತು ವೃಜ್ಯತೇಽನೇನ ಎಂದಿರುವಾಗ,

**ಯುಕ್ತಾ ಮಾತಾಸೀದ್ಧುರಿ ದಕ್ಷಿಣಾಯಾ ಅತಿಷ್ಠದ್ಗರ್ಭೋ ವೃಜನೀಷ್ವಂತಃ ।**

(ಋ. ಸಂ. ೧-೧೬೪-೯)

ಇತ್ಯಾದಿ ಸ್ಥಳಗಳಲ್ಲಿ ಉದಕವತ್ಸು, ಮೇಘಪಂಕ್ತಿಷು ಎಂದು ಹೇಳುವಾಗಲೂ ಸಹ ಮರೆಮಾಡತಕ್ಕ ಮೇಘ ಪಂಕ್ತಿಗಳೆಂದರ್ಥವಾಗುತ್ತದೆ. ವಂಚನೆ, ವಕ್ರ, ಇತ್ಯಾದಿ ಗುಣಗಳಿಂದ ಕೂಡಿದ ಶತ್ರುಪರವಾಗಿ ಅನೇಕಕಡೆ ಇದರ ಪ್ರಯೋಗವಿದೆ. ಸಂದರ್ಭಕ್ಕನುಗುಣವಾಗಿ ಈ ಪದದ ಅರ್ಥವನ್ನು ಹೇಳಬೇಕು. ಪ್ರಕೃತವಾದ ಋಕ್ಕಿನಲ್ಲಿ ಬಲವೆಂದಾಗಲಿ, ಅಥವಾ ಬಲಯುತವಾದ ರಕ್ಷಣೆಯೆಂದಾಗಲಿ ಅಥವಾ ರಕ್ಷಣೆಯಿಂದ ಕೂಡಿದ ಗೃಹಾದಿಗಳೆಂದಾಗಲಿ ಅರ್ಥವಾಗುತ್ತದೆ. ಈ ಪದದ ಲಿಂಗವ್ಯತ್ಯಾಸದಿಂದ ಅರ್ಥವ್ಯತ್ಯಾಸ ಆಗುವುದು ಸಾಧ್ಯವೆಂದೂ ತಿಳಿಯುತ್ತದೆ. ೧-೧೬೫-೧೧ ನೇ ಋಕ್ಕಿಗೆ ತಾತ್ಪರ್ಯವನ್ನು ಹೇಳುವಾಗ Max Muller ಎಂಬ ಪಂಡಿತನು ಈ ಪದವನ್ನು ವಿವರಿಸುತ್ತಾ ಹೀಗೆ ಹೇಳಿದ್ದಾನೆ.

ವೃಜನ means an enclosure, whether it be derived from **ವೃಜ್** to ward off or from **ವೃಜ್** in the sense of clearing as in **ವೃಕ್ತಬರ್ಹಿಃ**. In either case the meaning remains much the same, namely, a field cleared for pasture or agriculture. In this sense, ವೃಜನ is neuter while as a masculine it means powerful, invigorating. [S. B. E. XXXII. P 208]

ಎಂದರೆ ವೃಜನಶಬ್ದವು ಪುಲ್ಲಿಂಗದಲ್ಲಿ ಪ್ರಯುಕ್ತವಾದಾಗ ಮಾತ್ರ ಶಕ್ತಿಯೆಂದರ್ಥವಾಗುತ್ತದೆಂದು ಈತನ ಮತ. ಆದರೆ ನಿರುಕ್ತಕಾರರು, **ವರ್ಧಃ, ವರ್ಗಃ, ವೃಜನಂ** ಎಂಬುದಾಗಿ ಈ ಪದವನ್ನು ನಪುಂಸಕಲಿಂಗದ ಪ್ರಯೋಗ ದಲ್ಲಿಯೇ **ಬಲ** ನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. (ನಿ. ೩-೯)

**ಜೀರದಾನುಂ**— ಈ ಪದದ ವಿಶೇಷಾರ್ಥಗಳನ್ನು ೧-೧೬೩-೧೩ ಋಕ್ಕಿನಲ್ಲಿ ವಿವರಿಸಲಾಗುತ್ತದೆ.

**ವಿದ್ಯಾಮೇಷಂ ವೃಜನಂ ಜೀರದಾನುಂ**—ಈ ಪ್ರಾರ್ಥನೆಯು ಅಗಸ್ತ್ಯಕೃತವಾದ ಪ್ರತಿಯೊಂದು ಸೂಕ್ತದಲ್ಲಿಯೂ ಕೊನೆಯ ಭಾಗವಾಗಿರುತ್ತದೆ. ಇದು ಈ ಋಷಿಯ ಕೃತಿವೈಶಿಷ್ಟ್ಯ. ಇಂತಹ ಪುನಃಪಠಿತವಾದ ಭಾಗಗಳಿಗೆ ಉದರ್ಕವೆಂದು ಹೆಸರು ಪ್ರಸಿದ್ಧವಾಗಿದೆ. ಈ ವಿಧವಾದ ಕೃತಿವೈಶಿಷ್ಟ್ಯವು ಕುತ್ಸ, ವಸಿಷ್ಠ, ಗೃತ್ಸಮದ ಇತ್ಯಾದಿ ಇತರ ಋಷಿಗಳ ಸೂಕ್ತಗಳಲ್ಲೂ ಕಂಡುಬರುತ್ತದೆ. ಒಟ್ಟಿನಲ್ಲಿ ಬೃಹದ್ದೇವತೆಯಲ್ಲಿ ಹೇಳಿರುವಂತೆ, ಭರದ್ವಾಜ ಗೃತ್ಸಮದ, ವಸಿಷ್ಠ, ನೋಧಾಃ, ಅಗಸ್ತ್ಯ, ವಿಮದ, ನಭಾಕ, ಕುತ್ಸ ಈ ಎಂಟು ಋಷಿಗಳ ಕೃತಿಗಳಲ್ಲಿ ಈ ವಿಧವಾದ ಉದರ್ಕಗಳಿಗೆ ಅಭ್ಯಾಸವೆಂದೂ ಕರೆಯಬಹುದು. ಅಭ್ಯಾಸವೆಂದರೆ ಉಕ್ತಾರ್ಥವನ್ನೇ ಪುನಃ ಪಠನೆಮಾಡುವುದೆಂದರ್ಥ. **ಉಕ್ತಾರ್ಥಮಪಿ ವಾಕ್ಯಂ ಆದರಾತಿಶಯದ್ಯೋತನಾಯ ಪುನಃ ಪಠ್ಯತೇ ।** ಈ ವಿಧವಾದ ಪುನರುಕ್ತಿಯಲ್ಲಿ ಯಾವ ದೋಷವೂ ಇಲ್ಲ. ಇಂತಹ ಸಂದರ್ಭಗಳಲ್ಲಿ ಭಾವದ ತೀವ್ರತೆಯು ಕಾಣುತ್ತದೆ ಎಂದು ನಿರುಕ್ತಕಾರರು ಸಮರ್ಥಿಸಿರುತ್ತಾರೆ.

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ ।**
(ನಿ. ೧೦–೪೨).

ಪುನರುಕ್ತಿಯಿಂದ ಭಾವದ ಅಭಿವೃದ್ಧಿಗೆ ಒಂದು ವಿಧವಾದ ಪ್ರಭಾವವೂ ಶಕ್ತಿಯೂ ತೋರುತ್ತದೆ. ಅವಳು ಸುಂದರಳಾಗಿದ್ದಾಳೆ ಎನ್ನುವ ಉದಾಹರಣೆಯಲ್ಲಿ ಅವಳ ಸೌಂದರ್ಯವನ್ನು ವರ್ಣಿಸುವುದರಲ್ಲಿ ಒಂದು ಅತಿಶಯವಾದ ಆದರವು ಕಾಣುತ್ತದೆ. ಇದರಂತೆಯೇ ಉತ್ತಮವಾದ ಭಾವವನ್ನು ಪ್ರಕಾಶಪಡಿಸುವಾಗ ಅದರಲ್ಲಿ ಅತಿಶಯವಾದ ಆದರವನ್ನು ತೋರಿಸಿ ವಾಕ್ಯಗಳನ್ನು ಪಠಿಸುವ ಸನ್ನಿವೇಶವು ಅನೇಕ ಇವೆ. ಈ ವಿಷಯವನ್ನು ಪರುಚ್ಛೇಪ ಋಷಿಯ ಸೂಕ್ತವನ್ನು ವಿವರಿಸುವಾಗ ತಿಳಿಸಿದೆ. ಋ. ಸಂ. ೧–೧೭೭. ಅಥವಾ, ಉದರ್ಕವೆಂದರೆ ಯಜ್ಞಸಮಾಪ್ತಿಕಾಲದಲ್ಲಿ ಪಠಿಸತಕ್ಕ ಮಂತ್ರವೆಂದೂ ಆಗುತ್ತದೆ.

**ಯಾ ಗೋಮತೀರುಷಸಃ ಸರ್ವವೀರಾ ವ್ಯುಚ್ಛಂತಿ ದಾಶುಷೇ ಮರ್ತ್ಯಾಯ ।**
**ವಾಯೋರಿವ ಸೂನೃತಾನಾಮುದರ್ಕೇ ತಾ ಅಶ್ವದಾ ಅಶ್ನವತ್ಸೋಮಸುತ್ವಾ ॥**
(ಋ. ಸಂ. ೧-೧೧೩-೧೮).

ಇತ್ಯಾದಿ ಋಕ್ಕುಗಳಲ್ಲಿ ಉದರ್ಕವೆಂದರೆ ಸಮಾಪ್ತಿ ಪಠನವೆಂದರ್ಥ. ಅದರಂತೆಯೇ ಪ್ರಕೃತವಾದ ಋಕ್ಕುಗಳಲ್ಲಿಯೂ ಸಹ ಸೂಕ್ತ ಸಮಾಪ್ತಿಯೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಸಹೀಯಸಃ**—ಸಹಃ ಬಲಂ ಅಸ್ಯ ಅಸ್ತಿ ಇತಿ ಸಹಸ್ವೀ. **ಅಸ್‌ಮಾಯಾ**—ಎಂಬುದರಿಂದ ಮತ್ವರ್ಥದಲ್ಲಿ ವಿನ್ ಪ್ರತ್ಯಯ. ಇದರ ಮೇಲೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. **ವಿನ್‌ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ವಿನಿಗೆ ಲೋಪ. **ಟೇಃ** (ಪಾ. ಸೂ. ೬–೪–೧೪೩) ಎಂಬುದರಿಂದ ಟಿಗೆ ಲೋಪ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬–೧–೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ

**ಭವ**—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅನಯಾತಹೇಳಾಃ**—ಅನಯಾತಃ ಹೇಳಃ ಯಸ್ಮಾತ್ ಸಃ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸುಪ್ರಕೇತೇಭಿಃ**—ಕಿತ ಜ್ಞಾನೇ. ಧಾತು. ಅಚ್ ಪ್ರತ್ಯಯ. ಶೋಭನಃ ಪ್ರಕೇತಃ ಯೇಷಾಂ ತೇ ತೈಃ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಭಿಸ್‌ಗೆ ಐಸ್‌ಭಾವ ವಿಕಲ್ಪವಾದುದರಿಂದ ಏತ್ವ.

**ಸಾಸಹಿಃ**—ಷಹ ಅಭಿಭವೇ. **ಉತ್ಸರ್ಗಶ್ಛಂದಸಿ** ಎಂಬ ವಚನದಿಂದ **ಆದೃಗಮಹನ**—(ಪಾ. ಸೂ. ೩-೨-೧೭೧) ಎಂಬುದರಿಂದ ಕಿ ಪ್ರತ್ಯಯ. ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ. ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ದಧಾನಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟಿಗೆ ಶಾನಚಾದೇಶ. ಶ್ಲು ವಿಕರಣ. ಧಾತುವಿಗೆ ಅದನ್ನು ನಿಮಿತ್ತೀಕರಿಸಿ ದ್ವಿತ್ವಾದಿ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ನೂರ ಎಪ್ಪತ್ತೊಂದನೇ ಸೂಕ್ತ ಮುಗಿದುದು.

# ನೂರ ಎಪ್ಪತ್ತೆರಡನೆಯ ಸೂಕ್ತವು

**ಚಿತ್ರೋ ವ ಇತಿ ತೃಚಾತ್ಮಕಮಷ್ಟಮಂ ಸೂಕ್ತಮಾಗಸ್ತ್ಯಂ ಮಾರುತಂ ಗಾಯತ್ರಂ ॥ ಚಿತ್ರಸ್ತ್ರ್ಯೃಚಂ ಗಾಯತ್ರಮಿತ್ಯನುಕ್ರಮಣಿಕಾ ॥ ಲೈಂಗಿಕೋ ವಿಶೇಷವಿನಿಯೋಗಃ ॥**

ಅನುವಾದವು—**ಚಿತ್ರೋ ವಃ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಮರುತ್ತುಗಳು ದೇವತೆಯು; ಗಾಯತ್ರೀ ಛಂದಸ್ಸು. **ಚಿತ್ರಸ್ತ್ರ್ಯೃಚಂ ಗಾಯತ್ರಂ** ಎಂದು ಅನುಕ್ರಮಣಿಕೆಯಿರುವುದು. ವಿಶೇಷವಿನಿಯೋಗವು ಲೈಂಗಿಕವು.

## ಸೂಕ್ತ—೧೭೨

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೨ ॥
ಅಷ್ಟಕ— ೨ ॥ ಅಧ್ಯಾಯ—೪ ॥ ವರ್ಗ—೧೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಮರುತಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಚಿತ್ರೋ ವೋಽಸ್ತು ಯಾಮಶ್ಚಿತ್ರ ಊತೀ ಸುದಾನವಃ ।**

**ಮರುತೋ ಅಹಿಭಾನವಃ ॥ ೧ ॥**

॥ ಪದಪಾಠಃ ॥

**ಚಿತ್ರಃ । ವಃ । ಅಸ್ತು । ಯಾಮಃ । ಚಿತ್ರಃ । ಊತೀ । ಸುऽದಾನವಃ ।**

**ಮರುತಃ । ಅಹಿऽಭಾನವಃ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಮರುತಃ ವೋ ಯುಷ್ಮಾಕಂ ಯಾಮೋಽಸ್ಮದ್ಯಜ್ಞಾಗಮಶ್ಚಿತ್ರಶ್ಚಾಯನೀಯಃ ಪೂಜ್ಯ ಆಶ್ಚರ್ಯಭೂತೋ ವಾಸ್ತು । ಭವತು । ನ ಕೇವಲಮಾಗಮನಮೇವ ಚಿತ್ರಂ ಕಿಂತು ಹೇ ಸುದಾನವಃ ಶೋಭನದಾನಾ ಹೇ ಅಹಿಭಾನವೋಽಹೀಯಮಾನಪ್ರಕಾಶಾಃ ಯುಷ್ಮಾಕಂ ಸಂಬಂಧೀ ಚಿತ್ರಃ ಸ ಆಗಮ ಊತ್ಯೈತ್ಯೈ ರಕ್ಷಣಾಯೇಷ್ಟತರ್ಪಣಾಯ ವಾ ಯುಕ್ತಶ್ಚ ಭವತು । ತದಾಗಮನಂ ಶೀಘ್ರಮಸ್ತು ಅಭಿಮತಪ್ರದಂ ಚಾಸ್ತ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ವಃ**—ನಿಮ್ಮ । **ಯಾಮಃ**—(ನಮ್ಮ ಯಾಗಶಾಲೆಗೆ) ಆಗಮನವು । **ಚಿತ್ರಃ**—ಪೂಜ್ಯವು ಅಥವಾ ಮಹದಾಶ್ಚರ್ಯಕರವು । **ಅಸ್ತು**—ಆಗಲಿ; (ಮತ್ತೂ) । **ಸುದಾನವಃ**—ಶುಭದಾನಪ್ರದರೂ । **ಅಹಿಭಾನವಃ**—ಕುಂದದೇ ಇರುವ ಪ್ರಕಾಶವುಳ್ಳವರೂ ಆದ ಎಲೈ ಮರುದ್ದೇವತೆಗಳೇ । **ಚಿತ್ರಃ**—ಆಶ್ಚರ್ಯಕರವಾದ (ನಿಮ್ಮ ಆ ಆಗಮನವು) । **ಊತೀ**—(ನಮ್ಮ) ರಕ್ಷಣೆಗೋಸ್ಕರ ಅಥವಾ (ನಮ್ಮ) ಇಷ್ಟಾರ್ಥಪೂರ್ತಿಗೋಸ್ಕರ । **(ಭವತು**—ಆಗಲಿ).

॥ ಭಾವಾರ್ಥ ॥

ಶುಭವಾದ ದಾನಗಳನ್ನು ಮಾಡುವವರೂ, ಕುಂದದೇ ಇರುವ ಪ್ರಕಾಶವುಳ್ಳವರೂ ಆದ ಎಲೈ ಮರುದ್ದೇವತೆಗಳೇ, (ನಮ್ಮ ಯಾಗಶಾಲೆಯನ್ನುದ್ದೇಶಿಸಿ) ನಿಮ್ಮ ಆಗಮನವೇ ಮಹಾದಾಶ್ಚರ್ಯಭೂತವಾದುದು ಮತ್ತು ನಿಮ್ಮ ಆಗಮನದಿಂದ ನಮ್ಮ ರಕ್ಷಣೆಯು ಅಥವಾ ಇಷ್ಟಾರ್ಥಪೂರ್ತಿಯು ಉಂಟಾಗುತ್ತದೆ.

English Translation

Maruts, of inseparable splendour, may your coming be marvellous, liberal benefactors, for our protection.

॥ ವಿಶೇಷವಿಷಯಗಳು ॥

**ವಃ ಯಾಮಃ ಚಿತ್ರಃ ಅಸ್ತು— ಯುಷ್ಮಾಕಂ ಅಸ್ಮದ್ಯಜ್ಞಾಗಮಃ ಚಾಯನೀಯಃ ಪೂಜ್ಯಃ ಆಶ್ಚರ್ಯಭೂತೋ ವಾ ಭವತು—**ಮರುದ್ದೇವತೆಗಳನ್ನು ಸಂಬೋಧಿಸಿದೆ.

ಅವರು ನಮ್ಮ ಯಜ್ಞಕ್ಕಾಗಿ ಬರುವುದು, ನಮ್ಮ ಯಜ್ಞವನ್ನೂ ನಮ್ಮನ್ನು ಪೂಜಾರ್ಹರನ್ನಾಗಿ ಮಾಡುವುದು ಎಲ್ಲರಿಗೂ ಆಶ್ಚರ್ಯವನ್ನು ಉಂಟುಮಾಡುವುದಾಗಿರುವುದು ಎಂದು ವರ್ಣಿಸಿದೆ.

ಮರುತ್ತುಗಳ ವಾಹನವೂ, ಅವರ ಸಂಚಾರ ಕ್ರಮವೂ ಅತ್ಯಾಕರ್ಷವಾಗಿವೆಯೆಂಬುದು ಅತ್ಯಂತ ಪ್ರಸಿದ್ಧವಾಗಿದೆ. **ಏನ್ಯೈಃ, ಏವಾಸಃ, ಏವಯಾಮರುತ್** ಇತ್ಯಾದ್ಯನೇಕ ವಿಶೇಷಣಗಳಿಂದ ಮರುತ್ತುಗಳ ಸಂಘಾತಾತ್ಮಕವಾದ ಸಂಚಾರಕ್ರಮವು ವರ್ಣಿತವಾಗಿದೆ. ಅದನ್ನು ಇಲ್ಲಿ **ಯಾಮಃ ಚಿತ್ರಂ ಅಸ್ತು** ನಿಮ್ಮ ಆಗಮನವು ಆಕರ್ಷಕವಾಗಿಯೂ ಪೂಜ್ಯವಾಗಿಯೂ ಇರಲಿ ಎಂದು ಪ್ರಾರ್ಥಿಸಿದೆ. **ಚಿತ್ರ** ಶಬ್ದವು ಸೌಂದರ್ಯಾರ್ಥದಲ್ಲಿಯೂ ಪೂಜ್ಯಾರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಮರುತ್ತುಗಳ ಸಂಚಾರ ಕ್ರಮದಲ್ಲಿ ಈ ಎರಡು ಗುಣಗಳೂ ಪೂರ್ಣವಾಗಿವೆ. ಈ ವರ್ಣನೆಯನ್ನು ಕೆಳಗೆ ಉದಾಹೃತವಾಗಿರುವ ಋಕ್ಕುಗಳಲ್ಲಿ ಕಾಣಬಹುದು.

**ತ್ವಿಷೀಮಂತೋ ಅಧ್ವರಸ್ಯೇವ ದಿದ್ಯುತ್ತೃಷುಚ್ಯವಸೋ ಜುಹ್ವೋಽನಾಗ್ನೇಃ ।**
**ಅರ್ಚತ್ರಯೋ ಧುನಯೋ ನ ವೀರಾ ಭ್ರಾಜಜ್ಜನ್ಮಾನೋ ಮರುತೋ ಅಧೃಷ್ಟಾಃ ॥**

(ಋ. ಸಂ. ೬-೬೬-೧೦)

**ತಂ ವೃಧಂತಂ ಮಾರುತಂ ಭ್ರಾಜದೃಷ್ಟಿಂ ರುದ್ರಸ್ಯ ಸೂನುಂ ಹವಸಾ ವಿವಾಸೇ ।**
**ದಿವಃ ಶರ್ಧಾಯ ಶುಚಯೋ ಮನೀಷಾ ಗಿರಯೋ ನಾಪ ಉಗ್ರಾ ಅಸ್ಪೃಧ್ರನ್ ॥**

(ಋ. ಸಂ. ೬-೬೬-೧೧)

ಇತ್ಯಾದಿ ಋಕ್ಕುಗಳಲ್ಲಿ ಯಜ್ಞಾಗ್ನಿಗಳ ಆಕರ್ಷಕವೂ ಶುದ್ಧವೂ ಆದ ಅಗ್ನಿಜ್ವಾಲೆಗಳ ಪ್ರಕಾಶಕ್ಕೆ ಮರುತ್ತುಗಳ ಸಂಚಾರ ಕ್ರಮವನ್ನು ಹೋಲಿಸಿದೆ. ಹೀಗೆಯೇ ಇನ್ನೂ ಅನೇಕ ಸಂದರ್ಭಗಳಲ್ಲಿ ಇಂತಹ ಉದಾಹರಣೆಗಳಿವೆ.

**ಸುದಾನವಃ ಅಹಿಭಾನವಃ—** ಎಂಬ ವಿಶೇಷಣಗುಣದ್ಯೋತಕವಾದ ಪದಗಳಿಂದ ಮರುದ್ದೇವತೆಗಳು **ಶೋಭನದಾನಾಃ—**ಪ್ರಭೂತವಾಗಿರುವ ಕಲ್ಯಾಣಗಳನ್ನು ಅನುಗ್ರಹಿಸುವವರೆಂದೂ, **ಅಹೀಯಮಾನಪ್ರಕಾಶಾಃ** ಮರುದ್ದೇವತೆಗಳ ಕಾಂತಿಯು ಪ್ರಭೂತವಾಗಿ ವೃದ್ಧಿಯಾಗುತ್ತಿರುವುದೆಂದೂ, ವರ್ಣಿಸಿ ಈ ಪದಗಳಿಂದಲೇ ಅವರನ್ನು ಸಂಬೋಧಿಸಿದೆ.

**ಸುದಾನವಃ— ಶೋಭನದಾನಾಃ ।** ಅತ್ಯಂತ ಉದಾರವಾಗಿ ದಾನಮಾಡತಕ್ಕ ಇಂದ್ರಾದಿಗಳೆಂದರ್ಥ. ಸುದಾನವಃ ಎಂಬ ಪದಕ್ಕೆ ರಸಭರಿತರು ಅಥವಾ ರಸದಾತರು ಎಂಬರ್ಥವೂ ಇರುತ್ತದೆ. ಈ ಪದವು ಮರುತ್ತುಗಳಿಗೆ

ವಿಶೇಷಣವಾಗಿ ಉಪಯೋಗಿಸಲ್ಪಟ್ಟಾಗ ಕೆಲವು ಕಡೆ **ರಸದಾತೆರು** ಎಂದರೆ ಉತ್ತಮವಾದ ವೃಷ್ಟ್ಯುದಕವನ್ನು ಸುರಿಸುವವರು ಎಂದಾಗಬಹುದು

**ಪಿನ್ವಂತ್ಯಪೋ ಮರುತಃ ಸುದಾನವಃ ಪಯೋ ಘೃತವದ್ವಿದಥೇಷ್ವಾಭುವಃ ।**

(ಋ. ಸಂ. ೧-೬೪-೬)

ಇತ್ಯಾದ್ಯನೇಕ ಕಡೆಗಳಲ್ಲಿ ಮರುತ್ತುಗಳಿಗೆ ವಿಶೇಷಣವಾಗಿದೆ ಮತ್ತು ವೃಷ್ಟ್ಯುದಕವನ್ನು ಅವರಿಂದ ಪ್ರಾರ್ಥಿಸಿದೆ. ಮರುತ್ತುಗಳಿಗೆ ಜೀರದಾನು ಎಂಬ ವಿಶೇಷಣವೂ ಉಂಟು. ಈ ಎರಡರಲ್ಲಿ ಯಾವ ಅರ್ಥವಾದರೂ ಸಹ ದೇವತೆಗಳ ಔದಾರ್ಯವನ್ನು ತೋರಿಸುತ್ತದೆ. ಆದರೆ **ಸುದಾನವಃ** ಎಂಬ ಪದದಿಂದ ಸೂಚಿತವಾಗುವ ಔದಾರ್ಯವು ಮರುದಾದಿ ದೇವತೆಗಳ ಸ್ವರೂಪಮಾತ್ರವಲ್ಲದೇ ಯಜ್ಞಕರ್ತರ ಗುಣವೂ ಆಗಬಹುದು.

**ಇಷಂ ಪೃಂಚಂತಾ ಸುಕೃತೇ ಸುದಾನವ ಆ ಬರ್ಹಿಃ ಸೀದತಂ ನರಾ ।**

(ಋ. ಸಂ. ೧-೪೭-೮)

**ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।**

(ಋ. ಸಂ. ೪-೪-೭)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಶ್ರೇಷ್ಠವಾದ ದಾನಿಗಳೆಂದು ಯಜ್ಞಕರ್ತರಿಗೆ ವಿಶೇಷಣವಾಗಿದೆ ೧೦-೪೩-೭ ಇತ್ಯಾದಿ ಋಕ್ಕುಗಳಲ್ಲಿ **ದಾನು** ಶಬ್ದಕ್ಕೆ ಸೋಮರಸವೆಂದೂ ಅರ್ಥವಾಗಬಹುದು. ಇದಲ್ಲದೇ,

**ಉತ್ತರಾ ಸೂರಧರಃ ಪುತ್ರ ಆಸೀದ್ದಾನುಃ ಶಯೇ ಸಹವತ್ಸಾ ನ ಧೇನುಃ ।**

(ಋ ಸಂ. ೧-೩೨-೯)

**ಸಹದಾನುಂ ಪುರುಹೂತ ಕ್ಷಿಯಂತಮಹಸ್ತಮಿಂದ್ರ ಸಂ ಪಿಣಕ್ಕುಣಾರುಂ ।**

(ಋ. ಸಂ. ೩-೩೦-೮)

ಇತ್ಯಾದಿ ಋಕ್ಕುಗಳಲ್ಲಿ **ದಾನು** ವೆಂದರೆ ವೃತ್ರಮಾತೃಯಾದ-ಅಸುರಸ್ತ್ರೀಯೆಂದರ್ಥ. ಆದರೆ ಸುದಾನವಃ ಎಂದಿರುವಾಗ ಉದಾರವಾದ ದಾನಿಗಳು ಎಂಬರ್ಥವಿದ್ದು ಪ್ರಕೃತವಾದ ಋಕ್ಕಿನಲ್ಲಿ ಮರುತ್ತುಗಳ ವಿಶೇಷಣವಾಗಿ ಅವರ ಔದಾರ್ಯವನ್ನು ತೋರಿಸಿದೆ. ಇದರ ವಿಶೇಷ ವಿವರಣೆಯನ್ನು ೧೭೩ ನೇ ಸೂಕ್ತದ ಋಕ್ಕಿನಲ್ಲಿ **ಜೀರದಾನು** ಎಂಬ ಪದವನ್ನು ವಿವರಿಸುವಾಗ ತಿಳಿಸಿದೆ.

**ಯುಷ್ಮಾಕಂ ಸಂಬಂಧೀ ಚಿತ್ರಃ ಸ ಆಗಮಃ ಊತೀ ರಕ್ಷಣಾಯ ಇಷ್ಟತರ್ಪಣಾಯ ವಾ ಭವತು—** ನಿಮ್ಮ ಪೂಜಾರ್ಹವಾದ ಆಗಮನವು ನಮ್ಮನ್ನು ರಕ್ಷಿಸುವುದಕ್ಕಾಗಿಯೂ, ಅಥವಾ ನಮ್ಮ ಇಷ್ಟವನ್ನು ನೆರವೇರಿಸುವುದಕ್ಕಾಗಿಯೂ ಇರಲಿ ಎಂದು ಆಶಿಸಿದೆ. ಇದರಿಂದ **ತ್ವದಾಗಮನಂ ಶೀಘ್ರಮಸ್ತು ಅಭಿಮತಪ್ರದಂ ಚಾಸ್ತು—** ಮರುದ್ದೇವತೆಗಳು ಬೇಗ ಬಂದು ನಮ್ಮ ಇಷ್ಟಗಳನ್ನು ನೆರವೇರಿಸಲಿ ಎಂದು ಪ್ರಾರ್ಥಿಸಿರುವುದು ಗಮ್ಯವಾಗಿದೆ.

**ಊತೀ— ಊತ್ಯೈ ರಕ್ಷಣಾಯ ಇಷ್ಟತರ್ಪಣಾಯ ವಾ।** ಊತಿಶಬ್ದವು ಯಾಸ್ಕರಿಂದ **ಊತಿರವನಾತ್** ರಕ್ಷಣೆಮಾಡು ಎಂಬ ಅರ್ಥವನ್ನು ಬೋಧಿಸುವ ಅವ ಧಾತುವಿನಿಂದ ನಿಷ್ಪನ್ನವಾಗಿ ಊತಿ ಶಬ್ದಕ್ಕೆ ರಕ್ಷಣೆ ಎಂಬ ಅರ್ಥವು ಎಂದು ವ್ಯಾಖ್ಯಾತವಾಗಿದೆ. ಮತ್ತು,

**ಆ ತ್ವಾ ರಥಂ ಯಥೋತಯೇ ಸುಮ್ನಾಯ ವರ್ತಯಾಮಸಿ ।**
**ತುವಿಕೂರ್ಮಿಮೃತೀಷಹಮಿಂದ್ರ ಶವಿಷ್ಠ ಸತ್ಪತೇ ॥**

(ಋ. ಸಂ ೮-೬೮-೧)

ಈ ಋಕ್ಕಿನಲ್ಲಿ **ಊತಯೇ ಅವನಾಯ ರಕ್ಷಣಾಯ** ಎಂದು ಅರ್ಥವನ್ನು ಬೋಧಿಸುವುದಾಗಿ ವಿವೃತವಾಗಿದೆ. ಇಲ್ಲಿ **ಇಷ್ಟತರ್ಪಣಾಯ ವಾ** ಎಂದು ಎರಡನೆಯ ಅರ್ಥದಲ್ಲಿಯೂ (ಪ್ರಯೋಗವನ್ನು) ರಕ್ಷಣಾಪ್ರಕಾರವನ್ನು ವಿವರಿಸಿದೆ.

**ಅಹಿಭಾನವಃ**— ಈ ಪದಕ್ಕೆ ಸಾಯಣರು **ಅಹೀಯಮಾನಪ್ರಕಾಶಾಃ** ಕೊಂಚವೂ ನ್ಯೂನವಿಲ್ಲದ ಮತ್ತು ಕಾಂತಿಗುಂದದ ಪ್ರಕಾಶವುಳ್ಳವರೆಂದರ್ಥಮಾಡಿದ್ದಾರೆ. ಆದರೆ ಆಂಗ್ಲಪರಿವರ್ತನಕಾರರು **ಅಹಿ** ಯೆಂಬ ಪದಕ್ಕೆ ಸರ್ಪ ವೆಂದರ್ಥಮಾಡಿ ಸರ್ಪದಂತೆ ಪ್ರಕಾಶವುಳ್ಳವರು ಎಂದರ್ಥ ಮಾಡಿದ್ದಾರೆ. ಆ ಪರಿವರ್ತನವು ಈ ರೀತಿಯಿದೆ.

O Maruts, you bounteous givers, shining like snakes.

[S. B. E. XXXII. P. 293].

ಅಥವಾ **ಅಹಿ** ಯೆಂದರೆ ಮೇಘವೆಂದರ್ಥಮಾಡಿದರೆ ಆಗ **ಅಹಿಭಾನವಃ** ಎಂಬುದಕ್ಕೆ ಮೇಘದ ಅಥವಾ ಮೇಘಾಂತ ರ್ವರ್ತಿಯಾದ ವಿದ್ಯುತ್ತಿನ ಪ್ರಕಾಶವುಳ್ಳವರೆಂದೂ ಹೇಳಬಹುದು. ನಿರುಕ್ತಕಾರರು **ಅಹಿಗೋಪಾಃ** ಎಂಬ ಪದವನ್ನು ವಿವರಿಸುತ್ತಾ,

**ಅಹಿಗೋಪಾ ಅತಿಷ್ಠನ್ । ಅಹಿನಾ ಗುಪ್ತಾಃ । ಅಹಿರಯನಾದೇತ್ಯಂತರಿಕ್ಷೇ ।**

(ನಿ. ೨-೧೭).

ಅಹಿಯೆಂದರೆ ಮೇಘವೆಂದರ್ಥ ಮಾಡಿದ್ದಾರೆ ಅದರಂತೆ ಇಲ್ಲಿಯೂ **ಅಹಿ** ಯೆಂದರೆ ಮೇಘವೆಂದು ಅರ್ಥಮಾಡಿದರೆ ಆಗಲೂ ತಪ್ಪಾಗಲಾರದು. ಹೇಗೆಂದರೆ,

**ತೇ ಕ್ಷೋಣೀಭಿರರುಣೇಭಿರ್ನಾಂಜಿಭೀ ರುದ್ರಾ ಋತಸ್ಯ ಸದನೇಷು ವಾವೃಧುಃ ।**
**ನಿಮೇಘಮಾನಾ ಅತ್ಯೇನ ಪಾಜಸಾ ಸುಶ್ಚಂದ್ರಂ ವರ್ಣಂ ದಧಿರೇ ಸುಪೇಶಸಂ ॥**

(ಋ. ಸಂ. ೨-೩೪-೧೩).

ಇತ್ಯಾದಿ ಋಕ್ಕುಗಳಲ್ಲಿ ಮರುತ್ತುಗಳ ಮೇಘಾಶ್ರಯವೂ, ಮೇಘಾಂತರ್ಗತರಾಗಿದ್ದು ಸುವರ್ಣದ ಕಾಂತಿಯಿಂದ ಅವರು ಪ್ರಕಾಶಿಸುವುದೂ ವರ್ಣಿತವಾಗಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಅಹಿಭಾನವಃ** ಎಂಬ ವಿಶೇಷಣದ ವರ್ಣನೆಯು ಉದಾಹೃತವಾದ ಮೇಲಿನ ಋಕ್ಕಿನಲ್ಲಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಯಾಮಃ** — ಯಾ ಪ್ರಾಪಣೇ. ಧಾತು. ಔಣಾದಿಕ ಮನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಊತೀ— ಊತಿಯೂತಿಜೂತಿ**—(ಪಾ ಸೂ. ೩-೩-೯೭) ಎಂಬುದರಿಂದ ಅವ ಧಾತುವಿಗೆ ಉದಾತ್ತ ಕ್ತಿನ್ನಿ ನಿಂದ ನಿಪಾತಿತವಾಗಿದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಸುದಾನವಃ**— ಶೋಭನಃ ದಾನುಃ ಯಸ್ಯ ಸಃ ಸಂಬೋಧನಾದಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಮರುತಃ**— ಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಹಿಭಾನವಃ**—**ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ಪೂರ್ವದಲ್ಲಿ ಪದವಿದ್ದರೂ ಅದಕ್ಕೆ ಅವಿದ್ಯಮಾನಭಾವವಿರುವುದರಿಂದ ಪದದ ಪರದಲ್ಲಿ ಬಾರದಿರುವುದರಿಂದ ನಿಘಾತಸ್ವರ ಬರದೆ ಹಿಂದಿನಂತೆ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

**ಆರೇ ಸಾ ವಃ ಸುದಾನವೋ ಮರುತ ಋಂಜತೀ ಶರುಃ ।**

**ಆರೇ ಅಶ್ಮಾ ಯಮಸ್ಯಥ ॥ ೨ ॥**

॥ ಪದಪಾಠಃ ॥

**ಆರೇ । ಸಾ । ವಃ । ಸುऽದಾನವಃ । ಮರುತಃ । ಋಂಜತೀ । ಶರುಃ ।**

**ಆರೇ । ಅಶ್ಮಾ । ಯಂ । ಅಸ್ಯಥ ॥ ೨ ॥**

॥ ಸಾಯಣಭಾಷ್ಯಂ ॥

**ಹೇ ಸುದಾನವಃ ಶೋಭನದಾನಾ ಮರುತಃ ವೋ ಯುಷ್ಮಾಕಂ ಸಂಬಂಧಿನ್ಯೃಂಜತೀ ಪ್ರಸಾಧಯಂತೀ ಸ್ವತೇಜಸಾ ಸ್ವಾತ್ಮಾನಮಲಂಕುರ್ವತೀ ಪ್ರಸಿದ್ಧಿಂ ಪ್ರಾಪ್ನುವಾನಾ ವಾ ಸಾ ಪ್ರಸಿದ್ಧಾ ಶರುರ್ಹಿಂಸಕಾ ಋಷ್ಟಿರಾರೇ ದೂರೇ ಭವತು । ತಥಾ ಯಮಸ್ಯಥ ಕ್ಷಿಪಥ ಸೋಽಶ್ಮಾ ವ್ಯಾಪಕ ಆಯುಧವಿಶೇಷ ಆರೇ । ದೂರನಾಮೈತತ್ । ದೂರೇ ಭವತು । ಮಾಂ ನ ಪ್ರಾಪ್ನೋತು । ಯದ್ವಾ । ಆರೇಶಬ್ದ ಆರಾಚ್ಛಬ್ದಪರ್ಯಾಯಃ । ಸ ಚ ದೂರೇ ಸಮೀಪೇ ಚ ವರ್ತತೇ । ಅತ್ರ ಸಮೀಪವಚನಃ । ಯಮಸ್ಮತ್ತೋಽನ್ಯಮಸ್ಯಥ ತಂ ವೈರಿಣಮಸ್ಮಾಕಮುಪಲೋಪಮಃ ಕಠಿನ ಆಯುಧವಿಶೇಷ ಆರೇ ಸಮೀಪಂ ಪ್ರಾಪ್ನೋತು ॥**

॥ ಪ್ರತಿಪದಾರ್ಥ ॥

**ಸುದಾನವಃ**—ಶೋಭನದಾನರಾದ । **(ಹೇ) ಮರುತಃ**— ಎಲೈ ಮರುದ್ದೇವತೆಗಳೇ । **ವಃ**—ನಿಮ್ಮದಾದ । **ಋಂಜತೀ**—ತೇಜಃಪುಂಜವಾದ । **ಸಾ ಶರುಃ**—ಆ (ಪ್ರಸಿದ್ಧವಾದ) ಹಿಂಸಕವಾದ ಆಯುಧವು । **ಆರೇ**—ದೂರದಲ್ಲಿ (ಇರಲಿ) । **ಯಂ**—ಯಾವ ಆಯುಧವನ್ನು । **ಅಸ್ಯಥ**—(ದೂರ) ಎಸೆಯುತ್ತೀರೋ । **(ಸಃ)**

**ಅಶ್ಮಾ**—(ಆ) ವ್ಯಾಪಕವಾದ ಆಯುಧವು (ಶಿಲೆಯಂತೆ ಕಠಿಣವಾದ ಆಯುಧವು) । **ಆರೇ**—(ನಮಗೆ ಬಹಳ) ದೂರದಲ್ಲಿ (ಇರಲಿ) । [ಅಥವಾ **ಯಂ**—ಯಾವ ಆಯುಧವನ್ನು । **ಅಸ್ಯಥ**—(ನಮ್ಮ ಶತ್ರುವಾದ ಮತ್ತೊಬ್ಬ ನೆಡೆಗೆ) ಎಸೆಯುತ್ತೀರೋ । **(ಸಃ) ಅಶ್ಮಾ**—ಆ ಶಿಲೆಯಂತೆ ಕಠಿಣವಾದ ಆಯುಧವು । **ಆರೇ**—(ಆ ಶತ್ರುವಿನ) ಸಮೀಪದಲ್ಲಿ (ಇರಲಿ)].

॥ ಭಾವಾರ್ಥ ॥

ಶೋಭನದಾನರಾದ ಎಲೈ ಮರುದ್ದೇವತೆಗಳೇ, ತೇಜಃಪುಂಜವೂ, ಹಿಂಸಕವೂ ಆದ ನಿಮ್ಮ ಆಯುಧವು (ನಮಗೆ) ಬಹಳ ದೂರದಲ್ಲಿ ಇರಲಿ; ನಿಮ್ಮಿಂದ ಕ್ಷಿಪ್ತವಾದ ಆ ಶಿಲಾಪ್ರಾಯವಾದ ಆಯುಧವು ಬಹಳ ದೂರ ಇರಲಿ (ಆದರೆ ನೀವು ಎಸೆಯುವ ಆ ಆಯುಧವು ನಮ್ಮ ಶತ್ರುವನ್ನು ಸಮೀಪಿಸಲಿ).

English Translation.

Maruts, liberal benefactors, may your bright destructive (shaft) be far from us : may the stone which you hurl be far from us.

॥ ವಿಶೇಷವಿಷಯಗಳು ॥

**ಋಂಜತೀ—ಪ್ರಸಾಧಯಂತೀ ಸ್ವತೇಜಸಾ ಸ್ವಾತ್ಮಾನಮಲಂಕುರ್ವತೀ ಪ್ರಸಿದ್ಧಿಂ ಪ್ರಾಪ್ನುವಾನಾ ವಾ** । ಈ ಪದವು ಇಲ್ಲಿ ಮರುದ್ದೇವತೆಗಳ ಸಂಬಂಧಿಯಾದ **ಋಷ್ಟಿ** ಎಂಬ ಆಯುಧವನ್ನು ಬೋಧಿಸುವ **ಶರುಃ** ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ನಿರುಕ್ತಕಾರರು **ಋಂಜತಿಃ ಪ್ರಸಾಧನಕರ್ಮಾ** (ನಿ. ೬–೨೧) ಋಂಜತಿ ಎಂಬ ಪದವು ಅಲಂಕಾರಮಾಡು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ವರ್ಣಿಸಿ—

**ದೂತಂ ವೋ ವಿಶ್ವವೇದಸಂ ಹವ್ಯವಾಹಮಮರ್ತ್ಯಂ ।**
**ಯಜಿಷ್ಠಮೃಂಜಸೇ ಗಿರಾ ॥**

(ಋ. ಸಂ. ೪-೮-೧)

ಈ ಋಕ್ಕಿನಲ್ಲಿ ಇರುವ ಪ್ರಯೋಗವನ್ನು ತೋರಿಸಿದ್ದಾರೆ. ಸಾಯಣರು **ಸುದಾನವಃ ಮರುತಃ** ಮರುದ್ದೇವತೆಗಳು ಉತ್ತಮವಾದ ಅನೇಕ ವಸ್ತುಗಳನ್ನು ಕೊಡುವವರೆಂದು ಸಂಬೋಧಿಸಿದೆ. ಅವರ ಋಷ್ಟಿ ಎಂಬ ಆಯುಧವು ತನ್ನ ಕಾಂತಿಗಳಿಂದ ಬೆಳಗುತ್ತಿರುವುದೆಂದೂ, ಅಥವಾ ಶತ್ರುಗಳನ್ನು ನಾಶಪಡಿಸುವುದರಲ್ಲಿ ಪ್ರಸಿದ್ಧವಾಗಿರುವುದೆಂದೂ ಅರ್ಥವನ್ನು ವರ್ಣಿಸಿ, ಆ ಆಯುಧವು ಶತ್ರುಗಳ ವಿಷಯದಲ್ಲಿ ಹಿಂಸಕವಾಗಿದ್ದರೂ ಯಜಮಾನರಾದ ನಮ್ಮ ವಿಷಯದಲ್ಲಿ **ಶರುಃ ಆರೇ** ದೂರದಲ್ಲಿರಲಿ ಎಂದು ಆಶಿಸಿದೆ.

**ಆರೇ ಅಶ್ಮಾ ಯಮಸ್ಯಥ—ವ್ಯಾಪಕಃ ಆಯುಧವಿಶೇಷಃ ದೂರೇ ಭವತು ಮಾಂ ನ ಪ್ರಾಪ್ನೋತು** ನಿಗ್ರಹಕ್ಕಾಗಿ ಪ್ರೇರಿಸಲ್ಪಟ್ಟ ಅವರ ಆಯುಧವು ನಮ್ಮಿಂದ (ಅವರಿಗೆ ನಾವು ಶತ್ರುಗಳಲ್ಲದಕಾರಣ) ದೂರದಲ್ಲಿರಲಿ, ಎಂದು ಅರ್ಥವನ್ನು (ಆರೆ ಎಂಬ ಪದಕ್ಕೆ ದೂರವೆಂಬ ಅರ್ಥವನ್ನು ಮಾಡಿ) ಹೇಳಿದೆ. ಎರಡನೆಯ ಅರ್ಥದಲ್ಲಿ **ಆರೇ ಶಬ್ದಃ ಆರಾಚ್ಛಬ್ದಪರ್ಯಾಯಃ ಸ ಚ ದೂರೇ ಸಮೀಪೇ ಚ ವರ್ತತೇ** । ಆರೆ ಎಂಬ ಪದವು ಆರಾತ್ ಶಬ್ದಕ್ಕೆ ಪರ್ಯಾಯಪದವಾಗಿರುವಕಾರಣ ದೂರ ಅಥವಾ ಸಮೀಪ ಎಂಬ ಎರಡು ಅರ್ಥವನ್ನೂ ಬೋಧಿಸುವುದು. ಇಲ್ಲಿ ಸಮೀಪ ಎಂಬ ಅರ್ಥವನ್ನು ಬೋಧಿಸುತ್ತದೆ ಎಂದು ಅರ್ಥವನ್ನು ವರ್ಣಿಸಿ, **ಅಸ್ಮತ್ತೋ ಅನ್ಯಂ ಯಂ ವೈರಿಣಂ**

**ಅಸ್ಯಥ ಅಸ್ಮಾಕಮುಪಲೋಪಮುಃ ಕಠಿನಃ ಆಯುಧವಿಶೇಷಃ ತಂ ವೈರಿಣಂ ಸಮೀಪಂ ಪ್ರಾಪ್ನೋತು** ಮರುದ್ದೇವತೆಗಳು ಯಜ್ಞಮಾಡುವ ಯಜಮಾನರಾದ ನಮಗಿಂತಲೂ ಬೇರೆಯಾದ ಶತ್ರುಗಳಲ್ಲಿ ಪ್ರಯೋಗಿಸಿದ ಆಯುಧವು ನಮಗೆ ಕಲ್ಲಿನಹಾಗೆ ಕಠಿಣವಾಗಿರುವುದಾದರೂ ಆ ಶತ್ರುಗಳ ಸಮೀಪವನ್ನು ಹೊಂದಿ ಅವರನ್ನು ನಾಶ ಪಡಿಸಲಿ ಎಂದು ಆಶಿಸಿದೆ. **ಆರೇ** ಎಂಬ ಪದವು ದೂರ ನಾಮಗಳಲ್ಲಿ (ನಿ. ೩-೨೦) ಉಕ್ತವಾಗಿದೆ. ಸಾಯಣರು ಇಲ್ಲಿ ಆರಾತ್ ಶಬ್ದದ ಪರ್ಯಾಯವೆಂದು ಅರ್ಥವನ್ನು ವಿವರಿಸಿ ದೂರ ಅಥವಾ ಸಮೀಪ ಎಂಬ ಅರ್ಥದಲ್ಲಿರುವ ಪ್ರಯೋಗ ವನ್ನು ಇಲ್ಲಿ ವರ್ಣಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಋಞ್ಜತೀ**—ಋಞ್ಜ ಧಾತು ಅಲಂಕಾರಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ಟಿಗೆ ಶತ್ರಾದೇಶ. ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಉಗಿತಶ್ಚ** ಎಂಬುದರಿಂದ ಙೀಪ್. ನುಮ್ ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದ ರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧ ೧೭೩) ಎಂಬುದರಿಂದ ಅದು ಉದಾತ್ತವಾಗುತ್ತದೆ.

**ಶರುಃ**—ಶೄ ಹಿಂಸಾಯಾಂ ಧಾತು. **ಶೃಣಾತಿ ಇತಿ ಶರುಃ । ಶೄ ಸ್ವೃ ಸ್ನಿಹಿ**—(ಉ.ಸೂ. ೧೦) ಎಂಬುದ ರಿಂದ ಉನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ.

**ಅಶ್ಮಾ**—ಅಶೂ ವ್ಯಾಪ್ತೌ. ಧಾತು. **ಅಶಿಶಕಿಭ್ಯಾಂ ಛಂದಸಿ** (ಉ. ಸೂ. ೫೮೬) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸ್ಯಥ**—ಅಸು ಕ್ಷೇಪಣೇ. ಧಾತು. ಲಟ್ ಮಧ್ಯಮಪುರುಷ ಬಹುವಚನಾಂತರೂಪ. ಯಚ್ಛಬ್ದ ಸಂಬಂಧ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ತೃಣಸ್ಕಂದಸ್ಯ ನು ವಿಶಃ ಪರಿ ವೃಂಕ್ತ ಸುದಾನವಃ ।
ಊರ್ಧ್ವಾನ್ನಃ ಕರ್ತ ಜೀವಸೇ ॥ ೩ ॥

॥ ಪದಪಾಠಃ ॥

ತೃಣಽಸ್ಕಂದಸ್ಯ । ನು । ವಿಶಃ । ಪರಿ । ವೃಂಕ್ತ । ಸುಽದಾನವಃ ।
ಊರ್ಧ್ವಾನ್ । ನಃ । ಕರ್ತ । ಜೀವಸೇ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಮರುತಃ ಸುದಾನವಃ ಶೋಭನದಾನಾಃ ಯೂಯಂ ತೃಣಸ್ಕಂದಸ್ಯ ತೃಣವಚ್ಚಲನಸ್ವಭಾವಸ್ಯ ಶುಷ್ಯಮಾಣಸ್ಯ ವಾ ಮಮ ವಿಶಃ ಪುತ್ರಭೃತ್ಯಾದಿರೂಪಾಃ ಪ್ರಜಾ ನು ಕ್ಷಿಪ್ರಂ ಪರಿ ವೃಂಕ್ತ । ಪರಿವರ್ಜಯತ । ಬಾಧಾಪರಿಹಾರೇಣ ರಕ್ಷತ । ಯದ್ವಾ । ಉಕ್ತಲಕ್ಷಣಕಾಲಸ್ಯಾಸುರವಿಶೇಷಸ್ಯ ವಾ ಪ್ರಜಾಃ ಪರಿವರ್ಜಯತ । ಕಿಂಚ ನೋಽಸ್ಮಾನೂರ್ಧ್ವಾನ್ ಕರ್ತ । ಕುರುತ । ಜೀವಸೇ ಚಿರಜೀವನಾಯ ॥**

॥ ಪ್ರತಿಪದಾರ್ಥ ॥

**(ಹೇ) ಸುದಾನವಃ**—ಉದಾರರಾದ ಎಲೈ ಮರುದ್ದೇವತೆಗಳೇ (ನೀವು) । **ತೃಣಸ್ಕಂದಸ್ಯ**— ತೃಣದಂತೆ। ಚಂಚಲ ಸ್ವಭಾವದವನಾದ ಅಥವಾ ಶುಷ್ಕನಾಗುತ್ತಿರುವ (ನನ್ನ) । **ವಿಶಃ**— ಪುತ್ರ ಭೃತ್ಯಾದಿಗಳನ್ನು । **ನು**— ಕ್ಷಿಪ್ರವಾಗಿ । **ಪರಿ ವೃಂಕ್ತ**-ಬಾಧಾಪರಿಹಾರಮಾಡಿ ರಕ್ಷಿಸಿ । [ಅಥವಾ **ತೃಣಸ್ಕಂದಸ್ಯ**-ತೃಣಸ್ಕಂದನೆಂಬ ಅಸುರನ । **ವಿಶಃ**— ಪುತ್ರಭೃತ್ಯಾದಿಗಳನ್ನು (ಲೋಕಗಳನ್ನು) । **ನು**—ಕ್ಷಿಪ್ರವಾಗಿ । **ಪರಿ ವೃಂಕ್ತ**—ನಾಶಮಾಡಿ] । (**ಕಿಂಚ**—ಮತ್ತು) **ನಃ**—ನಮ್ಮನ್ನು । **ಜೀವಸೇ**— (ಚಿರಕಾಲ) ಜೀವಿಸುವುದಕ್ಕೋಸ್ಕರ । **ಊರ್ಧ್ವಾನ್**— ಉತ್ಕೃಷ್ಟರನ್ನಾಗಿ । **ಕರ್ತ**—ಮಾಡಿ.

॥ ಭಾವಾರ್ಥ ॥

ಎಲೈ ಉದಾರಿಗಳಾದ ಮರುದ್ದೇವತೆಗಳೇ, ತೃಣಪ್ರಾಯವಾದ (ತೃಣದಂತೆ ಚಂಚಲನಾದ) ನನ್ನ ಪುತ್ರ ಭೃತ್ಯಾದಿ ಪ್ರಜೆಗಳನ್ನೂ ಬಾಧಾಪರಿಹಾರಮಾಡಿ ರಕ್ಷಿಸಿ, ಚಿರಕಾಲಜೀವಿಸುವಂತೆ, ನಮ್ಮನ್ನು ಉತ್ಕೃಷ್ಟಜೀವಿಗಳನ್ನಾಗಿ ಮಾಡಿ.

## English Translation.

Maruts, liberal benefactors, protect my people, (although I be) as insignificant as grass : lift us up, that we may live

॥ ವಿಶೇಷವಿಷಯಗಳು ॥

**ತೃಣಸ್ಕಂದಸ್ಯ—ತೃಣವತ್ ಚಲನಸ್ವಭಾವಸ್ಯ ಶುಷ್ಯಮಾಣಸ್ಯ ವಾ**— ಈ ಪದವು ಯಜಮಾನನೆಂದು ಅರ್ಥವನ್ನು ಬೋಧಿಸುವ **ಮಮ** ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿರುವುದರಿಂದ ಯಜಮಾನನು ಹುಲ್ಲುಕಡ್ಡಿಯಹಾಗೆ ಚಲಿಸುವ ಸ್ವಭಾವದವನೂ, ವಣಗುತ್ತಿರುವವನೂ ಆಗಿರುವನೆಂದು ವರ್ಣಿಸಿದೆ.

ಅಥವಾ ಇದು ಅಂಕಿತನಾಮವಾಗಿರುವುದೆಂದೂ ಸಾಯಣರು ತಿಳಿಸಿದ್ದಾರೆ. **ಉಕ್ತಲಕ್ಷಣಕಾಲಸ್ಯ ಅಸುರವಿಶೇಷಸ್ಯ ವಾ** ಎಂದಿರುವುದರಿಂದ ತೃಣಸ್ಕಂದನೆಂಬ ಅಸುರನೆಂದೂ ಅರ್ಥವಾಗಬಹುದು. ಆಗ ತೃಣಸ್ಕಂದನೆಂದರೆ ಮೇಘಾಂತರ್ಗತನಾಗಿ ಮರೆಯಲ್ಲಿ ಸಂಚರಿಸುವವನೆಂದು ಅವನ ಗುಣವನ್ನು ತಿಳಿಸಿದಂತಾಗುತ್ತದೆ. **ತೃಣ** ಶಬ್ದಕ್ಕೆ ಮೇಘವೆಂದರ್ಥ. ಘನೀಭೂತವಾದ ಮೇಘವು ಘರ್ಷಿತವಾಗಿ ಸೀಳಲ್ಪಟ್ಟು ಅನಂತರ ವೃಷ್ಟಿಪತನವಾಗುತ್ತದೆ. **ತೃದ್ಯತೇಽಸಾವಿತಿ ತೃಣಃ** ಸೀಳು ಎಂದರ್ಥಕೊಡುವ **ತೃದ್** ಧಾತುವಿನಿಂದ ನಿಷ್ಪನ್ನವಾಗಿ ಘರ್ಷಿತವಾಗಿ ಸೀಳಲ್ಪಡುವುದರಿಂದ ಮೇಘಕ್ಕೆ ತೃಣವೆಂಬ ಹೆಸರೆಂದು ದುರ್ಗಾಚಾರ್ಯರ ವಿವರಣೆಯಿದೆ. **ತೃಂದ್ಯಾತ್ ತೃಣಂ**—ಎಂದು

ನಿರುಕ್ತಕಾರರು ಬೇರೆ ಸಂದರ್ಭದಲ್ಲಿ ಈ ಪದದ ನಿರ್ವಚನವನ್ನು ತಿಳಿಸಿದ್ದಾರೆ. (ನಿ. ೧-೨೨) ಸ್ಕಂದ್ ಧಾತುವಿಗೆ ಚಲಿಸು ಎಂದರ್ಥ. ಅಥವಾ ತೃಣಸ್ಕಂದವೆಂದರೆ ಕುಪ್ಪಳಿಸಿ ಹಾರುವ ಮಿಡತೆ ಹ ಳುವೆಂದೂ ಆಗಬಹುದು. ಇದೇ ರೀತಿ ಆ ಅಸುರನ ಸಂಚಾರಕ್ರಮವಿದ್ದಿರಬಹುದು ಈ ಪದವು ಋಕ್ಸಂಹಿತೆಯಲ್ಲೆಲ್ಲಾ ಇದೊಂದೇ ಕಡೆ ಪ್ರಯೋಗಿಸಲ್ಪಟ್ಟಿರುವುದರಿಂದ ಇಲ್ಲಿ ಯಥೋಚಿತವಾಗಿ ಅರ್ಥಮಾಡಬೇಕು.

**ವಿಶಃ ನು ಪರಿವೃಙ್ಕ್ತ**—ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯ ಅರ್ಥದಲ್ಲಿ ಯಜಮಾನನಿಗೆ ಸಂಬಂಧಿಸಿದ ಪುತ್ರರೂ, ದಾಸರೂ ಇವರೇ ಮೊದಲಾದ ಪ್ರಜೆಗಳೆಂದು **ವಿಶಃ** ಎಂಬ ಶಬ್ದಕ್ಕೆ ಅರ್ಥವನ್ನು ವಿವರಿಸಿ, ಈ ಪ್ರಜೆಗಳನ್ನು **ಬಾಧಾಪರಿಹಾರೇಣ ರಕ್ಷತ** ಮರುದ್ದೇವತೆಗಳು ಯಾವ ವಿಧವಾದ ತೊಂದರೆಗೂ ಸಿಲುಕದಂತೆ ಅವರನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ. ಎರಡನೆಯ ಅರ್ಥದಲ್ಲಿ **ಯದ್ವಾ ಉಕ್ತ-ಲಕ್ಷಣಕಾಲಸ್ಯ ಅಸುರವಿಶೇಷಸ್ಯ ವಾ ಪ್ರಜಾಃ ಪರಿವರ್ಜಯತ ।** ಯಜಮಾನನಿಗೆ ತೊಂದರೆಯನ್ನು ಉಂಟುಮಾಡುವ ಕಾಲವು ಒದಗದಂತೆಯೂ, ಅಥವಾ ತೃಣಸ್ಕಂದನೆಂಬ ಹೆಸರುಳ್ಳ ಅಸುರನ ಪ್ರಜೆಯು ಎಂದರೆ ದುಷ್ಟಸ್ವಭಾವವುಳ್ಳ ಪುತ್ರಭೃತ್ಯಾದಿಗಳು ನಾಶವಾಗುವಂತೆಯೂ ಮರುದ್ದೇವತೆಗಳ ಅನುಗ್ರಹವನ್ನು ಆಶಿಸಿದೆ. **ವಿಶಃ** ಎಂಬ ಪದವು ಮನುಷ್ಯನಾಮಗಳಲ್ಲಿ (ನಿ. ೨-೮) ಪಠಿತವಾಗಿದೆ. ಮತ್ತು,

**ಜರಾಬೋಧ ತದ್ವಿವಿಡ್ಢಿ ವಿಶೇ ವಿಶೇ ಯಜ್ಞಿಯಾಯ ।**
**ಸ್ತೋಮಂ ರುದ್ರಾಯ ದೃಶೀಕಂ ॥**

(ಋ. ಸಂ. ೧-೨೭-೧೦)

ಈ ಋಕ್ಕಿನಲ್ಲಿ **ವಿಶೇ ವಿಶೇ** ಎಂಬ ಪದವು ಮನುಷ್ಯಸ್ಯ ಮನುಷ್ಯಸ್ಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸಾಯಣರು **ಪುತ್ರಭೃತ್ಯಾದಿರೂಪಾಃ ಪ್ರಜಾಃ** ಎಂದು ಅರ್ಥವನ್ನು ವಿವರಿಸಿದ್ದಾರೆ.

**ನಃ ಊರ್ಧ್ವಾನ್ ಕರ್ತ ಜೀವಸೇ—ಅಸ್ಮಾನ್ ಚಿರಜೀವನಾಯ ಕುರುತ ।** ಯಜಮಾನರಾದ ನಮ್ಮನ್ನು ಮರುದ್ದೇವತೆಗಳು ಬಹಳಕಾಲ ಬದುಕುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ಊರ್ಧ್ವ ಉಚ್ಛ್ರಿತೋ ಭವತಿ** (ನಿ. ೭-೧೫) ಉನ್ನತವಾಗಿರುವುದು ಎಂದರ್ಥ. ಸಾಧಾರಣವಾಗಿ ಭೌತಿಕವಾದ ಔನ್ನತ್ಯವನ್ನು ತೋರಿಸಲು ಈ ಪದವನ್ನು ಪಯೋಗಿಸುತ್ತೇವೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಅತ್ಯುತ್ತಮವಾದ ಆರ್ಥಿಕ ಮತ್ತು ನೈತಿಕಾಭಿವೃದ್ಧಿಯೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ತೃಣಸ್ಕಂದಸ್ಯ**—ತೃಣವತ್ ಸ್ಕಂದಃ ಪರಿಚಲನಂ ಯಸ್ಯ. ಸಮಾಸಸ್ವರದಿಂದ ಅಂತೋದಾತ್ತವಾಗುತ್ತದೆ.

**ವೃಙ್ಕ್ತ**—ವೃಜೀ ವರ್ಜನೇ. ಧಾತು. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್ ಥಸ್ ಥ**—ಎಂಬುದರಿಂದ ತಾದೇಶ. ಶ್ನಮ್ ವಿಕರಣ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅದರ ಅಕಾರಕ್ಕೆ ಲೋಪ. ನಕಾರಕ್ಕೆ ಅನುಸ್ವಾರ ಪರಸವರ್ಣ. ತಿಙಂತ ನಿಘಾತಸ್ವರ ಬರುತ್ತದೆ.

**ಕರ್ತ**— ಡುಕೃಇಞ್ ಕರಣೇ. ಧಾತು. ಲೋಟ್ ಮಧ್ಯಮಪುರುಷದಲ್ಲಿ ತಾದೇಶ ಬಂದಾಗ **ತಪ್ತನಪ್ತನಥನಾಶ್ಚ** ಎಂಬುದರಿಂದ ಅದಕ್ಕೆ ತಬಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ಪಿತ್ತಾದುದರಿಂದ ಙಿತ್ವ ಬರುವುದಿಲ್ಲ. **ಸಾರ್ವಧಾತುಕಾ**— ಎಂಬುದರಿಂದ ಗುಣ. ರಪರವಾಗಿ ಬರುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ಜೀವಸೇ**— ಜೀವ ಪ್ರಾಣಧಾರಣೇ. ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**— (ಪಾ. ಸೂ. ೩-೪-೯) ಎಂಬುದರಿಂದ ಅಸೇ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದುದರಿಂದ **ಕೃನ್ಮೇ ಜಂತಃ** ಎಂಬುದರಿಂದ ಅವ್ಯಯ ಸಂಜ್ಞಾ ಬರುತ್ತದೆ. ॥ ೩ ॥

ಇಲ್ಲಿಗೆ ನೂರ ಎಪ್ಪತ್ತೆರಡನೇ ಸೂಕ್ತ ಮುಗಿದುದು.



## ನೂರ ಎಪ್ಪತ್ತಮೂರನೆಯ ಸೂಕ್ತವು

**ಗಾಯತ್ಸಾಮೇತಿ ತ್ರಯೋದಶರ್ಚಂ ನವಮಂ ಸೂಕ್ತಮಾಗಸ್ತ್ಯಂ ತ್ರೈಷ್ಟುಭಮೈಂದ್ರಂ । ಗಾಯತ್ಸಪ್ತೋನೇತ್ಯನುಕ್ರಾಂತಂ ॥ ಸಮೂಳ್ಹೇ ದಶರಾತ್ರೇ ತೃತೀಯೇ ಛಂದೋಮೇ ಮರುತ್ವತೀಯ ಶಸ್ತ್ರ ಏತತ್ಸೂಕ್ತಂ । ವಿಶ್ವಜಿತೋಽಗ್ನಿಂ ನರ ಇತಿ ಖಂಡೇ ಸೂತ್ರಿತಂ । ತೃತೀಯಸ್ಯೈಂದ್ರಃ ಸ್ವಾಹಾ ಗಾಯತ್ಸಾಮ । ಆ. ೮-೭ । ಇತಿ ॥**

ಅನುವಾದವು— **ಗಾಯತ್ಸಾಮ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು— ಇದರಲ್ಲಿ ಹದಿಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಗಾಯತ್ಸಪ್ತೋನಾ** ಎಂದು ಹೇಳಿರುವುದು. ಸಮೂಳ್ಹವೆಂಬ ಹತ್ತು ದಿವಸಮಾಡುವ ಯಾಗದಲ್ಲಿ ತೃತೀಯ ಛಂದೋಮಾ ಮಂತ್ರಗಳಲ್ಲಿ ಮರುತ್ವತೀಯ ಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ವಿಶ್ವಜಿತೋಽಗ್ನಿಂ ನರಃ** ಎಂಬ ಖಂಡದಲ್ಲಿ **ತೃತೀಯಸ್ಯೈಂದ್ರಃ ಸ್ವಾಹಾ ಗಾಯತ್ಸಾಮ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೭)

## ಸೂಕ್ತ—೧೭೩

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೩ ॥
ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೧೩, ೧೪, ೧೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ – ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಗಾಯತ್ಸಾಮ ನಭನ್ಯಂ೧ ಯಥಾ ವೇರರ್ಚಾಮ ತದ್ವಾವೃಧಾನಂ ಸ್ವರ್ವತ್ ।
ಗಾವೋ ಧೇನವೋ ಬರ್ಹಿಷ್ಯದಬ್ಧಾ ಆ ಯತ್ಸದ್ಮಾನಂ ದಿವ್ಯಂ ವಿವಾಸಾನ್ ॥೧॥

॥ ಪದಪಾಠಃ ॥

ಗಾಯತ್ । ಸಾಮ । ನಭನ್ಯಂ । ಯಥಾ । ವೇಃ । ಅರ್ಚಾಮ । ತತ್ । ವವೃಧಾನಂ । ಸ್ವಃऽವತ್ ।
ಗಾವಃ । ಧೇನವಃ । ಬರ್ಹಿಷಿ । ಅದಬ್ಧಾಃ । ಆ । ಯತ್ । ಸದ್ಮಾನಂ । ದಿವ್ಯಂ । ವಿವಾಸಾನ್ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನಭನ್ಯಂ ನಭಸ್ಯಂ ನಭಸಿ ಭವಂ ನಭೋವ್ಯಾಪಿನಂ ಹಿಂಸಕಂ ವಾ ರಾಕ್ಷಸಾದಿಕಸ್ಯ । ನಭತಿರ್ವಧಕರ್ಮಾ ನಭತ್ಯರ್ದತೀತಿ ವಧಕರ್ಮಸು ಗಣನಾತ್ । ತಾದೃಶಂ ಸಾಮ ಹೇ ಇಂದ್ರ ಯಥಾ ವೇಃ ಯೇನ ಪ್ರಕಾರೇಣ ವೇತ್ಸಿ ತಥಾ ಗಾಯತ್ । ಗಾಯತ್ಯುದ್ಗಾತಾ । ತತ್ತಸ್ಮಾದ್ಯತಃ ಸ್ತೌತಿ ತತಃ ಕಾರಣಾದ್ವವೃಧಾನಂ ವರ್ಧಮಾನಂ ಸ್ವರ್ವತ್ ಫಲಭೂತೇನ ಸ್ವರ್ಗೇಣ ತದ್ವಚ್ಛಸ್ತ್ರಂ ಯಥಾ ವೇಃ ತಥಾರ್ಚಾಮ । ಪೂಜಯಾಮ । ಶಂಸಾಮೇತ್ಯರ್ಥಃ । ಸ್ತುತಮನುಶಂಸತೀತಿ ನ್ಯಾಯಾತ್ । ಯದ್ವಾ । ತದುಕ್ತಲಕ್ಷಣಂ ಸಾಮ ವವೃಧಾನಂ ಸರ್ವತ್ರ ಯಥಾ ಭವತಿ ತಥಾರ್ಚಾಮ । ಕಿಂಚ ಧೇನವೋ ದೋಗ್ಧ್ರ್ಯೋಽದಬ್ಧಾ ಅಹಿಂಸಿತಾ ಗಾವೋ ಯದ್ಬರ್ಹಿಷಿ ಸದ್ಮಾನಂ ಸೀದಂತಂ ದಿವ್ಯಂ ದಿವಿ ಭವಮಿಂದ್ರಂ ತ್ವಾಮಾ ವಿವಾಸಾನ್ । ವಿವಾಸತಿಃ ಪರಿಚರಣಕರ್ಮಾ । ಆಗತ್ಯ ಪರಿಚರಂತಿ ಕ್ಷೀರಂ ದುಹಂತಿ ತಥಾರ್ಚಾಮ ॥

॥ ಪ್ರತಿಪದಾರ್ಥ ॥

(**ಹೇ ಇಂದ್ರ**— ಎಲೈ ಇಂದ್ರನೇ) । **ನಭನ್ಯಂ**— ನಭೋವ್ಯಾಪಿಯಾದ (ರಾಕ್ಷಸಾದಿ ಹಿಂಸಕವಾದ) । **ಸಾಮ**—ಸಾಮವನ್ನು । **ಯಥಾ**—ಯಾವ ಪ್ರಕಾರ । **ವೇಃ**—ನೀನು ತಿಳಿದಿದ್ದೀಯೋ । (**ತಥಾ**—ಅದೇಪ್ರಕಾರ)। **ಗಾಯತ್**—(ಉದ್ಗಾತೃವು) ಗಾನಮಾಡುತ್ತಾನೆ । **ತತ್**—ಆದಕಾರಣ । **ವವೃಧಾನಂ**—ಅಭಿವೃದ್ಧಿಹೊಂದುತ್ತಿರು

ವುದೂ । **ಸ್ವರ್ವತ್**—ಫಲಭೂತಸ್ವರ್ಗಯುಕ್ತವೂ ಆದ ಶಸ್ತ್ರಮಂತ್ರವನ್ನು । **ಅರ್ಚಾಮ**—(ನಿನಗೆ ಅಂಗೀಕಾರಾರ್ಹವಾಗುವಂತೆ) ಅರ್ಪಿಸುತ್ತೇವೆ (ಶಂಸನಮಾಡುತ್ತೇವೆ)। [ಅಥವಾ **ಸ್ವರ್ವತ್**—ಫಲಭೂತಸ್ವರ್ಗಯುಕ್ತವಾದ ।**ತತ್**—ಆ ಸಾಮವನ್ನು । **ವವ್ರಧಾನಂ**—ಸರ್ವತ್ರ (ವ್ಯಾಪ್ತವಾಗಿ) ಅಭಿವೃದ್ಧವಾಗುವಂತೆ। **ಅರ್ಚಾಮ**—ಶಂಸನಮಾಡುತ್ತೇವೆ ।] (**ಕಿಂಚ**—ಮತ್ತು) **ಧೇನವಃ**—ಹಾಲುಕರೆಯುವವೂ। **ಅದಬ್ಧಾಃ**—ಅಹಿಂಸಿತಗಳೂ (ಆದ)। **ಗಾವಃ**—ಗೋವುಗಳು । **ಬರ್ಹಿಷಿ**—ದರ್ಭಾಸನದ ಮೇಲೆ । **ಸದ್ಮಾನಂ**—ಆಸೀನನೂ । **ದಿವ್ಯಂ**—ಸ್ವರ್ಗವಾಸಿಯೂ ಆದ ನಿನ್ನನ್ನು । **ಯತ್**—ಹೇಗೆ । **ಆ ವಿವಾಸಾನ್**— ಬಂದು ಪರಿಚರಿಸುತ್ತವೆಯೋ । (**ತಥಾ ಅರ್ಚಾಮ**—ಹಾಗೆ ಪೂಜಿಸುತ್ತೇವೆ).

॥ ಭಾವಾರ್ಥ ॥

ಎಲೈ ಇಂದ್ರನೇ, ಉದ್ಗಾತೃವು ಗಾನಮಾಡುವ ಸಾಮವು ನಿನ್ನ ಅಂಗೀಕಾರಕ್ಕೆ ಅರ್ಹವಾಗಿದೆ ಮತ್ತು ನಭೋಲೋಕವನ್ನು ವ್ಯಾಪಿಸುತ್ತದೆ. ಇದೇ ಸಾಮವನ್ನೇ ಸಮೃದ್ಧಿಸಾಧಕವೆಂದೂ ನಾವು ಶಂಸಿಸುತ್ತೇವೆ ಮತ್ತು ಸ್ವರ್ಗಲೋಕವಾಸಿಯೂ, (ಈಗ) ನಮ್ಮ ಯಾಗಶಾಲೆಯಲ್ಲಿ ದರ್ಭಾಸನದಲ್ಲಿ ಆಸೀನನೂ ಆದ ನಿನ್ನನ್ನು, ಹಾಲು ಕರೆಯುವ ಮತ್ತು ಅಹಿಂಸಿತವಾದ ಗೋವುಗಳು ತಮ್ಮ ಕ್ಷೀರದಿಂದ ಉಪಚರಿಸುವಂತೆ ನಾವು ನಿನ್ನನ್ನು ಪೂಜಿಸುತ್ತೇವೆ.

English Translation.

The priests chant the heaven-ascending Sama, as you know (it) for such (praise) do we venerate as the cause of increase and conferrer of heaven, whence the cows, unimpeded, do honour to the divine (Indra), who is seated on the sacred grass.

॥ ವಿಶೇಷವಿಷಯಗಳು ॥

ಪ್ರಕೃತವಾದ ೧-೧೭೩ನೆಯ ಸೂಕ್ತವು ಮಾಧ್ಯಂದಿನಸವನಕಾಲದಲ್ಲಿ ಹೋತೃವು ಪಠಿಸಬೇಕಾದ ಮರುತ್ವತೀಯ ಶಸ್ತ್ರಕ್ಕೆ ಸಂಬಂಧಿಸಿದುದಾಗಿದೆಯೆಂದು ಸಾಯಣರು ತಿಳಿಸುತ್ತಾ "**ಸಮೂಳ್ಹೇ ದಶರಾತ್ರೇ ತೃತೀಯೇ ಛಂದೋಮೇ ಮರುತ್ವತೀಯಶಸ್ತ್ರೇ ಏತತ್ಸೂಕ್ತಂ**" ಎಂದಿದ್ದಾರೆ. ಪ್ರಕೃತವಾದ ಸೂಕ್ತಕ್ಕೆ ಆ ಶಸ್ತ್ರದಲ್ಲಿ ಯಾವ ಸ್ಥಾನ ಎಂದು ತಿಳಿಯಬೇಕಾದರೆ **ಮರುತ್ವತೀಯ ಶಸ್ತ್ರದ** ಸ್ವರೂಪವನ್ನು ಮೊದಲು ತಿಳಿಯಬೇಕು. ಈ ಶಸ್ತ್ರದ ಸ್ವರೂಪವನ್ನು ತಿಳಿಸುವ ಪೂರ್ವಕಥೆಯೊಂದು ಐತರೇಯ ಬ್ರಾಹ್ಮಣದಲ್ಲಿ ಉದಹರಿಸಲ್ಪಟ್ಟಿದೆ. ಮರುತ್ವತೀಯ ಶಸ್ತ್ರದ ಪ್ರಕರಣವನ್ನು ಪರಿಶೀಲಿಸಿದರೆ ಅಲ್ಲಿ ಮರುತ್ತುಗಳು ತನಗೆ ತೋರಿಸಿದ ವಿಶ್ವಾಸದ ಗುರುತಾಗಿ ತನಗೆ ಅರ್ಪಿತವಾದ ಹವಿಸ್ಸಿನಲ್ಲಿ ಇಂದ್ರನು ಅವರಿಗೂ ಸಹ ಭಾಗವು ದೊರೆಯಬೇಕೆಂದಪೇಕ್ಷಿಸುತ್ತಾನೆ.

> **ಇಂದ್ರೋ ವೈ ವೃತ್ರಂ ಹನಿಷ್ಯನ್ತ್ಸರ್ವಾ ದೇವತಾ ಅಬ್ರವೀದನು ಮೋಪತಿಷ್ಠಧ್ವಮುಪ ಮಾ ಹ್ವಯಧ್ವಮಿತಿ ತಥೇತಿ ತಂ ಹನಿಷ್ಯಂತ ಆದ್ರವನ್ಸೋಽವೇನ್ಮಾಂ ವೈ ಹನಿಷ್ಯಂತ ಆದ್ರವಂತಿ ಹಂತೇಮಾನ್ ಭೀಷಯಾ ಇತಿ ತಾನಭಿಪ್ರಾಶ್ವಸೀತ್ತಸ್ಯ ಶ್ವಸಥಾ ದೀಷಮಾಣಾ ವಿಶ್ವೇ ದೇವಾ ಅದ್ರವನ್ಮರುತೋ ಹೈನಂ ನಾಜಹುಃ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವೈನಮೇತಾಂ ವಾಚಂ ವದಂತ ಉಪಾತಿಷ್ಠಂತ ॥**

(ಐ. ಬ್ರಾ. ೩-೨೦).

ವೃತ್ರನನ್ನು ಹನನ ಮಾಡುವ ಕಾಲದಲ್ಲಿ ಇಂದ್ರನು ಎಲ್ಲಾ ದೇವತೆಗಳನ್ನೂ ಉದ್ದೇಶಿಸಿ "ನೀವು ನನಗೆ ಈ ವೃತ್ರಾಸುರನನ್ನು ಕೊಲ್ಲುವ ಕೆಲಸದಲ್ಲಿ ಸಹಾಯಮಾಡಿ" ಎಂದು ಕೇಳಿಕೊಂಡಾಗ ಅವರು ಹಾಗೆಯೇ ಆಗಲೆಂದು ಒಪ್ಪಿ ಅದಕ್ಕಾಗಿ ಓಡಿಬಂದರು. ಆಗ ವೃತ್ರಾಸುರನು "ಇವರು ನನ್ನನ್ನು ಕೊಲ್ಲಲು ಬರುತ್ತಿದ್ದಾರೆ. ಇವರನ್ನು ಭಯಗೊಳಿಸುತ್ತೇನೆ" ಎಂದು ಬಿರುಸಾದ ಉಸಿರನ್ನು ಬಿಟ್ಟನು. ಕೂಡಲೇ ಎಲ್ಲಾ ದೇವತೆಗಳೂ ಭಯಪಟ್ಟು ಓಡಿಬಿಟ್ಟರು. ಆದರೆ ಮರುತ್ತುಗಳು ಮಾತ್ರ ಇಂದ್ರನನ್ನು ಬಿಟ್ಟುಕೊಡಲಿಲ್ಲ. "ಈತನನ್ನು ಹೊಡಿ. ಇವನ ಮೇಲೆ ನಿನ್ನ ಪೂರ್ಣವಾದ ಬಲವನ್ನು ಪ್ರಯೋಗಿಸು" ಎಂದು ಇಂದ್ರನನ್ನು ಹುರಿದುಂಬಿಸುತ್ತಿದ್ದರು, ಎಂಬ ಇದೇ ವಿಷಯವನ್ನು,

**ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।**
**ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸಿ ॥**

(ಋ. ಸಂ. ೮. ೯೬. ೭).

ಎಂಬ ಋಕ್ಕಿನಲ್ಲಿ ಸ್ತುತಿಸಿದೆ. ಆದುದರಿಂದಲೇ ಇಂದ್ರನು ಮರುತ್ತುಗಳು ತನಗೆ ಕಷ್ಟಕಾಲದಲ್ಲಿ ಮಾಡಿದ ಉಪಕಾರವನ್ನು ಸ್ಮರಿಸುತ್ತಾ,

**ಸೋಽವೇದಿಮೇ ವೈ ಕಿಲ ಮೇ ಸಚಿವಾ ಇಮೇ ಮಾಕಾಮಯಂತ ಹಂತೇಮಾನಸ್ಮಿನ್ನುಕ್ಥ ಆಭಜಾ ಇತಿ ತಾನೇತಸ್ಮಿನ್ನುಕ್ಥ ಆಭಜದಥ ಹೈತೇ ತರ್ಹ್ಯುಭೇ ಏವ ನಿಷ್ಕೇವಲ್ಯೇ ಉಕ್ಥೇ ಆಸತುಃ । ಮರುತ್ವತೀಯಂ ಗ್ರಹಂ ಗೃಹ್ಣಾತಿ ಮರುತ್ವತೀಯಂ ಪ್ರಗಾಥಂ ಶಂಸತಿ ಮರುತ್ವತೀಯಂ ಸೂಕ್ತಂ ಶಂಸತಿ ಮರುತ್ವತೀಯಾಂ ನಿವಿದಂ ದಧಾತಿ ಮರುತಾಂ ಸಾ ಭಕ್ತಿಃ ॥**

(ಐ. ಬ್ರಾ. ೩–೨೦).

"ಈ ಮರುತ್ತುಗಳೇ ನನ್ನ ನಿಜವಾದ ಸಖರು. ಅವರು ನನ್ನನ್ನು ಪ್ರೀತಿಸಿದರು. ಆದುದರಿಂದ ನಾನು ನನ್ನನ್ನುದ್ದೇಶಿಸಿದ ಉಕ್ಥದಲ್ಲಿ ಅವರಿಗೂ ಭಾಗವನ್ನು ಕೊಡುತ್ತೇನೆ" ಎಂದು ಸಂಕಲ್ಪಿಸಿ ಅವರಿಗೂ ಸಹ ಭಾಗವನ್ನು ಕಲ್ಪಿಸಿದನು. ಮರುತ್ತುಗಳಿಗಾಗಿ ಗ್ರಹವನ್ನು (ಪಾನಪಾತ್ರೆ) ಹಿಡಿದನು. ಪ್ರಗಾಥವನ್ನು ಪಠಿಸಿದನು. ಹೀಗೆಯೇ ನಾನಾವಿಧವಾಗಿ ಅವರನ್ನು ಪಚರಿಸಿದನು ಎಂದು ಮರುತ್ವತೀಯ ಶಸ್ತ್ರವನ್ನು ವರ್ಣಿಸುವ ಸಂದರ್ಭದಲ್ಲಿ ಉಕ್ತವಾಗಿದೆ. ಮತ್ತು,

**ಇಂದ್ರಂ ವೈ ವೃತ್ರಂ ಜಘ್ನಿವಾಂಸಂ ನಾಸ್ತೃತೇತಿ ಮನ್ಯಮಾನಾಃ ಸರ್ವಾ ದೇವತಾ ಅಜಹುಸ್ತಂ ಮರುತ ಏವ ಸ್ವಾಪಯೋ ನಾಜಹುಃ ಪ್ರಾಣಾ ವೈ ಮರುತಃ ಸ್ವಾಪಯಃ ಪ್ರಾಣಾ ಹೈವೈನಂ ತಂ ನಾಜಹುಸ್ತಸ್ಮಾದೇಷೋಽಚ್ಯುತಃ ಸ್ವಾಪಿಮಾನ್ಪ್ರಗಾಥಃ ಶಸ್ಯತ ಆಸ್ವಾಪೇ ಸ್ವಾಪಿಭಿರಿತಿ ॥**

(ಐ. ಬ್ರಾ. ೩–೧೬).

ವೃತ್ರಾಸುರನ ವಧಕಾಲದಲ್ಲಿ ಸಕಲ ದೇವತೆಗಳೂ ಇಂದ್ರನನ್ನು ತ್ಯಜಿಸಿ ಹೋದಾಗ ಮರುತ್ತುಗಳು ಮಾತ್ರ ಅವನನ್ನು ಬಿಡದಿದ್ದುದರಿಂದ ಅವುಗಳೇ ಅವನ ಪ್ರಾಣರೂಪರಾದ ಸಖರಾದರು. ಆದುದರಿಂದಲೇ ಅವರು ಇಂದ್ರನನ್ನು ತ್ಯಜಿಸಲಿಲ್ಲ ಎಂದು ಇಂದ್ರನಿಗೂ ಮರುತ್ತುಗಳಿಗೂ ಇರತಕ್ಕ ಆತ್ಯಂತಿಕವಾದ ಸಂಬಂಧವನ್ನು ತಿಳಿಸಿದೆ. ಮತ್ತು ಇದೇ ಮರುತ್ವತೀಯಗ್ರಹದ ಸ್ವರೂಪವನ್ನು ವರ್ಣಿಸುವಾಗ ಶತಪಥಬ್ರಾಹ್ಮಣದಲ್ಲಿ ಇಂದ್ರನಿಗೂ ಮರುತ್ತುಗಳಿಗೂ

ಇರತಕ್ಕ ರಾಜಪ್ರಜಾಸಂಬಂಧವನ್ನೂ ತಿಳಿಸಿದೆ. ಮೇಲೆ ಉದಾಹೃತವಾಗಿರುವ ಐತರೇಯ ಬ್ರಾಹ್ಮಣದ ವಾಕ್ಯದಲ್ಲಿ ಉಕ್ತವಾಗಿರುವ ಮರುತ್ವತೀಯಗ್ರಹ, ಪ್ರಗಾಥ, ನಿವಿದ್ ಮತ್ತು ಶಸ್ತ್ರಗಳ ಸ್ವರೂಪವನ್ನು ಮುಂದೆ ತಿಳಿಸಲಾಗುತ್ತದೆ.

**"ತೃತೀಯೇ ಛಂದೋಮೇ ಮರುತ್ವತೀಯಶಸ್ತ್ರೇ ಏತತ್ಸೂಕ್ತಂ"** ಎಂದು ಸಾಯಣರು ಸೂಕ್ತದ ಉಪೋದ್ಘಾತದಲ್ಲಿ ತಿಳಿಸಿದ್ದಾರೆ. ದ್ವಾದಶಾಹದ ಏಳು, ಎಂಟು ಮತ್ತು ಒಂಭತ್ತನೇ ದಿನಗಳಲ್ಲಿ ಪಠಿಸಬೇಕಾದ ಸ್ತೋಮಗಳಿಗೆ ಛಂದೋಮವೆಂದು ಹೆಸರು. ಚತುರ್ವಿಂಶ, ಚತುಶ್ಚತ್ವಾರಿಂಶ ಮತ್ತು ಅಷ್ಟಚತ್ವಾರಿಂಶ ಎಂದು ಮೂರು ಕ್ರಮಗಳಿಂದ ಛಂದೋಮದ ಸ್ತೋಮರೂಪವಾದ ಸ್ತುತಿಗಳಿವೆ. ಅವುಗಳಲ್ಲಿ ಪ್ರಕೃತವಾದ ಸೂಕ್ತವು ಮೂರನೆಯ ಛಂದೋಮಕ್ಕೆ ಸೇರಿದುದಾಗಿದೆ. ಇದು ಮರುತ್ವತೀಯ ಶಸ್ತ್ರದ ಒಂದು ಭಾಗವಾಗಿ ಮಾತ್ರವಿರುತ್ತದೆ. ಉಳಿದ ಸೂಕ್ತಗಳು ಮರುತ್ವತೀಯ ಶಸ್ತ್ರದಲ್ಲಿ ಯಾವ ರೀತಿ ಉಪಯುಕ್ತವಾಗಿವೆಯೆಂಬುದನ್ನು ಮುಂದೆ ತಿಳಿಸಲಾಗುತ್ತದೆ.

**ನಭನ್ಯಂ—ನಭಸಿ ಭವಂ ನಭನ್ಯಂ ನಭೋವ್ಯಾಪಿನಂ । ಹಿಂಸಕಂ ವಾ ರಾಕ್ಷಸಾದಿಕಸ್ಯ । ನಭತೇ ಅರ್ದಯತಿ** ಎಂಬ ಈ ಪದವನ್ನು ವಧಕರ್ಮನಾಮಗಳಲ್ಲಿ (ನಿ. ೩-೧೦) ಯಾಸ್ಕರು ಪಾಠಮಾಡಿದ್ದಾರೆ. ಸಾಯಣರು ನಭನ್ಯಂ ಎಂಬ ಈ ಪದಕ್ಕೆ ನಭಸ್ಯಂ ಎಂದು ಪಾಠವನ್ನು ಅಂಗೀಕರಿಸಿ, ಸಾಮ ಎಂಬ ಪದಕ್ಕೆ ವಿಶೇಷಣ ವನ್ನಾಗಿ ಹೇಳಿ, ಈ ಸಾಮವು (ಘಟ್ಟಿಯಾಗಿ ಪಠಿಸುವುದರಿಂದ) ಅಂತರಿಕ್ಷದಲ್ಲಿ ವ್ಯಾಪಿಸಿರುವುದೆಂದೂ, ಕೇಡನ್ನು ಉಂಟುಮಾಡುವ ರಾಕ್ಷಸರೇ ಮೊದಲಾದವರನ್ನು ಹಿಂಸೆಪಡಿಸುವುದೆಂದೂ ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ.

**ನಭನ್ಯಂ ಸಾಮ ಯಥಾ ವೇಃ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು. ಇದೇ ವಾಕ್ಯವು ಐತರೇಯ ಬ್ರಾಹ್ಮಣದಲ್ಲಿ ಉದಾಹೃತವಾಗಿದ್ದು ಅದನ್ನು ಪರಿವರ್ತಿಸುವಾಗ **ಕೀತ್** (Keith) ಎಂಬ ಆಂಗ್ಲಪಂಡಿತನು ಈ ರೀತಿ ಪರಿವರ್ತಿಸಿ ಇಲ್ಲಿ ಸಾಯಣರು ವಿವರಿಸುವ ಅರ್ಥಕ್ಕೆ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾನೆ. (ಐ. ಬ್ರಾ. ೫-೨೦).

"Let him say the Saman, springing forth as of a bird."
[Harward Oriental Series Vol. 25 p. 245].

ಇಲ್ಲಿ **ವೇಃ ಯಥಾ** ಎಂದರೆ ಪಕ್ಷಿಯೋಪಾದಿಯಲ್ಲಿ ಎಂದೂ, **ನಭನ್ಯಂ** ಎಂದರೇ ಸ್ವತಃ ಉದ್ಭವಿಸಿ ಪ್ರಕಟಿತವಾಗುವ ಎಂದೂ ಅರ್ಥಮಾಡಿದೆ. ಈ ಅರ್ಥವು ಅಷ್ಟು ಅನುಚಿತವೆನ್ನುವಂತಿಲ್ಲ. ಸಂದರ್ಭಕ್ಕೆ ಸರಿಯಾಗಿಯೇ ಇದೆ. ಈ ರೀತಿ ತಾತ್ಪರ್ಯವನ್ನು ಹೇಳಲು ಆಧಾರವೂ ಇದೆ. ಹೇಗೆಂದರೆ, ಭಕ್ತನು ಇಂದ್ರನನ್ನು ಸಮೀಪಿಸುವಾಗ ಪಕ್ಷಿಯಂತೆ ವೇಗವಾಗಿ ಇಂದ್ರನನ್ನು ಸಮೀಪಿಸುವನು ಎಂದು ಪಕ್ಷಿಸಾಮ್ಯವು ಋಕ್ಸಂಹಿತೆಯಲ್ಲಿಯೇ ಹೇಳಲ್ಪಟ್ಟಿದೆ. ಉದಾಹರಣೆಗೆ-

**ವಯಃ ಸುಪರ್ಣಾ ಉಪ ಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ ।**
**ಅಪ ಧ್ವಾಂತಮೂರ್ಣುಹಿ ಪೂರ್ಧಿ ಚಕ್ಷುರ್ಮುಮುಗ್ಧ್ಯ೧ಸ್ಮಾನ್ನಿಧಯೇವ ಬದ್ಧಾನ್ ॥**
(ಋ. ಸಂ. ೧೦-೭೩-೧೧).

ಎಂಬ ಈ ಋಕ್ಕು ಸಹ ಮರುತ್ವತೀಯನಿವಿನ್ಮಂತ್ರಗಳಲ್ಲಿಯೇ ಸೇರಿರುತ್ತೆ. ಇಲ್ಲಿ **ವಯಃ** ಎಂಬ ಪದಕ್ಕೆ ನಿರುಕ್ತ ಕಾರರು ನಿರ್ವಚನವನ್ನು ತೋರಿಸುತ್ತಾ,

**“ವಯೋ ವೇರ್ಬಹುವಚನಂ । ಸುಪರ್ಣಾಃ ಸುಪತನಾಃ”**

(ನಿ. ೪–೩).

ವಿ ಶಬ್ದಕ್ಕೆ ಬಹುವಚನವು **ವಯಃ** ಎಂದಾಗುತ್ತದೆ. ಉತ್ತಮವಾದ ಗರಿಗಳುಳ್ಳ ಪಕ್ಷಿಗಳು ಹಾರಿಬರುವಂತೆ ಋಷಿಗಳು ವೇಗವಾಗಿ ಬಂದು ಇಂದ್ರನನ್ನು ಸೇರುತ್ತಾರೆ ಎಂದು **ವಿ** ಶಬ್ದಕ್ಕೆ ಅರ್ಥಮಾಡಿದೆ. ಮತ್ತು

**“ಗಂತೃತ್ವಾತ್, ಪಕ್ಷಿಸಾದೃಶ್ಯಾದ್ವಾ ಮರುತೋಽತ್ರ ವಯ ಉಚ್ಯಂತೇ”**

ಆಕರ್ಷಕವಾಗಿ ಸಂಚರಿಸುವ ಸ್ವಭಾವವಿರುವುದರಿಂದಲೂ, ಪಕ್ಷಿಸಾದೃಶ್ಯವಿರುವುದರಿಂದಲೂ ಸಹ ಮರುತ್ತುಗಳಿಗೇ **ವಯಃ** ಎಂಬ ವಿಶೇಷಣವಿದೆಯೆಂದು ಸಾಯಣರೇ ಅನೇಕ ಕಡೆಗಳಲ್ಲಿ ಅರ್ಥಮಾಡಿದ್ದಾರೆ. (ಋ. ಸಂ. ೧-೧೫೫-೫). ಅದರಂತೆ ಇಲ್ಲಿಯೂ ಸಹ **ವೇಃ ಯಥಾ** ಎಂಬುದಕ್ಕೆ ಪಕ್ಷಿಯಂತೆ ಎಂದರ್ಥಮಾಡಬಹುದು. ಆಗ **ನಭನ್ಯಂ** ಎಂಬುದರ ಅರ್ಥವೇನು ಎಂಬುದನ್ನು ತಿಳಿಯಬೇಕು. **ನಭನ್ಯಃ** ಎಂಬ ಪದಕ್ಕೆ ಹಿಂದೆ ಸಾಯಣರು ಈ ರೀತಿ ಅರ್ಥಮಾಡಿದ್ದಾರೆ.

**ನಭಸಿ ಆಕಾಶೇ ಭವೋ ನಭಸ್ವಾನ್ ವಾಯುರಿವ ।**

(ಋ. ಸಂ. ಭಾಷ್ಯ. ೧-೧೪೯-೩).

ಆಕಾಶಸ್ಥನಾದ ವಾಯುವಿಗೆ ವಿಶೇಷಣವಾಗಿ ಈ ಪದವು ಉಪಯೋಗಿಸಲ್ಪಟ್ಟಿದೆ ನಿರುಕ್ತಕಾರರು, **ನಭತಿ, ಅರ್ದತಿ** (ನಿ. ೨-೧೯) ಎಂದು **ವಧಕರ್ಮ** ನಾಮಗಳಲ್ಲಿ **ನಭತಿ** ಎಂಬ ಪದವನ್ನು ಸೇರಿಸಿರುವುದರಿಂದ ಸಾಯಣರು ಇದರ ಆಧಾರದ ಮೇಲೆ ಪ್ರಕೃತವಾದ ಋಕ್ಕಿನಲ್ಲಿ ಅರ್ಥಾಂತರವನ್ನು ಹೇಳುತ್ತಾ **ನಭೋವ್ಯಾಪಿನಂ ಹಿಂಸಕಂ ವಾ ರಾಕ್ಷಸಾದಿಕಸ್ಯ ;** ಹಿಂಸಕನಾದ ರಾಕ್ಷಸನ ಎಂದೂ ತಾತ್ಪರ್ಯವಾಗುತ್ತದೆಂದು ತಿಳಿಸಿದ್ದಾರೆ. ಆದರೆ,

**ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಪ್ರ ಕ್ರಂದನುರ್ನಭನ್ಯಸ್ಯ ವೇತು ।**
**ಪ್ರ ಧೇನವ ಉದಪ್ರುತೋ ನವಂತ ಯುಜ್ಯಾತಾಮದ್ರೀ ಅಧ್ವರಸ್ಯ ಪೇಶಃ ॥**

(ಋ. ಸಂ. ೭-೪೨-೧).

ಎಂಬಲ್ಲಿ **ನಭನ್ಯಸ್ಯ ಸ್ತೋತ್ರಸ್ಯ** ಎಂದು ಈ ಪದಕ್ಕೆ ಸ್ತುತಿಯೆಂದರ್ಥ ಮಾಡಿದ್ದಾರೆ. ಈ ಸಂದರ್ಭದಲ್ಲಿ Springing forth ಎಂದು Keith ಹೇಳುವಂತೆ, ಅಂತಃಸ್ಥವಾದ ಭಾವವು ಕಾವ್ಯಾತ್ಮಕವಾದ ಸ್ತುತಿರೂಪದಲ್ಲಿ ಪ್ರಕಾಶಿತವಾಗಿ ಸ್ತೋತ್ರರೂಪದಲ್ಲಿ ಇಂದ್ರನನ್ನು ಸಮೀಪಿಸುತ್ತದೆ ಎಂದರ್ಥವಾಗುತ್ತದೆ. ಆಗ ಪಕ್ಷಿಸಾದೃಶ್ಯವು ಉಚಿತವಾಗಿರುತ್ತದೆ. Monier-willams ಎಂಬ ಪಂಡಿತನೂ ಸಹ ತನ್ನ Sanskrit–English Dictionary ಯಲ್ಲಿ ಈ ಪದಕ್ಕೆ Springing forth (as a hymn, horse etc) ಎಂದು ಅರ್ಥ ಮಾಡಿದ್ದಾನೆ.

ಆದ್ದರಿಂದ ಪ್ರಕೃತವಾದ ಋಕ್ಕಿನಲ್ಲಿ **ನಭನ್ಯಂ ಸಾಮ ಯಥಾ ವೇಃ** ಎಂಬ ವಾಕ್ಯದಲ್ಲಿ **ವೇಃ** ಎಂಬುದನ್ನು ಕ್ರಿಯಾಪದವನ್ನಾಗಿ ಮಾಡಿ ಸಾಯಣರು ಅರ್ಥಮಾಡಿರುವುದಕ್ಕಿಂತ, **ವೇಃ** ಎಂಬುದನ್ನು **ವಿ** ಶಬ್ದದ ಷಷ್ಠೀ ಪ್ರಯೋಗವನ್ನಾಗಿ ಮಾಡಿ ಪಕ್ಷಿಯಂತೆ ಶೀಘ್ರವಾದುದೂ ಆಕರ್ಷಕವಾದುದೂ ಆದ ಸಾಮಸ್ತುತಿಯು ಹೃದಯದಿಂದ ಉದ್ಭವಿಸಿ ಬಂದು ಇಂದ್ರನನ್ನು ಸಮೀಪಿಸುತ್ತದೆ ಎಂದರ್ಥ ಮಾಡುವುದೇ ಉಚಿತವಾಗಿರುತ್ತದೆ. **ಸಾಮ** ಶಬ್ದದ ಅರ್ಥವೂ ಸಹ ಇದನ್ನೇ ಪುಷ್ಟೀಕರಿಸುತ್ತದೆ.

**ಸಾಮ**— ಈ ಪದದ ನಿರ್ವಚನವನ್ನು ನಿರುಕ್ತಕಾರರು ತಿಳಿಸುತ್ತಾ,

**" ಸಾಮ ಸಮ್ಮಿತಮೃಚಾಸ್ಯತೇರ್ವರ್ಚಾ ಸಮಂಮೇನ ಇತಿ ನೈದಾನಾಃ । "**

(ನಿ. ೭-೧೨).

ಋಕ್ಕಿನ ಪರಿಮಿತಿಯಿಂದ ತನ್ನ ಪರಿಮಾಣವನ್ನು ತೋರಿಸುವುದರಿಂದಲಾಗಲಿ, ಅಥವಾ **ಎಸೆ** ಎಂಬರ್ಥವುಳ್ಳ **ಅಸ್** (ಕ್ಷೇಪಣೆ) ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದಾಗಲಿ **ಸಾಮ** ಎಂದು ಪ್ರಸಿದ್ಧವಾಯಿತು ಎಂದು ಹೇಳಿದ್ದಾರೆ. ಮತ್ತು ಋಕ್ಕಿಗೆ ಸಮಾನವಾದ ಪರಿಮಿತಿಯುಳ್ಳದ್ದು. ಆದುದರಿಂದ **ಸಾಮ** ಎಂಬ ಹೆಸರೆಂದು ನಿದಾನ ಶಾಸ್ತ್ರಜ್ಞರ ಅಭಿಪ್ರಾಯವನ್ನೂ ತಿಳಿಸಿದ್ದಾರೆ. ಮತ್ತು ಋಕ್ಕಿಗೂ ಸಾಮಕ್ಕೂ ಇರತಕ್ಕ ಸಂಬಂಧವನ್ನು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ—

**ಋಕ್ಚ ವಾ ಇದಮಗ್ರೇ ಸಾಮ ಚಾಸ್ತಾಂ ಸೈವ ನಾಮ ಋಗಾಸೀದಮೋ ನಾಮ ಸಾಮ ಸಾ ವಾ ಋಕ್ಸಾಮೋಪಾವದನ್ಮಿಥುನಂ ಸಂಭವಾವ ಪ್ರಜಾತ್ಯಾ ಇತಿ ನೇತ್ಯಬ್ರವೀತ್ಸಾಮ ಜ್ಯಾಯಾನ್ವಾ ಅತೋ ಮಮ ಮಹಿಮೇತಿ ತೇ ದ್ವೇ ಭೂತ್ವೋಪಾವದತಾಂ ತೇನ ಪ್ರತಿಚನ ಸಮವದತ ತಾಸ್ತಿಸ್ರೋ ಭೂತ್ವೋಪಾವದಂಸ್ತತ್ತಿಸೃಭಿಃ ಸಮಭವತ್ತಸ್ಮಾತ್ತಿಸೃಭಿಸ್ತುವಂತಿ ತಿಸೃಭಿರುದ್ಗಾಯಂತಿ ತಿಸೃಭಿರ್ಹಿ ಸಾಮ ಸಂಮಿತಂ ತಸ್ಮಾದೇಕಸ್ಯ ಬಹ್ವ್ಯೋ ಜಾಯಾ ಭವಂತಿ ನೈಕಸ್ಯೈ ಬಹವಃ ಸಹ ಪತಯೋ ಯದ್ವೈ ತತ್ಸಾ ಚಾಮಶ್ಚ ಸಮಭವತಾಂ ತತ್ಸಾಮಾಭವತ್ತತ್ಸಾಮ್ನಃ ಸಾಮತ್ವಂ ॥** (ಐ ಬ್ರಾ. ೩-೨೩).

ಪ್ರಾರಂಭದಲ್ಲಿ ಋಕ್ಕೂ ಸಾಮವೂ ಜೊತೆಯಲ್ಲಿದ್ದವು. ಋಕ್ಕು ಸ್ತ್ರೀರೂಪದಲ್ಲಿಯೂ ಸಾಮವು ಪುಂರೂಪದಲ್ಲಿಯೂ ಇದ್ದವು. ಆಗ ಋಕ್ಕು ಸಾಮವನ್ನು ಸಮೀಪಿಸಿ ನಾವಿಬ್ಬರೂ ದಾಂಪತ್ಯ ಸಂಬಂಧವನ್ನು ಬೆಳೆಸಿ ಸಂತಾನವನ್ನು ಪಡೆಯೋಣ ಎಂದಾಗ ಸಾಮವು ಆಗುವುದಿಲ್ಲ; ನನ್ನ ಮಹಿಮೆಯು ನಿನ್ನದಕ್ಕಿಂತಲೂ ಅಧಿಕವಾದುದು ಎಂದುತ್ತರವನ್ನು ಕೊಟ್ಟಿತು. ಆಗ ಋಕ್ಕು ಮೊದಲಿಗಿಂತ ಎರಡರಷ್ಟು ಬೆಳೆದು (ಎರಡು ರೂಪವಾಗಿ) ಪುನಃ ಕೇಳಿತು. ಆಗಲೂ ಸಾಮವು ಒಪ್ಪಲಿಲ್ಲ. ಮೂರಾಗಿ ಬೆಳೆದು ಸಾಮವನ್ನು ಕೇಳಲಾಗಿ ಸಾಮವು ಒಪ್ಪಿಕೊಂಡಿತು. ಮೂರು ಋಕ್ಕುಗಳೊಂದಿಗೆ ಸಾಮವು ಬೆರೆತದ್ದರಿಂದ ಮೂರು ಋಕ್ಕುಗಳಿಂದ (ತೃಚ) ಸ್ತುತಿಸುತ್ತಾರೆ. ಮೂರು ಋಕ್ಕುಗಳಿಂದ ಗಾನ ಮಾಡುತ್ತಾರೆ. ಆದುದರಿಂದಲೇ ಲೋಕದಲ್ಲಿಯೂ ಪುರುಷರಿಗೆ ಬಹುಪತ್ನಿಯರಿರುವುದು ರೂಢಿಯಲ್ಲಿದೆ. ಸ್ತ್ರೀಯು ಬಹುಪತಿತ್ವವನ್ನು ಹೊಂದಲಾಗುವುದಿಲ್ಲ. ಈರೀತಿಯಲ್ಲಿ ಋಕ್ಕೂ ಸಾಮವೂ ಒಟ್ಟಿಗೆ ಸೇರಿದ್ದರಿಂದಲೇ **(ಸಾ+ಅಮ)** **ಸಾಮ** ವೆಂಬ ಹೆಸರು ಪ್ರಸಿದ್ಧವಾಯಿತು.

ಅರ್ಕರೂಪವಾದ ಋಕ್ಕಿಗೂ ಸಾಮಕ್ಕೂ ಇರುವ ಸಂಬಂಧವು ದಾಂಪತ್ಯ ಸಂಬಂಧವೆಂದು ಅನೇಕ ಕಡೆಗಳಲ್ಲಿ ಸ್ತುತವಾಗಿದೆ. ಶತಪಥಾದಿ ಬ್ರಾಹ್ಮಣಗಳಲ್ಲೂ ಛಾಂದೋಗ್ಯಾದ್ಯುಪನಿಷತ್ತುಗಳಲ್ಲೂ ಋಕ್ಕನ್ನು ಪತ್ನಿಯೆಂದೂ, ಸಾಮವನ್ನು ಪತಿಯೆಂದೂ ನಿರ್ದೇಶಿಸಿದೆ.

**ತದ್ಯಥಾ ಪಿತುಃ ಪುತ್ರಮೇವಂ ತ್ರೀಣಿ ಪ್ರಥಮಾನ್ಯಾಹಾಥ ಕಸ್ಮಾದೃಕ್ಸಾಮಯೋಃ ಸಂಕ್ರಾಮತೀತಿ ಸಾಮ ವಾ ಋಚಃ ಪತಿಸ್ತದ್ಯತ್ತತ್ರಾಪಿ ಯಥಾ ಪಿತುಃ ಪುತ್ರಮೇವಂ ಬ್ರೂಯಾದ್ಯಥಾ**

**ಪತಿಗ್ಂಸಂತಂ ಪುತ್ರಂ ಬ್ರೂಯಾತ್ತ್ಯಾದೃಕ್ತತ್ತಸ್ಮಾದೃಕ್ಸಾಮಯೋಃ ಸಂಕ್ರಾಮತಿ ತಸ್ಮಾದು ತ್ರಿಃ ಸಂತನೋತೀತಿ ಪಿತರಂ ಪುತ್ರಂ ಪೌತ್ರಂ ತಾಂಸ್ತತ್ಸಂತನೋತಿ ತಸ್ಮಾದು ತೇಭ್ಯ ಏಕ ಏವ ದಧಾತಿ ॥** (ಶ. ಬ್ರಾ ೮-೧-೩-೫).

ಪಿತೃವಿಗೂ ಪುತ್ರನಿಗೂ ಸಂಬಂಧವನ್ನು ಹೇಳುವಾಗ ಸಾಮಕ್ಕೂ ಋಕ್ಕಿಗೂ ಇರುವ ಸಂಬಂಧವನ್ನು ಹೋಲಿಸುವುದರಲ್ಲಿ ಔಚಿತ್ಯವೇನು ಎಂಬ ಪ್ರಶ್ನೆಯು ಸಂಭವಿಸಿದರೆ, ಸಾಮವು ಋಕ್ಕಿಗೆ ಪತಿಯಾಗಿದೆ. ಅದರಂತೆಯೇ ಪತಿಯ ಸ್ಥಾನವನ್ನು ತೋರಿಸುತ್ತದೆ. ಪಿತೃ, ಪುತ್ರ, ಪೌತ್ರ ಎಂಬ ಮೂರು ಪರ್ಯಾಯವಿದೆ ಎಂದು ಸಾಮಕ್ಕೂ ತ್ರಯಾತ್ಮಕವಾದ ಋಕ್ಕಿಗೂ ಇರುವ ಪತಿಪತ್ನಿಯರ ಸಂಬಂಧವನ್ನೂ ತಿಳಿಸಿದೆ.

ಇದರಂತೆಯೇ ಛಾಂದೋಗ್ಯೋಪನಿಷತ್ತಿನಲ್ಲಿಯೂ ಋಕ್ಕಿಗೂ ಸಾಮಕ್ಕೂ ಸಂಬಂಧವನ್ನು ತೋರಿಸುತ್ತಾ ಅಧಿದೈವತಪಕ್ಷದಲ್ಲಿ ಒಂದು ವಿಧವಾಗಿಯೂ, ಅಧ್ಯಾತ್ಮಪಕ್ಷದಲ್ಲಿ ಇನ್ನೊಂದು ವಿಧವಾಗಿಯೂ ವರ್ಣಿಸಿದೆ. ಅಧಿದೈವತ ಪಕ್ಷದಲ್ಲಿರುವಂತೆ, (ಛಾ. ಉ. ೧-೬-೧-೮)

**ಇಯಮೇವರ್ಗಗ್ನಿಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತ ಇಯಮೇವ ಸಾಗ್ನಿರಮಸ್ತತ್ಸಾಮ ॥ ೧ ॥**

**ಅಂತರಿಕ್ಷಮೇವರ್ಗ್ವಾಯುಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯ-ಧ್ಯೂಢಂ ಸಾಮ ಗೀಯತೇಽಂತರಿಕ್ಷಮೇವ ಸಾ ವಾಯುರಮಸ್ತತ್ಸಾಮ ॥ ೨ ॥**

**ದ್ಯೌರೇವರ್ಗಾದಿತ್ಯಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ದ್ಯೌರೇವ ಸಾದಿತ್ಯೋಽಮಸ್ತತ್ಸಾಮ ॥ ೩ ॥**

**ನಕ್ಷತ್ರಾಣ್ಯೇವಾರ್ಕ್ಚಂದ್ರಮಾಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯ-ಧ್ಯೂಢಂ ಸಾಮ ಗೀಯತೇ ನಕ್ಷತ್ರಾಣ್ಯೇವ ಸಾ ಚಂದ್ರಮಾ ಅಮಸ್ತತ್ಸಾಮ ॥ ೪ ॥**

ಎಂಬ ಈ ವಿವರಣೆಯಲ್ಲಿ ಪೃಥ್ವೀ, ಅಂತರಿಕ್ಷ, ದ್ಯುಲೋಕ, ನಕ್ಷತ್ರಗಳು ಇವುಗಳಿಗೂ, ಅಗ್ನಿ, ವಾಯು, ಆದಿತ್ಯ, ಚಂದ್ರಮಾ ದೇವತೆಗಳಿಗೂ ಇರುವ ಸಂಬಂಧವನ್ನು ಋಕ್ಕಿಗೂ ಸಾಮಕ್ಕೂ ಇರುವ ಸಂಬಂಧವೆಂದು ತಿಳಿಸುವುದಲ್ಲದೇ ಪೃಥ್ವ್ಯಾದಿಗಳಿಗೂ ಋಕ್ಕಿಗೂ ಮತ್ತು ಅಗ್ನ್ಯಾದಿದೇವತೆಗಳಿಗೂ ಸಾಮಕ್ಕೂ ಸಹ ತಾದಾತ್ಮ್ಯವನ್ನೇ ಹೇಳಿದೆ. ಸಾಮಕ್ಕೆ ಋಕ್ಕು ಯಾವ ರೀತಿ ಅಧಿಷ್ಠಾನವಾಗಿದೆಯೋ ಅದರಂತೆಯೇ ಪೃಥಿವ್ಯಾದಿಗಳು ಅಗ್ನ್ಯಾದಿಗಳಿಗೆ ಅಧಿಷ್ಠಾನಗಳಾಗಿವೆ. ಪೃಥಿವ್ಯಾದಿಗಳೇ ಋಕ್ಕು. ಆದುದರಿಂದ ಇವೇ **ಸಾ** ಎಂದೂ ಅಗ್ನ್ಯಾದಿಗಳೇ **ಅಮ**ವೆಂದೂ, ಎರಡೂ ಸೇರಿ **ಸಾಮ**ವೆಂದು ಪ್ರಸಿದ್ಧವಾದುದೆಂದೂ ವರ್ಣಿಸಿದೆ. ಇದೇ ರೀತಿಯಲ್ಲಿ ಅಧ್ಯಾತ್ಮಪಕ್ಷದಲ್ಲೂ ವಿವರಿಸುತ್ತಾ (ಛಾ. ಉ. ೧-೭-೧ ರಿಂದ ೯).

**ಅಥಾಧ್ಯಾತ್ಮಂ ವಾಗೇವರ್ಕ್ಪ್ರಾಣಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯ-ಧ್ಯೂಢಂ ಸಾಮ ಗೀಯತೇ । ವಾಗೇವ ಸಾ ಪ್ರಾಣೋಽಮಸ್ತತ್ಸಾಮ ॥ ೧ ॥**

**ಚಕ್ಷುರೇವರ್ಗಾತ್ಮಾ ಸಾಮ..............ಚಕ್ಷುರೇವ ಸಾತ್ಮಾಮಸ್ತತ್ಸಾಮ ॥ ೨ ॥**

**ಶ್ರೋತ್ರಮೇವರ್ಙ್ಮನಃ ಸಾಮ..............ಶ್ರೋತ್ರಮೇವ ಸಾ ಮನೋಽಮಸ್ತತ್ಸಾಮ ॥ ೩ ॥**

ಇತ್ಯಾದಿಯಾಗಿ ವಾಕ್, ಚಕ್ಷುಸ್, ಶ್ರೋತ್ರ ಇತ್ಯಾದಿಗಳು ಪ್ರಾಣ, ಆತ್ಮ ಮತ್ತು ಮನಸ್ಸು ಇತ್ಯಾದಿಗಳಿಗೆ ಅಧಿಷ್ಠಾನ ಗಳಾಗಿ ಋಕ್ಕಿಗೂ ಸಾಮಕ್ಕೂ ಇರವ ಸಂಬಂಧವನ್ನು ತೋರಿಸುತ್ತವೆ. ವಾಗಾದಿಗಳೇ ಋಕ್ಕುಗಳು (ಸಾ) ಪ್ರಾಣಾದಿ ಗಳೇ ಅಮವು ; ಇವೆರಡೂ ಸೇರಿ ಸಾಮವಾಗುತ್ತದೆ. ಇದು ಅಧ್ಯಾತ್ಮಪಕ್ಷದ ವಿವರಣೆಯಾಗಿದೆ.

ಈ ವಿಧವಾಗಿ ಋಕ್ಕಿಗೂ ಸಾಮಕ್ಕೂ ಇರುವ ಸಂಬಂಧವನ್ನು ಹೇಳುವಾಗ ಪೃಥಿವ್ಯಾದಿ ಮೂರು ಲೋಕ ಗಳೂ, ಈ ಲೋಕದ ಅಧಿಪತಿಗಳಾದ ಅಗ್ನ್ಯಾದಿ ದೇವತೆಗಳೂ ಈ ರೂಪದಲ್ಲಿರುವರೆಂದೂ ಅಥವಾ ಋಕ್ಸಾಮಗಳೇ ಆ ರೂಪದಲ್ಲಿರುವುದೆಂದೂ ಅಧಿದೈವತರೂಪದಲ್ಲಿಯೂ, ಅಧ್ಯಾತ್ಮರೂಪದಲ್ಲಿಯೂ ಋಕ್ಸಾಮಗಳ ವಿಶ್ವವ್ಯಾಪ್ತಿಯನ್ನು ವರ್ಣಿಸಿದೆ.

**ಸ ಏಷ ಯೇ ಚೈತಸ್ಮಾದವಾಂಚೋ ಲೊಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚೇತಿ ತದ್ಯ ಇಮೇ ವೀಣಾಯಾಂ ಗಾಯಂತ್ಯೇತಂ ತೇ ಗಾಯಂತಿ ತಸ್ಮಾತ್ತೇ ಧನಸನಯಃ ।**

(ಛಾಂ. ಉ. ೧-೭-೬)

ಅವನು ಇದರಡಿಯಲ್ಲಿರುವ (ಚಕ್ಷುಸ್ಸಿನೊಳಗಿರುವ) ಆತ್ಮಸಂಬಂಧಿಯಾದ ಸಕಲ ಲೋಕಗಳಿಗೂ, ಸಮಸ್ತಕಾಮ ಗಳಿಗೂ ಅಧಿಪತಿಯಾಗಿರುವನು. ಈ ಸಾಮನನ್ನು ವೀಣಾಗಾನರೂಪದಲ್ಲಿ ಹಾಡುವವರಿಗೆ ಸಮಸ್ತವಿಧವಾದ ಧನ ಸಂಪತ್ತೂ ಲಭಿಸುತ್ತವೆ. ಇಷ್ಟೇ ಅಲ್ಲದೇ,

**ಅಥ ಯ ಏತದೇವಂ ವಿದ್ವಾನ್ಸಾಮ ಗಾಯತ್ಯುಭೌ ಸ ಗಾಯತಿ ಸೋಽಮುನೈವ ಸ ಏಷ ಯೇ ಚಾಮುಷ್ಮಾತ್ಪರಾಂಚೋ ಲೋಕಾಸ್ತಾಂಶ್ಚಾಪ್ನೋತಿ ದೇವಕಾಮಾಂಶ್ಚ ॥**

**ಕಂ ತೇ ಕಾಮಮಾಗಾಯಾನೀತ್ಯೇಷ ಹ್ಯೇವ ಕಾಮಾಗಾನಸ್ಯೇಷ್ಟೇ ಯ ಏವಂ ವಿದ್ವಾನ್ಸಾಮ ಗಾಯತಿ ಸಾಮ ಗಾಯತಿ ॥**

(ಛಾ. ಉ ೧-೭-೭ರಿಂದ ೯)

ಈ ಸಾಮಗಾನದಿಂದ ದೇವಮಾನವಾದಿಗಳಿಗೆ ಸಾಧಾರಣವಾದ ಸಮಸ್ತಕಾಮಗಳೂ ಲಭಿಸುವುವು. ಆದುದರಿಂದ ಉದ್ಗಾತೃವಾದವನು "ಈ ಸಾಮಗಾನವನ್ನು ಮಾಡುವುದರಿಂದ ನಿಮ್ಮ ಯಾವ ಇಷ್ಟಾರ್ಥವು ಸಿದ್ಧಿಸುವಂತೆ ಮಾಡಲಿ" ಎಂದು ಕೇಳಬಹುದು. ಏತಕ್ಕೆಂದರೆ, ಈ ಪವಿತ್ರಾತ್ಮಕವಾದ ಸಾಮಗಾನವನ್ನು ಮಾಡುವವನೇ ಸಕಲವಿಧವಾದುದೂ ಐಹಿಕಾಮುಷ್ಮಿಕವಾದುದೂ ಆದ ಕಾಮಗಳಿಗೂ ಪ್ರಭುವಾಗಿ ಅವನ್ನು ಸಂಪಾದಿಸಿಕೊಡಲು ಶಕ್ತನಾಗಿರುತ್ತಾನೆ.

**ಸ ಯ ಏತದೇವಂ ವಿದ್ವಾನ್ಸಾಧು ಸಾಮೇತ್ಯುಪಾಸ್ತೇ ಅಭ್ಯಾಶೋ ಹ ಯದೇವಂ ಸಾಧವೋ ಧರ್ಮಾ ಆ ಚ ಗಚ್ಛೇಯುರುಪ ಚ ನಮೇಯುಃ ।**

(ಛಾಂ. ಉ. ೨-೧-೪)

ಈ ತತ್ತ್ವವನ್ನು ತಿಳಿದ ಮಹಾತ್ಮನು ಸಾಮವನ್ನೇ ಸಾಧುವೆಂದು ತಿಳಿದು ಉಪಾಸನೆಮಾಡುವನು. ಅವನಿಗೆ ಯಾವಾ ಗಲೂ ಸಾಧುಧರ್ಮಗಳೇ ರಕ್ಷಕವಾಗಿ ಬರುವುವು. ಮತ್ತು ಅವನ ಆತ್ಮರಕ್ಷಣೆಗಾಗಿ ಅವನಲ್ಲಿದ್ದು ಅವನನ್ನು ಸೇವಿಸು ತ್ತವೆ ಇತ್ಯಾದಿಯಾಗಿ ಸಾಮದ ಪ್ರಭಾವವನ್ನು ನಾನಾವಿಧವಾಗಿ ವರ್ಣಿಸಿದೆ. ಇದಲ್ಲದೆ "ಪಂಚವಿಧಂ ಸಾಮೋಪಾ ಸೀತ" ಇತ್ಯಾದಿಯಾಗಿ ಸಾಮದ ವಿಭಾಗಗಳ ವರ್ಣನೆಯೂ, ಇದರ ಮಹತ್ತ್ವದ ಪ್ರಶಂಸೆಯೂ ನಾನಾವಿಧವಾಗಿದ್ದು

ಆತ್ಮಕಲ್ಯಾಣಕ್ಕೆ ಸಾಕ್ಷಾತ್ಸಾಧನವೆಂದೂ ಅನೇಕರೀತಿಯಲ್ಲಿ ಪ್ರಶಂಸಿತವಾಗಿದೆ. ಅದರ ವಿವರಣೆಯು ಅತ್ಯಂತ ವಿಸ್ತೃತವಾಗಿರುವುದರಿಂದ ಇಲ್ಲಿ ಆ ಪ್ರಶಂಸಾವಾಕ್ಯಗಳನ್ನು ಉದಹರಿಸಲಾಗಲಾರದು ಛಾಂದೋಗ್ಯಾದಿಗಳಲ್ಲಿ ಅವುಗಳ ಪ್ರಶಂಸೆಯನ್ನು ತಿಳಿಯಬಹುದು.

ಆದುದರಿಂದ **ನಭನ್ಯಂ ಸಾಮ ಯಥಾ ವೇಃ** ಎಂಬುದಕ್ಕೆ ಅತ್ಯುತ್ತಮವಾದುದೂ, ಹೃದಯದಿಂದ ಉದ್ಭವಿಸಿ ಪಕ್ಷಿಯಂತೆ ಶೀಘ್ರವಾಗಿ ಚಲಿಸಿ ದೇವತೆಯನ್ನು ಸಮೀಪಿಸತಕ್ಕದ್ದೂ ಆದ ಸ್ತುತಿಯೆಂದರ್ಥಮಾಡಬಹುದು.

**ವನ್ವಧಾನಂ ಸ್ವರ್ವತ್ ಅರ್ಚಾಮ-ವರ್ಧಮಾನಂ ಫಲಭೂತೇನ ಸ್ವರ್ಗೇಣ ತದ್ವತ್ ಶಸ್ತ್ರಂ ಯಥಾ ವೇಃ ತಥಾ ಪೂಜಯಾಮ ಶಂಸಾಮ । ಸ್ತುತಮನು ಶಂಸತೀತಿ ನ್ಯಾಯಾತ್ ।** ಉದ್ಗಾತೃವೆಂಬ ಋತ್ವಿಜನು ಸಾಮವೇದದಿಂದ ಗಾನವನ್ನು ಮಾಡುವನು. ಸಾಮಗಾನವು ನಭೋವ್ಯಾಪಿಯಾಗಿಯೂ ರಾಕ್ಷಸರನ್ನು ಹಿಂಸೆಪಡಿಸುವುದಾಗಿಯೂ ಇರುವುದೆಂದು ಇಂದ್ರನಿಗೆ ತಿಳಿಯುವಂತೆ ಗಾನಮಾಡುವಕಾರಣ ಅದನ್ನು ಅನುಸರಿಸಿ ಯಜಮಾನರಾದ ನಾವು ಇಂದ್ರನನ್ನು ಸಂಬೋಧಿಸಿ ಸ್ವರ್ಗಫಲದಾತೃವಾದ ಇಂದ್ರನ ಗುಣಗಳನ್ನು ಪ್ರಸಿದ್ಧಮಾಡುವ ಶಸ್ತ್ರಮಂತ್ರವನ್ನು ಪ್ರಭೂತವಾಗಿ ಪಠಿಸಿ ಇಂದ್ರನನ್ನು ಪೂಜಿಸುತ್ತೇವೆ ಸ್ತುತಿಯನ್ನು ಅನುಸರಿಸಿ ಶಂಸನೆಯನ್ನು ಮಾಡತಕ್ಕದ್ದು ಎಂಬ ನ್ಯಾಯವನ್ನು ಅನುಸರಿಸಿ ಉದ್ದಿಷ್ಟವಾದ ದೇವತೆಯ ಸ್ತುತಿಯೂ ಅಥವಾ ಗುಣಗಳನ್ನು ಹೊಗಳುವುದೂ ಇರುತ್ತದೆಯಾಗಿ ನಾವು ಶಸ್ತ್ರಗಳನ್ನು ಪಠಿಸಿ ಇಂದ್ರನನ್ನು ಪೂಜಿಸುತ್ತೇವೆ ಎಂದು ಒಂದು ವಿಧವಾದ ಅರ್ಥವನ್ನು ಮಾಡಿದೆ. ಎರಡನೆಯ ಅರ್ಥದಲ್ಲಿ **ತದುಕ್ತಲಕ್ಷಣಂ ಸಾಮ ವನ್ವಧಾನಂ ಸರ್ವತ್ರ ಯಥಾ ಭವತಿ ತಥಾ ಅರ್ಚಾಮ** ಉದ್ಗಾತೃವೆಂಬ ಋತ್ವಿಜನು ಪಠಿಸುವ ಸಾಮವು ಎಲ್ಲಾ ಕಡೆಯಲ್ಲಿಯೂ ವೃದ್ಧಿಯಾಗುವಂತೆ ಇಂದ್ರನನ್ನು ಶಸ್ತ್ರಮಂತ್ರಗಳಿಂದ ಪ್ರಶಂಸಿಸಿ ಪೂಜಿಸುತ್ತೇವೆ ಎಂದು ಮತ್ತೊಂದು ಅರ್ಥವನ್ನು ವಿವರಿಸಿದೆ.

**ಧೇನವಃ ಗಾವಃ ಅದಬ್ಧಾಃ—ದೋಗ್ಧ್ರ್ಯಃ ಗಾವಃ ಅಹಿಂಸಿತಾಃ** ನಿರುಕ್ತಕಾರರು ಧೇನುಶಬ್ದವನ್ನು ವಾಙ್ನಾಮಗಳಲ್ಲಿ (ನಿ. ೨-೨೩) ಪಾಠಮಾಡಿದ್ದಾರೆ.

ಹಿಂಸಿಸು, ನಾಶಪಡಿಸು ಎಂಬರ್ಥವನ್ನು ಕೊಡುವ **ದಭ್** ಧಾತುವಿನಿಂದ ನಿಷ್ಪನ್ನವಾದ ಪದಗಳ ಪ್ರಯೋಗಗಳು ಅಧಿಕವಾಗಿ ಛಾಂದಸವಾಗಿಯೇ ಇವೆ. ಅಹಿಂಸಿತವಾದುದು, ನಾಶಮಾಡಲ್ಪಡದಿರುವುದು ಎಂಬರ್ಥವುಳ್ಳ ಅದಬ್ಧಶಬ್ದದ ಪ್ರಯೋಗವೂ ಹೆಚ್ಚಾಗಿ ಛಾಂದಸವಾಗಿಯೇ ಇದೆ. ಸಾಧಾರಣವಾಗಿ ಅಗ್ನಿಯನ್ನು ರಕ್ಷಣೆಗಾಗಿ ಪ್ರಾರ್ಥಿಸುವಾಗ **ಅದಬ್ಧೇಭಿಃ ಪಾಯುಭಿಃ; ಅದಬ್ಧೇಭಿಃ ಗೋಪಾಭಿಃ** ಎಂಬ ವಿಶೇಷಣವಿಶೇಷ್ಯಗಳು ಜೊತೆಯಲ್ಲಿಯೇ ಉಪಯೋಗಿಸಲ್ಪಡುತ್ತವೆ.

**ಅದಬ್ಧೇಭಿಸ್ತವ ಗೋಪಾಭಿರಿಷ್ಟೇಽಸ್ಮಾಕಂ ಪಾಹಿ ತ್ರಿಷಧಸ್ಥ ಸೂರೀನ್ ।**

(ಋ. ಸಂ. ೬-೮-೭)

ಇತ್ಯಾದಿ ನಾನಾಋಕ್ಕುಗಳಲ್ಲಿ ಈ ವಿಧವಾದ ಪ್ರಯೋಗವಿದೆ.

**ಧೇನವಃ—ಧೇನುರ್ಧಯತೇರ್ವಾ, ಧಿನೋತೇರ್ವಾ । ಧಯತೇಽಸೌ ವತ್ಸೇನೇತಿ; ತರ್ಪಯತ್ಯಸೌ ಪಯಸಾ** (ನಿ. ೧೧-೪೨) ಕರುವಿನಿಂದ ಹಾಲು ಹೀರಲ್ಪಡುತ್ತದೆ ಎಂಬುದರಿಂದಾಗಲಿ, ಅಥವಾ ಕ್ಷೀರವನ್ನು ಕೊಟ್ಟು ತೃಪ್ತಿಯನ್ನುಂಟುಮಾಡುತ್ತದೆ ಎಂಬುದರಿಂದಾಗಲಿ ಗೋವುಗಳಿಗೆ ಧೇನುಗಳೆಂದು ಹೆಸರು.

**ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ ।**
**ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರ ವೋಚಂ ॥**
(ಋ. ಸಂ. ೧-೧೬೪-೨೬)

ಎಂಬ ಋಕ್ಕನ್ನು ನಿರುಕ್ತಕಾರರು ಉದಹರಿಸಿ, **ಸುದುಘಾಂ** ಎಂಬ ವಿಶೇಷಣದಿಂದ ಕೂಡಿದ ಧೇನುಶಬ್ದವನ್ನು ವಿವರಿಸಿದ್ದಾರೆ. ಮತ್ತು ಇಲ್ಲಿ ಉದಾಹೃತವಾದ ಈ ಋಕ್ಕಿನಲ್ಲಿ **ಧೇನು** ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಮೇಲೆ ವಿವರಿಸಿದಂತೆ ಕರೆಯತಕ್ಕದ್ದೂ, ಕ್ಷೀರದಿಂದ ತುಂಬಿದುದೂ ಆದ ಹಸುವೆಂದು ಒಂದರ್ಥ. ಎರಡನೆ ಯದಾಗಿ, **ವೃಷ್ಟ್ಯಾ ಪ್ರೀಣಯಿತ್ರೀಂ ಮೇಘಲಕ್ಷಣಾಂ ಧೇನುಂ ।** ಲೌಕಿಕವಾದ ಧೇನುವು ಕ್ಷೀರದಿಂದ ಯಜಮಾನನನ್ನು ತೃಪ್ತಿಗೊಳಿಸುವಂತೆ ಮೇಘವು ವೃಷ್ಟಿಯಿಂದ ಲೋಕವನ್ನು ತೃಪ್ತಿಗೊಳಿಸುವುದರಿಂದ ಅದಕ್ಕೂ ಧೇನುವೆಂಬ ಹೆಸರು ಪ್ರಸಿದ್ಧವಾಗಿದೆ ಮೇಘರೂಪವಾದ ಈ ಧೇನುವನ್ನು ಕರೆಯತಕ್ಕವನು ಆದಿತ್ಯನು. ಮತ್ತು,

**ಧೇನುಂ ಚ ಪೃಶ್ನಿಂ ವೃಷಭಂ ಸುರೇತಸಂ ವಿಶ್ವಾಹಾ ಶುಕ್ರಂ ಪಯೋ ಅಸ್ಯ ದುಕ್ಷತ ।**
(ಋ. ಸಂ ೧-೧೬೦-೩)

ಇತ್ಯಾದಿ ಋಕ್ಕುಗಳಲ್ಲಿ **ಧೇನು** ಶಬ್ದವು ಪೃಥ್ವೀಪರ್ಯಾಯವಾಗಿದೆ. ಪೃಥ್ವಿಯು ಸಸ್ಯಾದಿಸಂಪತ್ತುಗಳಿಂದ ಲೋಕಕ್ಕೆ ತೃಪ್ತಿಯನ್ನುಂಟುಮಾಡುವುದರಿಂದ ಈ ತಾದಾತ್ಮ್ಯವನ್ನು ಹೇಳಿದೆ.

ಸಾಯಣರು ಈ ಪದವನ್ನು ಗಾವಃ ಎಂಬ ಪದಕ್ಕೆ ವಿಶೇಷಣವನ್ನಾಗಿ ಪ್ರಯೋಗಿಸಿ ಪ್ರಭೂತವಾಗಿ ಹಾಲನ್ನು ಹಿಂಡುವ (ಹಸುಗಳು) ಎಂಬ ಅರ್ಥವನ್ನು ವರ್ಣಿಸಿದ್ದಾರೆ.

ಗೌಃ ಎಂಬ ಪದವು ನಿರುಕ್ತಕಾರರಿಂದ ವಾಙ್ನಾಮಗಳ ಮಧ್ಯದಲ್ಲಿ (ನಿ. ೨-೨೩) ಪಠಿತವಾಗಿದೆ. ಗೌರಿತಿ ಪೃಥಿವ್ಯಾ ನಾಮಧೇಯಂ, ಎಂದು ಪೃಥಿವೀ ನಾಮಗಳಲ್ಲಿಯೂ (ನಿ. ೨-೫) ಉಕ್ತವಾಗಿದೆ. **ಗೋಭಿಸ್ಸನ್ನದ್ಧೋ ಅಸಿ ವೀಳಯಸ್ವ** ಎಂಬಲ್ಲಿ **ಚರ್ಮ ಚ ಶ್ಲೇಷ್ಮಾ ಚ ಗೋಶಬ್ದೇನೋಚ್ಯತೆ** ಚರ್ಮ ಮತ್ತು ಶ್ಲೇಷ್ಮಗಳು ಗೋಶಬ್ದ ದಿಂದ ಬೋಧ್ಯವಾಗಿವೆ. **ಜ್ಯಾಪಿ ಗೌರುಚ್ಯತೇ ಆದಿತ್ಯೋಽಪಿ ಗೌರುಚ್ಯತೇ, ಸುಷುಮ್ನೋ ರಶ್ಮಿರೇಕ ಏವ ಗೌರಿತಿ ಉಚ್ಯತೇ, ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ,** (ನಿ. ೨-೮) ಎಂದು ಗೋ ಶಬ್ದಕ್ಕೆ ಚರ್ಮ, ಶ್ಲೇಷ್ಮಾ, ಧನುಸ್ಸಿಗೆ ಕಟ್ಟುವಹಗ್ಗ. ಆದಿತ್ಯ, ಸುಷುಮ್ನಾನಾಡಿ, ಎಂಬುದಾಗಿ ಅನೇಕಾರ್ಥಗಳು ಉಕ್ತವಾಗಿವೆ.

ಸಾಯಣರು ಧೇನು ಶಬ್ದಕ್ಕೆ ಗೋವುಗಳು(ಹಸುಗಳು)ಎಂದು ಅರ್ಥವನ್ನು ವರ್ಣಿಸಿ, ಪ್ರಭೂತವಾದ ಹಾಲನ್ನು ಹಿಂಡುವ ಹಸುಗಳು **ಬರ್ಹಿಷಿ ಸದ್ಮಾನಂ ದಿವ್ಯಂ ಆವಿವಾಸಾರ್ಥ ಬರ್ಹಿಷಿ ಸೀದಂತಂ ದಿವಿಭವಂ ಇಂದ್ರಂ ತ್ವಾಂ ಆಗತ್ಯ ಪರಿಚರಂತಿ ಕ್ಷೀರಂ ದುಹಂತಿ ತಥಾ ಅರ್ಚಾಮ**—ಬರ್ಹಿಸ್ಸಿನಲ್ಲಿ ಸುಖವಾಗಿ ಕುಳಿತಿರುವ ಸ್ವರ್ಗನಿವಾಸಿಯಾದ ಇಂದ್ರನನ್ನು ಗೋವುಗಳು ತಮ್ಮ ಕ್ಷೀರಗಳಿಂದ ಸೇವಿಸುವ ಹಾಗೆ ಯಜಮಾನರಾದ ನಾವು ಇಂದ್ರನನ್ನು ಪೂಜಿಸುವೆವು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಸ್ವರ್ವತ್— ಫಲಭೂತೇನ ಸ್ವರ್ಗೇಣ ತದ್ವಚ್ಛಸ್ತ್ರಂ—** ಸ್ವರ್ಗಫಲಕ್ಕೆ ಸಾಧನವಾದ ಶಸ್ತ್ರವೆಂದರ್ಥ. ಪ್ರತ್ಯಯಾತ್ಮಕವಾದ **ಸ್ವರ್** ಶಬ್ದವು ಋಕ್ಸಂಹಿತೆಯಲ್ಲಿ ನೂರಾರು ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಕೇವಲ **ಸ್ವರ್** ಶಬ್ದವೂ ಸಹ ಪ್ರಸಿದ್ಧವಾಗಿದೆ. ಆದರೆ ಅರ್ಥವು ಮಾತ್ರ ನಿಷ್ಕೃಷ್ಟವಾಗಿ ತಿಳಿಯುವಂತಿಲ್ಲ. ಒಂದೊಂದು ಕಡೆ

ಒಂದೊಂದರ್ಥ ಇರುತ್ತದೆ. ಆದರೂ ಸಹ ಸಂದರ್ಭಾನುಸಾರವಾಗಿ ಅರ್ಥಮಾಡಬೇಕು. ಇಲ್ಲಿ **ಸ್ವರ್** ಶಬ್ದದ ಮೂಲ ರೂಪದ ಅರ್ಥವನ್ನು ತಿಳಿಸಿ ನಂತರ **ಸ್ವರ್ವತ್** ಎಂಬುದರ ತಾತ್ಪರ್ಯವನ್ನು ವಿವರಿಸಲಾಗುತ್ತದೆ. **ಸ್ವರ್ದೃಶಃ, ಸ್ವರ್ವಿದ್** ಇತ್ಯಾದಿ ಸಮಸ್ತ ಪದಗಳನ್ನು ಆಯಾ ಸಂದರ್ಭಗಳಲ್ಲಿ ಮಾತ್ರ ತಿಳಿಸಲಾಗುವುದು.

**ಸ್ವಃ, ಪೃಶ್ನಿಃ, ನಾಕಃ** ಇತ್ಯಾದಿ ಸಾಧಾರಣ ನಾಮಗಳಲ್ಲಿ ಈ ಪದವು ಪಠಿತವಾಗಿದೆ. **ಸಾಧಾರಣಾನ್ಯು-ತ್ತರಾಣಿ ಷಡ್ದಿವಶ್ಚಾದಿತ್ಯಸ್ಯ ಚ** (ನಿ. ೨-೧೩). **ಸ್ವಃ, ಪೃಶ್ನಿಃ, ನಾಕಃ, ಗೌಃ, ವಿಷ್ಟಪಂ, ನಭಃ** ಎಂಬ ಆರು ಪದಗಳೂ ಸಹ ದ್ಯುಲೋಕಪರ್ಯಾಯವಾಗಿಯೂ, ಆದಿತ್ಯಪರವಾಗಿಯೂ ಸಾಧಾರಣವಾಚಕಗಳಾಗಿವೆಯೆಂದು ನಿರುಕ್ತಕಾರರು ತಿಳಿಸಿದ್ದಾರೆ. ಅನಂತರ ಆದಿತ್ಯಪರ್ಯಾಯವಾಗಿ ಉಪಯೋಗಿಸುವಾಗ **ಸ್ವರ್** ಎಂಬುದರ ಮೂಲ ಧಾತುವೇನು ಮತ್ತು ಈ ಪದದ ನಿಷ್ಪತ್ತಿಯು ಹೇಗೆ ಎಂಬುದನ್ನು ವಿವರಿಸುತ್ತಾ,

**ಸ್ವರಾದಿತ್ಯೋ ಭವತಿ ಸು ಅರಣಃ, ಸು ಈರಣಃ, ಸ್ವೃತೋ ರಸಾನ್, ಸ್ವೃತೋ ಭಾಸಂ ಜ್ಯೋತಿಷಾಂ । ಸ್ವೃತೋ ಭಾಸೇತಿ ವಾ ।** (ನಿ. ೨-೧೪)

ಬಹಳ ದೂರವರ್ತಿಯಾಗಿರುವುದರಿಂದಾಗಲಿ, (ತಮಸ್ಸನ್ನು) ಪೂರ್ಣವಾಗಿ ಚದುರಿಸಿ ನಾಶಮಾಡುವುದರಿಂದಾಗಲಿ, ರಸದೊಳಗೆ ಒಳಹೊಕ್ಕು ಪ್ರವೇಶಿಸಿ ಅದರೊಂದಿಗೆ ಅಂತರ್ಗತವಾಗುವುದರಿಂದಾಗಲಿ, ತೇಜೋಮಂಡಲದಲ್ಲಿ ತನ್ನ ಪ್ರಕಾಶವನ್ನು ಪ್ರಸರಿಸಿ ಐಕ್ಯವಾಗುವುದರಿಂದಾಗಲಿ, ಅಥವಾ ಪ್ರಭೆಯ ರೂಪದಲ್ಲಿ ವಿಶ್ವವ್ಯಾಪಿಯಾಗುವುದರಿಂದಾಗಲಿ **ಆದಿತ್ಯನಿಗೆ** ಈ ಹೆಸರು ಮತ್ತು **ಏತೇನ ದ್ಯೌರ್ವ್ಯಾಖ್ಯಾತಾ** ಈ ಕಾರಣದಿಂದಲೇ ದ್ಯುಲೋಕಕ್ಕೂ ಈ ಹೆಸರು ಎಂದು ನಿರುಕ್ತಕಾರರು ತಿಳಿಸಿದ್ದಾರೆ.

**ಸ್ವರಾದಿತ್ಯೋ ಭವತಿ ಸ ಏನಾನಿ ಸಾರಯತಿ ।** (ನಿ. ೫-೪)

ಅಹಸ್ಸುಗಳನ್ನು ಚಲಿಸುವಂತೆ ಮಾಡುವುದರಿಂದಲೂ ಸಹ ಆದಿತ್ಯನಿಗೆ ಸ್ವಃ ಎಂಬ ಹೆಸರು. ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿರುವಾಗ,

**ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ । ಪ್ರತ್ಯಙ್ವಿಶ್ವಂ ಸ್ವರ್ದೃಶೇ ॥**
(ಋ. ಸಂ. ೧-೫೦-೫)

ಇತ್ಯಾದಿ ಋಕ್ಕುಗಳಲ್ಲಿ ಸ್ವರ್ಲೋಕವೆಂದೂ,

**ತ್ಮನಾ ವಹಂತೋ ದುರೋ ವ್ಯೃಣ್ವನ್ನವಂತ ವಿಶ್ವೇ ಸ್ವ೧ ರ್ದೃಶೀಕೇ ।**
(ಋ. ಸಂ. ೧-೬೯-೧೦)

ಇತ್ಯಾದಿ ಕಡೆಗಳಲ್ಲಿ ಸ್ವಃ—**ನಭಸಿ** ಅಂತರಿಕ್ಷದಲ್ಲಿ ಎಂದೂ, ಮತ್ತು

**ದಾ ನೋ ಅಗ್ನೇ ಬೃಹತೋ ದಾಃ ಸಹಸ್ರಿಣೋ ದುರೋ ನ ವಾಜಂ ಶ್ರುತ್ಯಾ ಅಪಾ ವೃಧಿ ।**
**ಪ್ರಾಚೀ ದ್ಯಾವಾಪೃಥಿವೀ ಬ್ರಹ್ಮಣಾ ಕೃಧಿ ಸ್ವ೧ರ್ಣ ಶುಕ್ರಮುಷಸೋ ವಿ ದಿದ್ಯುತುಃ ॥**
(ಋ. ಸಂ. ೨-೨-೭).

ಇತ್ಯಾದಿ ಋಕ್ಕುಗಳಲ್ಲಿ ಆದಿತ್ಯನೆಂದೂ ಅರ್ಥಮಾಡಿದ್ದಾರೆ. ಇದರಂತೆಯೇ **ವತ್** ಇತ್ಯಾದಿ ಪ್ರತ್ಯಯಗಳೊಡನೆ ಕೂಡಿದ **ಸ್ವರ್ವತ್** ಇತ್ಯಾದಿ ಪದಗಳಿಗೂ ಸಹ ಸಂದರ್ಭಾನುಸಾರವಾಗಿ ಅರ್ಥಮಾಡಬೇಕು. ಉದಾಹರಣೆಗೆ—

**ಯೊ ಇಂದ್ರ ಭುಜ ಆಭರಃ ಸ್ವರ್ವಾಁ ಅಸುರೇಭ್ಯಃ ।**
**ಸ್ತೋತಾರಮಿನ್ಮಘವನ್ನಸ್ಯ ವರ್ಧಯ ಯೇ ಚ ತ್ವೇ ವೃಕ್ತಬರ್ಹಿಷಃ ॥**

(ಋ. ಸಂ. ೮-೯೭-೧).

ಎಂಬಲ್ಲಿ **ಸ್ವರ್ವಾನ್—ಸುಖವಾನ್, ಸ್ವರ್ಗವಾನ್ ವಾ । ಅಥವಾ ಸ್ವಃ ಶಬ್ದಃ ಸರ್ವಪರ್ಯಾಯಃ । ಸರ್ವಂ ಭೂತಜಾತಂ ಆತ್ಮನ ಏವೋತ್ಪನ್ನತ್ವಾತ್ತದ್ವಾನ್ । ಸ್ವಃ**–ಎಂಬ ಪದಕ್ಕೆ ಸುಖ, ಸ್ವರ್ಗ ಅಥವಾ ಸಮಸ್ತ ಎಂಬರ್ಥಗಳಾಗುವುದರಿಂದ **ಸ್ವರ್ವಾನ್** ಎಂದರೆ ಸುಖವಂತ, ಸ್ವರ್ಗವಂತ ಅಥವಾ ಸಮಸ್ತವನ್ನೂ ಪಡೆದಿರುವವನು ಎಂದಾಗಿ ಇಂದ್ರನಿಗೆ ವಿಶೇಷಣವಾದಾಗ ಈ ಎಲ್ಲಾ ಅರ್ಥವೂ ಹೊಂದಿಕೊಳ್ಳುವುದೆಂದು ತಿಳಿಸಿದೆ. ಮತ್ತು,

**ತಂ ಶಿಶೀತಾ ಸ್ವಧ್ವರಂ ಸತ್ಯಂ ಸತ್ವಾನಮೃತ್ವಿಯಂ ।**
**ಉತೋ ನು ಚಿದ್ಯ ಓಹತ ಆಂಡಾ ಶುಷ್ಣಸ್ಯ ಭೇದತ್ಯಜೈಃ ಸ್ವರ್ವತೀರಪೋ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೦-೧೧)

ಇತ್ಯಾದಿ ಸ್ಥಳಗಳಲ್ಲಿ **ಸ್ವರ್ವತೀಃ ಅಪಃ** ಎಂದು ಉದಕಕ್ಕೆ ವಿಶೇಷಣವಾದಾಗ **ದಿವ್ಯಾನಿ** ಎಂದರೆ ದಿವ್ಯಲೋಕ (ಸ್ವರ್ಗಲೋಕ) ದಲ್ಲಿ ಉತ್ಪನ್ನವಾದ ಉದಕವೆಂದರ್ಥ. ಈ ವಿಶೇಷಣವು ಅಗ್ನ್ಯಾದಿ ಇತರ ದೇವತೆಗಳ ಗುಣಗಳನ್ನೂ ವರ್ಣಿಸುತ್ತದೆ. ಉದಾಹರಣೆಗೆ—

**ಜ್ಯೋತಿಷ್ಮತೀಮದಿತಿಂ ಧಾರಯತ್‌ಕ್ಷಿತಿಂ ಸ್ವರ್ವತೀಮಾ ಸಚೇತೇ ದಿವೇದಿವೇ ಜಾಗೃವಾಂಸಾ ದಿವೇದಿವೇ ।**

(ಋ. ಸಂ. ೧-೧೩೬-೩).

ಎಂಬಲ್ಲಿ **ಸ್ವರ್ವತೀ** ಎಂಬುದು **ಅದಿತಿಗೆ** ವಿಶೇಷಣವಾಗಿದೆ ಇಲ್ಲಿ **ಯಜ್ಞನಿಷ್ಪತ್ತಿದ್ವಾರಾ ಸ್ವರ್ಗವತೀಂ** ಎಂದು ಪ್ರಕೃತವಾದ ಋಕ್ಕಿನಲ್ಲಿ ಅರ್ಥ ಮಾಡಿರುವಂತೆ ವಿವರಿಸಿದೆ.

**ಆ ತೇ ಶುಷ್ಮೋ ವೃಷಭ ಏತು ಪಶ್ಚಾದೋತ್ತರಾದಧರಾದಾ ಪುರಸ್ತಾತ್ ।**
**ಆ ವಿಶ್ವತೋ ಅಭಿ ಸಮೇತ್ವರ್ವಾಙಿಂದ್ರ ದ್ಯುಮ್ನಂ ಸ್ವರ್ವದ್ಧೇಹ್ಯಸ್ಮೇ ॥**

(ಋ. ಸಂ. ೬-೧೯-೯).

ಇತ್ಯಾದಿ ಋಕ್ಕುಗಳಲ್ಲಿ **ಸುಖಯುಕ್ತಂ ಧನಂ** ಎಂಬರ್ಥವನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಅತ್ಯುತ್ತಮವಾದ **ಸಾಮಕ್ಕೆ** ವಿಶೇಷಣವಾದುದರಿಂದ ಸ್ವರ್ಗಸಾಧನವಾದುದೆಂದಾಗಲಿ ಅಥವಾ ಸ್ವರ್ಗಸುಖಸಾಧನವಾದುದೆಂದಾಗಲಿ ಅರ್ಥಮಾಡಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಗಾಯತ್**—ಗೈ ಶಬ್ದೇ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ.

**ನಭನ್ಯಮ್**—ನಭಸಿ ಭವಃ ನಭನ್ಯಃ. ಭವಾರ್ಥದಲ್ಲಿ ಯತ್ ಪ್ರತ್ಯಯ. ಛಾಂದಸವಾಗಿ ಸಕಾರಕ್ಕೆ ನಕಾರಾದೇಶ. **ತಿತ್‌ಸ್ವರಿತಮ್** ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ವೇಃ**—ವಿದ ಜ್ಞಾನೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಮಧ್ಯಮಪುರುಷ ಏಕವಚನ ದಲ್ಲಿ ಸಿಪ್ ಇಕಾರ ಲೋಪ. ಶಪಿಗೆ ಲುಕ್. **ಹಲ್‌ಙ್ಯಾಭ್ಯೋ**—ಎಂಬುದರಿಂದ ಸಿಪಿಗೆ ಲೋಪ. ಸಿಪ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ದಶ್ಚ** (ಪಾ. ಸೂ. ೮-೨-೭೫) ಎಂಬುದರಿಂದ ಧಾತು ದಕಾರಕ್ಕೆ ರುತ್ವ. ವಿಸರ್ಗ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಅರ್ಚಾಮ**—ಅರ್ಚ ಪೂಜಾಯಾಂ ಧಾತು. ಲೋಟ್ ಉತ್ತಮಪುರುಷ ಬಹುವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಾವೃಧಾನಮ್**—ವೃಧು ವೃದ್ಧೌ. ಧಾತು. ಲಟಿಗೆ ಶಾನಚಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಛಾಂದಸವಾಗಿ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅದಬ್ಧಾಃ**—ನಞ್ ತತ್ಪುರುಷ ಸಮಾಸ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಿವ್ಯಮ್**—ದಿವಿ ಭವಮ್ ದಿವ್ಯಮ್. ದಂಡಾದಿಯಲ್ಲಿ ಸೇರಿರುವುದರಿಂದ ಯ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿವಾಸಾನ್**—ವಿವಾಸ ಎಂಬುದು ಪರಿಚರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. **ಇತಶ್ಚಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಅರ್ಚದ್ವೃಷಾ ವೃಷಭಿಃ ಸ್ವೇದುಹವ್ಯೈರ್ಮೃಗೋ ನಾಶ್ನೋ ಅತಿ ಯಜ್ಜು-
ಗುರ್ಯಾತ್ ।

ಪ್ರ ಮಂದಯುರ್ಮನಾಂ ಗೂರ್ತ ಹೋತಾ ಭರತೇ ಮರ್ಯೋ ಮಿಥುನಾ
ಯಜತ್ರಃ ॥ ೨ ॥

॥ ಪದಪಾಠಃ ॥

ಅರ್ಚತ್ । ವೃಷಾ । ವೃಷಽಭಿಃ । ಸ್ವಽಇದುಹವ್ಯೈಃ । ಮೃಗಃ । ನ । ಅಶ್ನಃ । ಅತಿ । ಯತ್ । ಜುಗು-
ರ್ಯಾತ್ ।

ಪ್ರ । ಮಂದಯುಃ । ಮನಾಂ । ಗೂರ್ತ । ಹೋತಾ । ಭರತೇ । ಮರ್ಯಃ । ಮಿಥುನಾ । ಯಜತ್ರಃ ॥೨॥

॥ ಸಾಯಣಭಾಷ್ಯಂ ॥

ವೃಷಾ ಹವಿಷಾಂ ವರ್ಷಿತಾಯಂ ಯಜಮಾನಃ ಸ್ವೇದುಹವ್ಯೈಃ ಸ್ವಾಯತ್ತೇದ್ಧಹವಿಷ್ಕೈಃ । ಯದ್ವಾ । ಸ್ವಯಂಪ್ರಾಪ್ತೇಂಧಕಂ ಹವ್ಯಂ ಯೇಷಾಂ ತಾದೃಶೈಃ । ವೃಷಭಿರ್ವರ್ಷಕೈರ್ಹವಿಷ್ಪ್ರದಾತೃಭಿರಧ್ವರ್ಯ್ವಾದಿಭಿರ್ವಿಶಿಷ್ಟಃ ಸನ್ನರ್ಚತ್ । ಅರ್ಚಯತೀಂದ್ರಂ । ಯದ್ವಾ । ವೃಷಾ ಫಲಸ್ಯ ವರ್ಷಿತಾಯಮಿಂದ್ರ ಉಕ್ತಲಕ್ಷಣೈರ್ವ್ಯಧ್ವರ್ಯ್ವಾದಿಭಿರರ್ಚ್ಯತೇ । ಯದ್ಯಸ್ಮಾದಶ್ನೋ ವ್ಯಾಪಕಃ ಪಾನಾದ್ಯರ್ಥಂ ಧಾವನ್ಮೃಗೋ ನ ಹರಿಣಾದಿರಿವಾಯಮಿಂದ್ರೋಽಶ್ನೋಽಶನಶೀಲಃ ಸನ್ನತಿ ಜುಗುರ್ಯಾತ್ । ಅತ್ಯರ್ಥಮುದ್ಯಂಕ್ತೇ ಹವಿರ್ಭಕ್ಷಣಾಯ । ಯಥಾ ಮೃಗಃ ಕ್ಷುತ್ಪಿಪಾಸಾರ್ದಿತಃ ಶೀಘ್ರಮುದ್ಯಂಕ್ತೇ ತಥಾಯಮಿಂದ್ರೋಽಪಿ । ಯಸ್ಮಾದೇವಂ ತಸ್ಮಾದರ್ಚತಿ । ಯದ್ವಾ । ಅಯಮಿಂದ್ರೋ ಯದ್ಯಥಾಶ್ನೋ ಮೃಗ ಇವಾತಿ ಜುಗುರ್ಯಾತ್ ಭಕ್ಷಯೇತ್ ತಥಾರ್ಚತೀತ್ಯರ್ಥಃ । ಕಿಂಚ ಹೇ ಗೂರ್ತೋದ್ಗೂರ್ಣೇಂದ್ರ ಮನಾಂ ಮನನಂ ಸ್ತೋತ್ರಮಿಚ್ಛತಾಂ ದೇವಾನಾಂ ಮಂದಯುಃ ಸ್ತುತಿಯುಕ್ತೋ ಮರ್ಯೋ ಹೋತಾ ಮಾನುಷ ಏತನ್ನಾಮಕ ಋತ್ವಿಗ್ಯಜತ್ರೋ ಯಾಗನಿಷ್ಪಾದಕಃ ಸನ್ಮಿಥುನಾ ಮಿಥುನಾನಿ ಯುಗ್ಮರೂಪಾಣಿ ಯಾಜ್ಯಾಪುರೋನುವಾಕ್ಯಾದೀನಿ ಮಿಥುನೌ ವಾ ಜಾಯಾಪತಿರೂಪಃ ಸನ್ ಪ್ರ ಭರತೇ । ಪ್ರಕರ್ಷೇಣ ಸಂಪಾದಯತಿ । ತಸ್ಮಾದರ್ಚತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಕಾರಣದಿಂದ । (**ಇಂದ್ರಃ**—ಇಂದ್ರನು) । **ಅಶ್ನಃ**—ವ್ಯಾಪಕವಾದ (ಪಾನಾದಿಗಳಿಗೋಸ್ಕರ ಧಾವಿಸುವ) । **ಮೃಗಃ ನ**—ಜಿಂಕೆಯಂತೆ । (**ಅಶ್ನಃ** – ಅಶನಶೀಲನಾಗಿ) । **ಅತಿ ಜುಗುರ್ಯಾತ್**—(ಹವಿರ್ಭಕ್ಷಣೆಗೋಸ್ಕರ) ಹೆಚ್ಚಾಗಿ ಪ್ರಯತ್ನಿಸುತ್ತಾನೋ । **ತತ್**—ಆದ್ದರಿಂದ । [ಅಥವಾ **ಅಶ್ನಃ**—ಪಾನಾದಿಗಳಿಗೋಸ್ಕರ ಧಾವಿಸುವ । **ಮೃಗಃ ನ**—ಮೃಗದಂತೆ । **ಯತ್**—ಹೇಗೆ । **ಅತಿ ಜುಗುರ್ಯಾತ್**—(ಇಂದ್ರನು) ಶೀಘ್ರಪ್ರಯತ್ನಮಾಡುವನೋ । (**ತಥಾ**—ಹಾಗೆ)] **ವೃಷಾ**—ಹವಿರ್ವರ್ಷಕನಾದ ಯಜಮಾನನು । **ಸ್ವೇದುಹವ್ಯೈಃ**—ಸ್ವಾಯತ್ತಹವಿರ್ವಿಶಿಷ್ಟರಾದ । **ವೃಷಭಿಃ**—ಹವಿಷ್ಪ್ರದಾತೃಗಳಾದ ಅಧ್ವರ್ಯು ಮೊದಲಾದವರಿಂದ ಯುಕ್ತನಾಗಿ । **ಅರ್ಚತ್**—(ಇಂದ್ರನನ್ನು) ಪೂಜಿಸುತ್ತಾನೆ । [ಅಥವಾ **ವೃಷಾ**—ಕಾಮವರ್ಷಕನಾದ ಇಂದ್ರನು । **ಸ್ವೇದುಹವ್ಯೈಃ**—ಸ್ವಾಯತ್ತ ಹವಿರ್ವಿಶಿಷ್ಟರಾದ । **ವೃಷಭಿಃ**—ಹವಿಷ್ಪ್ರದಾತೃಗಳಾದ ಅಧ್ವರ್ಯು ಮೊದಲಾದವರಿಂದ । **ಅರ್ಚತ್**—ಪೂಜಿಸಲ್ಪಡುತ್ತಾನೆ ।] (**ಕಿಂಚ**—ಮತ್ತು) । (**ಹೇ**) **ಗೂರ್ತ**—ಎಲೈ ಪರಾಕ್ರಮಿಯಾದ ಇಂದ್ರನೇ । **ಮನಾಂ**—ಸ್ತುತಿಪ್ರಿಯರಾದ ದೇವತೆಗಳ । **ಮಂದಯುಃ**—ಸ್ತುತಿಯುಕ್ತನಾದ । **ಮರ್ಯಃ**

**ಹೋತಾ**—ಮರ್ತ್ಯನಾದ ಹೋತೃವು | **ಯಜತ್ರಃ**—ಯಾಗನಿಷ್ಪಾದಕನಾಗಿ | **ಮಿಥುನಾ**—ಯುಗ್ಮರೂಪವಾದ ಯಾಜ್ಯಾಪುರೋನುವಾಕ್ಯಾದಿಗಳನ್ನು (ಜಾಯಾಪತಿರೂಪನಾಗಿ) | **ಪ್ರ ಭರತೇ**—ಹೆಚ್ಚಾಗಿ ಸಂಪಾದಿಸುತ್ತಾನೆ.

॥ ಭಾವಾರ್ಥ ॥

ಎಲೈ ಪರಾಕ್ರಮಿಯಾದ ಇಂದ್ರನೇ, ಹವಿಷ್ಪ್ರದಾತೃವಾದ ಯಜಮಾನನು ಅಧ್ವರ್ಯು ಮೊದಲಾದ ಋತ್ವಿಗ್ವಿಶಿಷ್ಟನಾಗಿ, ನಿನ್ನನ್ನು ಪೂಜಿಸುತ್ತಾನೆ; ಆ ಹವಿರಾದಿಗಳನ್ನು ಸ್ವೀಕರಿಸುವುದಕ್ಕೆ, ನೀನೂ, ಕ್ಷುತ್ಪಿಪಾಸಾರ್ದಿತವಾದ ಹರಿಣವು ಪಾನಾದಿಗಳಿಗೋಸ್ಕರ ಓಡಿಬರುವಂತೆ, ಶೀಘ್ರವಾಗಿ ಬರುತ್ತೀಯೆ. ಮರ್ತ್ಯನಾದ ಹೋತೃವು, ಸ್ತುತಿಪ್ರಿಯರಾದ ದೇವತೆಗಳನ್ನು ಸ್ತುತಿಸುತ್ತಾ, ಯಾಜ್ಯಾಪುರೋನುವಾಕ್ಯಾದಿಗಳನ್ನು ಪಠಿಸುತ್ತಾನೆ.

English Translation.

The showerer (of the oblation, the offerer of the sacrifice, assisted) by (the priests), presenting the oblations which have been provided by himself, adores (Indra), in order that he may hasten (to the rite), as a (thirsty) deer to the water. The mortal invoker (of the gods), O mighty Indra, whilst glorifying them who are desirous of praise, presents a twofold offering (to you).

॥ ವಿಶೇಷವಿಷಯಗಳು ॥

**ವೃಷಾ ಸ್ವೇದುಹವ್ಯೈಃ ವೃಷಭಿರರ್ಚತ್**—ಹವಿಷಾಂ ವರ್ಷಿತಾ ಅಯಂ ಯಜಮಾನಃ | **ಸ್ವಾಯತ್ತೇದ್ಧಹವಿಷ್ಕೈಃ ಯದ್ವಾ ಸ್ವಯಂ ಪ್ರಾಪ್ತೇಂಧಕಂ ಹವ್ಯಂ ಯೇಷಾಂ ತಾದೃಶೈಃ ಹವಿಷ್ಪ್ರದಾತೃಭಿರಧ್ವರ್ಯ್ವಾದಿಭಿಃ ವಿಶಿಷ್ಟಸ್ಸನ್ ಅರ್ಚಯತೀಂದ್ರಂ** | ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. ವೃಷಾ ಎಂಬ ಪದವು ಹವಿಸ್ಸುಗಳನ್ನು ಅರ್ಪಿಸುವ ಯಜಮಾನನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸ್ವೇದುಹವ್ಯೈಃ ಎಂಬ ಪದವು ಅಗ್ನಿಗಳಿಗೆ ವಿಶೇಷಣವಾಗಿಯೂ, ಅಧ್ವರ್ಯುವೇ ಮೊದಲಾದ ಋತ್ವಿಜರಿಗೆ ವಿಶೇಷಣವಾಗಿಯೂ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿದೆ. ಇದರಿಂದ ಯಜಮಾನನು ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವವನಾಗಿ ಇಂಧನಗಳಿಂದಲೂ (ಕಟ್ಟಿಗೆಗಳಿಂದ) ಹವಿಸ್ಸುಗಳಿಂದಲೂ ಉದ್ದೀಪ್ತನಾಗಿರುವ ಅಗ್ನಿಯಿಂದ (ಅಗ್ನಿಗಳಿಂದ) ಇಂದ್ರನನ್ನು ಪೂಜಿಸುವನು ಎಂದು ಮೊದಲನೆಯ ಅರ್ಥವನ್ನು ವರ್ಣಿಸಿದೆ. ಎರಡನೆಯ ಅರ್ಥದಲ್ಲಿ ಸಿದ್ಧಮಾಡಿದ ಪ್ರಭೂತವಾದ ಹವಿಸ್ಸುಗಳನ್ನು ಅರ್ಪಿಸಲು ಸಿದ್ಧರಾಗಿರುವ ಅಧ್ವರ್ಯುವೇ ಮೊದಲಾದ ಋತ್ವಿಜರೊಡಗೂಡಿದ ಯಜಮಾನನು ಇಂದ್ರನನ್ನು ಬಹಳವಾದ ಹವಿಸ್ಸುಗಳನ್ನು ಪೂಜಿಸುವನು ಎಂದು ಅರ್ಥವನ್ನು ವಿವರಿಸಿದೆ. **ಯದ್ವಾ ವೃಷಾ ಫಲಸ್ಯ ವರ್ಷಿತಾ ಇಂದ್ರಃ ಉಕ್ತಲಕ್ಷಣೈರಧ್ವರ್ಯ್ವಾದಿಭಿರರ್ಚ್ಯತೇ** ವೃಷ್ಟಿಯನ್ನು ಸುರಿಸುವ ಹಾಗೆ ಯಜಮಾನರಿಗೆ ಇಷ್ಟಾರ್ಥಗಳನ್ನು ವರ್ಷಿಸುವವನಾದ ಇಂದ್ರನು ಸಿದ್ಧಪಡಿಸಿದ ಪ್ರಭೂತವಾದ ಹವಿಸ್ಸುಗಳುಳ್ಳ ಅಧ್ವರ್ಯುವೇ ಮೊದಲಾದ ಋತ್ವಿಜರಿಂದ ಪೂಜಿಸಲ್ಪಡುವನು ಎಂದೂ ಅರ್ಥವನ್ನು ವರ್ಣಿಸಿದೆ.

ಇಲ್ಲಿ **ವೃಷಾ, ವೃಷಭಿಃ** ಎಂಬ ಎರಡು ಪದಗಳೂ ಸಹ **ವೃಷ** ಧಾತುವಿನಿಂದ ಉತ್ಪನ್ನವಾಗಿವೆ. **ವೃಷು-ಸೇಚನೇ ; ವೃಷ-ಶಕ್ತಿಬಂಧನೇ ;** ಎಂಬ ಎರಡು ಧಾತುಗಳಲ್ಲಿ ಸುರಿಸು, ಚಿಮುಕಿಸು, ಎಂಬರ್ಥವನ್ನು ಕೊಡುವ **ವೃಷ** ಧಾತುವಿನಿಂದ **ವೃಷಾ** ಎಂಬ ಮೊದಲನೆಯ ಪದವೂ ; ಶಕ್ತಿ ಸಾಮರ್ಥ್ಯ ಎಂಬರ್ಥವನ್ನು ಕೊಡುವ ಎರಡನೆಯ ಧಾತುವಿನಿಂದ **ವೃಷಭಿಃ** ಎಂಬ ಎರಡನೆಯ ಪದವೂ ನಿಷ್ಪನ್ನವಾಗಿದೆಯೆಂದು ಭಾಷ್ಯಕಾರರು ಈ ಸಂದರ್ಭದಲ್ಲಿ ಮಾಡತಕ್ಕ ವಿವರಣೆಯಿಂದ ತಿಳಿಯಬೇಕು. ಆದರೆ **ವೃಷನ್** ಎಂಬ ವಿಶೇಷಣವೂ, ಈ ಮೂಲದಿಂದ ವ್ಯುತ್ಪನ್ನವಾಗುವ ಇತರ ವಿಶೇಷಣಗಳೂ ಋಕ್ಸಂಹಿತೆಯಲ್ಲಿ ಪದೇ ಪದೇ ಉಪಯೋಗಿಸಲ್ಪಟ್ಟಿರುವುದರಿಂದ ಈ ಪದಗಳಿಗೆ ನಿಯತವಾದ ಒಂದೇ ಅರ್ಥವನ್ನು ಹೇಳುವುದಕ್ಕಾಗುವುದಿಲ್ಲ. ಆಯಾ ಸಂದರ್ಭಗಳಿಗೆ ತಕ್ಕಂತೆ ಅರ್ಥವನ್ನು ಹೇಳಬೇಕಾಗುತ್ತದೆ. ಆದುದರಿಂದ **ವೃಷನ್** ಶಬ್ದವನ್ನು ಮುಖ್ಯವಾಗಿ ಯಾವ ಯಾವ ಅರ್ಥಗಳಲ್ಲಿ ಉಪಯೋಗಿಸಿದೆಯೆಂದು ಸೂಕ್ಷ್ಮವಾಗಿ ತಿಳಿಸಿ ಅನಂತರ ಪ್ರಕೃತವಾದ ಋಕ್ಕಿನಲ್ಲಿ ಇಂದ್ರನಿಗಾಗಲಿ ಅಥವಾ ಋತ್ವಿಕ್ಕುಗಳಿಗಾಗಲಿ ಇತರ ದೇವತೆಗಳಿಗಾಗಲಿ ವಿಶೇಷಣವಾಗಿ ಉಪಯೋಗಿಸಿರುವಾಗ ಅದರ ವಿಶೇಷಾರ್ಥವೇನು ಎಂಬುದನ್ನು ಪರಿಶೀಲಿಸೋಣ.

ಸೇಚನಸಾಮರ್ಥ್ಯವುಳ್ಳ **ಪುಮಾನ್** ಎಂಬರ್ಥದಲ್ಲಿ ವೃಷನ್ ಶಬ್ದವನ್ನು ಅನೇಕಕಡೆ ಉಪಯೋಗಿಸಿದೆ. **ಪುಮಾನ್** ಎಂದು **ಪುಲ್ಲಿಂಗ** ಸೂಚಕವಾಗಿ ಪುರುಷಪರ್ಯಾಯವಾಗಿಯಾಗಲಿ ಅಥವಾ ಅಶ್ವಾದಿ ಇತರ ಪ್ರಾಣಿಗಳ ಪರ್ಯಾಯವಾಗಿಯಾಗಲಿ ಈ ಪದದ ಪ್ರಯೋಗವಿದೆ.

**ಯೋ ತ ಇಂದ್ರ ದದುಷೋ ವರ್ಧಯಂತಿ ಮಹಿ ಕ್ಷತ್ರಂ ಸ್ಥವಿರಂ ವೃಷ್ಣ್ಯಂ ಚ ।**
(ಋ. ಸಂ. ೧-೫೪-೮).

ಎಂಬಲ್ಲಿ ವೃಷ್ಣ್ಯಂ ಎಂಬ ಪದಕ್ಕೆ **ವೃಷತ್ವಂ-ಪುಂಸ್ತ್ವಂ** ಎಂದೂ,

**ಸ್ತುತಃ ಶ್ರವಸ್ಯನ್ನವಸೋಪ ಮದ್ರಿಗ್ಯುಕ್ತ್ವಾ ಹರೀ ವೃಷಣಾ ಯಾಹ್ಯರ್ವಾಙ್ ।**
(ಋ. ಸಂ. ೧-೧೭೭-೧).

ಇಲ್ಲಿ **ವೃಷಣಾ** ಎಂದರೆ **ಯುವಾನಾ** ಎಂದೂ

**ಭೂಷನ್ನ ಯೋಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿ ರೋರುವತ್ ।**
(ಋ. ಸಂ. ೧-೧೪೦-೬).

ಇಲ್ಲಿ **ವೃಷಾ ಇವ** ಎನ್ನುವುದಕ್ಕೆ **ಸೇಕ್ತಾ ವೃಷಭ ಇವ** ಸೇಚನೆ ಮಾಡುವ ವೃಷಭ (ಎತ್ತು) ದಂತೆ ಎಂದೂ,

**ಮಿನಾತಿ ಶ್ರಿಯಂ ಜರಿಮಾ ತನೂನಾಮಪ್ಯೂ ನು ಪತ್ನೀರ್ವೃಷಣೋ ಜಗಮ್ಯುಃ ।**
(ಋ. ಸಂ. ೧-೧೭೯-೧).

ಇತ್ಯಾದಿ ಋಕ್ಕುಗಳಲ್ಲಿ **ವೃಷಣಃ** ಎಂಬುದಕ್ಕೆ **ಸೇಕ್ತಾರಃ ಪುರುಷಾಃ** ಎಂದೂ ಇನ್ನೂ ಹೀಗೆಯೇ ಅನೇಕ ಕಡೆಗಳಲ್ಲಿ ಇದರಂತೆಯೇ ಪುಲ್ಲಿಂಗಸೂಚಕವಾದುದೂ, ಪುರುಷಪ್ರಾಣಿಯ ಶಕ್ತಿಯನ್ನು ತೋರಿಸತಕ್ಕದ್ದೂ ಆದ ಅರ್ಥಗಳಲ್ಲಿ ಈ ಪದದ ಪ್ರಯೋಗವಿದೆ. ಮತ್ತು

**ವೃಷಾ ವಾಂ ಮೇಘೋ ವೃಷಣಾ ಪೀಪಾಯ ಗೋರ್ನ ಸೇಕೇ ಮನುಷೋ ದಶಸ್ಯನ್ ।**

(ಋ. ಸಂ. ೧-೧೮೧-೮).

**ದಸ್ಮೋ ಹಿ ಷ್ಮಾ ವೃಷಣಂ ಪಿನ್ವಸಿ ತ್ವಚಂ ಕಂ ಚಿದ್ಯಾವೀರರರುಂ ಶೂರ ಮರ್ತ್ಯಂ ಪರಿವೃಣಕ್ಷಿ ಮರ್ತ್ಯಂ ।**

(ಋ. ಸಂ. ೧-೧೨೯-೩).

**ತಾ ತೂ ತೇ ಸತ್ಯಾ ತುವಿನೃಮ್ಣ ವಿಶ್ವಾ ಪ್ರ ಧೇನವಃ ಸಿಸ್ರತೇ ವೃಷ್ಣ ಊಧ್ನಃ ।**

(ಋ. ಸಂ. ೪-೨೨-೬).

ಇತ್ಯಾದಿ ಸ್ಥಳಗಳಲ್ಲಿ **ವರ್ಷಕಃ, ವರ್ಷಣಪರಮನಸ್ಕಃ ।** ನೀರನ್ನು ಸುರಿಸುವುದು, ಇಷ್ಟಾರ್ಥಗಳನ್ನು ಸುರಿಸುವವನು ಎಂದು ಸೇಚನಾರ್ಥದಲ್ಲಿ ಉಪಯೋಗಿಸಿದೆ. ಇದರೊಂದಿಗೆ ಇನ್ನೂ ಇತರ ಅರ್ಥಗಳೂ ಅಪರೂಪವಾಗಿ ಅಲ್ಲಲ್ಲಿ ತೋರಿದರೂ ಸಹ **ವೃಷ್ಣ್ಯ** ಶಬ್ದಕ್ಕೆ ಅಸಾಧಾರಣವಾದ ಶಕ್ತಿ, ವೀರ್ಯ ಎಂಬರ್ಥವೇ ಮುಖ್ಯವಾಗಿ ನಾನಾ ಕಡೆಗಳಲ್ಲಿ ತೋರುತ್ತದೆ.

**ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ ।**

(ಋ. ಸಂ. ೧. ೯೧. ೧೬)

**ಮಹಾँ ಅಸಿ ಮಹಿಷ ವೃಷ್ಣ್ಯೇಭಿರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।**

(ಋ. ಸಂ ೩. ೪೬. ೨)

**ವಿ ಚರ್ಮಣೀವ ಧಿಷಣೇ ಅವರ್ತಯದ್ವೈಶ್ವಾನರೋ ವಿಶ್ವಮಧತ್ತ ವೃಷ್ಣ್ಯಂ ।**

(ಋ. ಸಂ. ೬. ೮. ೩.)

ಇತ್ಯಾದಿ ನಾನಾ ಋಕ್ಕುಗಳಲ್ಲಿ ವೃಷ್ಣ್ಯಶಬ್ದಕ್ಕೆ ವೀರ್ಯ ಮತ್ತು ಪರಾಕ್ರಮ ಎಂಬರ್ಥವು ಸಾಧಾರಣವಾಗಿದೆ. ಅಲ್ಲದೆ ಅನೇಕ ಸಂದರ್ಭಗಳಲ್ಲಿ ಇಂದ್ರಾದಿದೇವತೆಗಳ ಪರ್ಯಾಯವಾಗಿಯೇ **ವೃಷನ್** ಶಬ್ದವನ್ನು ಉಪಯೋಗಿಸಿರುವುದರಿಂದ ಅಂತಹ ಕಡೆಗಳಲ್ಲಿ ಸಂದರ್ಭಕ್ಕನುಗುಣವಾಗಿ ಆಯಾ ದೇವತೆಗಳನ್ನುದ್ದೇಶಿಸಿದೆಯೆಂದು ಊಹಿಸಿಕೊಳ್ಳಬೇಕಾಗುತ್ತದೆ.

**ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ ।**

(ಋ. ಸಂ. ೪-೩೦-೧೦)

ಎಂಬಲ್ಲಿ ಇಂದ್ರನ ಪರ್ಯಾಯವಾಗಿದೆಯೆಂದು ಊಹಿಸಬಹುದು. ಆದರೆ ಅನೇಕ ಕಡೆಗಳಲ್ಲಿ ಯಾವ ದೇವತೆಯನ್ನುದ್ದೇಶಿಸಿದೆಯೆಂಬ ಸಂಶಯಕ್ಕೂ ಕಾರಣವಾಗುತ್ತದೆ. ಒಂದೊಂದುಸಲ ಸಾಯಣಾಚಾರ್ಯರೂ ಸಹ ಪ್ರಕೃತವಾದ ಋಕ್ಕಿನಲ್ಲಿ ಸಂಶಯವನ್ನು ತೋರಿಸುವಂತೆ, ಈ ವಿಶೇಷಣಕ್ಕೆ ಅರ್ಥಮಾಡುವಾಗ ಅವರ ವಿವರಣೆಯು ಅಷ್ಟು ನಿಷ್ಕೃಷ್ಟವಾಗಿರುವುದಕ್ಕಾಗಿಲ್ಲ.

**ವೃಷಾ ಛಂದುರ್ಭವತಿ ಹರ್ಯತೋ ವೃಷಾ ಕ್ಷೇಮೇಣ ಧೇನಾಂ ಮಘವಾ ಯದಿನ್ವತಿ ।**

(ಋ. ಸಂ. ೧-೫೫-೪)

ಎಂಬ ಋಕ್ಕಿನಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಅರ್ಥಮಾಡಿರುವಂತೆಯೇ, **ವೃಷಾ** ಎಂಬ ಪದಕ್ಕೆ ಮೊದಲು **ವೃಷಾ-ಹವಿಷಾಂ ವರ್ಷಯಿತಾ ಯಜಮಾನಃ** ಎಂದೂ ಅನಂತರ **ಯದ್ವಾ ವೃಷಾ-ಇಂದ್ರಃ** ಎಂದೂ ಹೇಳಿರುವಾಗ ಸಂಶಯಕ್ಕೆ ಅವಕಾಶವನ್ನು ಕೊಟ್ಟಿರುತ್ತಾರೆ. ಹೀಗೆ ನಾನಾ ಅರ್ಥಗಳಲ್ಲಿ ಉಪಯೋಗಿಸುವುದರಿಂದ ಒಂದೊಂದು ಸನ್ನಿವೇಶದಲ್ಲೂ ಅದಕ್ಕನುಗುಣವಾದ ಭಾವವನ್ನು ತಿಳಿದು ಅರ್ಥಮಾಡಬೇಕಾಗುತ್ತದೆ. ಭಾವಗರ್ಭಿತವಾದ ಈ ಪದದ ವಿವರಣೆಯನ್ನು ಹೇಳುವಾಗ Max Muller ಎಂಬ ಆಂಗ್ಲ ವ್ಯಾಖ್ಯಾಕಾರನು ಈ ಪದದಿಂದ ವ್ಯಕ್ತವಾಗುವ ಭಾವಗಳ ಗಭೀರತೆಯನ್ನು ಕೆಳಗೆ ಕಂಡಂತೆ ವಿವರಿಸಿದ್ದಾನೆ.

> In **ವೃಷನ್** we have one of those words which it is almost impossible to transalate accurately. It oceurs over and over again in the Vedic hymns and if we once know the various ideas which it either expesses or implies we have little difficulty in understanding its import in a vague and general way though we look in vain for corresponding terms in any modern language and we shall see how difficult it would be to translate such terms without losing either the key-note that was still sounding, or the harmonies which were set vibrating by it in the minds of the poets and their listeners
>
> [S B.E. vol. XXXII, P. 138-139]

ಪ್ರಕೃತವಾದ ಋಕ್ಕಿನಲ್ಲಿ ಹವಿಷ್ಪ್ರದರಾದ ಋತ್ವಿಕ್ಕುಗಳಿಂದಾಗಲಿ, ಅಥವಾ ವೀರ್ಯದಿಂದ ಕೂಡಿದವರೂ, ಇಷ್ಟಾರ್ಥಗಳನ್ನು ಸುರಿಸುವವರೂ ಆದ ಇಂದ್ರಾದಿಗಳಿಂದಾಗಲಿ ಅರ್ಥವಾಗುತ್ತದೆ.

**ಅಶ್ನಃ ಮೃಗೋ ನ ಅತಿಜುಗುರ್ಯಾತ್— ವ್ಯಾಪಕಃ ಪಾನಾದ್ಯರ್ಥಂ ಧಾವನ್ ಹರಿಣಾದಿರಿವ ಅಯಮಿಂದ್ರಃ ಅಶನಶೀಲಸ್ಸನ್ ಅತ್ಯರ್ಥಮುದ್ಯುಙ್ಕ್ತೇ ಹವಿರ್ಭಕ್ಷಣಾಯ** । ಅಶ್ನಃ ಎಂಬ ಪದವು ಮೇಘನಾಮಗಳಲ್ಲಿ (ನಿ. ೨–೨೧) ಉಕ್ತವಾಗಿದೆ. ಇಲ್ಲಿ ವ್ಯಾಪಕಃ ಎಂದು ಮೃಗಪರವಾಗಿಯೂ, ಅಶನಶೀಲಃ ಎಂದು ಇಂದ್ರನ ಪರವಾಗಿಯೂ ಅರ್ಥಬೋಧಕವೆಂದು ಪ್ರಯುಕ್ತವಾಗುತ್ತದೆ. ನ ಎಂಬ ಪದವು ಎರಡುವಿಧವಾದ ಅನ್ವಯವುಳ್ಳದ್ದಾಗಿ ಪ್ರಯುಕ್ತವಾಗಿರುವುದರಿಂದ **ಮೃಗ ಇವ ಇಂದ್ರಃ** ಪಾನಾದಿಗಳಿಗಾಗಿ (ನೀರು ಕುಡಿಯುವುದಕ್ಕಾಗಿ) ಓಡುತ್ತಿರುವ ಮೃಗದ ಹಾಗೆ ಇಂದ್ರನು ಶೀಘ್ರವಾಗಿ ಬಂದು ನಮ್ಮ ಹವಿಸ್ಸುಗಳನ್ನು ಸ್ವೀಕರಿಸಲು ಉದ್ಯುಕ್ತನಾಗಿರುವನು ಎಂದು ಒಂದು ವಿಧವಾದ ಅರ್ಥವನ್ನು ಜಿಂಕೆಯೇ ಮೊದಲಾದ ಮೃಗದ ಹೋಲಿಕೆಯಿಂದ ವರ್ಣಿಸಿದೆ.

**ಮೃಗಃ**— ಮೃಗೋ **ಮಾಷ್ಟೇರ್ಗತಿಕರ್ಮಣಃ** (ನಿ. ೧–೨೦) ಗತ್ಯರ್ಥಕವಾದ **ಮೃಜ್** ಧಾತುವಿನಿಂದ ನಿಷ್ಪನ್ನವಾಗಿ **ನಿತ್ಯಂ ಹ್ಯಸೌ ಗಚ್ಛತಿ** ಇವನು ನಿತ್ಯಸಂಚಾರಿ ಎಂಬರ್ಥವನ್ನು ಕೊಡುತ್ತದೆ. **ಅನ್ವೇಷಣಶೀಲೋ ವಾ** ಯಾವಾಗಲೂ ತನ್ನ ಆಹಾರವನ್ನು ಹುಡುಕುವವನು ಎಂದೂ ತಾತ್ಪರ್ಯ.

**ಯಥಾ ಕ್ಷುತ್ಪಿಪಾಸಾರ್ದಿತಃ ಮೃಗಃ ಶೀಘ್ರಮುದ್ಯುಙ್ಕ್ತೇ ತಥಾಯಮಿಂದ್ರೋಽಪಿ**—ಹಸಿವು ಮತ್ತು ಬಾಯಾರಿಕೆಗಳಿಂದ ಕ್ಲೇಶವನ್ನು ಅನುಭವಿಸುವ ಮೃಗವು ತನ್ನ ಅಹಾರಪಾನಗಳಿಗಾಗಿ ಶೀಘ್ರವಾಗಿ ಓಡಿ ಬರುವಂತೆ ಇಂದ್ರನು ಹವಿಸ್ಸನ್ನು ಸ್ವೀಕರಿಸಲು ಶೀಘ್ರವಾಗಿ ಬರುವನೆಂದು ಎರಡನೆಯ ಅರ್ಥವನ್ನು ವಿವರಿಸಿದೆ.

**ಯದ್ವಾ ಅಯಮಿಂದ್ರಃ ಅಶ್ನೋ ವೃಗ ಇವ ಅತಿಜುಗುರ್ಯೋತ್ ಭಕ್ಷಯೇತ್ ತಥಾ ಅರ್ಚತಿ ।** ಹಸಿವು ಬಾಯಾರಿಕೆಗಳಿಂದ ಬಳಲಿರುವ ವೃಗವು ಪ್ರಭೂತವಾಗಿ ಭಕ್ಷಿಸಿ ತನ್ನ ಹಶಿವೆಯನ್ನು ನಾಶಗೊಳಿಸಿಕೊಂಡು ತೃಪ್ತಿಯನ್ನು ಹೊಂದುವಂತೆ ಯಜಮಾನನು ಇಂದ್ರನ ಹಶಿವೆಯು ಅಡಗಿ ಅವನು ತೃಪ್ತಿಯನ್ನು ಹೊಂದುವ ಹಾಗೆ ಪೂಜಿಸುತ್ತಾನೆಂದೂ ಅರ್ಥವನ್ನು ವಿವರಿಸಿದೆ.

**ಜುಗುರ್ಯಾತ್**—**ಜುಗುರ್ಯಾತ್, ಜುಗುರ್ಯುಃ ಜುಗುರ್ವಣಿಃ** ಇತ್ಯಾದಿ ಪದಗಳೆಲ್ಲವೂ ಜ್ಯಾ ಧಾತುವಿನಿಂದ ನಿಷ್ಪನ್ನವಾಗಿವೆಯೆಂದು ತಿಳಿಯಬೇಕು. ನಿರುಕ್ತಕಾರರು **ಜರತೇ** ಎಂಬ ಪದವನ್ನು **ಅರ್ಚತಿ** ಕರ್ಮನಾಮಗಳಲ್ಲಿ ಸೇರಿಸಿದ್ದಾರೆ. ಇದಕ್ಕೆ ಅಭಿ. ಅತಿ ಇತ್ಯಾದ್ಯುಪಸರ್ಗಗಳ ಜೊತೆಯಲ್ಲಿ ಅಧಿಕವಾದ ಪ್ರಯೋಗವಿದೆ. ಉದಾಹರಣೆಗೆ—

**ಅಭೀ ನೋ ಅಗ್ನ ಉಕ್ಥಮಿಜ್ಜುಗುರ್ಯಾ ದ್ಯಾವಾಕ್ಷಾಮಾ ಸಿಂಧವಶ್ಚ ಸ್ವಗೂರ್ತಾಃ ।**

(ಋ. ಸಂ. ೧-೧೪೦-೧೩).

ಎಂಬಲ್ಲಿ ಆಭಿಮುಖ್ಯೇನ **ಸ್ತುಹಿ** ಎಂದರೆ ವಿಶೇಷರೀತಿಯಿಂದ ಸ್ತುತಿಸಿದೆಯೆಂಬ ಅಂಗೀಕಾರವಚನವನ್ನು ಹೇಳು ಎಂದರ್ಥ.

**ಪ್ರ ಸ್ತೋಷದುಪ ಗಾಸಿಷಚ್ಛ್ರವತ್ಸಾಮ ಗೀಯಮಾನಂ । ಅಭಿ ರಾಧಸಾ ಜುಗುರತ್ ।**

(ಋ. ಸಂ. ೮-೮೧-೫).

ಇತ್ಯಾದಿ ಋಕ್ಕುಗಳಲ್ಲಿ **ಅಭಿಗೃಣಾತು**—ಸ್ವೀಕರಿಸು ಎಂಬರ್ಥವಾಗುತ್ತದೆ. ಎಂದರೆ ಅರ್ಚನಾಕರ್ಮದಲ್ಲಾಗಲಿ, ಸ್ವೀಕಾರ್ಯಕಾರ್ಯದಲ್ಲಾಗಲಿ ಒಂದು ವಿಧವಾದ ಆದರಾತಿಶಯವನ್ನು ತೋರಿಸುವಾಗ ಈ ಪದದ ಪ್ರಯೋಗವಿದೆಯೆಂದು ತಿಳಿಯುತ್ತದೆ ಪ್ರಕೃತವಾದ ಋಕ್ಕಿನಲ್ಲಿಯೂ ಆದರಪೂರ್ವಕವಾದ ಸ್ವೀಕಾರಾರ್ಥದಲ್ಲಿಯೇ ಪ್ರಯುಕ್ತವಾಗಿದೆ.

**ಮನಾಂ ಮಂದಯುಃ ಮರ್ಯಃ ಹೋತಾ ಯಜತ್ರಃ**—ಸ್ತೋತ್ರವನ್ನು ಶ್ರವಣ ಮಾಡಲು ಇಚ್ಛೆಯುಳ್ಳ ದೇವತೆಗಳ ಸ್ತುತಿಯನ್ನು ಪಠಿಸುವ ಮನುಷ್ಯನಾದ ಹೋತೃವೆಂಬ ಋತ್ವಿಜನು ಯಾಗವನ್ನು ನೆರವೇರಿಸುವವನಾಗಿರುವನು ಎಂದು ಇಂದ್ರನನ್ನು ಸಂಬೋಧಿಸಿ ಅರ್ಥವನ್ನು ವಿವರಿಸಿ, ಈ ಹೋತೃವು, ಯಾಜ್ಯಾ ಪುರೋನುವಾಕ್ಯಾ ಎಂಬ ಮಂತ್ರಗಳನ್ನೂ ಜೊತೆಯಲ್ಲಿಯೇ ಪಠಿಸುವನು ಎಂದು ಒಂದು ವಿಧವಾದ ಅರ್ಥವನ್ನು ಹೇಳಿದೆ. ಎರಡನೆಯ ಅರ್ಥದಲ್ಲಿ ಈ ಹೋತೃವೆಂಬ ಋತ್ವಿಜನೂ ದಂಪತಿ ರೂಪದಿಂದ (ಪತಿಪತ್ನೀರೂಪದಿಂದ) ಇರುವವನಾಗಿ ಯಾಗವನ್ನು ಎಡಬಿಡದೆ ಆಚರಿಸುವನು ಆದ್ದರಿಂದ ಇಂದ್ರನನ್ನು ಯಜಮಾನನು ಪೂಜಿಸುವನೆಂದು ಅರ್ಥವನ್ನು ವರ್ಣಿಸಿದೆ.

**ಗೂರ್ತ**—ಗೂರ್ತ ಶಬ್ದಕ್ಕೆ ಇಲ್ಲಿ ಪ್ರಬಲನಾದ ಎಂದರ್ಥವಾಗುತ್ತದೆ. ಪ್ರಶಂಸಿತವಾದ. ಸ್ತುತ್ಯರ್ಹವಾದ ಎಂದೂ ಅರ್ಥವಾಗುತ್ತದೆ.

**ತಂ ವಃ ಸಖಾಯೋ ಮದಾಯ ಪುನಾನಮಭಿ ಗಾಯತ ।**
**ಶಿಶುಂ ನ ಯಜ್ಞೈಃ ಸ್ವದಯಂತ ಗೂರ್ತಿಭಿಃ ॥**

(ಋ. ಸಂ. ೯-೧೦೫-೧)

ಎಂಬಲ್ಲಿ **ಗೂರ್ತಿಭಿಃ** ಎಂಬುದಕ್ಕೆ **ಸ್ತುತಿಭಿಃ,** ಸ್ತೋತ್ರಗಳಿಂದ ಎಂದೂ,

**ತಂ ಗೂರ್ತಯೋ ನೇಮನ್ನಿಷಃ ಪರೀಣಸಃ ಸಮುದ್ರಂ ನ ಸಂಚರಣೇ ಸನಿಷ್ಯವಃ ।**
**ಪತಿಂ ದಕ್ಷಸ್ಯ ವಿದಥಸ್ಯ ನೂ ಸಹೋ ಗಿರಿಂ ನ ವೇನಾ ಅಧಿ ರೋಹ ತೇಜಸಾ ॥**

(ಋ. ಸಂ. ೧-೫೬-೨).

ಇತ್ಯಾದಿ ಸ್ಥಳಗಳಲ್ಲಿ **ಸ್ತೋತಾರಃ** ಎಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಸ್ತುತ್ಯರ್ಹವಾದ ಇಂದ್ರನ ಪರಾಕ್ರಮವೆಂದರ್ಥ.

**ಮರ್ತ್ಯಃ—ಮರ್ತ್ಯೋ ಮನುಷ್ಯೋ ಮರಣಧರ್ಮಾ ।** ಮರಣಧರ್ಮವಿರುವುದರಿಂದ (ಸಾವಿಗೀಡಾಗುವುದರಿಂದ) ಮಾನವನಿಗೆ ಮರ್ತ್ಯನೆಂದು ಹೆಸರು. (ನಿ. ೩-೧೫).

॥ ವ್ಯಾಕರಣಪ್ರಕ್ರಿಯಾ ॥

**ಅರ್ಚತ್**—ಅರ್ಚ ಪೂಜಾಯಾಂ ಧಾತು. ಛಾಂದಸವಾಗಿ ಲಙ್.

**ಸ್ವೇದುಹವ್ಯೈಃ**—ಸ್ವಯಂ ಇತ್ ಪ್ರಾಪ್ತಂ ಹವ್ಯಂ ಯೇಷಾಂ ತೇ. ಸ್ವೇದುಹವ್ಯಾಃ-ತೈಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಜುಗುರ್ಯಾತ್**—ಗೃ ಶಬ್ದೇ. ಧಾತು. ಲಿಙಿನಲ್ಲಿ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. ರಪರವಾಗಿ ಬರುತ್ತದೆ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಚುತ್ವ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಾಸುಟ್ ಉದಾತ್ತವೆಂದುದರಿಂದ ಅಂತೋದಾತ್ತವಾಗುತ್ತದೆ.

**ಮಂದಯುಃ**—ಮಂದಮಾತ್ಮನಃ ಇಚ್ಛತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಕ್ಯಚಿನ ಅಕಾರಲೋಪ. ಪ್ರತ್ಯಯಸ್ವರ ಉಳಿಯುತ್ತದೆ.

**ಮನಾಮ್**—ಮನ ಜ್ಞಾನೇ. ಧಾತು. ಕರ್ತರಿಯಲ್ಲಿ ಕ್ವಿಪ್ ಪ್ರತ್ಯಯ. ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ,

**ಭರತೇ**—ಭೃಞ್ ಭರಣೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲ ಸಾರ್ವಧಾತುಕ, ಶಪ್, ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮರ್ಯಃ**—ಮೃಜ್ ಪ್ರಾಣತ್ಯಾಗೇ. ಧಾತು ಅಂತರ್ಭಾವಿತಣ್ಯರ್ಥಕವಾಗಿದೆ. **ಛಂದಸಿ ನಿಷ್ಟರ್ಕ್ಯ**—(ಪಾ. ಸೂ. ೩-೧-೧೨೩) ಎಂಬುದರಿಂದ ನಿಪಾತಮಾಡಿರುವುದರಿಂದ ಯತ್ ಪ್ರತ್ಯಯ. ಬಹುಲಗ್ರಹಣದಿಂದ ಇದು ಕರ್ತರಿಯಲ್ಲಿ ಬರುತ್ತದೆ. **ಯತೋನಾವಃ** (ಪಾ. ಸೂ ೬-೧-೨೧೩) ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಿಥುನಾ**—ಮಿಥ ಎಂಬುದು ಸೌತ್ರ ಧಾತು. **ಕ್ಷುಧಿಪಿಶಿ**—(ಉ. ಸೂ ೩೩೫) ಎಂಬುದರಿಂದ ಉನನ್ ಪ್ರತ್ಯಯ. ಕಿತ್ತಾಗುತ್ತದೆ. ಆದುದರಿಂದಲೇ ಲಘೂಪಧಗುಣ ಬರುವುದಿಲ್ಲ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

**ಯಜತ್ರಃ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಅಮಿನಕ್ಷಿ ಯಜಿವಧಿ**—(ಉ. ಸೂ. ೩೮೫) ಎಂಬುದರಿಂದ ಅತ್ರನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ನಕ್ಷದ್ಧೋತಾ ಪರಿ ಸದ್ಮ ಮಿತಾ ಯನ್ಭರದ್ಗರ್ಭಮಾ ಶರದಃ ಪೃಥಿವ್ಯಾಃ ।
ಕ್ರಂದದಶ್ವೋ ನಯಮಾನೋ ರುವದ್ಗೌರಂತರ್ದೂತೋ ನ ರೋದಸೀ
ಚರದ್ವಾಕ್ ॥ ೩ ॥

॥ ಪದಪಾಠಃ ॥

ನಕ್ಷತ್ । ಹೋತಾ । ಪರಿ । ಸದ್ಮ । ಮಿತಾ । ಯನ್ । ಭರತ್ । ಗರ್ಭಂ । ಆ । ಶರದಃ । ಪೃಥಿವ್ಯಾಃ ।
ಕ್ರಂದತ್ । ಅಶ್ವಃ । ನಯಮಾನಃ । ರುವತ್ । ಗೌಃ । ಅಂತಃ । ದೂತಃ । ನ । ರೋದಸೀ ಇತಿ । ಚರತ್ ।
ವಾಕ್ ॥ ೩ ॥

॥ ಸಾಯಣಭಾಷ್ಯಂ ॥

ಹೋತಾ ಹೋಮನಿಷ್ಪಾದಕೋಽಯಮಗ್ನಿರ್ಮಿತಾ ಪರಿಮಿತಾ ಸದ್ಮ ಸದನಾನಿ ಗಾರ್ಹಪತ್ಯಾದಿಸ್ಥಾನಾನಿ ಪರಿ ಯನ್ ಪರಿತೋ ಗಚ್ಛನ್ನಕ್ಷತ್। ವ್ಯಾಪ್ನೋತಿ । ವ್ಯಾಪ್ಯ ಚ ಶರದಃ ಸಂವತ್ಸರಸಂಬಂಧಿನಂ ಪೃಥಿವ್ಯಾ ಭೂಮ್ಯಾಶ್ಚ ಸಂಬಂಧಿನಂ ಗರ್ಭಂ ಗರ್ಭಸ್ಥಾನೀಯಮನ್ನಂ ಹವಿರ್ಲಕ್ಷಣಮಾ ಭರತ್ । ಆಹರತಿ। ಸ್ವೀಕರೋತಿ । ಸಂಭರತಿ ವಾ। ಸಂವತ್ಸರಪರ್ಯಂತಂ ವರ್ಧಿತಂ ಭೂಮ್ಯಾಮುತ್ಪನ್ನಮಿತ್ಯರ್ಥಃ । ಯದ್ವಾ। ಸಂವತ್ಸರಸಂಬಂಧಿನಂ ವಸಂತಾದಿಕಾಲೇ ಜ್ಯೋತಿಷ್ಟೋಮಾದಿಷು ದೀಯಮಾನಂ ಪಾರ್ಥಿವಂ ಹವಿರ್ಭರತ್ । ವಸಂತೇ ವಸಂತೇ ಜ್ಯೋತಿಷಾ ಯಜೇತೇತಿ ಶ್ರುತೇಃ । ತಥಾ ಕೃತ್ವಾ ಕ್ರಂದದಶ್ವಃ । ಲುಪ್ತೋಪಮಮೇತತ್ । ಅಶ್ವ ಇವ ಕ್ರಂದತಿ ಹರ್ಷಾತಿಶಯಾತ್ । ಕಿಂ ಕುರ್ವನ್ । ನಯಮಾನೋ ನಯದಿಂದ್ರಾಯ ಹವಿರ್ಭಾರಂ । ಕಿಂಚ ಗೌರ್ಗಂತೋದ್ವೃತ್ತೋ ವೃಷ ಇವ ರುವತ್ । ರೌತಿ । ಶಬ್ದಾಯತೇ । ಕಿಂ ಕುರ್ವನ್ । ದೂತೋ ನ ವಾರ್ತ್ತಾಹರೋ ದೂತ ಇವ ರೋದಸೀ ರೋದಸ್ಯೋರ್ದ್ಯಾವಾಪೃಥಿವ್ಯೋರಂತರ್ಮಧ್ಯೇ ರೋದಸ್ಯೋರಂತರಾ ವಾಕ್ ಸ್ತೂಯಮಾನಃ ಸ್ತುವನ್ ವಾ ದೇವಾಂಶ್ಚರತ್ । ಚರತಿ । ಗಚ್ಛತಿ । ಹವಿಃಸ್ವೀಕಾರಾಯ ಪೃಥಿವೀಂ ತತ್ಪ್ರಾಪಣಾಯ ದ್ಯುಲೋಕಂ ಚ ಪರಿಭ್ರಮತೀತ್ಯರ್ಥಃ ॥ ವಕ್ತೇಃ ಕರ್ತರಿ ಕರ್ಮಣಿ ವಾ ಕ್ವಿಬ್ವಚೀತ್ಯಾದಿನಾ ಕ್ವಿಬ್ದೀರ್ಘೌ ಸಂಪ್ರಸಾರಣಾಭಾವಶ್ಚ ॥

॥ ಪ್ರತಿಪದಾರ್ಥ ॥

**ಹೋತಾ**—ಹೋಮನಿಷ್ಪಾದಕನಾದ ಅಗ್ನಿಯು । **ಮಿತಾ**—ಪರಿಮಿತವಾದ । **ಸದ್ಮ**—ಗಾರ್ಹಪತ್ಯಾದಿ ಸ್ಥಾನಗಳನ್ನು । **ಪರಿ ಯನ್**—ಸುತ್ತಲೂ ಸಂಚರಿಸುವವನಾಗಿ । **ನಕ್ಷತ್**—ವ್ಯಾಪಿಸುತ್ತಾನೆ (ಅನಂತರ) । **ಶರದಃ**—ಸಂವತ್ಸರ ಸಂಬಂಧಿಯೂ (ಸಂವತ್ಸರ ಪರ್ಯಂತ) । **ಪೃಥಿವ್ಯಾಃ**—ಪೃಥಿವೀಸಂಬಂಧಿಯೂ ಆದ (ಭೂಮಿಯಲ್ಲಿದ್ದ ಅದರ) । **ಗರ್ಭಂ**—(ಭೂಮಿಯ) ಗರ್ಭಸ್ಥಾನೀಯವಾದ ಹವಿಸ್ಸನ್ನು । **ಆ ಭರತ್**—

ಸ್ವೀಕರಿಸುತ್ತಾನೆ (ಸಂಪಾದಿಸುತ್ತಾನೆ) | [ಅಥವಾ **ಶರದಃ**--ಸಂವತ್ಸರಸಂಬಂಧವಾದ ವಸಂತಾದಿ ಕಾಲದಲ್ಲಿ ಆಚರಿಸುವ ಜ್ಯೋತಿಷ್ಟೋಮಾದಿಗಳಲ್ಲಿ ದೀಯಮಾನವಾದ | **ಪೃಥಿವ್ಯಾಃ ಗರ್ಭಂ**—ಪೃಥಿವೀ ಗರ್ಭಭೂತವಾದ ಹವಿಸ್ಸನ್ನು | **ಆ ಭರತ್** –ಸ್ವೀಕರಿಸುತ್ತಾನೆ] (ಸ್ವೀಕರಿಸಿ) | **ನಯಮಾನಃ**—(ಇಂದ್ರನಿಗೋಸ್ಕರ ಹವಿಸ್ಸನ್ನು) ವಹಿಸುತ್ತಾ | **ಅಶ್ವಃ ಕ್ರಂದತ್**—(ಸಂತೋಷದಿಂದ) ಅಶ್ವದಂತೆ ಕೆನೆಯುತ್ತಾನೆ (ಮತ್ತು) | **ದೂತಃ ನ**— ವಾರ್ತೆಗಳನ್ನು ತರುವ ದೂತನಂತೆ | **ರೋದಸೀ ಅಂತಃ**—ದ್ಯಾವಾಪೃಥಿವಿಗಳ ಮಧ್ಯೆ | **ವಾಕ್**—ಸ್ತೂಯಮಾನನಾಗಿ (ದೇವತೆಗಳನ್ನು ಸ್ತುತಿಸುತ್ತಾ) | **ಚರತ್**—ಸಂಚರಿಸುವವನಾಗಿ | **ಗೌಃ**—ವೃಷಭದಂತೆ | **ರುವತ್**—ಶಬ್ದಮಾಡುತ್ತಾನೆ.

॥ ಭಾವಾರ್ಥ ॥

ಹೋಮನಿಷ್ಪಾದಕನಾದ ಅಗ್ನಿಯು ಪರಿಮಿತವಾದ ಗಾರ್ಹಪತ್ಯಾದಿ ಸ್ಥಾನಗಳನ್ನು ವ್ಯಾಪಿಸಿ, ಜ್ಯೋತಿಷ್ಟೋಮಾದಿಗಳಲ್ಲಿ ಅರ್ಪಿತವಾದ, ಭೂಗರ್ಭಸ್ಥಾನೀಯವಾದ ಹವೀರೂಪವಾದ ಅನ್ನವನ್ನು ಸ್ವೀಕರಿಸುತ್ತಾನೆ; ಅನಂತರ ಇಂದ್ರಾದಿಗಳಿಗೋಸ್ಕರ ಅದನ್ನು ವಹಿಸುತ್ತಾ ಹರ್ಷದಿಂದ ಅಶ್ವದಂತೆ ಕೆನೆಯುತ್ತಾನೆ ಮತ್ತು ದೇವತೆಗಳಿಗೆ ಸಮಾಚಾರವನ್ನು ಒದಗಿಸುವ ದೂತನಾಗಿ ದ್ಯಾವಾ ಪೃಥಿವಿಗಳ ಮಧ್ಯೆ ಸಂಚರಿಸುತ್ತಾ ಗೂಳಿಯಂತೆ ಗುಟುರು ಹಾಕುತ್ತಾನೆ.

English Translation.

The invoker (of the gods, Agni), pervades the measured stations (of the altars), and accepts that (oblation), which is the germ of the year and of the earth ; as a horse neighs when bringing (the offering to Indra), as a bull bellows like a messenger proclaiming (his message) between and earth.

॥ ವಿಶೇಷವಿಷಯಗಳು ॥

**ಹೋತಾ—ಹೋಮನಿಷ್ಪಾದಕೋ ಅಯಮಗ್ನಿಃ** | ಹೋತೃಶಬ್ದವು ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ದೇವತೆಗಳನ್ನು ಆಹ್ವಾನಮಾಡುವ ಋತ್ವಿಜನನ್ನು ನಿರ್ದೇಶಿಸುವುದಾದರೂ ಇಲ್ಲಿ ಯಜಮಾನರು ಅರ್ಪಿಸುವ ಹವಿಸ್ಸುಗಳನ್ನು ದೇವತೆಗಳಿಗೆ ತಲಪಿಸುವುದಕ್ಕಾಗಿ ದೇವತೆಗಳನ್ನು ಕರೆದುಕೊಂಡು ಬಂದು ಅವರಿಗೆ ಹವಿಸ್ಸನ್ನು ಅರ್ಪಿಸಿ ಯಾಗವನ್ನು ನಿರ್ವಹಿಸುವ ಅಗ್ನಿಯು ಎಂದು ಅರ್ಥವನ್ನು ವಿವರಿಸಿದೆ. ಈ ವಿಧವಾದ ಅರ್ಥವು ಅಗ್ನಿಯ ವಿಷಯದಲ್ಲಿ ವಿಶೇಷವಾಗಿ ಪ್ರಯೋಗಿಸಲ್ಪಡುವುದು.

ಅಲ್ಲದೇ, **ಹೋಮನಿಷ್ಪಾದಕಂ ಆಹ್ವಾತಾರಂ ವಾ** | ಹವಿರಾದ್ಯರ್ಪಣೆಗಳಿಂದ ಹೋಮಸಂಪಾದಕನು ಅಥವಾ ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕವನು ಎಂದು ಹೋತೃವಿಗೆ ಎರಡು ವಿಧವಾದ ಕ್ರಿಯೆಗಳುಂಟೆಂದು ಹೋತೃ ಶಬ್ದಕ್ಕೆ ಅರ್ಥಗಳನ್ನು ಹೇಳಿದೆ. ಇದೇ ಅಭಿಪ್ರಾಯವನ್ನು ಐತರೇಯ ಬ್ರಾಹ್ಮಣದಲ್ಲಿ ವಿವರಿಸುತ್ತಾ ಚರ್ಚಾರೂಪದಲ್ಲಿ ಈ ರೀತಿ ಹೇಳಿದೆ. ಅದು ಯಜ್ಞದಲ್ಲಿ ಹೋತೃವಿನ ಸ್ಥಾನವನ್ನು ತಿಳಿಸುತ್ತದೆ

**ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತಮಿಷ್ಟಿಭಿಃ ಪ್ರೈಷಮೈಚ್ಛನ್ಯದಿಷ್ಟಿಭಿಃ ಪ್ರೈಷಮೈಚ್ಛಂಸ್ತದಿಷ್ಟೀನಾಮಿಷ್ಟಿತ್ವಂ ತಮನ್ವವಿಂದನ್ । ಅನುವಿತ್ತಯಜ್ಞೋ ರಾಧ್ನೋತಿ ಯ ಏವಂ ವೇದ । ಆಹೂತಯೋ ವೈ ನಾಮೈತಾ ಯದಾಹುತಯ ಏತಾಭಿರ್ವೈ ದೇವಾನ್ಯಜಮಾನೋ ಹ್ವಯತಿ ತದಾಹುತೀನಾಮಾಹೂತಿತ್ವಂ । ಊತಯಃ ಖಲು ವೈ ತಾ ನಾಮ ಯಾಭಿರ್ದೇವಾ ಯಜಮಾನಸ್ಯ ಹವಮಾಯಂತಿ ಯೇ ವೈ ಪಂಥಾನೋ ಯಾಃ ಸ್ರುತಯಸ್ತಾ ವಾ ಊತಯಸ್ತ ಉ ಏವೈತತ್ಸ್ವರ್ಗಯಾಣಾ ಯಜಮಾನಸ್ಯ ಭವಂತಿ ॥**

(ಐ. ಬ್ರಾ. ೧.೨).

ಒಂದು ಸಲ ಯಜ್ಞವು ದೇವತೆಗಳಿಂದ ದೂರವಾಯಿತು. ಆಗ ಅವರು ಆಹುತಿಯನ್ನರ್ಪಿಸುವುದರಿಂದ ಅದನ್ನು ಪುನಃ ಪಡೆದರು. ಆಹುತಿಯೆಂದರೆ ದೇವತೆಯ ಹೆಸರನ್ನುದ್ದೇಶಿಸಿ ಆಹ್ವಾನಮಾಡುವುದರ ಮೂಲಕ ಮಾಡತಕ್ಕ ಅರ್ಪಣೆ. ಇಂತಹ ಆಹುತಿಯನ್ನರ್ಪಿಸುವವನಿಗೆ ಹೋತೃವೆಂದು ಹೆಸರು ಎಂದು ಹೇಳಿದರೆ ಆಗ ಇನ್ನೊಂದು ಪ್ರಶ್ನೆಯು ಏಳುತ್ತದೆ.

**ತದಾಹುರ್ಯದನ್ಯೋ ಜುಹೋತ್ಯಥ ಯೋಽನು ಚಾಹ ಯಜತಿ ಚ ಕಸ್ಮಾತ್ತಂ ಹೋತೇತ್ಯಾಚಕ್ಷತ ಇತಿ । ಯದ್ವಾವ ಸ ತತ್ರ ಯಥಾಭಾಜನಂ ದೇವತಾ ಅಮುಮಾವಹಾಮುಮಾವಹೇತ್ಯಾವಾಹಯತಿ ತದೇವ ಹೋತುರ್ಹೋತೃತ್ವಂ ಹೋತಾ ಭವತಿ । ಹೋತೇತ್ಯೇನಮಾಚಕ್ಷತೇ ಯ ಏವಂ ವೇದ ॥** (ಐ. ಬ್ರಾ. ೧-೨).

ಆಹುತಿಯನ್ನರ್ಪಿಸುವವನೇ ಬೇರೆ, ಆಹುತ್ಯರ್ಪಣಕ್ಕೆ ಆಹ್ವಾನವನ್ನು ಕೊಟ್ಟು ಮಂತ್ರವನ್ನುಚ್ಚರಿಸುವವನೇ ಬೇರೆಯಾದರೂ ಸಹ ಅರ್ಪಣಮಂತ್ರವನ್ನುಚ್ಚರಿಸುವವನಿಗೆ ಹೇಗೆ ಹೋತೃವೆಂಬ ಹೆಸರು ಉಚಿತವಾಗುತ್ತದೆಂಬ ಪ್ರಶ್ನೆಗೆ, ಈ ಮಂತ್ರವನ್ನು ಪಠಿಸತಕ್ಕವನು ಆಯಾ ಅರ್ಪಣಾಪರಿಮಾಣಕ್ಕನುಗುಣವಾಗಿ ಆಯಾ ದೇವತೆಗಳನ್ನು ಕರೆಯುವುದರಿಂದ ಅವನಿಗೂ ಹೋತೃವೆಂಬ ಹೆಸರು ಸರಿಯಾಗಿದೆಯೆಂದು ತಿಳಿಸಿ ಅನಂತರ,

**ಮನೋ ವೈ ಯಜ್ಞಸ್ಯ ಮೈತ್ರಾವರುಣೋ ವಾಗ್ಯಜ್ಞಸ್ಯ ಹೋತಾ ।**

(ಐ. ಬ್ರಾ. ೬-೫).

ಎಂಬ ವಾಕ್ಯದಿಂದ ಮಂತ್ರವನ್ನು ಪಠಿಸುವ ವಾಕ್ಕಿಗೂ ಹೋತೃವಿಗೂ ತಾದಾತ್ಮ್ಯವನ್ನು ಹೇಳಿದೆ. ಮತ್ತು,

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನಿತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈಷ ಸ್ವೋ ಲೋಕೋ ಯದುತ್ತರವೇದೀನಾಭಿಃ..................ನಿ ಹೋತಾ ಹೋತೃಷದನೇ ವಿದಾನ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತದ್ಧೋತೃಷದನಂ ಯದುತ್ತರವೇದೀನಾಭಿಃ ॥**

(ಐ. ಬ್ರಾ. ೫-೨).

ಇತ್ಯಾದಿ ವಾಕ್ಯಗಳು ಹೋಮನಿಷ್ಪಾದಕನಾದ ಅಗ್ನಿಯನ್ನು ದೇವಹೋತೃವೆಂದು ಸಂಬೋಧಿಸುತ್ತವೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಹೋತಾರಂ** ಎಂಬ ಪದಕ್ಕೆ **ಹೋಮನಿಷ್ಪಾದಕಂ ಆಹ್ವಾತಾರಂ ವಾ** ಎಂದು ಅರ್ಥ ಮಾಡಬಹುದು. **ಕ್ರಂದದಶ್ವಃ** ಇತ್ಯಾದಿ ಪದಗಳಿಂದ ಅಗ್ನಿಯ ಹೋತೃತ್ವವನ್ನು ವಿವರಿಸಿದೆ.

**ನಕ್ಷತ್—ವ್ಯಾಪ್ನೋತಿ । ಇನ್ವತಿ, ನಕ್ಷತಿ, ಆಕ್ಷಾಣಾಃ** ಇತ್ಯಾದಿ ೧೦ ವ್ಯಾಪ್ತಿಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೦) **ಅಭಿನಕ್ಷತಿ**ಯೆಂಬ ಪದಕ್ಕೆ ಸುತ್ತಲೂ ವ್ಯಾಪಿಸು, ಸುತ್ತುವರಿ ಎಂದರ್ಥ

**ಪ್ರ ಪರ್ವತಾ ಅನವಂತ ಪ್ರ ಗಾವಃ ಪ್ರ ಬ್ರಹ್ಮಾಣೋ ಅಭಿನಕ್ಷಂತ ಇಂದ್ರಂ ।**
(ಋ ಸಂ. ೮-೯೬-೫).

**ಸರಸ್ವತೀಂ ಯಾಂ ಪಿತರೋ ಹವಂತೇ ದಕ್ಷಿಣಾ ಯಜ್ಞಮಭಿನಕ್ಷಮಾಣಾಃ ॥**
(ಋ. ಸಂ. ೧೦-೧೭-೯).

ಇತ್ಯಾದಿ ಋಕ್ಕುಗಳಲ್ಲಿ **ಅಭಿನಕ್ಷಂತಃ, ಅಭಿನಕ್ಷಮಾಣಾಃ** ಎಂದರೆ ಸುತ್ತುವರಿದು ನಿಂತುಕೊಂಡರು ಎಂದರ್ಥ. ಇಲ್ಲಿ ಯಜ್ಞಾಗ್ನಿಯು ಗಾರ್ಹಪತ್ಯಾದಿ ಯಜ್ಞಸದನವನ್ನು ವ್ಯಾಪಿಸಿ ನಿಂತಿದ್ದಾನೆಂದರ್ಥ.

**ಮಿತಾ ಸದ್ಮ ಪರಿಯರ್ ನಕ್ಷತ್—**ಸದ್ಮ ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಗೃಹನಾಮಗಳಲ್ಲಿಯೂ (ನಿ. ೩-೧೩) ಸದ್ಮನೀ ಎಂದು ದ್ಯಾವಾಪೃಥಿವೀನಾಮಗಳಲ್ಲಿಯೂ (ನಿ. ೩-೨೨) ಉಕ್ತವಾಗಿದೆ. ಇಲ್ಲಿ ವಾಸಸ್ಥಾನವಾದ ಗೃಹವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಗ್ನಿಯು ಶಾಸ್ತ್ರದಲ್ಲಿ ಉಕ್ತವಾಗಿರುವ ಕ್ರಮವನ್ನು ಅನುಸರಿಸಿ ನಿರ್ಮಿತವಾದ ಆಹವನೀಯ ಗಾರ್ಹಪತ್ಯ ಎಂಬ ತನ್ನ ಹೆಸರಿಗೆ ಅನುರೂಪವಾದ ತನ್ನ ವಾಸಸ್ಥಾನವನ್ನು ಪೂರ್ಣವಾಗಿ ವ್ಯಾಪಿಸಿರುತ್ತಾನೆ ಎಂಬ ಅರ್ಥವನ್ನು ಇಲ್ಲಿ ವರ್ಣಿಸಿದೆ.

**ಶರದಃ ಪೃಥಿವ್ಯಾಃ ಗರ್ಭಮಾಭರತ್—ಸಂವತ್ಸರಸಂಬಂಧಿನಂ ಭೂಮ್ಯಾಶ್ಚ ಸಂಬಂಧಿನಂ ಹವಿರ್ಲಕ್ಷಣಂ ಗರ್ಭಸ್ಥಾನೀಯಮನ್ನಂ ಸ್ವೀಕರೋತಿ ಸಂಭರತಿ ವಾ ।** ಶರಚ್ಛಬ್ದವು ಎಂದರೆ ಶರತ್ಕಾಲವು **ಶರಚ್ಛೃತಾ ಅಸ್ಯಾಮೋಷಧಯೋ ಭವಂತಿ** ಓಷಧಿಗಳು (ವೃಕ್ಷಮೂಲಿಕಾದಿಗಳು) ಒಣಗತಕ್ಕ ಕಾಲವೆಂದೂ, ಅಥವಾ **ಶೀರ್ಣಾ ಆಪ ಇತಿ ವಾ** (ನಿ. ೪-೨೬) ಉದಕಗಳು ಶೋಷಿತವಾಗುವ ಕಾಲವೆಂದೂ ವಿವೃತವಾಗಿದೆ. ಅಗ್ನಿಯು ಭೂಮಿಯಲ್ಲಿ ವರ್ಷದ ಕೊನೆಯವರಿಗೂ, ಉತ್ಪನ್ನವಾಗುವ ಮತ್ತು ಶರತ್ಕಾಲದಲ್ಲಿ ಶೋಷಿತವಾಗುವ ಹವಿಸ್ಸಿನರೂಪದಿಂದ ಇರುವ ಅನ್ನವನ್ನು ಉತ್ಪನ್ನವಾಗುವಂತೆ ಮಾಡುವನು ಅಥವಾ ಸ್ವೀಕರಿಸುವನು ಎಂದು ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ **"ವಸಂತೇ ವಸಂತೇ ಜ್ಯೋತಿಷಾ ಯಜೇತ" ಇತಿ ಶ್ರುತೇಃ । ವಸಂತಾದಿಕಾಲೇ ಜ್ಯೋತಿಷ್ಟೋಮಾದಿಷು ಸಂವತ್ಸರಸಂಬಂಧಿನಂ ದೀಪ್ಯಮಾನಂ ಪಾರ್ಥಿವಂ ಹವಿಃ ಭರತ್** ವಸಂತಋತುವಿನಲ್ಲಿ ಜ್ಯೋತಿಷ್ಟೋಮಯಾಗವನ್ನು ಆಚರಿಸತಕ್ಕದ್ದು ಎಂದು ಶ್ರುತಿಯಲ್ಲಿ ಉಕ್ತವಾಗಿರುವುದರಿಂದ ಅಗ್ನಿಯು ಜ್ಯೋತಿಷ್ಟೋಮವೇ ಮೊದಲಾದ ಆಯಾಯ ಯಾಗಗಳನ್ನು ಆಚರಿಸುವದಕ್ಕಾಗಿ ಶಾಸ್ತ್ರದಲ್ಲಿ ಉಕ್ತವಾಗಿರುವ ವಸಂತಋತುವೇ ಮೊದಲಾದ ಆಯಾಯ ಕಾಲಗಳಲ್ಲಿ (ಆಯಾಯ) ಸಂವತ್ಸರವು ಪೂರ್ಣವಾಗುವವರಿಗೂ ಭೂಮಿಯಲ್ಲಿ ಉತ್ಪನ್ನವಾಗುವ ಕಾಂತಿಯಿಂದ ಕೂಡಿದ ಹವಿಸ್ಸುಗಳನ್ನು ಸ್ವೀಕರಿಸುತ್ತಾನೆಂದು ಅರ್ಥವನ್ನು ವರ್ಣಿಸಿದೆ.

ಅಲ್ಲದೇ, ಅಗ್ನಿ, ವಸಂತ, ಹವಿಸ್ಸು ಇವುಗಳ ಸಂಬಂಧವನ್ನು ತೋರಿಸುತ್ತಾ ಶತಪಥ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

**ತದ್ಯದೇತೇಽತ್ರೋಪದಧಾತಿ। ಸಂವತ್ಸರ ಏಷೋಽಗ್ನಿರಿಮ್ಯ ಉ ಲೋಕಾಃ ಸಂವತ್ಸರಸ್ತಸ್ಯಾಯಮೇವ ಲೋಕಃ ಪ್ರಥಮಾ ಚಿತಿರಯಮಸ್ಯ ಲೋಕೋ ವಸಂತ ಋತುಸ್ತದ್ಯದೇತೇಽತ್ರೋಪದಧಾತಿ ಯದೇವಾಸ್ಯೈತೇ ಆತ್ಮನಸ್ತದಸ್ಮಿನ್ನೇತತ್ಪ್ರತಿದಧಾತಿ ತಸ್ಮಾದೇತೇಽತ್ರೋಪದಧಾತಿ ॥**
(ಶ. ಬ್ರಾ ೭-೪-೨-೩೦).

ಎಂಬ ವಾಕ್ಯಗಳಲ್ಲಿ ಮೊದಲು ಅಗ್ನಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳಿ ಅನಂತರ ಪ್ರಥಮಚಿತಿಗೂ ವಸಂತಕ್ಕೂ ತಾದಾತ್ಮ್ಯವನ್ನು ತಿಳಿಸಿದೆ. ಮತ್ತು,

**ಯದ್ವೇವೈತೇಽತ್ರೋಽಪದಧಾತಿ । ಪ್ರಜಾಪತಿರೇಷೋಽಗ್ನಿಃ ಸಂವತ್ಸರ ಉ ಪ್ರಜಾಪತಿಸ್ತಸ್ಯ ಪ್ರತಿಷ್ಠೈವ ಪ್ರಥಮಾ ಚಿತಿಃ ಪ್ರತಿಷ್ಠೋಽಸ್ಯ ವಸಂತ ಋತುಸ್ತದ್ಯದೇತೇಽತ್ರೋಽಪದಧಾತಿ ..........ತೇಽನಂತರ್ಹಿತೇ ವಿಶ್ವಜ್ಯೋತಿಷ ಉಪದಧಾತಿ ಪ್ರಜಾ ವೈ ವಿಶ್ವಜ್ಯೋತಿಃ......... ಋತುಭಿರ್ಹ್ಯೇವ ಗರ್ಭೇ ಸಂತಂ ಸಂಪಶ್ಯನ್ತ್ಯೃತುಭಿರ್ಜಾತಂ ॥**

(ಶ. ಬ್ರಾ. ೭-೪-೨-೩೧).

ಇತ್ಯಾದಿ ವಾಕ್ಯಗಳಿಂದ ಪೃಥಿವಿಗೂ ಸಂವತ್ಸರಕ್ಕೂ ಇರತಕ್ಕ ತಾದಾತ್ಮ್ಯವನ್ನು ತೋರಿಸಿ ಸಂವತ್ಸರ ಗರ್ಭದಲ್ಲಿ ಉತ್ಪನ್ನವಾದ ಹವಿರಾದ್ಯನ್ನವು ಪೃಥಿವೀಗರ್ಭದಲ್ಲಿ ಉತ್ಪನ್ನವಾದಂತೆ ಎಂದು ವಿವರಿಸಿದೆ.

**ಕ್ರಂದದಶ್ವಃ—ಅಶ್ವ ಇವ ಕ್ರಂದತಿ ಹರ್ಷಾತಿಶಯಾತ್ ।** ಈ ವಾಕ್ಯದಲ್ಲಿ ಉಪಮಾವಾಚಕವಾದ ಇವ ಎಂಬ ಪದವು ಪ್ರಯುಕ್ತವಾಗಿಲ್ಲದಿದ್ದರೂ ಅಗ್ನಿಯು ಹವಿಸ್ಸನ್ನು ಸ್ವೀಕರಿಸಿ, ಸಂತೋಷದಿಂದ ಇರುವ ಅಶ್ವವು ಧ್ವನಿ ಮಾಡುವ ಹಾಗೆ, ಧ್ವನಿಯನ್ನು ಮಾಡುವನು ಎಂದು ವರ್ಣಿಸಿದೆ.

**ನಯಮಾನಃ ಗೌಃ ರುವತ್—ನಯನ್ನಿಂದ್ರಾಯ ಹವಿರ್ಭಾರಂ ।** ಇಂದ್ರನಿಗಾಗಿ ಹವಿಸ್ಸುಗಳನ್ನು ರಾಶಿರಾಶಿಯಾಗಿ ಅಗ್ನಿಯು ಒಯ್ಯುವನು ಎಂದು ಅರ್ಥಮಾಡಿದೆ. ಗೌಃ ಎಂಬ ಪದಕ್ಕೆ ಭಾರವನ್ನು ಹೊರುವ ಎತ್ತು ಎಂದು ಅರ್ಥವನ್ನು ಮಾಡಿ, ಹೊರೆಯನ್ನು ಹೊರುವ ಮುದಿಸಿದ ಎತ್ತಿನಂತೆ ಅಗ್ನಿಯು ಶಬ್ದವನ್ನು ಮಾಡುವನು ಎಂದು ಹೋಲಿಸಿದೆ.

**ದೂತೋ ನ ರೋದಸೀ ಅಂತಃ ವಾಕ್ ಚರನ್—**ಅಗ್ನಿಯು ವರ್ತಮಾನವನ್ನು ಅವರವರಿಗೆ ತಲಪಿಸುವ ದೂತನ ಹಾಗೆ ದ್ಯಾವಾಪೃಥಿವಿಗಳ ಮಧ್ಯದಲ್ಲಿ ತಾನೂ ಋತ್ವಿಜರಿಂದ ಸ್ತುತಿಸಲ್ಪಡುವವನಾಗಿ, ಅಥವಾ ದೇವತೆಗಳನ್ನು ತಾನೇ ಸ್ತುತಿಸುವವನಾಗಿ ಸಂಚರಿಸುತ್ತಾನೆ ಎಂದು ವಿವರಿಸಿ, **ಹವಿಸ್ಸ್ವೀಕಾರಾಯ ಪೃಥಿವೀಂ ತತ್ಪ್ರಾಪಣಾಯ ದ್ಯುಲೋಕಂ ಚ ಪರಿಭ್ರಮತಿ** ಹವಿಸ್ಸುಗಳನ್ನು ಸ್ವೀಕರಿಸುವುದಕ್ಕಾಗಿ ಭೂಮಿಗೆ ಅಗ್ನಿಯು ಬರುವನು, ಮತ್ತು ಸ್ವೀಕರಿಸಿದ ಹವಿಸ್ಸುಗಳನ್ನು ದೇವತೆಗಳಿಗಾಗಿ ತಲಪಿಸಲು ಸ್ವರ್ಗಕ್ಕೆ ಹೋಗುವನು ಎಂದು ಅಗ್ನಿಯ ಸಂಚಾರದಲ್ಲಿ ಇರುವ ಕ್ರಮದ ವಿವರಣೆಯನ್ನು ವರ್ಣಿಸಿದೆ. ಅಗ್ನಿಯು ಹೀಗೆ ಸಂಚರಿಸುವ ವಿಷಯದಲ್ಲಿ ವಾರ್ತಾಹಾರಿಯಾದ ದೂತನ ಹೋಲಿಕೆಯನ್ನು ವ್ಯಕ್ತಮಾಡಿ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಕ್ಷತ್**—ನಕ್ಷ ವ್ಯಾಪ್ತೌ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲ ಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸದ್ಮ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಔಣಾದಿಕ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

**ಯನ್**—ಇಣ್ ಗತೌ. ಧಾತು. ಲಟಿಗೆ ಶತ್ರಾದೇಶ. **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಭರತ್**—ಹೃಞ್ ಹರಣೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಹಕಾರಕ್ಕೆ ಭಕಾರಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಧಾತುವಿನ ಸ್ವರ ಉಳಿಯುತ್ತದೆ.

**ಕ್ರಂದತ್**—ಕ್ರದಿ ಆಹ್ವಾನೇ ರೋದನೇ ಚ. ಧಾತು. ಲಟಿಗೆ ಶತ್ರಾದೇಶ. **ಇದಿತೋನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. ಅಥವಾ ಹಿಂದಿನಂತೆ ಛಾಂದಸವಾಗಿ ಲಙ್. ಧಾತುಸ್ವರ ಉಳಿಯುತ್ತದೆ.

**ನಯಮಾನಃ**—ಣೀಞ್ ಪ್ರಾಪಣೇ. ಧಾತು. ಲಟಿಗೆ ಶಾನಚಾದೇಶ. ಶಪ್ ವಿಕರಣ. ಧಾತುವಿಗೆ ಗುಣ ಅಯಾದೇಶ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಲ ಸಾರ್ವಧಾತುಕವು **ತಾಸ್ಯನು-ದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ರುವತ್**—ರು ಶಬ್ದೇ. ಧಾತು. ಲಟಿಗೆ ಶತ್ರಾದೇಶ. **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಙಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

**ಚರತ್**—ಚರ ಗತಿಭಕ್ಷಣಯೋಃ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನಾಂತರೂಪ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ವಾಕ್**—ವಚ ಪರಿಭಾಷಣೇ. ಧಾತು **ಕ್ವಿಬ್ವಚಿಪ್ರಚ್ಛಿ**—(ಉ. ಸೂ. ೨-೨೧೫) ಎಂಬುದರಿಂದ ಕರ್ತರಿಯಲ್ಲಿ ಅಥವಾ ಕರ್ಮಣಿಯಲ್ಲಿ ಕ್ವಿಪ್ ಪ್ರತ್ಯಯ. ದೀರ್ಘ. ಸಂಪ್ರಸಾರಣಾಭಾವ. ಪದಾಂತದಲ್ಲಿ ಕುತ್ವ. ॥ ೩ ॥



॥ ಸಂಹಿತಾಪಾಠಃ ॥

## ತಾ ಕರ್ಮಾಷತರಾಸ್ಮೈ ಪ್ರ ಚ್ಯೌತ್ನಾನಿ ದೇವಯಂತೋ ಭರಂತೇ ।
## ಜುಜೋಷದಿಂದ್ರೋ ದಸ್ಮವರ್ಚಾ ನಾಸತ್ಯೇವ ಸುಗ್ಮ್ಯೋ ರಥೇಷ್ಠಾಃ ॥ ೪ ॥

॥ ಪದಪಾಠಃ ॥

**ತಾ । ಕರ್ಮ । ಅಷ್ಽತರಾ । ಅಸ್ಮೈ । ಪ್ರ । ಚ್ಯೌತ್ನಾನಿ । ದೇವ್ಽಯಂತಃ । ಭರಂತೇ ।**
**ಜುಜೋಷತ್ । ಇಂದ್ರಃ । ದಸ್ಮಽವರ್ಚಾಃ । ನಾಸತ್ಯಾಽಇವ । ಸುಗ್ಮ್ಯಃ । ರಥೇಽಸ್ಥಾಃ ॥ ೪ ॥**

॥ ಸಾಯಣಭಾಷ್ಯಂ ॥

**ತಾ ತಾನ್ಯಪಸತರಾಪಸತರಾಣಿ ವ್ಯಾಪ್ತತರಾಣಿ ವಾ ಹವೀಂಷ್ಯಸ್ಮಾ ಇಂದ್ರಾಯ ತದರ್ಥಂ ಕರ್ಮ। ಕುರ್ಮಃ। ಸಂಪಾದಯಾಮಃ। ಕೃಞಶ್ಛಂದಸೀ ವರ್ತಮಾನಾರ್ಥೇ ಲುಙ್ ಮಂತ್ರೇ ಘಸೇತಿ ಚ್ಲೇರ್ಲುಕ್। ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗುಣಃ ॥ ಚ್ಯೌತ್ನಾನಿ ಚ್ಯಾವಯಿತ್ರೀಣಿ ದೃಢಾನಿ ಸ್ತೋತ್ರಾಣಿ ಕರ್ಮಾಣಿ ಸ್ವಕೀಯಾನಿ ಸಾಮರ್ಥ್ಯಾನಿ ವಾ ದೇವಯಂತೋ ದೇವಾನಾತ್ಮನ ಇಚ್ಛಂತೋ ಯಜಮಾನಾಃ ಪ್ರ ಭರಂತೇ। ಪ್ರಕರ್ಷೇಣ ಸಂಪಾದಯಂತಿ । ತದ್ವದ್ವಯಮಪಿ ಸಂಪಾದಯಾಮ ಇತ್ಯರ್ಥಃ । ದಸ್ಮವರ್ಚಾ ದರ್ಶನೀಯತೇಜಾಃ ಶತ್ರೂಪಕ್ಷಯಣಬಲೋ ವಾ ನಾಸತ್ಯೇವ ನಾಸತ್ಯಾವಿವಾಶ್ವಿನಾವಿವ । ತೌ ಹಿ ದ್ಯಾವಾಪೃಥಿವ್ಯಾತ್ಮಾನೌ । ತಾವಿವ ಸುಗ್ಮ್ಯಃ ಸುಗಮ್ಯಃ ಸುಖೇನ ಗಂತುಂ ಶಕ್ಯೋ ರಥೇಷ್ಠಾ ರಥೇ ವರ್ತಮಾನ ಏವಂಭೂತಃ ಸಞ್ಜುಜೋಷತ್ । ಅಸ್ಮತ್ಕೃತಂ ಸ್ತೋತ್ರಾದಿ ಕರ್ಮ ಸೇವತಾಂ ॥**

॥ ಪ್ರತಿಪದಾರ್ಥ ॥

**ಅಪಸತರಾ**— ಹೆಚ್ಚಾಗಿ ಪ್ರವಹಿಸುವ (ವ್ಯಾಪಿಸುವ) । **ತಾ**—ಆ ಹವಿಸ್ಸುಗಳನ್ನು । **ಅಸ್ಮೈ**– ಈ ಇಂದ್ರನಿಗೋಸ್ಕರ । **ಕರ್ಮ**—ಮಾಡೋಣ (ಸಂಪಾದಿಸೋಣ) । **ದೇವಯಂತಃ**—ದೇವತೆಗಳನ್ನು (ಅವರ ಅನುಗ್ರಹವನ್ನು) ಅಪೇಕ್ಷಿಸುವ ಯಜಮಾನರು । **ಚ್ಯೌತ್ನಾನಿ**—ದೃಢವಾದ ಸ್ತುತಿರೂಪ ಕರ್ಮಗಳನ್ನು । **ಪ್ರ ಭರಂತೇ**—(ಯಜಮಾನರು) ಹೆಚ್ಚಾಗಿ ಸಂಪಾದಿಸುತ್ತಾರೆ । **ದಸ್ಮವರ್ಚಾಃ**— ದರ್ಶನೀಯವಾದ ತೇಜೋವಿಶಿಷ್ಟನೂ ಅಥವಾ ಶತ್ರುನಾಶಕವಾದ ಬಲವಿಶಿಷ್ಟನೂ । **ನಾಸತ್ಯಾ ಇವ**—ಅಶ್ವಿನೀದೇವತೆಗಳಂತೆ । **ಸುಗ್ಮ್ಯಃ ಇಂದ್ರಃ**—ಸುಖಗಮನನೂ ಆದ ಇಂದ್ರನು । **ರಥೇಷ್ಠಾಃ**—ರಥದಲ್ಲಿ ಕುಳಿತವನಾಗಿ । **ಜುಜೋಷತ್**—(ನಮ್ಮ ಸ್ತುತ್ಯಾದಿಗಳನ್ನು) ಸ್ವೀಕರಿಸಲಿ.

॥ ಭಾವಾರ್ಥ ॥

ದೇವತೆಗಳ ಅನುಗ್ರಹಾಕಾಂಕ್ಷಿಗಳಾದ ಯಜಮಾನರು ಸ್ತುತ್ಯಾದಿ ಕರ್ಮಗಳನ್ನು ಹೆಚ್ಚಾಗಿ ಮಾಡುತ್ತಾರೆ. ನಾವೂ ಅದರಂತೆ ಪ್ರವಹಣಶೀಲವಾದ ಹವಿರಾದಿಗಳನ್ನು ಸಂಪಾದಿಸುತ್ತೇವೆ; ದರ್ಶನೀಯನೂ, ಅಶ್ವಿನೀದೇವತೆಗಳಂತೆ ಸುಖಗಮನನೂ, ರಥಸ್ಥನೂ ಆದ ಇಂದ್ರನು ನಮ್ಮ ಸ್ತುತ್ಯಾದಿಗಳನ್ನು ಸ್ವೀಕರಿಸಲಿ.

## English Translation.

We offer to him (Indra), the most pious (oblations): the worshippers of the gods present to him substantial (adorations): may he, of conspicuous lustre, standing in his car, and light-moving like the Ashwins, be gratified (by our worship).

॥ ವಿಶೇಷವಿಷಯಗಳು ॥

**ಅಪಸತರಾ ಅಸ್ಮೈ ಕರ್ಮ—ಅಪಸತರಾಣಿ ವ್ಯಾಪ್ತತರಾಣಿ ವಾ ಹವೀಂಷಿ ಇಂದ್ರಾಯ ಸಮ್ಪಾದಯಾಮಃ** ಯಜ್ಞಮಾಡುವ ಯಜಮಾನರು ಇಂದ್ರನನ್ನು ಉದ್ದೇಶಮಾಡಿದ ಯಾಗದಲ್ಲಿ ಇಂದ್ರನ ತೃಪ್ತಿಸಂಪಾದನೆ

ಗಾಗಿ, ಪ್ರಭೂತವಾಗಿರುವ ಅಥವಾ ಬಹಳಕಾಲದವರಿಗೂ ವ್ಯಾಪಿಸುವ ಹವಿಸ್ಸುಗಳನ್ನು ಸಿದ್ಧಮಾಡುವರೆಂದು ಅರ್ಥವನ್ನು ವಿವರಿಸಿದೆ.

**ಚ್ಯೌತ್ನಾನಿ ದೇವಯಂತಃ ಪ್ರಭರಂತೇ—ದೃಢಾನಿ ಸ್ತೋತ್ರಾಣಿ ಕರ್ಮಾಣಿ ಸಾಮರ್ಥ್ಯಾನಿ ವಾ ದೇವಾನಾತ್ಮನ ಇಚ್ಛಂತೋ ಯಜಮಾನಾಃ ಪ್ರಕರ್ಷೇಣ ಸಮ್ಪಾದಯಂತಿ ।** ಚ್ಯೌತ್ನ ಎಂಬ ಪದವು ಬಲ ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಶತ್ರುಗಳನ್ನು ಅವರವರ ಸ್ಥಾನಗಳಿಂದ ತ್ಯಾಗಮಾಡಿಸುವ (ಓಡಿಸುವ) ಕರ್ಮಗಳಾದರೂ ಆಗಬಹುದು. ಅಥವಾ ಯಜಮಾನರು ಪಠಿಸುವ ಸ್ತೋತ್ರಗಳನ್ನು ಶ್ರವಣಮಾಡಿದ ದೇವತೆಗಳನ್ನು ಯಜಮಾನರ ಸಮೀಪಕ್ಕೆ ಕರೆದು ತರುವ ಕಾರಣ ಚ್ಯೌತ್ನಾನಿ ಎಂಬ ಪದಕ್ಕೆ ಕರ್ಮಗಳು ಅಥವಾ ಸ್ತೋತ್ರಗಳೆಂದು ಎರಡು ವಿಧವಾದ ಅರ್ಥವನ್ನೂ ಸಾಯಣರು ವಿವರಿಸಿದ್ದಾರೆ. ದೇವತೆಗಳನ್ನು ಉದ್ದೇಶಮಾಡಿ ಯಾಗಗಳಲ್ಲಿ ಹವಿಸ್ಸನ್ನು ಅರ್ಪಿಸಿ ದೇವಭಾವವನ್ನು ಹೊಂದಲು ಇಚ್ಛಿಸುವ ಯಜಮಾನರು ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಕರ್ಮಗಳನ್ನು ಆಚರಿಸಿ, ಸ್ತುತಿಗಳಿಂದ ದೇವತೆಗಳನ್ನು ಸಂತೋಷಪಡಿಸುತ್ತಾರೆಂದು ಅರ್ಥವನ್ನು ವಿವರಿಸಿದೆ.

ನಿರುಕ್ತಕಾರರು **ಚ್ಯೌತ್ನ** ಪದವನ್ನು **ಓಜಃ, ಪಾಜಃ** ಇತ್ಯಾದಿ ಬಲನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೯)

**ತವ ಚ್ಯೌತ್ನಾನಿ ವಜ್ರಹಸ್ತ ತಾನಿ ನವ ಯತ್ಪುರೋ ನವತಿಂ ಚ ಸದ್ಯಃ ।**

(ಋ. ಸಂ. ೭-೧೯-೫).

ಇತ್ಯಾದಿ ಋಕ್ಕುಗಳಲ್ಲಿ **ಬಲ** ಪರ್ಯಾಯವಾಗಿ ಈ ಪದವನ್ನು ಉಪಯೋಗಿಸಿದೆ. ಮತ್ತು,

**ತಮು ಚ್ಯೌತ್ನೈರಾರ್ಯಂತಿ ತಂ ಕೃತೇಭಿಶ್ಚರ್ಷಣೀಯಃ । ಏಷ ಇಂದ್ರೋ ವರಿವಸ್ಕೃತ್ ।**

(ಋ. ಸಂ. ೮-೧೬-೬)

ಇತ್ಯಾದಿ ಸ್ಥಳಗಳಲ್ಲಿ ಬಲಯುತವಾದ ಸ್ತುತಿಯೆಂದೂ,

**ಸ ಯೋ ನ ಮುಹೇ ನ ಮಿಥೂ ಜನೋ ಭೂತ್ಸುಮಂತು ನಾಮಾ ಚುಮುರಿಂ ಧುನಿಂ ಚ ।**
**ವೃಣಕ್ಪಿಪ್ರುಂ ಶಂಬರಂ ಶುಷ್ಣಮಿಂದ್ರಃ ಪುರಾಂ ಚ್ಯೌತ್ನಾಯ ಶಯಥಾಯ ನೂ ಚಿತ್ ॥**

(ಋ. ಸಂ. ೬-೧೮-೮)

ಇತ್ಯಾದಿ ಋಕ್ಕುಗಳಲ್ಲಿ ಬಲಯುತವಾದ ನಾಶಸಾಧನವೆಂದು ಅರ್ಥಮಾಡಿ ಆಯಾ ಸಂದರ್ಭಗಳಿಗನುಗುಣವಾಗಿ ಈ ಪದಕ್ಕೆ ಅರ್ಥಮಾಡಬೇಕೆಂದು ತಿಳಿಸಿದೆ. ಅಲ್ಲಾಡಿಸುವ ಅಥವಾ ಕಂಪನವಾಗುವಂತೆ ಮಾಡುವ ಬಲವುಳ್ಳ ಎಂಬರ್ಥವುಳ್ಳ **ಚ್ಯು** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ.

**ದಸ್ಮವರ್ಚಾಃ—ದರ್ಶನೀಯತೇಜಾಃ, ಶತ್ರೂಪಕ್ಷಯಣಬಲೋ ವಾ।** ವರ್ಚಸ್ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಸಾಯಣರು ತೇಜಸ್ಸು ಅಥವಾ ಬಲ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದು ವಿವರಿಸಿದ್ದಾರೆ. ಇಂದ್ರನು ಸರ್ವರಿಂದಲೂ ದರ್ಶನಮಾಡಲರ್ಹವಾದ ತೇಜಸ್ಸುಳ್ಳವನೆಂದೂ, ಶತ್ರುಗಳನ್ನು ನಾಶಮಾಡುವ ಬಲವುಳ್ಳವನಾಗಿರುವನೆಂದೂ ಅರ್ಥವನ್ನು ವರ್ಣಿಸಿದೆ.

**ದಸ್ಮ** ಶಬ್ದಕ್ಕೆ ಎರಡು ವಿಧವಾದ ಅರ್ಥವಾಗುತ್ತದೆ. ಶತ್ರುನಾಶಕನೆಂದು ಒಂದರ್ಥವೂ, ಸುಂದರರೂಪವುಳ್ಳವನೆಂದು ಇನ್ನೊಂದರ್ಥವೂ ಆಗುತ್ತದೆ. **ದಸಿ ದರ್ಶನದಂಶನಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾದರೆ, **ದರ್ಶನೀಯಃ,** ರಮ್ಯನಾದ ಎಂದೂ, **ದಸು-ಉಪಕ್ಷಯೇ** ಎಂಬ ಧಾತುವಿನಿಂದ ನಿಷ್ಪನ್ನವಾದರೆ ಶತ್ರುನಾಶಕನೆಂದೂ

ಅರ್ಥವಾಗುತ್ತದೆ. ಇಂದ್ರಾದಿ ದೇವತೆಗಳಲ್ಲಿ ಈ ಎರಡು ವಿಧವಾದ ಶಕ್ತಿಗಳೂ ಇರುವುದರಿಂದ **ದಸ್ಮ** ಶಬ್ದಕ್ಕೆ ಈ ಎರಡರ್ಥದಲ್ಲಿ ಯಾವುದನ್ನು ಬೇಕಾದರೂ ಹೇಳಬಹುದೆಂಬುದನ್ನು ತೋರಿಸಿದ್ದಾರೆ. ಉದಾಹರಣೆಗೆ—

**ತ್ವಂ ಭಗೋ ನ ಆ ಹಿ ರತ್ನಮಿಷೇ ಪರಿಜ್ಮೇವ ಕ್ಷಯಸಿ ದಸ್ಮವರ್ಚಾಃ ।**

(ಋ. ಸಂ. ೬-೧೩-೨)

**ಪೂಷಾ ಸುಬಂಧುರ್ದಿವ ಆ ಪೃಥಿವ್ಯಾ ಇಳಸ್ಪತಿರ್ಮಘವಾ ದಸ್ಮವರ್ಚಾಃ ।**

(ಋ. ಸಂ. ೬-೫೮-೪).

ಇತ್ಯಾದಿ ಋಕ್ಕುಗಳಲ್ಲಿ ಮೊದಲನೆಯದಾಗಿ ಶತ್ರೂಪಕ್ಷಯಣಬಲಃ—ಶತ್ರುಗಳನ್ನು ನಾಶಮಾಡತಕ್ಕ ಶಕ್ತಿಯುಳ್ಳವನು ಎಂದೂ, ಎರಡನೆಯದಾಗಿ, **ವರ್ಚ ಇತಿ ರೂಪನಾಮ । ದಸ್ಮಂ ದರ್ಶನೀಯಂ ವರ್ಚಃ ಯಸ್ಯ ತಾದೃಶಃ** ಮನೋಹರವಾದ ರೂಪವುಳ್ಳವನು ಎಂದೂ ಅರ್ಥವಾಗುತ್ತದೆಂದು ಭಾಷ್ಯಕಾರರು ತೋರಿಸಿದ್ದಾರೆ. **ದಸ್ಮವರ್ಚಾಃ** ಎಂಬ ಪದವು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಇಂದ್ರಾದಿಗಳಿಗೆ ವಿಶೇಷಣವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಇಂದ್ರನಿಗೆ ವಿಶೇಷಣವಾಗಿ ಅವನ ಶತ್ರುನಾಶಕ ಶಕ್ತಿಯನ್ನೂ, ಅವನ ರಮಣೀಯವಾದ ರೂಪವನ್ನೂ ವರ್ಣಿಸುತ್ತದೆ.

**ಸುಗ್ಮ್ಯಃ**—ಸುಖವಾಗಿ ಯಜಮಾನರಿಂದ ಹೊಂದಲ್ಪಡತಕ್ಕವನಾಗಿಯೂ, **ರಥೇಷ್ಠಃ** ರಥದಲ್ಲಿಯೇ ಸಂಚರಿಸುವವನೆಂದೂ ಅರ್ಥವನ್ನು ವಿವರಿಸಿದ್ದಾರೆ.

**ನಾಸತ್ಯೇವ—ನಾಸತ್ಯಾವಿವ ಅಶ್ವಿನಾವಿವ ತೌ ಹಿ ದ್ಯಾವಾಪೃಥಿವ್ಯಾತ್ಮಾನೌ**—ನಿರುಕ್ತಕಾರರು—

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**

**ತಾಁ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**

(ಋ. ಸಂ. ೭-೩೯-೪)

ಈ ಋಕ್ಕನ್ನು ಉದಹರಿಸಿ, **ನಾಸತ್ಯೌ ಸತ್ಯಾವೇವ ನಾಸತ್ಯಾವಿತ್ಯೌರ್ಣನಾಭಃ, ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ, ನಾಸಿಕಾಪ್ರಭವೌ ಬಭೂವತುರಿತಿ ವಾ,** ಎಂದು ನಾಸತ್ಯ ಶಬ್ದಾರ್ಥದ ವಿಷಯದಲ್ಲಿ, **ನಾಸತ್ಯೌ ಅಶ್ವಿನೌ** ಎಂದು ತಮ್ಮ ಅಭಿಪ್ರಾಯವನ್ನು ವಿವರಿಸಿರುವರು. ಅಶ್ವಿನೀದೇವತೆಗಳು—ಯಾವಾಗಲೂ ಸತ್ಯವನ್ನೇ ನುಡಿಯುವ ಕಾರಣ ನಾಸತ್ಯರೆಂದು ಪ್ರಸಿದ್ಧರಾಗಿರುವರೆಂಬ ಔರ್ಣವಾಭರೆಂಬ ಆಚಾರ್ಯರ ಮತವನ್ನು ವರ್ಣಿಸಿದ್ದಾರೆ. ಆಗ್ರಾಯಣರೆಂಬ ಆಚಾರ್ಯರು **ಸತ್ಯಾವೇವ ನಾಸತ್ಯೌ** ಎಂಬ ನಾಸತ್ಯ ಶಬ್ದದ ನಿರ್ವಚನವನ್ನೇ ಅಂಗೀಕರಿಸಿ, ಸತ್ಯ ಶಬ್ದಕ್ಕೆ ಉದಕ ಅಥವಾ ಯಜ್ಞ ಎಂಬ ಅರ್ಥವನ್ನು ಹೇಳಿ, ಅಶ್ವಿನೀದೇವತೆಗಳು ಯಜ್ಞವನ್ನು ನಿರ್ವಹಿಸುವವರು ಎಂಬ ಅರ್ಥವನ್ನು ವಿವರಿಸಿರುವರು. ಬೃಹದ್ದೇವತೆಯಲ್ಲಿ ಉಕ್ತವಾಗಿರುವಂತೆ, ಅಶ್ವರೂಪದಿಂದ ಇರುವ ಸಂಜ್ಞಾದೇವಿಯನ್ನು ಗುರ್ತುಹಚ್ಚುವುದಕ್ಕಾಗಿ ಸೂರ್ಯನು ಅಶ್ವರೂಪವನ್ನು ಹೊಂದಿ, ಸಂಜ್ಞಾದೇವಿಯನ್ನು ನೋಡಿದಾಗ ಅವಳ ನಾಸಿಕಾಪ್ರದೇಶದಿಂದ ಉತ್ಪನ್ನರಾದವರು ಅಶ್ವಿನೀದೇವತೆಗಳೆಂದು ಇನ್ನೊಂದು ವಿಧವಾದ ವಿವರಣೆಯನ್ನೂ ಪ್ರದರ್ಶಿಸಿದ್ದಾರೆ.

ಸಾಯಣರು—ಇಲ್ಲಿ ನಾಸತ್ಯಾವೇವ ಎಂಬ ಪದಕ್ಕೆ ನಾಸತ್ಯಾವಿವ ಅಶ್ವಿನೀದೇವತೆಗಳಹಾಗೆ, ಎಂದು ಉಪಮಾರ್ಥವನ್ನು ಹೇಳಿದ್ದಾರೆ. ಅಶ್ವಿನೀದೇವತೆಗಳು **ತೌ ಹಿ ದ್ಯಾವಾಪೃಥಿವ್ಯಾತ್ಮಾನೌ,** ದ್ಯಾವಾ ಭೂಮಿಗಳ ರೂಪ

ದಿಂದ ಇರುವರು ಎಂದು ವಿವರಿಸಿ, ಇವರು ಸುಖವಾಗಿ ಹೊಂದಲರ್ಹರೆಂದೂ, ರಥದಿಂದ ಸಂಚರಿಸತಕ್ಕವರೆಂದೂ, ಇಂದ್ರನೂ ಇವರಹಾಗೆ ಸುಗಮ್ಯನೂ ರಥದಲ್ಲಿರುವವನೂ ಆಗಿರುವನೆಂದು ಅರ್ಥವನ್ನು ವಿವರಿಸಿ, ಇವನು, **ಅಸ್ಮತ್ಕೃತಂ ಸ್ತೋತ್ರಾದಿಕರ್ಮ ಸೇವತಾಂ** ಯಜಮಾನರಾದ ನಾವುಗಳು ಆಚರಿಸುವ ಸ್ತೋತ್ರವೇ ಮೊದಲಾದ ಯಜ್ಞಕರ್ಮಗಳಲ್ಲಿ ಸಂತೋಷದಿಂದ ಇರಲಿ ಎಂಬ ಯಜಮಾನರ ಪ್ರಾರ್ಥನೆಯನ್ನು ವರ್ಣಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ತಾ**—ತಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಕರ್ಮ**—ಡುಕೃಞ್ ಕರಣೇ. ಧಾತು. **ಛಂದಸಿಲುಙ್ ಲಙ್ ಲಿಟಃ** (ಪಾ. ಸೂ ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ಮಂತ್ರೇಘಸಹ್ವರ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ ಙಿತ್ವ ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚ್ಯೌತ್ನಾನಿ**—ಚ್ಯುಙ್ ಚ್ಯುತೌ. ಧಾತು. **ಜನಿದಾಚ್ಯು**—(ಉ. ಸೂ. ೪-೫೪೪) ಎಂಬುದರಿಂದ ತ್ನಣ್ ಪ್ರತ್ಯಯ ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಉಕಾರಕ್ಕೆ ವೃದ್ಧಿ. ಪ್ರತ್ಯಯ ಸ್ವರದಿಂದ ಅಂತೋದಾತ್ತ ವಾಗುತ್ತದೆ.

**ದೇವಯಂತಃ**—ದೇವಾನ್ ಆತ್ಮನಃ ಇಚ್ಛಂತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಇದಕ್ಕೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಪ್ರಥಮಾ ಬಹುವಚನಾಂತರೂಪ.

**ಭರಂತೇ**—ಭೃಞ್ ಭರಣೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಜುಜೋಷತ್**—ಜುಷೀ ಪ್ರೀತಿಸೇವನಯೋಃ ಧಾತು. ಲೋಟಿನಲ್ಲಿ ವ್ಯತ್ಯಯದಿಂದ ಶಪ್. ಛಾಂದಸವಾಗಿ ಧಾತುವಿಗೆ ದ್ವಿತ್ವ. ಅಥವಾ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಆಮೇಲೆ ವ್ಯತ್ಯಯದಿಂದ ಶಪ್. **ಬಹುಲಂ ಛಂದಸೀತಿ ವಕ್ತವ್ಯಮ್** ಎಂಬ ವಚನದಿಂದ **ನಾಭ್ಯಸ್ತಸ್ಯಾಚಿಪಿತಿ ಸಾರ್ವಧಾತುಕೇ** (ಪಾ. ಸೂ. ೭-೩-೮೭) ಎಂಬುದರಿಂದ ಬರಬೇಕಾದ ಗುಣ ನಿಷೇಧವು ಇಲ್ಲಿ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ದಸ್ಮವರ್ಚಾಃ**—ದಸ್ಮ ವರ್ಚಃ ಯಸ್ಯ ಸಃ ದಸ್ಮವರ್ಚಾಃ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುಗ್ಮ್ಯಃ**—ಸುಷ್ಠು ಗಂತವ್ಯಃ ಸುಗ್ಮ್ಯಃ ಗಮ್ಲೃ ಗತೌ ಧಾತು. **ಘಞರ್ಥೇ ಕ ವಿಧಾನಮ್** ಎಂಬ ವಚನದಿಂದ ಕ ಪ್ರತ್ಯಯ. ಕಿತ್ತಾದುದುರಿಂದ **ಗಮಹನಜನ**—(ಪಾ. ಸೂ. ೬-೪-೯೮) ಎಂಬುದರಿಂದ ಉಪಧಾ

ಲೋಪ. ಸುಗ್ಮೇ ಭವಂ ಸುಗ್ಮ್ಯಮ್. **ಭವೇ ಛಂದಸಿ** (ಪಾ ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ರಥೇಸ್ಥಾಃ**—ರಥೇ ತಿಷ್ಠತೀತಿ ರಥೇಸ್ಥಾಃ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. **ತತ್ಪುರುಷೇ ಕೃತಿ ಬಹುಲಮ್** (ಪಾ. ಸೂ. ೬-೩-೧೪) ಎಂಬುದರಿಂದ ಸಪ್ತಮಿಗೆ ಅಲುಕ್ (ಲೋಪ ಬರುವುದಿಲ್ಲ). ॥ ೪ ॥

॥ ಸಂಹಿತಾಪಾಠಃ ॥

ತಮು ಷ್ಟುಹೀಂದ್ರಂ ಯೋ ಹ ಸತ್ವಾ ಯಃ ಶೂರೋ ಮಘವಾ ಯೋ ರಥೇಷ್ಠಾಃ।
ಪ್ರತೀಚಶ್ಚಿದ್ಯೋಧೀಯಾನ್ವೃಷಣ್ವಾನ್ವವವ್ರುಷಶ್ಚಿತ್ತಮಸೋ ವಿಹಂತಾ ॥ ೫ ॥

॥ ಪದಪಾಠಃ ॥

ತಂ । ಊಂ ಇತಿ ಸ್ತುಹಿ । ಇಂದ್ರಂ । ಯಃ । ಹ । ಸತ್ವಾ । ಯಃ । ಶೂರಃ । ಮಘಽವಾ । ಯಃ । ರಥೇಽಸ್ಥಾಃ ।
ಪ್ರತೀಚಃ । ಚಿತ್ । ಯೋಧೀಯಾನ್ । ವೃಷಣ್ಽವಾನ್ । ವವವ್ರುಷಃ। ಚಿತ್ । ತಮಸಃ । ವಿಽಹಂತಾ ॥

॥ ಸಾಯಣಭಾಷ್ಯಂ ॥

**ತಮು ತಮೇವೇಂದ್ರಂ ಸ್ತುಹಿ। ಹೇ ಹೋತಃ ಸ್ತುತಿಂ ಕುರು । ಕಿಮಸ್ಯಾಧಿಕ್ಯಮಿತಿ ಉಚ್ಯತೇ । ಯೋ ಹ ಯಃ ಖಲು ಸತ್ವಾತಿಪ್ರಭೂತಬಲಃ । ಯದ್ವಾ । ಸತ್ವಾ ಸಾದಕಃ ಶತ್ರೂಣಾಂ । ಯಶ್ಚ ಶೂರಃ ಶೌರ್ಯೋಽಪೇತೋ ಮಘವಾ ಬಲವಾನನ್ನವಾನ್ವಾ । ಯಶ್ಚ ರಥೇಷ್ಠಾ ರಥೇ ವರ್ತಮಾನಃ । ಕಿಂಚ ಪ್ರತೀಚಶ್ಚಿತ್ ಪ್ರತ್ಯಭಿಮುಖಂ ಯೋದ್ಧುರಪಿ ಯೋಧೀಯಾನ್ ಯೋದ್ಧೃತಮಃ ॥ ಪ್ರತಿಪೂರ್ವಾದಂಚತೇಃ ಕ್ವಿನಂತಾಲ್ಲುಪ್ತನಕಾರಾಚ್ಛಸಿ ಅಚ ಇತ್ಯಕಾರಲೋಪೇ ಚಾವಿತಿ ದೀರ್ಘಃ । ಅಂಚೇಶ್ಛಂದಸ್ಯಸರ್ವನಾಮಸ್ಥಾನಮಿತಿ ವಿಭಕ್ತಿರುದಾತ್ತಾ ॥ ವೃಷಣ್ವಾನ್ । ವೃಷಾಣೋ ವರ್ಷಿತಾರೋ ವಜ್ರಾದಯಃ । ತದ್ವಾನ್ । ವೃಷಾ ತೇ ವಜ್ರ ಉತ ತೇ ವೃಷಾ ರಥಃ । ಋ. ೨-೧೬-೬ । ಇತಿ ಹಿ ನಿಗಮಃ । ತಥಾ ವವವ್ರುಷಶ್ಚಿತ್ತಮಸ ಆವರಕಸ್ಯಾಪಿ ತಮಸೋ ಮೇಘಾದೇರ್ವಿಹಂತಾ ವಿಶೇಷೇಣ ಘಾತಕಃ । ಯಸ್ಮಾದೇವಂ ಮಹಾನುಭಾವಃ ತಸ್ಮಾತ್ಸ್ತುಹಿ ॥**

॥ ಪ್ರತಿಪದಾರ್ಥ ॥

**ಯಃ ಹ**—ಯಾವ ಇಂದ್ರನೇ । **ಸತ್ವಾ**—ಅತಿ ಪ್ರಭೂತ ಬಲವುಳ್ಳವನೋ ಅಥವಾ ಶತ್ರುನಾಶಕನೋ । **ಯಃ**—ಯಾವನು । **ಶೂರಃ**—ಶೂರನೂ ಮತ್ತು । **ಮಘವಾ**—ಬಲ ಅಥವಾ ಅನ್ನ ವಿಶಿಷ್ಟನೋ । **ಯಃ**—

ಯಾವನು | **ರಥೇಷ್ಠಾಃ**—ರಥದಲ್ಲಿರುವವನೋ | **ಪ್ರತೀಚಃ ಚಿತ್**—ಎದುರಿಸಿ ಯುದ್ಧಮಾಡುವವರಲ್ಲಿಯೂ | **ಯೋಧಿಯಾನ್**—ಉತ್ತಮ ಯೋದ್ಧೃವೋ | **ವೃಷಣ್ವಾನ್** ವಜ್ರಾದ್ಯಾಯುಧಧಾರಿಯೋ, (ಮತ್ತು) | (**ಯಃ**—ಯಾವನು | **ವವವ್ರುಷಃ ಚಿತ್ ತಮಸಃ**—ಎಲ್ಲವನ್ನೂ ಆವರಿಸುವ ಮೇಘವನ್ನು | **ವಿಹಂತಾ**—ವಧಿಸುವವನೋ (ಭೇದಿಸುವವನೋ) | **ತಂ ಉ**—ಅದೇ | **ಇಂದ್ರಂ**—ಇಂದ್ರನನ್ನು | **ಸ್ತುಹಿ**—ಸ್ತುತಿಸು |

॥ ಭಾವಾರ್ಥ ॥

(ಎಲೈ ಹೋತೃವೇ,) ಮಹಾಪರಾಕ್ರಮಿಯೂ, ಶೂರನೂ, ಧನವಿಶಿಷ್ಟನೂ, ರಥಸ್ಥನೂ, ಶತ್ರುಗಳನ್ನು ಎದುರಿಸಿ ಯುದ್ಧಮಾಡುವವನೂ, ವಜ್ರಾಯುಧಧಾರಿಯೂ, ಸಮಸ್ತವನ್ನೂ ಆವರಿಸುವ ತಮೋರೂಪವಾದ ಮೇಘಾದಿನಾಶಕನೂ ಆದ ಇಂದ್ರನನ್ನು ಸ್ತುತಿಸು.

## English Translation·

Glorify that Indra who is mighty, who is a hero, possessing abundant wealth, standing in his car, a valiant combatant against adversaries, the wielder of the thunderbolt, the disperser of all-enveloping gloom.

॥ ವಿಶೇಷವಿಷಯಗಳು ॥

**ತಮು ಷ್ಟುಹಿ**—ಈ ವಾಕ್ಯದಿಂದ ಹೋತೃವೆಂಬ ಋತ್ವಿಜರನ್ನು ಸಂಬೋಧಿಸಿ ಇಂದ್ರನನ್ನು ಸ್ತುತಿಸು ಎಂಬ ಮಂತ್ರದ್ರಷ್ಟೃವಾದ ಋಷಿಯ ಆದೇಶವು ಇಲ್ಲಿ ವರ್ಣಿತವಾಗಿದೆ.

**ಯೋ ಹ ಸತ್ವಾ—ಅತಿಪ್ರಭೂತಬಲಃ, ಯದ್ವಾ ಸಾದಕಃ ಶತ್ರೂಣಾಂ** ಇಂದ್ರನು ಪ್ರಭೂತವಾದ ಬಲವುಳ್ಳವನು ಅಥವಾ ಶತೃಗಳನ್ನು ನಾಶಪಡಿಸುವವನು ಎಂದು ಅರ್ಥವನ್ನು ವಿವರಿಸಿದೆ

**ಮಘವಾ—ಬಲವಾನನ್ನವಾನ್ ವಾ** | ನಿರುಕ್ತಕಾರರು ಮಘ ಶಬ್ದವನ್ನು ಧನನಾಮಗಳಲ್ಲಿ (ನಿ. ೩–೯) ಪಾಠಮಾಡಿ, **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ** ದಾನಮಾಡು ಎಂಬ ಅರ್ಥವನ್ನು ಬೋಧಿಸುವ ಮಂಹಧಾತುವಿನಿಂದ ನಿಷ್ಪನ್ನವಾದ ಮಘ ಶಬ್ದವು ಧನವೆಂಬ ಅರ್ಥವನ್ನು ಬೋಧಿಸುವುದು ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ· ಸಾಯಣರು ಬಲ ಅಥವಾ ಅನ್ನವೆಂಬ ಅರ್ಥಗಳಲ್ಲಿ ಮಘ ಶಬ್ದದ ಪ್ರಯೋಗವನ್ನು ಅಂಗೀಕರಿಸಿ ಇಂದ್ರನು ಬಲವುಳ್ಳವನು ಅಥವಾ ಅನ್ನವುಳ್ಳವನು ಎಂಬ ಅರ್ಥವನ್ನು ವಿವರಿಸಿದ್ದಾರೆ.

ಇಂದ್ರನು **ಪ್ರತೀಚಶ್ಚಿತ್ ಯೋಧೀಯಾನ್** ಯುದ್ಧವನ್ನು ಆಚರಿಸುವ ಶತ್ರುವಿನ ಅಭಿಮುಖವಾಗಿ ಯುದ್ಧಮಾಡುವ ಶೂರರುಗಳಲ್ಲಿ ಶ್ರೇಷ್ಠನಾದವನು ಎಂದೂ, **ವೃಷಣ್ವಾನ್**—ವೃಷ್ಟಿಯನ್ನು ಸುರಿಸುವುದರಲ್ಲಿ ಸಹಾಯಕವಾದ ವಜ್ರವೇ ಮೊದಲಾದ ಆಯುಧಗಳುಳ್ಳವನೂ ಎಂದೂ, ಅರ್ಥವನ್ನು ವಿವರಿಸಿದೆ· ಸಾಯಣರು ವೃಷಣ್ವಾನ್ ಎಂಬ ಪದಕ್ಕೆ ವರ್ಷಿತಾರಃ ಎಂಬ ಅರ್ಥವನ್ನು ವಿವರಿಸಿ, ವೃಷ್ಟ್ಯುತ್ಪಾದಕವಾದ ವಜ್ರಾದಿಗಳೆಂದು ಅರ್ಥವನ್ನು ಹೇಳಿ, ಇದೇ ಅರ್ಥವನ್ನು ಬೋಧಿಸುವುದರಲ್ಲಿ—

**ವೃಷಾ ತೇ ವಜ್ರ ಉತ ತೇ ವೃಷಾ ರಥೋ ವೃಷಣಾ ಹರೀ ವೃಷಭಾಣ್ಯಾಯುಧಾ ।**
**ವೃಷ್ಣೋ ಮದಸ್ಯ ವೃಷಭ ತ್ವಮೀಶಿಷ ಇಂದ್ರ ಸೋಮಸ್ಯ ವೃಷಭಸ್ಯ ತೃಪ್ಣುಹಿ ॥**
(ಋ. ಸಂ. ೨-೧೬-೬)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಮತ್ತು ಇಂದ್ರನು **ವವವ್ರುಷಶ್ಚಿತ್ತಮಸಃ ವಿಹಂತಾ** ಆವರಕವಾಗಿರುವ ಕತ್ತಲೆಯನ್ನು ನಾಶಪಡಿಸುವವನು ಎಂದು ಇಂದ್ರನ ಪ್ರಭೂತವಾದ ಮಹಿಮೆಯನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ತುಹಿ**—ಷ್ಟುಞ್ ಸ್ತುತೌ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಸತ್ವಾ**—ಷದ್ಲೃ ವಿಶರಣಗತ್ಯವಸಾದನೇಷು. ಧಾತು. **ಪ್ರಕೃರ ಸದ್ಯೋಸ್ತುಟ್ ಚ** (ಉ. ಸೂ. ೪-೫೨೬) ಎಂಬುದರಿಂದ ವಿಧಿಸಲ್ಪಡುವ ಕ್ವನಿ ಪ್ರತ್ಯಯವು ಬಹುಲವಚನದಿಂದ ಕೇವಲವಾದ ಈ ಧಾತುವಿಗೂ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪ್ರತೀಚಃ**—ಪ್ರತಿ ಎಂಬುದು ಉಪಸರ್ಗ ಅಂಚು ಗತಿಪೂಜನಯೋಃ ಧಾತು. **ಋತ್ವಿಕ್ ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಅನಿದಿತಾಂಹಲಉಪ**—(ಪಾ. ಸೂ. ೬-೪-೨೪) ಎಂಬುದರಿಂದ ಉಪಧಾ ನಕಾರಲೋಪ. ಶಸ್ ಪರವಾದಾಗ ಭಸಂಜ್ಞಾ ಇರುವುದರಿಂದ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತವಾದ ನಕಾರಾಕಾರವುಳ್ಳ ಅಂಚುಧಾತು ಪರವಾದುದರಿಂದ **ಚೌ** (ಪಾ. ಸೂ. ೬-೩-೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. **ಅಂಚೇಶ್ಛಂದಸ್ಯುಪಸಂಖ್ಯಾನಮ್** ಎಂಬ ವಚನದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯೋಧೀಯಾನ್**—ಯೋಧಿತೃ ಶಬ್ದಕ್ಕೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ. **ಪ್ರಕೃತ್ಯೈಕಾಚ್** ಸೂತ್ರದಿಂದ ಪ್ರಕೃತಿ ಭಾವ ಬರುವುದರಿಂದ ಟಿ ಲೋಪ ಬರುವುದಿಲ್ಲ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವವವ್ರುಷಃ**—ವೃಞ್ ಆವರಣೇ ಧಾತು. ಚುರಾದಿ. ಲಿಟಿಗೆ ಕ್ವಸುರಾದೇಶ. ಪ್ರತ್ಯಯ ನಿಮಿತ್ತವಾಗಿ ದ್ವಿತ್ವಾದಿ. ಛಾಂದಸವಾಗಿ ವಕಾರ ಅಧಿಕವಾಗಿ ಬರುತ್ತದೆ. ಷಷ್ಠಿಯಲ್ಲಿ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬) ಎಂಬುದರಿಂದ ಷತ್ವ. ಕ್ವಸು ಪ್ರತ್ಯಯಸ್ವರ ಉಳಿಯುತ್ತದೆ.

**ವಿಹಂತಾ**—ಹನ ಹಿಂಸಾಗತ್ಯೋಃ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಪ್ರ ಯದಿತ್ಥಾ ಮಹಿನಾ ನೃಭ್ಯೋ ಅಸ್ತ್ಯರಂ ರೋದಸೀ ಕಕ್ಷ್ಯೇ೩ನಾಸ್ಮೈ ।
ಸಂ ವಿವ್ಯ ಇಂದ್ರೋ ವೃಜನಂ ನ ಭೂಮಾ ಭರ್ತಿ ಸ್ವಧಾವಾँ ಓಪಶಮಿವ ದ್ಯಾಂ ॥

॥ ಪದಪಾಠಃ ॥

ಪ್ರ । ಯತ್ । ಇತ್ಥಾ । ಮಹಿನಾ । ನೃಽಭ್ಯಃ । ಅಸ್ತಿ । ಅರಂ । ರೋದಸೀ ಇತಿ । ಕಕ್ಷ್ಯೇ೩ ಇತಿ । ನ । ಅಸ್ಮೈ ।
ಸಂ । ವಿವ್ಯೇ । ಇಂದ್ರಃ । ವೃಜನಂ । ನ । ಭೂಮ । ಭರ್ತಿ । ಸ್ವಧಾಽವಾನ್ । ಓಪಶಂಽಇವ । ದ್ಯಾಂ ॥೬॥

॥ ಸಾಯಣಭಾಷ್ಯಂ ॥

ಯದ್ಯ ಇಂದ್ರೋ ಮಹಿನಾ ಮಹತ್ತ್ವೇನ ಸ್ವೈಶ್ವರ್ಯೇಣ ನೃಭ್ಯೋ ನೇತೃಭ್ಯಃ ಕರ್ಮನಿರ್ವಾಹಕೇಭ್ಯೋ ಯಜಮಾನೇಭ್ಯಃ ಪ್ರಾಸ್ತಿ ಪ್ರಭವತಿ ಈಷ್ಟೇ ಸ್ವರ್ಗಾದಿಪ್ರದಾನೇ ರಕ್ಷಿತುಂ ಅಸ್ಮೈ ರಕ್ಷಕಾಯೇಂದ್ರಾಯ ರೋದಸೀ ದ್ಯಾವಾಪೃಥಿವ್ಯೌ ಕಕ್ಷ್ಯೇ ಕಕ್ಷ್ಯಾಯತೇ ಸತೀ ಸಂಚಾರಾಯ ನಾರಂ ನಾಲಂ । ನ ಪರ್ಯಾಪ್ತೇ । ಜಗತೋಽಧೀಶಸ್ಯೇಂದ್ರಸ್ಯ ಸಂಚಾರಾಯಾಲ್ಪತ್ವಾದ್ದ್ಯಾವಾಪೃಥಿವ್ಯೌ ನ ಪರ್ಯಾಪ್ತೇ ಇತ್ಯರ್ಥಃ । ಸೃಷ್ಟ್ಯಾದಪಿ ಸ್ರಷ್ಟುರ್ಮಹಿಮ್ನೋಽಧಿಕತ್ವಾದಿತಿ ಭಾವಃ । ಅಯಮಿಂದ್ರೋ ವೃಜನಂ ನ ಭೂಮ ಭೂಮಿಂ ಭೂತಾನಿ ವಾ ವೃಜನಂ ನ ವೃಜನಮಿವ ॥ ವೃಜೇಃ ಕರ್ತನಾರ್ಥಸ್ಯೇದಂ ರೂಪಂ ॥ ತದಿವ ತದ್ಯಥಾವೃಣೋತಿ ತಥಾಯಮಪಿ ಸ್ವತೇಜಸಾ ಸಂ ವಿವ್ಯೇ । ಸಮ್ಯಗಾವೃಣೋತಿ ಲೋಕತ್ರಯಂ । ಕಿಂಚಾಯಂ ಸ್ವಧಾವಾನನ್ನವಾನ್ ವೃಷ್ಟಿಲಕ್ಷಣೋದಕವಾನ್ಸ್ವಾ ದ್ಯಾಂ ದಿವಂ ಭರ್ತಿ । ಬಿಭರ್ತಿ । ಧಾರಣೇ ದೃಷ್ಟಾಂತಃ । ಓಪಶಮಿವ । ಈಷದುಪಶೇತ ಇತ್ಯೋಪಶಂ ಶೃಂಗಂ । ತದ್ವೃಷಭ ಇವ । ಯದ್ವಾ । ಪರಸ್ಪರಂ ಸಮೀಪೇ ವರ್ತಮಾನಂ ಕ್ಷಿತ್ಯಂತರಿಕ್ಷಾಖ್ಯಂ ಲೋಕದ್ವಯಮೋಪಶಂ। ತದಿವ ದ್ಯಾಂ ಬಿಭರ್ತಿ। ಲೋಕತ್ರಯಮಪಿ ಬಿಭರ್ತೀತ್ಯರ್ಥಃ ॥ ಭೃಞೋ ಲಟಿ ಛಾಂದಸಃ ಶಪೋ ಲುಕ್ ॥

॥ ಪ್ರತಿಪದಾರ್ಥ ॥

**ಯತ್**—ಯಾವ ಇಂದ್ರನು । **ಇತ್ಥಾ**—ಸತ್ಯವಾಗಿಯೂ । **ಮಹಿನಾ**—ತನ್ನ ಮಹಿಮೆಯಿಂದ (ಐಶ್ವರ್ಯದಿಂದ) । **ನೃಭ್ಯಃ**—ನೇತೃಗಳಾದ (ಕರ್ಮನಿರ್ವಾಹಕರಾದ) ಯಜಮಾನರಿಗೆ । **ಪ್ರ ಅಸ್ತಿ**— ಸ್ವರ್ಗಾದಿ ಫಲಪ್ರದಾನ ಮಾಡಲು ಅಥವಾ ರಕ್ಷಿಸಲು ಸಮರ್ಥನಾಗುತ್ತಾನೋ, । **ಅಸ್ಮೈ**—(ರಕ್ಷಕನಾದ ಈ) ಇಂದ್ರನಿಗೆ । **ಕಕ್ಷ್ಯೇ**—ಕಕ್ಷ್ಯಾಪ್ರಾಯವಾದ । **ರೋದಸೀ**— ಭೂಮ್ಯಂತರಿಕ್ಷಗಳು । **ನ ಅರಂ**—(ಅವನ ಸಂಚಾರಕ್ಕೆ) ತಕ್ಕಷ್ಟು ವಿಸ್ತಾರವಾಗಿಲ್ಲ । **ಇಂದ್ರಃ**—ಈ ಇಂದ್ರನು । **ಭೂಮ**—ಭೂಮಿಯನ್ನು । **ವೃಜನಂ ನ**—ಆಕಾಶವು ಆವರಿಸಿರುವಂತೆ। **ಸಂ ವಿವ್ಯೇ**—(ತನ್ನ ತೇಜಸ್ಸಿನಿಂದ ಮೂರು ಲೋಕಗಳನ್ನೂ) ವ್ಯಾಪಿಸುತ್ತಾನೆ । (**ಕಿಂಚ ಅಯಂ**—ಮತ್ತೂ

ಈ ಇಂದ್ರನು) । **ಸ್ವಧಾವಾನ್**—ಅನ್ನ (ವೃಷ್ಟಿರೂಪೋದಕ) ವಿಶಿಷ್ಟನಾಗಿ । **ಓಪಶಂ ಇವ**—(ವೃಷಭವು) ಕೊಂಬನ್ನು ಧರಿಸುವಂತೆ ಅಥವಾ ಪರಸ್ಪರ ಸಮೀಪವರ್ತಿಗಳಾದ ಭೂಮ್ಯಂತರಿಕ್ಷಗಳನ್ನೂ ಧರಿಸಿರುವಂತೆ । **ಭರ್ತಿ**— ಧರಿಸುತ್ತಾನೆ (ಆಧಾರನಾಗಿದಾನೆ).

॥ ಭಾವಾರ್ಥ ॥

ಕರ್ಮನಿರ್ವಾಹಕರಾದ ಯಜಮಾನರ ರಕ್ಷಕನೂ, ಮಹಾಮಹಿಮನೂ ಆದ ಇಂದ್ರನು ಭೂಮ್ಯಂತರಿಕ್ಷ ಗಳನ್ನು ಮೀರಿದಾನೆ ; ಆಕಾಶವು ಭೂಮಿಯನ್ನು ಆವರಿಸಿರುವಂತೆ, ಇವನೂ ತನ್ನ ತೇಜಸ್ಸಿನಿಂದ ಮೂರು ಲೋಕ ಗಳನ್ನೂ ಆವರಿಸಿದಾನೆ ; ಅನ್ನ (ವೃಷ್ಟಿರೂಪೋದಕ) ವಿಶಿಷ್ಟನಾದ ಇವನು ಭೂಮಿ ಮತ್ತು ಆಕಾಶಗಳಿಗೆ ಆಶ್ರಯ ವಾಗಿರುವಂತೆ ಸ್ವರ್ಗಲೋಕಕ್ಕೂ ಆಧಾರನಾಗಿದಾನೆ.

## English Translation

Heaven and earth are insufficient for the girth of that Indra, who, with his greatness, rules over the leaders (of sacrifice) : as the atmosphere encompasses the earth, so he encompasses (the three worlds), and, being the master of the rain, he upholds the sky as well as the firmament and the earth.

॥ ವಿಶೇಷವಿಷಯಗಳು ॥

**ಮಹಿನಾ ನೃಭ್ಯಃ ಪ್ರ ಅಸ್ತಿ—ಮಹತ್ತ್ವೇನ ಸ್ವೈಶ್ವರ್ಯೇಣ ನೇತೃಭ್ಯಃ ಕರ್ಮನಿರ್ವಾಹಕೇಭ್ಯಃ । ಯಜಮಾನೇಭ್ಯಃ ಪ್ರಭವತಿ ।** ಇಂದ್ರನು ಮಹತ್ವಪೂರಿತವಾದ ತನ್ನ (ಐಶ್ವರ್ಯ) ಪ್ರಭಾವದಿಂದ ಯಜ್ಞ ಕರ್ಮಗಳನ್ನು ನೆರವೇರಿಸುತ್ತಿರುವ ಯಜಮಾನರ ವಿಷಯದಲ್ಲಿ ಪೂಜ್ಯನಾಗಿರುತ್ತಾನೆ, ಎಂದು ಅರ್ಥವನ್ನು ವಿವರಿಸಿದೆ. **ನರಃ** ಎಂಬ ಪದವು **ಅಶ್ವ**ನಾಮಗಳಲ್ಲಿಯೂ (ನಿ. ೨-೨೭) **ಮನುಷ್ಯ**ನಾಮಗಳಲ್ಲಿಯೂ (ನಿ. ೩-೭) ಉಕ್ತವಾಗಿದೆ. ಇಲ್ಲಿ ಕರ್ಮಗಳನ್ನು ಆಚರಿಸುವ ಯಜಮಾನರೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಇತ್ಥಾ—ಬಟ್, ಶ್ರತ್** ಇತ್ಯಾದಿ **ಸತ್ಯ** ನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೩-೧೩) ಮತ್ತು ಇತ್ಥಾ ಶಬ್ದದ ನಿರ್ವಚನವನ್ನು ತೋರಿಸುತ್ತಾ ಇತ್ಥಾ **ಅಮುಥೇತ್ಯೇತೇನ ವ್ಯಾಖ್ಯಾತಂ** (ನಿ. ೫-೫) **ಅಮುಥಾ** ಎಂಬ ಶಬ್ದದ ನಿರ್ವಚನದಂತೆಯೇ ಇದನ್ನೂ ತಿಳಿಯಬೇಕು ಎಂದಿದ್ದಾರೆ. **ಅಮುಥಾ ಯಥಾಸಾವಿತಿ ವ್ಯಾಖ್ಯಾತಂ** (೩-೧೬) ಅಮುಥಾ ಎಂಬುದು ಸತ್ಯಾರ್ಥದಲ್ಲಿಯೂ ಔಪಮ್ಯಾರ್ಥದಲ್ಲಿಯೂ ಪ್ರಯೋಗಿಸಲ್ಪಡುತ್ತದೆ. ಅದರಂತೆಯೇ **ಇತ್ಥಾ** ಶಬ್ದದ ಪ್ರಯೋಗವೂ ಇದೆಯೆಂದರ್ಥವೆಂದು ತಿಳಿಸಿ,

**ತ್ಯಂ ಚಿದಿತ್ಥಾ ಕತ್ಪಯಂ ಶಯಾನಮಸೂರ್ಯೇ ತಮಸಿ ವಾವೃಧಾನಂ ।**

(ಋ. ಸಂ. ೫-೩೨-೬).

ಎಂಬ ಋಕ್ಕನ್ನುದಹರಿಸಿ **ಇತ್ಥಾ** ಎಂಬ ಪದಕ್ಕೆ ಸತ್ಯವಾಗಿಯೂ ಎಂಬರ್ಥವನ್ನು ತೋರಿಸಿದ್ದಾರೆ. (ನಿ. ೬-೩) ದುರ್ಗಾಚಾರ್ಯರು **ಅಮುನಾ ಪ್ರಕಾರೇಣ** ಎಂದೂ, ಸಾಯಣರು **ಅಮುಷ್ಮಿನ್ನಂತರಿಕ್ಷಲೋಕೇ** ಎಂದೂ ಅರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸತ್ಯಾರ್ಥದಲ್ಲಿ ಪ್ರಯೋಗಿಸಿದೆ.

**ಕಕ್ಷ್ಯೇ—ಕಕ್ಷ್ಯಾ ರಜ್ಜುರಶ್ವಸ್ಯ—ಕಕ್ಷಂ ಸೇವತೇ; ಕಕ್ಷೋ ಗಾಹತೇಃ ಕ್ಸ ಇತಿ ನಾಮಕರಣಃ । ಖ್ಯಾತೇರ್ವಾನರ್ಥಕೋಽಭ್ಯಾಸಃ । ಕಿಮಸ್ಮಿನ್ ಖ್ಯಾನಮಿತಿ । ಕಷತೇರ್ವಾ । ತತ್ಸಾಮಾನ್ಯಾನ್ಮನುಷ್ಯಕಕ್ಷೋ ಬಾಹುಮೂಲಸಾಮಾನ್ಯಾದಶ್ವಸ್ಯ ।** (ನಿ. ೨-೨)

ಅಶ್ವದ ಕತ್ತಿನ ಸುತ್ತಲೂ ಕಟ್ಟುವುದರಿಂದ ಅದರ ಕತ್ತಿನ ಸುತ್ತುಪಟ್ಟಿಗೆ ಕಕ್ಷ್ಯಾ ಎಂಬ ಹೆಸರು. ಅಂತಃಪ್ರವೇಶಾರ್ಥಕದಲ್ಲಿ ಪ್ರಯೋಗಿಸುವ **ಗಾಹ್** ಧಾತುವಿನೊಡನೆ **ಕ್ಷ** ಎಂಬ ಪ್ರತ್ಯಯವು ಸೇರಿ **ಕಕ್ಷ್ಯಾ** ಎಂಬ ನಿಷ್ಪತ್ತಿಯಾಗಬಹುದು. ಅಥವಾ **ಖ್ಯಾ** ಧಾತುವಿನ ಅಭ್ಯಾಸದಿಂದ ನಿಷ್ಪನ್ನವಾಗಿರಬಹುದು. ಅಥವಾ **ಉಜ್ಜು** ಎಂಬರ್ಥವುಳ್ಳ **ಕಷಾ** ಧಾತುವೇ ಇದರ ಮೂಲವಾಗಿರಬಹುದು. ಆದುದರಿಂದ ಪುರುಷನ **ಕಕ್ಷಕ್ಕೂ** (armpit) ಈ ಹೆಸರು ಪ್ರಸಿದ್ಧವಾಗಿದೆ. ಎಂದರೆ ಈ ಕಕ್ಷಕ್ಕೆ ಸಮಾನವಾದ ಅಂತರವುಳ್ಳ ದ್ಯಾವಾಪೃಥಿವಿಗಳೆಂದರ್ಥವಾಗಬಹುದು.

ಇದಲ್ಲದೇ, **ಕಕ್ಷ್ಯಾ** ಎಂಬ ಪದವನ್ನು ನಿರುಕ್ತಕಾರರು "ಅಂಗುಳಿ" ನಾಮಗಳಲ್ಲಿ ಪಠಿಸಿದ್ದಾರೆ (ನಿ. ೩-೮) ಮತ್ತು ಈ ಪದದ ಪ್ರಯೋಗವಿರುವ,

**ದಶಾವನಿಭ್ಯೋ ದಶಕಕ್ಷ್ಯೇಭ್ಯೋ ದಶಯೋಕ್ತ್ರೇಭ್ಯೋ ದಶಯೋಜನೇಭ್ಯಃ ।**
**ದಶಾಭೀಶುಭ್ಯೋ ಅರ್ಚತಾಜರೇಭ್ಯೋ ದಶ ಧುರೋ ದಶ ಯುಕ್ತಾ ವಹದ್ಭ್ಯಃ ॥**

(ಋ. ಸಂ. ೧೦-೯೪-೭)

ಎಂಬ ಋಕ್ಕನ್ನುದಾಹರಿಸಿ ಇಲ್ಲಿ **ಕಕ್ಷ್ಯಾ** ಶಬ್ದಕ್ಕೆ ಅಂಗುಲಗಳೆಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ದ್ಯಾವಾಪೃಥಿಗಳ ಅಂತರವೆಂದರ್ಥವಾಗುತ್ತದೆ.

**ಅಸ್ಮೈ ರೋದಸೀ ಕಕ್ಷ್ಯೇ ನಾಲಂ—ರೋದಸೀ** ಎಂಬ ಪದವು ದ್ಯಾವಾಪೃಥಿವೀನಾಮಗಳಲ್ಲಿ (ನಿ. ೩-೩೦) ಉಕ್ತವಾಗಿದೆ. ದ್ಯಾವಾಪೃಥಿವಿಗಳು ತಮ್ಮತಮ್ಮ ಮಾರ್ಗಗಳಲ್ಲಿ ಸಂಚರಿಸುವವುಗಳಾದರೂ ಕರ್ಮಗಳನ್ನು ಆಚರಿಸುವ ಯಜಮಾನರನ್ನು ರಕ್ಷಿಸುವ ಇಂದ್ರನ ಸಂಚಾರಕ್ಕೆ ಸಾಕಾಗಿರುವುದಿಲ್ಲ ಎಂದೂ, **ಜಗತೋಽಧೀಶಸ್ಯ ಇಂದ್ರಸ್ಯ ಸಂಚಾರಾಯ ಅಲ್ಪತ್ವಾತ್ ದ್ಯಾವಾಪೃಥಿವ್ಯೌ ನ ಪರ್ಯಾಪ್ತೇ । ಸೃಷ್ಟಾದಪಿ ಸ್ರಷ್ಟುರ್ಮಹಿಮ್ನೋ ಅಧಿಕತ್ವಾತ್ ।** ಸೃಷ್ಟಿಯನ್ನು ಮಾಡುವವನ ಮಹಿಮೆಯು ಸೃಷ್ಟಿಯಾದ ವಸ್ತುವಿನ ಮಹಿಮೆಗಿಂತ ಅತಿಶಯವಾಗಿ ಇರುವುದರಿಂದ ಜಗತ್ತಿಗೆಲ್ಲಕ್ಕೂ ಅಧಿಪತಿಯಾದ ಇಂದ್ರನು ಸಂಚರಿಸಲು ತಕ್ಕ ಸನ್ನಿವೇಶವು ದ್ಯಾವಾಭೂಮಿಗಳಲ್ಲಿರುವುದು ಸಾಕಾಗುವುದಿಲ್ಲವೆಂದೂ ಅರ್ಥವನ್ನು ವಿವರಿಸಿದೆ. ಇದರಿಂದ ದ್ಯಾವಾಪೃಥಿವಿಗಳ ಮಹತ್ತ್ವವು ಇಂದ್ರನ ಮಹತ್ತ್ವಕ್ಕಿಂತ ಅಲ್ಪವಾಗಿರುವುದೆಂದು ಸೂಚಿತವಾಗಿರುತ್ತದೆ.

**ಅರಂ—ಅಲಂ । ಪರ್ಯಾಪ್ತೇ ಇತ್ಯರ್ಥಃ ।** ತೃಪ್ತಿಯನ್ನು ಕೊಡುವಷ್ಟು ಪರ್ಯಾಪ್ತವಾಗಿರಲಿ ಎಂದು ಇಲ್ಲಿ ಅರ್ಥ. ಪರ್ಯಾಪ್ತವೆಂಬರ್ಥವನ್ನು ಕೊಡುವಂತೆಯೇ ಈ ಪದವು **ಸಿದ್ಧಮಾಡು, ಸೇವಿಸು** ಎನ್ನುವ ಅರ್ಥಗಳಲ್ಲಿಯೂ ಪ್ರಯೋಗಿಸಲ್ಪಟ್ಟಿದೆ.

**ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।**

(ಋ. ಸಂ. ೧-೨-೧)

**ಅರಂ ಕೃಣ್ವಂತು ವೇದಿಂ ಸಮಗ್ನಿಮಿಂಧತಾಂ ಪುರಃ ।**

(ಋ. ಸಂ. ೧-೧೭೦-೪)

ಇತ್ಯಾದಿ ಋಕ್ಕುಗಳಲ್ಲಿ **ಅರಂಕೃತೆ, ಅರಂಕೃಣ್ವಂತು** ಎಂದರೆ ಸಿದ್ಧಪಡಿಸು ಎಂಬರ್ಥವನ್ನೂ,

**ತ್ವಮಗ್ನೇ ದ್ರವಿಣೋದಾ ಅರಂಕೃತೇ ತ್ವಂ ದೇವಃ ಸವಿತಾ ರತ್ನಧಾ ಅಸಿ ।**

(ಋ. ಸಂ. ೨-೧.೭)

ಇತ್ಯಾದಿ ಋಕ್ಕುಗಳಲ್ಲಿ ಪೂಜೆಮಾಡು, ಸೇವಿಸು ಎಂಬರ್ಥವನ್ನೂ ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ, ಇದರಂತೆಯೇ ಪ್ರಯೋಗವಿರತಕ್ಕ,

**ಸೋಮಾರುದ್ರಾ ಧಾರಯೇಥಾಮಸುರ್ಯಂ೧ ಪ್ರ ವಾಮಿಷ್ಟಯೋಽರಮಶ್ನುವಂತು ।**

(ಋ. ಸಂ. ೬-೭೪-೧)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ತೃಪ್ತಿಯನ್ನು ಕೊಡುವಷ್ಟು ಪರ್ಯಾಪ್ತವಾದುದು ಎಂದರ್ಥವಾಗುತ್ತದೆ.

**ವ್ರಜನಂ ನ ಭೂಮ ಸಂವಿವ್ಯೇ—ಭೂಮಿಂ ಭೂತಾನಿ ವಾ ವ್ರಜನಮಿವ । ತದಿವ ತದ್ಯಥಾ ಆವೃಣೋತಿ ತಥಾ ಅಯಮಪಿ ಸ್ವತೇಜಸಾ ಸಮ್ಯಗಾವೃಣೋತಿ ಲೋಕತ್ರಯಂ ।** ವ್ರಜನಶಬ್ದವು ಬಲ ನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಬಲವು ಭೂಮಿಯನ್ನೂ ಪ್ರಾಣಿಗಳನ್ನೂ ಆವರಿಸಿರುವ ಹಾಗೆ ಎಂದು ಹೋಲಿಸಿದೆ. ಇಲ್ಲಿ ಭೂಮ ಎಂಬ ಪದಕ್ಕೆ ಭೂಮಿ ಅಥವಾ ಪ್ರಾಣಿಗಳು ಎಂಬ ಅರ್ಥವನ್ನು ಹೇಳಿದೆ. ಭೂಮಿಯನ್ನೂ ಪ್ರಾಣಿಗಳನ್ನೂ ಆ ಬಲವು ಆವರಿಸಿರುವಹಾಗೆ ಇಂದ್ರನು ಮೂರುಲೋಕಗಳನ್ನೂ ತನ್ನ ತೇಜಸ್ಸಿನಿಂದ ಆವರಿಸಿದ್ದಾನೆ ಎಂದು ಅರ್ಥವನ್ನೂ ವರ್ಣಿಸಿದೆ.

**ಸ್ವಧಾವಾನ್—ಅನ್ನವಾನ್, ವೃಷ್ಟಿಲಕ್ಷಣೋದಕವಾನ್‌ವಾ । ಸ್ವಧಾ** ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಅನ್ನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಈ ನಾಮವು ಇನ್ನೂ ಬೇರೆಯ ಅರ್ಥದಲ್ಲಿ ಪ್ರಯುಕ್ತವಾಗಿದೆ. ಇಲ್ಲಿ ಇಂದ್ರನು ಅನ್ನವುಳ್ಳವನಾಗಿಯೂ, ವೃಷ್ಟಿರೂಪವಾದ ಉದಕಗಳನ್ನು ಹೊಂದಿರುವವನಾಗಿಯೂ, ದ್ಯುಲೋಕವನ್ನು ಧರಿಸುತ್ತಾನೆಂಬ ಅರ್ಥವನ್ನು ವಿವರಿಸಿದೆ.

**ಸ್ವಧಾವಾನ್—ಅನ್ನವಾನ್, ವೃಷ್ಟಿಲಕ್ಷಣೋದಕವಾನ್ ವಾ** ಎಂದು ಸಾಯಣರು ಅರ್ಥಮಾಡಿದ್ದಾರೆ. ಕೆಲವೆಡೆಗಳಲ್ಲಿ ಸಾಯಣರೇ **ಸ್ವಧಯಾ** ಎಂಬ ಪದಕ್ಕೆ **ಆತ್ಮೀಯೇನ ತೇಜಸಾ; ಹವಿರ್ಲಕ್ಷಣೇನ ಅನ್ನೇನ ವಾ ।** ಎಂದು ಎರಡು ವಿಧವಾದ ಅರ್ಥವನ್ನು ಮಾಡಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿ ಇಂದ್ರನ ಪ್ರಭಾವವು ದ್ಯಾವಾಪೃಥಿವಿಗಳ ಮಹಿಮೆಗಿಂತ ಮೀರಿದುದು ಎಂಬ ವರ್ಣನೆಯಿರುವುದರಿಂದಲೂ ಇಲ್ಲಿ **ತೇಜೋವಾನ್** ಎಂಬರ್ಥವೇ ಉಚಿತವಾಗಿ ಕಾಣುತ್ತದೆ. ಈ ಪದವನ್ನು **ಉದಕ** ನಾಮಗಳಲ್ಲಿಯೂ (ನಿ. ೨-೨೩) **ಅನ್ನ** ನಾಮಗಳಲ್ಲಿಯೂ ನಿರುಕ್ತಕಾರರು ಸೇರಿಸಿ ಪಠಿಸಿದ್ದಾರೆ. (ನಿ. ೩-೯) ಅನೇಕ ಸಂದರ್ಭಗಳಲ್ಲಿ **ಸ್ವಧಾ** ಶಬ್ದಕ್ಕೆ **ಸ್ವಮಹಿಮೆ, ಸ್ವತೇಜಸ್ಸು** ಅಥವಾ **ಸ್ವಾಶ್ರಯ** ಎಂದೂ ಅರ್ಥಮಾಡಿದೆ. ಉದಾಹರಣೆಗೆ—

**ಶಶ್ವತ್ಪುರೋಷಾ ವ್ಯುವಾಸ ದೇವ್ಯಥೋ ಅದ್ಯೇದಂ ವ್ಯಾವೋ ಮಘೋನೀ ।**
**ಅಥೋ ವ್ಯುಚ್ಛಾದುತ್ತರಾँ ಅನು ದ್ಯೂನಜರಾಮೃತಾ ಚರತಿ ಸ್ವಧಾಭಿಃ ॥**

(ಋ. ಸಂ. ೧-೧೧೩-೧೩)

ಎಂಬ ಋಕ್ಕಿನಲ್ಲಿ **ಉಷಸ್ಸಿನ** ಪರವಾಗಿ ಉಪಯೋಗಿಸಲ್ಪಟ್ಟ ಈ ಪದಕ್ಕೆ **ಆತ್ಮೀಯೈಸ್ತೇಜೋಭಿಃ ।** ತನ್ನ ಸ್ವತೇಜಸ್ಸುಗಳಿಂದ ಎಂದರ್ಥಮಾಡಿದೆ. ಇದರಂತೆಯೇ.

**ಯದಂತರಿಕ್ಷೇ ಪತಥಃ ಪುರುಭುಜಾ ಯದ್ವೇಮೇ ರೋದಸೀ ಅನು ।**
**ಯದ್ವಾ ಸ್ವಧಾಭಿರಧಿತಿಷ್ಠಥೋ ರಥಮುತ ಆ ಯಾತಮಶ್ವಿನಾ ॥**

(ಋ. ಸಂ. ೮-೧೦-೬)

ಎಂಬಲ್ಲಿಯೂ ಸಹ **ಆತ್ಮೀಯೈಸ್ತೇಜೋಭಿರ್ಬಲೈರ್ವಾ ಸಾರ್ಧಂ ।** ನಿಮ್ಮ ಸ್ವತೇಜಸ್ಸುಗಳಿಂದ ಅಥವಾ ಸ್ವಶಕ್ತಿಗಳೊಡನೆ ಎಂದರ್ಥವಾಗುತ್ತದೆ.

**ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸಿತ್ಪ್ರಕೇತಃ ।**
**ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥**

(ಋ. ಸಂ. ೧೦-೧೨೯-೨)

ಎಂಬ ಋಕ್ಕಿನಲ್ಲಿ ಸಾಯಣರು **ಸ್ವಸ್ಮಿನ್ ಧೀಯತೇ ಧ್ರಿಯತೇ ಆಶ್ರಿತ್ಯ ವರ್ತತೇ ಇತಿ ಸ್ವಧಾ ।** ಸ್ವಾಶ್ರಯಾವಲಂಬಿಯಾಗಿರುವುದರಿಂದ **ಸ್ವಧಾ** ಎಂದು **ಈಶ್ವರನ** (ಪರಬ್ರಹ್ಮನ) ವಿಚಿತ್ರವಾದ ಶಕ್ತಿಯಾದ **ಮಾಯೆಗೆ** ವಿಶೇಷಣವಾಗಿದೆಯೆಂದು ವರ್ಣಿಸಿದ್ದಾರೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಇಂದ್ರನು** ತನ್ನ ಅಸಾಧಾರಣವಾದುದೂ, ಲೋಕರಕ್ಷಕವಾದುದೂ ಆದ **ತೇಜಸ್ಸು, ಮಹಿಮೆ, ಶಕ್ತಿ** ಇವುಗಳಿಂದ ಲೋಕಗಳೆಲ್ಲವನ್ನೂ ಆಕ್ರಮಿಸಿದ್ದಾನೆ ಎಂದು ಅರ್ಥಮಾಡಬಹುದು. ಇದಲ್ಲದೇ,

**ಸ್ವಧಾಮನು ಶ್ರಿಯಂ ನರೋ ಮಹಿ ತ್ವೇಷಾ ಅಮವಂತೋ ವೃಷಪ್ಸವಃ । ವಹಂತೇ ಅಹ್ರುತಪ್ಸವಃ ।**

(ಋ. ಸಂ. ೮-೨೦-೭)

**ವಿ ವಿದ್ಯುತೋ ನ ವೃಷ್ಟಿಭೀ ರುಚಾನಾ ಅನು ಸ್ವಧಾ ಮಾಯುಧೈರ್ಯಚ್ಛಮಾನಾಃ ।**

(ಋ. ಸಂ. ೭-೫೬-೧೩)

ಇತ್ಯಾದಿ ಋಕ್ಕುಗಳಲ್ಲಿ **ಸ್ವಧಾಂ ಅನು, ಅನು ಸ್ವಧಾಂ** ಎಂಬ ಪ್ರಯೋಗಗಳಿರುವಾಗ **ಸಹಜವಾಗಿ, ಸ್ವಭಾವತಃ, ಪದ್ಧತಿಯಂತೆ,** ಎಂಬರ್ಥಗಳಾಗುತ್ತದೆ.

**ಅಚಕ್ರಯಾ ಯತ್ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಂ ।**

(ಋ. ಸಂ. ೪-೨೬-೪)

ಎಂಬಲ್ಲಿ **ರಥೇನ** ಎಂದೂ,

**ಅಪಶ್ಯಂ ಗ್ರಾಮಂ ವಹಮಾನಮಾರಾದಚಕ್ರಯಾ ಸ್ವಧಯಾ ವರ್ತಮಾನಂ ।**

(ಋ. ಸಂ. ೧೦-೨೭-೧೯)

ಇತ್ಯಾದಿ ಸ್ಥಳಗಳಲ್ಲಿ **ಸೇನಯಾ** ಎಂದೂ ಅರ್ಥಮಾಡಿದೆ. ಒಟ್ಟಿನಲ್ಲಿ ತೇಜೋಯುತವಾದ ಎಂದು ವಸ್ತುವಿನ ಸ್ವರೂಪವನ್ನು ತಿಳಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಮಹಾಮಹಿಮನಾದ ಇಂದ್ರನ ಪ್ರಭಾವವನ್ನು **ಸ್ವಧಾವಾನ್** ಎಂಬ ಪದವು ವರ್ಣಿಸುತ್ತದೆಯೆಂದು ಹೇಳಬಹುದು.

**ಓಪಶಮಿವ—ಈಷದುಪಶೇತೇ ಇತ್ಯೋಪಶಂ ಶೃಂಗಂ ತೇದ್ವೃಷಭ ಇವ |** ಕೊಂಚಮಟ್ಟಿಗೆ ಉತ್ಪನ್ನವಾಗುವ ಕಾರಣ ಶೃಂಗವನ್ನು ಓಪಶಶಬ್ದಾರ್ಥವನ್ನಾಗಿ ವಿವರಿಸಿದೆ. ಇಂದ್ರನು ಲೋಕತ್ರಯವನ್ನೂ ಧರಿಸಿರುವ ವಿಷಯದಲ್ಲಿ ಕೊಂಚಮಟ್ಟಿಗೆ ಉತ್ಪನ್ನವಾದ ಶೃಂಗವನ್ನು ಅನಾಯಾಸದಿಂದ ಧರಿಸಿರುವ ವೃಷಭವನ್ನೂ (ಗೂಳಿಯನ್ನೂ) ಹೋಲಿಸಿ ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ **ಪರಸ್ಪರಂ ಸಮೀಪೇ ವರ್ತಮಾನಂ ಕ್ಷಿತ್ಯಂತರಿಕ್ಷಾಖ್ಯಂ ಲೋಕದ್ವಯಂ ಕದಿವ ದ್ಯಾಂ ಬಿಭರ್ತಿ | ಲೋಕತ್ರಯಮಪಿ ಬಿಭರ್ತೀತ್ಯರ್ಥಃ |** ಅನ್ಯೋನ್ಯವಾಗಿ ಸಮೀಪದಲ್ಲಿ ಇರುವ ಭೂವ್ಯಂತರಿಕ್ಷಗಳು ಎಂದು ಪ್ರಸಿದ್ಧವಾದ ಎರಡು ಲೋಕಗಳನ್ನೂ ಧರಿಸಿರುವಂತೆ ಇಂದ್ರನು ದ್ಯುಲೋಕವನ್ನು ಧರಿಸಿರುವನು ಎಂದು ಹೋಲಿಸಿ ಅರ್ಥವನ್ನು ವರ್ಣಿಸಿದೆ. ಇದರಿಂದ ಮೂರು ಲೋಕಗಳನ್ನೂ ಅನಾಯಾಸವಾಗಿ ರಕ್ಷಿಸುತ್ತಿರುವ ಇಂದ್ರನ ಪ್ರಭೂತವಾದ ಮಹಿಮೆಯು ವರ್ಣಿತವಾಗಿರುವುದು ಎಂದು ವಿವೃತವಾಗಿದೆ.

**ರೋದಸೀ—ರೋದಸೀ** ಎಂದರೆ ದ್ಯಾವಾಪೃಥಿವಿಗಳೆಂದರ್ಥ. **ರೋದಸೀ** ಎಂಬ ಅಂಕಿತನಾಮವೂ ಅನೇಕ ಸಂದರ್ಭಗಳಲ್ಲಿ ಒಂದು ವ್ಯಕ್ತಿಯ (ರುದ್ರಪತ್ನಿಯ) ಹೆಸರನ್ನೂ ಸೂಚಿಸುತ್ತದೆ. ಆದುದರಿಂದ ಈ ಪದವು ಏಕವಚನ ಮತ್ತು ದ್ವಿವಚನ ಈ ಎರಡರಲ್ಲೂ ಪ್ರಯೋಗಿಸಲ್ಪಟ್ಟಿದೆ. ಆಯಾ ಸಂದರ್ಭಗಳಿಗನುಗುಣವಾಗಿ ಇದರ ಅರ್ಥವನ್ನು ಮಾಡಬೇಕು. ನಿರುಕ್ತಕಾರರು,

**ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್ |**
**ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ ||**

(ಋ. ಸಂ. ೩-೩೦-೫).

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ರೋದಸೀ** ಎಂಬ ಪದದ ನಿರ್ವಚನವನ್ನು ಹೇಳುತ್ತಾ

**ರೋದಸೀ ದ್ಯಾವಾಪೃಥಿವ್ಯೌ ವಿರೋಧನಾತ್ |**

(ನಿ. ೬-೧).

ಒಂದು ಪರಿಮಿತವಾದ ಎಲ್ಲೆ (ಸೀಮಾ) ಯಿಂದ ಬಂಧಿತವೂ ನಿಯಮಿತವೂ ಆಗಿರುವುದರಿಂದ ದ್ಯಾವಾಪೃಥಿವಿಗಳಿಗೆ ರೋದಸೀ ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಯಬೇಕು ಎಂದಿದ್ದಾರೆ. ಇದು ದ್ವಿವಚನಾಂತವಾದ **ರೋದಸೀ** ಎಂಬ ಪದದ ನಿರ್ವಚನವಾಗಿದೆ. ಪುನಃ ಏಕವಚನಾಂತವಾದ ಪದದ ಅರ್ಥವನ್ನು ತಿಳಿಸುತ್ತಾ,

**ರೋದಸೀ ರುದ್ರಸ್ಯ ಪತ್ನೀ**

(ನಿ. ೧೧-೪೯)

**ರೋದಸಿಯು** ರುದ್ರನ ಪತ್ನಿಯು ಎಂದು ವಿವರಿಸಿ,

**ರಥಂ ನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ |**
**ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ||**

(ಋ. ಸಂ. ೫-೫೬-೮).

ಎಂಬ ಋಕ್ಕನ್ನುದಹರಿಸಿ ಇಲ್ಲಿ ರೋದಸಿಯೆಂದರೆ ರುದ್ರಪತ್ನಿಯೆಂಬ ಅಂಕಿತನಾಮದ ಪ್ರಯೋಗವಿದೆಯೆಂದು ತಿಳಿಸಿದ್ದಾರೆ. ಆದರೆ ಇಲ್ಲಿ ಇನ್ನೊಂದು ಸಮಸ್ಯೆಯೇಳುತ್ತದೆ ರುದ್ರಪತ್ನಿಯೆಂದರೆ, ರುದ್ರದೇವತೆಯ ಪತ್ನಿಯೇ ಅಥವಾ ರುದ್ರ ಶಬ್ದಕ್ಕೆ ಮರುತ್ತೆಂದರ್ಥವಾಗಿ ಮರುದ್ದೇವತೆಗಳ ಪತ್ನಿಯೇ ಎಂಬ ಸಂಶಯಕ್ಕೂ ಅವಕಾಶವಾಗುವಂತೆ ಸಾಯಣರು ಎರಡು ಕಡೆಗಳಲ್ಲೂ ವ್ಯಾಖ್ಯಾನ ಮಾಡಿದ್ದಾರೆ, ಪ್ರಕೃತವಾದ ಋಕ್ಕನ್ನು ವಿವರಿಸುತ್ತಾ,

**ರೋದಸೀ ರುದ್ರಸ್ಯ ಪತ್ನೀ ಮರುತಾಂ ಮಾತಾ । ಯದ್ವಾ ರುದ್ರೋ ವಾಯುಃ । ತತ್ಪತ್ನೀ ಮಾಧ್ಯಮಿಕಾ ದೇವೀ ॥**

(ಸಾ. ಭಾ.)

ರೋದಸಿಯು ರುದ್ರಪತ್ನಿ ಮತ್ತು ಮರುತ್ತುಗಳ ಮಾತೆಯೆಂದು ಒಂದರ್ಥವಾಗಬಹುದು. ಅಥವಾ ರುದ್ರಶಬ್ದಕ್ಕೆ ವಾಯುವೆಂಬರ್ಥವಿರುವುದರಿಂದ ರೋದಸಿಯೆಂದರೆ ವಾಯುಪತ್ನಿಯಾದ ಮಾಧ್ಯಮಿಕಾವಾಕ್ಕೆಂದು ಎರಡನೆಯ ಅರ್ಥವಾಗುತ್ತದೆ ಎಂದು ಎರಡು ವಿಧವಾಗಿ ವಿವರಿಸಿದ್ದಾರೆ. ಮತ್ತು

**ಪರಾ ಶುಭ್ರಾ ಅಯಾಸೋ ಯವ್ಯಾ ಸಾಧಾರಣ್ಯೇವ ಮರುತೋ ಮಿಮಿಕ್ಷುಃ ।**
**ನ ರೋದಸೀ ಅಪ ನುದಂತ ಘೋರಾ ಜುಷಂತ ವೃಧಂ ಸಖ್ಯಾಯ ದೇವಾಃ ॥**

(ಋ. ಸಂ. ೧-೧೬೭-೪)

ಎಂಬ ಋಕ್ಕನ್ನು ವಿವರಿಸುವಾಗ ಹಿಂದೆ ತಿಳಿಸಿರುವಂತೆ,

**ರೋದಸಾ ಶಬ್ದೇನ ರೋದನಸ್ವಭಾವೋ ರುದ್ರಃ । ತಸ್ಯ ಸ್ತ್ರೀ ರೋದಸೀತಿ ಕೇಚಿದಾಹುಃ । ಅಪರೇ ತು ಮರುತಾಂ ಸ್ತ್ರಿಯೋ ರೋದಸೀತಿ ನಾಮಧೇಯಮಿತ್ಯಾಹುಃ । ಅಯಮೇವ ಪಕ್ಷೋ ಯುಕ್ತ ಉತ್ತರತ್ರೈವಂ ವ್ಯವಹಾರಾತ್ ।**

ರೋದಸಿಯು ರುದ್ರಪತ್ನಿಯೆಂಬುದು ಒಂದು ಮತ. ಮರುತ್ತುಗಳ ಪತ್ನಿಯೆಂಬುದು ಇನ್ನೊಂದು ಮತ. ಇವುಗಳಲ್ಲಿ ಎರಡನೆಯದೇ ಸರಿಯಾಗಿರುವಂತೆ ತೋರುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಅಲ್ಲದೇ,

**ಜೋಷದ್ಯದೀಮಸುರ್ಯಾ ಸಚಧ್ಯೈ ವಿಷಿತಸ್ತುಕಾ ರೋದಸೀ ನೃಮಣಾಃ ॥**

(ಋ. ಸಂ. ೧-೧೬೭-೫)

ಎಂಬ ಋಕ್ಕನ್ನು ವಿವರಿಸುವಾಗ **ರೋದಸೀ ಮರುತ್ಪತ್ನೀ ವಿದ್ಯುದ್ವಾ ।** ರೋದಸಿಯು ಮರುತ್ತುಗಳ ಪತ್ನಿಯು ಅಥವಾ ವಿದ್ಯುತ್ತೇ ಈ ಹೆಸರಿನಲ್ಲಿ ಪ್ರಸಿದ್ಧವಾಗಿದೆ ಎಂದು ತಿಳಿಸಿದ್ದಾರೆ. ಮತ್ತು ಮರುತ್ತುಗಳ ಅನ್ವೇಕ್ಷಣದಲ್ಲಿಯೇ ಈ ರೋದಸಿಯು ಇರುವುದಾಗಿಯೂ ವರ್ಣಿತವಾಗಿರುವ ವಿಷಯವನ್ನುದಾಹರಿಸಿದ್ದಾರೆ. ಮತ್ತು **ರೋದಸೀ** ಪದದ ಪ್ರಯೋಗವಿರುವ ಇನ್ನೂ ಕೆಲವು ಸನ್ನಿವೇಶಗಳನ್ನು ಪರಿಶೀಲಿಸಿದರೆ,

**ತ ಇದುಗ್ರಾಃ ಶವಸಾ ಧೃಷ್ಣುಷೇಣಾ ಉಭೇ ಯುಜಂತ ರೋದಸೀ ಸುಮೇಕೇ ।**
**ಅಧ ಸ್ಮೈಷು ರೋದಸೀ ಸ್ವಶೋಚಿರಾಮವತ್ಸು ತಸ್ಥೌ ನ ರೋಕಃ ॥**

(ಋ. ಸಂ. ೬-೬೬-೬)

ಎಂಬ ಒಂದೇ ಋಕ್ಕಿನಲ್ಲಿ **ರೋದಸೀ** ಶಬ್ದವು ಎರಡು ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಇಲ್ಲಿ ಮೊದಲನೆಯ ಪದಕ್ಕೆ ಸಾಯಣರು **ದ್ಯಾವಾಪೃಥಿವ್ಯೌ** ಎಂದೂ, ಎರಡನೆಯ ಪದಕ್ಕೆ **ರುದ್ರಸ್ಯ ಪತ್ನೀ ಮಾಧ್ಯಮಿಕೀ ವಾಕ್** ಎಂದೂ ಅರ್ಥಮಾಡಿದ್ದಾರೆ. ಮತ್ತು,

**ಮಿಮ್ಯಕ್ಷ ಯೇಷು ರೋದಸೀ ನು ದೇವೀ ಸಿಷಕ್ತಿ ಪೂಷಾ ಅಭ್ಯರ್ಧಯಜ್ವಾ ।**
**ಶ್ರುತ್ವಾ ಹವಂ ಮರುತೋ ಯದ್ಧ ಯಾಥ ಭೂಮಾ ರೇಜಂತೇ ಅಧ್ವನಿ ಪ್ರವಿಕ್ತೇ ॥**

(ಋ. ಸಂ. ೬-೫೦-೫).

ಎಂಬಲ್ಲಿಯೂ ದೇವೀ **ದ್ಯೋತಮಾನಾ ಮಾಧ್ಯಮಿಕಾ ವಾಕ್** ಎಂದೇ ಅರ್ಥಮಾಡಿದೆ. ಋ. ಸಂ. ೧-೧೬೭-೩ ನೇ ಋಕ್ಕಿನ ವಿವರಣೆಯನ್ನು ಕೊಡುತ್ತಾ Max Muller ಎಂಬ ಪಂಡಿತನು ವಿದ್ಯುತ್, ಮಾಧ್ಯಮಿಕಾ ವಾಕ್ಕು ಮತ್ತು ದ್ಯಾವಾಪೃಥಿವೀ ಈ ಅರ್ಥಗಳಲ್ಲಿ ಪ್ರಯುಕ್ತವಾಗಿರುವ **ರೋದಸೀ** ಎಂಬ ಪದದ ವಿಷಯವನ್ನು ಈ ರೀತಿ ತಿಳಿಸಿದ್ದಾನೆ.

> In our verse, we take **ವಾಕ್** in the sense of thunder, but as a feminine, of the lightning and thunder as the two companions of the Maruts, represents the first, **ರೋದಸೀ** or lightning, as the recognised wife, hiding herself in the house, while the other, the loud thunder, is represented as a more public companion of the Maurts. This contrast, if it is really what the poet intended, throws a curious light on the social character of the Vedic times, as it presupposes two classes of wives, not necessarily simultanious, however—, a house wife, who stays at home and is not much seen, and a wife who appears in public and takes part in the society........ The loud voice of the thuuder as well as the usual hiding of the lightning might well suggest this comparison.

[S. B. E. XXXII P. 276]

ಈ ವಿಧವಾಗಿ ಏಕವಚನದ ಪ್ರಯೋಗಕ್ಕೂ ದ್ವಿವಚನದ ಪ್ರಯೋಗಕ್ಕೂ ವ್ಯತ್ಯಾಸವನ್ನು ತೋರಿಸುತ್ತಾ ಬೃಹದ್ದೇವತೆಯಲ್ಲಿ ಈ ವಿಧವಾಗಿ ತಿಳಿಸಿದೆ.

**ರೋದಸೀ ದೇವಪತ್ನೀನಾಂ ಅಥರ್ವಾಂಗಿರಸೇ ಯಥಾ ।**

(ಬೃ. ದೇ. ೨-೧೪೩)

ಎಂಬಲ್ಲಿ ಅಥರ್ವಾಂಗಿರಸದ (ಅಥರ್ವವೇದ) ಮತದಂತೆ ರೋದಸಿಯು ದೇವಪತ್ನಿಯರಲ್ಲಿ ಒಬ್ಬಳು ಎಂದು ಏಕವಚನದ ಪ್ರಯೋಗವಿರುವ ಉದಾಹರಣೆಯಿದೆ. ಮತ್ತು,

**ದ್ವೇ ದ್ವೇ ಪದೇ ಸಂಸ್ತುತೇ ರೋದಸೀ ಚ ದೇವಾಶ್ಚಾರ್ಧರ್ಚೇನ ವಿಭಕ್ತಮನ್ಯತ್ ।**

(ಬೃ. ದೇ. ೪-೬)

ಇತ್ಯಾದಿ ದ್ವಿವಚನ ಪ್ರಯೋಗವಿರುವೆಡೆಗಳಲ್ಲೆಲ್ಲಾ ದ್ಯಾವಾಪೃಥಿವಿಗಳೆಂದರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಮಹಿನಾ**—ಮಹ ಪೂಜಾಯಾಂ ಧಾತು. **ಇನ್ ಸರ್ವಧಾತುಭ್ಯಃ** ಎಂಬುದರಿಂದ ಇನ್ ಪ್ರತ್ಯಯ. ತೃತೀಯಾ ಏಕವಚನಾಂತರೂಪ. ವ್ಯತ್ಯಯದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಸ್ತಿ**—ಯದ್ವೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅರಮ್**—**ವಾಲಮೂಲಲಘು**—(ಪಾ. ಮ. ೮-೨-೧೮) ಎಂಬುದರಿಂದ ಲ ಕಾರಕ್ಕೆ ರೇಫಾದೇಶ.

**ವಿವ್ಯೇ**—ವೀ ಗತ್ಯಾದಿಷು. ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವೃಜನಮ್**—ವೃಜೀ ವರ್ಜನೇ ಧಾತು. ಇಲ್ಲಿ ಕರ್ತನಾರ್ಥದಲ್ಲಿ ಪ್ರಯುಕ್ತವಾಗಿದೆ **ಕ್ಯಾಪ್ಯಾವೃಜಿಮಂದಿ**—(ಉ. ಸೂ. ೨-೨೫) ಎಂಬುದರಿಂದ ಕ್ಯು ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಭರ್ತಿ**—ಭೃಞ್ ಭರಣೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಇಕಿಗೆ ಗುಣ. ರ ಪರವಾಗಿ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸ್ವಧಾವಾನ್**—**ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ದೀರ್ಘಾದಟಿ ಸಮಾನಪಾದೇ** (ಪಾ.ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿ ನಿತ್ಯಮ್** (ಪಾ. ಸೂ. ೮-೩-೩) ಸೂತ್ರದಿಂದ ನಿತ್ಯವಾಗಿ ಆಕಾರಕ್ಕೆ ಅನುನಾಸಿಕತ್ವ ಬರುತ್ತದೆ.

**ಓಪಶಮ್**—ಶೀಙ್ ಸ್ವಪ್ನೇ. ಧಾತು. ಆಙ್, ಉಪ, ಎರಡು ಉಪಸರ್ಗಗಳು ಉಪಪದವಾಗಿರುವಾಗ ಬಹುಲಗ್ರಹಣದಿಂದ ಇದಕ್ಕೆ ಡ ಪ್ರತ್ಯಯ. ಡಿತ್ತಾದುದರಿಂದ ಟಿ ಲೋಪ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಸಮುತ್ಸು ತ್ವಾ ಶೂರ ಸತಾಮುರಾಣಂ ಪ್ರಪಥಿಂತಮಂ ಪರಿತಂಸಯಧ್ಯೈ ।
ಸಜೋಷಸ ಇಂದ್ರಂ ಮದೇ ಕ್ಷೋಣೀಃ ಸೂರಿಂ ಚಿದ್ಯೇ ಅನುಮದಂತಿ ವಾಜೈಃ ॥

॥ ಪದಪಾಠಃ ॥

ಸಮತ್‌ಽಸು । ತ್ವಾ । ಶೂರ । ಸತಾಂ । ಉರಾಣಂ । ಪ್ರಪಥಿನ್‌ಽತಮಂ । ಪರಿಽತಂಸಯಧ್ಯೈ ।
ಸ್ವಜೋಷಸಃ । ಇಂದ್ರಂ । ಮದೇ । ಕ್ಷೋಣೀಃ । ಸೂರಿಂ । ಚಿತ್ । ಯೇ । ಅನುಽಮದಂತಿ । ವಾಜೈಃ ॥

॥ ಸಾಯಣಭಾಷ್ಯಂ ॥

**ಹೇ ಶೂರ ಶೌರ್ಯೋಪೇತೇಂದ್ರ ಸಮತ್ಸು ಸಂಗ್ರಾಮೇಷು ಸತಾಂ ತ್ವಾಮೇವಾಶ್ರಿತ್ಯ ವರ್ತಮಾನಾನಾಂ ಪ್ರಾಣಿನಾಮುರಾಣಮುರೂಣ್ಯತಿಪ್ರಭೂತಾನಿ ಬಲಾದೀನಿ ಕುರ್ವಾಣಂ ಪ್ರಪಥಿಂತಮಂ ಪ್ರಕೃಷ್ಟಮಾರ್ಗತಮಂ ಸುಕೃತಿನಾಮುತ್ತಮಮಾರ್ಗಭೂತಮಿಂದ್ರಂ ಶತ್ರೂಣಾಂ ದಾರಕಂ ತ್ವಾ ತ್ವಾಂ ಪರಿತಂಸಯಧ್ಯಾ ಅವತಂಸೀಕರ್ತುಂ ಭೂಷಣೀಕರ್ತುಂ । ಭೂಷಯಿತುಂ ವಾ ನಿಮಿತ್ತೇಽರ್ಥೇ । ಮದೇ ತವ ಮದಾರ್ಥಂ ಚ ಸಜೋಷಸಃ ಸಹ ಸೇವಮಾನಾಃ ಸಮಾನಪ್ರೀತಯೋ ವಾ ಕ್ಷೋಣೀಃ ಕ್ಷೋಣ್ಯೋ ವಿಶಃ ಪರಿಜನಾ ಮರುತಃ ಪ್ರಯತಂತೇ । ಕೀದೃಶಾಸ್ತೇ । ಯೇ ವಾಜೈರ್ಬಲೈರನುಮದಂತಿ ಅನುಕೂಲಂ ಮಾದಯಂತಿ ಸಂಗ್ರಾಮೇ ಮರುತಸ್ತ್ವಾಮೇವ ಸ್ವಾಮಿನಂ ಕೃತ್ವಾ ಮಾದಯಂತಿ । ಹರ್ಷಯಂತೀತ್ಯರ್ಥಃ । ಯದ್ವಾ । ಯೇ ಯಜಮಾನಾ ವಾಜೈರ್ಹವಿರ್ಭಿರ್ಮಾದಯಂತಿ ತೇ ಸಮಾನಪ್ರೀತಿಯುಕ್ತಾಸ್ತವ ಮನುಷ್ಯಭೂತಾ ಋತ್ವಿಜೋ ಯಜಮಾನಭೂತಾಃ ಪ್ರಜಾಃ ಸಮತ್ಸು ಸಹಮಾದನಸ್ಥಾನೇಷು ಯಾಗೇಷೂಕ್ತಲಕ್ಷಣವಿಶಿಷ್ಟಂ ತ್ವಾಮೇವ ಪೂಜಯಿತುಂ ತವ ಮಾದಾಯ ಚ ಪ್ರಯತಂತೇ ॥**

॥ ಪ್ರತಿಪದಾರ್ಥ ॥

**(ಹೇ) ಶೂರ**—ಎಲೈ ಶೂರನಾದ ಇಂದ್ರನೇ | **ಯೇ**—ಯಾವ ಮರುದ್ದೇವತೆಗಳು | **ವಾಜೈಃ**—ಸ್ವಕೀಯ ಬಲದಿಂದ | **ಸೂರಿಂ ಚಿತ್**—ಪ್ರಾಜ್ಞನಾದ ನಿನ್ನನ್ನೇ | **ಅನು ಮದಂತಿ**—ಅನುಸರಿಸಿ (ನಿನಗೆ ಅನುಕೂಲವಾಗುವಂತೆ) ಸಂತೋಷವುಂಟುಮಾಡುತ್ತಾರೋ । **(ತೇ**—ಅ) | **ಕ್ಷೋಣೀಃ**—ಪರಿಜನರಾದ (ಮರುದ್ದೇವತೆಗಳು) | **ಸಜೋಷಸಃ**—ಒಟ್ಟಾಗಿಯೇ ಸೇವಿಸುವವರಾಗಿ | **ಸಮತ್ಸು**—ಸಂಗ್ರಾಮಗಳಲ್ಲಿ | **ಸತಾಂ**—ನಿನ್ನನ್ನೇ ಆಶ್ರಯಿಸಿರುವ ಪ್ರಾಣಿಗಳಿಗೆ | **ಉರಾಣಂ**—ಅತಿ ಪ್ರಭೂತ ಬಲಕಾರಿಯೂ | **ಪ್ರಪಥಿಂತಮಂ**—(ಸತ್ಕರ್ಮಿಗಳಿಗೆ) ಉತ್ತಮಮಾರ್ಗಭೂತನೂ | **ಇಂದ್ರಂ**—ಶತ್ರುನಾಶಕನೂ ಆದ | **ತ್ವಾ**—ನಿನ್ನನ್ನು | **ಪರಿತಂಸಯಧ್ಯೈ**—ಅಲಂಕರಿಸಲು (ಮತ್ತು) | **ಮದೇ**—ನಿನ್ನ ಸಂತೋಷಕ್ಕೋಸ್ಕರ (ಪ್ರಯತ್ನಿಸುತ್ತಾರೆ) | [ಅಥವಾ **ಹೇ ಶೂರ**—ಎಲೈ ಶೂರನಾದ ಇಂದ್ರನೇ | **ಯೇ**—ಯಾವ ಯಜಮಾನರು | **ವಾಜೈಃ**—ಹವಿರಾದಿಗಳಿಂದ | **ಸೂರಿಂ ಚಿತ್**—ಪ್ರಾಜ್ಞನಾದ ನಿನ್ನನ್ನೇ | **ಅನು ಮದಂತಿ**—ಸಂತೋಷಪಡಿಸುತ್ತಾರೋ | **(ತೇ**—ಅ) | **ಕ್ಷೋಣೀಃ**—ಪರಿಜನಭೂತರಾದ ಯಜಮಾನರು | **ಸಜೋಷಸಃ**—ಸಮಾನಪ್ರೀತಿಯುಕ್ತರಾಗಿ | **ಸತಾಂ ಉರಾಣಂ**—(ನಿನ್ನನ್ನು) ಆಶ್ರಯಿಸಿದವರಿಗೆ ಬಲಕಾರಕನೂ | **ಪ್ರಪಥಿಂತಮಂ**—ಉತ್ತಮಮಾರ್ಗಭೂತನೂ | **ಇಂದ್ರಂ**—ಶತ್ರುನಾಶಕನೂ ಆದ | **ತ್ವಾ**—ನಿನ್ನನ್ನು | **ಪರಿತಂಸಯಧ್ಯೈ**—ಪೂಜಿಸುವುದಕ್ಕೋಸ್ಕರ | ಮತ್ತು **ಮದೇ**—ನಿನ್ನ ಸಂತೋಷಕ್ಕೋಸ್ಕರ | **ಸಮತ್ಸು**—ಸಂತೋಷಸ್ಥಾನಗಳಾದ ಯಾಗಗಳಲ್ಲಿ (ಪ್ರಯತ್ನಿಸುತ್ತಾರೆ) ].

॥ ಭಾವಾರ್ಥ ॥

ಎಲೈ ಶೂರನಾದ ಇಂದ್ರನೇ, ತನ್ನನ್ನು ಆಶ್ರಯಿಸಿದವರಿಗೆ ಬಲಕಾರಿಯೂ, ಸತ್ಕರ್ಮಿಗಳಿಗೆ ಉತ್ತಮ ಮಾರ್ಗಭೂತನೂ, ಶತ್ರುನಾಶಕನೂ ಆದ ನಿನ್ನನ್ನೇ, ಮರುದ್ದೇವತೆಗಳು (ಅಥವಾ ಯಜಮಾನರು) ಸ್ವಕೀಯ ಬಲದಿಂದ, ಪೂಜಿಸಲೂ, ಸಂತೋಷಪಡಿಸಲೂ ಪ್ರಯತ್ನ ಪಡುತ್ತಾರೆ.

English Translation.

Those people, who, jointly worshipping Indra, diligently endeavour, O hero, to propitiate you, the invigorator in combats, the guide in the rightway : provide, for his gratfication, with sacrificial viands.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನಿಗೆ ಯುದ್ಧಕಾಲಗಳಲ್ಲಿ ಸಹಾಯವನ್ನು ಸರ್ವದಾ ಆಚರಿಸಿ ಮತ್ತು ಆಚರಿಸುವವರಾದ ಮರುತ್ತು (ಮರುದ್ದೇವತೆ) ಗಳ ಅಸಾಧಾರಣವಾದ ಸಹಕಾರವು ವರ್ಣಿತವಾಗಿದೆ. ಇದರಂತೆಯೇ ಯಜ್ಞಮಾಡುವ ಯಜಮಾನರೂ ಇಂದ್ರನನ್ನು ಯಜ್ಞಗಳಲ್ಲಿ ಪೂಜಿಸಲು ಪ್ರಯತ್ನಪಡುವುದರ ವಿಷಯವು ಸಹ ವಿವೃತವಾಗಿದೆ

**ಸಮತ್ಸು ಸತಾಂ ಉರಾಣಂ**— ಇಲ್ಲಿ ಇಂದ್ರನನ್ನು ಶೂರ ಎಂಬ ಪದದಿಂದ ಸಂಬೋಧಿಸಿ, ಯುದ್ಧಕಾಲ ಗಳಲ್ಲಿ ಇಂದ್ರನು ತನ್ನನ್ನು ಆಶ್ರಯಿಸಿರುವ ಪ್ರಾಣಿಗಳಿಗೂ **ಉರೂಣಿ ಅತಿಪ್ರಭೂತಾನಿ ಬಲಾದೀನಿ ಕುರ್ವಾಣಂ** ಅತಿಶಯವಾದ ಸಾಮರ್ಥ್ಯವೇ ಮೊದಲಾದುವುಗಳು ಉಂಟಾಗುವಂತೆ ಅನುಗ್ರಹಿಸುವನೆಂದು ಅರ್ಥವನ್ನು ವಿವರಿಸಿದೆ. ಸಮತ್ಸು ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ—

**ಸಮದಃ ಸಮದೋ ವಾತ್ತೇಃ; ಸಂಮದೋ ವಾ ಮದತೇಃ ।**

(ನಿ. ೯-೧೭)

ಎಂಬ ವಿಕಲ್ಪವನ್ನು ಹೇಳಿದ್ದಾರೆ. ಎಂದರೆ, **ಸಮ್** ಎಂಬ ಉಪಸರ್ಗವು **ಅದ್** ಧಾತುವಿನೊಡನೆ ಸೇರಿ **ಸಮದ್** ಎಂದಾಗಬಹುದು. ಅಥವಾ, ಉದ್ರೇಕದಿಂದ ಕೆರಳು ಎಂಬರ್ಥವುಳ್ಳ **ಮದ್** ಧಾತುವಿನೊಡನೆ **ಸಮ್** ಉಪಸರ್ಗವು ಸೇರಿ **ಸಮದ್** ಆಗಬಹುದು ಎಂಬ ನಿಷ್ಪತ್ತಿಯನ್ನು ತೋರಿಸಿದ್ದಾರೆ. ಮತ್ತು **ಸಮತ್ಸು** ಎಂಬ ಪದವು ಪ್ರಯುಕ್ತ ರಾಗಿರುವ,

**ಆ ಜಂಘಂತಿ ಸಾನ್ವೇಷಾಂ ಜಘನಾँ ಉಪ ಜಿಘ್ನತೇ ।**
**ಅಶ್ವಾಜನಿ ಪ್ರಚೇತಸೋಽಶ್ವಾನ್ತ್ಸಮತ್ಸು ಚೋದಯ ॥**

(ಋ. ಸಂ. ೬-೭೫-೧೩).

ಎಂಬ ಋಕ್ಕನ್ನುದಾಹರಿಸಿ ಅಲ್ಲಿ ಈ ಪದದ ವಿಶೇಷಾರ್ಥವನ್ನು ತಿಳಿಸಿದ್ದಾರೆ.

**ಪ್ರಪಂಥಿತಮಂ— ಸುಕೃತಿನಾಮುತ್ತಮಮಾರ್ಗಭೂತಂ** ಇಂದ್ರನು ಪುಣ್ಯವಂತರಾದವರಿಗೆ ಉತ್ತಮ ವಾದ ಮಾರ್ಗವನ್ನು ತೋರಿಸುವವನಾಗಿರುವನಾದಕಾರಣ ಕಾರಣಕಾರ್ಯಗಳಿಗೆ ಅಭೇದವ್ಯಪದೇಶದಿಂದ ಉತ್ತಮ ಮಾರ್ಗವೇ ಆಗಿರುವನೆಂದು ನಿರ್ದೇಶಮಾಡಿದೆ.

**ಇಂದ್ರಂ— ಶತ್ರೂಣಾಂ ದಾರಕಂ** ನಿರುಕ್ತಕಾರರು ಇಂದ್ರಶಬ್ದಾರ್ಥವನ್ನು ಅನೇಕವಿಧವಾಗಿ ನಿರ್ವಚನ ಮಾಡಿದ್ದಾರೆ. ಸಾಯಣರು ಅದರಲ್ಲಿ **ಇಂದರ್ಶ ಶತ್ರೂಣಾಂ ದಾರಯಿತಾ** (ನಿ. ೧೦-೮) ಇಂದ್ರನು ಶತ್ರುಗಳನ್ನು ಸೀಳುವವನು ಎಂಬ ಅರ್ಥವನ್ನು ಅನುಸರಿಸಿ ಶತ್ರುಗಳನ್ನು ನಾಶಮಾಡುವವನೆಂಬ ಅರ್ಥವನ್ನು ಇಲ್ಲಿ ವರ್ಣಿಸಿದ್ದಾರೆ.

**ಸಜೋಷಸಃ ಕ್ಷೋಣೀಃ—ಸಹ ಸೇವಮಾನಾಃ ಸಮಾನಪ್ರೀತಯೋ ವಾ ಕ್ಷೋಣ್ಯೋ ವಿಶಃ ಪರಿಜನಾಃ |** ಈ ಎರಡು ಪದಗಳನ್ನು ಮರುದ್ದೇವತೆಗಳಿಗೆ ವಿಶೇಷಣವೆಂದು ನಿರ್ವಚನವನ್ನು ಮಾಡಿ ಅರ್ಥವನ್ನು ವಿವರಿಸಿದ್ದಾರೆ. ಮರುದ್ದೇವತೆಗಳು ಅನೇಕರಾಗಿರುವವರಾದರೂ (ಏಕೋನ ಪಂಚಾಶತ್ಸಂಖ್ಯಾಕಾಃ—ನಲವತ್ತೊಂಭತ್ತು ಜನರು) ಅವರಲ್ಲಿ ಐಕಮತ್ಯದಿಂದ ಪ್ರೀತಿಯಿಂದ ಇರುವರು ಅಥವಾ ಇಂದ್ರನನ್ನು ಒಂದೇ ವಿಧವಾದ ಪ್ರೀತಿಯಿಂದ ಎಲ್ಲರೂ ಸೇವಿಸುವವರು ಎಂದೂ, ಇಂದ್ರನ ಸ್ನೇಹಿತರಂತೆ ಇರುವವರಾದರೂ, ಪ್ರಜೆಗಳ ಹಾಗೆ ಇರುವರೆಂಬ ಅರ್ಥವನ್ನು ವಿವರಿಸಿದೆ.

**ಯೇ ವಾಜೈಃ ಅನು ಮದಂತಿ—**ಈ ವಾಕ್ಯಕ್ಕೆ ಮರುತ್ತುಗಳ ವಿಷಯವಾಗಿಯೂ, ಯಜಮಾನರ ವಿಷಯವಾಗಿಯೂ ಎರಡು ವಿಧವಾದ ಅರ್ಥವನ್ನು ವಿವರಿಸಿದೆ. ಮೊದಲನೆಯದಾಗಿ, **ಮರುತಸ್ತ್ವಮೇವ ಸ್ವಾಮಿನಂ ಕೃತ್ವಾ ಸಂಗ್ರಾಮೇ ಬಲೈಃ ಹರ್ಷಯಂತಿ |** ಮರುದ್ದೇವತೆಗಳು ಇಂದ್ರನನ್ನೇ ಪ್ರಭುವನ್ನಾಗಿ ತಿಳಿದು ಯುದ್ಧಕಾಲಗಳಲ್ಲಿಯೂ ತಮ್ಮ ಸಾಮರ್ಥ್ಯದಿಂದ ಸಂತೋಷಪಡಿಸುತ್ತಾರೆ ಎಂಬ ಅರ್ಥವನ್ನು ಹೇಳಿದೆ. ಈ ಅರ್ಥದಲ್ಲಿ ವಾಜ ಶಬ್ದವು ಬಲ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಯಾಸ್ಕರು ವಾಜ ಶಬ್ದವು ಅನ್ನನಾಮಗಳಲ್ಲಿಯೂ, (ನಿ. ೩-೯) ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಒಬ್ಬನ ಹೆಸರೆಂದೂ (ನಿ. ೧೧-೧೭) ವರ್ಣಿಸಿ,

**ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ | ಯಜ್ಞಂ ವಷ್ಟು ಧಿಯಾವಸುಃ |**

(ಋ. ಸಂ. ೧-೩-೧೦).

ಈ ಋಕ್ಕಿನಲ್ಲಿ **ಹವಿಷೋದಕೇನ ವಾ** ಹವಿಸ್ಸು ಅಥವಾ ಉದಕ ಎಂಬ ಅರ್ಥವನ್ನು ವಿವರಿಸಿದ್ದಾರೆ.

ಎರಡನೆಯದಾಗಿ, ಯೇ ಯಜಮಾನಾಃ ಯಜ್ಞಮಾಡುವ ಯಜಮಾನರು **ವಾಜೈಃ ಹವಿರ್ಭಿರ್ಮಾದಯಂತಿ ತೇ ಸಮಾನಪ್ರೀತಿಯುಕ್ತಾಃ ತವ ಮನುಷ್ಯಭೂತಾ ಋತ್ವಿಜಃ ಯಜಮಾನಭೂತಾಃ ಪ್ರಜಾಃ ಸಮತ್ಸು ಸಹಮಾದನಸ್ಥಾನೇಷು ಯಾಗೇಷು ಉತ್ಕೃಲಕ್ಷಣವಿಶಿಷ್ಟಂ ತ್ವಾಮೇವ ಪೂಜಯಿತುಂ ತವ ಮಾದಾಯ ಚ ಪ್ರಯತಂತೇ |** ಇಂದ್ರನ ವಿಷಯದಲ್ಲಿ ಒಂದೇ ಪ್ರೀತಿಯುಳ್ಳವರಾಗಿ ಹವಿಸ್ಸುಗಳಿಂದ ಇಂದ್ರನಿಗೆ ಹರ್ಷವನ್ನು ಉಂಟುಮಾಡುತ್ತಾರೆ. ಅವರು ಮನುಷ್ಯರ ರೂಪದಿಂದ ಇರುವ ಋತ್ವಿಜರಾಗಿಯೂ, ಯಜಮಾನರಾಗಿಯೂ, ಇರುವ ಇಂದ್ರನ ಪ್ರಜೆಗಳಾಗಿ, ಇಂದ್ರನಿಗೂ ತಮಗೂ, ಹರ್ಷವನ್ನು ಉಂಟುಮಾಡುವ ಸನ್ನಿವೇಶವಾದ ಯಾಗಗಳಲ್ಲಿ ಪ್ರಭೂತವಾದ ಮಾಹಾತ್ಮ್ಯದಿಂದ ಯುಕ್ತನಾಗಿರುವ ಇಂದ್ರನನ್ನು ಪೂಜಿಸಿ, ಅವನಿಗೆ ಹರ್ಷವನ್ನು ಉಂಟುಮಾಡುವುದಕ್ಕಾಗಿ ಯತ್ನಿಸುತ್ತಾರೆ ಎಂದು ಅರ್ಥವನ್ನು ವಿವರಿಸಿದೆ.

**ಸಮತ್ಸು** ಎಂಬ ಪದವು ಸಂಗ್ರಾಮ ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಸಾಯಣರು ಇಲ್ಲಿ ಈ ಪದವನ್ನು **ಸಹಮಾದನಸ್ಥಾನೇಷು ಯಾಗೇಷು** ಎಲ್ಲರಿಗೂ ಏಕಕಾಲದಲ್ಲಿ ಮದವನ್ನು ಹೆಚ್ಚಿಸುವ ಸನ್ನಿವೇಶವಾದ ಯಜ್ಞವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಹೇಳಿ, ಅರ್ಥವನ್ನು ವಿವರಿಸಿದ್ದಾರೆ.

ಸಾಯಣರು ಈ ಋಕ್ಕಿನಲ್ಲಿ **ಸೂರಿಂಚಿತ್** ಎಂಬ ಪದದ ಅರ್ಥವನ್ನು ವಿವರಿಸಿಲ್ಲ.

**ಸೂರಯಃ—ರೇಭಃ, ಜರಿತಾ, ಕಾರುಃ** ಇತ್ಯಾದಿ ೧೩ ಸ್ತೋತೃನಾಮಗಳಲ್ಲಿ ನಿರುಕ್ತಕಾರರು ಈ ಪದವನ್ನು ಪಠಿಸಿದ್ದಾರೆ. (ನಿ. ೩-೧೯) **ಸೂರಿ** ಯೆಂದರೆ ಸ್ತುತಿಮಾಡತಕ್ಕ ಭಕ್ತನಾಗಬಹುದು. ಅಥವಾ ಪ್ರಾಜ್ಞ, ವಿವೇಕಿ, ಮೇಧಾವಿ ಎಂದೂ ಆಗಬಹುದು. ದೇವತೆಗಳ ತತ್ತ್ವಸ್ವರೂಪಗಳನ್ನೂ, ವಿಶ್ವದ ರಹಸ್ಯತತ್ತ್ವಗಳನ್ನೂ

ಗ್ರಹಿಸುವುದೂ ಅಲೌಕಿಕವಾದುದೂ ಆದ ಮತ್ತು ಚಾಕ್ಷುಷವೂ, ಮಾನಸಿಕವೂ ಆದ ದರ್ಶನಶಕ್ತಿಯದ್ನು ಪಡೆದಿರುವ ಋಷಿಗಳಿಗೆ ವಿಶೇಷಣವಾಗಿ ಉಪಯೋಗಿಸಿದಾಗ ಈ ಪದಕ್ಕೆ ಒಂದು ವಿಶೇಷಾರ್ಥವಿರುತ್ತದೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।**

(ಋ. ಸಂ. ೧-೨೨-೨೦).

ಇತ್ಯಾದಿ ಸನ್ನಿವೇಶಗಳಲ್ಲಿ ಕೇವಲ ಸ್ತೋತ್ರಮಾಡತಕ್ಕವರು ಎಂದು ಮಾತ್ರವಾಗದೇ, ಋಷಿಗಳ ಅಸಾಧಾರಣವಾದ ದರ್ಶನಶಕ್ತಿಯನ್ನೂ ಸೂಚಿಸುತ್ತದೆ. ಮತ್ತು ಋಷಿಗಳ ಪರವಾಗಿ ಮಾತ್ರವಲ್ಲದೇ ಇಂದ್ರಾದಿ ದೇವತೆಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ।**

(ಋ. ಸಂ. ೧-೬೧-೩).

ಇತ್ಯಾದಿ ಋಕ್ಕುಗಳಲ್ಲಿ **ವಿಪಶ್ಚಿತಮಿಂದ್ರಂ** ಎಂದು ಇಂದ್ರಾದಿ ದೇವತೆಗಳ ಪ್ರಾಜ್ಞತ್ವವನ್ನು ತಿಳಿಸುತ್ತದೆ. ಇದಲ್ಲದೇ, **ಪ್ರಭು, ಪ್ರೇರಕ, ಸನ್ಮಾರ್ಗಪ್ರವರ್ತಕ** ಎಂಬ ಅರ್ಥವನ್ನು ಸೂಚಿಸುವಾಗಲೂ **ಸೂರಿ** ಶಬ್ದದ ಪ್ರಯೋಗವಿದೆ. ಮತ್ತು ಉದಾಹರಣೆಗಾಗಿ,

**ಜನೋ ಯಃ ಪಜ್ರೇಭ್ಯೋ ವಾಜಿನೀವಾನಶ್ವಾವತೋ ರಥಿನೋ ಮಹ್ಯಂ ಸೂರಿಃ ।**

(ಋ. ಸಂ. ೧-೧೨೨-೮).

**ಅಸದ್ಯಥಾ ಜರಿತ್ರ ಉತ ಸೂರಿರಿಂದ್ರೋ ರಾಯೋ ವಿಶ್ವವಾರಸ್ಯ ದಾತಾ ।**

(ಋ. ಸಂ. ೬-೨೩-೧೦).

**ಮಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ।**

(ಋ. ಸಂ. ೧೦-೮೧-೬).

ಎಂಬಿವೇ ಮುಂತಾದ ಸನ್ನಿವೇಶಗಳಲ್ಲಿ ಪ್ರಭುಗಳೂ ಸನ್ಮಾರ್ಗಪ್ರವರ್ತಕರೂ ಆದ ದೇವತೆಗಳನ್ನು ಕುರಿತು ಈ ವಿಶೇಷಣವು ಪ್ರಯುಕ್ತವಾಗಿ ಅವರ ಗುಣವನ್ನು ವರ್ಣಿಸುತ್ತದೆ.

**ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ ವಯಃ ।**

(ಋ. ಸಂ. ೧-೧೪೧-೮).

ಇತ್ಯಾದಿ ಸನ್ನಿವೇಶಗಳಲ್ಲಿ **ಮಾರ್ಗ** ವೆಂಬರ್ಥವನ್ನೂ ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಮೇಧಾವಿ ಅಥವಾ ಪ್ರಭುವೆಂದರ್ಥಮಾಡಬಹುದು.

**ಸಜೋಷಸಃ ಕ್ಷೋಣೀಃ**—ಸಮಾನವಾದ ಪ್ರೀತಿಯುಳ್ಳವರು ಮತ್ತು ಪರಿಜನರೂಪರು ಎಂದು ಇಂದ್ರನಿಗೂ ಮರುತ್ತುಗಳಿಗೂ ಇರತಕ್ಕ ಶಾಶ್ವತವಾದುದೂ ನಿಕಟವಾದುದೂ ಆದ ಸಂಬಂಧವನ್ನು ತಿಳಿಸಿದೆ. ಈ ಸಂಬಂಧದ ವಿಷಯವನ್ನು ಹಿಂದೆ ಇದೇ ಭಾಗದಲ್ಲಿ ೧-೧೭೧-೪ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಈ ವಿಧವಾದ ಸಾಹಚರ್ಯವಿರುವುದರಿಂದಲೇ ಮರುತ್ತುಗಳೊಡಗೂಡಿರುವ ಇಂದ್ರನನ್ನು ಉದ್ದೇಶಿಸಿರುವ ಸಮಯಗಳಲ್ಲೆಲ್ಲಾ ಇಂದ್ರನನ್ನು **ಮರುತ್ವಾನ್** ಎಂದು ಕರೆದಿದೆಯೆಂದು ಬೃಹದ್ದೇವತೆಯಲ್ಲಿ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ.

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।** (ಬೃ. ದೇ. ೪-೫೬).

ಇತ್ಯಾದಿ ವಾಕ್ಯಗಳಿಂದ ಮರುತ್ತುಗಳ ಮತ್ತು ಇಂದ್ರನ ಸಜೋಷತ್ವವನ್ನು ತಿಳಿಸಿದೆ. **ಕ್ಷೋಣೀಃ** ಎಂಬುದಕ್ಕೆ **ವಿಶಃ** ಎಂದರ್ಥಮಾಡಿದೆ ಇಂದ್ರನೇ ಪ್ರಭು ಮತ್ತು ಮರುತ್ತುಗಳೇ ಪ್ರಜೆಗಳು ಎಂಬ ಸಂಬಂಧವನ್ನು ತಿಳಿಸುವ ಶತಪಥಾದಿ ಬ್ರಾಹ್ಮಣಗಳ ವಾಕ್ಯಗಳನ್ನೂ ಹಿಂದೆ ೧-೧೭೧-೪ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ಉದಾಹರಿಸಿ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸತಾಮ್**—ಷಷ್ಠೀ ಬಹುವಚನಾಂತರೂಪ. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪ್ರಪಥಿನ್ತಮಮ್**—**ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ತಮಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಪರಿತಂಸಯಧ್ಯೈ**—ಪರಿ ಉಪಸರ್ಗೇ. ತಸಿ ಅಲಂಕಾರೇ. ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಇದಕ್ಕೆ ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಅಧ್ಯೈ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಏಜಂತ ಕೃದಂತವಾದುದರಿಂದ ಅವ್ಯಯ ಸಂಜ್ಞಾ ಬರುತ್ತದೆ.

**ಸಜೋಷಸಃ**—ಸಮಾನಂ ಜೋಷಃ ಯೇಷಾಂ ತೇ ಸಜೋಷಸಃ **ಸಮಾನಸ್ಯ ಛಂದಸ್ಯ**—ಎಂಬುದರಿಂದ ಸಮಾನ ಶಬ್ದಕ್ಕೆ ಸ ಭಾವ.

**ಅನುಮದಂತಿ**—ಮದ ತೃಪ್ತಿಯೋಗೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅನು) ನಿಘಾತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಏವಾ ಹಿ ತೇ ಶಂ ಸವನಾ ಸಮುದ್ರ ಆಪೋ ಯತ್ತ ಆಸು ಮದಂತಿ ದೇವೀಃ ।
ವಿಶ್ವಾ ತೇ ಅನು ಜೋಷ್ಯಾ ಭೂದ್ಗೌಃ ಸೂರೀಂಶ್ಚಿದ್ಯದಿ ಧಿಷಾ ವೇಷಿ ಜನಾನ್ ॥

॥ ಪದಪಾಠಃ ॥

ಏವ । ಹಿ । ತೇ । ಶಂ । ಸವನಾ । ಸಮುದ್ರೇ । ಆಪಃ । ಯತ್ । ತೇ । ಆಸು । ಮದಂತಿ । ದೇವೀಃ ।

ವಿಶ್ವಾ । ತೇ । ಅನು । ಜೋಷ್ಯಾ । ಭೂತ್ । ಗೌಃ । ಸೂರೀನ್ । ಚಿತ್ । ಯದಿ । ಧಿಷಾ । ವೇಷಿ । ಜನಾನ್ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಏವಾ ಹ್ಯೇವಂ ಹಿ ಸತಿ ತೇ ತವ ಸಂಬಂಧೀನಿ ಸವನಾನಿ । ಸೂಯಂತೇ ಸೋಮೋಽತ್ರೇತಿ ಸವನಾನಿ ಸೋಮಯಾಗಾಃ । ತೇ ಶಂ ಸುಖಕರಾ ಭವಂತಿ । ಕಥಂ ಸತಿ । ಯದ್ಯದಿ ದೇವೀರ್ದೇವ್ಯೋ ದ್ಯೋತಮಾನಾ ಆಪಃ ಸಮುದ್ರ ಉದಕಸಮುದ್ದ್ರವಣಾಪಾದಾನಭೂತೇಽಂತರಿಕ್ಷ ಆಸು ಪ್ರಜಾಸು ನಿಮಿತ್ತಭೂತಾಸು ತೇ ತ್ವಾಂ ಮದಂತಿ ಮಾದಯಂತಿ ॥ ಅಂತರ್ಭಾವಿತಣ್ಯರ್ಥೋಽಯಂ ॥ ಯದಾ ಪ್ರಾಣ್ಯುಪಕಾರಾರ್ಥಂ ವರ್ಷಣಾಯ ತ್ವಾಂ ಪ್ರೇರಯಂತಿ ವೃಷ್ಟ್ಯುದಕಾನಿ ತದಾ ಖಲು ತವ ಸೋಮಯಾಗಾಃ ಸುಖಕರಾ ಭವಂತಿ ಯಜ್ಞಸಾಧನವೃಷ್ಟಿಪ್ರದಾನೇನ ಯಾಗಾನ್ನಿರ್ವರ್ತಯೇತ್ಯರ್ಥಃ । ಕಿಂಚ ಹೇ ಇಂದ್ರ ವಿಶ್ವಾ ಗೌಃ ಸರ್ವಾಪಿ ಸ್ತೋತ್ರಶಸ್ತ್ರರೂಪಾ ವಾಕ್ತೇ ತ್ವಾಮನುಕ್ರಮೇಣ ಜೋಷ್ಯಾ ಜೋಷಣಾರ್ಹಾ ಪ್ರೀಣಯಿತ್ರೀ ಭೂತ್ । ಭವತಿ । ಕದಾ । ಯದಿ ಸೂರೀಂಶ್ಚಿತ್ ಸ್ತೋತ್ರಾದಿ-ಪ್ರೇರಯಿತ್ನ್ಯಾನ್ ಸ್ತೋತೃಜನಾನಪಿ ಧಿಷಾ ಧಿಷಣಯಾ ಪ್ರಜ್ಞಯಾ ವೃಷ್ಟಿಪ್ರದಾನರೂಪೇಣ ಕರ್ಮಣಾ ವಾ ವೇಷಿ ಕಾಮಯಸೇ ತದಾ ಸರ್ವಾಪಿ ಸ್ತುತಿಸ್ತ್ವದರ್ಥಾ ಭವತಿ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ದೇವೀಃ**—ದ್ಯೋತಮಾನವಾದ (ದಿವ್ಯವಾದ) । **ಆಪಃ**—ಉದಕಗಳು । **ಸಮುದ್ರೇ**—ಅಂತರಿಕ್ಷದಲ್ಲಿ । **ಆಸು**—ಪ್ರಜೆಗಳ ವಿಷಯದಲ್ಲಿ । **ತೇ**—ನಿನಗೆ । **ಯತ್ ಮದಂತಿ**—ಸಂತೋಷವುಂಟುಮಾಡಿದರೆ । **ಏವಾ ಹಿ**—ಹೀಗಾದರೆ । **ತೇ**—ನಿನ್ನ ಸಂಬಂಧವಾದ । **ಸವನಾ**—ಸೋಮಯಾಗಗಳು । **ಶಂ**—(ನಿನಗೆ) ಸುಖಕರವಾಗುತ್ತವೆ (ಮತ್ತು) । **ಯದಿ**—ಯಾವಾಗ । **ಸೂರೀನ್ ಚಿತ್**—ಸ್ತೋತ್ರಾದಿ ಪ್ರೇರಕರಾದವರನ್ನು । **ಧಿಷಾ**—ಜ್ಞಾನದಿಂದ (ವೃಷ್ಟಿಪ್ರದಾನರೂಪಕರ್ಮದಿಂದ) । **ವೇಷಿ**—ಅಪೇಕ್ಷಿಸುತ್ತೀಯೋ । **(ತದಾ**—ಆಗ) । **ವಿಶ್ವಾ ಗೌಃ**—ಸ್ತೋತ್ರ ಮತ್ತು ಶಸ್ತ್ರರೂಪವಾದ ಸಮಸ್ತ ವಾಕ್ಕೂ । **ಅನು**—ಕ್ರಮವಾಗಿ । **ತೇ**—ನಿನಗೇ । **ಜೋಷ್ಯಾ**—ಪ್ರೀತಿಕರವಾಗಿ । **ಭೂತ್**—ಆಗುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಾಣಿಗಳ ಉಪಕಾರಾರ್ಥವಾಗಿ ವೃಷ್ಟ್ಯುದಕಗಳು ಮಳೆಗರೆಯುವಂತೆ ನಿನಗೆ ಪ್ರೇರಿಸಿದಾಗ ಸೋಮಯಾಗಗಳು ನಿನಗೆ ಸುಖಕರವಾಗುತ್ತವೆ; ಮತ್ತು, ಸ್ತೋತ್ರಗಳು ನಿನ್ನಿಂದ ಜ್ಞಾನವನ್ನು ಪಡೆದಮೇಲೆಯೇ. ಸಮಸ್ತ ಸ್ತೋತ್ರಶಸ್ತ್ರರೂಪಸ್ತುತಿಗಳು ನಿನ್ನನ್ನು ಸೇರುವುದು.

## English Translation.

The libations (offered) to you are, verily, the cause of happiness, since the divine waters (effused) in the firmament for the benefit of mankind

afford you satisfaction. All praise, Indra, is acceptable to you, and you reward with understanding those who praise you.

॥ ವಿಶೇಷವಿಷಯಗಳು ॥

**ಸವನಾ— ಸೂಯತೇ ಸೋಮಃ ಅತ್ರೇತಿ ಸವನಾನಿ ಸೋಮಯಾಗಾಃ । ಸವನ** ಎಂಬ ಪದವು ಯಜ್ಞನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ।**

(ಋ. ಸಂ. ೧೦-೫೦-೬).

ಈ ಋಕ್ಕಿನಲ್ಲಿ ಸವನಾ ಎಂಬ ಪದಕ್ಕೆ ಸ್ಥಾನಾನಿ ಎಂಬ ಅರ್ಥವನ್ನು ವಿವರಿಸಿದೆ. ಸೋಮರಸವನ್ನು ಹಿಂಡುವ ಸನ್ನಿವೇಶಗಳಾದ ಸೋಮಯಾಗಗಳು ಸವನ ಶಬ್ದಾರ್ಥವೆಂದು ಇಲ್ಲಿ ವರ್ಣಿಸಿದೆ.

ಇಲ್ಲಿ ಸವನಪದದಿಂದ ಪೃಥಿವ್ಯಂತರಿಕ್ಷಗಳಿಗೆ ಪರಸ್ಪರವಾದ ಸಂಬಂಧವನ್ನು ಕಲ್ಪಿಸುವ ಯಜ್ಞದ ಪ್ರಾಮುಖ್ಯವೂ, ಈ ಯಜ್ಞಕ್ಕೆ ಪ್ರಭುವಾದವನೂ ಮತ್ತು ಈ ಯಜ್ಞದಿಂದ ತೃಪ್ತಿಯನ್ನು ಪಡೆಯುವವನೂ ಅದರಿಂದ ಲೋಕಾನುಗ್ರಹವನ್ನು ಮಾಡತಕ್ಕವನೂ ಆದ ಇಂದ್ರನಿಗೂ ಯಜ್ಞಕ್ಕೂ ಇರತಕ್ಕ ಸಂಬಂಧವೂ ಸೂಚಿತವಾಗಿದೆ. ಸವನವು ಪೃಥಿವ್ಯಂತರಿಕ್ಷಗಳೆರಡರ ಸುಖಶಾಂತಿಗಳಿಗೂ ಮುಖ್ಯಸಾಧನವೆಂಬಂಶವೂ ಸೂಚಿತವಾಗಿದೆ.

ಸವನ ಪದದ ಅರ್ಥವು ಬಹಳ ಗೂಢವಾದುದು. ಇದು ವಿಶ್ವತತ್ತ್ವವನ್ನು ಪ್ರತಿಬಿಂಬಿಸತಕ್ಕದ್ದು. ಯಜ್ಞಕ್ಕೆ ಸವನತ್ರಯವೆಂಬ ವಿಭಾಗವಿರುವಂತೆ ವಿಶ್ವವ್ಯವಹಾರದಲ್ಲೂ ಈ ವಿಭಾಗವನ್ನನುಸರಿಸುವ ಪ್ರಭೇದಗಳಿರುವುದೆಂದೂ ಮತ್ತು ಪ್ರತಿಯೊಂದು ವೈಯಕ್ತಿಕ-ಜೀವನದಲ್ಲೂ ಸಹ ಸವನತ್ರಯಕ್ಕನುಗುಣವಾದ ಅವಸ್ಥಾತ್ರಯವುಂಟೆಂದೂ, ಬ್ರಾಹ್ಮಣಾದಿವರ್ಣಗಳ ಸೃಷ್ಟಿಯೂ ಈ ವಿಭಾಗವನ್ನೇ ಅನುಸರಿಸುತ್ತವೆಯೆಂದೂ ಶ್ರುತಿವಾಕ್ಯಗಳ ವರ್ಣನೆಯೇ ಇರುತ್ತದೆ. ಅಲ್ಲದೇ, ಸವನತ್ರಯಕ್ಕೆ ಅಧಿದೇವತೆಗಳಾಗಿರುವ ಇಂದ್ರಾದಿ ದೇವತೆಗಳೇ, ವಿಶ್ವತತ್ವದ ವಿಭಾಗಗಳನ್ನೂ ನಿಯಮಿಸಿ ಅವನ್ನು ಪ್ರತಿಬಿಂಬಿಸುತ್ತಾರೆಂಬ ವಿವರಣೆಯು ಸಕಲವಾದ ಶ್ರುತಿಗಳಲ್ಲಿಯೂ ಇರುತ್ತದೆ. ಮತ್ತು ಪ್ರತಿಯೊಂದು ಸವನವೂ ಸಹ ಅದರ ಅಧಿದೇವತೆಯನ್ನೂ, ತತ್ಸಂಬಂಧವಾದ ಛಂದಸ್ಸನ್ನೂ ಮತ್ತು ಸೃಷ್ಟಿಕರ್ಮವನ್ನೂ ಸೂಚಿಸುತ್ತದೆ. ಆದರೆ ತೃತೀಯಸವನದ ದೇವತೆಯ ವಿಷಯದಲ್ಲಿ ಮಾತ್ರ ಶ್ರುತಿಯಲ್ಲಿಯೇ ವಿಪ್ರತಿಪತ್ತಿಯಿರುತ್ತದೆ. ಸವನದ ಮಾಹಾತ್ಮ್ಯವನ್ನು ಕುರಿತು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ಹೇಳಿದೆ.

**ಪ್ರಜಾಪತಿರ್ವಾವ ಜ್ಯೇಷ್ಠಸ್ಸ ಹ್ಯೇತೇ ನಾಗ್ರೇಽಯಜತ ಪ್ರಜಾಪತಿರಕಾಮಯತ ಪ್ರಜಾಯೇಯೇತಿ ಸ ಮುಖತಸ್ತ್ರಿವೃತಂ ನಿರಮಿಮೀತ ತಮಗ್ನಿರ್ದೇವತಾನ್ವಸೃಜ್ಯತ ಗಾಯತ್ರೀ ಛಂದೋ ರಥಂತರಗ್ಂಸಾಮ ಬ್ರಾಹ್ಮಣೋ ಮನುಷ್ಯಾಣಾಮಜಃ ಪಶೂನಾಂ ತಸ್ಮಾತ್ತೇ ಮುಖ್ಯಾ ಮುಖತೋ ಹ್ಯಸೃಜ್ಯಂತೋರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾನ್ವಸೃಜ್ಯತ ತ್ರಿಷ್ಟುಪ್‌ಛಂದೋ ಬೃಹತ್ಸಾಮ ರಾಜನ್ಯೋ ಮನುಷ್ಯಾಣಾಮವಿಃ ಪಶೂನಾಂ ತಸ್ಮಾತ್ತೇ ವೀರ್ಯಾವಂತೋ ವೀರ್ಯಾದ್ಧ್ಯಸೃಜ್ಯಂತ ಮಧ್ಯತಸ್ಸ-**

**ಪ್ತದಶಂ ನಿರಮಿಮೀತ ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀಛಂದೋ ವೈರೂಪಗ್ಂ ಸಾಮ ವೈಶ್ಯೋ ಮನುಷ್ಯಾಣಾಂ ಗಾವಃ ಪಶೂನಾಂ ತಸ್ಮಾತ್ತ ಆದ್ಯಾ ಅನ್ನಧಾನಾದ್ಧ್ಯಸೃಜ್ಯಂತ ತಸ್ಮಾದ್ಭೂಯಾಗ್ಂಸೋನ್ಯೇಭ್ಯೋ ಭೂಯಿಷ್ಠಾ ಹಿ ದೇವತಾ ಅನ್ವಸೃಜ್ಯಂತ ಪತ್ತ ಏಕವಿಗ್ಂಶಂ ನಿರಮಿಮೀತ ॥**

(ತೈ. ಸಂ. ೭-೧-೧-೪, ೫).

ಪ್ರಾರಂಭದಲ್ಲಿ ಯಜ್ಞವನ್ನು ನೆರವೇರಿಸಿದುದರಿಂದ ಪ್ರಜಾಪ್ರತಿಯು ಶ್ರೇಷ್ಠನು. ಸೃಷ್ಟಿಕಾರ್ಯವನ್ನು ಮಾಡ ಬೇಕೆಂದಿಚ್ಛಿಸಿ ಮುಖದಿಂದ ತ್ರಿವೃತ್ಸ್ತೋಮವನ್ನು ಸುರಿಸಿದನು. ಅದರಿಂದ ದೇವತೆಗಳಲ್ಲಿ ಅಗ್ನಿಯೂ, ಛಂದಸ್ಸುಗಳಲ್ಲಿ ಗಾಯತ್ರಿಯೂ, ಸಾಮಗಳಲ್ಲಿ ರಥಂತರವೂ, ಮನುಷ್ಯರಲ್ಲಿ ಬ್ರಾಹ್ಮಣನೂ, ಪಶುಗಳಲ್ಲಿ ಅಜವೂ ಉತ್ಪನ್ನವಾದುವು. ಬಾಹುವಿನಿಂದ ಪಂಚದಶಸ್ತೋಮವನ್ನು ಸುರಿಸಿದಾಗ ದೇವತೆಗಳಲ್ಲಿ ಇಂದ್ರನೂ, ಛಂದಸ್ಸುಗಳಲ್ಲಿ ತ್ರಿಷ್ಟುಪ್ಪೂ, ಸಾಮಗಳಲ್ಲಿ ಬೃಹತ್ಸಾಮವೂ, ಮನುಷ್ಯರಲ್ಲಿ ರಾಜನ್ಯನೂ, ಪಶುಗಳಲ್ಲಿ ಮೇಷವೂ ಉತ್ಪನ್ನವಾದುವು. ಮಧ್ಯ ಭಾಗದಿಂದ ಸಪ್ತದಶಸ್ತೋಮವನ್ನು ಸುರಿಸಿದಾಗ ದೇವತೆಗಳಲ್ಲಿ ವಿಶ್ವೇದೇವತೆಗಳೂ, ಛಂದಸ್ಸುಗಳಲ್ಲಿ ಜಗತಿಯೂ ಸಾಮಗಳಲ್ಲಿ ಗೋವೂ ಹುಟ್ಟಿದವು.

ಈ ಕ್ರಮವನ್ನನುಸರಿಸಿಯೇ ಸೋಮಯಾಗದಲ್ಲಿ ಪ್ರಾತಃಸವನದ ಆಹುತಿಯು ಅಗ್ನಿಯನ್ನೂ, ಮಾಧ್ಯಂದಿನ ಸವನದ ಆಹುತಿಯು ಇಂದ್ರನನ್ನೂ, ತೃತೀಯಸವನದ ಆಹುತಿಯು ವಿಶ್ವೇದೇವತೆಗಳನ್ನೂ ಉದ್ದೇಶಿಸಿರುತ್ತದೆ. ಅಥರ್ವವೇದದಲ್ಲಿ ಹೇಳಿರುವಂತೆ ಪ್ರಾತಃಸವನವು ಅಶ್ವಿನೀದೇವತೆಗಳಿಗೂ, ಮಾಧ್ಯಂದಿನಸವನವು ಇಂದ್ರಾಗ್ನಿಗಳಿಗೂ, ತೃತೀಯಸವನವು ಋಭುಗಳಿಗೂ ಉದ್ದಿಷ್ಟವಾಗಿರುತ್ತದೆ. (ಅ. ವೇ. ೯-೧-೨) ಐತರೇಯ ಬ್ರಾಹ್ಮಣದಲ್ಲಿ ಉಕ್ತ ವಾಗಿರುವಂತೆ ತೃತೀಯಸವನವು ಋಭುಗಳಿಗೆ ಸೇರಿದುದಾಗಿರುತ್ತದೆ. ಅದಕ್ಕೆ **ಆರ್ಭವ ಪವಮಾನ**ವೆಂದು ಹೆಸರು. ಆದರೆ ಋಭುಗಳಿಗೆ ದೇವತೆಗಳೊಡನೆ ಯಜ್ಞದಲ್ಲಿ ಹವಿಸ್ಸಿನ ಸ್ವೀಕಾರಕ್ಕೇನು ಅರ್ಹತೆ ಎಂಬುದರ ವಿಷಯದಲ್ಲಿ ಒಂದು ಐತಿಹ್ಯವಿದೆ. ಅದನ್ನು ಐತರೇಯಬ್ರಾಹ್ಮಣವು ಈ ರೀತಿ ವರ್ಣಿಸುತ್ತದೆ.

**ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಸ್ಸವನಾದನುದತ ।**

(ಐ. ಬ್ರಾ. ೧೩-೬).

ಋಭುಗಳು ತಮ್ಮ ಅಲೌಕಿಕವಾದ ಕರ್ಮಶಕ್ತಿಯಿಂದ ದೇವತೆಗಳ ಸ್ಥಾನವನ್ನು ಹೊಂದಿದರು. ಆಗ ದೇವತೆಗಳು ಅವರನ್ನೂ ತಮ್ಮೊಡನೆ ಸೋಮಪಾನಕ್ಕೆ ಸೇರಿಸಿಕೊಳ್ಳಬೇಕೆಂದು ಸಿದ್ಧಪಡಿಸಿದಾಗ **ಅಗ್ನಿಯು** ವಸುಗಳೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು.

**ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸ-ವನಾದನುದತ ।**

(ಐ. ಬ್ರಾ. ೧೩-೬).

ಅನಂತರ ಮಾಧ್ಯಂದಿನದಲ್ಲಿ ಅವಕಾಶವನ್ನು ಕಲ್ಪಿಸಬೇಕೆಂದು ದೇವತೆಗಳು ಸಿದ್ಧಪಡಿಸಿದಾಗ ರುದ್ರರೊಂದಿಗೆ ಸೇರಿ ಕೊಂಡು **ಇಂದ್ರನು** ಅವರನ್ನು ಅಟ್ಟಿಬಿಟ್ಟನು.

**ತೇಭ್ಯಸ್ತೃತೀಯೆಸವನೇ ನಾಚಿ ಕಲ್ಪಯಿಷಂಸ್ತಾನ್ವಿಶ್ವೇದೇವಾಃ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇ-ವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ||** (ಐ. ಬ್ರಾ. ೬-೧೩).

ತೃತೀಯ ಸವನದ ಕಾಲದಲ್ಲಿ ವಿಶ್ವೇದೇವತೆಗಳು ಇವರನ್ನು ಸೇರಿಸದಿರಲು ಪ್ರಜಾಪತಿಯು ಸವಿತೃವನ್ನು ಕುರಿತು "ಇವರು ನಿನ್ನ ಶಿಷ್ಯರು; ಇವರೊಡನೆ ನೀನು ಪಾನಮಾಡು" ಎಂದಾಗ ಸವಿತೃವೂ ಪ್ರಜಾಪತಿಯೂ ಋಭುಗಳ ಜೊತೆಯಲ್ಲಿ ಪಾನಮಾಡಿದರು ಎಂದು ತೃತೀಯ ಸವನದಲ್ಲಿ ಋಭುಗಳಿಗಿರುವ ಸ್ಥಾನವನ್ನು ತಿಳಿಸಿದೆ. ಐತರೇಯ ಬ್ರಾಹ್ಮಣದ ಬೇರೊಂದು ಕಡೆಯಲ್ಲಿ ಹೇಳಿರುವಂತೆ,

**ಪ್ರಜಾಪತಿರ್ವೈ ಯಜ್ಞಂ ಛಂದಾಂಸಿ ದೇವೋಭ್ಯೋ ಭಾಗಧೇಯಾನಿ ವ್ಯಭಜತ್ಸ ಗಾಯತ್ರೀ-ಮೇವಾಗ್ನಯೇ ವಸುಭ್ಯಃ ಪ್ರಾತಃಸವನೇಽಭಜತ್ತ್ರಿಷ್ಟುಭಮಿಂದ್ರಾಯ ರುದ್ರೇಭ್ಯೋ ಮಧ್ಯಂದಿನೇ ಜಗತೀಂ ವಿಶ್ವೇಭ್ಯೋ ದೇವೇಭ್ಯ ಆದಿತ್ಯೇಭ್ಯಸ್ತೃತೀಯಸವನೇ ||**

(ಐ. ಬ್ರಾ. ೧೨-೨).

ಪ್ರಜಾಪತಿಯು ದೇವತೆಗಳಿಗೆ ಯಜ್ಞಭಾಗಗಳನ್ನೂ ಮತ್ತು ಛಂದಸ್ಸುಗಳನ್ನೂ ವಿಭಾಗಮಾಡಿದನು. ಪ್ರಾತಃಸವನದಲ್ಲಿ ಗಾಯತ್ರಿಯನ್ನು ಅಗ್ನಿಗೂ ಮತ್ತು ವಸುವಿಗೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ಪನ್ನು ಇಂದ್ರನಿಗೂ ರುದ್ರರಿಗೂ, (ಮರುತ್ತುಗಳು ?) ಮತ್ತು ತೃತೀಯಸವನದಲ್ಲಿ ಜಗತಿಯನ್ನು ವಿಶ್ವೇದೇವತೆಗಳಿಗೂ ಮತ್ತು ಆದಿತ್ಯರಿಗೂ ಹಂಚಿದನು.

ಅಗ್ನಿಯು ಬ್ರಾಹ್ಮತೇಜಸ್ಸನ್ನೂ, ಇಂದ್ರನು ಕ್ಷಾತ್ರಶಕ್ತಿಯನ್ನೂ, ವಿಶ್ವೇದೇವತೆಗಳು ವೈಶ್ಯವ್ಯವಹಾರವನ್ನೂ ಪ್ರತಿಬಿಂಬಿಸುವುದರಿಂದ ಸೃಷ್ಟಿಯಲ್ಲಿ ವರ್ಣವ್ಯತ್ಯಾಸಗಳೂ ಸಹ ಈ ಸವನದ ವಿಭಾಗಗಳನ್ನು ಅನುಸರಿಸಿವೆಯೆಂದು ಮೇಲೆ ಉದಾಹರಿಸಿರುವ ತೈತ್ತಿರೀಯಸಂಹಿತಾವಾಕ್ಯಗಳಿಂದ ತಿಳಿಯುತ್ತದೆ. ಛಾಂದೋಗ್ಯೋಪನಿಷತ್ತಿನಲ್ಲಿ ಇದೇ ವಿಭಾಗವನ್ನು ಆಧ್ಯಾತ್ಮಿಕವಾದ ದೃಷ್ಟಿಯಿಂದ ವಿವರಿಸುತ್ತಾ ಈ ರೀತಿ ಹೇಳಿದೆ—

**ಬ್ರಹ್ಮವಾದಿನೋ ವದಂತಿ ಯದ್ವಸೂನಾಂ ಪ್ರಾತಃಸವನಂ ರುದ್ರಾಣಾಂ ಮಾಧ್ಯಂದಿನಂ ಸವನ-ಮಾದಿತ್ಯಾನಾಂ ಚ ವಿಶ್ವೇಷಾಂ ಚ ದೇವಾನಾಂ ತೃತೀಯಸವನಂ ||**

(ಛಾ. ಉ. ೨-೨೪-೧).

ವಸುಗಳಿಗೆ ಪ್ರಾತಃಸವನವೂ, ರುದ್ರರಿಗೆ ಮಾಧ್ಯಂದಿನಸವನವೂ, ಆದಿತ್ಯರಿಗೂ ಮತ್ತು ವಿಶ್ವೇದೇವತೆಗಳಿಗೂ ತೃತೀಯ ಸವನವೂ ವಿಭಕ್ತವಾಗಿವೆಯೆಂದು ತಿಳಿಸಿ ಈ ಸವನಗಳ ಕಾಲಗಳಲ್ಲಿ ಪಠಿಸತಕ್ಕ ಮಂತ್ರವಿಶೇಷಗಳನ್ನು ತಿಳಿಸಿದೆ. ಪೃಥಿವ್ಯಂತರಿಕ್ಷಗಳಲ್ಲೂ, ದ್ಯುಲೋಕದಲ್ಲೂ ಉತ್ತಮವಾದ ಸ್ಥಾನಗಳು ಈ ಸವನಗಳಲ್ಲಿ ಅರ್ಪಿಸತಕ್ಕ ಆಹುತಿಯಿಂದ ಲಭಿಸುವುವು ಎಂದು ಈ ಮಂತ್ರಗಳಿಂದ ತಿಳಿಯುತ್ತದೆ.

**ಲೋಕದ್ವಾರಮಪಾವಾರ್ಣ ಪಶ್ಯೇಮ ತ್ವಾ ವಯಂ..........ಅಥ ಜುಹೋತಿ ನಮೋಽಗ್ನಯೇ ಪೃಥಿವಿಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ ಲೋಕ ಏತಾಸ್ಮಿ ||** (ಛಾ. ಉ. ೨-೨೪).

ಪ್ರಾತಃಸವನದ ಪೂರ್ವಭಾವಿಯಾಗಿ ವಸುಗಳನ್ನುದ್ದೇಶಿಸಿ "ನಿಮ್ಮ ಲೋಕದ ಪ್ರವೇಶಕ್ಕೆ ದ್ವಾರವನ್ನು ತೆಗೆಯಿರಿ. ನಿಮ್ಮ ದರ್ಶನವನ್ನು ನಾವೂ ಪಡೆಯೋಣ" ಎಂದು ಪ್ರಾರ್ಥಿಸಿ ಎಂದು ಅಗ್ನಿಯನ್ನುದ್ದೇಶಿಸಿ ಆಹುತಿಯನ್ನರ್ಪಿಸಿ ಪೃಥ್ವೀಲೋಕದ ಉತ್ತಮಸ್ಥಾನವನ್ನು ಪಡೆಯಲರ್ಹನಾಗುತ್ತಾನೆ. ಇದರಂತೆಯೇ ರುದ್ರರನ್ನೂ ಆದಿತ್ಯರನ್ನೂ ಪ್ರಾರ್ಥಿಸಿ ಅವರನ್ನುದ್ದೇಶಿಸಿ ಮಾಧ್ಯಂದಿನ ಸವನದಲ್ಲೂ ತೃತೀಯಸವನದಲ್ಲೂ ಆಹುತಿಯನ್ನರ್ಪಿಸಿ ಅಂತರಿಕ್ಷ ಲೋಕದಲ್ಲೂ ಮತ್ತು ದ್ಯುಲೋಕದಲ್ಲೂ ಉತ್ತಮವಾದ ಸ್ಥಾನಕ್ಕೆ ಅರ್ಹನಾಗುತ್ತಾನೆ. ಹೀಗೆ ಸವನತ್ರಯದ ಮಹಿಮೆಯನ್ನೂ ತತ್ಸೇವನೆಯ ಫಲವನ್ನೂ ವರ್ಣಿಸಿದೆ. ಅಲ್ಲದೆ—ಮಾನವನ ಪೂರ್ಣವಾದ ಜೀತನವೇ ಸೋಮಯಾಗದ ಪ್ರತಿಬಿಂಬವೆಂದೂ ಕೆಳಗೆ ಹೇಳಿರುವಂತೆ ವರ್ಣಿಸಿದೆ.

**ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿವರ್ಷಾಣಿ ತತ್ಪ್ರಾತಃಸವನಂ ಚತುರ್ವಿಂಶತ್ಯಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ವಾವ ವಸವ ಏತೇ ಹೀದಂ ಸರ್ವಂ ವಾಸಯಂತಿ ॥**

(ಛಾ. ಉ. ೩-೧೬-೧).

ಪುರುಷನೇ ಯಜ್ಞವು. ಇಪ್ಪತ್ತುನಾಲ್ಕು ಅಕ್ಷರಾತ್ಮಕವಾದ ಗಾಯತ್ರೀ ಛಂದಸ್ಸೇ ಪ್ರಾತಃಸವನದ ಛಂದಸ್ಸಾದುದರಿಂದ ಮಾನವನ ಮೊದಲನೆಯ ಇಪ್ಪತ್ತುನಾಲ್ಕು ವರ್ಷಗಳೇ ಪ್ರಾತಃಸವನವು. ವಸುಗಳು ಈ ಆಹುತಿಯ ಅಧಿದೇವತೆಗಳು. ಪ್ರಾಣವೇ ವಸುಗಳು. ಆ ಪ್ರಾಣಗಳೇ ಪೃಥ್ವೀವಾಸಕ್ಕೆ ಸಾಧನಗಳು.

**ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ವಸವ ಇದಂ ಮೇ ಪ್ರಾತಃಸವನಂ ಮಾಧ್ಯಂದಿನಂ ಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ವಸೂನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ ॥**

(ಛಾ. ಉ. ೩-೧೬-೨).

ಒಂದು ವೇಳೆ ಈ ಇಪ್ಪತ್ತುನಾಲ್ಕು ವರ್ಷಗಳ ಅವಧಿಯಲ್ಲಿ ದೇಹಕ್ಕೆ ಆಲಸ್ಯವುಂಟಾದರೆ ಆಗ "ವಾಸಕ್ಕೆ ಸಾಧನಗಳಾದ ಎಲೈ ಪ್ರಾಣ (ವಸು) ಗಳೇ, ನನ್ನ ಈ ಪ್ರಾತಃಸವನವು ಮಧ್ಯದಲ್ಲೇ ವಿಚ್ಛಿನ್ನವಾಗದೇ ಮಾಧ್ಯಂದಿನ ಸವನಕ್ಕೂ ನನ್ನನ್ನು ಒಯ್ಯಲಿ, ನನ್ನ ಈ ಜೀವಯಜ್ಞವು ವಿಚ್ಛಿನ್ನವಾಗದಿರಲಿ" ಎಂದು ವಸುಗಳನ್ನುದ್ದೇಶಿಸಿ ಪ್ರಾರ್ಥಿಸಿದರೆ ಆಗ ಪುರುಷನು ಆಲಸ್ಯದಿಂದ ವಿಮುಕ್ತನಾಗುತ್ತಾನೆ.

**ಅಥ ಯಾನಿ ಚತುರ್ವಿಂಶದ್ವರ್ಷಾಣಿ ತನ್ಮಾಧ್ಯಂದಿನಂ ಸವನಂ ಚತುಶ್ಚತ್ವಾರಿಂಶದಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನಂ ಸವನಂ ತದಸ್ಯ ರುದ್ರಾ ಅನ್ವಾಯತ್ತಾಃ ಪ್ರಾಣಾ ವಾವ ರುದ್ರಾ ಏತೇ ಹೀದಂ ಸರ್ವಂ ರೋದಯಂತಿ ।**

(ಛಾ. ೩-೧೬-೩)

ತ್ರಿಷ್ಟುಪ್ ಛಂದಸ್ಸು ನಲವತ್ತುನಾಲ್ಕು ಅಕ್ಷರಾತ್ಮಕವಾದುದು. ತ್ರಿಷ್ಟುಪೇ ಮಾಧ್ಯಂದಿನಸವನದ ಛಂದಸ್ಸು. ಆದುದರಿಂದ ಮಾನವನ ಎರಡನೆಯ ಅವಸ್ಥೆಯಾದ ಮುಂದಿನ ನಲವತ್ತುನಾಲ್ಕು ವರ್ಷಗಳು ಜೀವಯಜ್ಞದಲ್ಲಿ ಮಾಧ್ಯಂದಿನ ಸವನಾತ್ಮಕವಾದುದು. ಇದರಲ್ಲಿ ರುದ್ರರು ಅನ್ವಾಯತ್ತರಾಗಿದ್ದಾರೆ. ಪ್ರಾಣತ್ಯಾಗವಾದರೆ ಸರ್ವರನ್ನೂ ರೋದಿಸುವಂತೆ ಮಾಡುವುದರಿಂದ ಈ ಪ್ರಾಣಗಳೇ ರುದ್ರರು.

**ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ ಪ್ರಾಣಾ ರುದ್ರಾ ಇದಂ ಮೇ ಮಾಧ್ಯಂದಿನಂ ಸವನಂ ತೃತೀಯಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ರುದ್ರಾಣಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ ।**

(ಛಾ. ೩-೧೬-೪)

ಮಾಧ್ಯಂದಿನಸವನಾತ್ಮಕವಾದ ಈ ನಲವತ್ತುನಾಲ್ಕು ವರ್ಷಗಳ ಅವಧಿಯಲ್ಲೇನಾದರೂ ದೇಹಾಲಸ್ಯವಾದರೆ ಆಗ ರುದ್ರರನ್ನುದ್ದೇಶಿಸಿ "ಎಲೈ ಪ್ರಾಣಾತ್ಮಕರಾದ ರುದ್ರರೇ, ನನ್ನ ಈ ಮಾಧ್ಯಂದಿನದ ಸವನವು ತೃತೀಯ ಸವನದವರೆಗೂ ನನ್ನನ್ನು ಒಯ್ಯಲಿ. ನನ್ನ ಜೀವಯಜ್ಞವು ಮಧ್ಯದಲ್ಲಿ ವಿಚ್ಛಿನ್ನವಾಗದಿರಲಿ" ಎಂದು ಪ್ರಾರ್ಥಿಸಿದರೆ ಪುರುಷನು ಆಲಸ್ಯದಿಂದ ವಿಮುಕ್ತನಾಗುತ್ತಾನೆ.

**ಅಥ ಯಾನ್ಯಷ್ಟಾಚತ್ವಾರಿಂಶದ್ವರ್ಷಾಣಿ ತತ್ತೃತೀಯ ಸವನಮಷ್ಟಾಚತ್ವಾರಿಂಶದಕ್ಷರಾ ಜಗತೀ ಜಾಗತಂ ತೃತೀಯಸವನಂ ತದಸ್ಯಾದಿತ್ಯಾ ಅನ್ವಾಯತ್ತಾಃ ಪ್ರಾಣಾ ವಾವಾದಿತ್ಯಾ ಏತೇ ಹೀದಂ ಸರ್ವಮಾದದತೇ ।**

(ಛಾ. ಉ. ೩-೧೬-೫)

ನಲವತ್ತೆಂಟು ಅಕ್ಷರಾತ್ಮಕವಾದ ಜಗತಿಯೇ ತೃತೀಯಸವನದ ಛಂದಸ್ಸು ಆದುದರಿಂದ ಮಾನವನ ಕೊನೆಯ ನಲವತ್ತೆಂಟು ವರ್ಷಗಳೂ ಸಾಯಂಸವನಾತ್ಮಕವಾದುದು. ಪ್ರಾಣವಿಸರ್ಗದ ಕಾಲದಲ್ಲಿ ಸಕಲವನ್ನೂ ತಮ್ಮೊಡನೆಯೇ ಹೀರಿಕೊಳ್ಳುವುದರಿಂದ ಪ್ರಾಣಗಳೇ ಆದಿತ್ಯರೂಪವು. ಮತ್ತು ಆದಿತ್ಯಾತ್ಮಕವಾದ ಪ್ರಾಣಗಳು ಈ ತೃತೀಯ ಸವನದ ಅಧಿದೇವತೆಗಳು.

**ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ಆದಿತ್ಯಾ ಇದಂ ಮೇ ತೃತೀಯಸವನಮಾಯುರನು ಸಂತನೋತೀತಿ ಮಾಹಂ ಪ್ರಾಣಾನಾಮಾದಿತ್ಯಾನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹೈವ ಭವತಿ.**

(ಛಾ. ಉ. ೩-೧೬-೬)

ಈ ಕಾಲದಲ್ಲಿ ಅಲಸ್ಯವುಂಟಾದರೆ ಆಗ ಆದಿತ್ಯರನ್ನುದ್ದೇಶಿಸಿ " ನನ್ನ ಯಜ್ಞವು ಮಧ್ಯದಲ್ಲಿ ವಿಚ್ಛಿನ್ನವಾಗದಿರಲಿ. ನನ್ನ ಆಯುಸ್ಸು ಪೂರ್ಣವಾಗಿ ಬದುಕಲಿ " ಎಂದು ಪ್ರಾರ್ಥಿಸಿದರೆ ಆಗ ಜೀವಯಜ್ಞವು ವಿಚ್ಛಿನ್ನವಾಗದೇ ಸಾಂಗವಾಗಿ ನೆರವೇರುವುದು.

**ಏತದ್ಧಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ ಸ ಕಿಂ ಮ ಏತದುಪತಪಸಿ ಯೋsಹಮನೇನ ನ ಪ್ರೇಷ್ಯಾಮೀತಿ ಸ ಹ ಷೋಡಶಂ ವರ್ಷಶತಮಜೀವತ್ಪ್ರ ಹ ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ ।**

(ಛಾ. ಉ. ೩-೧೬-೭)

ಮಹಿದಾಸ ಐತರೇಯನಿಗೆ ಈ ತತ್ತ್ವಜ್ಞಾನವಿದ್ದುದರಿಂದ ಅವನಿಗೆ ಒದಗಿದ ದೇಹಾಲಸ್ಯಾದಿಗಳಿಗೆ ಹೆದರದೆ ತನ್ನ ಜೀವಯಜ್ಞವನ್ನು ಪೂರ್ಣವಾಗಿ ಸಾಂಗಗೊಳಿಸುವಂತೆ ಒಂದುನೂರು ಹದಿನಾರು ವರ್ಷಗಳು ಬದುಕಿದನು ಎಂದು ಮಾನವಜೀವಾತ್ಮಕವಾದ ಸವನತ್ರಯದ ಮಾಹಾತ್ಮ್ಯವನ್ನು ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ವೃಷ್ಟ್ಯಾದಿ ಯಜ್ಞಸಾಧನಗಳಿಗೆಲ್ಲಾ ಅಧಿದೇವತೆಯಾದ ಇಂದ್ರನಿಗೂ ಸವನಕ್ಕೂ ಇರತಕ್ಕ ಸಂಬಂಧವನ್ನು ವರ್ಣಿಸಿದೆ. ಮತ್ತು ಇಂದ್ರನಿಗೆ

ತೃಪ್ತಿಯನ್ನುಂಟುಮಾಡತಕ್ಕ ಸೋಮಯಾಗವು ನೆರವೇರಿದ ಕಾಲದಲ್ಲಿ **ವಿಶ್ವಾ ಗೌಃ ತೇ ಜೋಷ್ಯಾ ಭೂತ್** ಸ್ತೋತ್ರ ಮತ್ತು ಶಸ್ತ್ರರೂಪವಾದ ಸಮಸ್ತವಾಕ್ಕೂ ಸಹ ನಿನಗೆ ಪ್ರೀತಿಕರವಾಗಿ ಆಗುತ್ತವೆ ಎಂದಿರುವಾಗ ಸೋಮ ಯಾಗಕ್ಕೆ ಸಂಬಂಧಿಸಿದ ಆ ಸ್ತೋತ್ರ ಮತ್ತು ಶಸ್ತ್ರಗಳಾವುವೆಂದರೆ ಅದರ ಕ್ರಮವು ಹೀಗೆ ತಿಳಿಸಲ್ಪಟ್ಟಿದೆ.

**ಪ್ರಾತಃಸವನಕ್ಕೆ**

| | | | |
|---|---|---|---|
| ಸ್ತೋತ್ರಗಳು | ಬಹಿಷ್ಪವಮಾನ ಸ್ತೋತ್ರ.<br>೪ ಆಜ್ಯ ಸ್ತೋತ್ರಗಳು. | ಶಸ್ತ್ರಗಳು | ಹೋತೃವಿನ ಆಜ್ಯ ಶಸ್ತ್ರ.<br>ಹೋತೃವಿನ ಪ್ರಉಗ ಶಸ್ತ್ರ.<br>ಹೋತೃಕವಾದ ೩ ಆಜ್ಯಶಸ್ತ್ರಗಳು.<br>(ಮೈತ್ರಾವರುಣ ; ಬ್ರಾಹ್ಮಣಾಚ್ಛಂಸಿನ್. ಅಚ್ಛಾವಾಕ) |

**ಮಾಧ್ಯಂದಿನಸವನಕ್ಕೆ**

| | | | |
|---|---|---|---|
| ಸ್ತೋತ್ರಗಳು | ಮಾಧ್ಯಂದಿನಪವಮಾನಸ್ತೋತ್ರ.<br>೪ ಪೃಷ್ಠಸ್ತೋತ್ರಗಳು. | ಶಸ್ತ್ರಗಳು | ಹೋತೃವಿನ ಮರುತ್ವತೀಯಶಸ್ತ್ರ.<br>ಹೋತೃವಿನ ನಿಷ್ಕೇವಲ್ಯಶಸ್ತ್ರ.<br>ಹೋತೃಕವಾದ ೩ ನಿಷ್ಕೇವಲ್ಯಶಸ್ತ್ರ |

**ತೃತೀಯಸವನಕ್ಕೆ.**

| | | | |
|---|---|---|---|
| ಸ್ತೋತ್ರಗಳು | ಆರ್ಭವಪವಮಾನಸ್ತೋತ್ರ.<br>ಅಗ್ನಿಷ್ಟೋಮಸಾಮ. | ಶಸ್ತ್ರಗಳು | ಹೋತೃವಿನ ವೈಶ್ವದೇವಶಸ್ತ್ರ.<br>ಹೋತೃವಿನಆಗ್ನಿಮಾರುತಶಸ್ತ್ರ. |

ಹೀಗೆ **ಗೌಃ** ಎಂಬುದಕ್ಕೆ ಸ್ತೋತ್ರಶಸ್ತ್ರಾತ್ಮಿಕವಾದ **ವಾಕ್ಕು** ಎಂದು ಅರ್ಥಮಾಡಿರುವುದು **ಇಂದ್ರನಿಗೂ, ಯಜ್ಞಕ್ಕೂ, ಯಜ್ಞ** ಸಂಬಂಧಿಯಾದ **ವಾಕ್ಕಿಗೂ** ಇರುವ ನಿಕಟವಾದ ಸಂಬಂಧವನ್ನೂ ಸೂಚಿಸುತ್ತದೆ. ಈ ಸಂಬಂಧವನ್ನು ಶತಪಥದಲ್ಲಿ ಈ ರೀತಿ ವಿವರಿಸಿದೆ.

> **ಸೋಽಯಂ ಯಜ್ಞೋ ವಾಚಮಭಿದಧ್ಯೌ । ಮಿಥುನ್ಯೇನಯಾ ಸ್ಯಾಮಿತಿ ತಾಗ್ಂ ಸಂಬಭೂವ ॥ ಇಂದ್ರೋ ಹ ವಾ ಈಕ್ಷಾಂ ಚಕ್ರೇ । ಮಹದ್ವಾಽಇತೋಽಭ್ವಂ ಜನಿಷ್ಯತೇ ಯಜ್ಞಸ್ಯ ಚ ಮಿಥುನಾದ್ವಾಚಶ್ಚ ಯನ್ಮಾ ತನ್ನಾಭಿಭವೇದಿತಿ ಸ ಇಂದ್ರ ಏವ ಗರ್ಭೋ ಭೂತ್ವೈತನ್ಮಿಥುನಂ ಪ್ರವಿವೇಶ । ಸ ಹ ಸಂವತ್ಸರೇ ಜಾಯಮಾನ ಈಕ್ಷಾಂಚಕ್ರೇ । ಮಹಾವೀರ್ಯಾ ವಾ ಇಯಂ ಯೋನಿರ್ಯಾ ಮಾಮದೀಧರತ ಯದ್ವೈ ನ್ಮೈತೋ ಮಹದೇವಾಭ್ವಂ ನಾನುಪ್ರಜಾಯೇತ ಯನ್ಮಾ ತನ್ನಾಭಿಭವೇದಿತಿ ।................ಇಂದ್ರಸ್ಯ ಯೋನಿರಸೀತೀಂದ್ರಸ್ಯ ಹ್ಯೇಷಾ ಯೋನಿರತೋ ವಾ ಹ್ಯೇನಾಂ ಪ್ರವಿಶನ್ಪ್ರವಿಶತ್ಯತೋ ವಾ ಜಾಯಮಾನೋ ಜಾಯತೇ ತಸ್ಮಾದಾಹೇಂದ್ರಸ್ಯ ಯೋನಿರಸೀತಿ ॥** (ಶ. ಬ್ರಾ. ೩-೨-೧-೨೫ ರಿಂದ ೨೮)

ವಾಕ್ಕಿನೊಡನೆ ಸಂಬಂಧವನ್ನು ಬೆಳಸಬೇಕೆಂದು ಯಜ್ಞವು ಇಚ್ಛಿಸಿತು ಇದನ್ನು ತಿಳಿದ ಇಂದ್ರನು ಇವೆರಡರ ಸಂಯೋಗದಿಂದ ಒಂದು ಮಹಾಶಕ್ತಿಯು ಉತ್ಪನ್ನವಾಗುವುದು ಖಂಡಿತವೆಂದು ತಿಳಿದು ಆ ಶಕ್ತಿಯು ತನ್ನ ಶಕ್ತಿಗಿಂತ ಎಲ್ಲಿ ಅಧಿಕವಾಗುವುದೋ ಎಂಬ ಹೆದರಿಕೆಯಿಂದ ತಾನೇ ಅವುಗಳ ಗರ್ಭರೂಪದಲ್ಲಿ ಪ್ರವೇಶಿಸಿದನು. ಒಂದು ವರ್ಷ ವಾದನಂತರ ಅವನು ಒಂದು ಮಹಾಶಕ್ತಿಯ ರೂಪದಲ್ಲಿ ಜನಿಸಿ ತಾನೇ ಯಜ್ಞಕರ್ತನಾದನು. ಆದುದರಿಂದ ಇಂದ್ರನಿಗೆ ಯಜ್ಞವೂ ವಾಕ್ಕೂ ಸಂತೋಷಜನಕಗಳು ಎಂಬುದು ಪ್ರಸಿದ್ಧವಾಗಿದೆ.

**ದೇವೀಃ ಆಪಃ ಸಮುದ್ರೇ ತೇ ಮದಂತಿ ಆಸು—ದ್ಯೋತಮಾನಾಃ ಆಪಃ ಉದಕಸಮುದ್ರವಣಾಪಾದಾನಭೂತೇ ಅಂತರಿಕ್ಷೇ ಪ್ರಜಾಸು ನಿಮಿತ್ತಭೂತಾಸು ತ್ವಾಂ ಮಾದಯಂತಿ ।** ಇಂದ್ರನನ್ನು ಸಂಬೋಧಿಸಿ, ಕಾಂತಿಯಿಂದ ಕೂಡಿರುವ ಉದಕಗಳು ದ್ರವರೂಪವನ್ನು ಹೊಂದುವ ಪ್ರದೇಶವಾದ ಅಂತರಿಕ್ಷದಲ್ಲಿ ಪ್ರಜೆಗಳಿಗಾಗಿ ಇಂದ್ರನಿಗೆ ಸಂತೋಷವನ್ನು ಉಂಟುಮಾಡುತ್ತವೆ ಎಂದು ಸಾಮಾನ್ಯವಾದ ಅರ್ಥವಾಗಬಹುದು. ಆದರೆ, **ಯದಾ ಪ್ರಾಣ್ಯುಪಕಾರಾರ್ಥಂ ವರ್ಷಣಾಯ ತ್ವಾಂ ಪ್ರೇರಯಂತಿ ವೃಷ್ಟ್ಯುದಕಾನಿ ತದಾ ಖಲು ತವ ಸೋಮಯಾಗಾಃ ಸುಖಕರಾ ಭವಂತಿ** ಪ್ರಾಣಿಗಳ ಉಪಕಾರಕ್ಕಾಗಿ ವೃಷ್ಟ್ಯುದಕಗಳು ವೃಷ್ಟಿಯನ್ನು ಸುರಿಸಲು ಇಂದ್ರನನ್ನು ಪ್ರೇರಿಸುವಾಗ ಸೋಮಯಾಗಗಳು ಇಂದ್ರನಿಗೆ ಸುಖಜನಕಗಳಾಗುತ್ತವೆಯಾದಕಾರಣ **ಯಜ್ಞಸಾಧನ ವೃಷ್ಟಿಪ್ರದಾನೇನ ಯಾಗಾನ್ನಿರ್ವರ್ತಯ** ಯಜ್ಞವು ನೆರವೇರಲು ಕಾರಣವಾದ ವೃಷ್ಟಿಯನ್ನು ಸುರಿಸುವುದರಿಂದ ಇಂದ್ರನು ಯಜ್ಞಗಳನ್ನು ನೆರವೇರಿಸಬೇಕೆಂಬ ಯಜಮಾನರ ಆಶಂಸನೆಯು ಇಲ್ಲಿ ವರ್ಣಿತವಾಗಿದೆ ಎಂದು ಅರ್ಥವನ್ನು ವಿವರಿಸಿದೆ.

**ಸಮುದ್ರೇ—ಸಮುದ್ರ** ಎಂಬ ಪದವೂ ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಪಠಿತವಾಗಿದೆ. ಇಲ್ಲಿ ಯಾಸ್ಕರು **ಸಮುದ್ರ ಇತ್ಯೇತತ್ ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ** ಸಮುದ್ರ ಶಬ್ದವು ಭೂಮಿಯಲ್ಲಿರುವ ಜಲರಾಶಿ ಬೋಧಕವೆಂದು ರೂಢಿಯಲ್ಲಿರುವಕಾರಣ ಶಬ್ದದ ಅರ್ಥನಿರ್ವಚನ ವಿಷಯದಲ್ಲಿ ಸಂದೇಹವನ್ನು ಪ್ರದರ್ಶನ ಮಾಡಿ, ವ್ಯಾಖ್ಯಾನಮಾಡಿದ್ದಾರೆ.

**ಸಮುದ್ರವಂತ್ಯಸ್ಮಾದಾಪಃ, ಸಮಭಿದ್ರವಂತ್ಯೇನಮಾಪಃ, ಸಮ್ಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ।** ಅಲೆಗಳು, ತೆರೆಗಳು, ಹನಿಗಳು ಇವುಗಳ ರೂಪದಿಂದ ಉದಕಗಳು ಇಲ್ಲಿ ರೂಪಾಂತರವನ್ನು ಹೊಂದಿ ಇರುವುವು, ಅಥವಾ ಉದಕಗಳು ನಿಮ್ನ ಪ್ರದೇಶವಾಗಿರುವ ಇಲ್ಲಿ ಒಟ್ಟಾಗಿ ಬಂದು ಸೇರುವುವು, ಅಥವಾ ಜಲಚರಪ್ರಾಣಿಗಳು ಇಲ್ಲಿ ಸಂತೋಷದಿಂದ ಇರುವುವು, ಜಲವು ಉದಕಶಬ್ದದಿಂದ ಬೋಧ್ಯವಾಗಿರುವುದರಿಂದ ಜಲರಾಶಿಯು ಸಮುದಕ ಶಬ್ದಬೋಧ್ಯವಾಗಿ ಇರುವುದು, ಸರ್ವವನ್ನೂ ತೋಯಿಸಿರುವುದರಿಂದಲೂ ಸಮುದ್ರಶಬ್ದದ ಪ್ರಯೋಗವು ಇರುವುದೆಂದು ಅರ್ಥವನ್ನು ನಿರ್ವಚನಮಾಡಿದ್ದಾರೆ. ಮತ್ತು ಇವರು ಈ ವಿಷಯದಲ್ಲಿ ಒಂದು ಕಥೆಯನ್ನು ವಿವರಿಸಿದ್ದಾರೆ.

> **ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂ ಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ ತತಃ ಶಂತನೋ ರಾಜ್ಯೇ ದ್ವಾದಶವರ್ಷಾಣಿ ದೇವೋ ನ ವವರ್ಷ ॥** (ನಿ. ೨-೧೧)

ದೇವಾಪಿ ಶಂತನು ಎಂಬ ಇಬ್ಬರು ಕುರುವಂಶದ ರಾಜಪುತ್ರರಲ್ಲಿ ಎರಡನೆಯವನಾದ ಶಂತನುವು ಪಟ್ಟಾಭಿಷಿಕ್ತನಾದನು. ಹಿರಿಯವನಾದ ದೇವಾಪಿಯು ತಪಸ್ಸನ್ನು ಮಾಡಲುಪಕ್ರಮಿಸಿದಾಗ ಶಂತನುವಿನ ರಾಜ್ಯದಲ್ಲಿ ಹನ್ನೆರಡು ವರ್ಷ ವೃಷ್ಟಿಯಾಗಲಿಲ್ಲ.

> **ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ।** (ನಿ. ೨-೧೧)

ಆಗ ಬ್ರಾಹ್ಮಣರು ಶಂತನು ರಾಜನೊಡನೆ "ನೀನು ನಿನ್ನ ಜ್ಯೇಷ್ಠಭ್ರಾತೃವನ್ನು ಅತಿಕ್ರಮಿಸಿ ಪಟ್ಟಾಭಿಷಿಕ್ತನಾದಕಾರಣ ಅಧರ್ಮವನ್ನು ಆಚರಿಸಿರುತ್ತೀಯೆ ಇದರಿಂದ ನಿನ್ನ ರಾಜ್ಯದಲ್ಲಿ ವೃಷ್ಟಿಯು ಆಗಲಿಲ್ಲ" ಎಂದು ಹೇಳಿದರು. ಇದನ್ನು ಕೇಳಿ ಶಂತನುರಾಜನು ತನ್ನ ಅಣ್ಣನಾದ ದೇವಾಪಿಯನ್ನು ರಾಜನಾಗಲು ನಿರ್ಬಂಧಪಡಿಸಿದಾಗ ರಾಜನಾಗಿರಲು ಒಪ್ಪದಿರುವ ದೇವಾಪಿಯು "ನಿನ್ನ ರಾಜ್ಯದಲ್ಲಿ ವೃಷ್ಟಿಯು ಆಗುವಂತೆ ನಿನಗೆ ಪುರೋಹಿತನಾಗಿ ಯಜ್ಞವನ್ನು ಮಾಡಿಸುವೆನು" ಎಂದು ಹೇಳಿ ಅದರಂತೆ ವರ್ಷಕಾಮಸೂಕ್ತದಿಂದ ಯಾಗವನ್ನು ಮಾಡಿಸಿದನು. ಎಂದು ಹೇಳಿ ವರ್ಷಕಾಮಸೂಕ್ತದ ಋಕ್ಕನ್ನು ಉದಹರಿಸಿದ್ದಾರೆ.

**ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।**
**ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥**

(ಋ. ಸಂ. ೧೦-೯೮-೫).

ಇಲ್ಲಿ ಯಾಸ್ಕರು—**ಸಃ ಉತ್ತರಸ್ಮಾತ್ ಅಧರಂ ಅಪೋ ದಿವ್ಯಾಃ ಅಸೃಜತ್** ಎಂಬ ವಾಕ್ಯಕ್ಕೆ—**ದೇವಾಪಿಃ ಅಂತರಿಕ್ಷಾಖ್ಯಾತ್ ಸಮುದ್ರಾತ್ ಅಧರಂ ಸಮುದ್ರಂ ಪಾರ್ಥಿವಂ ಪ್ರತಿ ಪ್ರಶಸ್ತಾಃ ಸಸ್ಯಸಂಪತ್ಕರೀಃ ಅಪಃ ಅಸೃಜತ್** ಅಂತರಿಕ್ಷವೆಂಬ ಪ್ರಸಿದ್ಧವಾದ ಸಮುದ್ರಕ್ಕಿಂತಲೂ ನಿಕೃಷ್ಟವಾದ ಪೃಥ್ವಿಯ ಸಂಬಂಧಿಯಾದ ಸಮುದ್ರಕ್ಕೂ ಅನುಕೂಲವಾಗುವಂತೆ ಸಸ್ಯಸಂಪತ್ತುಗಳಿಗೆ ವೃದ್ಧಿಯನ್ನು ಉಂಟುಮಾಡುವ ಪ್ರಶಸ್ತವಾದ ಉದಕಗಳನ್ನು ದೇವಾಪಿಯು ತನ್ನ ಸ್ತುತಿಯಿಂದ ಸಂತುಷ್ಟರಾದ ದೇವತೆಗಳ ಅನುಗ್ರಹದಿಂದ ಸೃಷ್ಟಿಮಾಡಿದನು ಎಂದು ಅಂತರಿಕ್ಷ ಮತ್ತು ಪಾರ್ಥಿವ ಸಮುದ್ರಗಳ ಭೇದವನ್ನು ಉಪಪಾದನೆಮಾಡಿರುತ್ತಾರೆ. ಮತ್ತು ಸಮುದ್ರ ಶಬ್ದವು ಬೇರೆಯ ಅರ್ಥದಲ್ಲಿ ಪ್ರಯುಕ್ತವಾಗಿರುವುದು.

**ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।**
**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥**

(ಋ. ಸಂ. ೧೦-೧೪೯-೧).

ಇಲ್ಲಿ **ಸಮುದ್ರಂ ಉದಕಬಂಧಿತಾರಂ ಮೇಘಂ** ಉದಕವನ್ನು ತಡೆದಿರುವ ಮೇಘವು—ಎಂದು ಸಮುದ್ರ ಶಬ್ದಕ್ಕೆ ಮೇಘವೆಂಬ ಅರ್ಥವನ್ನು ವಿವರಿಸಿದೆ.

**ಪವಿತ್ರವಂತಃ ಪರಿ ವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿ ರಕ್ಷತಿ ವ್ರತಂ ।**
**ಮಹಸ್ಸಮುದ್ರಂ ವರುಣಸ್ತಿರೋ ದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಂ ॥**

(ಋ. ಸಂ. ೯-೭೩-೩).

ಇಲ್ಲಿ **ಸಮುದ್ರಂ ಆದಿತ್ಯಂ** ಎಂದು ಸಮುದ್ರ ಶಬ್ದಕ್ಕೆ ಆದಿತ್ಯನೆಂದು ಅರ್ಥವನ್ನು ವರ್ಣಿಸಿದೆ.

**ವಿಶ್ವಾ ಗಾಃ ಜೋಷ್ಯಾ—ಸರ್ವಾಪಿ ಸ್ತೋತ್ರಶಸ್ತ್ರರೂಪಾ ವಾಕ್ ಜೋಷಣಾರ್ಹಾ ಪ್ರೀಣಯಿತ್ರೀ** ನಿರುಕ್ತಕಾರರು **ಗೌರಿತಿ ಪೃಥಿವ್ಯಾ ನಾಮಧೇಯಂ** (ನಿ. ೨-೫) ಎಂದು ಪ್ರಾರಂಭಿಸಿ, ಗೋ ಶಬ್ದಕ್ಕೆ ಪೃಥಿವೀ, ಶ್ಲೇಷ್ಮ, ಧನುಸ್ಸಿಗೆ ಕಟ್ಟುವ ಹಗ್ಗ, ಆದಿತ್ಯ, ರಶ್ಮಿಗಳು, ಸುಷುಮ್ನಾನಾಡಿ ಎಂಬ ಅರ್ಥಗಳನ್ನು ವಿವರಿಸಿದ್ದಾರೆ. ಸಾಯಣರು ವಾಕ್ಕೆಂಬ ಅರ್ಥವನ್ನು ವಿವರಿಸಿ, ಇಂದ್ರನ ವಿಷಯಕವಾದ ಸಮಸ್ತ ಸ್ತೋತ್ರಶಸ್ತ್ರಗಳೂ ಇಂದ್ರನನ್ನು ಸಂತೋಷಪಡಿಸುವವುಗಳಾಗಿವೆ ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಗೌಃ** ಎಂಬ ಪದಕ್ಕೆ **ಪೃಥಿವೀ, ಪಶು** ಇತ್ಯಾದ್ಯರ್ಥಗಳ ನಿರ್ವಚನವನ್ನು ಹಿಂದೆತಿಳಿಸಿದೆ. ಪ್ರಕೃತದಲ್ಲಿ ಈ ಪದಕ್ಕೆ **ಯಜ್ಞಾಹುತಿ** ಅಥವಾ:ವೃಷ್ಟಿಕಾರಕವಾದ **ಸೂರ್ಯರಶ್ಮಿ** ಎಂದೂ ಅರ್ಥವಾಗಿ ಈ ಅರ್ಥವು ಸಂದರ್ಭಕ್ಕೆ ಉಚಿತವಾಗಿರುತ್ತದೆ. ಆಹುತಿಯೆಂದರ್ಥವಾದರೆ ಆಗ ಇಂದ್ರನಿಗೆ ಲಭಿಸಬಹುದಾದ ಹವಿರಾದಿ ಸಂಪತ್ತುಗಳು ಲಕ್ಷ್ಯಗಳಾಗುತ್ತವೆ.

**ಗಾ ದಾಸ್ಯತಿ ಗೋದಾ ಗಾ ಮೇ ದೇಹಿತ್ಯೈವಂ ಯಂ ಕಾಮಂ ಕಾಮಯತೇ ಸೋಽಸ್ಮೈ ಕಾಮಃ ಸಮೃಧ್ಯತೇ** (ಶ. ಬ್ರಾ. ೧-೯-೩-೧೬)

ಇತ್ಯಾದಿ ವಾಕ್ಯಗಳನ್ನುದಾಹರಿಸಿ **ಗೋ** ಶಬ್ದದ ನಿಷ್ಕೃಷ್ಟಾರ್ಥವನ್ನು ಹಿಂದೆ ತಿಳಿಸಿದೆ. ಮುಂದೆಯೂ ವಿವರಿಸಲಾಗುವುದು.

**ಸೂರೀಂಶ್ಚಿತ್ ಧಿಷಾ ವೇಷಿ—ಸೂರಿ** ಶಬ್ದವು ಸ್ತೋತೃನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. ಸಾಯಣರು—ಇಂದ್ರನು ಸ್ತೋತ್ರಗಳಿಂದಲೂ ಇತರ ಕರ್ಮಗಳಿಂದಲೂ ತನ್ನನ್ನು ಪ್ರೇರಿಸುವ ಸ್ತೋತೃ ಜನರಿಗೆ ಅನುಕೂಲವಾಗುವ ಹಾಗೆ **ಪ್ರಜ್ಞಯಾ ವೃಷ್ಟಿಪ್ರದಾನರೂಪೇಣ ಕರ್ಮಣಾ ವಾ** ಪ್ರಜ್ಞೆಯನ್ನೂ ಅಥವಾ ವೃಷ್ಟಿಯನ್ನೂ ಅನುಗ್ರಹಿಸುವುದರಿಂದ ಇವರ ಸ್ತುತಿಗೆ ಸರ್ವದಾ ಪಾತ್ರನಾಗಿರುವನು ಎಂಬ ಅರ್ಥವನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಏವಾ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸವನಾ**—ಷುಞ್ ಅಭಿಷವೇ. ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೩೯) ಎಂಬುದರಿಂದ ಅನಾದೇಶ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಮದಂತಿ**—ಮದ ತೃಪ್ತಿಯೋಗೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲ ಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದೇವೀಃ—ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಜಸ್ ಪರವಾದಾಗ ಪೂರ್ವಸವರ್ಣದೀರ್ಘ ಬರುತ್ತದೆ.

**ಜೋಷ್ಯಾ**—ಜುಷೀ ಪ್ರೀತಿಸೇವನಯೋಃ ಧಾತು. ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭೂತ್**—ಭೂ ಸತ್ತಾಯಾಂ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. **ಗಾತಿಸ್ಥಾಘು**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ವೇಷಿ**—ವೀ ಗತ್ಯಾದಿಷು. ಧಾತು. ಇಲ್ಲಿ ಇಚ್ಛಾರ್ಥದಲ್ಲಿ ಪ್ರಯುಕ್ತನಾಗಿದೆ. ಲಟ್ ಮಧ್ಯಮಪುರುಷ ಏಕವಚನಾಂತರೂಪ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ಯದಿ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೮ ॥



॥ ಸಂಹಿತಾಪಾಠಃ ॥

**ಅಸಾಮ ಯಥಾ ಸುಷಖಾಯ ಏನ ಸ್ವಭಿಷ್ಟಯೋ ನರಾಂ ನ ಶಂಸೈಃ ।**

**ಅಸದ್ಯಥಾ ನ ಇಂದ್ರೋ ವಂದನೇಷ್ಠಾಸ್ತುರೋ ನ ಕರ್ಮ ನಯಮಾನ ಉಕ್ಥಾ ॥**

॥ ಪದಪಾಠಃ ॥

**ಅಸಾಮ । ಯಥಾ । ಸುऽಸಖಾಯಃ । ಏನ । ಸುऽಅಭಿಷ್ಟಯಃ । ನರಾಂ । ನ । ಶಂಸೈಃ ।**

**ಅಸತ್ । ಯಥಾ । ನಃ । ಇಂದ್ರಃ । ವಂದನೇ ऽಸ್ಥಾಃ । ತುರಃ । ನ । ಕರ್ಮ । ನಯಮಾನಃ । ಉಕ್ಥಾ ॥**

॥ ಸಾಯಣಭಾಷ್ಯಂ ॥

**ಹೇ ಏನೇನೇಶ್ವರೇಂದ್ರ ಯಥಾ ಸುಸಖಾಯಃ ಶೋಭನತ್ವದ್ರೂಪಸಹಾಯವಂತೋऽಸಾಮ ಭೂಯಾಸ್ಮ ಕಿಂಚ ಸ್ವಭಿಷ್ಟಯಃ ಶೋಭನಾಭ್ಯೇಷಣಾಃ ಶೋಭನಾಭೀಷ್ಟಾಶ್ಚಾಸಾಮ । ಕಿಮಿವ । ನರಾಂ ನ ಶಂಸೈಃ । ನರಾಣಾಂ ರಾಜಾದೀನಾಂ ಶಂಸೈಃ ಶಂಸನೈರಿವ । ಸ್ತುತಿಭಿರ್ಯಥಾ ಮನುಷ್ಯಾಃ ಶೋಭನಾಭೀಷ್ಟಾ ಭವಂತಿ ತದ್ವತ್ । ಇದಾನೀಂ ಪರೋಕ್ಷೇಣಾಹ । ನೋऽಸ್ಮಭ್ಯಮಿಂದ್ರೋ ವಂದನೇಷ್ಠಾ ಅಸ್ಮತ್ಸ್ತುತೌ ವರ್ತಮಾನಃ ಸಂಸ್ತುರೋ ನ ತ್ವರಮಾಣ ಇವ ನೋऽಸ್ಮಾಕಂ ಕರ್ಮೋಕ್ಥೋಕ್ಥೈಃ ಶಸ್ತ್ರೈರ್ನಯಮಾನಃ ಫಲಂ ಪ್ರಾಪಯನ್ ಸ್ತುತ್ಯಾ ತುಷ್ಟಃ ಸನ್ನಸ್ಮದೀಯೇನ ಕರ್ಮಣಾ ಫಲಪ್ರಾಪಯಿತಾ ಯಥಾಸತ್ ಭವೇತ್ । ಹೇ ಋತ್ವಿಜಃ ತಥಾ ಕುರುತೇತಿ ಶೇಷಃ ॥**

॥ ಪ್ರತಿಪದಾರ್ಥ ॥

**ಹೇ ಏನ**—ಎಲೈ ಸ್ವಾಮಿಯಾದ ಇಂದ್ರನೇ । **ಯಥಾ**—ಹೇಗೆ । **ಸುಸಖಾಯಃ**—ಶುಭಕರನಾದ ನಿನ್ನ ಸಹಾಯವುಳ್ಳವರೂ । **ನರಾಂ**—ರಾಜಾದಿಗಳ । **ಶಂಸೈಃ ನ**—ಸ್ತುತಿಯಿಂದ ಹೇಗೆ ಇಷ್ಟಾರ್ಥಸಿದ್ಧಿ ಪಡೆಯುತ್ತೇವೋ ಹಾಗೆ । **ಸು ಅಭಿಷ್ಟಯಃ**—ಮಂಗಳಕರವಾದ ಇಷ್ಟಾರ್ಥಗಳುಳ್ಳವರೂ । **ಅಸಾಮ**— ಆಗುತ್ತೇವೋ (ಹಾಗೆ ಅನುಗ್ರಹಿಸು) । (**ಕಿಂಚ ಹೇ ಋತ್ವಿಜಃ**— ಮತ್ತು ಎಲೈ ಋತ್ವಿಜರೇ) । **ನಃ**— ನಮಗೋಸ್ಕರ । **ಇಂದ್ರಃ**— ಇಂದ್ರನು । **ವಂದನೇಷ್ಠಾಃ**—(ನಮ್ಮ) ಸ್ತುತಿಯಲ್ಲಿ ಇದ್ದವನಾಗಿ (ನಮ್ಮ ಸ್ತುತಿಯಿಂದ ತೃಪ್ತನಾಗಿ) । **ತುರಃ ನ**—

ತ್ವರೆಮಾಡುತ್ತಿರುವನೋ ಎಂಬುವ ಹಾಗೆ। (**ನಃ**—ನಮ್ಮ)। **ಕರ್ಮ**—ಕರ್ಮಗಳನ್ನು (ಕರ್ಮಗಳಿಗೆ)। **ಉಕ್ಥಾ**—ಶಸ್ತ್ರಗಳಿಂದ (ತೃಪ್ತನಾಗಿ)। **ನಯಮಾನಃ**— ಫಲವನ್ನು ದೊರಕಿಸುವವನು। **ಯಥಾ**—ಹೇಗೆ। **ಅಸತ್**—ಆಗುತ್ತಾನೋ। (**ತಥಾ ಕುರುತ**—ಹಾಗೆ ಮಾಡಿ).

॥ ಭಾವಾರ್ಥ ॥

ಎಲೈ ಸ್ವಾಮಿಯಾದ ಇಂದ್ರನೇ, ಪ್ರಶಂಸಾದಿಗಳಿಂದ ರಾಜಾದಿಗಳನ್ನೂ ತೃಪ್ತಿಪಡಿಸಿ ನಮ್ಮ ಇಷ್ಟಾರ್ಥಸಿದ್ಧಿ ಪಡೆಯುವಂತೆ, ನಿನ್ನ ಮೈತ್ರಿಯನ್ನೂ, (ನಿನ್ನ ಅನುಗ್ರಹದಿಂದ) ಅಭೀಷ್ಟಸಿದ್ಧಿಯನ್ನು ಪಡೆಯಲು ಇಚ್ಛಿಸುತ್ತೇವೆ; ಎಲೈ ಋತ್ವಿಜರೇ, ಇಂದ್ರನು ನಮ್ಮ ಕರ್ಮ ಮತ್ತು ಶಸ್ತ್ರಾದಿಗಳಿಂದ ತುಷ್ಟನಾಗಿ ಶೀಘ್ರವಾಗಿ ಫಲಪ್ರದನಾಗುವಂತೆ, ಮಾಡಿ.

## English Translation.

May we be, as it were, your valued friends, O Lord, and obtain our desires, like those (who gain their objects) by the praise of princes. May Indra, propitiated by our eulogiums, be brought to the sacrifice by our hymns.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮಂತ್ರದ್ರಷ್ಟೃವಾದ ಋಷಿಯು ಯಜಮಾನರು ತಮ್ಮ ಋತ್ವಿಜರಿಗೆ ಮಾಡಿರುವ ಆದೇಶವನ್ನು ವಿವರಿಸಿದಂತೆ ವರ್ಣಿತವಾಗಿದೆ.

**ಹೇ ಇನ ಇಂದ್ರ** ಎಂಬ ಪದಗಳಿಂದ ಎಲೈ ಪ್ರಭುವೇ ಇಂದ್ರನೇ ಎಂದು ಇಂದ್ರನನ್ನು ಸಂಬೋಧಿಸಿದೆ. **ನರಾಂ ನ ಶಂಸೈಃ ರಾಜಾದೀನಾಂ ಶಂಸೈಃ ಸ್ತುತಿಭಿಃ ಯಥಾ ಮನುಷ್ಯಾಃ ಶೋಭನಾಭೀಷ್ಟಾ ಭವಂತಿ ತದ್ವತ್ ಶೋಭನತ್ವದ್ರೂಪ ಸಖಾಯವಂತಃ ಶೋಭನಾಭೀಷ್ಟಾಶ್ಚ ಅಸಾಮ ।** ರಾಜನೇ ಮೊದಲಾದವರನ್ನು ಸ್ತುತಿಮಾಡಿ ಮನುಷ್ಯರು ತಮ್ಮ ಇಷ್ಟಗಳನ್ನು ಸಾಧಿಸಿಕೊಳ್ಳುವಂತೆ, ಇಂದ್ರನನ್ನು ಯಜ್ಞಮಾಡುವುದರಿಂದ ಸ್ತುತಿಸಿ ಇಂದ್ರನ ಪ್ರೀತಿಪಾತ್ರರಾದ ಸ್ನೇಹಿತರಾಗಿಯೂ, ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಂಡವರಾಗಿಯೂ ಆಗೋಣ ವೆಂಬ ಯಜಮಾನರ ಆಶಂಸೆಯು ಇಲ್ಲಿ ವರ್ಣಿತವಾಗಿದೆ.

**ತುರೋ ನ ಉಕ್ಥಾ ನಯಮಾನಃ ಕರ್ಮ ಯಥಾ ಅಸತ್ ।** ಇಂದ್ರನು ಯಜಮಾನರಾದ ನಮ್ಮ ಸ್ತುತಿಗಳಿಗೆ ವಿಷಯನಾಗಿ ತ್ವರೆಯಿಂದ ಕೂಡಿರುವವನ ಹಾಗೆ, ನಮ್ಮ ಸ್ತುತಿಗಳನ್ನು ಶ್ರವಣಮಾಡಿ, ನಮ್ಮ ಯಜ್ಞಾದಿ ಕರ್ಮಗಳು ಫಲವನ್ನು ಕೊಡುವಂತೆ ಅನುಗ್ರಹಿಸಿ, **ಅಸ್ಮದೀಯೇನ ಕರ್ಮಣಾ ಫಲಪ್ರಾಪಯಿತಾ** ನಮ್ಮ ಯಜ್ಞಾದಿಕರ್ಮಗಳ ಫಲವನ್ನು ತಾನಾಗಿ ನಮಗೆ ಕೊಡುವವನಾಗುವ ಹಾಗೆ ಯಜ್ಞಕರ್ಮಗಳನ್ನು ಆಚರಿಸಿರಿ ಎಂದು ಋತ್ವಿಜರಿಗೆ ಯಜಮಾನರು ಹೇಳಿರುವ ಆದೇಶವು ಇಲ್ಲಿ ವರ್ಣಿತವಾಗಿದೆ.

**ನರಾಂ ನ, ತುರೋ ನ** ಎಂಬ ಎರಡು ಉಪಮಾನ ವಾಕ್ಯಗಳಿಂದ ರಾಜನ ಮತ್ತು ಮನುಷ್ಯರ ಹೋಲಿಕೆಯನ್ನು ವಿವರಿಸಿ ಹೇಳಿದೆ. **ತುರೋ ನ** ಎಂಬ ವಾಕ್ಯದಲ್ಲಿ ತ್ವರೆಯುಳ್ಳವನು ತಾನು ಆಚರಿಸುವ ತನ್ನ ಅವಶ್ಯ

ಕರ್ತವ್ಯಾಚರಣೆಯನ್ನು ಶೀಘ್ರವಾಗಿ ನೆರವೇರಿಸುವ ಹಾಗೆ ಎಂದು ಹೋಲಿಸಿ, ಇಂದ್ರನು ನಮ್ಮ ಸ್ತುತಿಗಳನ್ನು ಕೇಳಿ ನಮ್ಮ ಯಜ್ಞಗಳ ಪೂರ್ಣವಾದ ಫಲಪ್ರದಾತೃವಾಗಿ ಬೇಗನೆ ಆಗುವಂತೆ ಕರ್ಮಾಚರಣೆಯಲ್ಲಿ ಸಾವಧಾನತೆಯನ್ನೂ ವ್ಯಕ್ತಗೊಳಿಸಿ ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸಾಮ**—ಅಸ ಭುವಿ. ಧಾತು. ಲೋಟ್ ಉತ್ತಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸುಸಖಾಯಃ**—ಶೋಭನಃ ಸಖಾ ಯೇಷಾಂ ತೇ. **ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರ ಪದಾಂದೋದಾತ್ತಸ್ವರ ಬರುತ್ತದೆ.

**ಸ್ವಭಿಷ್ಟಯಃ**—ಶೋಭನಾಃ ಅಭಿಷ್ಟಯಃ ಯೇಷಾಂತೇ. ಹಿಂದಿನಂತೆ ಉತ್ತರಪದೋದಾತ್ತಸ್ವರ ಬರುತ್ತದೆ.

**ನರಾಮ್—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಷಷ್ಠೀ ಬಹುವಚನಕ್ಕೆ ಉದಾತ್ತಸ್ವರ ಬರುತ್ತದೆ.

**ಶಂಸೈಃ**—ಶಂಸು ಸ್ತುತೌ ಧಾತು. ಘಞ್ ಪ್ರತ್ಯಯ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಅಸತ್**—ಅಸ ಭುವಿ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**–(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ವಂದನೇಷ್ಠಾಃ**—ವಂದನೇ ತಿಷ್ಠತೀತಿ ವಂದನೇಷ್ಠಾಃ. ಷ್ಠಾ ಗತಿನಿವೃತ್ತೌ. ಧಾತು. ಕ್ವಿಪ್ ಪ್ರತ್ಯಯ. **ತತ್ಪುರುಷೇ ಕೃತಿ ಬಹುಲಮ್** ಎಂಬುದರಿಂದ ಸಪ್ತಮಿಗೆ ಲೋಪ ಬರುವುದಿಲ್ಲ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ತುರಃ**—ತುರ ತ್ವರಣೇ. ಧಾತು. **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ಉಕ್ಥಾ—**ವಚ ಪರಿಭಾಷಣೇ. ಧಾತು. **ಪಾತೃತುದಿವಚಿ**—(ಉ. ಸೂ. ೨-೧೬೪) ಎಂಬುದರಿಂದ ಥಕ್ ಪ್ರತ್ಯಯ. ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. **ಚೋಃಕುಃ** ಎಂಬುದರಿಂದ ಕುತ್ವ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ತೃತೀಯಾ ಪರವಾದಾಗ ಪೂರ್ವಸವರ್ಣದೀರ್ಘ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ವಿಷ್ಪರ್ಧಸೋ ನರಾಂ ನ ಶಂಸೈರಸ್ಮಾಕಾಸದಿಂದ್ರೋ ವಜ್ರಹಸ್ತಃ ।
ಮಿತ್ರಾಯುವೋ ನ ಪೂರ್ಪತಿಂ ಸುಶಿಷ್ಟೌ ಮಧ್ಯಾಯುವ ಉಪ ಶಿಕ್ಷಂತಿ ಯಜ್ಞೈಃ॥

॥ ಪದಪಾಠಃ ॥

ವಿऽಸ್ಪರ್ಧಸಃ । ನರಾಂ । ನ । ಶಂಸೈಃ । ನ । ಅಸ್ಮಾಕ । ಅಸತ್ । ಇಂದ್ರಃ । ವಜ್ರऽಹಸ್ತಃ ।
ಮಿತ್ರऽಯುವಃ । ನ । ಪೂಃऽಪತಿಂ । ಸುऽಶಿಷ್ಟೌ । ಮಧ್ಯಽಯುವಃ । ಉಪ । ಶಿಕ್ಷಂತಿ। ಯಜ್ಞೈಃ ॥೧೦॥

॥ ಸಾಯಣಭಾಷ್ಯಂ ॥

ನರಾಂ ನೇತೄಣಾಂ ಮಧ್ಯೇ ಸಸ್ಪರ್ಧಾನ್ನರಾನ್ಯಥಾ ವಿಸ್ಪರ್ಧಸಃ ಕುರ್ವಂತಿ ಸಖಿಭೂತಾಃ ತದ್ವದ್ವಯಮಪೀಂದ್ರಂ ಶಂಸೈಃ । ಸ್ತುತಿಭಿಃ ಸಖಾಯೋ ವಯಂ ತಂ ತಥಾ ಕುರ್ಮಃ । ಸ ಚ ವಜ್ರ-ಹಸ್ತೋ ವಿರೋಧಿಶಿಕ್ಷಣಾಯ ಸರ್ವದಾ ವಜ್ರಧಾರೀಂದ್ರೋऽಸ್ಮಾಕಮಸತ್ । ವಿಸ್ಪರ್ಧಮನು-ಕೂಲೋ ಭವತು । ಕಿಂಚ ಮಿತ್ರಾಯುವೋ ನ ಮಿತ್ರೇಚ್ಛವೋ ಹಿತೈಷಿಣ ಇವ ಸುಶಿಷ್ಟೌ ಸುಶಾಸನೇ ವರ್ತಮಾನಂ ಪೂರ್ಪತಿಂ ಪುರಃ ಸ್ವಾಮಿನಂ ಯಥಾಭಿಮತದಾನೇನ ಪೂಜಯಂತಿ ತಥಾ ಮಧ್ಯಾಯುವೋऽಸ್ಮಾಕಂ ಶ್ರಿಯಾಂ ಯಶಸಾಂ ಚ ಮಧ್ಯೇऽವಸ್ಥಿತಿಂ ಕಾಮಯಮಾನಾ ಅಧ್ವರ್ಯ್ವಾದಯೋ ಯಜ್ಞೈ-ರ್ಯಜ್ಞಸಾಧನೈರ್ಹವಿಃಸ್ತೋತ್ರಾದಿಭಿರುಪ ಶಿಕ್ಷಂತಿ । ಉಪೇತ್ಯ ಯಜಂತೇ । ಶಿಕ್ಷತಿರ್ದಾನಕರ್ಮಾ ॥

॥ ಪ್ರತಿಪದಾರ್ಥ ॥

**ನರಾಂ**—ಮನುಷ್ಯರ ಮಧ್ಯದಲ್ಲಿ (ಸ್ಪರ್ಧಾಯುಕ್ತರಾದವರನ್ನು) । **ವಿಸ್ಪರ್ಧಸಃ ನ**— (ಮಿತ್ರರು ಹೇಗೆ) ಸ್ಪರ್ಧಾರಹಿತರನ್ನಾಗಿ (ಮಾಡುತ್ತಾರೋ ಹಾಗೆ) । **ಶಂಸೈಃ**—ಸ್ತೋತ್ರಾದಿಗಳಿಂದ (ಇಂದ್ರನನ್ನೂ ಮಾಡುತ್ತೇವೆ) । **ವಜ್ರಹಸ್ತಃ**—(ವಿರೋಧಿಶಿಕ್ಷೆಗೋಸ್ಕರ) ವಜ್ರಾಯುಧಧಾರಿಯಾದ । **ಇಂದ್ರಃ**—ಇಂದ್ರನು । **ಅಸ್ಮಾಕ ಅಸತ್**—ನಮಗೆ (ಅನುಕೂಲನು) ಆಗಲಿ । **ಮಿತ್ರಾಯುವಃ**—ಹಿತೈಷಿಗಳು । **ಸುಶಿಷ್ಟೌ**— (ರಾಜ್ಯವನ್ನು) ಒಳ್ಳೆಯ ರೀತಿಯಲ್ಲಿ ಶಾಸನಮಾಡುವುದರಲ್ಲಿ (ರತನಾದ) । **ಪೂರ್ಪತಿಂ ನ**— ಪಟ್ಟಣದ ಯಜಮಾನನ್ನು (ಅಭಿಮತಾದಿ ದಾನಗಳಿಂದ ತೃಪ್ತಿಪಡಿಸುವಂತೆ) । **ಮಧ್ಯಾಯುವಃ**— (ನಮ್ಮ ಐಶ್ವರ್ಯ ಅಥವಾ ಯಶಸ್ಸಿನ) ಮಧ್ಯದಲ್ಲಿ ಇರಲ್ಪ ಅಪೇಕ್ಷಿಸುವ ಅಧ್ವರ್ಯು ಮೊದಲಾದವರು । **ಯಜ್ಞೈಃ**— ಯಜ್ಞಸಾಧನಗಳಾದ ಹವಿರಾದಿಗಳಿಂದ । **ಉಪ ಶಿಕ್ಷಂತಿ**—ಸಮೀಪಿಸಿ ಪೂಜಿಸುತ್ತಾರೆ.

॥ ಭಾವಾರ್ಥ ॥

ಈರ್ಷ್ಯಾದಿವಿಶಿಷ್ಟರಾದ ಮನುಷ್ಯರನ್ನು ಮಿತ್ರರು ಪ್ರಶಂಸನಾದಿಗಳಿಂದ ಹೇಗೆ ಸರಿಪಡಿಸುತ್ತಾರೋ ಹಾಗೆ ನಾವೂ ಇಂದ್ರನನ್ನು ಸ್ತುತ್ಯಾದಿಗಳಿಂದ ಅನುಕೂಲನನ್ನಾಗಿ ಮಾಡಿಕೊಳ್ಳುತ್ತೇವೆ. ಒಳ್ಳೆಯ ರೀತಿಯಲ್ಲಿ ರಾಜ್ಯಭಾರ

ಮಾಡುತ್ತಿರುವ ರಾಜನನ್ನು ಹಿತೈಷಿಗಳು ಅಭಿಮತದಾನಾದಿಗಳಿಂದ ಪೂಜಿಸುವಂತೆ, ಐಶ್ವರ್ಯಾದಿಗಳನ್ನಪೇಕ್ಷಿಸುವ ಅಧ್ವರ್ಯು ಮೊದಲಾದ ನಮ್ಮ ಋತ್ವಿಜರು ಯಜ್ಞಸಾಧನವಾದ ಹವಿರಾದಿಗಳಿಂದ ಅರ್ಚಿಸುತ್ತಾರೆ.

## English Translation.

Emulous in commendation, like (those contending for the favour) of men, may Indra, the wielder of the thunderbolt, be equally (a friend) to us : like those who, desirous of his friendship. (conciliate) the lord of a city (ruling) with good government, so do our intermediate (representatives) propitiate (Indra) with sacrifices.

॥ ವಿಶೇಷವಿಷಯಗಳು ॥

**ನರಾಂ ವಿಸ್ಪರ್ಧಾಸಃ ಶಂಸ್ಯೈಃ—ನೇತೄಣಾಂ ಮಧ್ಯೇ ಸಸ್ಪರ್ಧಾನ್ ನರಾನ್ ಯಥಾ ಸಖಿಭೂತಾಃ ಕುರ್ವಂತಿ ತದ್ವದ್ವಯಮಪಿ ಇಂದ್ರಂ ಸ್ತುತಿಭಿಃ ಸಖಾಯೋ ವಯಂ ತಂ ತಥಾ ಕುರ್ಮಃ ।** ಲೋಕದಲ್ಲಿ ವ್ಯವಹಾರವನ್ನು ಆಚರಿಸುವ ಮನುಷ್ಯರು ಪರಸ್ಪರ ಸ್ಪರ್ಧೆಯಿಂದ ಇರುವುದನ್ನು ನೋಡಿ ಅವರ ಸ್ನೇಹಿತರು ಅವರ ಅನುಕೂಲಕ್ಕಾಗಿ ಸ್ಪರ್ಧೆಯನ್ನು ಬಿಡುವಂತೆ ಇಂದ್ರನನ್ನು ಸ್ನೇಹಿತನನ್ನಾಗಿ ತಿಳಿದು ಇರುವ ಯಜಮಾನರಾದ ನಾವು ಇಂದ್ರನು ನಮಗೆ ಅನುಕೂಲನಾಗಿರುವ ಸ್ಪರ್ಧೆಯುಳ್ಳವನಾಗಿರಲೆಂದು ಸ್ತುತಿಮಾಡಿ ಅವನಿಗೆ ನಮಗೆ ಅನುಗ್ರಹಮಾಡುವ ವಿಷಯದಲ್ಲಿ ಸ್ಪರ್ಧೆಯು ಅತಿಶಯವಾಗುವಂತೆ ಮಾಡೋಣವೆಂದು ಆಶಿಸಿದೆ.

**ವಜ್ರಹಸ್ತಃ—ವಿರೋಧಿಶಿಕ್ಷಣಾಯ ಸರ್ವದಾ ವಜ್ರಧಾರೀ ಅಸ್ಮಾಕಂ ಅನುಕೂಲೋ ಭವತು** ಇಂದ್ರನು ಶತ್ರುಗಳನ್ನು ನಿಗ್ರಹಮಾಡುವುದಕ್ಕಾಗಿಯೇ ವಜ್ರಾಯುಧವನ್ನು ಹಸ್ತದಲ್ಲಿ ಧರಿಸಿರುವವನಾಗಿ ಯಜ್ಞಮಾಡುವ ಯಜ್ಞಮಾನರಾದ ನಮ್ಮ ವಿಷಯದಲ್ಲಿ ಅನುಕೂಲನಾಗಿರಲಿ ಎಂದು ಆಶಿಸಿದೆ.

**ಮಿತ್ರಾಯುವೋ ನ—** ಸಾಯಣರು ಮಿತ್ರ ಶಬ್ದಕ್ಕೆ ಹಿತ ಎಂಬ ಅರ್ಥವನ್ನು ವಿವರಿಸಿದ್ದಾರೆ. ಮಿತ್ರನಾದವನು ಹಿತವನ್ನು ತನ್ನ ಸ್ನೇಹಿತನಿಗೆ ಅಪೇಕ್ಷಿಸುವಂತೆ, ಎಂದು ಅರ್ಥವನ್ನುಮಾಡಿ, ಇಂದ್ರನು ನಮಗೆ ಹಿತೈಷಿಯಾಗಿರಲಿ ಎಂದು ಹೋಲಿಸಿ ವರ್ಣಿಸಿದೆ.

**ಪೂರ್ಪತಿಂ ಮಧ್ಯಾಯುವಃ ಯಜ್ಞೈಃ ಉಪಶಿಕ್ಷಂತಿ-ಅಸ್ಮಾಕಂ ಶ್ರಿಯಾಂ ಯಶಸಾಂ ಚ ಮಧ್ಯೇ ಅವಸ್ಥಿತಿಂ ಕಾಮಯಮಾನಾಃ ಅಧ್ವರ್ಯ್ವಾದಯಃ ಯಜ್ಞಸಾಧನೈಃ ಹವಿಃ ಸ್ತೋತ್ರಾದಿಭಿಃ ಉಪೇತ್ಯ ಯಜಂತಿ ।** ಶಿಕ್ಷ ಧಾತುವು ನಿರುಕ್ತಕಾರರಿಂದ ದಾತಿ, ದಾಶತಿ ಇವೇ ಮೊದಲಾದ ಹತ್ತುದಾನಕರ್ಮವಾಚಕಗಳ ಮಧ್ಯದಲ್ಲಿ (ನಿ. ೩-೧೯) ಪಠಿತವಾಗಿದೆ. ಇಲ್ಲಿ ದಾನಮಾಡು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಪ್ರಭುವಾದವನ ಪ್ರತ್ಯಕ್ಷದಲ್ಲಿಯೇ ಪ್ರಭುವಿಗೆ ಅಭಿಮತವಾದವುಗಳನ್ನು ಅರ್ಪಿಸಿ ಪೂಜೆಯನ್ನು ಆಚರಿಸುವ ಹಾಗೆ ಯಜಮಾನರಿಗೆ ಐಶ್ವರ್ಯದ ಮತ್ತು ಕೀರ್ತಿಯ ಮಧ್ಯದಲ್ಲಿ ಸ್ಥಿತಿಯನ್ನು ಇಚ್ಛೆಮಾಡುವ ಅಧ್ವರ್ಯುವೇ ಮೊದಲಾದ ಋತ್ವಿಜರು ಇಂದ್ರನಿಗೆ ಯಜ್ಞಸಾಧನಗಳಾದ ಹವಿಸ್ಸುಗಳನ್ನು ಅರ್ಪಿಸುವುದರಿಂದಲೂ, ಸ್ತೋತ್ರಗಳನ್ನು ಪಠಿಸುವುದರಿಂದಲೂ ಪೂಜಿಸುತ್ತಾರೆ ಎಂಬ ಅರ್ಥವನ್ನು ವರ್ಣಿಸಿದೆ. ಪ್ರಭುವನ್ನು ಅಭಿಮತ ಪ್ರದಾನದಿಂದ ಪ್ರತ್ಯಕ್ಷ

ದಲ್ಲಿ ಪೂಜಿಸುವ ಹಾಗೆ ಇಂದ್ರನನ್ನು ಹವಿಸ್ಸುಗಳ ಅರ್ಪಣೆಯಿಂದ ಪ್ರತ್ಯಕ್ಷದಲ್ಲಿಯೇ ಪೂಜಿಸುವರೆಂದು ಹೋಲಿಸಿ ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಸ್ಪರ್ಧಸಃ**—ವಿಗತಂ ಸ್ಪರ್ಧಃ ಯೇಷಾಂತೇ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಸ್ಮಾಕ**— ಛಾಂದಸವಾಗಿ ಅಂತ್ಯಲೋಪ ಬರುತ್ತದೆ.

**ಅಸತ್**—ಅಸ ಭುವಿ. ಧಾತು. ಲೇಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಜ್ರಹಸ್ತಃ**—ವಜ್ರಃ ಹಸ್ತೇ ಯಸ್ಯ ಸಃ. ವ್ಯಧಿಕರಣ ಬಹುವ್ರೀಹಿ ಸಮಾಸ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಮಿತ್ರಾಯುವಃ**— ಮಿತ್ರಾಣಿ ಆತ್ಮನಃ ಇಚ್ಛಂತಃ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಪೂರ್ಪತಿಃ**—ಪುರಃ ಪತಿಃ ಪೂರ್ಪತಿಃ **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುಶಿಷ್ಟೌ**— ಶಾಸು ಅನುಶಿಷ್ಟೌ. ಧಾತು. **ಸ್ತ್ರಿಯಾಂಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಶಾಸ ಇದಙ್‌ಹಲೋಃ** (ಪಾ. ಸೂ. ೯-೪-೩೪) ಎಂಬುದರಿಂದ ಧಾತುವಿನ ಉಪಧೆಗೆ ಇತ್ವ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. **ತಾದೌಚನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಸು) ಉದಾತ್ತಸ್ವರ ಬರುತ್ತದೆ.

**ಮಧ್ಯಾಯುವಃ**—**ಕ್ಯಾಚ್ಛಂದಸಿ** (ಪಾ.ಸೂ. ೨-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉಪ್ರತ್ಯಯ. ಕ್ಯಜಿನ ಅಕಾರಕ್ಕೆ ಲೋಪ. ಸಂಹಿತಾದಲ್ಲಿ ಛಾಂದಸವಾಗಿ ದೀರ್ಘ. ಪ್ರತ್ಯಯಸ್ವರ ಬರುತ್ತದೆ.

**ಶಿಕ್ಷಂತಿ**—ಶಿಕ್ಷ ವಿದ್ಯೋಪಾದಾನೇ. ಧಾತು. ಇಲ್ಲಿ ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮ ಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. || ೧೦ ||



॥ ಸಂಹಿತಾಪಾಠಃ ॥

ಯುಜ್ಞೋ ಹಿ ಷ್ಮೇಂದ್ರಂ ಕಶ್ಚಿದೃಂಧಞ್ಜುಹುರಾಣಶ್ಚಿನ್ಮನಸಾ ಪರಿಯನ್ ।
ತೀರ್ಥೇ ನಾಚ್ಛಾ ತಾತೃಷಾಣಮೋಕೋ ದೀರ್ಘೋ ನ ಸಿಧ್ರಮಾ ಕೃಣೋತ್ಯಧ್ವಾ ॥

॥ ಪದಪಾಠಃ ॥

ಯಜ್ಞಃ । ಹಿ । ಸ್ಮ । ಇಂದ್ರಂ । ಕಃ । ಚಿತ್ । ಋಂಧನ್ । ಜುಹುರಾಣಃ । ಚಿತ್ । ಮನಸಾ । ಪರಿಽಯನ್ ।
ತೀರ್ಥೇ । ನ । ಅಚ್ಛ । ತತೃಷಾಣಂ । ಓಕಃ । ದೀರ್ಘಃ । ನ । ಸಿಧ್ರಂ । ಆ । ಕೃಣೋತಿ । ಅಧ್ವಾ ॥

॥ ಸಾಯಣಭಾಷ್ಯಂ ॥

ಕಶ್ಚಿದ್ಯಜ್ಞೋ ಯಜ್ಞವಾನ್ ಯಜ್ಞಾನುಷ್ಠಾಯ್ಯೃಂಧನ್ ವರ್ಧಯನ್ಭವತಿ। ಇಂದ್ರಂ ಯಜ್ಞೇನ ವರ್ಧಯತೀತ್ಯರ್ಥಃ । ಜುಹುರಾಣಶ್ಚಿತ್ ಕುಟಿಲಗತಿಸ್ತು ಕಶ್ಚಿನ್ಮನಸಾ ಕೇವಲೇನ ಪರಿಯನ್ ಪರಿತೋ ಗಚ್ಛನ್ ಲೌಕಿಕವಿಷಯಾದಿಕಂ ಧ್ಯಾಯನ್ವರ್ತತೇ । ಯದ್ವಾ । ಪರಿ ವರ್ಜನಾರ್ಥಃ । ವರ್ಜಯಿತ್ವಾ ಗಚ್ಛನ್ನೇದಂ ಪ್ರಾಪ್ನೋತಿ । ತತ್ರ ದೃಷ್ಟಾಂತಃ । ತೀರ್ಥೇ ಪ್ರಸಿದ್ಧೇ ಮಾರ್ಗೇಽಚ್ಛಾಭಿಮುಖ್ಯೇನ ಸಮೀಪೇ ವರ್ತಮಾನಮೋಕಃ ಪಾನೀಯಾದಿಕಂ ಸದನಂ ತತೃಷಾಣಂ ಪಿಪಾಸಾಯುಕ್ತಂ ಯಥಾವಿಲಂಬೇನ ಪ್ರೀಣಾತಿ । ಸ ಯಥಾ ತತ್ಸದನಮಾಗಚ್ಛತೀತ್ಯರ್ಥಃ । ತದ್ವದ್ಯಜ್ಞೇನ ಕಶ್ಚಿತ್ಪ್ರಮಾನಿಂದ್ರಮಭಿಗಚ್ಛತೀತಿ । ಕುಟಿಲಸ್ಯ ದೃಷ್ಟಾಂತಃ । ದೀರ್ಘೋ ನ ವಕ್ರತ್ವೇನಾತಿದೂರೋಽಧ್ವಾ ಮಾರ್ಗ ಇವ । ಸ ಯಥಾ ಸಿಧ್ರಂ ಫಲಂ ಪಾನೀಯಾದಿರೂಪಂ ಫಲಾರ್ಥಿನಂ ವಾ ಪುರುಷಮಾ ಕೃಣೋತಿ ಅರ್ವಾಕ್ಕರೋತಿ ನೀಚೈಃ ಕರೋತಿ । ವರ್ಜಯತೀತ್ಯರ್ಥಃ । ತಸ್ಮಾದ್ಯಜ್ಞಮಾರ್ಗಮಜಾನಾನೋ ವಕ್ರೋ ದೂರೇ ಪರಿಭ್ರಮತಿ ನೇಂದ್ರಂ ತರ್ಪಯತಿ । ತದ್ವಿಲಕ್ಷಣಸ್ತು ವರ್ಜಯತ್ಯೇವ ॥

॥ ಪ್ರತಿಪದಾರ್ಥ ॥

**ಕಃ ಚಿತ್ ಯಜ್ಞಃ**—ಯಜ್ಞಾನುಷ್ಠಾತೃವಾದ ಯಾವನಾದರೊಬ್ಬ ಪುರುಷನು। **ತೀರ್ಥೇ**—(ಯಾವುದಾದರೊಂದು) ತೀರ್ಥದ । **ಅಚ್ಛ**—ಸಮೀಪದಲ್ಲಿರುವ । **ಓಕಃ**—ಪಾನೀಯಾದಿಸದನವು । **ತತೃಷಾಣಂ ನ**—ಬಾಯಾರಿಕೆಯಿಂದಪೀಡಿತನಾದವನನ್ನು:(ತೃಪ್ತಿಪಡಿಸುವಂತೆ)। **ಋಂಧನ್ ಸ್ಮ**—(ಇಂದ್ರನನ್ನು)ಅಭಿವೃದ್ಧಿಪಡಿಸುತ್ತಾ ಇರುತ್ತಾನೆ (ಆದರೆ) । **ಜುಹುರಾಣಃ ಚಿತ್**—ಕುಟಿಲನಾದ ಪುರುಷನು । **ದೀರ್ಘಃ**—ದೂರವಾದ । **ಅಧ್ವಾ**—ಮಾರ್ಗವು । **ಸಿಧ್ರಂ**—ಅಭೀಪ್ಸಿತ ಫಲವನ್ನು । **ಆ ಕೃಣೋತಿ ನ**—ಕುತ್ಸಿತವನ್ನಾಗಿ ಮಾಡುವಂತೆ । **ಸಿಧ್ರಂ**—ಫಲಾಪೇಕ್ಷಿಯಾದ ಪುರುಷನನ್ನು । **ಆ ಕೃಣೋತಿ ನ**—(ಅಭೀಪ್ಸಿತ ಫಲದಿಂದ) ದೂರಮಾಡುವಂತೆ । **ಮನಸಾ**—ಮನಸ್ಸಿನಲ್ಲಿಯೇ । **ಪರಿ ಯನ್**—(ಲೌಕಿಕ ವಿಷಯಾದಿಗಳನ್ನು ಧ್ಯಾನಿಸುತ್ತಾ) ಸುತ್ತುತ್ತಿರುತ್ತಾನೆ (ಎಂದರೆ ಇಂದ್ರನನ್ನು ಪೂಜಿಸುವುದೇ ಇಲ್ಲ).

॥ ಭಾವಾರ್ಥ ॥

ಯಾವುದಾದರೊಂದು ಪವಿತ್ರಕ್ಷೇತ್ರದ ಸಮೀಪಸ್ಥನಾದ ಪುರುಷನ ಪಿಪಾಸೆಯನ್ನು ಕ್ಷೇತ್ರಸ್ಥ ಉದಕವು ಪರಿಹರಿಸುವಂತೆ, ಯಜ್ಞಾನುಷ್ಠಾತೃವು ಇಂದ್ರನನ್ನು ಯಜ್ಞಾದಿಗಳಿಂದ ತೃಪ್ತಿಪಡಿಸುತ್ತಾನೆ ; ದೂರವಾದ ಮಾರ್ಗವು ಫಲಾಪೇಕ್ಷಿಯನ್ನು ಫಲದಿಂದ ದೂರಮಾಡುವಂತೆ, ಕುಟಿಲಪುರುಷನು ಮನಸ್ಸಿನಲ್ಲಿ ಲೌಕಿಕ ವಿಷಯಗಳನ್ನು ಯೋಚಿಸುತ್ತಾ ಇಂದ್ರನನ್ನು ಪೂಜಿಸದೇ ಪರಿಭ್ರಮಿಸುತ್ತಿರುತ್ತಾನೆ.

## English Translation.

Oue man propitiates Indra, augmenting (his vigour) by sacrifice; another, who is insincere, worships (him), with mind averted, (to worldly thoughts): (to the first he is) like a lake to a thirsty (pilgrim) near a sacred spot: (to the other) like a long road, which retards the end (of the journey).

॥ ವಿಶೇಷವಿಷಯಗಳು ॥

**ಕಶ್ಚಿತ್ ಯಜ್ಞಃ ಋಂಧನ್**—ಇಲ್ಲಿ ಯಜ್ಞ ಪದವು ಯಜ್ಞವನ್ನು ಆಚರಿಸುವ ಯಜಮಾನನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. **ಯಜ್ಞವಾನ್ ಯಜ್ಞಾನುಷ್ಠಾಯೀ ಇಂದ್ರಂ ಯಜ್ಞೇನ ವರ್ಧಯತಿ** ಯಜ್ಞವನ್ನು ಆಚರಿಸುವ ಯಜಮಾನನು ಯಜ್ಞಮಾಡುವುದರಿಂದ ಇಂದ್ರನನ್ನು ತೃಪ್ತಿಪಡಿಸುವನು ಎಂದು ಅರ್ಥವನ್ನು ವಿವರಿಸಿದೆ.

**ಜುಹುರಾಣಶ್ಚಿತ್ ಮನಸಾ ಪರಿ ಯನ್** (ದಾರಿತಪ್ಪಿ ನಡೆಯುವವನು) ವಕ್ರಮಾರ್ಗದಲ್ಲಿ ಸಂಚರಿಸುವವನು **ಪರಿತೋ ಗಚ್ಛನ್ ಲೌಕಿಕ ವಿಷಯಾದಿಕಂ ಧ್ಯಾಯನ್ ವರ್ತತೇ** ತನ್ನ ಮನಸ್ಸಿನಿಂದ ಲೋಕದಲ್ಲಿರುವ ಭೋಗ್ಯವಸ್ತುಗಳನ್ನೇ ಧ್ಯಾನಮಾಡುತ್ತಾ ಇರುವನು. ಅಥವಾ—**ಯದ್ವಾ ವರ್ಜಯಿತ್ವಾ ಗಚ್ಛನ್ನೇದಂ ಪ್ರಾಪ್ನೋತಿ** ಯಜ್ಞಾದಿಗಳನ್ನು ಆಚರಿಸಿ ಇಂದ್ರನೇ ಮೊದಲಾದ ದೇವತೆಗಳ ಅನುಗ್ರಹವನ್ನು ಸಂಪಾದಿಸುವ ಮಾರ್ಗವನ್ನು ಬಿಟ್ಟು ಇರುವನು ಎಂದು **ಪರಿ** ಎಂಬ ಉಪಸರ್ಗವನ್ನು ವರ್ಜನಾರ್ಥದಲ್ಲಿ ಪ್ರಯೋಗವನ್ನು ಅನುಸರಿಸಿ ಅರ್ಥವನ್ನು ವಿವರಿಸಿದೆ.

**ತೀರ್ಥೇ ಅಚ್ಛ ಓಕಃ ತತೃಷಾಣಂ**—ನಿರುಕ್ತಕಾರರು ಓಕಸ್ ಎಂಬ ಪದಕ್ಕೆ ನಿವಾಸಸ್ಥಾನವೆಂಬ ಅರ್ಥವನ್ನು (ನಿ. ೩-೩) ವಿವರಿಸಿದ್ದಾರೆ.

ಮಾನವನಿಗೆ ಸ್ವಗೃಹದಲ್ಲಿಯೇ ಪೂರ್ಣವಾದ ಅಭಿಮಾನವಿರುವುದು ಎಂಬುದನ್ನು ತೋರಿಸಲು ನಿರುಕ್ತಕಾರರು ಸ್ವಾರಸ್ಯವಾದ ಉದಾಹರಣೆಯನ್ನು ಕೊಟ್ಟಿದ್ದಾರೆ.

**ನಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯೋ ಮನಸಾ ಮಂತವಾ ಉ ।**
**ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀಷಾಳೇತು ನವ್ಯಃ ॥**

(ಋ. ಸಂ. ೭-೪-೮).

ಸ್ವೀಕೃತಪುತ್ರನಿಗೆ ಎಂದಿದ್ದರೂ ಸ್ವಗೃಹದಲ್ಲಿಯೇ ಅಭಿಮಾನವಿದ್ದು ಅಲ್ಲಿಗೇ ವಾಪಸ್ಸು ಹೋಗುತ್ತಾನಾದ್ದರಿಂದ ಸ್ವಗೃಹವು ಪೂರ್ಣವಾದ ಅಭಿಮಾನಕ್ಕೆ ಪಾತ್ರವು ಎಂಬಂಶವು **ಓಕ** ಶಬ್ದದಿಂದ ಸೂಚಿತವಾಗುತ್ತದೆಂದು ಮೇಲಿನ ಋಕ್ಕನ್ನುದಾಹರಿಸಿ ವಿವರಿಸಿದ್ದಾರೆ.

ಪ್ರಸಿದ್ಧವಾಗಿರುವ ಮಾರ್ಗದಲ್ಲಿರುವ (ಅರವಟ್ಟಿಗೆ) ಪಾನೀಯವನ್ನು ಸಿದ್ಧಪಡಿಸಿರುವ ಮನೆಯು ಬಾಯಾರಿಕೆಯುಳ್ಳವನಿಗೆ ಶೀಘ್ರವಾಗಿ ಸಂತೋಷವನ್ನುಂಟುಮಾಡುವ ಹಾಗೆ, ಶ್ರುತಿಪ್ರಸಿದ್ಧವಾದ ಯಜ್ಞಾದಿಕರ್ಮಗಳನ್ನು ಆಚರಿಸುವುದರಿಂದ ಒಬ್ಬನು ಇಂದ್ರನನ್ನು ಸಂತೋಷಪಡಿಸುವನು ಎಂದು ವಿವರಿಸಿದೆ.

**ದೀರ್ಘೋಣ ನ ಅಧ್ವಾ ಸಿಧ್ರಂ ಆಕೃಣೋತಿ—ವಕ್ರತ್ವೇನ ಅತಿದೂರಃ ಮಾರ್ಗ ಇವ** । ನಿರುಕ್ತಕಾರರು ಸಿಧ್ರ ಶಬ್ದಕ್ಕೆ ಸಾಧನವೆಂದು ಅರ್ಥವನ್ನು (ನಿ. ೯-೩೯) ವರ್ಣಿಸಿದ್ದಾರೆ. ಸಾಯಣರು ಫಲವೆಂದು ಅರ್ಥವನ್ನು ವಿವರಿಸಿ, **ಪಾನೀಯಾದಿರೂಪಂ ಫಲಾರ್ಥಿನಂ ವಾ ಪುರುಷಂ** (ಪಿಪಾಸಿತನಾದವನು) ಬಾಯಾರಿಕೆಯಿಂದ ಕೂಡಿದವನು ವಕ್ರವಾದ ಅಥವಾ ಅತಿದೂರವಾದ ಮಾರ್ಗದಲ್ಲಿ ಸಂಚರಿಸುವುದರಿಂದ ತನಗೆ ಹಿತಜನಕವಾಗಿರುವ ಪಾನೀಯರೂಪವಾದ ಫಲವು ದೊರೆಯುವ ಸ್ಥಾನವನ್ನು ತ್ಯಾಗಮಾಡುವನು ಎಂದು ವಕ್ರಮಾರ್ಗಗಾಮಿಯಾದ ಕುಟಿಲನ ಗತಿಯನ್ನು ವರ್ಣಿಸಿರುತ್ತೆ.

**ತಸ್ಮಾದ್ಯಜ್ಞಮಾರ್ಗಮಜಾನಾನೋ ವಕ್ರೋ ದೂರೇ ಪರಿಭ್ರಮತಿ ನೇಂದ್ರಂ ತರ್ಪಯತಿ ತದ್ವಿಲಕ್ಷಣಸ್ತು ವರ್ಜಯತ್ಯೇವ** । ಕುಟಿಲನಾದವನು ಯಜ್ಞವನ್ನು ಆಚರಿಸಿ ಇಂದ್ರನನ್ನು ಸಂತೋಷಪಡಿಸುವ ಮಾರ್ಗವನ್ನು ತಿಳಿಯದಿರುವುದರಿಂದ ವ್ಯವಹಾರಮಾರ್ಗದಲ್ಲಿಯೇ ಸುತ್ತುತ್ತಿರುವನು. ಇಂದ್ರನ ಸಂತೋಷವನ್ನು ಉಂಟುಮಾಡದಿರುವನು. ಯಜ್ಞವನ್ನು ಆಚರಿಸುವವನು ಶ್ರುತ್ಯುಕ್ತವಾದ ಕ್ರಮದಿಂದ ಯಜ್ಞಾಚರಣೆಯನ್ನು ಮಾಡಿ ಇಂದ್ರನನ್ನು ಸಂತೋಷಪಡಿಸುವುದರಿಂದ ಲೌಕಿಕವ್ಯವಹಾರಾಚರಣರೂಪವಾದ ವಕ್ರಮಾರ್ಗವನ್ನು ತ್ಯಜಿಸುವನು ಎಂದು ಲೌಕಿಕ ಮತ್ತು ವೈದಿಕಮಾರ್ಗಗಳ ಆಚರಣೆಯಿಂದ ಉಂಟಾಗುವ ಫಲವನ್ನು ಪ್ರದರ್ಶನಮಾಡಿ, ಲೌಕಿಕವಾದ ವ್ಯವಹಾರವನ್ನು ಆಚರಿಸುವ ಕುಟಿಲನಿಗೂ, ಯಜ್ಞವನ್ನು ಆಚರಿಸುವ ವೈದಿಕನಿಗೂ ಇರುವ ತಾರತಮ್ಯವನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಯಜ್ಞಃ**—ಯಜ್ಞಃ ಅಸ್ಯ ಅಸ್ತಿ ಇತಿ ಯಜ್ಞಃ **ಅರ್ಶಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಋಂಧನ್**—ಋಧು ವೃದ್ಧೌ. ಧಾತು. ದಿವಾದಿ. ಲಟಿಗೆ ಶತ್ರಾದೇಶ. ವ್ಯತ್ಯಯದಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಜಹುರಾಣಃ**—ಹುರ್ಛಾ ಕೌಟಿಲ್ಯೇ ಧಾತು. **ಹುರ್ಛೇಃಸನೋ ಲುಕ್ ಛಲೋಪಶ್ಚ** (ಉ. ಸೂ. ೨-೨೪೮) ಎಂಬುದರಿಂದ ಸನ್ನಂತದ ಮೇಲೆ ಆನಚ್ ಪ್ರತ್ಯಯ. ಸನಿಗೆ ಲೋಪ. ಧಾತು ಛಕಾರಕ್ಕೆ ಲೋಪ. ಪ್ರತ್ಯಯ (ಸನ್) ಲೋಪವಾದರೂ ಪ್ರತ್ಯಯ ಲಕ್ಷಣದಿಂದ ಧಾತುವಿಗೆ ದ್ವಿತ್ವ. ರೇಫ ನಿಮಿತ್ತವಾಗಿ ಪ್ರತ್ಯಯ ನಕಾರಕ್ಕೆ ಣತ್ವ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪರಿಯನ್**—ಇಣ್ ಗತೌ. ಧಾತು. ಲಟಿಗೆ ಶತ್ರಾದೇಶ. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ

**ತೀರ್ಥೇ**—ತೄ ಪ್ಲವನತರಣಯೋಃ ಧಾತು. **ಪಾತೄತುದಿ**—(ಉ. ಸೂ. ೨-೧೬೪) ಎಂಬುದರಿಂದ ಥಕ್ ಪ್ರತ್ಯಯ. **ಋೂತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಇತ್ವ ಬಂದಾಗ **ಹಲಿಚ** ಎಂಬುದರಿಂದ ದೀರ್ಘ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಚ್ಛ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ತಾತೃಷಾಣಮ್**—ಞಿ ತೃಷಾ ಪಿಪಾಸಾಯಾಮ್. ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಅಟ್‌ಕುಪ್ವಾಙ**-ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. ಸಂಹಿತಾದಲ್ಲಿ ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಿಧ್ರಮ್**—ಷಿಧ ಗತ್ಯಾಮ್. ಧಾತು. **ಸ್ಫಾಯಿತಂಚಿ ವಂಚಿ**—(ಉ. ಸೂ. ೧-೧೭೦) ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಕೃಣೋತಿ**—ಕೃವಿ. ಹಿಂಸಾಕರಣಯೋಶ್ಚ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಮೋ ಷೂ ಣ ಇಂದ್ರಾತ್ರ ಪೃತ್ಸು ದೇವೈರಸ್ತಿ ಹಿ ಷ್ಮಾ ತೇ ಶುಷ್ಮಿನ್ನವಯಾಃ ।
ಮಹಶ್ಚಿದ್ಯಸ್ಯ ಮೀಳ್ಹುಷೋ ಯವ್ಯಾ ಹವಿಷ್ಮತೋ ಮರುತೋ ವಂದತೇ ಗೀಃ ॥

॥ ಪದಪಾಠಃ ॥

ಮೋ ಇತಿ । ಸು । ನಃ । ಇಂದ್ರ । ಅತ್ರ । ಪೃತ್ಽಸು । ದೇವೈಃ । ಅಸ್ತಿ । ಹಿ । ಸ್ಮ । ತೇ । ಶುಷ್ಮಿನ್ । ಅವಽಯಾಃ ।
ಮಹಃ । ಚಿತ್ । ಯಸ್ಯ । ಮೀಳ್ಹುಷಃ । ಯವ್ಯಾ । ಹವಿಷ್ಮತಃ । ಮರುತಃ । ವಂದತೇ । ಗೀಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅತ್ರ ಪೃತ್ಸ್ವೇಷೂಪಸ್ಥಿತೇಷು ಸಂಗ್ರಾಮೇಷು ವೃಷ್ಟ್ಯರ್ಥಂ ಮೇಘಜಯೇಷು ದೇವೈರ್ಮರುದಾದಿಭಿಃ ಸಹ ನೋಽಸ್ಮಾನ್ ಮೋ ಷು ಮೈವ ತ್ಯಾಕ್ಷೀರಿತಿ ಶೇಷಃ। ಮರುತ್ಸಹಿತೋ ಯುಧ್ಯಸ್ವೇತ್ಯರ್ಥಃ। ಹೇ ಶುಷ್ಮಿನ್ ಬಲವನ್ನಿಂದ್ರ ಅಸ್ತಿ ಹಿ ಸ್ಮ ತೇ। ಅಸ್ತಿ ಹಿ ಸ್ಮ ತವ ಖಲು। ತವ ಕಿಮಸ್ತೀತಿ ಉಚ್ಯತೇ। ಅವಯಾ ಅವಯಜನಂ ಅವಯುಜ್ಯ ಪೃಥಕ್ಕೃತ್ಯ ಯಜನಂ ಹವಿರ್ಭಾಗೋಽಸ್ತಿ। ಮರುದ್ಭ್ಯಃ ಪೃಥಗಪ್ಯಸ್ತಿ ಹವಿರ್ಭಾಗಃ। ಕೇವಲಂ ಮರುದ್ಭ್ಯ ಏವ ದೀಯತೇ ನಾಸ್ಮಭ್ಯಂ ಅತಃ ಕಥಂ ಯೋತ್ಸ್ಯಾಮೀತಿ ನ ಮಂತವ್ಯಮಿತ್ಯರ್ಥಃ। ಯದ್ವಾ। ಅವಯಾಃ ಶತ್ರೂಣಾಂ ವರ್ಜನಾಯ ಗಂತಾ ವಜ್ರೋಽಸ್ತಿ ತೇ। ಕಿಂಚ ಹವಿಷ್ಮತಃ ಪ್ರದೇಯಹವಿರ್ಯುಕ್ತಸ್ಯ ಮೀಳ್ಹುಷೋ ಹವಿಷ್ಪ್ರದಾತುಃ। ಯದ್ವಾ। ಏತತ್ಪದದ್ವಯಂ ಮರುತಾಂ ವಿಶೇಷಣಂ। ಯಸ್ಯ ಮಮ ಯವ್ಯಾ ಫಲೇನೇಂದ್ರೇಣ ವಾ ಸಹ ಮಿಶ್ರಯಂತೀ ಗೀಃ ಸ್ತುತಿಶಸ್ತ್ರಾದಿರೂಪಾ ವಾಙ್ಮಹಶ್ಚಿನ್ಮಹತೋಽಪಿ ಮೀಳ್ಹುಷಃ ಸೇಕ್ತೄನ್ ಹವಿಷ್ಮತೋ ದತ್ತಹವಿಷಾ ತದ್ವತೋ ಮರುತೋ ವಂದತೇ ಸ್ತೌತಿ॥

॥ ಪ್ರತಿಪದಾರ್ಥ ॥

**ಹವಿಷ್ಮತಃ**—(ನಿನಗೆ ಪ್ರದೇಯವಾದ) ಹವಿರ್ವಿಶಿಷ್ಟನೂ। **ಮೀಳ್ಹುಷಃ**—(ನಿನಗೆ) ಹವಿಷ್ಪ್ರದಾತೃವೂ ಆದ। **ಯಸ್ಯ**— ಯಾವ ನನ್ನ (ನಮ್ಮ)। **ಯವ್ಯಾ**—ಫಲಸಹಚರಿತವಾದ। **ಗೀಃ**—ಸ್ತುತಿರೂಪವಾದ ವಾಕ್ಕು। **ಮಹಃ ಚಿತ್**—ಅತಿದೊಡ್ಡವರಾದರೂ। [ಅಥವಾ **ಹವಿಷ್ಮತಃ**—(ನಮ್ಮಿಂದ ದತ್ತವಾದ) ಹವಿರ್ಯುಕ್ತರೂ। **ಮೀಳ್ಹುಷಃ**—ಸೇಕ್ತೃಗಳೂ (ಮಳೆ ಸುರಿಸುವವರೂ) ಆದ।] **ಮರುತಃ**—ಮರುದ್ದೇವತೆಗಳನ್ನು। **ವಂದತೇ**—ಸ್ತುತಿಸುತ್ತದೆಯೋ। **ನಃ**—(ಅಂತಹ) ನಮ್ಮನ್ನು। **(ಹೇ) ಇಂದ್ರ**—ಎಲೈ ಇಂದ್ರನೇ। **ಅತ್ರ ಪೃತ್ಸು**—ಈಗ ಉಪಸ್ಥಿತವಾದ (ಮೇಘಜಯಸಾಧನವಾದ) ಯುದ್ಧಗಳಲ್ಲಿ। **ದೇವೈಃ**—ಮರುತರಿಂದ (ಸಹಚರಿತನಾದ ನೀನು)। **ಮೋ ಷು**—ಬಿಡಲೇಬೇಡ। **(ಹೇ) ಶುಷ್ಮಿನ್**—ಎಲೈ ಬಲಿಷ್ಠನಾದ ಇಂದ್ರನೇ। **ತೇ**—ನಿನ್ನ। **ಅವಯಾಃ**—ಯಜ್ಞಭಾಗವುಅಥವಾ ಶತ್ರುನಾಶಕವಾದ ವಜ್ರಾಯುಧವು। **ಅಸ್ತಿ ಹಿ ಸ್ಮ**—ಇದ್ದೇ ಇದೆಯಷ್ಟೆ.

॥ ಭಾವಾರ್ಥ ॥

ಹವಿಷ್ಪ್ರದಾತೃವೂ, ಈಗ ಪ್ರದೇಯವಾದ ಹವಿರ್ವಿಶಿಷ್ಟನೂ ಆದ ನನ್ನ ಸ್ತುತಿಯು ಅತಿ ದೊಡ್ಡವರಾದ ಮರುದ್ದೇವತೆಗಳನ್ನು ತುಷ್ಟಿಪಡಿಸುತ್ತದೆ. ನಿನಗೆ ಸಲ್ಲಬೇಕಾದ ಯಜ್ಞಭಾಗವು ಸಿದ್ಧವಾಗಿದ್ದೇ ಇದೆ. (ಆದುದರಿಂದ) ಬಲಿಷ್ಠನಾದ ಎಲೈ ಇಂದ್ರನೇ, ಮೇಘಜಯಸಾಧನವಾದ ಯುದ್ಧಗಳಲ್ಲಿ, ಮರುತ್ಸಹಚರಿತನಾದ ನೀನು ನಮ್ಮ ಕೈ ಬಿಡಲೇ ಬೇಡ.

## English Translation.

Indra, associated with the Maruts in battles (with the clouds), abandon us not; for a share of tLe offering is set apart, mighty one, tor you, for whom, the shedder of rain and accepter of oblations, the worship is offered with oblations, whilst the hymn glorifies the Maruts.

॥ ವಿಶೇಷವಿಷಯಗಳು ॥

**ಪೃತ್ಸು ದೇವ್ಯೈಃ ನಃ ಮೋ ಷು—ಪೃತ್ಸು** ಎಂಬ ಪದವು ಸಂಗ್ರಾಮ ನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಇಲ್ಲಿ ಇಂದ್ರನನ್ನು ಸಂಬೋಧಿಸಿ, **ಸಂಗ್ರಾಮೇಷು ಉಪಸ್ಥಿತೇಷು** ಯುದ್ಧವನ್ನು ಮಾಡುವ ಸನ್ನಿವೇಶಗಳು ಒದಗಿದಾಗ ಅಥವಾ **ವೃಷ್ಟ್ಯರ್ಥಂ ಮೇಘಜಯೇಷು** ವೃಷ್ಟ್ಯುದಕಗಳನ್ನು ಸುರುವುದಕ್ಕಾಗಿ ಮೇಘಗಳನ್ನು ಜಯಿಸುವ ಸಮಯದಲ್ಲಿ ಇಂದ್ರನು **ಮರುದಾದಿಭಿಸ್ಸಹ** ಮರುದ್ದೇವತೆಗಳೊಡನೆ ಇರುವವನಾಗಿ ಯುದ್ಧಮಾಡಲಿ ಎಂದು ಆಶಂಸಿಸಿದೆ.

ಮರುದ್ದೇವತೆಗಳೊಡನೆಯೇ ಕೂಡಿಕೊಂಡು ಯುದ್ಧಮಾಡುವವನಾದ ಕಾರಣ ಇಂದ್ರನಿಗೂ ಮರುತ್ತುಗಳಿಗೂ ಪ್ರತ್ಯೇಕವಾಗಿ ಹವಿರ್ಭಾಗವು ಇರುವುದೆಂದು ಈ ಮಂತ್ರದಿಂದ ಸೂಚಿತವಾಗಿದೆ.

**ಅವಯಾಃ—ಅವಯಜನಂ ಅವಕೃತ್ಯ ಪೃಥಕ್ಕೃತ್ಯ ಯಜನಂ। ಹೇ ಶುಷ್ಮಿನ್ ಬಲವನ್** ಬಲವುಳ್ಳವನಾದ ಇಂದ್ರನನ್ನು ಸಂಬೋಧಿಸಿ ಹೇಳಿರುವ ಈ ವಾಕ್ಯದಲ್ಲಿ **ಮರುದ್ಭ್ಯಃ ಪೃಥಗಸ್ತ್ಯಸ್ತಿ ಹವಿರ್ಭಾಗಃ** ಮರುದ್ದೇವತೆಗಳಿಗೆ ಪ್ರತ್ಯೇಕವಾಗಿ ಹವಿರ್ಭಾಗವು ಇರುತ್ತದೆಯಾದಕಾರಣ **ಕೇವಲಂ ಮರುದ್ಭ್ಯ ಏವ ದೀಯತೇ ನಾಸ್ಮಭ್ಯಂ ಅತಃ ಕಥಂ ನ ಯೋತ್ಸ್ಯಾಮೀತಿ ನ ಮಂತವ್ಯಂ**—ಮರುದ್ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಕಾರಣ ಇಂದ್ರನಿಗೆ ಹವಿರ್ಭಾಗವು ಇಲ್ಲದೇ ಇಂದ್ರನು ಯುದ್ಧವನ್ನು ಮಾಡದೇ ಇರುವನೆಂದು ಆಶಂಕಾಪರವಾದ ಒಂದು ಅರ್ಥವನ್ನು ವಿವರಿಸಿ, ಅದಕ್ಕೆ ಉತ್ತರವಾಗಿ **ಅಸ್ತಿ ಹಿ ಸ್ಮ ತೇ** ಎಂಬ ವಾಕ್ಯದಿಂದ **ಅಸ್ತಿ ಹಿ ಸ್ಮ ತವ ಖಲು** ಇಂದ್ರನಿಗೂ ಹವಿಸ್ಸಿನಲ್ಲಿ ಭಾಗವು ಇರುವುದೆಂದು ವಿವರಿಸಿದೆ.

ಎರಡನೆಯ ಅರ್ಥದಲ್ಲಿ—**ಯದ್ವಾ ಅವಯಾಃ ಶತ್ರೂಣಾಂ ವರ್ಜನಾಯ ಗಂತಾ ವಜ್ರೋಸ್ತಿ।** ಅವಯಾಃ ಎಂಬ ಪದಕ್ಕೆ ಶತ್ರುಗಳನ್ನು ನಾಶಮಾಡುವುದಕ್ಕಾಗಿ ಹೋಗುವವನೆಂದು ಅರ್ಥಮಾಡಿದೆ. ಇಂದ್ರನಿಗೆ ಶತ್ರುಗಳನ್ನು ನಾಶಪಡಿಸುವ ವಜ್ರಾಯುಧವೂ, ನೈಸರ್ಗಿಕವಾದ ಬಲವೂ ಇರುವುದೆಂದು ಅರ್ಥವನ್ನು ವರ್ಣಿಸಿದೆ.

**ಯುವ್ಯಾ ಗೀಃ ಮಹಶ್ಚಿತ್ ಮರುತಃ ವಂದತೇ—**ಯುವ್ಯಾ ಎಂಬ ಪದವು **ಫಲೇನೇಂದ್ರೇಣ ವಾ ಮಿಶ್ರಯಂತೀ** ಫಲವನ್ನು ವಿವರಿಸುವುದೂ ಅಥವಾ ಇಂದ್ರನ ಮಹಿಮೆಯನ್ನು ವಿವರಿಸುವುದೂ ಆಗಿರುವ ವಾಕ್ಕಿಗೆ ವಿಶೇಷಣವಾಗಿ ಪ್ರಯುಕ್ತವಾಗಿದೆ. **ಗೀಃ** ಎಂಬ ಪದಕ್ಕೆ **ಸ್ತುತಿಶಸ್ತ್ರಾದಿರೂಪಾ ವಾಕ್** ದೇವತೆಗಳನ್ನು ಸ್ತುತಿಸುವ ಅಥವಾ ಅವರ ಆಹ್ವಾನಮಾಡುವ ಶಸ್ತ್ರರೂಪವಾದ ವಾಕ್ಕು ಎಂದು ಅರ್ಥವನ್ನು ವಿವರಿಸಿದೆ. **ಹವಿಷ್ಮತಃ ಮೀಳ್ಹುಷಃ** ಎಂಬ ಪದಗಳು ಮರುತ್ತುಗಳಿಗೂ ಇಂದ್ರನಿಗೂ ವಿಶೇಷಣವಾಗಿ ಪ್ರಯುಕ್ತಗಳಾಗಿವೆ. ಈ ಪದಗಳಿಗೆ ಇಂದ್ರನ ಪರವಾಗಿ ಮರುತ್ತುಗಳಿಗೆ ಯಜಮಾನನು ಅರ್ಪಿಸಿದ ಹವಿಸ್ಸಿನ ಭಾಗದಿಂದ ಕೂಡಿರುವವನೆಂದೂ, ಲೋಕಗಳಿಗೆ ಅನ್ನವನ್ನು ಕೊಡುವವನೆಂದೂ ಅರ್ಥವನ್ನು ವಿವರಿಸಿದೆ. ಮರುದ್ದೇವತೆಗಳ ಪರವಾಗಿ ಅತಿಶಯವಾಗಿ ವೃಷ್ಟಿಯನ್ನು ಸುರಿಸುವ ಇತರ ದೇವತೆಗಳಿಗಿಂತಲೂ ಪ್ರಭೂತವಾದ ವೃಷ್ಟಿಯನ್ನು ಸುರಿಸುವವರೆಂದೂ, ಅರ್ಪಿತವಾದ ಹವಿಸ್ಸಿನಿಂದ ಇಂದ್ರನ ಮೂಲಕ ಹವಿರ್ಭಾಗಗಳನ್ನು ಹೊಂದುವವರೆಂದೂ ಅರ್ಥವನ್ನು ವರ್ಣಿಸಿದೆ. ಯಜಮಾನರೂ ಅಧ್ವರ್ಯುಗಳೂ ಸಹ ಪಠಿಸುವ ಸ್ತುತಿ ಶಸ್ತ್ರರೂಪವಾದ ವಾಕ್ಕು ಹವಿಷ್ಮಂತರಾಗಿಯೂ ವೃಷ್ಟಿಪ್ರದರಾಗಿಯೂ ಇರುವ ಇಂದ್ರ ಅಥವಾ ಮರುತ್ತುಗಳ (ಸ್ತುತಿರೂಪವಾಗಿ) ವಂದನೆಯಲ್ಲಿ ವಿನಿಯುಕ್ತವಾಗಿರಲಿ ಎಂದು ಯಜಮಾನನಿಂದ ಆಶಿಸಿದೆ.

**ಮೀಳ್ಹುಷಃ** ಎಂಬ ಪದವು ಸೇಚನಾರ್ಥಕವಾದ **ಮಿಹ್** ಧಾತುವಿನಿಂದ ನಿಷ್ಪನ್ನವಾಗಿದೆ. **ಯನ್ಮೇಹತಿ ತದ್ವರ್ಷತಿ** (ಬೃ. ಉ. ೧-೧-೧) ಎಂಬ ವಾಕ್ಯದಿಂದ ಇದರ ಮೂಲರೂಪದ ಅರ್ಥವನ್ನು ನೋಡಬಹುದು.

**ವಾಜಯನ್ನಿವ ನೂ ರಥಾನ್ಯೋಗಾँ ಅಗ್ನೇರುಪ ಸ್ತುಹಿ । ಯಶಸ್ತಮಸ್ಯ ಮೀಳ್ಹುಷಃ ॥**

(ಋ. ಸಂ. ೨-೮-೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಫಲಸ್ಯ ಸೇಕ್ತುಃ** ಇಷ್ಟಾರ್ಥಗಳನ್ನು ಸುರಿಸಿ ಕೊಡತಕ್ಕ ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ವೃಷ್ಟಿಯನ್ನು ಸುರಿಸುವವರು ಎಂದರ್ಥವಾಗುತ್ತದೆ. ಈ ಮೂಲಧಾತುವಿನಿಂದಲೇ ನಿಷ್ಪನ್ನವಾದ **ಮೀಳ್ಹಂ** ಎಂಬ ಪದವನ್ನು **ಧನ** ನಾಮಗಳಲ್ಲಿಯೂ (ನಿ. ೩-೯) **ಮೀಳ್ಹೇ** ಎಂಬ ಪದವನ್ನು ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ನಿರುಕ್ತಕಾರರು ಸೇರಿಸಿ ಪಠಿಸಿದ್ದಾರೆ. ಅವುಗಳ ವಿಶೇಷಾರ್ಥವನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಷೂ—ಸುಞಃ** (ಪಾ. ಸೂ ೮-೩-೧೦೭) ಎಂಬುದರಿಂದ ಷತ್ವ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಪೃತ್ಸು**—ಪೃತನಾ ಶಬ್ದ. ಸಪ್ತಮೀ ಬಹುವಚನ ಪರವಾದಾಗ **ಮಾಂಸಪೃತನಾಸಾನೂನಾಂ ಮಾಂಸ್ ಪೃತ್ಸ್ನವಃ ಶಸಾದೌ ವಾ ವಾಚ್ಯಾಃ** ಎಂಬ ವಚನದಿಂದ ಪೃತಾದೇಶ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸ್ಮ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಶುಷ್ಮಿನ್**—ಶುಷ್ಮ ಬಲಂ ಅಸ್ಯ ಅಸ್ತಿ ಇತಿ. ಶುಷ್ಮೀ. **ಇತನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅವಯಾಃ**—ಅವ ಪೃಥಕ್ಕೃತ್ಯ ಯಾತಿ ಇತಿ ಅವಯಾಃ ಯಾ ಪ್ರಾಪಣೇ. ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮೀಳ್ಹುಷಃ**—ಮಿಹ ಸೇಚನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಶಸ್ ಅಥವಾ ಙಸ್ ಪರವಾದಾಗ **ವಸೋಃ ಸಂಪ್ರಸಾರಣಂ** ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. ಪ್ರತ್ಯಯ ಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ವಂದತೇ**—ವದಿ ಅಭಿವಾದನಸ್ತುತ್ಯೋಃ ಧಾತು. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲ ಸಾರ್ವಧಾತುಕವು ಅನುದಾತ್ತವಾಗಿರುವುದರಿಂದ ಧಾತುಸ್ವರ ಉಳಿಯುತ್ತದೆ ॥ ೧೨ ॥



॥ ಸಂಹಿತಾಪಾಠಃ ॥

ಏಷ ಸ್ತೋಮ ಇಂದ್ರ ತುಭ್ಯಮಸ್ಮೇ ಏತೇನ ಗಾತುಂ ಹರಿವೋ ವಿದೋ ನಃ ।
ಆ ನೋ ವವೃತ್ಯಾಃ ಸುವಿತಾಯ ದೇವ ವಿದ್ಯಾಮೇಷಂ ವೃಜನಂ ಜೀರದಾನುಂ ॥

॥ ಪದಪಾಠಃ ॥

ಏಷಃ । ಸ್ತೋಮಃ । ಇಂದ್ರ । ತುಭ್ಯಂ । ಅಸ್ಮೇ ಇತಿ । ಏತೇನ । ಗಾತುಂ । ಹರಿsವಃ । ವಿದಃ । ನಃ ।
ಆ । ನಃ । ವವೃತ್ಯಾಃ । ಸುವಿತಾಯ । ದೇವ । ವಿದ್ಯಾಮ । ಇಷಂ । ವೃಜನಂ । ಜೀರsದಾನುಂ ॥ ೧೩ ॥

॥ ಸಾಯಣಭಾಷ್ಯಂ ॥

**ಅಥ ತ್ರಯೋದಶ್ಯಾ ಸೂಕ್ತಾದಿಮಾರಭ್ಯ ಕೃತಾಂ ಸ್ತುತಿಂ ನಿಗಮಯ್ಯ ಫಲಂ ಪ್ರಾರ್ಥಯತೇ ॥**

**ಹೇ ಇಂದ್ರ ಏಷ ಸ್ತೋಮ ಇದಾನೀಂಕಾರಿತಪ್ರಕಾರಃ ಸ್ತೋತ್ರವಿಶೇಷಸ್ತುಭ್ಯಂ ತ್ವದರ್ಥಂ । ಹೇ ಹರಿವೋ ಹರಿಭ್ಯಾಂ ತದ್ವನ್ನಿಂದ್ರ ಏತೇನ ಸ್ತೋತ್ರೇಣ ಗಮನೇನ ವಾ ನೋಽಸ್ಮದೀಯಂ ಗಾತುಂ ದೇವಯಜನಮಾರ್ಗಂ ವಿದಃ । ವಿದಸ್ವ । ವಿದಿತ್ವಾ ಚ ಹೇ ದೇವ ಸುವಿತಾಯ ಸುಹಿತಾಯ ಶೋಭನಗಮನಾಯ ವಾ ನೋಽಸ್ಮಾನಾ ವವೃತ್ಯಾಃ । ಆವರ್ತಸ್ವ । ಅಸ್ಮದ್ಯಾಗಂ ಪ್ರತ್ಯಾಗಚ್ಛ । ವಿದ್ಯಾಮೇತ್ಯಾದಿ ವ್ಯಾಖ್ಯಾತಂ ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**— ಎಲೈ ಇಂದ್ರನೇ । **ಅಸ್ಮೇ**—ನಮ್ಮ । **ಏಷಃ ಸ್ತೋಮಃ**—(ಈ ವರೆಗೆ ಮಾಡಿದ) ಈ ಸ್ತುತಿಯು । **ತುಭ್ಯಂ**—ನಿನಗೋಸ್ಕರವಾಗಿ । **(ಹೇ) ಹರಿವಃ**—ಹರಿನಾಮಕ ಅಶ್ವವಿಶಿಷ್ಟನಾದ ಎಲೈ ಇಂದ್ರನೇ । **ಏತೇನ**—ಈ ಸ್ತುತಿಯಿಂದ । **ನಃ**—ನಮ್ಮ । **ಗಾತುಂ**—ಯಾಗಶಾಲೆಯ ಮಾರ್ಗವನ್ನು । **ವಿದಃ**—ತಿಳಿದುಕೋ (ಅನಂತರ) । **(ಹೇ) ದೇವ**—ಎಲೈ ದೇವನೇ । **ಸುವಿತಾಯ**—ನಮ್ಮ ಹಿತಕ್ಕೋಸ್ಕರ (ಸುಖಾಗಮನಕ್ಕೋಸ್ಕರ) **ನಃ**—ನಮ್ಮನ್ನು । **ಆ ವವೃತ್ಯಾಃ**—ಉದ್ದೇಶಿಸಿ ಆಗಮಿಸು । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನು । **ವಿದ್ಯಾಮ**— (ನಿನ್ನನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ಈ ವರೆಗೆ ಮಾಡಿದ ಸ್ತುತಿಯು ನಿನ್ನನ್ನು ತೃಪ್ತಿಪಡಿಸುವುದಕ್ಕೋಸ್ಕರ. ನಮ್ಮ ಈ ಸ್ತುತಿಯಿಂದ ನಮ್ಮ ಯಾಗಶಾಲೆಯ ಮಾರ್ಗವನ್ನು ತಿಳಿದು ನಮ್ಮ ಹಿತಾರ್ಥವಾಗಿ, ಯಾಗಶಾಲೆಗೆ ಆಗಮಿಸು ; ಆಗತನಾದ ನಿನ್ನನುಗ್ರಹದಿಂದ ನಾವು ಆಹಾರ, ಬಲ ಮತ್ತು ದೀರ್ಘಾಯುಗಳನ್ನು ಪಡೆಯುವಂತಾಗಲಿ.

## English Translation.

This hymn, Indra, is addressed to you. Lord of steeds, learn by it the way to our sacrifice, and come hither for our good, that we may thence obtain food, strength, and long life.

॥ ವಿಶೇಷವಿಷಯಗಳು ॥

**ಹರಿವಃ—ಹರಿಭ್ಯಾಂ ತದ್ವನ್ನಿಂದ್ರ। ಹರೀ ಇಂದ್ರಸ್ಯ** ಎಂದು ಇಂದ್ರನ ಅಶ್ವಗಳಿಗೆ ಪ್ರಯೋಗಿಸಿರುವುದರಿಂದ ಹರಿವಃ ಎಂಬ ಪದಕ್ಕೆ ತದ್ವನ್ ಎಂದು ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಇಂದ್ರನನ್ನು ಈ ಪದದಿಂದ ಸಂಬೋಧಿಸಿದೆ.

**ಏಷ ಸ್ತೋಮಃ**— ಮಂತ್ರದ್ರಷ್ಟೃಗಳಾದ ಋಷಿಗಳಿಂದ **ಇದಾನೀಂಕಾರಿತಪ್ರಕಾರಃ ಸ್ತೋತ್ರ-ವಿಶೇಷಃ** ಈ ಪ್ರಕಾರವಾಗಿ ಉಕ್ತವಾದ ಸ್ತೋತ್ರವಿಶೇಷವೂ ಇಂದ್ರನನ್ನು ಸೇರುವುದಾಗಲಿ ಎಂದು ಆಶಿಸಿದೆ.

**ಏತೇನ ನಃ ಗಾತುಂ ವಿದಃ—**ಏತೇನ ಎಂಬ ಪದವು ಸರ್ವನಾಮಗಳಲ್ಲಿ ಉಕ್ತವಾಗಿರುವುದರಿಂದ ಬುದ್ಧಿಸ್ಥ ಪರಾಮರ್ಶಕವಾದ ಅರ್ಥವನ್ನು ಬೋಧಿಸಿರುವುದರಿಂದ ಸ್ತೋತ್ರದಿಂದ ಎಂಬ ಅರ್ಥದಲ್ಲಿಯೂ, ಗಮನಾರ್ಥಕವಾದ ಇಣ್ ಧಾತುವಿನಿಂದ ನಿಷ್ಪನ್ನವಾದುದರಿಂದ ಗಮನ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ ಎಂದು ಸಾಯಣರು ಇಂದ್ರನನ್ನು ಸಂಬೋಧಿಸಿ ಅವನು **ಅಸ್ಮದೀಯಂ ದೇವಯಜನಮಾರ್ಗಂ ಸ್ತೋತ್ರೇಣ ಗಮನೇನ ವಾ ವಿದಸ್ವ** ನಾವು ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಯಾಗಶಾಲೆಯ ಮಾರ್ಗವನ್ನು ನಮ್ಮ ಸ್ತೋತ್ರದಿಂದಾಗಲಿ ತನ್ನ ಗಮನದಿಂದಾಗಲಿ ತಿಳಿಯಲಿ ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ಗಾತುಂ**—ಈ ರೀತಿ ಗಮನವೆಂಬರ್ಥಮಾಡುವ ಕಾಲದಲ್ಲೂ ಸಹ ಅನುಷ್ಠಾನಮಾರ್ಗ ಅಥವಾ ದೇವಲೋಕಗಮನಮಾರ್ಗ ಎಂದು ಎರಡು ವಿಧವಾದ ಅರ್ಥವು ಸಾಧ್ಯವಾಗುತ್ತದೆ. **ಸುಗಂ** ಎಂಬ ಶಬ್ದಕ್ಕಿರುವಂತೆಯೇ ಈ ಪದಕ್ಕೂ ಭೌತಿಕವಾದ ಮತ್ತು ನೈತಿಕವಾದ ಅರ್ಥಗಳಿರುತ್ತವೆ

**ಊರ್ಧ್ವೋ ವಾಂ ಗಾತುರಧ್ವರೇ ಅಕಾರ್ಯೂರ್ಧ್ವಾ ಶೋಚೀಂಷಿ ಪ್ರಸ್ಥಿತಾ ರಜಾಂಸಿ।**
**ದಿವೋ ವಾ ನಾಭಾ ನ್ಯಸಾದಿ ಹೋತಾ ಸ್ತೃಣೀಮಹಿ ದೇವವ್ಯಚಾ ವಿ ಬರ್ಹಿಃ।**

(ಋ. ಸಂ. ೩–೪-೪)

ಇತ್ಯಾದಿ ಋಕ್ಕುಗಳಲ್ಲಿ ಮಾರ್ಗವೆಂಬುದಾಗಿಯೂ,

**ಅರ್ಯಮಾ ಣೋ ಅದಿತಿರ್ಯಜ್ಞಿಯಾಸೋಽದಬ್ಧಾನಿ ವರುಣಸ್ಯ ವ್ರತಾನಿ।**
**ಯುಯೋತ ನೋ ಅನಪತ್ಯಾನಿ ಗಂತೋಃ, ಪ್ರಜಾವಾನ್ನಃ ಪಶುಮಾँ ಅಸ್ತು ಗಾತುಃ ॥**

(ಋ. ಸಂ. ೩-೫೪-೧೮)

ಮುಂತಾದ ಕಡೆಗಳಲ್ಲಿ **ಸ್ತುವಂತೀಂದ್ರಾದೀನತ್ರೇತಿ ಗಾತುರ್ಗೃಹಂ।** ಇಂದ್ರಾದಿ ದೇವತೆಗಳನ್ನು ಸ್ತುತಿಸುವ ಗೃಹವೆಂದೂ,

**ನ್ಯಸ್ಮೈ ದೇವೀ ಸ್ವಧಿತಿರ್ಜಿಹೀತ ಇಂದ್ರಾಯ ಗಾತುರುಶತೀವ ಯೇಮೇ ।**
**ಸಂ ಯದೋಜೋ ಯುವತೇ ವಿಶ್ವಮಾಭಿರನು ಸ್ವಧಾವ್ನೇ ಕ್ಷಿತಯೋ ನಮಂತ ।**

(ಋ. ಸಂ. ೫-೩೨-೧೦).

ಎಂಬಲ್ಲಿ ಭೂಮಿಯೆಂದೂ (**ಗಾತು** ಶಬ್ದವು **ಪೃಥ್ವೀ** ನಾಮಗಳಲ್ಲಿ ಪಠಿತವಾಗಿದೆ).

(ನಿ. ೨-೫)

**ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್ ।**
**ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ ವಿ ದುರೋ ಅಭಿ ದ್ಯೌತ್ ।**

(ಋ ಸಂ. ೪-೪-೬).

ಇತ್ಯಾದಿ ಋಕ್ಕುಗಳಲ್ಲಿ **ಗೀಯತೇ ಉಚ್ಚಾರ್ಯತೇ ಇತಿ ಗಾತುಃ ಸ್ತೋತ್ರಂ** ಎಂದು ಸ್ತೋತ್ರಪರ್ಯಾಯವಾಗಿಯೂ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ **ಗಮನಂ ದೇವಯಜನದೇಶಂ ವಾ** ಎಂಬರ್ಥವನ್ನು ಮಾಡಿದೆ.

**ಜೀರದಾನುಂ**—೧-೧೬೫-೧೫ ರಲ್ಲು ಸಾಯಣರು ಈ ಪದಕ್ಕೆ **ಜಯಶೀಲದಾನಂ** ಎಂದು ಅರ್ಥಮಾಡಿದ್ದಾರೆ. ಇದಕ್ಕೆ **ಜಯಶೀಲಂ ದಾನಂ ಜೀವನಂ ವಾ** ಎಂಬುದೂ ಪಾಠಾಂತರವುಂಟು. ಇಲ್ಲಿ **ಜೀರ** ಶಬ್ದಕ್ಕೆ **ಜಯ** ಅಥವಾ **ಜಯಕಾರಕ** ಎಂಬ ಅರ್ಥವು ಹೇಗಾಗುವುದೆಂಬುದು ವಿಚಾರಾರ್ಹವಾದ ವಿಷಯ. **ಜೀರ** ಮತು **ದಾನು** ಈ ಎರಡು ಪದಗಳೂ ಸೇರಿ **ಜೀರದಾನು**ವಾಗಿದೆ. ಈ ಎರಡು ಪದಗಳು ಪ್ರತ್ಯೇಕವಾಗಿಯೇ ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟು ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ. ಅಲ್ಲದೇ, **ಜೀರ** ಶಬ್ದೊಡನೆ **ಅಶ್ವ ಅಧ್ವರ** ಇತ್ಯಾದಿ ಪದಗಳೂ ಸೇರಿ **ಜೀರಾಶ್ವ, ಜೀರಾಧ್ವರ** ಮುಂತಾದ ಪ್ರಯೋಗಗಳೂ ಇವೆ.

**ಮನುಷ್ವದ್ದೇವ ಧೀಮಹಿ ಪ್ರಚೇತಸಂ ಜೀರಂ ದೂತಮಮರ್ತ್ಯಂ ।**

(ಋ. ಸಂ. ೧-೪೪-೧೧)

ಎಂಬ ಋಕ್ಕಿನಲ್ಲಿರುವ **ಜೀರ** ಶಬ್ದದ ನಿಷ್ಪತ್ತಿಯನ್ನು ತಿಳಿಸುತ್ತಾ ಸಾಯಣರು **ಜು** ಧಾತುವಿನಿಂದ ಈ ಪದವುನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. (ಜೋರೀ ಚ. ಉ. ಸೂ. ೨-೧೮೧) ಮತ್ತು (ಶತ್ರೂಣಾಂ) **ವಯೋಹಾನಿಕರಂ** ಎಂಬರ್ಥವನ್ನು ಹೇಳಿದ್ದಾರೆ. ಇಲ್ಲಿ **ಜೀರಂ** ಎಂಬುದು ಅಗ್ನಿಗೆ ವಿಶೇಷಣವಾಗಿದೆ. **ಜ್ಯಾ ವಯೋಹಾನೌ** ಎಂಬ ಧಾತುವಿನಿಂದಲೂ ಈ ನಿಷ್ಪತ್ತಿಯು ಸಾಧ್ಯವಾಗಬಹುದೆಂದು ಈ ಅರ್ಥದಿಂದ ತಿಳಿಯುತ್ತದೆ. ನಿರುಕ್ತಕಾರರು **ಜೀರ** ಶಬ್ದವನ್ನು **ಕ್ಷಿಪ್ರ** ನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. (ನಿ. ೩-೯).

**ದಿವಿಸ್ಪೃಶಂ ಯಜ್ಞಮಸ್ಮಾಕಮಶ್ವಿನಾ ಜೀರಾಧ್ವರಂ ಕೃಣುತಂ ಸುಮ್ನಮಿಷ್ಟಯೇ ।**
**ಪ್ರಾಚೀನರಶ್ಮಿಮಾಹುತಂ ಘೃತೇನ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥**

(ಋ. ಸಂ. ೧೦-೩೬-೬).

ಎಂಬ ಋಕ್ಕಿನಲ್ಲಿ ನಮ್ಮ ಕರ್ಮವನ್ನು **ಜೀರಾಧ್ವರ**ವನ್ನಾಗಿ ಮಾಡಿ ಎಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ. ಇಲ್ಲಿ ಜೀರಾಧ್ವರವೆಂದರೆ ವಿಘ್ನಗಳಿಂದ ತಡೆಯಿಲ್ಲದೆಯೂ, ಹಿಂಸಾರಹಿತವಾಗಿಯೂ, ಶೀಘ್ರವಾಗಿ ನೆರವೇರುವುದೂ ಆದ ಯಜ್ಞವೆಂದರ್ಥವಾಗುತ್ತದೆ.

**ಪೃಕ್ಷೇ ತಾ ವಿಶ್ವಾ ಭುವನಾ ವವಕ್ಷಿರೇ ಮಿತ್ರಾಯ ವಾ ಸದಮಾ ಜೀರದಾನವಃ ।**
**ಪೃಷದಶ್ವಾಸೋ ಅನವಭ್ರರಾಧಸ ಋಜಿಪ್ಯಾಸೋ ನ ವಯುನೇಷು ಧೂರ್ಷದಃ ॥**
(ಋ. ಸಂ. ೨-೩೪-೪).

ಇತ್ಯಾದಿ ಸ್ಥಳಗಳಲ್ಲಿ **ಜೀರದಾನವಃ** ಎಂಬುದು ಮರುತ್ತುಗಳಿಗೆ ವಿಶೇಷಣವಾಗಿದೆ. ಅತಿಶೀಘ್ರವಾಗಿ ಯಜಮಾನನ ಇಷ್ಟಾರ್ಥಗಳನ್ನು ನೆರವೇರಿಸುವವರೆಂದರ್ಥ ಇದರಂತೆಯೇ **ಜೀರಾಶ್ವಃ, ಜೀರಾಶ್ವಂ** ಎಂಬ ಸಮಸ್ತಪದಗಳೂ ಸಹ ಅಗ್ನ್ಯಾದಿದೇವತೆಗಳಿಗೆ ವಿಶೇಷಣವಾಗಿದೆ.

ಅಥವಾ ಅವರ ರಥಕ್ಕೆ ವಿಶೇಷಣವಾಗಿರುವುದೂ ಉಂಟು.

**ಆ ವಾಂ ರಥಂ ಪುರುಮಾಯಂ ಮನೋಜುವಂ ಜೀರಾಶ್ವಂ ಯಜ್ಞಿಯಂ ಜೀವಸೇ ಹುವೇ ।**
**ಸಹಸ್ರಕೇತುಂ ವನಿನಂ ಶತದ್ವಸುಂ ಶ್ರುಷ್ಟೀವಾನಂ ವರಿವೋಧಾಮಭಿ ಪ್ರಯಃ ॥**
(ಋ. ಸಂ. ೧-೧೧೯-೧)

ಇತ್ಯಾದಿ ಋಕ್ಕುಗಳಲ್ಲಿ ಶೀಘ್ರವಾಗಿ ಓಡತಕ್ಕ ಕುದುರೆಗಳುಳ್ಳವರೆಂದು ಅಶ್ವಿನಿದೇವತೆಗಳ ರಥವನ್ನು ವರ್ಣಿಸುತ್ತದೆ. ಇದರಂತೆಯೇ **ದಾನು** ಶಬ್ದವೂ ಸಹ ಪ್ರತ್ಯೇಕವಾಗಿಯೂ ಮತ್ತು **ಸುದಾನವಃ, ಜೀರದಾನವಃ** ಎಂದು ಸಮಸ್ತಪದವಾಗಿಯೂ ಪ್ರಯೋಗಿಸಲ್ಪಟ್ಟು ಸನ್ನಿವೇಶಕ್ಕೆ ತಕ್ಕಂತೆ ಅರ್ಥವನ್ನು ಕೊಡುತ್ತದೆ. **ದಾನು** ಶಬ್ದವು ದಾತೃವೆಂದಾಗಲೀ ಅಥವಾ ಅಸುರನೆಂದಾಗಲಿ ಅರ್ಥವನ್ನು ಕೊಡುತ್ತದೆಂದು ನಿರುಕ್ತಕಾರರು ಉದಾಹರಿಸಿರುವ ಸನ್ನಿವೇಶದಿಂದ ತಿಳಿಯುತ್ತದೆ.

**ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಮಾಪ್ತ್ಯಮಾಪ್ತ್ಯಾನಾಂ ।**
**ಆ ದರ್ಷತೇ ಶವಸಾ ಸಪ್ತ ದಾನೂನ್ ಪ್ರ ಸಾಕ್ಷತೇ ಪ್ರತಿಮಾನಾನಿ ಭೂರಿ ॥**
(ಋ. ಸಂ ೧೦-೧೨೦-೬)

ಎಂಬ ಋಕ್ಕಿಗೆ ಅರ್ಥವನ್ನು ಹೇಳುವಾಗ ನಿರುಕ್ತಕಾರರು **ಸಪ್ತ ದಾನೂನ್** ಎಂಬ ಪದಕ್ಕೆ **ಸಪ್ತದಾತೄನ್ ಇತಿ ವಾ ಸಪ್ತ ದಾನವಾನ್ ಇತಿ ವಾ** ಸಪ್ತದಾತೃಗಳೆಂದಾಗಲಿ ಅಥವಾ ಸಪ್ತದಾನವರೆಂದಾಗಲಿ ಅರ್ಥವಾಗುತ್ತದೆಂದು ತಿಳಿಸಿದ್ದಾರೆ. ಆದರೆ ಇಂತಹ ಸಂದರ್ಭಗಳಲ್ಲಿ **ದಾನು** ಶಬ್ದಕ್ಕೆ ಅಸುರನೆಂಬರ್ಥವು ಹೇಗೆ ಸಾಧ್ಯವಾಗುತ್ತದೆ ಎಂದು ತನ್ನ ಕ್ಲೇಶವನ್ನು ಸೂಚಿಸುತ್ತಾ Max Muller ಪಂಡಿತನು ಈ ರೀತಿ ಹೇಳಿದ್ದಾನೆ.

It must be confessed that even the meaning of Danu is by no means quite clear. It is clear enough where it means Demon, II. 11. 18 ; II. 12.11 ; IV. 30.7 ; X. 120.6 ; The seven Demons. In I. 32.9; III. 30.8 Danu, Demon is applied to the mother of Vritra, the dark cloud ; From this Danu we have the derivative Danava, meaning again Demon, why the demons conquered by Indra, were called Danu, is not clear, unless they were conceived originally as dark clouds, like Danu, the mother of Indra. Danu might mean wise or even powerful, for this meaning also is ascribed to Danu by the author of Unadi Sutras. [S. B. E. XXXII. P. 114-115]

**ದಾನು** ಎಂಬುದು ಅಸುರಸ್ತ್ರೀಯ ಎಂದರೆ ವೃತ್ರನ ತಾಯಿಯ ಹೆಸರು. ಅವಳ ಪುತ್ರರು **ದಾನವ** ಎಂದಾಗಬೇಕೇ ಹೊರತು **ದಾನು** ಎಂದು ಹೇಗಾಯಿತು ಎಂದು ಈ ಪಂಡಿತನು ಪ್ರಶ್ನಿಸಿದ್ದಾನೆ. ಮತ್ತು ಈ ಪದಕ್ಕೆ ಶಕ್ತಿ, ಪ್ರಾಜ್ಞ ಎಂಬರ್ಥಗಳೂ ಸಾಧ್ಯವೆಂದು ಉಣಾದಿಸೂತ್ರದಿಂದ ತಿಳಿಯುತ್ತದೆ. ಆದರೆ **ದಾತೃ** ವೆಂಬರ್ಥವೇ ಹೆಚ್ಚು ಪ್ರಸಿದ್ಧವಾದುದು.

ಹೀಗೆ **ಜೀರ** ಶಬ್ದಕ್ಕೆ **ಕ್ಷಿಪ್ರ** ವೆಂದೂ, **ದಾನು** ಶಬ್ದಕ್ಕೆ **ದಾನ** ವೆಂದೂ ಅರ್ಥವಾದರೆ ಪ್ರಕೃತವಾದ ಋಕ್ಕಿನಲ್ಲಿ ಕ್ಷಿಪ್ರವಾದ ದಾನವೆಂದರ್ಥವಾಗಬೇಕಾಗುತ್ತದೆ. ಆದರೆ ಸಾಯಣರು ಜಯಶೀಲವಾದ ದಾನವೆಂದರ್ಥ ಮಾಡಿದ್ದಾರೆ. ಜೀರಶಬ್ದವು ಪ್ರೇರಕಾರ್ಥದಲ್ಲಿ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವುದರಿಂದ ಇಲ್ಲಿ ಜಯ ಪ್ರೇರಕವಾದ ದಾನವೆಂದರ್ಥಮಾಡಬಹುದು. ಸಾಧಾರಣವಾಗಿ **ಜೀರದಾನವಃ** ಎಂಬ ಪದವು ಮರುತ್ತುಗಳಿಗೆ ವಿಶೇಷಣವಾಗಿ ಬರುವುದೇ ಅಧಿಕವಾಗಿದೆ.

**ಪೃಕ್ಷೇ ತಾ ವಿಶ್ವಾ ಭುವನಾ ವವಕ್ಷಿರೇ ಮಿತ್ರಾಯ ವಾ ಸದಮಾ ಜೀರದಾನವಃ ॥**
(ಋ. ಸಂ. ೨-೩೪-೪).

ಇತ್ಯಾದಿ ಋಕ್ಕುಗಳಲ್ಲಿ **ಜೀರದಾನವಃ ಮರುತಃ** ಎಂಬುದು ಪ್ರಸಿದ್ಧವಾಗಿದೆ. ಮತ್ತು,

**ವೃಷಾ ನ ಕ್ರುದ್ಧಃ ಪತಯದ್ರಜಃಸ್ವಾ ಯೋ ಅರ್ಯಪತ್ನೀರಕೃಣೋದಿಮಾ ಅಪಃ ।**
**ಸ ಸುನ್ವತೇ ಮಘವಾ ಜೀರದಾನವೇಽವಿಂದಜ್ಜ್ಯೋತಿರ್ಮನವೇ ಹವಿಷ್ಮತೇ ॥**
(ಋ. ಸಂ. ೧೦-೪೩-೮).

ಇತ್ಯಾದಿ ಋಕ್ಕುಗಳಲ್ಲಿ ಹವಿರಾದಿಗಳನ್ನರ್ಪಿಸುವ ಯಜ್ಞಕರ್ತನಿಗೂ ಈ ಪದವು ವಿಶೇಷಣವಾಗಿದೆ.

**ಸುವಿತಾಯ—ಸುಹಿತಾಯ ಶೋಭನಗಮನಾಯ ವಾ** ಇಂದ್ರನು ನಮ್ಮ ಯಾಗಶಾಲೆಗೆ ಬಂದು ನಮ್ಮ ಹಿತವನ್ನು ಉಂಟುಮಾಡುವುದಕ್ಕಾಗಿಯೂ, ನಮಗೆ ಉತ್ತಮವಾದ ಗಮನವು ಉಂಟಾಗುವುದಕ್ಕಾಗಿಯೂ ಇರಲಿ ಎಂದು ಆಶಿಸಿದೆ. ಯಾಸ್ಕರು—

**ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ ।**
**ಇಯಂ ವೋ ಅಸ್ಮತ್ಪ್ರತಿ ಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ॥**
(ಋ. ಸಂ. ೫-೫೭-೧).

ಈ ಋಕ್ಕಿನಲ್ಲಿ ಸುವಿತಾಯ ಎಂಬ ಪದಕ್ಕೆ **ಸುಗುಣಾಯ ಕರ್ಮಣೇ** ಉತ್ತಮವಾದ ಕರ್ಮಕ್ಕಾಗಿ ಎಂಬ ಅರ್ಥದಲ್ಲಿ ಪ್ರಯೋಗವನ್ನು ತೋರಿಸಿದ್ದಾರೆ.

**ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।**
**ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ।**
(ಋ. ಸಂ. ೧೦-೮೬-೨೧).

ಈ ಋಕ್ಕಿನಲ್ಲಿ **ಸುವಿತಾ** ಎಂಬ ಪದಕ್ಕೆ **ಸುಪ್ರಸೂತಾನಿ ಸುಪ್ರವೃತ್ತಾನಿ** ಎಂಬ ಅರ್ಥವನ್ನು ವಿವರಿಸಿದೆ.

ಇಂದ್ರನ ಅನುಗ್ರಹದಿಂದ **ವೃಜನಂ** ಬಲವನ್ನೂ **ಇಷಂ** ಅನ್ನವನ್ನೂ **ಜೀರದಾನುಂ** ಪ್ರಭೂತವಾದ ದಾನ ಮಾಡುವ ಸಾಮರ್ಥ್ಯವನ್ನೂ ವಿದ್ವಾನು ಯಜಮಾನರಾದ ನಾವು ಹೊಂದೋಣವೆಂದು ಆಶಂಸಿಸಿದೆ ಎಂಬ ಅರ್ಥವು ವಿವೃತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಮೇ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಷಷ್ಠೀ ಬಹುವಚನ) ಶೇ ಆದೇಶ.

**ಗಾತುಮ್—**ಗೈ ಶಬ್ದೇ. ಧಾತು. **ಕಮಿಮನಿಜನಿ**—(ಉ. ಸೂ. ೧–೭೨) ಎಂಬುದರಿಂದ ತು ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಹರಿವಃ— ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ಮತೋರುಃ ಸಂಬುದ್ಧೌ** (ಪಾ. ಸೂ ೮-೩-೧) ಎಂಬುದರಿಂದ ಸಂಬುದ್ಧಿಯಲ್ಲಿ ರುತ್ವ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ವಿದಃ—ವಿದ ಜ್ಞಾನೇ. ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ ಲೋಪಃ**— (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪ ೯೪) ಎಂಬುದರಿಂದ ಅದಕ್ಕೆ ಅಡಾಗಮ. ಪ್ರತ್ಯಯ ಸಕಾರಕ್ಕೆ ರತ್ವ ವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವವೃತ್ಯಾಃ—**ವೃತು ವರ್ತನೇ. ಧಾತು. ಲಿಙಿನಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದ ಪ್ರತ್ಯಯ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. ಸಿಪಿಗೆ ಯಾಸುಟಾಗಮ. ಅದಕ್ಕೆ ಙಿತ್ವ ವಿಧಾನಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸುವಿತಾಯ**—ಇಣ್ ಗತೌ ಧಾತು. ಕ್ತ ಪ್ರತ್ಯಯ. **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮ್** ಎಂಬ ವಚನದಿಂದ ಉವಙಾದೇಶ. **ಗತಿರನಂತರಃ** ಸೂತ್ರದಿಂದ ಪೂರ್ವಪದ ಪ್ರಕೃತಿ ಸ್ವರವು ಪ್ರಾಪ್ತವಾದರೆ **ಸೂಪಮಾನಾತ್ ಕ್ತಃ** (ಪಾ. ಸೂ. ೬-೨-೧೪೫) ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ. ॥ ೧೩ ॥

ಇಲ್ಲಿಗೆ ನೂರ ಎಪ್ಪತ್ತಮೂರನೇ ಸೂಕ್ತ ಮುಗಿದುದು.



# ನೂರ ಎಪ್ಪತ್ತನಾಲ್ಕನೆಯ ಸೂಕ್ತವು

**ತ್ವಂ ರಾಜೇತಿ ದಶರ್ಚಂ ದಶಮಂ ಸೂಕ್ತಮಾಗಸ್ತ್ಯಮೈಂದ್ರಂ ತ್ರೈಷ್ಟುಭಂ । ತ್ವಂ ರಾಜಾ ದಶೇತ್ಯನುಕ್ರಾಂತಂ । ಪೃಷ್ಠ್ಯೇ ಷಳಹೇ ಸ್ತೋಮವೃದ್ಧೌ ಸ್ತೋಮಾತಿಶಂಸನಾರ್ಥಂ ಹೋತ್ರಕೈರೇತಚ್ಛಸ್ತವ್ಯಂ । ಐಂದ್ರಾಣಿ ತ್ರೈಷ್ಟುಭಾನ್ಯಮುರುಚ್ಛಬ್ದಾನ್ಯಾವಪೇರನ್ । ಆ. ೭-೧೨- । ಇತಿ ಸೂತ್ರಂ ॥**

ಅನುವಾದವು—**ತ್ವಂ ರಾಜೇಂದ್ರ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ತ್ವಂ ರಾಜಾ ದಶ**. ಎಂದು ಹೇಳಿರುವುದು. ಆರುದಿನ ಪರ್ಯಂತರ ಮಾಡುವ ಪೃಷ್ಠ್ಯವೆಂಬ ಸೋಮಯಾಗದಲ್ಲಿ ಸ್ತೋಮವೃದ್ಧಿಗಾಗಿ ಪಠಿಸುವ ಮಂತ್ರಗಳನ್ನು ಸ್ತೋಮಾತಿಶಂಸನಾರ್ಥವಾಗಿ ಹೋತೃವರ್ಗದ ಋತ್ವಿಜರಿಂದ ಈ ಸೂಕ್ತವು ಪಠಿಸಲ್ಪಡಬೇಕು. ಈ ವಿಷಯದಲ್ಲಿ ಆಶ್ವಲಾಯನ ಶ್ರೌತಸೂತ್ರದಲ್ಲಿ **ಐಂದ್ರಾಣಿ ತ್ರೈಷ್ಟುಭಾನ್ಯಮುರುಚ್ಛಬ್ದಾನ್ಯಾವಪೇರನ್** ಎಂದು ಸೂತ್ರವಿರುವುದು. (ಆ. ಶ್ರೌ. ೭-೧೨).

## ಸೂಕ್ತ—೧೭೪

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೪ ॥

ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ--೧೦ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ವಂ ರಾಜೇಂದ್ರ ಯೇ ಚ ದೇವಾ ರಕ್ಷಾ ನೄನ್ಪಾಹ್ಯಸುರ ತ್ವಮಸ್ಮಾನ್ ।
ತ್ವಂ ಸತ್ಪತಿರ್ಮಘವಾ ನಸ್ತರುತ್ರಸ್ತ್ವಂ ಸತ್ಯೋ ವಸವಾನಃ ಸಹೋದಾಃ ॥ ೧ ॥

॥ ಪದಪಾಠಃ ॥

ತ್ವಂ । ರಾಜಾ । ಇಂದ್ರ । ಯೇ । ಚ । ದೇವಾಃ । ರಕ್ಷ । ನೄನ್ । ಪಾಹಿ । ಅಸುರ । ತ್ವಂ । ಅಸ್ಮಾನ್ ।
ತ್ವಂ । ಸತ್ಽಪತಿಃ । ಮಘಽವಾ । ನಃ । ತರುತ್ರಃ । ತ್ವಂ । ಸತ್ಯಃ । ವಸವಾನಃ । ಸಹಃಽದಾಃ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ರಾಜಾಧಿಪತಿಃ ಸರ್ವಸ್ಯ ಜಗತಃ । ಕಿಂಚ ಯೇ ದೇವಾ ಮರುದಾದಯಃ ಸಂತಿ ತೇಷಾಮಪಿ ವಿಶೇಷೇಣ । ಅತೋ ಹೇ ಅಸುರ ಶತ್ರೂಣಾಂ ನಿರಸಿತಃ ತ್ವಂ ನ್ನಾನಸ್ಮಾನ್ ಕರ್ಮನೇತ್ನ್ಯಾನ್ಯ ಜಮಾನಾನ್ರಕ್ಷ । ಪಾಲಯ । ವಿಶೇಷತೋಽಸ್ಮಾನಪಿ ರಕ್ಷ । ತ್ವಂ ಚ ಸತ್ಪತಿಃ ಸತಾಂ ಸತಃ ಕರ್ಮಫಲಸ್ಯ ವಾ ಪಾತಾ ಮಘವಾ ಧನವಾನ್ನೋಽಸ್ಮಾಕಂ ತರುತ್ರಸ್ತಾರಯಿತಾ ಪಾಪಾತ್ ಕಿಂಚ ತ್ವಂ ಸತ್ಯೋಽಬಾಧ್ಯಃ ಸತ್ಯಫಲೋ ವಾ ವಸವಾನಃ ಸ್ವತೇಜಸಾ ಸರ್ವಂ ಛಾದಯನ್ ವಸೂನಿ ವಾ ಕುರ್ವನ್ ಸ್ತೋತೃಭ್ಯಃ ಸಹೋದಾಃ ಸಹಸೋ ಬಲಸ್ಯ ದಾತಾ ಭವೇತಿ ಶೇಷಃ ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ರಾಜಾ**—(ಸಕಲ ಜಗತ್ತಿಗೂ) ಅಧಿಪತಿಯು । **ಯೇ ದೇವಾಃ**—(ಮರುದಾದಿ) ದೇವತೆಗಳು ಯಾರಿದ್ದಾರೋ (ಅವರಿಗೆ ವಿಶೇಷವಾಗಿ ಈಶ್ವರನು) । (ಆದುದರಿಂದ) **(ಹೇ) ಅಸುರ**—ಶತ್ರುನಾಶಕನಾದ ಇಂದ್ರನೇ । **ತ್ವಂ**—ನೀನು । **ನ್ನಾನ್**—ಕರ್ಮನೇತೃಗಳಾದ ಯಜಮಾನ ರನ್ನು । **ಪಾಹಿ**—ರಕ್ಷಿಸು । (ಮತ್ತು) **ಅಸ್ಮಾನ್**—ನಮ್ಮನ್ನೂ । **ರಕ್ಷ**—ಕಾಪಾಡು । **ತ್ವಂ**—ನೀನು । **ಸತ್ಪತಿಃ**—ಸತ್ಪುರುಷರಿಗೆ ಅಥವಾ ಕರ್ಮಫಲಕ್ಕೆ ಅಧಿಪತಿಯು । **ಮಘವಾ**—ಧನವಿಶಿಷ್ಟನು । **ನಃ**—ನಮ್ಮನ್ನು । **ತರುತ್ರಃ**—(ಪಾಪಗಳಿಂದ) ಪಾರುಮಾಡುವವನು । (ಮತ್ತು) **ತ್ವಂ**—ನೀನು । **ಸತ್ಯಃ**—ಬಾಧಾರಹಿತನು ಅಥವಾ ಸತ್ಯಫಲವುಳ್ಳವನೂ । **ವಸವಾನಃ**—ಸ್ವತೇಜಸ್ಸಿನಿಂದ ಸಮಸ್ತವನ್ನೂ ಆವರಿಸುವವನೂ ಅಥವಾ ಸ್ತೋತೃಗಳಿಗೆ ಧನವನ್ನುಂಟುಮಾಡುವವನೂ । **ಸಹೋದಾಃ**—ಬಲದಾಯಕನೂ । (**ಭವ**—ಆಗು).

॥ ಭಾವಾರ್ಥ ॥

ಎಲೈ ಇಂದ್ರನೇ, ಮರುದಾದಿ ದೇವತೆಗಳಿಂದ ಯುಕ್ತವಾದ ಸಮಸ್ತ ಜಗತ್ತಿಗೂ ನೀನೇ ಅಧಿಪತಿಯು; ಶತ್ರುನಾಶಕನಾದ ಎಲೈ ಇಂದ್ರನೇ, ಯಾಗಕರ್ತೃಗಳನ್ನೂ, ನಮ್ಮನ್ನೂ ರಕ್ಷಿಸು; ಕರ್ಮಫಲಸ್ವಾಮಿಯೂ, ಧನವಿಶಿಷ್ಟನೂ, ಪಾಪಪರಿಹಾರಕನೂ ಆದ ನೀನು ಸತ್ಯವಾದ ಫಲ, ಧನ ಮತ್ತು ಬಲಗಳನ್ನು (ನಮಗೆ) ಅನುಗ್ರಹಿಸು.

English Translation·

You, Indra, are King: they who are gods (are subject) to you therefore, scatterer (of foes), do yau protect and cherish us men: you are the protector of the good, the possessor of wealth, the extricator of us (from sin): you are true, the invester (of all with your lustre), the giver of strength.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನ ಮಹಿಮೆಯನ್ನೂ ಅವನ ಗುಣಗಳ ವರ್ಣನಾಪೂರ್ವಕವಾಗಿ ವಿವರಿಸಿದೆ.

**ತ್ವಂ ರಾಜಾ**—ಇಂದ್ರನನ್ನು ಸಂಬೋಧಿಸಿದೆ. ಇಂದ್ರನು **ಸರ್ವಸ್ಯ ಜಗತಃ ಅಧಿಪತಿಃ** ಎಲ್ಲಾ ಪ್ರಪಂಚಕ್ಕೂ ಒಡೆಯನಾಗಿರುವವನು ಎಂದು ಅರ್ಥವನ್ನು ವರ್ಣಿಸಿ, **ಯೇ ದೇವಾಃ ಮರುದಾದಯಸ್ಸಂತಿ ತೇಷಾಮಪಿ ವಿಶೇಷೇಣ** ದೇವತೆಗಳಾದ ಮರುತ್ತುಗಳಿಗೂ ಕೂಡ ರಕ್ಷಕನಾಗಿಯೂ ಅಧಿಪತಿಯಾಗಿಯೂ ಇರುವನೆಂದು ವಿವರಿಸಿದೆ.

**ಅಸುರ ತ್ವಂ ಅಸ್ಮಾನ್ ರಕ್ಷ**—**ಅಸುರ** ಶಬ್ದವು ಮೇಘನಾಮಗಳಲ್ಲಿ (ನಿ. ೨-೨೨) ಉಕ್ತವಾಗಿ, **ಅಸುರಾ ಅಸುರತಾಃ ಸ್ಥಾನೇಷ್ವಸ್ತಾಃ ಸ್ಥಾನೇಭ್ಯ ಇತಿ ವಾ ಅಪಿ ವಾ ಅಸುರಿತಿ ಪ್ರಾಣನಾಮ ಅಸ್ತಃ ಶರೀರೇ ಭವತಿ ತೇನ ತದ್ವಂತಃ** ಎಂದು (ನಿ. ೩-೮) ವ್ಯಾಖ್ಯಾತವಾಗಿದೆ. ಸಾಯಣರು, ಇಂದ್ರನು ಶತ್ರುಗಳನ್ನು ನಾಶಮಾಡುವವನಾದುದರಿಂದ ಅಸುರನಾಗಿರುವನೆಂದು ಅರ್ಥವನ್ನು ವರ್ಣಿಸಿ, ಯಜ್ಞಕರ್ಮಗಳನ್ನು ಆಚರಿಸುವ ಯಜಮಾನರಾದ ನಮ್ಮನ್ನು ಇಂದ್ರನು ರಕ್ಷಿಸಲಿ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಅಸುರ** ಶಬ್ದವು ಪುರಾಣಾದಿಗಳಲ್ಲಿ **ರಾಕ್ಷಸ** ಶಬ್ದದ ಪರ್ಯಾಯವಾಗಿದೆ. ಆದರೆ ಋಕ್ಸಂಹಿತೆಯಲ್ಲಿ ಈ ಶಬ್ದದ ಪ್ರಯೋಗವು ನಾನಾರ್ಥಗಳಲ್ಲಿದೆ. **ಅಸು** ವೆಂದರೆ **ಪ್ರಾಣ, ಪ್ರಜ್ಞಾ, ಎಸೆಯುವುದು** ಇತ್ಯಾದ್ಯನೇಕವಾದ ಅರ್ಥಗಳಾಗುತ್ತವೆ. ಆದುದರಿಂದ **ಅಸುರ** ಶಬ್ದವೂ ಈ ಅರ್ಥಗಳಿಗನುಸಾರವಾಗಿ ಉಪಯೋಗಿಸಲ್ಪಟ್ಟಿದೆ. ಇವನ್ನು ಸಂದರ್ಭಾನುಸಾರವಾಗಿ ಅನ್ವಯ ಮಾಡಿಕೊಳ್ಳಬೇಕು.

**ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ ।**
(ಋ.ಸಂ. ೧-೫೪-೩)

ಎಂಬ ಋಕ್ಕಿನಲ್ಲಿ **ಅಸುರ** ಶಬ್ದವು ಪ್ರಕೃತವಾದ ಋಕ್ಕಿನಲ್ಲಿರುವಂತೆಯೇ ಇಂದ್ರನಿಗೆ ವಿಶೇಷಣವಾಗಿದೆ. ಇಲ್ಲಿಯೂ ಸಹ ಈ ಋಕ್ಕಿನಲ್ಲಿ ಹೇಳಿರುವಂತೆಯೇ **ಅಸುರಃ ಶತ್ರೂಣಾಂ ನಿರಸಿತಾ ।** ಎಂದು ಒಂದರ್ಥವನ್ನೂ ಮತ್ತು **ಯದ್ವಾ ಅಸುಃ ಪ್ರಾಣೋ ಬಲಂ ವಾ ತದ್ವಾನ್ । ರೋ ಮತ್ವರ್ಥೀಯಃ । ಅಥವಾ ಅಸವಃ ಪ್ರಾಣಾಃ ತೇನ ಚ ಆಪೋ ಲಕ್ಷ್ಯಂತೇ । ತಾನ್ ರಾತಿ ದದಾತೀತಿ ಅಸುರಃ ।** ಶತ್ರುಗಳನ್ನು ನೋಡುವವನು ಎಂದಾಗಬಹುದು ; ಅಥವಾ **ಅಸು** ಶಬ್ದಕ್ಕೆ, ಪ್ರಾಣ, ಬಲ ಎಂಬರ್ಥಗಳಿರುವುದರಿಂದ ಪ್ರಾಣವುಳ್ಳವನು ಅಥವಾ ಬಲವುಳ್ಳವನು ಅಥವಾ **ಅಸವಃ** ಎಂದರೆ ಉದಕಗಳು. ಅವುಗಳನ್ನು ಕೊಡತಕ್ಕ ಇಂದ್ರನು ಎಂದಾಗುತ್ತದೆ. ಇಂದ್ರನಿಗೆ ಈ ವಿಧವಾದ ನಾನಾಶಕ್ತಿಗಳಿರುವುದರಿಂದ ಈ ಎಲ್ಲಾ ಅರ್ಥಗಳಲ್ಲಿಯೂ ಈ ಶಬ್ದವು **ಇಂದ್ರನಿಗೆ** ವಿಶೇಷಣವಾಗಬಹುದು. ಇದರಂತೆಯೇ,

**ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ।**
(ಋ. ಸಂ. ೧-೨೪-೧೪)

ಎಂಬ ಋಕ್ಕಿನಲ್ಲಿ **ಅನಿಷ್ಟಕ್ಷೇಪಣಶೀಲಃ** ಅನಿಷ್ಟವನ್ನು ನಾಶಮಾಡುವವನಾದುದರಿಂದ **ವರುಣನಿಗೆ ಅಸುರ**ನೆಂಬ ವಿಶೇಷಣವೂ, ಹೀಗೆಯೇ ಇದೇ ಅರ್ಥದಲ್ಲಿ,

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।**
(ಋ. ಸಂ. ೨-೧-೬)

ಎಂಬಲ್ಲಿ ಅಗ್ನಿಯ ಗುಣವನ್ನು ವರ್ಣಿಸುತ್ತದೆ. ಇದೇ ರೀತಿಯಲ್ಲಿ,

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**
(ಋ. ಸಂ. ೧-೩೫-೭)

ಎಂಬ ಋಕ್ಕಿನಲ್ಲಿ **ಅಸುರಃ** ಎಂದರೆ ಪ್ರಾಣದಾತನಾದ **ಸೂರ್ಯ.**

**ಪೃಷದ್ಯೋನಿಃ ಪಂಚಹೋತಾ ಶೃಣೋತ್ವತೂರ್ತಪಂಥಾ ಅಸುರೋ ಮಯೋಭುಃ ।**
(ಋ. ಸಂ. ೫-೪೨-೧).

ಎಂಬಲ್ಲಿ ಪ್ರಾಣದಾತನಾದ ವಾಯುವೆಂದೂ,

**ಘೃತಪ್ರಸತ್ತೋ ಅಸುರಃ ಸುಶೇವೋ ರಾಯೋ ಧರ್ತಾ ಧರುಣೋ ವಸ್ವೋ ಅಗ್ನಿಃ ।**
(ಋ. ಸಂ. ೫-೧೫-೧).

**ನ್ಯಗ್ನಿಃ ಸೀದದಸುರೋ ನ ಹೋತಾ ಹುವಾನೋ ಅತ್ರ ಸುಭಗಾಯ ದೇವಾನ್ ।**
(ಋ. ಸಂ. ೭-೩೦-೩)

ಇತ್ಯಾದಿ ಸ್ಥಳಗಳಲ್ಲಿ ಬಲವಾನ್ ಶಕ್ತಿಯುತನಾದ ಎಂದು ಅಗ್ನ್ಯಾದಿಗಳಿಗೆ ವಿಶೇಷಣವಾಗಿಯೂ,

**ಅಸ್ಮೇ ವೀರೋ ಮರುತಃ ಶುಷ್ಮ್ಯಸ್ತು ಜನಾನಾಂ ಯೋ ಅಸುರೋ ವಿಧರ್ತಾ ।**
(ಋ. ಸಂ. ೭-೫೬-೨೪)

ಇತ್ಯಾದಿಗಳಲ್ಲಿ **ಪ್ರಜ್ಞಾವಾನ್** ಎಂದೂ,

**ಶತಂ ಕಕ್ಷೀವಾँ ಅಸುರಸ್ಯ ಗೋನಾಂ ದಿವಿ ಶ್ರವೋಽಜರಮಾ ತತಾನ ।**
(ಋ. ಸಂ. ೧-೧೨೬-೨)

ಎಂಬಲ್ಲಿ **ದಾನಶೀಲನೆಂದೂ,**

**ತ್ರಿರುತ್ತಮಾ ದೂಣಶಾ ರೋಚನಾನಿ ತ್ರಯೋ ರಾಜಂತ್ಯಸುರಸ್ಯ ವೀರಾಃ ।**
(ಋ. ಸಂ. ೩-೫೬-೮)

ಎಂಬಲ್ಲಿ **ಅಸ್ಯತಿ ಕ್ಷಿಪತಿ ಸರ್ವಮಿತ್ಯಸುರಃ ಕಾಲಾತ್ಮಾ ಸಂವತ್ಸರಃ** ಎಂದು ಕಾಲಪರ್ಯಾಯವಾಗಿಯೂ,

**ಯಥಾ ರುದ್ರಸ್ಯ ಸೂನವೋ ದಿವೋ ವಶಂತ್ಯಸುರಸ್ಯ ವೇಧಸಃ ।**
(ಋ. ಸಂ. ೮-೨೦-೧೭)

ಇತ್ಯಾದಿ ಸ್ಥಳಗಳಲ್ಲಿ **ಮೇಘವೆಂ**ಬರ್ಥದಲ್ಲಿಯೂ,

**ಅನಾಯುಧಾಸೋ ಅಸುರಾ ಅದೇವಾಶ್ಚಕ್ರೇಣ ತಾँ ಅಪ ವಪ ಋಜೀಷಿನ್ ।**
(ಋ. ಸಂ. ೮-೯೬-೯)

ಇತ್ಯಾದಿ ಋಕ್ಕುಗಳಲ್ಲಿ **ಅಸುರ**ರೆಂದರೆ ರಾಕ್ಷಸರ ಗುಂಪಿಗೆ ಸೇರಿದ ದೈತ್ಯರೆಂದೂ ಅರ್ಥವಾಗಿ ಪ್ರಕೃತವಾದ ಋಕ್ಕಿನಲ್ಲಿ ಅಂತಹ ರಾಕ್ಷಸರನ್ನು ನಿರಸನ ಮಾಡತಕ್ಕ ಇಂದ್ರನೆಂದರ್ಥವಾಗಿದೆ.

**ಸತ್ಪತಿಃ— ಸತಾಂ ಕರ್ಮಫಲಸ್ಯ ವಾ ಪಾತಾ** ಸಾಯಣರು ಇಂದ್ರನು ಸತ್ಪುರುಷರನ್ನು ಅಥವಾ ಅವರವರು ಆಚರಿಸಿದ ಕರ್ಮಗಳ ಫಲವನ್ನು ರಕ್ಷಿಸುವವನೆಂದು ಎರಡು ವಿಧವಾದ ಅರ್ಥವನ್ನೂ ವಿವರಿಸಿದ್ದಾರೆ.

ಇಲ್ಲಿ **ಸತಾಂ** ಎಂದರೆ **ಸತ್ತು**ಗಳಿಗೆ ಅರ್ಥಾತ್ ಸತ್ಯಾತ್ಮಕವಾದ ಸಕಲ ಭೂತಗಳಿಗೆ ಎಂದಾಗಬಹುದು. ಅಥವಾ ಸಕಲ ಸಜ್ಜನರಿಗೆ ಎಂದಾಗಬಹುದು. ಈ ಪದದ ವಿಶೇಷಾರ್ಥವನ್ನು ತಿಳಿಸುತ್ತಾ, Max Muller ಪಂಡಿತನು ಈ ರೀತಿ ಹೇಳಿದ್ದಾನೆ—

**ಸತ್ಪತಿ.** Lord of men means Lord of real men, of heroes, and should not be translated as good lord (**ಸತ್**) sat by itself is frequently used in the sense of heroes, of men, physically rather than morally good.

[S. B. E. XXXII]

ಈ ಪದಕ್ಕೆ ಕೇವಲ ಪ್ರಜೆಗಳ ಪಾಲಕನು ಎಂದು ಮಾತ್ರವಲ್ಲ; ಶಕ್ತಿಯುತರಾಗಿಯೂ, ಯುದ್ಧಾಗಳಲ್ಲಿ ತಮ್ಮ ಪರಾಕ್ರಮವನ್ನು ತೋರುವವರಾಗಿಯೂ ಇರತಕ್ಕ ಪ್ರಜೆಗಳ ಪಾಲಕನು ಎಂದರ್ಥವೆಂದು ವಿವರಿಸಿ ಉದಾಹರಣೆಗಾಗಿ ಈ ಪದದ ಪ್ರಯೋಗವಿರುವ ಎರಡು ಋಕ್ಕುಗಳನ್ನು ಉದಾಹರಿಸಿದ್ದಾನೆ. ಮೊದಲನೆಯದಾಗಿ,

**ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।**
**ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ।**
(ಋ. ಸಂ. ೨-೧-೩)

ಎಂಬ ಋಕ್ಕಿನಲ್ಲಿ **ಸತಾಂ ವೃಷಭಃ ಅಸಿ** ಎನ್ನುವುದಕ್ಕೆ ವೀರರಲ್ಲಿ ವೀರನು ಎಂದರ್ಥವೆಂದೂ, ಇದೇ ರೀತಿಯಲ್ಲಿ ಈ ಪದದ ಪ್ರಯೋಗವಿರುವ,

**ಸಮುತ್ವಾ ಶೂರ ಸತಾಮುರಾಣಂ ಪ್ರಪಥಿಂತಮಂ ಪರಿತಂಸಯಧ್ಯೈ ।**
**ಸಜೋಷಸ ಇಂದ್ರಂ ಮದೇ ಕ್ಷೋಣೀಃ ಸೂರಿಂ ಚಿದ್ಯೇ ಅನುಮದಂತಿ ವಾಜೈಃ ॥**
(ಋ. ಸಂ. ೧-೧೭೩-೭)

ಎಂಬಲ್ಲಿ **ಸಮುತ್ವಾ ಶೂರ ಸತಾಮುರಾಣಂ** ಎಂಬುದಕ್ಕೆ ಯುದ್ಧದಲ್ಲಿ ಪರರನ್ನು ರಕ್ಷಿಸುವವನು ಎಂಬಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ವೀರರಾದ ಪ್ರಜೆಗಳ ಪಾಲಕನು ಎಂದೂ ಅರ್ಥವಾಗಬಹುದೆಂದು ತಿಳಿಸಿದೆ.

**ಮಘವಾ ತರುತ್ರಃ**— ಇಂದ್ರನು ಧನವುಳ್ಳವನಾಗಿಯೂ, ನಮ್ಮನ್ನು **ತಾರಯಿತಾ ಪಾಪಾತ್** ಪಾತಕಗಳಿಂದ ರಕ್ಷಿಸುವವನೆಂದೂ ಅರ್ಥವನ್ನು ಹೇಳಿದ್ದಾರೆ.

**ಸತ್ಯಃ ವಸವಾನಃ ಸಹೋದಾಃ— ಅಬಾಧ್ಯಃ ಸತ್ಯಫಲೋ ವಾ** ಶತ್ರುಗಳಿಂದ ಉಂಟಾಗುವ ತೊಂದರೆಗೆ ಸಿಲುಕದವನೆಂದೂ, ಅಥವಾ ಚ್ಯುತಿಯಿಲ್ಲದಿರುವ ಫಲವನ್ನು ಯಜಮಾನರಿಗೆ ಕೊಡುವವನೆಂದೂ ಸತ್ಯಪದಕ್ಕೆ ಅರ್ಥವನ್ನು ವಿವರಿಸಿದೆ.

ಇದೇ **ಸತ್ಯ** ಪದವು ಇನ್ನು ಕೆಲವೆಡೆಗಳಲ್ಲಿ ಇಂದ್ರನಿಗೆ ವಿಶೇಷಣವಾಗಿರುವಾಗ ಅಲ್ಲಿ **ಅಬಾಧ್ಯಃ ಸತ್ಸು ಭವೋ ವಾ** ಬಾಧಾತೀತನೂ ಅಥವಾ ಸತ್ಪುರುಷರ ನಡುವೆ ಇರತಕ್ಕವನೂ ಎಂದೂ ಈ ಪದದ ತಾತ್ಪರ್ಯವನ್ನು ವಿವರಿಸಿದೆ. ಬಾಧಾತೀತನಾಗಬೇಕಾದರೂ ಸಹ ಅವನು ಅಸತ್ಯಾತ್ಮಕನಾಗಿರದೆ, ಸತ್ಯಸ್ವರೂಪನೂ ಸತ್ಯಮಾರ್ಗಾವಲಂಬಿಯೂ ಆಗಿರಬೇಕು.

**ಸತ್ಯ** ಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಶ್ರೇಷ್ಠವಾದುದೂ ನೈತಿಕವಾದುದೂ ಆದ ಅರ್ಹತೆಯನ್ನೂ ಶಕ್ತಿಯನ್ನೂ ತೋರಿಸುವ ಅರ್ಥವನ್ನು ಮುಂದಿಟ್ಟುಕೊಂಡೇ ಉಪಯೋಗಿಸಲ್ಪಟ್ಟಿದೆ. ಇಂತಹ ಉತ್ತಮವಾದ ಅರ್ಹತೆಯುಳ್ಳವರು ಆಚರಿಸುವ ಕ್ರಿಯೆಗಳೂ ಸತ್ಯರೂಪವುಳ್ಳವಾಗಿಯೇ ಇರುವುವು. ಈ ಅರ್ಥವನ್ನೇ ವ್ಯಕ್ತಪಡಿಸಿ ನಿರುಕ್ತಕಾರರೂ ಸಹ **ಸತ್ಯ** ಶಬ್ದದ ನಿರ್ವಚನವನ್ನು ಈ ರೀತಿ ಹೇಳಿದ್ದಾರೆ—

**ಸತ್ಯಂ ಕಸ್ಮಾತ್ ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ ।**

(ನಿ. ೩-೧೩)

ಸಜ್ಜನರಲ್ಲಿ ಹರಡಿರುವುದರಿಂದಲೂ ಅಥವಾ ಸಜ್ಜನರಿಂದ ಉತ್ಪನ್ನವಾಗುವುದರಿಂದಲೂ ಸತ್ಯವೆಂದು ಕರೆಯಲ್ಪಡುತ್ತದೆ ಯೆಂಬ ಈ ನಿರ್ವಚನದ ಪ್ರಕಾರ ಸತ್ಯಾತ್ಮಕವಾದ ಫಲವೂ ಸಹ ಸಜ್ಜನರಿಗೇ ಲಭಿಸಬೇಕಾಗಿರುವುದರಿಂದ ಸದ್ಗುಣಿಗಳ ಸತ್ಯಕರ್ಮಕ್ಕೆ ತಕ್ಕದ್ದೂ, ಸದಾತ್ಮಕವಾದುದೂ ಆದ ಫಲದಾತನು ಎಂಬಭಿಪ್ರಾಯವು ಈ ಋಕ್ಕಿನಿಂದ ತಿಳಿಯುತ್ತದೆ. ಇಲ್ಲಿ **ಸತ್ಯ** ಶಬ್ದವು ಕರ್ಮಪರವಾಗಿಯೂ ಫಲಪರವಾಗಿಯೂ ಉಪಯೋಗಿಸಲ್ಪಟ್ಟಿರುವುದರಿಂದ ಈ ಎರಡು ಸನ್ನಿವೇಶಗಳಲ್ಲೂ ಸಹ ಈ ಭಾವವು ಯಾವ ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸಬೇಕಾಗಿದೆ.

**ತೇ ದೇವಾ ಉತ್ಸೃಜ್ಯಾನೃತಂ । ಸತ್ಯಮನ್ವಾಲೇಭಿರೇ ।**

(ಶ. ಬ್ರಾ. ೯-೫-೧-೧೩-)

**ತದ್ಯತ್ತತ್ಸತ್ಯಂ । ತ್ರಯೀ ಸಾ ವಿದ್ಯಾ ತೇ ದೇವಾ ಅಬ್ರುವನ್ ಯಜ್ಞಂ ಕೃತ್ವೇದಂ ಸತ್ಯಂ ತನವಾಮಹಾ ಇತಿ ।**

(ಶ. ಬ್ರಾ. ೯-೫-೧-೧೮)

ದೇವತೆಗಳು ಅಸತ್ಯವನ್ನು ತ್ಯಜಿಸಿ ಸತ್ಯವನ್ನೇ ದೃಢವಾಗಿ ಅವಲಂಬಿಸಿದರು. **ತ್ರಯೀ** ಎಂದು ಕರೆಸಿಕೊಳ್ಳುವ ವೇದಗಳೇ ಈ ಸತ್ಯಸ್ವರೂಪಗಳಾಗಿವೆಯಾದ್ದರಿಂದ ವೇದೋಕ್ತವಾದ ಕರ್ಮಗಳನ್ನಾಚರಿಸಿ **ಸತ್ಯ**ವನ್ನು ಹರಡೋಣ ಎಂದು ದೇವತೆಗಳು ಆಶಿಸಿದರು. ಇತ್ಯಾದಿಯಾಗಿ ಸತ್ಯಕ್ಕೂ ವ್ಯವಹಾರಕ್ಕೂ ಇರತಕ್ಕ ತಾತ್ತ್ವಿಕವಾದ ಸಂಬಂಧವನ್ನು ತೋರಿಸುವುದಲ್ಲದೇ ಇಂತಹ ಶುದ್ಧವಾದ ಕರ್ಮಾಚರಣೆಗಳಿಂದ ಪೂರ್ಣವಾದದ್ದೂ, ಸಕಲ ಸಂಪದ್ಯುಕ್ತವಾದದ್ದೂ ಆದ ಶ್ರೇಯಸ್ಸನ್ನು ಪಡೆಯಬಹುದೆಂದೂ ಆಶಿಸಿದೆ.

**ನಾಭಿರ್ಋತಸ್ಯ ಸಪ್ರಥಾ ಇತಿ । ಸತ್ಯಂ ವಾ ಋತಂ ವಾ ಋತಂ ಸತ್ಯಸ್ಯ ನಾಭಿಃ ಸಪ್ರಥಾ ಇತ್ಯೇವೈತದಾಹ ಸ ನೋ ವಿಶ್ವಾಯುಃ ಸಪ್ರಥಾ ಇತಿ ಸ ನಃ ಸರ್ವಾಯುಃ ಇತ್ಯೇವೈತದಾಹ।**

(ಶ. ಬ್ರಾ. ೧೪-೩-೧-೧೮)

ಇತ್ಯಾದಿ ವಿವರಣೆಗಳಿಂದ ವಿಶ್ವನಿಯಮಕ್ಕೂ ಸತ್ಯಕ್ಕೂ ಇರುವ ತಾದಾತ್ಮ್ಯವನ್ನು ತೋರಿಸಿ ಇಂತಹ ಸತ್ಯವನ್ನು ಅನುಸರಿಸುವುದರಿಂದಲೂ, ಸತ್ಯಕರ್ಮಗಳನ್ನು ಆಚರಿಸುವುದರಿಂದಲೂ ಪೂರ್ಣಾಯಸ್ಸು ಫಲರೂಪವಾಗಿ ದೊರಕುವುದರಿಂದಲೂ ಸತ್ಫಲಕ್ಕೂ ಸತ್ಕರ್ಮಕ್ಕೂ ಇರುವ ಕಾರ್ಯಕಾರಣ ಸಂಬಂಧವನ್ನು ತಿಳಿಸಿದೆ.

ಸತ್ಯಾತ್ಮಕವಾದ ಕರ್ಮಾಚರಣೆಗೂ ಸಹ ವಿಶ್ವನಿಯಮವನ್ನೂ, ಅದಕ್ಕೆ ಕಾರಣವಾದ ದೇವತೆಗಳ ಸ್ವರೂಪವನ್ನೂ ತಿಳಿಯಬೇಕಾದುದು ಅತ್ಯವಶ್ಯಕವಾದುದರಿಂದ ಆ ಜ್ಞಾನವೂ ಸಹ ಸತ್ಯದಿಂದಲೇ ಸಾಧ್ಯವೆಂಬುದನ್ನೂ ಸಹ ಅನೇಕ ಸನ್ನಿವೇಶಗಳಲ್ಲಿ ವಿಶದವಾಗಿ ತಿಳಿಸಿದೆ.

**ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।**
**ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ ।**

(ಋ. ಸಂ. ೩-೩೯-೫)

**ತ ಇದ್ದೇವಾನಾಂ ಸಧಮಾದ ಆಸನ್ನೃತಾವಾನಃ ಕವಯಃ ಪೂರ್ವ್ಯಾಸಃ ।**
**ಗೂಳ್ಹಂ ಜ್ಯೋತಿಃ ಪಿತರೋ ಅನ್ವವಿಂದನ್ತ್ಸತ್ಯಮಂತ್ರಾ ಅಜನಯನ್ನುಷಾಸಂ ।।**

(ಋ. ಸಂ. ೭-೭೬-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಋಷಿಗಳೆಲ್ಲರೂ ಸಹ ಸತ್ಯಾತ್ಮಕರಾದ ದೇವತೆಗಳ ಸ್ವರೂಪವನ್ನು ತಿಳಿದು ಕರ್ಮಗಳನ್ನು ಆಚರಿಸುದದರ ಫಲವಾಗಿ ಸಂಪತ್ತನ್ನು ಪಡೆದರೆಂಬ ಹಿಂದಿನ ಸಂದರ್ಭಗಳನ್ನು ಸೂಚಿಸುವ ವಾಕ್ಯಗಳು ಬಹಳವಾಗಿವೆ ಮತ್ತು ಸತ್ಯದಿಂದಲೇ ನಮಗೆ ಶುಭವಾಗಲಿ ಎಂಬ ಪ್ರಾರ್ಥನೆಯೂ ಜೊತೆಯಲ್ಲಿ ಇದೆ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತಮಾಶುಷಾಣಾಃ ।**
**ಶುಚೀದಯನ್ದೀಧಿತಿಮುಕ್ಥಶಾಸಃ ಕ್ಷಾಮಾ ಭಿಂದಂತೋ ಅರುಣೀರಪ ವ್ರನ್ ॥**
(ಋ. ಸಂ. ೪-೨-೧೬)

ನಮ್ಮ ಪಿತೃಗಳು ಸತ್ಯಾತ್ಮಕವಾದ ಯಜ್ಞಾಚರಣೆಯಿಂದ ಯಾವ ಒಳ್ಳೆಯ ಫಲಗಳನ್ನು ಪಡೆದರೋ ಅದೇ ರೀತಿ ಈಗಲೂ ಸಹ ನಮ್ಮ ಕರ್ಮಗಳೆಲ್ಲವೂ **ತತ್ಸತ್ಯಮಸ್ತು** ಸತ್ಯವಾದ ಫಲಗಳನ್ನು ಕೊಡುವುದಾಗಲಿ ಇತ್ಯಾದಿ ಪ್ರಾರ್ಥನೆಗಳಲ್ಲಿ **ಸತ್ಯಧರ್ಮ**ರಾದ ಅಗ್ನ್ಯಾದಿ ದೇವತೆಗಳ ಸತ್ಯಸ್ವರೂಪವೂ ವರ್ಣಿತವಾಗಿದೆ.

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**
(ಋ ಸಂ. ೧-೬೭-೫)

**ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವಚಾತನಂ ॥**
(ಋ ಸಂ. ೧-೧೨-೭)

**ದೇವೋ ನ ಯಃ ಸವಿತಾ ಸತ್ಯಮನ್ಮಾ ಕ್ರತ್ವಾ ನಿಪಾತಿ ವೃಜನಾನಿ ವಿಶ್ವಾ ।**
**ಪುರುಪ್ರಶಸ್ತೋ ಅಮತಿರ್ನ ಸತ್ಯ ಆತ್ಮೇವ ಶೇವೋ ದಿಧಿಷಾಯ್ಯೋ ಭೂತ್ ॥**
(ಋ. ಸಂ. ೧-೭೩-೨)

ಮುಂತಾದ ಅನೇಕ ಕಡೆಗಳಲ್ಲಿ **ಅಗ್ನ್ಯಾ**ದಿ ದೇವತೆಗಳೂ ಸಹ **ಸತ್ಯ**ದಿಂದಲೇ ಪೃಥಿವ್ಯಾದಿಲೋಕಗಳನ್ನು ಧರಿಸಿದುದನ್ನೂ, ಲೋಕರಕ್ಷಣೆಯನ್ನು ನಿರ್ವಹಿಸುದುವನ್ನೂ ವರ್ಣಿಸಿ ಮಾನವರೂ ಸಹ ಅದೇ ಸತ್ಯಮಾರ್ಗವನ್ನನುಸರಿಸ ಬೇಕೆಂಬುದನ್ನೂ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಅದೇ ದೃಷ್ಟಿಯಿಂದಲೇ ಸತ್ಯದೊಡನೆ ತಾದಾತ್ಮ್ಯವನ್ನೇ ಹೇಳುವಂತೆ ಇಂದ್ರನನ್ನು ವರ್ಣಿಸಿದೆ.

**ಸ್ವತೇಜಸಾ ಸರ್ವಂ ಛಾದಯನ್ ವಸೂನಿ ವಾ ಕುರ್ವನ್ ಸ್ತೋತೃಭ್ಯಃ** ಇಂದ್ರನು ತನ್ನ ತೇಜಸ್ಸುಗಳಿಂದ ಎಲ್ಲವನ್ನೂ ಆವರಿಸಿರುವನು. ಅಥವಾ ತನ್ನನ್ನು ಸ್ತುತಿಮಾಡುವವರಿಗೆ ಧನವನ್ನು ಅನುಗ್ರಹಿಸುವವನು ಎಂದೂ ವಸವಾನ ಶಬ್ದಕ್ಕೆ ಅರ್ಥವನ್ನು ವಿವರಿಸಿ, **ಸಹೋದಾಃ** ಎಂಬ ಪದಕ್ಕೆ ಬಲವನ್ನು ಯಜಮಾನರಿಗೂ, ತನ್ನನ್ನು ಸ್ತುತಿಸುವವರಿಗೂ ಅನುಗ್ರಹಿಸುವವನೆಂಬ ಅರ್ಥವನ್ನು ವರ್ಣಿಸಿದೆ. ಸಹಃ ಎಂಬ ಪದವು ಬಲನಾಮಗಳಲ್ಲಿಯೂ (ನಿ. ೩-೯) ಉದಕನಾಮಗಳಲ್ಲಿಯೂ (ನಿ. ೨-೨೪) ಪಠಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ರಕ್ಷ**—ರಕ್ಷ ಪಾಲನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ದೀರ್ಘ ಬರುತ್ತದೆ.

**ಪಾಹಿ**—ಪಾ ರಕ್ಷಣೇ. ಧಾತು. ಲೋಟ್ ಮಧ್ಯಮ ಪುರುಷ ಏಕವಚನಾಂತರೂಪ. **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಹೀಗೆ ಅಪಿತ್ವ ವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುವುದರಿಂದ ಅಂತೋದಾತ್ತವಾಗುತ್ತದೆ.

**ಅಸುರ**—ಅಸು ಕ್ಷೇಪಣೇ. ಧಾತು. **ಅಸೇರುರನ್** (ಉ. ಸೂ. ೧-೪೨) ಎಂಬುದರಿಂದ ಉರನ್ ಪ್ರತ್ಯಯ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸತ್‌ಪತಿಃ**—ಸತಾಂ ಪತಿಃ ಸತ್ಪತಿಃ **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ತರುತ್ರಃ**—ತೄ ಪ್ಲವನತರಣಯೋಃ **ಅಶಿತ್ರಾದಿಭ್ಯ ಇತ್ರೋತ್ರೌ** (ಉ. ಸೂ. ೪-೬೧೨) ಎಂಬುದರಿಂದ ಉತ್ರ ಪ್ರತ್ಯಯ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ **ಗ್ರಸಿತಸ್ಕಭಿತ**—(ಪಾ. ಸೂ. ೭-೨-೩೪) ಎಂಬುದರಿಂದ ನಿಪಾತಮಾಡಿರುವುದರಿಂದ ವ್ಯತ್ಯಯದಿಂದ ಸುವಿಗೆ ಜಸ್. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ವಚನದಿಂದ ಗುಣ ಬರುವುದಿಲ್ಲ. ಯಣಾದೇಶ ನಿತ್ ಸ್ವರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಸವಾನಃ**—ವಸ ಆಚ್ಛಾದನೇ. ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಲಟಿಗೆ ಶಾನಚಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. ವರ್ಣ ವ್ಯತ್ಯಯದಿಂದ ಮಕಾರಕ್ಕೆ ವಕಾರಾದೇಶ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಹೋದಾಃ**—ಸಹಃ ಬಲಂ ದದಾತೀತಿ ಸಹೋದಾಃ. ಡುದಾಞ್ ದಾನೇ. ಧಾತು. ವಿಚ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

**ದನೋ ವಿಶ ಇಂದ್ರ ಮೃಧ್ರವಾಚಃ ಸಪ್ತ ಯತು ರಃ ಶರ್ಮ ಶಾರದೀರ್ದರ್ತ್ ।**

**ಋಣೋರಪೋ ಅನವದ್ಯಾರ್ಣಾ ಯೂನೇ ವೃತ್ರಂ ಪುರುಕುತ್ಸಾಯ ರಂಧೀಃ ॥೨॥**

॥ ಪದಪಾಠಃ ॥

**ದನಃ । ವಿಶಃ । ಇಂದ್ರ । ಮೃಧ್ರಽವಾಚಃ । ಸಪ್ತ । ಯತ್ । ಪುರಃ । ಶರ್ಮ । ಶಾರದೀಃ । ದರ್ತ್ ।**

**ಋಣೋಃ । ಅಪಃ । ಅನವದ್ಯ । ಅರ್ಣಾಃ । ಯೂನೇ । ವೃತ್ರಂ । ಪುರುಽಕುತ್ಸಾಯ । ರಂಧೀಃ ॥ ೨ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ವೃತ್ರಸಂಬಂಧ್ಯಸುರಾಣಾಂ ಪುರಭೇದನಸಮಯೇ ಮೃಧ್ರವಾಚೋ॥ ಮರ್ಷಣವಚನಾ ವಿಶಸ್ತದೀಯಾಃ ಪ್ರಜಾಃ ಶರ್ಮ ಸುಖಂ ಯಥಾ ಭವತಿ ತಥಾ ದನಃ । ಅದಮಯಃ । ದಮೇರಿದಂ ರೂಪಂ ॥ ಯದ್ವಾ ॥ ವರ್ಣವ್ಯತ್ಯಯಃ ॥ ನದಃ । ಅನದಃ । ಅಶಬ್ದಯೋಽಸುರಪ್ರಜಾಃ । ಅತಿಭಯಂಕರಶಬ್ದಮಕರೋಃ । ಕದೇತಿ ಆಹ । ಯದ್ಯದಾ ಶಾರದೀಃ ಪ್ರತ್ನಗ್ರಾಃ । ಯದ್ವಾ । ಏತತ್ಸಂವತ್ಸರಲಕ್ಷಣಕಃ । ಸಂವತ್ಸರಪರ್ಯಂತಂ ದೃಢೀಕೃತಾ ಅಪಿ । ಸಪ್ತ ಪುರ ಏತತ್ಸಂಖ್ಯಾಕಾಃ ಪುರೀರ್ದರ್ತ್ । ಅದಾರಯಃ ॥ ಪುರುಷವ್ಯತ್ಯಯಃ । ದೃಣಾತೇರ್ಲಜಿ ಛಾಂದಸೋ ವಿಕರಣಸ್ಯ ಲುಕ್ । ರಾತ್ಸಸ್ಯ । ಪಾ. ೮-೨-೨೪ । ಇತಿ ನಿಯಮಾತ್ ತಲೋಪಾಭಾವಃ ॥ ತಥಾ ಕೃತ್ವಾ ಹೇ ಅನವದ್ಯ ಕಾತರತ್ವಾನಿಂದಾವನ್ ಹೇ ಇಂದ್ರ ಅರ್ಣಾ ಅರಣಶೀಲಾ ಅಪಸ್ತದೀಯದುರ್ಗಸ್ಥಾನಾನ್ಯುದಕಾಶ್ರಯಾಣಿ ತಟಾಕಾದೀನ್ಯೃಣೋಃ । ಅಗಮಯಃ ಪ್ರಾವರ್ತಯಃ । ಭಗ್ನಾನ್ಯಕರೋಃ । ಏವಮುಪದ್ರುತ್ಯ ಪುರುಕುತ್ಸಾಯೈತನ್ನಾಮ್ನೇ ರಾಜ್ಞೇ ಯೂನೇ ನಿತ್ಯತರುಣಾಯ ತದರ್ಥಂ ವೃತ್ರಮೇತನ್ನಾಮಕಮಸುರಂ ರಂಧೀಃ । ಅಸಾಧಯಃ । ಅಹನಃ । ಅಯಮೈತಿಹಾಸಿಕಪಕ್ಷಃ ॥ ನಿರುಕ್ತರೂಢ್ಯಾ ತು ಹೇ ಇಂದ್ರ ಮೃಧ್ರವಾಚೋ ವಿಶೋ ಮರ್ಷಣಧ್ವನಿಯುಕ್ತಾ ವೃಷ್ಟಿರೂಪಾಃ ಪ್ರಜಾ ದನಃ । ಅದಮಯಃ । ಅಶಬ್ದಯೋ ವಾ । ಅವರ್ಷಯ ಇತ್ಯರ್ಥಃ । ಕದಾ । ಯದ್ಯದಾ ಸಪ್ತ ಪುರಃ ಶಾರದೀರ್ದರ್ತ್ ಸರ್ಪಣಸ್ವಭಾವಾನ್ಪ್ರತ್ನಗ್ರಾನ್ ವೃಷ್ಟ್ಯಾ ಜಗತ್ಪೂರಕಾನ್ಮೇಘಾನದಾರಯಃ ತದೇತ್ಯರ್ಥಃ । ತಥಾ ಕೃತ್ವಾ ಹೇ ಅನವದ್ಯ ಅರ್ಣಾ ಅರಣಸ್ವಭಾವಾ ಅಪ ಋಣೋಃ । ಅಗಮಯಃ । ಪ್ರಾವರ್ತಯಃ ಕುಲ್ಯಾದಿರೂಪೇಣ । ಅನಂತರಂ ಯೂನೇ ಪುರುಕುತ್ಸಾಯ ವೃತ್ರಂ ಮುಖ್ಯಂ ಮೇಘಂ ರಂಧೀಃ । ಅಸಾಧಯಃ । ಅಹನಃ । ಅಯಮರ್ಥಃ ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ । ಋ. ೧-೬೩-೭ । ಇತ್ಯಾದಿಮಂತ್ರಾಂತರೇಷು ಪ್ರಸಿದ್ಧಃ । ಯಾಸ್ಕಸ್ತ್ವೇವಂ ವ್ಯಾಖ್ಯಾತ್ । ದನೋ ದಾನಮನಸೋ ನೋ ಮನುಷ್ಯಾನಿಂದ್ರ ಮೃದುವಾಚಃ ಕುರು । ನಿ.-೬-೩೧- । ಇತಿ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಶಾರದೀಃ**—ನೂತನವಾದ (ದೃಢವಾಗಿರುವಂತೆ ಒಂದು ವರ್ಷಕಾಲ ಕಟ್ಟಲ್ಪಟ್ಟ) **ಸಪ್ತಪುರಃ**—(ಅಸುರರ) ಏಳುಪುರಗಳನ್ನು । **ದರ್ತ್**—ಭೇದಿಸಿದೆಯೋ । (**ತದಾ**—ಆಗ) । **(ಹೇ) ಇಂದ್ರ**—ಎಲೈ ಇಂದ್ರನೇ । (**ತ್ವಂ**—ನೀನು) । **ಮೃಧ್ರವಾಚಃ**—(ಕ್ಷಮಾಪ್ರಾರ್ಥನೆ ಮಾಡುತ್ತಾ) ಮೃದುವಚನರಾದ । **ವಿಶಃ**—(ಆ ಪುರಗಳ) ಪ್ರಜೆಗಳನ್ನು (ಪ್ರಜೆಗಳಿಗೆ) । **ಶರ್ಮ**—ಸುಖವಾಗುವಂತೆ । **ದನಃ**—ನಮ್ರರನ್ನಾಗಿ ಮಾಡಿದೆ (ಅತಿ ಭಯಂಕರ ಶಬ್ದಮಾಡಿದೆ)। (ಅನಂತರ) **(ಹೇ) ಅನವದ್ಯ**—ನಿರ್ದಿಷ್ಟನಾದ ಎಲೈ ಇಂದ್ರನೇ । **ಅರ್ಣಾಃ**—ಪ್ರವಾಹ ಶೀಲವಾದ । **ಅಪಃ**—ತದೀಯದುರ್ಗಸ್ಥವಾದ ತಟಾಕಾದಿಗಳನ್ನೂ । **ಋಣೋಃ**—ಹೊರಡಿಸಿದೆ (ಭಗ್ನಗಳನ್ನಾಗಿ ಮಾಡಿದೆ) । (**ಕಿಂಚ**—ಮತ್ತು) । **ಯೂನೇ**—ತರುಣನಾದ । **ಪುರುಕುತ್ಸಾಯ**—ಪುರುಕುತ್ಸನೆಂಬ ರಾಜ ನಿಗೋಸ್ಕರ । **ವೃತ್ರಂ**—ವೃತ್ರನೆಂಬ ಅಸುರನನ್ನು **ರಂಧೀಃ**—ಸಂಹರಿಸಿದೆ । [ ಅಥವಾ **(ಹೇ) ಇಂದ್ರ**—ಎಲೈ ಇಂದ್ರನೇ । **ಯತ್**—ಯಾವಾಗ । **ಸಪ್ತ**—ಸರ್ಪಣಸ್ವಭಾವಗಳೂ । **ಶಾರದೀಃ**—ನೂತನಗಳೂ । **ಪುರಃ**—(ವೃಷ್ಟಿಯಿಂದ) ಜಗತ್ಪೂರಕಗಳೂ ಆದ ಮೇಘಗಳನ್ನು । **ದರ್ತ್**—ಭೇದಿಸಿದೆಯೋ । (**ತದಾ**—ಆಗ) **ಮೃಧ್ರವಾಚಃ**—

ಮೃದುಧ್ವನಿವಿಶಿಷ್ಟಗಳಾದ । **ವಿಶಃ**—ವೃಷ್ಟಿರೂಪಪ್ರಜೆಗಳನ್ನು । **ಶರ್ಮ ದನಃ**—(ಪ್ರಪಂಚಕ್ಕೆ) ಸುಖವಾಗುವಂತೆ ನಮ್ರರನ್ನುಮಾಡಿದೆ (ಮಳೆಗರೆಸಿದೆ) । **ಹೇ ಅನವದ್ಯ**—ಅನಿಂದಿತನಾದ ಎಲೈ ಇಂದ್ರನೇ, **ಅರ್ಣಃ**—ಪ್ರವಹಣ ಶೀಲಗಳಾದ । **ಅಪಃ**—ಉದಕಗಳನ್ನು । **ಋಣೋಃ**—(ನದ್ಯಾದಿ ರೂಪವಾಗಿ) ಹೊರಡಿಸಿದೆ ; (ಅನಂತರ) । **ಯೂನೇ ಪುರುಕುತ್ಸಾಯ**—ಯುವಕನಾದ ಪುರುಕುತ್ಸನಿಗೋಸ್ಕರ । **ವೃತ್ರಂ**—ಮುಖ್ಯಮೇಘವನ್ನು । **ರಂಧೀಃ**—ನಾಶಮಾಡಿದೆ ]

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಗಳ ಏಳು ಪುರಗಳನ್ನು ನಾಶಮಾಡಿದಾಗ, ಕ್ಷಮಾಯಾಚಕರಾದ ಅಲ್ಲಿಯ ಪ್ರಜೆಗಳನ್ನೂ ನಮ್ರರನ್ನಾಗಿ ಮಾಡಿದೆ(ಮೇಘಗಳನ್ನು ಭೇದಿಸಿ ವೃಷ್ಟಿಯನ್ನುಂಟುಮಾಡಿದೆ). ಅನವದ್ಯನಾದ ಎಲೈ ಇಂದ್ರನೇ, ಪ್ರವಾಹ ಶೀಲವಾದ ಉದಕಗಳನ್ನು ಹೊರಡಿಸಿದೆ ; ತರುಣನಾದ ಪುರುಕುತ್ಸನಿಗೋಸ್ಕರ ವೃತ್ರನೆಂಬ ಅಸುರನನ್ನೂ ನಾಶಮಾಡಿದೆ.

English Translation.

You have humbled the people, suing for pardon when you had destroyed their seven new cities: you the irreproachable, have dispersed the flowing waters : you have destroyed Vritra for the sake of the youthful Purukutsa.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಸಾಯಣರು ಐತಿಹಾಸಿಕಪರವಾದ ಒಂದು ವಿಧವಾದ ಅರ್ಥವನ್ನೂ, ನಿರುಕ್ತಪರವಾದ ಇನ್ನೊಂದು ಅರ್ಥವನ್ನೂ ವರ್ಣಿಸಿದ್ದಾರೆ. ಮೊದಲನೆಯ ಅರ್ಥವು ಇತಿಹಾಸಪರವಾಗಿ ಇಲ್ಲಿ ವರ್ಣಿತವಾಗಿದೆ.

**ಮೃಧ್ರವಾಚಃ— ಮರ್ಷಣವಚನಾಃ ।** ಈ ಪದವು ವಿಶಃ ಎಂಬ ಪದಕ್ಕೆ ವಿಶೇಷಣದ ರೀತಿಯಿಂದ ಪ್ರಯುಕ್ತವಾಗಿದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಇಂದ್ರನನ್ನು ಸಂಬೋಧಿಸಿ, ಅವನು **ವೃತ್ರಸಂಬಂಧ್ಯಸುರಾಣಾಂ ಪುರಭೇದನಸಮಯೇ ಮರ್ಷಣವಚನಾಃ ತದೀಯಾಃ ಪ್ರಜಾಃ ಸುಖಂ ಯಥಾ ಭವತಿ ತಥಾ ದನಃ ಅದಮಯಃ**—ವೃತ್ರಾಸುರನ ಸಂಬಂಧಿಗಳಾದ ಅಸುರರ ಪಟ್ಟಣಗಳನ್ನು ನಾಶಮಾಡುವಾಗ ಅಲ್ಲಿಯ ನಿವಾಸಿಗಳಾದ ಪ್ರಜೆಗಳು ಮೃದುವಾದ ವಚನಗಳನ್ನು ಹೇಳಿ ಸುಖವಾಗಿ ಇರುವ ರೀತಿಯಿಂದ ವರ್ತಿಸಿರುವನು ಎಂದೂ, **ಯದ್ವಾ-ವರ್ಣವ್ಯತ್ಯಯಃ ಅನದಃ ಅಸುರಪ್ರಜಾಃ ಅತಿಭಯಂಕರಶಬ್ದಮಕರೋಃ । ದನಃ** ಎಂಬ ಪದಕ್ಕೆ ದಮು ಧಾತುವಿನ ರೂಪವೆಂದು ವ್ಯಾಖ್ಯಾನಮಾಡಿ, ಎರಡನೆಯ ವ್ಯಾಖ್ಯಾನದಲ್ಲಿ ದನಃ ಎಂಬ ಶಬ್ದರೂಪದ ಅಕ್ಷರಗಳನ್ನು ವ್ಯತ್ಯಾಸಮಾಡುವುದರಿಂದ ಉಂಟಾದ ನದಃ ಎಂಬ ಪದಕ್ಕೆ ಇಂದ್ರನು ವೃತ್ರಾಸುರನ ಪ್ರಜೆಗಳ ನಗರಗಳನ್ನು ನಾಶಮಾಡುವ ಕಾಲದಲ್ಲಿ ಆ ಪ್ರಜೆಗಳು ಮೃದುವಾದ ಮಾತುಗಳನ್ನಾಡುವಹಾಗೆಯೂ, ಅವರಿಗೆ ಸುಖವು ಉಂಟಾಗುವಹಾಗೆಯೂ ಅವರಲ್ಲಿ (ವರ್ತನವು) ಸ್ಥಿತಿಯು ಉಂಟಾಗುವ ಹಾಗೆ ಭಯಂಕರವಾದ ಧ್ವನಿಯನ್ನು ಮಾಡಿರುವನೆಂದೂ ಅರ್ಥವನ್ನು ವರ್ಣಿಸಿದೆ.

**ಶಾರದೀಃ ಸಪ್ತ ಪುರಃ ದರ್ತ್ಯ—** ಶಾರದೀಃ ಎಂಬ ಪದವು ನೂತನ (ಹೊಸದು) ಎಂಬ ಅರ್ಥದಲ್ಲಿಯೂ, ಸಂವತ್ಸರ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ ಎಂದು ವ್ಯಾಖ್ಯಾನಮಾಡಿದೆ. ಇಂದ್ರನು ಹೊಸದಾಗಿ ನಿರ್ಮಿತ

ವಾಗಿರುವ ಅಥವಾ ಸಂವತ್ಸರದವರೆಗೂ ಭೇದಿಸಲಾಗದಿರುವಹಾಗೆ ದೃಢವಾಗಿರುವ ಅಸುರರ ಏಳು ನಗರಗಳನ್ನು ಸೀಳಿ ನಾಶಮಾಡಿರುವನೆಂದು ಅರ್ಥವನ್ನು ವಿವರಿಸಿದೆ.

**ಅನವದ್ಯ ಅರ್ಣಾಃ ಅಪಃ ಋಣೋಃ**— ಅನವದ್ಯ ಎಂಬ ಪದವು ಕಾತರತ್ವ (ಭಯ) ರೂಪವಾದ ನಿಂದೆಯು ಇಲ್ಲದಿರುವವನೆಂಬ ಅರ್ಥಬೋಧಕನೆಂದು ಅರ್ಥಮಾಡಿ, ಈ ಪದದಿಂದ ಇಂದ್ರನನ್ನು ಸಂಬೋಧಿಸಿದೆ. ಇಂದ್ರನು ಹೆದರದಿರುವವನಾಗಿ ಶತ್ರುಗಳ ನಗರಗಳನ್ನು ನಾಶಪಡಿಸಿದನಂತರ **ತದೀಯ ದುರ್ಗಸ್ಥಾನಾನಿ ಉದಕಾ-ಶ್ರಯಾಣಿ ತಟಾಕಾದೀನ್ ಪ್ರಾವರ್ತಯಃ** ಅಸುರರ ದುರ್ಗಪ್ರದೇಶಗಳನ್ನು ಪ್ರವಹಿಸುವ ಉದಕಗಳಿಂದ ತುಂಬಿರುವಂತೆಯೂ, ಉದಕಗಳಿಗೆ ಆಶ್ರಯವಾದ ಕೆರೆಯೇ ಮೊದಲಾದವುಗಳು ಇರುವ ರೂಪಾಂತರವಾಗಿರುವಹಾಗೆ ಮಾಡಿರುವನೆಂದೂ ಅರ್ಥವನ್ನು ವಿವರಿಸಿದೆ.

**ಪುರುಕುತ್ಸಾಯ ವೃತ್ರಂ ರಂಧೀಃ**—ಇಂದ್ರನು ಪುರುಕುತ್ಸನೆಂಬ ರಾಜನಿಗಾಗಿ ವೃತ್ರನೆಂಬ ಅಸುರನನ್ನು ಕೊಂದು ರಾಜನಿಗೆ ಉಪಕಾರವನ್ನು ಮಾಡಿರುವನೆಂದು ವ್ಯಕ್ತಗೊಳಿಸಿದೆ.

ನಿರುಕ್ತಕಾರರು ಹೇಳುವ ಅಭಿಪ್ರಾಯವನ್ನು ಅನುಸರಿಸುವ ಅರ್ಥದಲ್ಲಿ—ಇಂದ್ರನನ್ನು ಸಂಬೋಧಿಸಿ, **ವಿಶಃ** ಎಂಬ ಪದಕ್ಕೆ **ವೃಷ್ಟಿರೂಪಾಃ ಪ್ರಜಾಃ** ವೃಷ್ಟಿರೂಪವಾಗಿರುವ ಪ್ರಜೆಗಳು **ಮೃಧ್ರವಾಚಃ** ಮರ್ಷಣಧ್ವನಿಯಿಂದ ಕೂಡಿದವುಗಳಾಗಿರುವಂತೆ ಮಾಡಿ, ಅವುಗಳಿಂದ ಧ್ವನಿಯೂ, ವೃಷ್ಟ್ಯುದಕವೂ ಉಂಟಾಗುವಂತೆ ಅವನು ಮಾಡಿರುವನೆಂದು ಅರ್ಥವನ್ನು ವರ್ಣಿಸಿದೆ. **ಸಪ್ತ ಪುರಃ ಶಾರದೀರ್ದರ್ತ್** ಎಂಬ ವಾಕ್ಯದಲ್ಲಿರುವ ಪದಗಳಿಗೆ **ಸರ್ಪಣಸ್ವಭಾವಾನ್ ಪ್ರತ್ಯಗ್ರಾನ್ ವೃಷ್ಟ್ಯಾ ಜಾಗರೂಕಾನ್ ಮೇಘಾನದಾರಯಃ** ಚರಿಸುವ ಸ್ವಭಾವದಿಂದ ಇರುವ ನೂತನವಾದ ವೃಷ್ಟಿಯ ಉದಕಗಳನ್ನು ಸುರಿಸುವುದರಲ್ಲಿ ಜಾಗರೂಕವಾಗಿರುವ ಮೇಘಗಳನ್ನು ಇಂದ್ರನು ಸೀಳಿರುವನು ಎಂದು ಅರ್ಥವನ್ನು ಮಾಡಿದೆ. **ಅನವದ್ಯ ಅರ್ಣಾಃ ಅಪಃ ಋಣೋಃ ಅರಣಸ್ವಭಾವಾ ಅಪಃ ಪ್ರಾವರ್ತಯಃ ಕುಲ್ಯಾದಿರೂಪೇಣ** ಅನವದ್ಯ ಎಂಬ ಪದಕ್ಕೆ ಹಿಂದಿನ ಹಾಗೆಯೇ ಅರ್ಥವನ್ನು ವಿವರಿಸಿದೆ. ಇಂದ್ರನು ಪ್ರವಾಹರೂಪದಿಂದ ಚಲಿಸುವ ಸ್ವಭಾವವುಳ್ಳ ಉದಕಗಳು ಕಾಲುವೆಗಳ ರೂಪದಿಂದ ಪ್ರವಹಿಸುವಂತೆ ವೃಷ್ಟ್ಯುದಕಗಳನ್ನು ಸುರಿಸಿದನು ಎಂದು ಅರ್ಥವನ್ನು ಹೇಳಿದೆ. **ಯೂನೇ ಪುರುಕುತ್ಸಾಯ ವೃತ್ರಂ ರಂಧೀಃ** ಎಂಬ ವಾಕ್ಯದಲ್ಲಿ ವೃತ್ರ ಶಬ್ದಕ್ಕೆ ಮೇಘವೆಂಬ ಅರ್ಥವನ್ನು ಹೇಳಿದೆ. ಇಂದ್ರನು ಪುರುಕುತ್ಸನೆಂಬ ತರುಣನಾದ ರಾಜನಿಗಾಗಿ ಮೇಘವನ್ನು ಸೀಳಿ ವೃಷ್ಟಿಯು ಉಂಟಾಗುವಂತೆ ಮಾಡಿರುವನು ಎಂಬ ಅರ್ಥವನ್ನು ವರ್ಣಿಸಿದೆ.

**ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ ಪುರೋ ವಜ್ರಿನ್ ಪುರುಕುತ್ಸಾಯ ದರ್ದಃ |**
**ಬರ್ಹಿರ್ನ ಯತ್ಸುದಾಸೇ ವೃಥಾ ವರ್ಗಂಹೋ ರಾಜನ್ ವರಿವಃ ಪೂರವೇ ಕಃ ||**
(ಋ. ಸಂ. ೧-೬೩-೭)

ಈ ಋಕ್ಕಿನಲ್ಲಿ ಇದೇ ಅರ್ಥವು ಪ್ರತಿಪಾದಿತವಾಗಿದೆ ಎಂದು ವರ್ಣಿಸಿದೆ.

ನಿರುಕ್ತಕಾರರು ಈ ಋಕ್ಕನ್ನೇ ಉದಹರಿಸಿ **"ದಾನಮನಸೋ ನೋ ಮನುಷ್ಯಾನಿಂದ್ರ ಮೃದುವಾಚಃ ಕುರು"** (ನಿ. ೬–೩೧) ಎಂಬ ಅರ್ಥವನ್ನು ಮೃಧ್ರವಾಚಃ ಎಂಬ ಪದಕ್ಕೆ ವಿವರಿಸಿದ್ದಾರೆ. ಇಂದ್ರನು, ಯಜಮಾ

ನರು ಮೃದುವಾದ ವಾಕ್ಕುಳ್ಳವರಾಗಿ ಇರುವಂತೆಯೂ, ದಾನವನ್ನು ಆಚರಿಸುವ ಮನಸ್ಸುಳ್ಳವರಾಗಿಯೂ ಇರುವಂತೆ ಮಾಡಲಿ ಎಂಬ ಆಶಂಸನೆಯು ನಿರುಕ್ತಕಾರರಿಂದ ವರ್ಣಿತವಾಗಿದೆ.

ಪುರುಕುತ್ಸನೆಂಬ ರಾಜನು ಐಕ್ಷ್ವಾಕುವಂಶದವನೆಂದು ಶತಪಥಬ್ರಾಹ್ಮಣದಿಂದ ತಿಳಿಯುಬರುತ್ತದೆ.

**ಪುರುಕುತ್ಸೋ ದೌರ್ಗ್ರಹೇಣೇಜ ಐಕ್ಷ್ವಾಕೋ ರಾಜಾ ।**

(ಶ. ಬ್ರಾ. ೧೩-೫-೪೦೫)

ಎಂಬ ವಾಕ್ಯವು ಐಕ್ಷ್ವಾಕು ವಂಶದಲ್ಲಿ ಹುಟ್ಟಿದ ಪುರುಕುತ್ಸನೆಂಬ ರಾಜನು **ದೌರ್ಗಾಹ**ರೂಪವಾದ ಅಶ್ವಮೇಧವನ್ನು ಮಾಡಿದನೆಂದು ಹೇಳಿದೆ. ಇದೇ ವಿಷಯವು,

**ಅಸ್ಮಾಕಮತ್ರ ಪಿತರಸ್ತ ಆಸನ್ತ್ಸಪ್ತ ಋಷಯೋ ದೌರ್ಗ್ಯಹೇ ಬಧ್ಯಮಾನೇ ।**

(ಋ. ಸಂ. ೪-೪೨-೮)

ಎಂಬ ಋಕ್ಕಿನಲ್ಲಿ ಸೂಚಿತವಾಗಿದೆ. ಆದರೆ ಉದಾಹೃತವಾದ ಈ ಋಕ್ಕಿನಲ್ಲಿ ಸಾಯಣರು **ದೌರ್ಗಹ** ಎಂಬ ಪದ ವನ್ನು ಅಂಕಿತನಾಮವನ್ನಾಗಿ ಮಾಡಿ **ದುರ್ಗಹಸ್ಯ ಪುತ್ರೇ ಪುರುಕುತ್ಸೇ** ಎಂದು ಅರ್ಥಮಾಡಿದ್ದಾರೆ.

**ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ಪುರೋ ವಜ್ರನ್ಪುರುಕುತ್ಸಾಯ ದರ್ದಃ ।**
**ಬರ್ಹಿರ್ನ ಯತ್ಸುದಾಸೇ ವೃಥಾ ವರ್ಗಂಹೋ ರಾಜನ್ವರಿವಃ ಪೂರವೇ ಕಃ ॥**

(ಋ. ಸಂ. ೧-೬೩-೭)

ಎಂಬ ಋಕ್ಕಿನ ಆಧಾರದಿಂದ ಇವನು ಸುದಾಸನೆಂಬ ರಾಜನ ಸಮಕಾಲೀನನೆಂದು ತಿಳಿಯಬರುತ್ತದೆ.

**ಸನೇಮ ತೇಽವಸಾ ನವ್ಯ ಇಂದ್ರ ಪ್ರ ಪೂರವಃ ಸ್ತವಂತ ಏನಾ ಯಜ್ಞೈಃ ।**
**ಸಪ್ತ ಯತ್ಪುರಃ ಶರ್ಮ ಶಾರದೀರ್ದರ್ದನ್ ದಾಸೀಃ ಪುರುಕುತ್ಸಾಯ ಶಿಕ್ಷನ್ ।**

(ಋ ಸಂ. ೬-೨೦-೧೦)

ಎಂಬಲ್ಲಿ ಪುರುಕುತ್ಸನು **ಪೂರು**ವೆಂಬ ಜನಾಂಗದ ರಾಜನೆಂದು ಹೇಳಿದೆ. ದಾಸರನ್ನೆಲ್ಲಾ ಜಯಿಸಿದವನೆಂದೂ ಹೇಳಿದೆ. ಇವನಿಗೆ ತ್ರಸದಸ್ಯುವೆಂಬ ಪುತ್ರನಿದ್ದನೆಂದೂ ತಿಳಿಯಬರುತ್ತದೆ. ಆದರೆ ಆ ಪುತ್ರನು ಪುರುಕುತ್ಸನ ಮರಣಾನಂತರ ಹುಟ್ಟಿರಬಹುದೆಂದು ತಿಳಿಯುತ್ತದೆ.

**ಪುರುಕುತ್ಸಾನೀ ಹಿ ವಾಮದಾಶದ್ಧವ್ಯೇಭಿರಿಂದ್ರಾವರುಣಾ ನಮೋಭಿಃ ।**
**ಅಥಾ ರಾಜಾನಂ ತ್ರಸದಸ್ಯುಮಸ್ಯಾ ವೃತ್ರಹಣಂ ದದಥುರರ್ಧದೇವಂ ॥**

(ಋ. ಸಂ ೪-೪೨-೯)

ಎಂಬತ ಪುರುಕುತ್ಸನ ಪತ್ನಿಯು ಇಂದ್ರಾವರುಣರನ್ನು ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ತೃಪ್ತಿಪಡಿಸಿದಾಗ **ತ್ರಸದಸ್ಯು**ವೆಂಬ ಪುತ್ರನನ್ನು ಹಡೆಯುವಂತೆ ಅವರು ಅನುಗ್ರಹಿಸಿದರೆಂದಿದೆ. ಈ ಆಧಾರದ ಮೇಲೆ ಪುರುಕುತ್ಸನು ಯುದ್ಧದಲ್ಲಿ ಮೃತನಾದನಂತರ ಅವನ ಪತ್ನಿಯು ಇಂದ್ರಾವರುಣರನ್ನು ಪ್ರಾರ್ಥಿಸಿ ತ್ರಸದಸ್ಯುವೆಂಬ ಮಗನನ್ನು ಹಡೆದಳೆಬಂ ಕಥೆಯಿದೆ.

॥ ವ್ಯಾಕರಣಪ್ರಕ್ರಿಯಾ ॥

**ದನಃ**—ದಮು ಉಪಶಮೇ. ಧಾತು. ಲಜ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. ಅಂತರ್ಭಾವಿತಣ್ಯರ್ಥಕವಾದ ಧಾತು. **ಬಹುಲಂ ಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅಥವಾ ಣದ ಅವ್ಯಕ್ತೇ ಶಬ್ದೇ. ಛಾಂದಸವಾಗಿ ವರ್ಣವ್ಯತ್ಯಯ ಬಂದಿದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಮೃಧ್ರವಾಚಃ**—ಮೃಧ್ರಾ ವಾಕ್ ಯೇಷಾಂ ತೇ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದರ್ತ್**—ದೃ ವಿದಾರಣೇ. ಧಾತು. ಲಜ್ **ವ್ಯತ್ಯಯೋ ಬಹುಲಂ** ಎಂಬುದರಿಂದ ಸಿಪಿಗೆ ತಿಪ್ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. **ರಾತ್ ಸಸ್ಯ** (ಪಾ. ಸೂ. ೮-೨-೨೪) ಎಂಬುದರಿಂದ ಸಂಯೋಗಾಂತ ಲೋಪ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಋಣೋಃ**—ಋಣು ಗತೌ. ಧಾತು. ತನಾದಿ. ಲಜ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರ ಲೋಪ. **ತನಾದಿಕೃಞ್ಭ್ಯ ಉಃ** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. ಸಿಪ್ ನಿಮಿತ್ತವಾಗಿ ಅದಕ್ಕೆ ಗುಣ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಅಪಃ**—ದ್ವಿತೀಯಾ ಬಹುವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯೂನೇ**—ಯುವನ್ ಶಬ್ದ. ಚತುರ್ಥೀ ಏಕವಚನ ಪರವಾದಾಗ **ಶ್ವಯುವಮಘೋನಾಮತದ್ಧಿತೇ** (ಪಾ. ಸೂ. ೬-೪-೧೩೩) ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ.

**ರಂಧೀಃ**—ರಧ ಹಿಂಸಾ ಸಂರಾದ್ಧ್ಯೋಃ ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರ ಲೋಪ. ಚ್ಲಿಗೆ ಸಿಚಾದೇಶ. **ಆರ್ಧಧಾತುಕ**—(ಪಾ. ಸೂ. ೭-೨-೩೫) ಎಂಬುದರಿಂದ ಅದಕ್ಕೆ ಇಡಾಗಮ. **ಅಸ್ತಿಸಿಚೋಽಪೃಕ್ತೇ** (ಪಾ. ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ. **ಇಟಈಟಿ** (ಪಾ. ಸೂ. ೮-೨-೨೮) ಸೂತ್ರದಿಂದ ಸಿಚಿಗೆ ಲೋಪ. **ರಧಿಜಭೋರಚಿ** (ಪಾ. ಸೂ. ೭-೧-೬೧) ಎಂಬುದರಿಂದ ಧಾತುವಿಗೆ ನುಮಾಗಮ. ಛಾಂದಸವಾಗಿ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥

॥ ಸಂಹಿತಾಪಾಠಃ ॥

**ಅಜಾ ವೃತ ಇಂದ್ರ ಶೂರಪತ್ನೀರ್ದ್ಯಾಂ ಚ ಯೇಭಿಃ ಪುರುಹೂತ ನೂನಂ ।**

**ರಕ್ಷೋ ಅಗ್ನಿಮಶುಷಂ ತೂರ್ವಯಾಣಂ ಸಿಂಹೋ ನ ದಮೇ ಅಪಾಂಸಿ ವಸ್ತೋಃ ॥**

॥ ಪದಪಾಠಃ ॥

ಅಜ । ವೃತಃ । ಇಂದ್ರ । ಶೂರಽಪತ್ನೀಃ । ದ್ಯಾಂ । ಚ । ಯೇಭಿಃ । ಪುರುಽಹೂತ । ನೂನಂ ।
ರಕ್ಷೋ ಇತಿ । ಅಗ್ನಿಂ । ಅಶುಷಂ । ತೂರ್ವಯಾಣಂ । ಸಿಂಹಃ । ನ । ದಮೇ । ಅಪಾಂಸಿ । ವಸ್ತೋಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಶೂರಪತ್ನೀಃ ಶೂರೈ ರಕ್ಷೋಭಿಃ ಪಾಲಿತಾ ವೃತಃ । ವರ್ತಂತ ಆಸ್ವಿತಿ ವೃತೋಽಸುರಪುರೀಃ । ಯದ್ವಾ । ಶೂರಾ ಯಜಮಾನಾಃ । ತೈಃ ಪಾಲಿತಾ ವೃತೋ ವೇದಿಭೂಮೀಃ । ಅಜ । ಗಚ್ಛ ಜೇತುಂ । ತಥಾ ಕೃತ್ವಾ ದ್ಯಾಂ ಚ ನೂನಮವಶ್ಯಮಜ । ಕಿಂ ತ್ವಮೇಕ ಏವ ನ । ಹೇ ಪುರುಹೂತ ಬಹುಭಿರ್ಬಹುಧಾ ವಾಹೂತೇಂದ್ರ ಯೇಭಿರ್ಮರುದಾದಿಭಿರನುಗತೋಽಸಿ ತೈಃ ಸಹಿತಃ ಸನ್ । ತಥಾ ಕೃತ್ವಾಶುಷಮಾಶೋಷಯಿತಾರಮಶಾಂತಂ ವಾ ತೂರ್ವಯಾಣಂ ತೂರ್ಣಗಮನಮಗ್ನಿಂ ವೈದ್ಯುತಂ ಹೋಮಾಧಾರಂ ವಾಗ್ನಿಂ ರಕ್ಷೋ । ರಕ್ಷಸ್ವೈವ । ಕಿಮರ್ಥಂ ರಕ್ಷಣಮಿತಿ ಉಚ್ಯತೇ । ದಮೇ ಗೃಹೇಽಪಾಂಸಿ ಕರ್ಮಾಣಿ ಕುರ್ವನ್ ವಸ್ತೋರ್ವಸ್ತುಂ । ಯದ್ವಾ । ವಾಸಯಿತುಂ ಸ್ಥಾಪಯಿತುಂ । ಕಾರಯಿತುಮಿತ್ಯರ್ಥಃ । ಯಜ್ಞದ್ವಿಟ್ಸು ಹತೇಷ್ವಗ್ನೌ ಸುಸ್ಥಿರೇ ಸತಿ ಯಾಗಾದ್ಯನುಷ್ಠಾನಪರಃ ಸ್ಥಾಸ್ಯಾಮೀತ್ಯರ್ಥಃ । ರಕ್ಷಣೇ ದೃಷ್ಟಾಂತಃ । ಸಿಂಹ ಇವ । ಸ ಯಥಾ ಸ್ವಾಶ್ರಯಭೂತಂ ವನಂ ಗಜಾದ್ಯುಪದ್ರವಪರಿಹಾರೇಣ ರಕ್ಷತಿ ತದ್ವತ್ । ಅಸುರಪುರಭಂಗಗಮನೇ ವಾ ದೃಷ್ಟಾಂತಃ । ಸಿಂಹೋ ಯಥಾ ನಿರ್ಭಯೋ ವಿರೋಧಿಮೃಗಾನ್ ಹಂತುಂ ಧಾವತಿ ತದ್ವತ್ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಶೂರಪತ್ನೀಃ**—ಶೂರರಾದ ರಾಕ್ಷಸರಿಂದ ಪಾಲಿತವಾದ । **ವೃತಃ**—ಅವರ ವಾಸಸ್ಥಾನವಾದ ಅಸುರನಗರಗಳನ್ನು । **ಸಿಂಹಃ ನ**—ಸಿಂಹವು ನಿರ್ಭಯವಾಗಿ ಇತರ ಪ್ರಾಣಿಗಳನ್ನು ಎದುರಿಸುವಂತೆ । **ಅಜ**—(ಜಯಿಸುವುದಕ್ಕೋಸ್ಕರ) ಹೊರಡು । [ಅಥವಾ **ಶೂರಪತ್ನೀಃ**—ಯಾಗಕರ್ತೃಗಳಿಂದ ರಕ್ಷಿತವಾದ । **ವೃತಃ**—ವೇದಿ ಭೂಮಿಗಳನ್ನು (ಉದ್ದೇಶಿಸಿ) । **ಅಜ**—ಹೋಗು] (ಅನಂತರ) । **ದ್ಯಾಂ ಚ**—ಸ್ವರ್ಗಲೋಕಕ್ಕೂ । **ನೂನಂ (ಅಜ)**—ಅವಶ್ಯವಾಗಿ (ಹೋಗು) । **ಹೇ ಪುರುಹೂತ**—ಅನೇಕರಿಂದ ಅಥವಾ ಅನೇಕ ವಿಧವಾಗಿ ಆಹೂತನಾದ ಎಲೈ ಇಂದ್ರನೇ । **ಯೇಭಿಃ**—ನಿನ್ನ ಅನುಯಾಯಿಗಳಾದ ಮರುದಾದಿಗಳು ಯಾರಿದ್ದಾರೆಯೋ ಅವರಿಂದ ಕೂಡಿದವನಾಗಿ । (**ಅಜ**—ಮೇಲೆ ಹೇಳಿದ ಎರಡು ಸ್ಥಳಗಳಿಗೂ ಹೋಗು) । ಅನಂತರ । **ಅಶುಷಂ**—ಶೋಷಕನೂ ಅಥವಾ ಅಶಾಂತನೂ, । **ತೂರ್ವಯಾಣಂ**—ಶೀಘ್ರಗಮನನೂ ಆದ । **ಅಗ್ನಿಂ**—ವೈದ್ಯುತಾಗ್ನಿಯನ್ನು ಅಥವಾ ಹೋಮಾಗ್ನಿಯನ್ನು । **ದಮೇ**—ಮನೆಯಲ್ಲಿ । **ಅಪಾಂಸಿ**—ಕರ್ಮಗಳನ್ನು ಮಾಡುತ್ತಾ । **ವಸ್ತೋಃ**—ವಾಸಿಸುವುದಕ್ಕೋಸ್ಕರ । [ಅಥವಾ **ಅಪಾಂಸಿ**—ಕರ್ಮಗಳನ್ನು । **ವಸ್ತೋಃ**—ಸ್ಥಾಪಿಸುವುದಕ್ಕೋಸ್ಕರ । ] **ಸಿಂಹಃ ನ**—ಸಿಂಹವು ಸ್ವಾಶ್ರಯ ಭೂತವಾದ ವನವನ್ನು ಉಪದ್ರವಾದಿ ಪರಿಹಾರಮಾಡಿ ರಕ್ಷಿಸುವಂತೆ) । **ರಕ್ಷೋ**—ರಕ್ಷಿಸು.

॥ ಭಾವಾರ್ಥ ॥

ನಾನಾ ವಿಧವಾಗಿ ಅಥವಾ ಅನೇಕರಿಂದ ಆಹೂತನಾದ ಎಲೈ ಇಂದ್ರನೇ, ನಿನ್ನ ಅನುಯಾಯಿಗಳಾದ ಮರುದಾದಿಗಳಿಂದ ಸಹಚರಿತನಾಗಿ, ರಾಕ್ಷಸಪಾಲಿತವಾದ ಅಸುರ ನಗರಿಗಳನ್ನು ಜಯಿಸಲು. ಸಿಂಹವು ಇತರಪ್ರಾಣಿಗಳ ಮಧ್ಯೆ ಧೈರ್ಯವಾಗಿ ನುಗ್ಗುವಂತೆ, ಹೊರಡು; ಅಲ್ಲಿಂದ ಸ್ವರ್ಗಲೋಕಕ್ಕೂ ಹೋಗು; ಶೀಘ್ರಗತಿಯುಳ್ಳವನೂ ಅಶಾಂತನೂ. ಆದ ಹೋಮಾಗ್ನಿಯನ್ನು ಮನೆಗಳಲ್ಲಿ ಕರ್ಮಗಳನ್ನು ಮಾಡಲು ಅನುಕೂಲಿಸುವಂತೆ ಸ್ಥಾಪಿಸಿ ರಕ್ಷಿಸು

English Translation.

Go to the cities inhabited by the Rakshasas, and thence to heaven (attended), receiver of many sacrifices, by those who (attend you). Defend, like a lion, the untamed, quick-moving Agni, that he may abide in his dwelling, fulfilling his functions.

॥ ವಿಶೇಷವಿಷಯಗಳು ॥

**ಶೂರಪತ್ನೀಃ**—ಈ ಪದವು ಎರಡು ವಿಧವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿದೆ. ಮೊದಲನೆಯ ಅರ್ಥದಲ್ಲಿ **ಶೂರೈಃ ರಕ್ಷೋಭಿಃ ಪಾಲಿತಾಃ** ವೀರರಾದ ರಾಕ್ಷಸರಿಂದ ಪಾಲಿಸಲ್ಪಟ್ಟವುಗಳಾಗಿಯೂ, **ವರ್ತಂತೇ ಅಸ್ಮಿತಿ ವೃತೇಃ** ರಾಕ್ಷಸರು ವಾಸಮಾಡುವ ಪ್ರದೇಶವಾದ ಅಸುರನಗರವೆಂಬ ಅರ್ಥವನ್ನು ವರ್ಣಿಸಿ, ಎರಡನೆಯದಾಗಿ **ಶೂರಾಃ ಯಜಮಾನಾಃ ತೈಃ ಪಾಲಿತಾಃ ವೃತಃ ವೇದಿಭೂಮಿಃ** ಶೂರ ಶಬ್ದಕ್ಕೆ ಯಜಮಾನರೆಂದು ಅರ್ಥವನ್ನು ಹೇಳಿ, ಅವರಿಂದ ರಕ್ಷಿತವಾಗಿರುವ ಯಜ್ಞವೇದಿಗಳು ಎಂದೂ ವಿವರಿಸಿ, ಇಂದ್ರನು ಅಸುರಪಾಲಿತವಾದ ನಗರಗಳನ್ನು ಅಥವಾ ಯಜಮಾನರಿಂದ ರಕ್ಷಿತವಾದ ಯಜ್ಞವೇದಿಯನ್ನೂ ಕುರಿತು ಪ್ರಯಾಣ ಮಾಡಲಿ ಎಂದು ವಿವರಿಸಿದೆ.

ಇಂದ್ರನನ್ನು **ಪುರುಹೂತ** ಎಂಬ ಶಬ್ದದಿಂದ ಸಂಬೋಧಿಸಿ, **ಪುರುಭಿಃ ಬಹುಧಾ ವಾ ಆಹೂತ** ಬಹಳಮಂದಿ ಯಜಮಾನರಿಂದ ಅನೇಕವಿಧವಾಗಿ ಇಂದ್ರನು ಆಹೂತನಾಗಿರುವನೆಂದು ಅರ್ಥವನ್ನು ವಿವರಿಸಿದೆ. **ಯೇಭಿಃ ದ್ಯಾಂ ಚ ನೂನಂ ಅಜ** ಇಂದ್ರನು ಯಾವಾಗಲೂ ಮರುದ್ದೇವತೆಗಳೊಡನೆ ಇರುವಕಾರಣ ಅವರೊಡನೆಯೇ ಅಸುರನಗರವನ್ನು ಜಯಿಸಿ, ಅಥವಾ ಯಾಗಶಾಲೆಗೆ ಬಂದು ಹವಿಸ್ಸನ್ನು ಸ್ವೀಕರಿಸಿ **ದ್ಯಾಂ** ಸ್ವರ್ಗವನ್ನು ಸೇರಲಿ ಎಂದು ಯಜಮಾನರ ಆಶಂಸೆಯು ವರ್ಣಿತವಾಗಿದೆ.

**ಅಶುಷಂ ತೂರ್ವಯಾಣಂ** ಈ ಎರಡು ಪದಗಳೂ ಅಗ್ನಿಂ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿವೆ. **ಅಶೋಷಯಿತಾರಂ ಅಶಾಂತಂ ವಾ,** ಅಗ್ನಿಯು ಎಲ್ಲವನ್ನೂ ಪೂರ್ಣವಾಗಿ ಶೋಷಿಸುವವನು ಮತ್ತು ಉಪಶಾಂತನಾಗದೆ ಇರುವವನು ಎಂದೂ, ತ್ವರೆಯಿಂದ ವ್ಯಾಪಿಸುವ ಗಮನವುಳ್ಳವನೆಂದೂ ಅಗ್ನಿಯ ಗುಣವನ್ನು ವರ್ಣಿಸಿ, ಅಗ್ನಿಂ-ಎಂಬ ಪದಕ್ಕೆ ಈ ವಿಧವಾದ ಗುಣಗಳಿಂದ ಕೂಡಿದವನು ವೈದ್ಯುತಾಗ್ನಿಯಾದರೂ ಆಗಬಹುದು ಅಥವಾ ಹವಿಸ್ಸುಗಳನ್ನು ಅರ್ಪಿಸುವ ಹೋಮಕ್ಕೆ ಆಧಾರವಾದ ಪಾರ್ಥಿವಾಗ್ನಿಯಾದರೂ ಆಗಬಹುದೆಂದು ಅರ್ಥವನ್ನು ವಿವರಿಸಿ, ಈ ಅಗ್ನಿಯನ್ನು ಇಂದ್ರನು ರಕ್ಷಿಸಲಿ ಎಂದು ಆಶಂಸಿಸಿದೆ.

**ದಮೇ ಅಪಾಂಸಿ ವಸ್ತೋಃ—ಗೃಹೇ ಕರ್ಮಾಣಿ ಕುರ್ವನ್ ವಸ್ತುಂ। ಯದ್ವಾ ವಾಸಯಿತುಂ ಸ್ಥಾಪಯಿತುಂ ಕಾರಯಿತುಂ।** ದಮೇ ಎಂಬ ಪದವು ಗೃಹನಾಮಗಳಲ್ಲಿ (ನಿ. ೩-೧೩) ಉಕ್ತವಾಗಿದೆ. ಅಪಃ ಎಂಬ ಪದವು ಕರ್ಮನಾಮಗಳಲ್ಲಿ (ನಿ. ೩-೨) ಪಠಿತವಾಗಿದೆ. **ವಸ್ತೋಃ** ಎಂಬ ಪದವು, ವಾಸವಾಗಿರುವುದು. ಸ್ಥಿತಿಯನ್ನು ಹೊಂದುವುದು ಎಂಬ ಅರ್ಥವನ್ನು ವಿವರಿಸುವುದಾಗಿದೆ. ಅಗ್ನಿಯು ಯಜ್ಞವೇದಿಯಲ್ಲಿ ಸುಖದಿಂದ ಇರುವಾಗ ಯಜ್ಞಾದಿಕರ್ಮಗಳನ್ನು ಯಜಮಾನರಿಂದ ಮಾಡಿಸುವುದಕ್ಕಾಗಿ ಇಂದ್ರನ ಅವಶ್ಯಕರ್ತವ್ಯವಾದ ರಕ್ಷಣೆಯು ಅವಶ್ಯಕ ವಾಗಿರುವುದು ಎಂದೂ, **ಯಜ್ಞದ್ವಿಟ್ಸು ಹತೇಷು ಅಗ್ನೌ ಸುಸ್ಥಿರೇ ಯಾಗಾದ್ಯನುಷ್ಠಾನಪರಃ ಸ್ಥಾಸ್ಯಾಮಿ** ಎಂಬ ಯಜಮಾನನ ಆಶಂಸನೆಯು ವಿವೃತವಾಗಿದೆ ಎಂಬ ಅರ್ಥವು ಇಲ್ಲಿ ವರ್ಣಿತವಾಗಿದೆ.

**ಸಿಂಹಃ ಇವ** ಎಂಬ ಈ ವಾಕ್ಯವು ಇಂದ್ರಕೃತವಾದ ರಕ್ಷಣೆಯ ವಿಷಯದಲ್ಲಿ ಉಪಮಾನವಾಗಿ ಉಕ್ತವಾಗಿದೆ. ಸಿಂಹಕೃತವಾದ ರಕ್ಷಣೆಯಲ್ಲಿ ಸಿಂಹದ ವಾಸಸ್ಥಾನವಾದ ವನವು ಗಜಾದಿಗಳಿಂದ ಉಂಟಾಗುವ ಉಪದ್ರವಪರಿಹಾರ ಫಲಕವಾಗಿರುವುದು. ಇದರಂತೆ ಯಜಮಾನರು ಆಚರಿಸುವ ಯಾಗಾನುಷ್ಠಾನರಕ್ಷಣೆಯು ಯಜ್ಞವಿಘ್ನಕಾರಿಗಳಾದ ಅಸುರರ ಉಪದ್ರವನಾಶಫಲಕವಾಗಿರುವುದು ಎಂಬ ಅರ್ಥವನ್ನು ದೃಷ್ಟಾಂತರೀತಿಯಿಂದ ವರ್ಣಿಸಿದೆ.

ಎರಡನೆಯ ಅರ್ಥದಲ್ಲಿ ಈ ವಾಕ್ಯವು **ಅಸುರ ಭಂಗಗಮನೇ ವಾ ದೃಷ್ಟಾಂತಃ** ಅಸುರರನ್ನು ನಾಶಗೊಳಿಸುವುದಕ್ಕಾಗಿ ಇಂದ್ರನು ಉದ್ರಿಕ್ತಭಾವದಿಂದ ಹೋಗುವ ವಿಷಯದಲ್ಲಿ ದೃಷ್ಟಾಂತವಾಗಿದೆ ಎಂದು ಹೇಳಿ, **ಸಿಂಹೋ ಯಥಾ ನಿರ್ಭಯೋ ವಿರೋಧಿಮೃಗಾನ್ ಹಂತುಂ ಧಾವತಿ ತದ್ವತ್**—ಯಾವ ವಿಧವಾದ ಭಯವೂ ಇಲ್ಲದೆ ಸಿಂಹವು ತನ್ನ ವಿರೋಧಿಗಳಾದ ಮೃಗಗಳನ್ನು ನಾಶಗೊಳಿಸುವುದಕ್ಕಾಗಿ ಹೋಗುವಹಾಗೆ ಇಂದ್ರನು ಯಾವ ಭಯವೂ ಇಲ್ಲದವನಾಗಿ ಅಸುರರನ್ನು ನಿಗ್ರಹಮಾಡಲು ಪ್ರಯಾಣಮಾಡುತ್ತಾನೆ ಎಂದು ಅರ್ಥವನ್ನು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಆಜಾ**—ಅಜ ಗತಿಕ್ಷೇಪಣಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವೃತಃ—ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ.

**ಯೇಭಿಃ**—ಯಚ್ಛಬ್ದ. ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಐಸ್ ಭಾವ ವಿಕಲ್ಪವಾದುದರಿಂದ ಏತ್ವ.

**ಪುರುಹೂತ**—ಪುರುಭಿಃ ಹೂತಃ ಪುರುಹೂತಃ ಸಂಬುದ್ಧಿಯಲ್ಲಿ ಆಮಂತ್ರಿತ ನಿಘಾತಸ್ವರ ಬರುತ್ತದೆ.

**ರಕ್ಷೋ**—ರಕ್ಷ ಪಾಲನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಉಳಿಯುತ್ತದೆ.

**ತೂರ್ವಯಾಣಮ್**—ತೂರ್ವಂ ಯಾನಂ ಯಸ್ಯ. ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಪಾಂಸಿ— ಆಪಃ ಕರ್ಮಾಖ್ಯಾಯಾಮ್** (ಉ ಸೂ· ೪-೬೪೭) ಎಂಬುದರಿಂದ ಅಸುನ್ ಪ್ರತ್ಯಯ. ಹ್ರಸ್ವ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ವಸ್ತೋಃ**—ವಸ ನಿವಾಸೇ. ಧಾತು. ಬಹುಲಗ್ರಹಣದಿಂದ ತುಮುನರ್ಥದಲ್ಲಿ ತೋಸುನ್ ಪ್ರತ್ಯಯ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಕೃನ್ಮೇಜಂತಃ** ಎಂಬುದರಿಂದ ಏಜಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

**ಶೇಷನ್ನು ತ ಇಂದ್ರ ಸಸ್ಮಿನ್ಯೋನೌ ಪ್ರಶಸ್ತಯೇ ಪವೀರವಸ್ಯ ಮಹ್ನಾ ।**

**ಸೃಜದರ್ಣಾಂಸ್ಯವ ಯದ್ಯುಧಾ ಗಾಸ್ತಿಷ್ಠದ್ಧರೀ ಧೃಷತಾ ಮೃಷ್ಟ ವಾಜಾನ್ ॥**

॥ ಪದಪಾಠಃ ॥

ಶೇಷನ್ । ನು । ತೇ । ಇಂದ್ರ । ಸಸ್ಮಿನ್ । ಯೋನೌ । ಪ್ರಶಸ್ತಯೇ । ಪವೀರವಸ್ಯ । ಮಹ್ನಾ ।

ಸೃಜನ್ । ಅರ್ಣಾಂಸಿ । ಅವ । ಯತ್ । ಯುಧಾ । ಗಾಃ । ತಿಷ್ಠತ್ । ಹರೀ ಇತಿ । ಧೃಷತಾ । ಮೃಷ್ಟ । ವಾಜಾನ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ಶತ್ರವಃ ಸಸ್ಮಿನ್ ಸರ್ವಸ್ಮಿನ್ ಸಮಾನೇ ವಾ ಯೋನೌ ಸ್ವಕೀಯೇ ಸ್ಥಾನೇಽಂತರಿಕ್ಷೇ ವಾ । ಯೋನಿರಂತರಿಕ್ಷಂ । ನು ಕ್ಷಿಪ್ರಂ ಶೇಷನ್ । ಶೇರತಾಂ ॥ ಶೀಙಕೋ ಲೇಟ್ಯಡಾಗಮಃ। ವ್ಯತ್ಯಯೇನ ಪರಸ್ಮೈಪದಂ । ಸಿಬ್ಬಹುಲಮಿತಿ ಸಿಪ್ ॥ ಕಿಮರ್ಥಂ । ಪ್ರಶಸ್ತಯೇ ಪ್ರಶಂಸನಾಯ ತ್ವತ್ಸ್ತುತಯೇ । ತ್ವನ್ಮಹಿಮಜ್ಞಾಪನಾಯೇತ್ಯರ್ಥಃ । ಕಿಂ ಸೇವನಾದಿಸಾಧನೇನೇತಿ ಆಹ । ಪವೀರವಸ್ಯ ಕುಲಿಶಸ್ಯ ಕುಲಿಶಶಬ್ದಸ್ಯ ವಾ ಮಹ್ನಾ ಮಹಿಮ್ನಾ । ತ್ವದ್ವಜ್ರಪ್ರಹಾರೇಣ ಹತಾ ಮೇಘಾಃ ಶತ್ರವೋ ವಾ ತತ್ರೈವ ಶೇರತೇ ನಿಪಾತೇನ ಪಲಾಯಂತ ಇತ್ಯರ್ಥಃ । ಕಿಂ ಚ ಯದ್ಯದಾ ಯುಧಾ ಪ್ರಹರಣಸಾಧನೇ- ನಾಯುಧೇನ ಯುದ್ಧೇನ ವಾ ಗಾಃ ಗಚ್ಛಸಿ ತದಾರ್ಣಾಂಸ್ಯುದಕಾನ್ಯವ ಸೃಜತ್ । ಅವಾಸೃಜಃ । ಅವಾಙ್ಮುಖಮಪಾತಯಃ ॥ ಪುರುಷವ್ಯತ್ಯಯಃ ॥ ತದರ್ಥಂ ಹರೀ ಅಶ್ವೌ ತಿಷ್ಠತ್ । ಅಧ್ಯತಿಷ್ಠಃ ॥ ಅತ್ರಾಪಿ ಪುರುಷವ್ಯತ್ಯಯಃ ॥ ಯದ್ವಾ । ಯದಾ ಹರೀ ಅಧಿತಿಷ್ಠಸಿ ತದಾವಾಸೃಜಃ । ಅಥೈವಂ ಕೃತ್ವಾ ವಾಜಾನನ್ನಾನಿ ಸಸ್ಯಾದಿಲಕ್ಷಣಾನಿ ಧೃಷತಾ ಧರ್ಷಕೇಣ ಸಾಮರ್ಥ್ಯೇನ ಮೃಷ್ಟ । ಶೋಧಯ । ಪ್ರವರ್ಧಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತೇ**—ಆ ನಿನ್ನ ಶತ್ರುಗಳು (ಮೇಘಗಳು) । **ಸಸ್ಮಿನ್**—ಸಮಸ್ತವಾದ ಅಥವಾ ಸಮಾನವಾದ । **ಯೋನೌ**—ಸ್ವಕೀಯಸ್ಥಾನದಲ್ಲಿ ಅಥವಾ (ಮೇಘದಲ್ಲಿ) ಅಂತರಿಕ್ಷದಲ್ಲಿ । **ಪವೀರವಸ್ಯ**—ವಜ್ರಾಯುಧದ ಅಥವಾ ವಜ್ರಾಯುದದ ಶಬ್ದದ । **ಮಹ್ನಾ**—ಮಹಿಮೆಯಿಂದ । **ಪ್ರಶಸ್ತಯೇ**—(ನಿನ್ನ ಮಹಿಮೆಯನ್ನು) ಪ್ರಶಂಸಿಸುವುದಕ್ಕೋಸ್ಕರ । **ನು**—ಕ್ಷಿಪ್ರವಾಗಿ । **ಶೇಷನ್**—ಬೀಳಲಿ । (**ಕಿಂಚ**—(ಮತ್ತೂ) । **ಯತ್**—ಯಾವಾಗ । **ಯುಧಾ**—ಪ್ರಹರಣಸಾಧನವಾದ ಆಯುಧದಿಂದ ಅಥವಾ ಯುದ್ಧದಿಂದ (ವಿಶಿಷ್ಟನಾಗಿ) । **ಗಾಃ**—ಹೋಗುತ್ತೀಯೋ । (**ತದಾ**—ಆಗ) । **ಅರ್ಣಾಂಸಿ**—ಉದಕಗಳನ್ನು । **ಅವಸೃಜತ್**—ಅಧೋಮುಖವಾಗಿ ಬೀಳಿಸುತ್ತೀಯೋ । (**ತದರ್ಥಂ**—ಅದೇ ಉದ್ದೇಶದಿಂದ) । **ಹರೀ**—ಹರಿನಾಮಕವಾದ ಎರಡು ಅಶ್ವಗಳನ್ನು । **ತಿಷ್ಠತ್**—ಆರೋಹಿಸುತ್ತೀಯೋ (ಈ ರೀತಿ ಮಾಡಿ) । **ವಾಜಾನ್**—ಸಸ್ಯಾದಿಲಕ್ಷಣಾನ್ನವನ್ನು । **ಧೃಷತಾ**—ನಿನ್ನ ಸಾಮರ್ಥ್ಯದಿಂದ । **ವೃಷ್ವ**—ಶೋಧಿಸು (ಅಭಿವೃದ್ಧಿಪಡಿಸು).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ವಜ್ರಾಯುಧದ ಸಾಮರ್ಥ್ಯದಿಂದ ಪರಾಭೂತರಾದ ನಿನ್ನ ಶತ್ರುಗಳು ತಮ್ಮ ತಮ್ಮ ಸ್ಥಾನದಲ್ಲಿ, ನಿನ್ನ ಮಹಿಮೆಯನ್ನು ಪ್ರಕಟಿಸುವುದಕ್ಕೋಸ್ಕರ, ಬಿದ್ದಿರಲಿ (ವಜ್ರಾಯುಧದಿಂದ ಛಿನ್ನವಾದ ಮೇಘಗಳು ನಿನ್ನ ಮಹಿಮೆಯನ್ನು ಪ್ರಕಟಿಸುತ್ತಾ ಸ್ವಸ್ಥಾನವಾದ ಅಂತರಿಕ್ಷದಲ್ಲಿ ಇರಲಿ); ನಿನ್ನ ಹರಿನಾಮಕ ಅಶ್ವಗಳನ್ನೇರಿ ಯುದ್ಧಾಭಿಲಾಷಿಯಾಗಿ (ಆಯುಧಧಾರಿಯಾಗಿ) ಹೋಗಿ, ಉದಕಗಳನ್ನು ಅಧೋಮುಖವಾಗಿ ಬೀಳಿಸುತ್ತೀಯೆ. ಈ ನಿನ್ನ ಸಾಮರ್ಥ್ಯದಿಂದ ಸಸ್ಯಾದಿಲಕ್ಷಣಾನ್ನವು ಅಭಿವೃದ್ಧವಾಗುತ್ತದೆ.

## English Translation.

Let (your foes, Indra,) humbled by the might of your thunderbolt, rest in their own station, for your glory : when you move, (armed) with your weapon, you send down the waters : arresting your horses, increase, by your power, ( the abundance of ) food.

॥ ವಿಶೇಷವಿಷಯಗಳು ॥

**ಸಸ್ಮಿನ್ ಯೋನೌ ತೇ ನು ಶೇಷನ್**—ಈ ವಾಕ್ಯದಲ್ಲಿ ಇಂದ್ರನನ್ನು ಸಂಬೋಧಿಸಿದೆ. **ತೇ** ಎಂಬ ಪದಕ್ಕೆ ಇಂದ್ರನ ಶತ್ರುಗಳು ಎಂದು ಅರ್ಥವನ್ನು ವಿವರಿಸಿದೆ. **ಸಸ್ಮಿನ್** ಎಂಬ ಪದವು ಯೋನೌ ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ನಿರುಕ್ತಕಾರರು ಯೋನಿ ಎಂಬ ಪದವನ್ನು ಗೃಹನಾಮಗಳಲ್ಲಿ (ನಿ. ೩-೧೩) ಪಠಿಸಿರುತ್ತಾರೆ. ಮತ್ತು—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**
**ಯಥಾ ಪ್ರಸೂತಾ ಸವಿತುಃ ಸವಾಯಁ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥**

(ಋ. ಸಂ. ೧-೧೧೩-೧)

ಈ ಋಕ್ಕಿನಲ್ಲಿ ಯೋನಿ ಶಬ್ದವು ಸ್ಥಾನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದು ವರ್ಣಿಸಿದ್ದಾರೆ. ಮತ್ತು—

**ಯ ಈಂ ಚಕಾರ ನ ಸೋ ಅಸ್ಯ ವೇದ ಯ ಈಂ ದದರ್ಶ ಹಿರುಗಿನ್ನು ತಸ್ಮಾತ್ ।**
**ಸ ಮಾತುರ್ಯೋನಾ ಪರಿವೀತೋ ಅಂತರ್ಬಹುಪ್ರಜಾ ನಿರ್ಋತಿಮಾ ವಿವೇಶ ॥**
(ಋ. ಸಂ. ೧-೧೬೪ ೩೨)

ಇಲ್ಲಿ **ಯೋನಿರಂತರಿಕ್ಷಂ ಮಹಾನವಯವಃ ಪರಿವೀತೋ ವಾಯುನಾ ಅಯಮಪೀತರೋ ಯೋನಿರೇತಸ್ಮಾದೇವ ಪರಿಯುತೋ ಭವತಿ ।** (ನಿ. ೨-೮) ಗರ್ಭಾಶಯದಲ್ಲಿ ವಾಯುವಿನಿಂದ ಗರ್ಭವು ಉತ್ಪನ್ನವಾಗುವಹಾಗೆ ವಾಯುವಿನಿಂದ ವ್ಯಾಪ್ತವಾಗಿರುವ ಮತ್ತು ಉದಕಗಳುಳ್ಳ ಮೇಘದಿಂದ ಕೂಡಿರುವ ಅಂತರಿಕ್ಷವು ಇಲ್ಲಿ ಯೋನಿಪದದಿಂದ ಪರಾಮೃಷ್ಟವಾಗಿದೆ ಎಂದು ಅರ್ಥವನ್ನು ವಿವರಿಸಿದೆ.

ಯೋನಿ ಶಬ್ದವು ಕಾರಣ, ಉತ್ಪತ್ತಿಸ್ಥಾನ, ವಾಸಸ್ಥಾನ ಈ ಅರ್ಥಗಳಲ್ಲಿ ಪ್ರಯೋಗವಿರುವುದಲ್ಲದೆ, ನಿರುಕ್ತಕಾರರು ಅಣಃ, ಕ್ಷೋದಃ ಇತ್ಯಾದ್ಯುದಕನಾಮಗಳಲ್ಲೂ ಸಹ ಈ ಪದವನ್ನು ಪಠಿಸಿದ್ದಾರೆ. (ನಿ. ೨-೨೪)

**ಋತಸ್ಯ ದೇವಾ ಅನು ವ್ರತಾ ಗುರ್ಭುವತ್ಪರಿಷ್ಟಿರ್ದ್ಯೌರ್ನ ಭೂಮ ।**
**ವರ್ಧಂತೀಮಾಪಃ ಪನ್ವಾ ಸುಶಿಶ್ವಿಮೃತಸ್ಯ ಯೋನಾ ಗರ್ಭೇ ಸುಜಾತಂ ।**
(ಋ. ಸಂ. ೧-೬೫.೨)

ಎಂಬ ಋಕ್ಕಿನಲ್ಲಿ **ಯಜ್ಞಸ್ಯ ಅನ್ನಸ್ಯ ವಾ ಕಾರಣಭೂತೇ ಜಲೇ,** ಯಜ್ಞಕ್ಕೂ ಅನ್ನಕ್ಕೂ ಕಾರಣಭೂತವಾದ ಜಲದಲ್ಲಿ ಎಂದೂ,

**ದೇವಂ ವೋ ದೇವಯಜ್ಯಯಾಗ್ನಿಮೀಳೀತ ಮರ್ತ್ಯಃ ।**
**ಸಮಿದ್ಧಃ ಶುಕ್ರ ದೀದಿಹ್ಯೃತಸ್ಯ ಯೋನಿಮಾಸದಃ ಸಸಸ್ಯ ಯೋನಿಮಾಸದಃ ।**
(ಋ. ಸಂ. ೫-೨೧-೪)

ಎಂಬಲ್ಲಿ **ಯೋನಿಂ ಕಾರಣಂ ಸ್ವರ್ಗಸಾಧನಂ ।** ಸ್ವರ್ಗಕ್ಕೆ ಒಯ್ಯಲು ಸಹಕಾರಿಯಾದ ಸಾಧನವೆಂದೂ,

**ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।**
**ಚಿತ್ರೋ ಯದಭ್ರಾಟ್ ಛ್ವೇತೋ ನ ವಿಕ್ಷು ರಥೋ ನ ರುಕ್ಮೀ ತ್ವೇಷಃ ಸಮತ್ಸು ।**
(ಋ. ಸಂ. ೧-೬೬-೩)

ಎಂಬಲ್ಲಿ ಗೃಹವೆಂದೂ,

**ಯಮೀಂ ದ್ವಾ ಸವಯಸಾ ಸಪರ್ಯತಃ ಸಮಾನೇ ಯೋನಾ ಮಿಥುನಾ ಸಮೋಕಸಾ ।**
**ದಿವಾ ನ ನಕ್ತಂ ಪಲಿತೋ ಯುವಾಜನಿ ಪುರೂ ಚರನ್ನಜರೋ ಮಾನುಷಾ ಯುಗಾ ।**
(ಋ. ಸಂ. ೧-೧೪೪-೪)

ಎಂಬಲ್ಲಿ ಫಲಕ್ಕೆ ಉತ್ಪತ್ತಿಸ್ಥಾನವೆಂದೂ ಹೀಗೆಯೇ

**ವೇದಿಷದೇ ಪ್ರಿಯಧಾಮಾಯ ಸುದ್ಯುತೇ ಧಾಸಿಮಿವ ಪ್ರ ಭರಾ ಯೋನಿಮಗ್ನಯೇ ।**
**ವಸ್ತ್ರೇಣೇವ ವಾಸಯಾ ಮನ್ಮನಾ ಶುಚಿಂ ಜ್ಯೋತೀರಥಂ ಶುಕ್ರವರ್ಣಂ ತಮೋಹನಂ ।**
(ಋ. ಸಂ. ೧-೧೪೦-೧)

ಇತ್ಯಾದಿ ಋಕ್ಕುಗಳಲ್ಲಿ **ವೇದ್ಯಾಖ್ಯಂ ಸ್ಥಾನಂ** ಎಂದೂ ಹೀಗೆ ಈ ಪದಕ್ಕೆ ನಾನಾರ್ಥಗಳಲ್ಲಿ ಪ್ರಯೋಗಗಳಿರುವುವು. ಪ್ರಕೃತವಾದ ಋಕ್ಕಿನಲ್ಲಿ ಸಕಲವಸ್ತುಗಳಿಗೂ ಆಶ್ರಯವಾಗಿರುವ ಅಂತರಿಕ್ಷದಲ್ಲಿ ಎಂಬರ್ಥವನ್ನು ಹೇಳಿದೆ.

ಇಂದ್ರನನ್ನು ಸಂಬೋಧಿಸಿ ಇಂದ್ರನ ಶತ್ರುಗಳು ಅವರವರ ಸ್ಥಾನಗಳಲ್ಲಿ ಪೂರ್ವದಲ್ಲಿ ಅವರು ಇದ್ದಂತೆಯೇ ಅಡಗಿರಲಿ, ಅಥವಾ ಸರ್ವಪ್ರಾಣಿಗಳಿಗೂ ಆಶ್ರಯವಾಗಿರುವ ಅಂತರಿಕ್ಷದಲ್ಲಿ ಅಡಗಿರಲಿ ಎಂದು ಅರ್ಥವನ್ನು ವಿವರಿಸಿ ಹೇಳಿದೆ.

**ಪವೀರವಸ್ಯ ಮಹ್ನಾ ಪ್ರಶಸ್ತಯೇ**—ಪವಿಃ ಎಂಬ ಪದವು ವಜ್ರಾಯುಧದ ನಾಮಗಳಲ್ಲಿ (ನಿ. ೩-೧೧) ಉಕ್ತವಾಗಿದೆ. ವಾಙ್ನಾಮಗಳಲ್ಲಿಯೂ (ನಿ. ೨-೧೩) ಪಠಿತವಾಗಿದೆ. ಮತ್ತು ಯಾಸ್ಕರು—

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಸ್ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**
(ಋ. ಸಂ. ೧೦-೬೫.೧೩)

ಈ ಋಕ್ಕನ್ನು ಉದಹರಿಸಿ. **ಪವಿಃ ಶಲ್ಯೋ ಭವತಿ ಯದ್ವಿಪುನಾತಿ ಕಾಯಂ, ತದ್ವತ್ ಪವೀರಮಾಯುಧಂ ತದ್ವಾನಿಂದ್ರಃ ಪವೀರವಾನ್** ಪವಿ ಶಬ್ದಕ್ಕೆ ಮುಳ್ಳು ಎಂದು ಅರ್ಥವಾಗಬಹುದು. ಆ ಮುಳ್ಳಿನಿಂದ ಶರೀರವು ಶೀಳುವುದರಿಂದ ಮುಳ್ಳಿನಿಂದ ಕೂಡಿರುವಕಾರಣ ಆಯುಧವು ಪವೀರ ಶಬ್ದದಿಂದ ಬೋಧ್ಯವಾಗಿರುವುದು. ಈ ಆಯುಧವನ್ನು ಹೊಂದಿರುವ ಇಂದ್ರನು ಪವೀರವಾನ್ ಎಂಬ ಶಬ್ದದಿಂದ ವ್ಯವಹೃತನಾಗಿರುವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಇಲ್ಲಿ ಸಾಯಣರು—

ಪವೀರವಸ್ಯ ಎಂಬ ಪದಕ್ಕೆ ಕುಲಿಶಸ್ಯ—ವಜ್ರಾಯುಧದ, ಅಥವಾ **ಕುಲಿಶಶಬ್ದಸ್ಯ** ವಜ್ರಾಯುಧ ಎಂಬ ಪದದ ಅರ್ಥವನ್ನು ವಿವರಿಸಿ, ವಜ್ರಾಯುಧದ ಮಹಿಮೆಯಿಂದಲೂ ಮತ್ತು **ತ್ವದ್ವಜ್ರಪ್ರಹಾರೇಣ ಹತಾಃ ಮೇಘಾಃ ಶತ್ರವೋ ವಾ ತತ್ರೈವ ಶೇರತೇ ನಿಪಾತೇನ ಪಲಾಯಂತೇ** ಇಂದ್ರನ ವಜ್ರಾಯುಧದ ಏಟಿನಿಂದ ಮೇಘಗಳಾಗಲಿ, ಶತ್ರುಗಳಾಗಲಿ, ಅಲ್ಲಿಯೇ (ಅಂತರಿಕ್ಷದಲ್ಲಿ) ಅಡಗಿಹೋಗುವರು ಅಥವಾ ಓಡುವರು ಎಂಬ ಅರ್ಥವನ್ನು ವಿವರಿಸಿ, ಇದು (ಈರೀತಿಯಾಗಿರುವ ಸ್ಥಿತಿಯು) **ಪ್ರಶಂಸನಾಯ ತ್ವತ್ಸ್ತುತಯೇ ತ್ವನ್ಮಹಿಮಜ್ಞಾಪನಾಯ** ಇಂದ್ರನ ಮಹಿಮೆಯನ್ನು ಪ್ರಕಟಗೊಳಿಸುವುದಕ್ಕಾಗಿ ಇರುವುದು ಎಂಬ ಅರ್ಥವನ್ನು ವರ್ಣಿಸಿದ್ದಾರೆ.

**ಯತ್ ಯುಧಾ ಗಾಃ ಅರ್ಣಾಂಸಿ ಅವಸೃಜತ್ ಯದಾ ಪ್ರಹರಣಸಾಧನೇನ ಆಯುಧೇನ ಯುದ್ಧೇನ ವಾ ಗಚ್ಛಸಿ ತದಾ ಉದಕಾನಿ ಅವಾಸೃಜಃ ।** ಯತ್ ಎಂಬ ಪದವು ಯದಾ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. **ಯುಧಾ** ಎಂಬ ಪದಕ್ಕೆ ಪ್ರಹಾರಸಾಧನವಾದ ಆಯುಧವಾಗಬಹುದು ಅಥವಾ ಯುದ್ಧವೂ ಆಗಬಹುದು ಎಂದು ಅರ್ಥವನ್ನು ವಿವರಿಸಿದೆ. ಇದರಿಂದ ಇಂದ್ರನು ಯುದ್ಧದಲ್ಲಿ ಸಂಚರಿಸುವಾಗಲೂ ಅಥವಾ ತನ್ನ ಆಯುಧದೊಡನೆ ಇರುವಾಗಲೂ ಅವನು ಉದಕಗಳನ್ನು ಭೂಮಿಗೆ ಬೀಳುವಂತೆ ಮಾಡುವನು (ವೃಷ್ಟಿಯನ್ನು ಸುರಿಸುವನು) ಎಂದು ಅರ್ಥವನ್ನು ಹೇಳಿದೆ. ಲೋಕದಲ್ಲಿ ವೀರಪುರುಷನು ತನ್ನ ಆಯುಧವನ್ನು ಧರಿಸಿ ಶತ್ರುಗಳ ಸಂಗಡ ಯುದ್ಧವನ್ನು ಮಾಡಿ ಶತ್ರುಗಳನ್ನು ಭೂಮಿಯಲ್ಲಿ ಅವಾಙ್ಮುಖರಾಗಿ ಅವರು ಬೀಳುವಂತೆ ಕೆಡವುವನು ಎಂಬ ಲೋಕರೀತಿಯು ಇಲ್ಲಿ ಇಂದ್ರನ ವಿಷಯದಲ್ಲಿ ವರ್ಣಿತವಾಗಿರುವುದೆಂದು **ಅವಾಙ್ಮುಖಮಪಾತಯಃ** ಎಂಬ ಪದದಿಂದ ಸೂಚಿತವಾಗಿರುತ್ತದೆ.

**ಹರೀ ತಿಷ್ಠತ್**—ನಿರುಕ್ತಕಾರರು, **ಹರೀ ಇಂದ್ರಸ್ಯ,** (ನಿ. ೨-೨೮) ಎಂದು ಇಂದ್ರನ ಅಶ್ವಗಳಿಗೆ ಹರೀ ಎಂದು ಪ್ರಸಿದ್ಧಿಯಿರುವುದೆಂದೂ, ಹೇಳಿರುವ ಕಾರಣ ಇಂದ್ರನು ಯುದ್ಧದಲ್ಲಿ ಜಯವನ್ನು ಹೊಂದುವುದಕ್ಕಾಗಿ ತನ್ನ (ಅಶ್ವವನ್ನು) ವಾಹನವಾದ ಹರೀ ಎಂಬ ಅಶ್ವಗಳನ್ನು (ಆರೂಢನಾಗಿ) ಆರೋಹಣಮಾಡಿದಕೂಡಲೇ **ಯದಾ ಹರೀ ಅಧಿತಿಷ್ಠಸಿ ತದಾ ಅಪಾಸೃಜಃ ।** ವೃಷ್ಟಿಯನ್ನು ಸುರಿಸುವನು ಎಂದು ಅರ್ಥವನ್ನು ವಿವರಿಸಿ, **ವಾಜಾನ್ ಧೃಷತಾ ವೃಷ್ಟ** ಎಂಬ ವಾಕ್ಯದಿಂದ ಇಂದ್ರನು **ಸಸ್ಯಾದಿ ಲಕ್ಷಣಾನಿ ಅನ್ನಾನಿ** ಸಸ್ಯರೂಪವಾದ ಅನ್ನವನ್ನು ತನ್ನ ಇತರರನ್ನು ತಿರಸ್ಕರಿಸುವ **ಧರ್ಷಕೇಣ ಸಾಮರ್ಥ್ಯೇನ** ಶಕ್ತಿಯಿಂದ ವೃದ್ಧಿಗೊಳಿಸಲಿ ಎಂಬ ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

ವಾಜ ಶಬ್ದಕ್ಕೆ ಅನೇಕಾರ್ಥಗಳಲ್ಲಿ ಪ್ರಯೋಗವಿದ್ದರೂ ಇಲ್ಲಿ ಅನ್ನ ಎಂಬ ಅರ್ಥದಲ್ಲಿ ಮಾತ್ರವೇ ಪ್ರಯೋಗವು ನಿರ್ದಿಷ್ಟವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶೇಷನ್**—ಶೀಙ್ ಸ್ವಪ್ನೇ. ಧಾತು. ಲೇಟ್ ಪ್ರಥಮಪುರುಷ ಬಹುವಚನದಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಝಿ ಪ್ರತ್ಯಯ ಬರುತ್ತದೆ. **ಇತಶ್ಚಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಝೋಂತಃ** ಎಂಬುದರಿಂದ ಅಂತಾದೇಶ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಅಂತ್ಯಲೋಪ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಸಸ್ಮಿನ್**—ಸರ್ವಸ್ಮಿನ್ ಎಂದು ರೂಪವಾದಾಗ ಛಾಂದಸವಾಗಿ ವರ್ಣಲೋಪ ಬರುತ್ತದೆ.

**ಪ್ರಶಸ್ತಯೇ**—ಶಂಸು ಸ್ತುತೌ. ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸೃಜತ್**—ಸೃಜ ವಿಸರ್ಗೇ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಙ್ ಮಧ್ಯಮಪುರುಷ ಏಕವಚನದಲ್ಲಿ ತಿಬಾದೇಶ. ಇಕಾರಲೋಪ. ಶ ವಿಕರಣ. ಇದು ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಬಹುಲಂ ಛಂದಸ್ಯಮಾ**—ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಯುಧಾ**—ಯುಧ ಸಂಪ್ರಹಾರೇ. ಧಾತು. ಕ್ವಿಪ್ ಪ್ರತ್ಯಯ. ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತಿಷ್ಠತ್**—ಷ್ಠಾ ಗತಿನಿವೃತ್ತೌ. ಧಾತು. ಹಿಂದಿನಂತೆ ಪುರುಷ ವ್ಯತ್ಯಯ. ಲಙ್ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಧೃಷತಾ**—ಞಿಧೃಷಾ ಪ್ರಾಗಲ್ಭ್ಯೇ. ಧಾತು. ಲಟಿಗೆ ಶತ್ರಾದೇಶ. ನುಮ್ ರಹಿತವಾದ ಶತೃ ಪ್ರತ್ಯಯದ ಪರದಲ್ಲಿ ತೃತೀಯಾ ಏಕವಚನ ಬಂದುದರಿಂದ **ಶತುರನುಮೋನದ್ಯ**- (ಪಾ ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಮೃಷ್ಟ**—ಮೃಜೂ ಶುದ್ಧೌ. ಧಾತು. ಲೋಟ್ ಮಧ್ಯಮಪುರುಷ ಏಕವಚನಕ್ಕೆ ವ್ಯತ್ಯಯದಿಂದ ತಾದೇಶ. ವಿಕರಣಕ್ಕೆ ಲುಕ್. **ವ್ರಶ್ಚಭ್ರಸ್ಜ**—(ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷತ್ವ ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ತಿಙಂತ ನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

**ವಹ ಕುತ್ಸಮಿಂದ್ರ ಯಸ್ಮಿಞ್ಚಾಕನ್ತ್ಸ್ಯೂಮನ್ಯೂ ಋಜ್ರಾ ವಾತಸ್ಯಾಶ್ವಾ ।**
**ಪ್ರ ಸೂರಶ್ಚಕ್ರಂ ವೃಹತಾದಭೀಕೇಽಭಿ ಸ್ಪೃಧೋ ಯಾಸಿಷದ್ವಜ್ರಬಾಹುಃ ॥ ೫ ॥**

॥ ಪದಪಾಠಃ ॥

**ವಹ । ಕುತ್ಸಂ । ಇಂದ್ರ । ಯಸ್ಮಿನ್ । ಚಾಕನ್ । ಸ್ಯೂಮನ್ಯೂ ಇತಿ । ಋಜ್ರಾ । ವಾತಸ್ಯ । ಅಶ್ವಾ ।**
**ಪ್ರ । ಸೂರಃ । ಚಕ್ರಂ । ವೃಹತಾತ್ । ಅಭೀಕೇ । ಅಭಿ । ಸ್ಪೃಧಃ । ಯಾಸಿಷತ್ । ವಜ್ರಬಾಹುಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಕುತ್ಸಮೇತನ್ನಾಮಾನಮೃಷಿಂ ಪ್ರಾಪ್ತಂ ಸ್ಯೂಮನ್ಯೂ । ಸ್ಯೂಮಕಮಿತಿ ಸುಖನಾಮ । ತದಿಚ್ಛಂತೌ ಸತತಗಾಮಿನೌ ವಾ ಋಜ್ರಾ ಋಜುಗಾಮಿನೌ ವಾತಸ್ಯ ವಾಯೋಃ ಸಮಾನವೇಗಾವಶ್ವಾ ತದೀಯಾವಶ್ವೌ ವಹ । ಪ್ರಸ್ಥಾಪಯ । ಯಸ್ಮಿನ್ ಹವಿಷಿ ನಿಮಿತ್ತಭೂತೇ ಸತಿ ಕುತ್ಸಂ ಚಾಕನ್ ಕಾಮಯಸೇ ತರ್ಪಯಸೇ ವಾ ಹವಿರಾದಿಕಂ । ತದರ್ಥಂ ಸೂರಃ ಪ್ರೇರಕಃ ಸೂರ್ಯಶ್ಚಕ್ರಂ ಸ್ವಮಂಡಲಂ ಸ್ವರಥಚಕ್ರಂ ವಾಭೀಕ ಆಸನ್ನೇ ದೇಶೇ ವೃಹತಾತ್ । ಊರ್ಧ್ವಂ ಗಮಯತು । ಪ್ರಕಾಶಯತು । ಅಥ ಪರೋಕ್ಷೇಣಾಹ । ವಜ್ರಬಾಹುರಯಮಿಂದ್ರಃ ಸ್ಪೃಧಃ ಸಂಗ್ರಾಮಂ ಕುರ್ವತಃ ಶತ್ರೂನಭಿ ಯಾಸಿಷತ್ । ಅಭಿಯಾತು ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಯಸ್ಮಿನ್**—ಯಾವ ಹವಿರಾದಿಗಳು ನಿಮಿತ್ತವಾಗಿರಲು । **(ಕುತ್ಸಂ**—ಕುತ್ಸ ಎಂಬ ಋಷಿಯನ್ನು) । **ಚಾಕನ್**—ಅಪೇಕ್ಷಿಸುತ್ತೀಯೋ ಅಥವಾ ತೃಪ್ತಿಪಡಿಸುತ್ತೀಯೋ । **ಕುತ್ಸಂ**—ಆ) ಕುತ್ಸನೆಂಬ ಋಷಿಯನ್ನು । **ಸ್ಯೂಮನ್ಯೂ**—ಸುಖಾಪೇಕ್ಷಿಗಳೂ ಅಥವಾ ಸತತಗಾಮಿಗಳೂ । **ಋಜ್ರಾ**—

ಋಜು (ನೇರವಾಗಿ) ಗಾಮಿಗಳೂ | **ವಾತಸ್ಯ**—ವಾಯುವಿನ (ವೇಗಕ್ಕೆ ಸಮವಾದ ವೇಗವುಳ್ಳವುಗಳೂ ಆದ) ; **ಅಶ್ವಾ**—ನಿನ್ನ ಅಶ್ವಗಳನ್ನು (ಅಶ್ವಗಳ ಮೂಲಕ) | **ವಹ**—ಸೇರಿಸು |(ಅದೇ ಉದ್ದೇಶದಿಂದ) | **ಸೂರಃ**—ಪ್ರೇರಕನಾದ ಸೂರ್ಯನು | **ಚಕ್ರಂ**—ತನ್ನ ಮಂಡಲವನ್ನು ಅಥವಾ ತನ್ನ ಚಕ್ರವನ್ನು | **ಅಭೀಕೇ**—ಸಮೀಪ ಪ್ರದೇಶದಲ್ಲಿ | **ಪ್ರ ವೃಹತಾತ್**—ಮೇಲಕ್ಕೆ ಹೊರಡಿಸಲಿ (ಪ್ರಕಾಶಪಡಿಸಲಿ) | **ವಜ್ರಬಾಹುಃ**—ವಜ್ರಾಯುಧಧಾರಿಯಾದ (ಈ ಇಂದ್ರನು) | **ಸ್ಪೃಧಃ**—ಯುದ್ಧಕಾರಿಗಳಾದ ಶತ್ರುಗಳನ್ನು | **ಅಭಿ ಯಾಸಿಷತ್**—ಎದುರಿಸಿ ಹೋಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಹವಿರಾದಿಗಳು ಕುತ್ಸನಿಗೆ ಸೇರಬೇಕೆಂದು ಇಚ್ಛಿಸುತ್ತೀಯೋ, ಆ ಹವಿರಾದಿಗಳಿರುವ ಸ್ಥಳಕ್ಕೆ ಸುಖಾಪೇಕ್ಷಿಗಳೂ (ಸತತಗಾಮಿಗಳೂ), ಋಜುಗಾಮಿಗಳೂ, ವಾಯುವೇಗಗಳೂ ಆದ ನಿನ್ನ ಅಶ್ವಗಳು ಆ ಕುತ್ಸನನ್ನು ವಹಿಸಲಿ ; ಸೂರ್ಯನೂ ಇದೇ ಉದ್ದೇಶದಿಂದ ಪ್ರಕಾಶಿಸಲಿ ಮತ್ತು ವಜ್ರಾಯುಧಧಾರಿಯಾದ ನೀನೂ ಶತ್ರುನಾಶಕ್ಕೋಸ್ಕರ (ಮೇಘವಿಜಯಕ್ಕೋಸ್ಕರ) ಅವರನ್ನೆದುರಿಸಿ ಹೋಗು.

## English Translation.

Bear, Indra, with your obedient horses as swift as the wind, (the sage) Kutsa, to that ceremony (to which) you desire (to convey him) let the sun bring near the wheel of his chariot, and let the thunder-armed advance against his opponents.

॥ ವಿಶೇಷವಿಷಯಗಳು ॥

ಈ ಮಂತ್ರದಲ್ಲಿ ಎರಡು ಅಂಶಗಳನ್ನು ಗಮನಿಸಬೇಕು. ಮೊದಲನೆಯದಾಗಿ, ಇಂದ್ರನು ಕುತ್ಸನಿಗೆ ಸಹಾಯ ಮಾಡಲು ಅಶ್ವಾರೂಢನಾಗಿ ಹೋಗುವುದು. ಮತ್ತು ಈ ಸಂದರ್ಭದಲ್ಲಿ ಸೂರ್ಯ ಚಕ್ರವು ಪ್ರಕಾಶಿಸಿ ಇಂದ್ರನಿಗೆ ಬೆಂಬಲವಾಗಿ ಸಹಾಯಮಾಡುವುದು. ಇವುಗಳಲ್ಲಿ ಮೊದಲು **ಕುತ್ಸನ** ವಿಷಯವನ್ನು ಪರಿಶೀಲಿಸಿದರೆ ಕೆಲವು ಸಂದರ್ಭಗಳಲ್ಲಿ ಕುತ್ಸನು ಇಂದ್ರನ ಮಿತ್ರನಾಗಿ ಇಂದ್ರನಿಂದ ಸಹಾಯವನ್ನು ಪಡದನೆಂದೂ, ಇನ್ನು ಕೆಲವು ಸಂದರ್ಭಗಳಲ್ಲಿ ಇಂದ್ರನೊಡನೆ ವೈಮನಸ್ಯವನ್ನು ಹೊಂದಿ ಅವನಿಂದ ಪರಾಜಿತನಾದನೆಂದೂ ತಿಳಿದುಬರುತ್ತದೆ.

**"ತತ್ರ ಕುತ್ಸ ಇತ್ಯೇತತ್ ಕೃಂತತೇಃ | ಋಷಿಃ ಕುತ್ಸೋ ಭವತಿ ಕರ್ತಾ ಸ್ತೋಮಾನಾಂ ಇತ್ಯೌಪಮನ್ಯವಃ | ತತ್ಸಖ ಇಂದ್ರಃ ಶುಷ್ಣಂ ಜಘಾನ ಇತಿ ||**

(ನಿ. ೩-೧೧)

ಎಂಬ ವಿವರಣೆಯಿಂದ ನಿರುಕ್ತಕಾರರು ಕುತ್ಸನನ್ನು ಇಂದ್ರಸಖನೆಂದು ತಿಳಿಸಿದ್ದಾರೆ.

ಕೆಲವು ಸನ್ನಿವೇಶಗಳನ್ನು ಪರಿಶೀಲಿಸಿದರೆ ಕುತ್ಸನು ಇಂದ್ರಪುತ್ರನಾಗಿರಬಹುದೇ ಎಂಬ ಊಹೆಗೂ ಅವಕಾಶವಿರುತ್ತದೆ. ಹೇಗೆಂದರೆ—**ಕುತ್ಸನಿಗೆ ಆರ್ಜುನೇಯ** ಎಂಬ ವಿಶೇಷಣವು ಬಹಳಕಡೆಗಳಲ್ಲಿರುತ್ತದೆ. ಮತ್ತು ಇಂದ್ರನು ಆರ್ಜುನೇಯ ಕುತ್ಸನಿಗೆ ಸಹಾಯಮಾಡಿದನು ಎಂಬೆಡೆಗಳಲ್ಲೆಲ್ಲಾ ಸೂರ್ಯನೂ ಸಹ ಇಂದ್ರನಿಗೆ

ನೆರವಾದನು ಎಂಬಂಶವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇಂತಹ ಸಂದರ್ಭಗಳಲ್ಲಿ **ಆರ್ಜುನೇಯ** ಎಂಬ ವಿಶೇಷಣಕ್ಕೆ ಅರ್ಥವೇನು ಎಂಬುದನ್ನು ಗಮನಿಸಬೇಕು.

**ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ ।**
**ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ॥**
(ಋ. ಸಂ. ೪-೨೬-೧)

**ತ್ವಂ ಹ ತ್ಯದಿಂದ್ರ ಕುತ್ಸಮಾವಃ ಶುಶ್ರೂಷಮಾಣಸ್ತನ್ವಾ ಸಮರ್ಯೇ ।**
**ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ॥**
(ಋ. ಸಂ. ೭-೧೯-೨)

**ಯತ್ತ್ವಾದೇತ್ಶೂರ ಏತಶಂ ವಙ್ಕೂ ವಾತಸ್ಯ ಪರ್ಣಿನಾ ।**
**ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ॥**
(ಋ. ಸಂ. ೮-೧-೧೧)

ಇತ್ಯಾದಿ ಋಕ್ಕುಗಳಲ್ಲಿ ಬರತಕ್ಕ ಪದಗಳಿಗೆ ಸಾಯಣರು ಕೆಲವು ಸಂದರ್ಭಗಳಲ್ಲಿ **ಅರ್ಜುನ್ಯಾಃ ಪುತ್ರಂ ಕುತ್ಸಂ-ಅರ್ಜುನಿ** ಯೆಂಬ ಹೆಂಗಸಿನ ಪುತ್ರನಾದ ಕುತ್ಸನೆಂದರ್ಥಮಾಡಿ ಇನ್ನು ಕೆಲವು ಸಂದರ್ಭಗಳಲ್ಲಿ "**ಅರ್ಜುನ ಇತೀಂದ್ರಸ್ಯ ನಾಮ । ತಸ್ಯ ಪುತ್ರಂ**" ಇಂದ್ರನಿಗೆ ಅರ್ಜುನನೆಂದು ಹೆಸರು. ಅವನ ಮಗನಾದುದರಿಂದ ಕುತ್ಸನಿಗೆ ಆರ್ಜುನೇಯ ಎಂಬ ವಿಶೇಷಣವಿದೆ ಎಂದು ವಿವರಿಸಿ, ಇಂದ್ರಪುತ್ರನೆಂದು ಹೇಳುವ ವೇಳೆಗಳಲ್ಲಿ,

**ಏತದ್ವಾ ಇಂದ್ರಸ್ಯ ಗುಹ್ಯಂ ನಾಮ ಯದರ್ಜುನಃ ।**

ಎಂಬ ವಾಜಸನೇಯಸಂಹಿತಾಮಂತ್ರವನ್ನುದಾಹರಿಸಿ ಇಂದ್ರನಿಗೆ ಅರ್ಜುನನೆಂಬ ಹೆಸರು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆಯೆಂದು ತಿಳಿಸಿದ್ದಾರೆ. ಮತ್ತು **ಅರ್ಜುನ, ಅರ್ಜುನೀ** ಎಂಬ ಪದಗಳು ಇಂದ್ರಸಂಬಂಧವುಳ್ಳವು ಎಂದು ಶ್ರುತ್ಯಂತರಗಳಿಂದಲೂ ಹೇಳಿರುವುದನ್ನು ಗಮನಿಸಬಹುದು. ಉದಾಹರಣೆಗೆ—

**ಫಲ್ಗುನೀಷ್ವಗ್ನೀ ಆದಧೀತ । ಏತಾ ವಾ ಇಂದ್ರನಕ್ಷತ್ರಂ ಯತ್ಫಲ್ಗುನ್ಯೋಽಪ್ಯಸ್ಯ ಪ್ರತಿನಾಮ್ನ್ಯೋಽರ್ಜುನೋ ಹ ವೈ ನಾಮೇಂದ್ರೋ ಯದಸ್ಯ ಗುಹ್ಯಂ ನಾಮಾರ್ಜುನ್ಯೋ ವೈ ನಾಮೈತಾಸ್ತಾ ಏತತ್ಪರೋಕ್ಷಮಾಚಕ್ಷತೇ ಫಲ್ಗುನ್ಯ ಇತಿ ಕೋ ಹೇತಸ್ಯಾರ್ಹತಿ ಗುಹ್ಯಂ ನಾಮ........... ॥** (ಶ. ಬ್ರಾ. ೨-೧-೨-೧೧)

**ಇಂದ್ರೋ ಭವತಿ ಯಚ್ಚ ಕ್ಷತ್ರಿಯೋ ಯದು ಚ ಯಜಮಾನಸ್ತಸ್ಮಾದಾಹಾರಿಷ್ಯೋಽರ್ಜುನ ಇತಿ ।** (ಶ. ಬ್ರಾ. ೫-೪-೩-೭)

ಫಲ್ಗುನಿಗಳು ಐಂದ್ರನಕ್ಷತ್ರಗಳು. ಹೆಸರಿನಲ್ಲಿಯೂ ಹೊಂದಿಕೆಯಿದೆ. ಇಂದ್ರನಿಗೂ ಅರ್ಜುನನೆಂದು ಹೆಸರು. ಫಲ್ಗುನಿಗಳಿಗೂ ಅರ್ಜುನಿಗಳೆಂಬ ಹೆಸರು ಎಂಬುದಾಗಿ ಶತಪಥಬ್ರಾಹ್ಮಣದಲ್ಲಿಯೂ ಇತರ ಕಡೆಗಳಲ್ಲಿಯೂ ಹೇಳಿರುವುದರಿಂದ ಕುತ್ಸನನ್ನು ಇಂದ್ರಪುತ್ರ, ಆರ್ಜುನೀಪುತ್ರ ಎಂದು ಎರಡು ವಿಧವಾಗಿಯೂ ಕರೆಯಬಹುದೆಂದು ತಿಳಿಯಬರುತ್ತದೆ.

**ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿಯಾಸಿ ವಧೈಃ ।**

(ಋ. ಸಂ. ೧-೧೨೧-೯)

ಎಂಬಲ್ಲಿಯೂ, ಹೀಗೆಯೇ, ಋ. ಸಂ. ೧-೬೩-೩ ; ೧-೧೭೫-೪ ಇತ್ಯಾದಿ ಋಕ್ಕುಗಳಲ್ಲಿಯೂ ಇಂದ್ರನು ಕುತ್ಸನಿಗಾಗಿ ಸಹಾಯಮಾಡುತ್ತಾ **ಶುಷ್ಣ**ನನ್ನು ಕೊಂದನು ಎಂದಿದೆ. ಮತ್ತು—

**ಅಹಂ ಪಿತೇವ ವೇತಸೂಁರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ ॥**

(ಋ. ಸಂ. ೧೦-೪೯-೪)

ಇತ್ಯಾದಿ ಕಡೆಗಳಲ್ಲಿ "ಕುತ್ಸನಿಗಾಗಿ ನಾನು ವೇತಸು, ತುಗ್ರ, ಸ್ಮದಿಭ ಇತ್ಯಾದಿ ಅನೇಕ ಶತ್ರುಗಳನ್ನು ಸೋಲಿಸಿದೆನು" ಎಂದು ಇಂದ್ರನು ಹೇಳಿಕೊಂಡಿದ್ದಾನೆ. ಆದರೆ,

**ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।**

(ಋ. ಸಂ. ೧-೫೩-೧೦)

**ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇ ದಿವೇ ॥**

(ಋ. ಸಂ. ೮-೫೩-೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಕುತ್ಸಾದಿಗಳನ್ನು ಸೋಲಿಸಿದುದಾಗಿಯೂ ವರ್ಣಿತವಾಗಿದೆ. ಇವನ ವಿಷಯದಲ್ಲಿ Keith ಎಂಬ ಪಂಡಿತನು ತನ್ನ Religion and Philosophy of the Vedas ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದ್ದಾನೆ—

His chief rival is Kutsa, who appears as battling against him, and as victor by the aid of Indra, who. for his sake tore from the Sun a wheel, prolonging the daylight and thus enabling, it may be assumed, Kutsa to turn the issue of battle. The feat of Indra is several times mentioned and the fact that Kutsa is a real hero is suggested, though not proved, by the fact that elsewhere he appears in hostile relation to Indra, just as Athithigva, who is normally the protege of Indra, in one or two places appears in the reverse relation. It is true that it is not to be expected that a God, or a hero of divine dimensions, would be thus placed in opposition to the God, though,as the God is the uncertain Indra, the argument is by no means conclusive. Kutsa, in the case of his real personality must be a king, and this is not inconsistent with his being called a seer : royal seers are not unknown :

(Harward Oriental Series. Vol. 31. p. 130),

ಈ ವಾಕ್ಯಗಳಲ್ಲಿ ಇಂದ್ರನು ಕುತ್ಸನಿಗೆ ವಿರೋಧವಾಗಿ ವರ್ತಿಸಿದುದನ್ನೂ ಮತ್ತು ಕುತ್ಸನಿಗೆ ಸಹಾಯಮಾಡಿದುದನ್ನೂ ತಿಳಿಸಿದೆ. ಮತ್ತು ಕುತ್ಸನ ಸಹಾಯಕ್ಕಾಗಿ ಆದಿತ್ಯನ ಚಕ್ರವನ್ನು ಕೈಯಲ್ಲಿ ತೆಗೆದುಕೊಂಡು ಕುತ್ಸನಿಗೆ ಜಯವನ್ನು

ಒದಗಿಸಿಕೊಟ್ಟದ್ದೂ ಸೂಚಿತವಾಗಿದೆ. ಇಂದ್ರನು ಆದಿತ್ಯನ ಚಕ್ರವನ್ನು ಪಯೋಗಿಸಿ ಶತ್ರುವನ್ನು ಜಯಿಸಿದ ವಿಷಯದಲ್ಲಿ ಒಂದು ಕಥೆಯಿದೆ.

**ಕೇಚನ ಅಸುರಾಃ ಇಂದ್ರಸ್ಯ ವಜ್ರಾಯುಧೇನ ಅಸ್ಮಾಕಂ ವಧೋ ಮಾ ಭೂದಿತಿ ಬ್ರಹ್ಮಣಾ ವರಂ ಲಬ್ಧ್ವಾ ಇಂದ್ರಂ ಅಗಣಯ್ಯ ಉದ್ವೃತ್ತಾಃ ಸ್ಥಿತಾಃ । ತಾನ್ ಹಂತುಮಿಂದ್ರಃ ಸೂರ್ಯರಥಸ್ಯ ಚಕ್ರಂ ಆದಾಯ ಅವಧೀತ್ ।**

ಕೆಲವು ಅಸುರರು ಇಂದ್ರನ ವಜ್ರಾಯುಧದಿಂದ ಮರಣವಾಗಬೇಡವೆಂದು ಬ್ರಹ್ಮನಿಂದ ವರವನ್ನು ಹೊಂದಿ ಇಂದ್ರನನ್ನು ಲಕ್ಷ್ಯಮಾಡದೇ ದುರ್ಮಾರ್ಗದಿಂದ ವರ್ತಿಸುತ್ತಿದ್ದರು. ಆಗ ಇಂದ್ರನು ಸೂರ್ಯನ ರಥದ ಚಕ್ರವನ್ನೇ ಆಯುಧವನ್ನಾಗಿ ಮಾಡಿಕೊಂಡು ಅವರೆಲ್ಲರನ್ನೂ ನಾಶಮಾಡಿದನು ಎಂಬ ಇತಿಹಾಸವಿದೆ.

**ಅಥವಾ ಇಂದ್ರ ಏವ ದ್ಯುಃಸ್ಥಾನಸ್ಸನ್ ಆದಿತ್ಯಾತ್ಮನಾ ಸ್ತೂಯತೇ** ಇಂದ್ರನೇ ದ್ಯುಃಸ್ಥಾನದಲ್ಲಿರುತ್ತಾ ಆದಿತ್ಯರೂಪದಿಂದ ಸ್ತುತನಾಗಿದ್ದಾನೆ ಎಂದೂ ಹೇಳಬಹುದು. ಸಾಯಣರು ಬೇರೊಂದು ಕಡೆಯಲ್ಲಿ ಇದೇ ಅಂಶವನ್ನು ತಿಳಿಸುತ್ತಾ,

**ಸೂರಃ ಸೂರ್ಯಃ ಜಾತಃ ಉದಿತಃಸನ್ ಓಜಸಾ ಸ್ವಕೀಯೇನ ತೇಜಸಾ ಯುಕ್ತಃ ತಮೋನಿವಾರಣಾರ್ಥಂ ಅಸುರಜಯಾಯ ವಾ ಚಕ್ರೋಪಲಕ್ಷಿತಂ ರಥಂ ಪ್ರಕರ್ಷೇಣ ಉದ್ಯತಂ ಕರೋತಿ । ತತಃ ಪೂರ್ವಮರುಣಃ ತದ್ರಥಯಂತಾ ಮಂದೇಹಾದ್ಯಸುರಾಣಾಂ ಸಮೀಪೇ ವಾಚಂ ತೇಷಾಂ ಜಹಿ, ಭಿಂದಿ ಇತ್ಯಾದಿ ಧ್ವನಿಂ ಮುಷಾಯತಿ ।**

(ಸಾ ಭಾ.)

ಸೂರ್ಯನು ಉದಯವನ್ನು ಹೊಂದಿದಕೂಡಲೇ ತನ್ನ ತೇಜಸ್ಸಿನಿಂದ ಕೂಡಿದವನಾಗಿ ಕತ್ತಲನ್ನು ನಾಶಮಾಡುವುದಕ್ಕಾಗಿಯೂ ಅಥವಾ ಅಸುರರನ್ನು ಜಯಿಸುವುದಕ್ಕಾಗಿಯೂ ಚಕ್ರಾಯುಧದಿಂದ ಕೂಡಿರುವ ರಥವನ್ನು ಬಹಳವಾಗಿ ಸಂಚರಿಸುವಂತೆ ಮಾಡುತ್ತಾನೆ. ಇದಕ್ಕಿಂತಲೂ ಮುಂಚಿತವಾಗಿ ಈ ರಥವನ್ನು ನಡೆಸುವ ಸಾರಥಿಯಾದ ಅರುಣನು **ಮಂದೇಹ** ಎಂಬ ಹೆಸರಿನಿಂದ ಪ್ರಸಿದ್ಧರಾದ ರಾಕ್ಷಸರ ಗುಂಪಿನ ಹತ್ತಿರಕ್ಕೆ ಸೂರ್ಯನ ರಥವನ್ನು ತಂದು ಅವರು ಯುದ್ಧಕಾಲದಲ್ಲಿ ಹೇಳಬಹುದಾದ ಕಡಿ, ಹೊಡಿ ಮುಂತಾದ ವಾಕ್ಕುಗಳೂ ಅವರ ಬಾಯಿನಿಂದ ಹೊರಡದಂತೆ ಅವರನ್ನು ಅಡಗಿಸುತ್ತಾನೆ ಎಂದಿದೆ. ನಿರುಕ್ತಕಾರರು,

**ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಂತನ ।**
**ಕ್ವ೧ಸ್ಯ ಪುಲ್ವಘೋ ಮೃಗಃ ಕಮಗಞ್ಜನಯೋಪನೋ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೨)

ಎಂಬ ಋಕ್ಕನ್ನು ಉದಾಹರಿಸಿ **ತಮುಗಮುದ್ದೇಶಂ ಜನಯೋಪನಃ ಸರ್ವಸ್ಮಾದ್ಯ ಉತರತ್ತ್ವೇತದ್ಭೂ್ರಮ ಆದಿತ್ಯಂ ।** ಇಂದ್ರನು ಅದೃಶ್ಯನಾಗಿದ್ದಾನೆ. ಜನರು ಆದಿತ್ಯನ ಉದಯಾಸ್ತಮಯರೂಪವಾದ ಜ್ಞಾನದಿಂದ ಇಂದ್ರನೂ ಆದಿತ್ಯನೂ ಬೇರೆಬೇರೆಯೆಂದು ಮೋಹಗೊಂಡಿದ್ದಾರೆ. ಆದರೆ ಇದು ತಾತ್ವಿಕವಾದ ಜ್ಞಾನವಲ್ಲ. ದೇವತೆ

ಗಳಲ್ಲಿ ಇಂದ್ರನು ಶ್ರೇಷ್ಠನು. ಇಂದ್ರನೇ ಆದಿತ್ಯರೂಪದಲ್ಲಿರತಕ್ಕವನು ಎಂದು ವಿವರಿಸಿರುವರು. ಇದೇ ವಿಧವಾದ ಇಂದ್ರಾದಿತ್ಯರ ತಾದಾತ್ಮ್ಯವೂ ಮತ್ತು ಕಾರ್ಯೈಕ್ಯವೂ ಋಕ್ಸಂಹಿತೆಯಲ್ಲಿಯೂ ಶತಪಥಾದಿಬ್ರಾಹ್ಮಣಗಳಲ್ಲಿಯೂ ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. (ಶ. ಬ್ರಾ. ೩-೪-೨-೧೫ ಇತ್ಯಾದಿ.)

**ಸ್ಯೂಮನ್ಯೂ**— ಈ ಪದವು **ಅಶ್ವೌ** ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. ನಿರುಕ್ತಕಾರರು **ಸ್ಯೂಮಕಮ್** ಎಂಬ ಪದವು ಸುಖನಾಮಗಳಲ್ಲಿ (ನಿ. ೨-೧೩) ಪಠಿತವಾಗಿದೆ ಎಂದು ವರ್ಣಿಸಿದ್ದಾರೆ. ಸಾಯಣರು **ತದಿಚ್ಛಂತೌ ಸತತಗಾಮಿನೌ ವಾ** ಎಂದು ವ್ಯಾಖ್ಯಾನಮಾಡಿ ಸುಖವನ್ನು ಅಪೇಕ್ಷಿಸುವವುಗಳೂ ಅಥವಾ ಯಾವಾಗಲೂ ಸಂಚರಿಸುವವುಗಳೂ ಎಂದು ಅರ್ಥವನ್ನು ಮಾಡಿ, ಕುತ್ಸ ಋಷಿಯ ಕುದುರೆಗಳು— **ಋಜ್ರಾ** ಋಜುವಾದ ಮಾರ್ಗದಿಂದ ಸಂಚರಿಸುವವುಗಳೂ, **ವಾತಸ್ಯ**— ವಾಯುವಿನ ವೇಗದಿಂದ ಸಮನಾದ ವೇಗವುಳ್ಳವುಗಳೂ ಆಗಿರುವುದರಿಂದ **ಕುತ್ಸಂ ವಹ** ಕುತ್ಸನೆಂದು ಹೆಸರಿನಿಂದ ಪ್ರಸಿದ್ಧನಾದ ಋಷಿಯನ್ನು **ಪ್ರಸ್ಥಾಪಯ** ಪ್ರಯಾಣಮಾಡಿ ಕಳುಹಿಸು ಎಂದು ಇಂದ್ರನಿಗೆ ಋಷಿಯ (ಆದೇಶವು) ಆಶಂಸನೆಯು ವರ್ಣಿತವಾಗಿವೆ ಎಂದು ಅರ್ಥವನ್ನು ಹೇಳಿದ್ದಾರೆ. ಆದರೆ ಈ ಅರ್ಥವು ಸರಿಯಾಗಿ ಹೊಂದುವುದಿಲ್ಲವಾದಕಾರಣದಿಂದಲೂ ಮುಂದಿನ ವಾಕ್ಯಗಳ ಅರ್ಥವೂ ಸ್ಪಷ್ಟವಾಗಿರುವುದಿಲ್ಲ.

**ಯಸ್ಮಿನ್ ಚಾಕನ್**— **ಹವಿಷಿ ನಿಮಿತ್ತಭೂತೇ ಸತಿ ಕುತ್ಸಂ ಕಾಮಯಸೇ ತರ್ಪಯಸೇ ವಾ ।** ಇಂದ್ರನು ತನಗೆ ಹವಿಸ್ಸುಗಳನ್ನು ಕುತ್ಸ ಋಷಿಯು ಅರ್ಪಿಸುವನೆಂದು ಅವನನ್ನು ಅಪೇಕ್ಷಿಸುವನೆಂದೂ, ಅಥವಾ ಹವಿಸ್ಸುಗಳು ತನಗೆ ದೊರಕುವುದಕ್ಕಾಗಿ ಕುತ್ಸ ಋಷಿಯನ್ನು ತೃಪ್ತಿಪಡಿಸುವನೆಂದೂ ಅರ್ಥವನ್ನು ವಿವರಿಸಿದೆ. ಯಾಸ್ಕರು—

**ವನೇ ನ ವಾ ಯೋ ನ್ಯಧಾಯಿ ಚಾಕಞ್ಛುಚಿರ್ವಾಂ ಸ್ತೋಮೋ ಭುರಣಾವಜೀಗಃ ।**
**ಯಸ್ಯೇದಿಂದ್ರಃ ಪುರುದಿನೇಷು ಹೋತಾ ನೃಣಾಂ ನರ್ಯೋ ನೃತಮಃ ಕ್ಷಪಾವಾನ್ ॥**
(ಋ. ಸಂ. ೧೦-೨೯-೧).

ಈ ಋಕ್ಕನ್ನು ಉದಹರಿಸಿ, **ಚಾಕನ್ ಚಾಯನ್ನಿತಿ ವಾ, ಕಾಮಯಮಾನ ಇತಿ ವಾ** ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ದುರ್ಗಾಚಾರ್ಯರು. **ಚಾಯನ್ ಪಶ್ಯನ್, ಭೂಯೋತ್** ದಿಶೋ **ನಿರೀಕ್ಷಮಾಣಃ, ಅಥವಾ ತದುತ್ಸುಕಮನಾಃ** ಎಂದು ಅರ್ಥವನ್ನು ವಿವರಿಸಿದ್ದಾರೆ.

**ಸೂರಃ ಅಭೀಕೇ ಚಕ್ರಂ ಬೃಹತಾತ್**— ಅಭೀಕೆ ಎಂಬ ಪದವು (ಆಸನ್ನ)ಅಂತಿಕನಾಮಗಳಲ್ಲಿ ಪಠಿತವಾಗಿಲ್ಲದಿದ್ದರೂ **ಪ್ರಸಿತ್ವೇ ಅಭೀಕ ಇತ್ಯಾಸನ್ನಸ್ಯ ಅಭೀಕೆ ಅಭ್ಯಕ್ತೇ** (ನಿ. ೩-೨೦) ಎಂದು ಸಮೀಪ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸಾಯಣರು **ಅಭೀಕೆ ಆಸನ್ನದೇಶೇ** ಎಂದು ಅರ್ಥವನ್ನು ಹೇಳಿದ್ದಾರೆ. ಸೂರ ಶಬ್ದಕ್ಕೆ ಪ್ರೇರಕನು ಆಗಿರುವ ಸೂರ್ಯನೆಂದು ಅರ್ಥವನ್ನು ಮಾಡಿದೆ. ಕುತ್ಸ ಋಷಿಯ ಆಗಮನಕ್ಕಾಗಿ ಸೂರ್ಯನು ತನ್ನ ಮಂಡಲವನ್ನಾಗಲಿ, ಅಥವಾ ತನ್ನ ರಥದ ಚಕ್ರವನ್ನೇ ಆಗಲಿ (ಸಮೀಪ) ಯಾಗಶಾಲೆಯ ಸಮೀಪದಲ್ಲಿ (ಊರ್ಧ್ವಭಾಗದಲ್ಲಿ) ಪ್ರಕಾಶಗೊಳಿಸುವಂತೆ ಮಾಡಲಿ ಎಂದು ಇಂದ್ರನ ಸಂಗಡ ಹೇಳಿರುವ ಋಷಿಯ ವಚನವು ಇಲ್ಲಿ ಉಕ್ತವಾಗಿದೆ ಎಂದು ವರ್ಣಿಸಿದೆ.

**ವಜ್ರಬಾಹುಃ ಸ್ಪೃಧಃ ಅಭಿಯೋಸಿಷತ್**—ಸ್ಪೃಧಃ ಎಂಬ ಪದವು ಸಂಗ್ರಾಮ ನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ವಜ್ರಾಯುಧವನ್ನು ಧರಿಸಿರುವ ಇಂದ್ರನು ಯುದ್ಧಗಳಲ್ಲಿ ಶತ್ರುಗಳಿಗೆ ಎದುರಾಗಿ ಯುದ್ಧಮಾಡಲಿ ಎಂದು ಆಶಿಸಿದೆ.

**ವಜ್ರಃ ಕಸ್ಮಾತ್ ವರ್ಜಯತೀತಿ ಸತಃ** । ಜೀವಿಗಳಿಂದ ಪ್ರಾಣಗಳನ್ನು ಬಿಡಿಸಿ ಬೇರೆಮಾಡುವುದರಿಂದ ವಜ್ರವೆಂದು ಹೆಸರು. (ನಿ. ೩-೧೧) ಇಂತಹ ವಜ್ರಾಯುಧದ ಮಹತ್ತ್ವವೂ ಮತ್ತು ಇಂದ್ರನು ಈ ಆಯುಧವನ್ನು ಪಡೆದುದೂ ಒಂದೊಂದು ಕಡೆ ಒಂದೊಂದು ವಿಧವಾಗಿ ವರ್ಣಿಸಲ್ಪಟ್ಟಿದೆ.

**ಅಸ್ಮಾ ಇದು ತ್ವಷ್ಟಾ ತಕ್ಷದ್ವಜ್ರಂ ಸ್ವಪಸ್ತಮಂ ಸ್ವರ್ಯಂ೧ ರಣಾಯ ।**
(ಋ. ಸಂ. ೧-೬೧-೬)

**ಅನವಸ್ತೇ ರಥಮಶ್ವಾಯ ತಕ್ಷನ್ತ್ವಷ್ಟಾ ವಜ್ರಂ ಪುರುಹೂತ ದ್ಯುಮಂತಂ ।**
(ಋ. ಸಂ. ೫-೩೧-೪)

ಇತ್ಯಾದಿ ಅನೇಕ ಋಕ್ಕುಗಳಲ್ಲಿ **ತ್ವಷ್ಟೃವು** ಇಂದ್ರನಿಗೆ ದೀಪ್ತಿಯುತವಾದ ವಜ್ರಾಯುಧವನ್ನು ಸಿದ್ಧಪಡಿಸಿಕೊಟ್ಟನೆಂದು ವರ್ಣಿತವಾಗಿದೆ. ಅಲ್ಲದೇ,

**ಯಂ ತೇ ಕಾವ್ಯ ಉಶನಾ ಮಂದಿನಂ ದಾದ್ವೃತ್ರಹಣಂ ಪಾರ್ಯಂ ತತಕ್ಷ ವಜ್ರಂ ।**
(ಋ ಸಂ. ೧-೧೨೧-೧೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನಿಗೆ ಇದು ಕಾವ್ಯ ಉಶನಸ್ಸಿನಿಂದ ದತ್ತಾವಾದುದೆಂದು ಹೇಳಿದೆ.

**ಸಮುದ್ರೇ ಅಂತಃ ಶಯತ ಉದ್ನಾ ವಜ್ರೋ ಅಭೀವೃತಃ ।**
**ಭರಂತ್ಯಸ್ಮೈ ಸಂಯತಃ ಪುರಃಪ್ರಸ್ರವಣಾ ಬಲಿಂ ॥**
(ಋ. ಸಂ. ೮-೧೦೦-೯)

ಎಂಬಿವೇ ಮುಂತಾದ ಕಡೆಗಳಲ್ಲಿ ವಜ್ರಾಯುಧದ ಸ್ವರೂಪವನ್ನೂ ಶಕ್ತಿಯನ್ನೂ ವರ್ಣಿಸಿದೆ. ವಜ್ರಾಯುಧವು ಸಮುದ್ರದಲ್ಲಿ ನೀರಿನಿಂದ ಆವೃತವಾಗಿಯೂ ಸುಪ್ತವಾಗಿಯೂ ಇದ್ದು ಯುದ್ಧರಂಗಕ್ಕೆ ಬಂದೊಡನೆಯೇ ಶತ್ರುಗಳು ರಣರಂಗದಲ್ಲಿ ಇದಕ್ಕೆ ತಮ್ಮ ಪ್ರಾಣಗಳನ್ನೇ ಬಲಿಯಾಗಿ ಅರ್ಪಿಸುತ್ತಾರೆಂದು ವಜ್ರಾಯುಧದ ಶಕ್ತಿಯನ್ನು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಹ**—ವಹ ಪ್ರಾಪಣೇ. ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. **ಲೋಟ್** ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಚಾಕನ್**—ಚಕ ತೃಪ್ತೌ. ಧಾತು. ಣಿಜಂತದ ಮೇಲೆ ಲಟಿಗೆ ಶತ್ರಾದೇಶ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಅದಕ್ಕೆ ಆರ್ಧಧಾತುಕ ಸಂಜ್ಞೆ ಇರುವುದರಿಂದ **ಣೇರನಿಟಿ** ಎಂಬುದರಿಂದ ಣಿಚಿಗೆ ಲೋಪ. ಶಪ್ ವಿಕರಣವೂ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ.

**ಸ್ಯೂಮನ್ಯೂ**—ಸ್ಯೂಮಕಂ ಆತ್ಮನಃ ಇಚ್ಛಂತೌ. ಇಚ್ಛಾರ್ಥದಲ್ಲಿ ಕ್ಯಚ್ ಬಂದಾಗ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಋಜ್ರಾ—**ಋಜ ಗತಿ ಸ್ಥಾನಾದಿಷು. ಧಾತು. **ಋಜ್ರೇಂದ್ರ—** (ಉ. ಸೂ. ೨–೧೮೬) ಎಂಬುದರಿಂದ ರ ಗಂತವಾಗಿ ನಿಪಾತಿತವಾಗಿದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನ (ಔ) ಕ್ಕೆ ಆಕಾರಾದೇಶ ಬರುತ್ತದೆ. ಅಶ್ವಾ ಎಂಬಲ್ಲಿಯೂ ಹೀಗೆಯೇ ಆಕಾರಾದೇಶ.

**ವೃಹತಾತ್**—ವೃಹೂ ಉದ್ಯಮನೇ. ಧಾತು. ತುದಾದಿ. ಲೋಟ್ ಪ್ರಥಮಪುರುಷ ಏಕವಚನಾಂತರೂಪ. ವಿಕರಣಕ್ಕೆ ಙಿತ್ವಾತಿದೇಶವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಸ್ಪೃಧಃ**—ಸ್ಪರ್ಧ ಸಂಘರ್ಷೇ. ಸ್ಪರ್ಧಂತೇ ಇತಿ ಸ್ಪೃಧಃ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿನ ರೇಫಕ್ಕೆ ಸಂಪ್ರಸಾರಣ. ಋಕಾರ. ಅಕಾರಲೋಪ. ದ್ವಿತೀಯಾ ಬಹುವಚನಾಂತರೂಪ.

**ಯೂಸಿಷತ್**—ಯಾ ಪ್ರಾಪಣೇ. ಧಾತು. **ಛಂದಸಿಲುಙ್‌ಲಙ್**—(ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲುಙ್. ಪ್ರಥಮ ಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಚ್ಲಿಗೆ ಸಿಚಾದೇಶ. **ಯಮರಮನಮಾತಾಂ ಸಕ್ ಚ** (ಪಾ. ಸೂ. ೭-೨-೭೩) ಎಂಬುದರಿಂದ ಧಾತುವಿಗೆ ಸಕಾಗಮ, ಪರದ ಸಿಚಿಗೆ ಇಡಾಗಮ. ವ್ಯತ್ಯಯದಿಂದ ಪ್ರತ್ಯಯಕ್ಕೆ ಅಡಾಗಮ. ತಿಙಂತ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಜಘನ್ವಾಁ ಇಂದ್ರ ಮಿತ್ರೇರೂಞ್ಚೋದಪ್ರವೃದ್ಧೋ ಹರಿವೋ ಅದಾಶೂನ್ ।
ಪ್ರ ಯೇ ಪಶ್ಯನ್ನರ್ಯಮಣಂ ಸಚಾಯೋಸ್ತ್ವಯಾ ಶೂರ್ತಾ ವಹಮಾನಾ
ಅಪತ್ಯಂ ॥ ೬ ॥

॥ ಪದಪಾಠಃ ॥

ಜಘನ್ವಾನ್ । ಇಂದ್ರ । ಮಿತ್ರೇರೂನ್ । ಚೋದಽಪ್ರವೃದ್ಧಃ । ಹರಿಽವಃ । ಅದಾಶೂನ್ ।
ಪ್ರ । ಯೇ । ಪಶ್ಯನ್ । ಅರ್ಯಮಣಂ । ಸಚಾ । ಆಯೋಃ । ತ್ವಯಾ । ಶೂರ್ತಾಃ । ವಹಮಾನಾಃ ।
ಅಪತ್ಯಂ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಹರಿವಃ ಹರಿಭ್ಯಾಂ ತದ್ವನ್ ತ್ವಂ ಚೋದಪ್ರವೃದ್ಧಶ್ಚೋದನೈಃ ಸ್ತೋತ್ರೈಃ ಪ್ರವೃದ್ಧಃ ಸನ್ನದಾಶೂನದಾತ್ನೂನ್ ಮಿತ್ರೇರೂನ್ಮಿತ್ರಾಣಾಂ ಯಜಮಾನಾನಾಮಿರಯಿತ್ನೂನ್ಬಾಧಕಾನ್ ತದ್ವೈರಿಣಾಂ ಮಿತ್ರತ್ವಂ ಗಚ್ಛತೋ ವಾ ಜಘನ್ವಾನ್ । ಹತವಾನಸಿ । ಕಿಂಚ ಯೇಽರ್ಯಮಣಂ ದಾತಾರಂ ತ್ವಾಂ ಪ್ರ ಪ್ರಶ್ಯನ್ ಪಶ್ಯಂತಿ ತೇ ನರಾ ಆಯೋರ್ಮನುಷ್ಯಸ್ಯಾಧ್ವರ್ಯ್ವಾದೇರ್ಹವಿಲಕ್ಷಣಾನ್ನಸ್ಯ ವಾ ಸಚಾ ಸಹ ಶೂರ್ತಾಃ ಕ್ಷಿಪ್ತಾ ಹವಿಷ್ಪ್ರದಾನೇನ ತ್ವಯೋಪತ್ಯಂ ಕುಲಸ್ಯಾಪಾತಯಿತಾರಂ ಪುತ್ರಂ ವಹಮಾನಾ ಯೇ ಸಂತಿ ತೇ ಪ್ರ ಪಶ್ಯನ್ । ಯದ್ವಾ । ಯೇಽರ್ಯಮಣಂ ತ್ವಾಂ ಪಶ್ಯಂತಿ ತ ಏವಂ ಭವಂತಿ । ಯದ್ವಾ । ಯೇ ನರಾ ಅರ್ಯಮಣಂ ಯಂ ಕಂಚಿದ್ದಾತಾರಂ ಪಶ್ಯನ್ ಪಶ್ಯಂತಸ್ತ್ವಾಮಯಜಂತ ಆಯೋರ್ಮನುಷ್ಯಸ್ಯ ಸಚಾ ಸಹಾಯಭೂತಾಸ್ತ್ವಯಾ ಶೂರ್ತಾಃ ಕ್ಷಿಪ್ತಾ ವರ್ಜಿತಾ ಅಪತ್ಯಂ ಪುತ್ರಂ ವಹಮಾನಾ ಯೇ ಸಂತಿ ತಾನ್ ಜಘನ್ವಾನ್ಭವೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಹರಿವಃ**—ಹರಿನಾಮಕ ಅಶ್ವದ್ವಯಯುಕ್ತನಾದ ನೀನು । **ಚೋದಪ್ರವೃದ್ಧಃ**—ನಮ್ಮ ಸ್ತುತಿಯಿಂದ ಪ್ರವೃದ್ಧನಾಗಿ । **ಅದಾಶೂನ್**—ಹವಿರಾದಿ ದಾನಗಳನ್ನು ಮಾಡದೆ ಇರುವವರನ್ನೂ (ಮತ್ತು) । **ಮಿತ್ರೇರೂನ್**—ಮಿತ್ರರಾದ ಯಜಮಾನರ ಹಿಂಸಕರನ್ನೂ ಅಥವಾ ಯಜಮಾನರ ಶತ್ರುಗಳ ಮಿತ್ರತ್ವವನ್ನು ಬೆಳೆಸಿದವರನ್ನೂ । **ಜಘನ್ವಾನ್**—ಹನನ ಮಾಡುತ್ತೀಯೇ । **(ಕಿಂಚ**—ಮತ್ತು) । **ಯೇ**—ಯಾರು । **ಅರ್ಯಮಣಂ**—ದಾತೃವಾದ ನಿನ್ನನ್ನು । **ಪ್ರ ಪಶ್ಯನ್**—(ಮಿತ್ರನನ್ನಾಗಿ) ನೋಡುತ್ತಾರೋ (ಭಾವಿಸುತ್ತಾರೋ) । **ತೇ**—ಆ ಮನುಷ್ಯರು । **ಆಯೋಃ ಸಚಾ**—ಮನುಷ್ಯನ (ಅಧ್ವರ್ಯು ಮೊದಲಾದವರ) ಅಥವಾ ಹವಿರ್ಲಕ್ಷಣಾನ್ನದ ಒಡನೆ । **ಶೂರ್ತಾಃ**—(ಹವಿಷ್ಪ್ರದಾನಾದಿಗಳಿಂದ) ಕ್ಷಿಪ್ರವಾಗಿ । **ತ್ವಯಾ**—ನಿನ್ನಿಂದ । **ಅಪತ್ಯಂ**—ಪುತ್ರನನ್ನು । **ವಹಮಾನಾಃ (ಸಂತಿ)**—ಪಡೆಯುವವರಾಗುತ್ತಾರೆ । [ಅಥವಾ **ಯೇ**—ಯಾವ ಮನುಷ್ಯರು । **ಅರ್ಯಮಣಂ**—ಯಾವನೋ ಒಬ್ಬ ದಾತೃವನ್ನು । **ಪ್ರ ಪಶ್ಯನ್**—ನೋಡಿದವರಾಗಿ (ನಿನ್ನನ್ನು ಪೂಜಿಸದೇ) ಇರುವವರೂ । **ಆಯೋಃ ಸಚಾ**—ಮನುಷ್ಯ ಸಹಾಯಭೂತರೂ (ಆಗಿ) । **ತ್ವಯಾ**—ನಿನ್ನಿಂದ । **ಶೂರ್ತಾಃ**—ಕ್ಷಿಪ್ತರಾಗಿ (ದೂರೀಕೃತರಾಗಿ) । **ಅಪತ್ಯಂ**—ಪುತ್ರನನ್ನು । **ವಹಮಾನಾಃ (ಸಂತಿ)** ಪಡೆಯುವವರಾಗುತ್ತಾರೋ । **(ತಾನ್ ಜಘನ್ವಾನ್ ಭವ**—ಅಂತಹವರನ್ನು ವಧಿಸುವವನಾಗು)]

॥ ಭಾವಾರ್ಥ ॥

ಎಲೈ ಇಂದ್ರನೇ, ಹರಿನಾಮಕ ಅಶ್ವವಿಶಿಷ್ಟನಾದ ನೀನು ನಮ್ಮ ಸ್ತುತಿಯಿಂದ ತುಷ್ಟನಾಗಿ, ಹವಿರಾದಿಗಳನ್ನು ಅರ್ಪಿಸದೇ ಇರುವವರನ್ನೂ, ಯಾಗಕರ್ತೃಗಳ ಹಿಂಸಕರನ್ನೂ ವಧಿಸುವವನಾಗು ಮತ್ತು, ದಾತೃವಾದ ನಿನ್ನನ್ನೇ ರಕ್ಷನೆಂದು ಭಾವಿಸಿ, ಅಧ್ವರ್ಯ್ವಾದಿ ಸಹಚರಿತರಾಗಿ, ನಿನಗೆ ಹವಿರಾದಿಗಳನ್ನು ಅರ್ಪಿಸುವವರಿಗೆ ಸಂತತಿಯನ್ನು ಅನುಗ್ರಹಿಸು (ಅಥವಾ ಯಃಕಶ್ಚಿದ್ದಾತೃವನ್ನು ನಂಬಿಕೊಂಡು ಮನುಷ್ಯರ ಸಹಾಯರಾಗಿ ನಿನ್ನನ್ನು ಪೂಜಿಸದೇ, ಪುತ್ರಾದ್ಯುಪೇತರಾಗಿರುವವರನ್ನು ನಾಶಮಾಡು)

## English Translation.

Indra, lord of steeds, invigorated by our animating praise, you have slain those who make you no offerings and disturb your worshippers; but they who look upon you as (their) protector, and are associated for (the presentation of sacrficial) food, obtain from you posterity.

॥ ವಿಶೇಷವಿಷಯಗಳು ॥

**ಅದಾಶೂನ್ ಮಿತ್ರೇರೂನ್ ಜಘನ್ವಾನ್**— ಅದಾಶೂನ್ ಎಂಬ ಪದಕ್ಕೆ ದಾನಮಾಡದಿರುವವರು ಎಂದು ಅರ್ಥವನ್ನು ವರ್ಣಿಸಿದೆ. ಇಲ್ಲಿ ಮಿತ್ರ ಶಬ್ದಕ್ಕೆ ಯಜಮಾನರು ಎಂಬ ಅರ್ಥವನ್ನು ವಿವರಿಸಿ, ಯಜ್ಞವನ್ನು ಆಚರಿಸುವ ಯಜಮಾನರಿಗೆ ತೊಂದರೆಯನ್ನು ಉಂಟುಮಾಡುವವರು ಅಥವಾ, ಯಜಮಾನರ ಶತ್ರುಗಳನ್ನು ಅವರಿಗೆ ತೊಂದರೆಯನ್ನು ಕೊಡುವಹಾಗೆ ಪ್ರೇರಿಸುವವರು ಎಂದು ಎರಡು ವಿಧವಾದ ಅರ್ಥವನ್ನು ಮಿತ್ರೇರು ಎಂಬ ಪದಕ್ಕೆ ವಿವರಿಸಿ, ಇಂದ್ರನು ದಾನಮಾಡದಿರುವ ಮತ್ತು ಯಜಮಾನರಿಗೆ ತೊಂದರೆಯನ್ನು ಕೊಡುವ ಜನರನ್ನು ನಾಶ ಪಡಿಸುವನೆಂದು ಅರ್ಥವನ್ನು **ಮಿತ್ರಾಣಾಂ ಯಜಮಾನಾನಾಂ ಈರಯಿತ್ರೄನ್ ಬಾಧಕಾನ್, ತದ್ವೈರಿಣಾಂ ಮಿತ್ರತ್ವಂ ಗಚ್ಛತೋ ವಾ ಹತವಾನಸಿ** ಎಂಬ ವಾಕ್ಯದಿಂದ ವಿವರಿಸಿದೆ.

**ಅರ್ಯಮಣಂ— ದಾತಾರಂ** ದಾನಮಾಡುವವನೆಂದು ಅರ್ಥವನ್ನು ಸಾಯಣರು ವರ್ಣಿಸಿದ್ದಾರೆ. ಯಾಸ್ಕರು—

**ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।**
**ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು ॥**

(ಋ. ಸಂ. ೧೦-೬೪-೫)

ಈ ಋಕ್ಕನ್ನು ಉದಹರಿಸಿ, **ಅರ್ಯಮಾ ಆದಿತ್ಯೋ ಅರೀನ್ ನಿಯಚ್ಛತಿ** ಶತ್ರುಗಳನ್ನು ನಿಗ್ರಹಮಾಡುವ ಆದಿತ್ಯನು ಅರ್ಯಮನ್ ಎಂಬ ಶಬ್ದದಿಂದ ಬೋಧ್ಯನಾಗಿರುವನೆಂದು ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು **ಅರೀಣಾಂ ತಮಸಾಂ ನಿಯಂತಾ** ಶತ್ರುಗಳಂತಿರುವ ಅಂಧಕಾರ (ಕತ್ತಲೆ) ವನ್ನು ನಾಶಮಾಡುವವನು ಎಂಬ ಅರ್ಥವನ್ನು ವರ್ಣಿಸಿರುವರು.

**ಆಯೋಃ—ಮನುಷ್ಯಸ್ಯಾಧ್ವರ್ಯ್ವಾದೇಃ ಹವಿರ್ಲಕ್ಷಣಾನ್ನಸ್ಯ ವಾ ।** ಆಯುಃ ಎಂಬ ಪದವು ಅನ್ನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಸಾಯಣರು ಅಧ್ವರ್ಯುವೇ ಮೊದಲಾದ ಋತ್ವಿಜರೆಂದೂ, ಅಥವಾ ಹವಿಸ್ಸಿನರೂಪವಾದ ಅನ್ನವೆಂದೂ ಎರಡು ವಿಧವಾದ ಅರ್ಥವನ್ನು ಈ ಪದಕ್ಕೆ ವಿವರಿಸಿದ್ದಾರೆ.

**ಆಯೋಃ** ಎಂಬ ಪದಕ್ಕೆ ಕೆಲವು ಕಡೆಗಳಲ್ಲಿ **ಶತ್ರು** ಪರ್ಯಾಯವಾಗಿಯೂ ಇನ್ನು ಕೆಲವು ಕಡೆಗಳಲ್ಲಿ ಮಿತ್ರ ಪರ್ಯಾಯವಾಗಿಯೂ ಅರ್ಥಮಾಡಿದೆ. ಈ ಪದಕ್ಕೆ ಇದೇ ನಿಷ್ಕೃಷ್ಟವಾದ ಅರ್ಥವೆಂದು ಹೇಳುವುದು ಶ್ರಮವೆಂದು ಸಾಯಣರ ವಿವರಣೆಯಿಂದಲೇ ತಿಳಿಯುತ್ತದೆ. ಅಧ್ವರ್ಯುವೇ ಮುಂತಾದ ಮಾನವರೆಂದಾಗಲಿ, ಹವಿಸ್ಸಿನ ರೂಪವಾದ ಅನ್ನವೆಂದಾಗಲಿ ಎಂದು ಭಾಷ್ಯಕಾರರು ತಮ್ಮ ಸಂಶಯವನ್ನು ತೋರಿಸಿದ್ದಾರೆ. **ಆಯುಃ** ಎಂಬ ಪದವು ಅಂಕಿತ

ನಾಮವಾಗಿಯೂ, ಒಂದು ಸಂತತಿಯ ಹೆಸರನ್ನು ಸೂಚಿಸತಕ್ಕದ್ದಾಗಿಯೂ ಸಹ ಇರುತ್ತದೆ. ಈ ಸಂದರ್ಭಗಳಲ್ಲೂ ಸಹ ಇಂದ್ರಾದಿಗಳಿಗೆ ಮಿತ್ರರೆಂದು ಕೆಲವೆಡೆಗಳಲ್ಲಿಯೂ, ಶತ್ರುಗಳೆಂದು ಕೆಲವು ಕಡೆಗಳಲ್ಲಿಯೂ ವರ್ಣಿತವಾಗಿದೆ. ಆದುದರಿಂದ ಈ ಪದದ ಪ್ರಯೋಗದಲ್ಲಿರುವ ವೈವಿಧ್ಯತೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ತಿಳಿಯುವುದು ಅವಶ್ಯಕವಾಗಿರುತ್ತದೆ. ಪ್ರಕೃತದಲ್ಲಿ **ಆಯುವಿಗೂ** ಇಂದ್ರಾದಿದೇವತೆಗಳಿಗೂ ಇರತಕ್ಕ ಸಂಬಂಧವನ್ನು ಸೂಚಿಸಿರುವ ಶ್ರುತಿವಾಕ್ಯಗಳನ್ನುದಾಹರಿಸಿ ಆಯುವೆಂಬ ಹೆಸರುಳ್ಳ ವ್ಯಕ್ತಿಗಳು ಅನೇಕವಿದ್ದು, ದೇವತೆಗಳಿಗೂ ಯಜ್ಞಕರ್ತರಿಗೂ ಶತ್ರುವಾಗಿದ್ದ ಆಯುವೇ ಬೇರೆ, ಇಂದ್ರನ ಮಿತ್ರನಾದ ಆಯುವೇ ಬೇರೆ ಅಗ್ನಿಗೆ ಮಿತ್ರನಾದ ಆಯುವೇ ಬೇರೆ ಎಂಬ ಅಂಶವನ್ನೂ ಮತ್ತು **ಆಯು**ವೆಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಸಂತತಿಯೇ ಇದ್ದಿತೆಂಬುದನ್ನೂ ತಿಳಿಸಲಾಗುತ್ತದೆ.

**ಉರ್ವಶ್ಯಸೀತ್ಯಥೋತ್ತರಾರಣ್ಯಾಜ್ಯ ವಿಲಾಪನೀಮುಪಸ್ಪೃಶತ್ಯಾಯುರಸೀತಿ ತಾಮಭಿನಿದಧಾತಿ ಪುರೂರವಾ ಅಸೀತ್ಯುರ್ವಶೀ ವಾಪ್ಸರಾಃ ಪುರೂರವಾಃ ಪತಿರಥ ಯತ್ತಸ್ಮಾನ್ಮಿಥುನಾದಜಾಯತ ತದಾಯುರೇವಮೇವೈಷ ಏತಸ್ಮಿನ್ಮಿಥುನಾದ್ಯಜ್ಞಂ ಜನಯತಿ ।**

(ಶ. ಬ್ರಾ. ೩-೪-೧-೨೦)

ಎಂಬಲ್ಲಿ **ಆಯುವು** ಉರ್ವಶೀಪುರೂರವಸ್ಸುಗಳಿಂದ ಉತ್ಪನ್ನನಾದವನೆಂದು ಹೇಳಿ ಅಗ್ನಿಗೂ ಆಯುವಿಗೂ ತಾದಾತ್ಮ್ಯವನ್ನು ಹೇಳಿದೆ. ಇದರಂತೆಯೇ,

**ಆಯುಷೋ ನ ಮಥ್ಯಾದಿತ್ಯಗ್ನಿರ್ವಾ ಆಯುಃ ।**

(ಶ. ಬ್ರಾ. ೬-೨-೧-೧೫)

ಎಂಬ ವಾಕ್ಯದಲ್ಲಿಯೂ **ಅಗ್ನಿಗೂ ಆಯು**ವಿಗೂ ತಾದಾತ್ಮ್ಯವನ್ನು ಹೇಳಿದೆ. ಆದರೆ ಇಲ್ಲಿ **ಆಯು** ವೆಂಬ ಪದವು ಅಂಕಿತನಾಮವೆಂದು ಒಂದು ಮತ. ಅಲ್ಲವೆಂದು ಇನ್ನೊಂದು ಮತ. ಶತಪಥಬ್ರಾಹ್ಮಣದಲ್ಲಿ ಋಕ್ಸಂಹಿತೆಯ,

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**

(ಋ. ಸಂ. ೧-೧೬೨-೧)

ಎಂಬ ಋಕ್ಕನ್ನುದಾಹರಿಸಿ (ಶ. ಬ್ರಾ. ೧೩-೫-೧-೧೮) ಇತರ ದೇವತೆಗಳೊಡನೆ **ಆಯು**ವನ್ನೂ ಉದ್ದೇಶಿಸಿ ಮಾಡಿರುವ ಪ್ರಾರ್ಥನೆಯನ್ನೂ ಸೂಚಿಸಿದೆ.

**ಸ ಪೂರ್ವಯಾ ನಿವಿದಾ ಕವ್ಯತಾಯೋರಿಮಾಃ ಪ್ರಜಾ ಅಜನಯನ್ಮನೂನಾಂ ।**

(ಋ. ಸಂ. ೧-೯೬-೨)

ಎಂಬ ಋಕ್ಸಂಹಿತಾವಾಕ್ಯದಲ್ಲಿ **ಆಯೋಃ** ಎಂಬ ಪದಕ್ಕೆ **ಮನು** ವೆಂದು ಅರ್ಥಮಾಡಿರುವುದರಿಂದ ಸೃಷ್ಟಿಕರ್ತರಾದ ಪ್ರಜಾಪತಿಗಳಲ್ಲಿ ಒಬ್ಬನಾದ ಮನುವೆಂದು ತಿಳಿಯಬಹುದು. ಹೀಗೆಯೇ ಋ. ಸಂ. ೧-೫೩-೧೦; ೮-೧೫-೫; ೮-೫೩-೨; ೨-೩-೨-೨ ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಆಯುವೆಂಬ ಅಂಕಿತನಾಮವು ಯಾವ ವ್ಯಕ್ತಿಯನ್ನು ಸೂಚಿಸುತ್ತದೆಂಬುದನ್ನು ಹಿಂದೆಯೇ ತಿಳಿಸಿದೆ. (ಋಗ್ವೇದಸಂಹಿತಾ ಭಾಗ ೮. ಪುಟ ೭೭)

ಯಜ್ಞಕರ್ತರಾದ ಮಾನವರು ಎಂದು ಹೇಳುವುದಕ್ಕೆ ಪರ್ಯಾಯವಾಗಿ **ಆಯುಃ, ಆಯೋಃ** ಎಂಬದಪಗಳನ್ನು ಅನೇಕಕಡೆಗಳಲ್ಲಿ ಪ್ರಯೋಗಿಸಿದೆ.

**ಹೋತ್ರಾಭಿರಗ್ನಿರ್ಮನುಷಃ ಸ್ವಧ್ವರೋ ರಾಜಾ ವಿಶಾಮತಿಥಿಶ್ಚಾರುರಾಯವೇ ।**
(ಋ. ಸಂ. ೨-೨-೮).

**ಇಮಂ ವಿಧಂತೋ ಅಪಾಂ ಸದಸ್ಥೇ ದ್ವಿತಾದಧುರ್ಭೃಗವೋ ವಿಕ್ಷ್ವಾಯೋಃ ।**
(ಋ. ಸಂ. ೨-೪-೨).

**ಪ್ರ ಸ್ವಾದನಂ ಪಿತೂನಾಮಸ್ತತಾತಿಂ ಚಿದಾಯವೇ ।**
(ಋ. ಸಂ. ೫-೭-೬).

ಇತ್ಯಾದ್ಯನೇಕ ಋಕ್ಕುಗಳಲ್ಲಿ **ಆಯು** ಶಬ್ದಕ್ಕೆ ಯಜಮಾನನೆಂದರ್ಥವೆಂದು ಭಾಷ್ಯಕಾರರು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅದೇ ಅಭಿಪ್ರಾಯವನ್ನು ಸೂಚಿಸಿ **ಅಧ್ವರ್ಯುರ್ವೇ** ಮುಂತಾದ ಮಾನವರೆಂದರ್ಥ ಮಾಡಿದ್ದಾರೆ.

**ಶೂತರ್ಾಃ— ಕ್ಷಿಪ್ರಾಃ ಶೂತರ್ಾಃ** ಎಂಬ ಪದವು ಕ್ಷಿಪ್ರನಾಮಗಳಲ್ಲಿ ಉಕ್ತವಾಗಿದೆ. ಇಲ್ಲಿ ಶೀಘ್ರವಾಗಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಅಪತ್ಯಂ— ಕುಲಸ್ಯಾಪಾತಯಿತಾಶಂ ಪುತ್ರಂ ।** ಅಪತ್ಯ ಎಂಬ ಪದವು— **ತುಕ್, ತೋಕಂ** ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩-೨) ಉಕ್ತವಾಗಿ, **ಅಪತ್ಯಂ ಕಸ್ಮಾತ್ ಅಪತತಂ ಭವತಿ ಪಿತುಸ್ಸಕಾಶಾತ್ ಪೃಥಗಿವ ತತಂ ಭವತಿ** ಜನಕನಾದ ತಂದೆಯಿಂದ ಬೇರೆಯಾಗಿ ವಿಸ್ತೃತವಾಗುವುದರಿಂದಲೂ, **ನಾನೇನ ಪತತೀತಿ ವಾ** ಜನಕನು ಜಾತನಾದ ಇವನಿಂದ ನರಕದಲ್ಲಿ ಬೀಳದಿರುವನಾದುದರಿಂದಲೂ ಅಪತ್ಯವೆಂದು ಶಬ್ದಾರ್ಥವನ್ನು ದುರ್ಗಾಚಾರ್ಯರು ವಿವರಿಸಿದ್ದಾರೆ. ಸಾಯಣರು ವಂಶವನ್ನು ವೃದ್ಧಿಗೊಳಿಸುವವನಾದುದರಿಂದ ಉತ್ಪನ್ನನಾದ ಪ್ರಜೆಯು ಅಪತ್ಯನೆನಿಸುವನೆಂದು ಅರ್ಥವನ್ನು ವಿವರಿಸಿದ್ದಾರೆ.

ಈ ಋಕ್ಕಿನ ಎರಡನೆಯ ಅರ್ಧಕ್ಕೆ ಮೂರುವಿಧವಾದ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ, ಇಂದ್ರನು ಉತ್ತಮನಾದ ದಾತೃವಾಗಿರುವನೆಂದು ತಿಳಿದು ಮನುಷ್ಯರಾದ ಅಧ್ವರ್ಯುರ್ವೇ ಮೊದಲಾದ ಋತ್ವಿಜರೊಡಗೂಡಿ ಯಜಮಾನರು ಶೀಘ್ರವಾಗಿ ಹವಿಸ್ಸಿನ ರೂಪವಾದ ಅನ್ನವನ್ನು ಅರ್ಪಿಸುವುದರಿಂದ ಸಂತುಷ್ಟನಾದ ಇಂದ್ರನಿಂದ (ವಂಶವು ವೃದ್ಧಿಯಾಗುವ ಪ್ರಜೆಯನ್ನು) ವಂಶವೃದ್ಧಿಕಾರಕನಾದ ಪುತ್ರನನ್ನು ಹೊಂದಿ, ದಾತೃತಮನಾದ ಇಂದ್ರನನ್ನು ಕಾಣುವರು ಎಂದು ಅರ್ಥವನ್ನು ವರ್ಣಿಸಿದೆ.

ಎರಡನೆಯದಾಗಿ, **ಯದ್ವಾ— ಅರ್ಯಮಣಂ ತ್ವಾಂ ಪಶ್ಯಂತಿ ತೇ ಏವಂ ಭವಂತಿ ।** ಇಂದ್ರನು ಅಂಧಕಾರನಾಶಕನಾಗಿರುವನೆಂದು ತಿಳಿದು, ಅವನನ್ನು ಸಾಕ್ಷಾತ್ಕರಿಸುವವರು ವಂಶವೃದ್ಧಿಕಾರಕನಾದ ಪುತ್ರನನ್ನು ಪಡೆದು ಇಂದ್ರನನ್ನು ಪುನಃ ಪ್ರತ್ಯಕ್ಷವಾಗಿ ದರ್ಶನಮಾಡುವರೆಂದು (ಐಹಿಕ ಪಾರಲೌಕಿಕ ಸುಖಭೋಕ್ತೃತ್ವವನ್ನು) ವರ್ಣಿಸಿದೆ.

ಮೂರನೆಯದಾಗಿ— **ಯದ್ವಾ ಯೇ ನರಾ ಅರ್ಯಮಣಂ ಯಂ ಕಂಚಿದ್ದಾತಾರಂ ಪಶ್ಯನ್ ಪಶ್ಯಂತಸ್ತ್ವಾಮುಯೋಜಂತೆ ಆಯೋರ್ಮನುಷ್ಯಸ್ಯ ಸಚಾ ಸಹಾಯಭೂತಾಃ ತ್ವಯಾ ಶೂತರ್ಾಃ ಕ್ಷಿಪ್ರಾವರ್ಜಿತಾ ಅಪತ್ಯಂ ಪುತ್ರಂ ವಹಮಾನಾ ಯೇ ಸಂತಿ ತಾನ್ ಜಘನ್ವಾನ್ ಭವ ।**

ಯಾವನಾದರೂ ಒಬ್ಬನು (ದೇವನು) ದಾತೃವಾಗಿರುವನೆಂದು ಇಂದ್ರನನ್ನು ಉದಾಸೀನಭಾವದಿಂದ ಪೂಜಿಸಿದವರು ಮನುಷ್ಯರಿಗೆ ಸಹಾಯಕರಾಗಿರುವಕಾರಣ ಅವರಿಗೆ (ನೀನು) ಇಂದ್ರನು ಪುತ್ರಪೌತ್ರರೂಪವಾದ ಸಂಪತ್ತನ್ನು ಶೀಘ್ರವಾಗಿ ನಾಶಪಡಿಸಿ ಅವರನ್ನೂ ನಾಶಮಾಡುವನೆಂದು ಅರ್ಥವನ್ನು ವರ್ಣಿಸಿದೆ. (ಒಟ್ಟಿನಲ್ಲಿ ಈ ಋಕ್ಕಿನ ಅರ್ಥವು ಕ್ಲಿಷ್ಟವಾಗಿ ಸುಗಮ್ಯವಾಗಿ ಇರುವುದಿಲ್ಲವಾದುದರಿಂದ ಕೊಂಚಮಟ್ಟಿನ ರೀತಿಯಿಂದ ವಿವರಿಸಲ್ಪಟ್ಟಿದೆ).

॥ ವ್ಯಾಕರಣಪ್ರಕ್ರಿಯಾ ॥

**ಜಘನ್ವಾನ್**—ಹನ ಹಿಂಸಾಗತ್ಯೋಃ ಧಾತು. **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಅಭ್ಯಾಸಕ್ಕೆ ಕುತ್ವ ಜಸ್ತ್ವ. **ಅಭ್ಯಾಸಾಚ್ಚ** (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದ ಹಕಾರಕ್ಕೆ ಕುತ್ವ. ವಸುವಿನ ಸ್ವರ ಉಳಿಯುತ್ತದೆ. ಪ್ರಥಮಾವಿಭಕ್ತಿ ಏಕವಚನದಲ್ಲಿ ನುಮ್, ದೀರ್ಘ, ಸಲೋಪ.

**ಮಿತ್ರೇರೂನ್**—ಈರ ಗತಿಹಿಂಸಾದರ್ಶನೇಷು. ಧಾತು. ಔಣಾದಿಕ ಉ ಪ್ರತ್ಯಯ. ಮಿತ್ರಾಣಿ ಈರಯಂತಿ ಇತಿ ಮಿತ್ರೇರವಃ ತಾನ್. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಚೋದಪ್ರವೃದ್ಧಃ**—ಚೋದೈಃ ಪ್ರವೃದ್ಧಃ. **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಹರಿವಃ**—ಹರಯಃ ಅಸ್ಯ ಸಂತಿ ಇಂತಿ ಹರಿವಾನ್. ಸಂಬುದ್ಧಿಯಲ್ಲಿ ರುತ್ವ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಅದಾಶೂನ್**—ದಾಶೃ ದಾನೇ. ಧಾತು. ಔಣಾದಿಕ ಉ ಪ್ರತ್ಯಯ ನ ದಾಶವಃ ಅದಾಶವಃ ತಾನ್. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪಶ್ಯನ್**—ದೃಶಿರ್ ಪ್ರೇಕ್ಷಣೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಲ ಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಆಯೋಃ**—ಇಣ್ ಗತೌ. ಧಾತು. **ಛಂದಸೀಣಃ** ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ಧಾತುವಿಗೆ ವೃದ್ಧಿ ಅಯಾದೇಶ. ಪ್ರತ್ಯಯಸ್ವರ ಉಳಿಯುತ್ತದೆ.

**ವಹಮಾನಃ**—ವಹ ಪ್ರಾಪಣೇ. ಧಾತು. ಲಟಿಗೆ ಶಾನಚಾದೇಶ. ಶಪ್ ವಿಕರಣ. **ಆನೇಮುಕ್** ಎಂಬುದರಿಂದ ಮುಕಾಗಮ. ಲ ಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಪತ್ಯಮ್**—ನ ಪತಂತಿ ಪಿತರಃ ಯೇನ. ಪತ್ಲೃ ಗತೌ ಧಾತು. ಯತ್ ಪ್ರತ್ಯಯ. ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ರಪತ್ಕವಿರಿಂದ್ರಾರ್ಕಸಾತೌ ಕ್ಷಾಂ ದಾಸಾಯೋಪಬರ್ಹಣೀಂ ಕಃ ।
ಕರತ್ತಿಸ್ರೋ ಮಘವಾ ದಾನುಚಿತ್ರಾ ನಿ ದುರ್ಯೋಣೇ ಕುಯವಾಚಂ ಮೃಧಿ
ಶ್ರೇತ್ ॥ ೭ ॥

॥ ಪದಪಾಠಃ ॥

ರಪತ್ । ಕವಿಃ । ಇಂದ್ರ । ಅರ್ಕಽಸಾತೌ । ಕ್ಷಾಂ । ದಾಸಾಯ । ಉಪಽಬರ್ಹಣೀಂ । ಕರಿತಿ ಕಃ ।
ಕರತ್ । ತಿಸ್ರಃ । ಮಘಽವಾ । ದಾನುಽಚಿತ್ರಾಃ । ದುರ್ಯೋಣೇ । ಕುಯವಾಚಂ । ಮೃಧಿ । ಶ್ರೇತ್ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಂ ಕವಿಃ ಕ್ರಾಂತದರ್ಶ್ಯನೂಚಾನೋ ವಾ ಹೋತಾರ್ಕಸಾತಾವರ್ಚನೀಯಸ್ಯಾನ್ನಸ್ಯ ಲಾಭೇ ನಿಮಿತ್ತಭೂತೇ ಸತಿ ರಪತ್ । ಸ್ತೌತಿ । ಯದ್ವಾ । ಏತನ್ನಾಮರ್ಷೀ ರಪತ್ ಅಸ್ತೌತ್ ಅನ್ನಾರ್ಥಂ । ತಸ್ಯಾತಿಪ್ರಭೂತಮನ್ನಂ ಪ್ರಾದಾ ಇತ್ಯರ್ಥಃ । ತಥಾ ಚ ದಾಸಾಯ ಪ್ರಾಣ್ಯುಪಕ್ಷಪಯಿತ್ರೇಽಸುರಾಯ ಕ್ಷಾಂ ಭೂಮಿಮುಪಬರ್ಹಣೀಂ ಶಯ್ಯಾಂ ಕಃ । ಅಕರೋಃ । ಹತ್ವಾ ಭೂಮಾವಪಾತಯ ಇತ್ಯರ್ಥಃ ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ಅಥ ಪರೋಕ್ಷಕೃತಃ। ಮಘವಾ ಧನವಾನಯಮಿಂದ್ರಸ್ತಿಸ್ರೋ ಭೂಮೀಃ । ದಾರ್ಶಿಕಪಾಶುಕಸೌಮಿಕರೂಪಾ ಭೂಮೀಃ ಕ್ಷಿತ್ಯಂತರಿಕ್ಷದ್ಯುರೂಪಾ ವಾ ಭೂಮೀರ್ದಾನುಚಿತ್ರಾ ದಾನೇನ ದೇಯೈರ್ಥನ್ಯೈರ್ವಾ ಚಾಯನೀಯಾಃ ಕರತ್ । ಕರೋತಿ । ಯದ್ವಾ । ತಿಸ್ರೋಽಯೋರಜತಹಿರಣ್ಯಮಯೀಃ ಪುರೀರ್ದಾನುಚಿತ್ರಾಃ ಖಂಡನೇನ ಚಿತ್ರಾ ಅಕರೋತ್ । ತಥಾ ದುರ್ಯೋಣೇ ದುಷ್ಟಯೋನೌ ಸ್ಥಾನೇ ಏತನ್ನಾಮಕಸ್ಯ ರಾಜ್ಞಃ ಪ್ರೀತ್ಯರ್ಥಂ ವಾ ಕುಯವಾಚಂ ಕುತ್ಸಿತಂ ಶಬ್ದಾಯಂತಮೇತನ್ನಾಮಾನಮಸುರಂ ಮೃಧಿ ಸಂಗ್ರಾಮೇ ನಿ ಶ್ರೇತ್ । ಹಿಂಸಿತವಾನ್ ॥

॥ ಪ್ರತಿಪದಾರ್ಥ ॥

(ಹೇ) ಇಂದ್ರ—ಎಲೈ ಇಂದ್ರನೇ । ಕವಿಃ—ಜ್ಞಾನಿಯಾದ ಹೋತೃವು ಅಥವಾ ಕವಿ ಎಂಬ ಋಷಿಯು । **ಅರ್ಕಸಾತೌ**—ಅನ್ನಲಾಭ ನಿಮಿತ್ತಕವಾಗಿ । **ರಪತ್**—(ನಿನ್ನನ್ನು) ಸ್ತುತಿಸುತ್ತಾನೆ । **ದಾಸಾಯ**—ಪ್ರಾಣಿಗಳಿಗೆ ಹಿಂಸಕನಾದ ಅಸುರನಿಗೆ । **ಕ್ಷಾಂ**—ಭೂಮಿಯನ್ನು । **ಉಪಬರ್ಹಣೀಂ**—ಹಾಸಿಗೆಯನ್ನಾಗಿ । **ಕಃ**—ಮಾಡಿದೆ । **ಮಘವಾ**—ಧನವಿಶಿಷ್ಟನಾದ ಈ ಇಂದ್ರನು । **ತಿಸ್ರಃ**—ದಾರ್ಶಿಕ, ಪಾಶುಕ, ಸೌಮಿಕ, ರೂಪವಾದ ಮೂರು ಕರ್ಮಗಳನ್ನು ಅಥವಾ ಕ್ಷಿತ್ಯಂತರಿಕ್ಷ ದ್ಯುರೂಪವಾದ ಮೂರು ಲೋಕಗಳನ್ನು । **ದಾನು ಚಿತ್ರಾಃ**—ದಾನ

ಗಳಿಂದ ಅಥವಾ ದೇಯವಾದ ಧನದಿಂದ ಆಶ್ಚರ್ಯಾವಹಗಳನ್ನಾಗಿ | **ಕರತ್**—ಮಾಡುತ್ತಾನೆ | [ಅಥವಾ **ತಿಸ್ರಃ**—ಅಯೋರಜತ ಹಿರಣ್ಯಮಯವಾದ ಮೂರು ಅಸುರ ನಗರಿಗಳನ್ನು | **ದಾನು ಚಿತ್ರಾಃ**—ಖಂಡಿಸಿ ವಿಚಿತ್ರವಾಗಿ ಕಾಣು ವಂತೆ | **ಕರತ್**—ಮಾಡಿದನು |] **(ತಥಾ**—ಹಾಗೆಯೇ) | **ದುಯೋರ್ಣೇ**—ದುಷ್ಟಸ್ಥಳದಲ್ಲಿ ಅಥವಾ ದುಯೋರ್ಣ ನೆಂಬ ರಾಜನ ಪ್ರೀತ್ಯರ್ಥವಾಗಿ | **ಕುಯವಾಚಂ**—ಕುತ್ಸಿತವಾಗಿ ಶಬ್ದಮಾಡುತ್ತಿದ್ದ(ಕುಯವಾಚನೆಂಬ)ಅಸುರನನ್ನು | **ಮೃಧಿ**—ಸಂಗ್ರಾಮದಲ್ಲಿ | **ನಿಶ್ರೇತ್**—ಹಿಂಸಿಸಿದನು.

॥ ಭಾವಾರ್ಥ ॥

ಎಲೈ ಇಂದ್ರನೇ, ಅನ್ನಾಪೇಕ್ಷಿಯಾದ ಹೋತೃವು (ಕವಿನಾಮಕ ಋಷಿಯು) ನಿನ್ನನ್ನು ಸ್ತುತಿಸುತ್ತಾನೆ; ಪ್ರಾಣಿಹಿಂಸಕನಾದ ಅಸುರನನ್ನು ಭೂಶಯ್ಯಾಗತನನ್ನಾಗಿ ಮಾಡಿರುವೆ; ಧನಾಧಿಪತಿಯಾದ ನೀನೇ, ಭೂಮಿ, ಆಕಾಶ ಮತ್ತು ಸ್ವರ್ಗಲೋಕಗಳನ್ನು ಧನಾದಿಗಳಿಂದ ತುಂಬಿರುವುದು (ದಾರ್ಶಿಕ, ಪಾಶುಕ, ಸೌಮಿಕ ರೂಪವಾದ ಕರ್ಮಗಳನ್ನು ದಾನಾರ್ಹವಾದ ಧನದಿಂದ ಆಶ್ಚರ್ಯಾವಹವಾಗಿ ಮಾಡಿರುವುದು); ಮತ್ತು ದುಯೋರ್ಣನೆಂಬ ರಾಜನ ಪ್ರೀತ್ಯರ್ಥವಾಗಿ ಕುಯವಾಚನೆಂಬ ಅಸುರನನ್ನು ಯುದ್ಧದಲ್ಲಿ ನಾಶಮಾಡಿದೆ.

## English Translation.

The sage praises you Indra, for the grant of desirable (food), since you have made the earth the bed of the Asura: Maghavan has made the three (regions) marvellous by his gifts, and has destroyed for (the prince) Duryoni (the Asura), Kuyavacha, in combat.

॥ ವಿಶೇಷವಿಷಯಗಳು ॥

**ಕವಿಃ** ಈ ಪದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ಸಾಯಣರು **ಕ್ರಾಂತದರ್ಶೀ** ಜ್ಞಾನಪಾರವನ್ನು ತಿಳಿದವನು ಎಂದೂ, ಅಥವಾ, **ಅನೂ ಚಾನೋ ವಾ** ಯಾಗಾದಿಕರ್ಮಗಳ ಆಚರಣೆಯ ಸಂಪ್ರದಾಯವನ್ನು ತಿಳಿದವನು ಎಂದೂ, ಎರಡುವಿಧವಾದ ಅರ್ಥವನ್ನು ವಿವರಿಸಿ ಜ್ಞಾನಿಯೂ, ಕರ್ಮಾಚರಣೆಯಲ್ಲಿ ಶ್ರೇಷ್ಠನೂ ಆದ ಹೋತೃವೆಂಬ ಋತ್ವಿಜನು **ಅರ್ಕಸಾತೌ** ದೇವತೆಗಳನ್ನು ಆಹ್ವಾನಿಸಿ ಅವರನ್ನು ಪೂಜಿಸುವುದರಲ್ಲಿ ಸಾಧನವಾದ ಹವಿಸ್ಸನ್ನು ಹೊಂದುವುದಕ್ಕಾಗಿ ಇಂದ್ರನನ್ನು ಸ್ತುತಿಮಾಡುವನೆಂದು ಒಂದು ವಿಧವಾದ ಅರ್ಥವನ್ನು ವಿವರಿಸಿರುವ ಸಾಯಣರು,

**ಕವಿಃ ಅರ್ಕಸಾತೌ ರಪತ್** ಎಂಬ ಇದೇ ವಾಕ್ಯಕ್ಕೆ **ಯದ್ವಾ ಏತನ್ನಾಮರ್ಷೀ ಅನ್ನಾರ್ಥಮಸ್ತೌತ್ ಇಂದ್ರಂ ? ತಸ್ಯಾತಿಪ್ರಭೂತಮನ್ನಂ ಪ್ರಾದಾಃ** ಇಂದ್ರನನ್ನು ಕವಿ ಎಂಬ ಋಷಿಯು ಅನ್ನವನ್ನು ಹೊಂದುವ ನಿಮಿತ್ತವಾಗಿ ಸ್ತುತಿಸಿದ ಕಾರಣ ಇಂದ್ರನು ಅವನಿಗೆ ಅನ್ನವನ್ನು ಅನುಗ್ರಹಿಸಿರುವನು ಎಂಬ ಎರಡನೆಯ ಅರ್ಥವನ್ನೂ ವಿವರಿಸಿದ್ದಾರೆ.

**ಅರ್ಕಸಾತೌ—ಅರ್ಚನೀಯಸ್ಯಾನ್ನಸ್ಯ ಲಾಭೇ** | ಯಾಸ್ಕರು ಅರ್ಕಶಬ್ದವನ್ನು ಅನ್ನನಾಮಗಳಲ್ಲಿಯೂ (ನಿ. ೩-೯) ವಜ್ರನಾಮಗಳಲ್ಲಿಯೂ, (ನಿ. ೩-೧೧) ಪಾಠಮಾಡಿ, **ಅರ್ಕೋ ದೇವೋ ಭವತಿ ಯದೇನಮರ್ಚತಿ**

ಅರ್ಚ್ಯರಾಗಿರುವ ದೇವತೆಗಳು ಎಲ್ಲರೂ ಅರ್ಕಶಬ್ದದಿಂದ ಪ್ರತಿಪಾದ್ಯರಾಗಿರುವರು, ಎಂದೂ, **ಅರ್ಕೋ ಮಂತ್ರೋ ಭವತಿ ಯದನೇನಾರ್ಚತಿ** ದೇವತೆಗಳನ್ನಾಗಲೀ ಇತರರನ್ನಾಗಲೀ ಪೂಜಿಸುವ ವಿಷಯದಲ್ಲಿ ಅರ್ಚನೆಮಾಡಲು ಸಾಧನವಾದ ಮಂತ್ರವೂ ಅರ್ಕಶಬ್ದದಿಂದಲೇ ಉಕ್ತವಾಗಿದೆ ಎಂದೂ, **ಅರ್ಕಮನ್ನಂ ಭವತ್ಯರ್ಚತಿ ಭೂತಾನಿ,** ಪ್ರಾಣಿಗಳನ್ನು ತೃಪ್ತಿಪಡಿಸಿ ಅರ್ಚನಾ ವಿಷಯರನ್ನಾಗಿ ಮಾಡುವ ಅನ್ನವೂ ಅರ್ಕಶಬ್ದದಿಂದಲೇ ತಿಳಿಯಲ್ಪಡುವುದು ಎಂದೂ, ಅರ್ಕ ಶಬ್ದಕ್ಕೆ **ಅರ್ಚ್ಯತೇ, ಇತಿ ಅರ್ಕಃ, ಅರ್ಚನಸಾಧನಮರ್ಕಃ, ಅರ್ಚನನಿಮಿತ್ತಮಪಿ ಅರ್ಕಃ,** ಎಂದು ಮೂರು ವಿಧವಾದ ನಿರ್ವಚನವನ್ನೂ ತೋರಿಸಿ, **ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ** ಕಟುವಾದ ಗುಣದಿಂದ ಕೂಡಿರುವ ಕಾರಣ ವೃಕ್ಷವೂ ಕೂಡ ಅರ್ಕಶಬ್ದ ವಾಚ್ಯವಾಗಿರುವುದು ಎಂಬ ಅರ್ಥವನ್ನು ವರ್ಣಿಸಿದ್ದಾರೆ. ಮತ್ತೂ,

**ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।**
**ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೆ ॥** (ಋ. ಸಂ. ೧-೧೦-೧)

ಎಂಬ ಋಕ್ಕನ್ನು ಉದಹರಿಸಿ, ಅರ್ಕ, ಅರ್ಕಿಶಬ್ದಗಳಿಗೆ, ಪೂಜ್ಯನು, ಪೂಜಿಸುವವರು ಎಂದು ಅರ್ಥವನ್ನು ವಿವರಿಸಿದ್ದಾರೆ. ಇದರಿಂದ ಸಾಯಣರಿಂದ ಎರಡುವಿಧವಾದ ವ್ಯಾಖ್ಯಾನವೂ ಇಲ್ಲಿ ವಿವೃತವಾಗಿದೆ.

**ದಾಸಾಯ ಕ್ಷ್ಮಾಂ ಉಪಬರ್ಹಣೀಂ ಕಃ**—ದಾಸಶಬ್ದವು **ದಾಸೋ ದಸ್ಯತೇರುಪದಾಸಯತಿ ಕರ್ಮಾಣಿ** (ನಿ. ೨-೧೮) ಕಾರ್ಯಗಳನ್ನು ಪ್ರಭೂತವಾಗಿ ಆಚರಿಸುವುದರಿಂದ ಕರ್ಮಕರನು ದಾಸನು ಎಂದು ಉಕ್ತವಾಗಿರುವಕಾರಣ ಸಾಯಣರು **ಪ್ರಾಣ್ಯುಪಕ್ಷಪಯಿತ್ರೇ ಅಸುರಾಯ** ಪ್ರಾಣಿಗಳನ್ನು ಬಹಳವಾಗಿ ನಾಶಮಾಡುವ ಅಸುರನಿಗೆ ಇಂದ್ರನು ಭೂಮಿಯನ್ನು ಹಾಸಿಗೆಯನ್ನಾಗಿ ಮಾಡಿದನು **ಹತ್ವಾ ಭೂಮಾವಪಾತಯಃ** ಅಸುರನನ್ನು ಕೊಂದು ಭೂಮಿಯಲ್ಲಿ ಬಿದ್ದಿರುವಂತೆ ಮಾಡಿದನು ಎಂದು ಅರ್ಥವನ್ನು ವಿವರಿಸಿದ್ದಾರೆ. ಕ್ಷ್ಮಾ ಎಂಬ ಪದವು ಭೂವಾಚಕಗಳಲ್ಲಿ (ನಿ. ೨-೫) ಪಠಿತವಾಗಿ, **ಕ್ಷ್ಮಾ ಕ್ಷಿಯತೇರ್ನಿವಾಸಕರ್ಮಣಃ** ವಾಸಮಾಡು ಎಂಬ ಅರ್ಥವನ್ನು ಬೋಧಿಸುವ ಕ್ಷಿ ಧಾತುವಿನಿಂದ ನಿಷ್ಪನ್ನವಾದ ಕ್ಷ್ಮಾ ಶಬ್ದವು ಭೂಮಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಯಾಸ್ಕರು ಅರ್ಥವನ್ನು ವಿವರಿಸಿದ್ದಾರೆ.

**ಮಘವಾ**—ಮಘ ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಧನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆಯಾದುದರಿಂದ ಧನವನ್ನು ಇಂದ್ರನು ಹೊಂದಿ ಮಘವಾ ಎಂಬ ಶಬ್ದದಿಂದ ವ್ಯವಹೃತನಾಗಿರುವನೆಂದು ಅರ್ಥವನ್ನು ವಿವರಿಸಿದೆ

**ತಿಸ್ರಃ ದಾನುಚಿತ್ರಾಃ ಕರತ್**—ಸಾಯಣರು ತಿಸ್ರಃ ಎಂಬ ಪದಕ್ಕೂ ದಾನು ಎಂಬ ಪದಕ್ಕೂ ಎರಡು ವಿಧವಾದ ಅರ್ಥವನ್ನು ಹೇಳಿ ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನೂ ವಿವರಿಸಿದ್ದಾರೆ. ಮೊದಲನೆಯ ಅರ್ಥದಲ್ಲಿ ಕರ್ಮಗಳು ಆಚರಣೆಯ ರೂಪದಲ್ಲಿರುವಾಗ ದಾರ್ಶಿಕ ಜ್ಞಾನಗಮ್ಯ (ಜ್ಞಾನದಿಂದಧ್ಯೇಯ) ವಾದುವು, ಪಾಶುಕ ಯಜ್ಞದಲ್ಲಿ ಪಶುವಿಗೆ ಸಂಬಂಧವಾದುವು, ಸೌಮಿಕ ಯಜ್ಞದಲ್ಲಿ ಸೋಮಲತಾ ಸಂಬಂಧವಾದವು, ಎಂದು ತಿಸ್ರಃ ಭೂಮಿಃ ಮೂರುವಿಧವಾದ ರೂಪಗಳಾಗಿರುವುವು ಆದಕಾರಣ ಇವುಗಳ ಫಲವನ್ನು ಹೊಂದುವ ಪ್ರದೇಶವೂ ಕ್ಷಿತಿ ಅಂತರಿಕ್ಷ, ದ್ಯುಲೋಕಗಳಾಗಿರುವುವು ಎಂದುಹೇಳಿ, ಈ ಕರ್ಮಗಳು ಫಲದಾಯಕಗಳಾಗುವಾಗ **ದಾನೇನ ಧನೈರ್ದೇಯೈಃ ವಾ** ಧನಗಳಿಂದಲಾಗಲಿ, ದಾನಾರ್ಹವಾದ ವಸ್ತ್ವಂತರಗಳಿಂದಲಾಗಲಿ ಅರ್ಜಿತಗಳಾಗುವುವು ಎಂದು

ಅರ್ಥವನ್ನು ವರ್ಣಿಸಿದ್ದಾರೆ. ಈ ಅರ್ಥದಲ್ಲಿ ದಾನುಚಿತ್ರಾಃ ಎಂಬ ಪದಕ್ಕೆ ದಾನಮಾಡುವುದರಿಂದ **ಚಾಯನೀಯ** ಎಂದು ಅರ್ಥವನ್ನು ವಿವರಿಸಿದೆ.

ಎರಡನೆಯ ಅರ್ಥದಲ್ಲಿ—**ಅಯೋರಜತಹಿರಣ್ಮಯೀಃ ಪುರೀಃ ದಾನುಚಿತ್ರಾಃ ಖಂಡನೇನ ಚಿತ್ರಾಃ ಅಕರೋತ್** ಎಂದು ವ್ಯಾಖ್ಯಾನಮಾಡಿದೆ. ಅಥ **ಪರೋಕ್ಷಕೃತಃ** ಎಂದು ಹೇಳಿರುವುದರಿಂದ ಈ ವಾಕ್ಯಕ್ಕೆ ಇತಿಹಾಸಪರವಾಗಿಯೂ, ತತ್ತ್ವಪರವಾಗಿಯೂ ಎರಡು ಅರ್ಥಗಳನ್ನು ವಿವರಿಸಲು ಸಾಧ್ಯವಾಗಿದ್ದರೂ ಇತಿಹಾಸ ಪರವಾದ ಅರ್ಥವನ್ನು ಮಾತ್ರ ವರ್ಣಿಸಿದ್ದಾರೆ. ಅಸುರರು ಲೋಕವನ್ನು ಬಾಧಿಸಿ ತಮ್ಮ ರಕ್ಷಣೆಗಾಗಿ ನಿರ್ಮಿಸಿದ್ದ ಕಬ್ಬಿಣ, ಬೆಳ್ಳಿ, ಸುವರ್ಣಮಯರೂಪದಿಂದ ಇರುವ ಮೂರು ನಗರಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ನಾಶಮಾಡಿ, ಚಿತ್ರವರ್ಣವುಳ್ಳದ್ದಾಗಿರುವಂತೆ ಖಂಡಿಸಿರುವನು ಎಂದು ಅರ್ಥವನ್ನು ವರ್ಣಿಸಿದ್ದಾರೆ. ಈ ಅರ್ಥದಲ್ಲಿ ದಾನು ಶಬ್ದಕ್ಕೆ ದೋ ಅವಖಂಡನೇ ಎಂಬ ಧಾತುವಿನಿಂದ ದಾತು ಶಬ್ದವು ನಿಷ್ಪನ್ನವಾಗಿ ಖಂಡನಾರ್ಥದಲ್ಲಿ ಪ್ರಯುಕ್ತ ವಾಗಿದೆ. (ಇಂದ್ರನು ಜ್ಞಾನಿಯೆಂದೂ, ಮನಸ್ಸಿನ ತಾಮಸ; ರಾಜಸ; ಸಾತ್ವಿಕ; ರೂಪವಾದ ವೃತ್ತಿಗಳು ಎಂದೂ ಅವನು ಅವನ್ನು ನಾಶಮಾಡಿರುವನೆಂದೂ ತತ್ತ್ವಾರ್ಥವನ್ನು ಹೇಳಲು ಸಾಧ್ಯವಿದ್ದರೂ ಅದನ್ನು ಇಲ್ಲಿ ವಿವರಿಸಿಲ್ಲ).

**ದುರ್ಯೋಣೇ ಕುಯವಾಚಂ ಮೃಧಿ ಶ್ರೇತ್** ಎಂಬ ವಾಕ್ಯದಲ್ಲಿ **ದುಷ್ಟಯೋನೌ ಸ್ಥಾನೇ ಕುತ್ಸಿತಂ ಶಬ್ದಾಯಂತಂ ಅಸುರಂ**—ಇಂದ್ರನು ದುಷ್ಟವಾದ ಪ್ರದೇಶದಲ್ಲಿ ವಿಕಾರವಾದ ಧ್ವನಿಯನ್ನು ಮಾಡುತ್ತಿದ್ದ ಅಸುರ ನನ್ನು ನಾಶಮಾಡಿದನು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ ಈ ಪದಕ್ಕೆ **ಏತನ್ನಾಮಕಸ್ಯ ರಾಜ್ಞಃ ಪ್ರೀತ್ಯರ್ಥಂ ಏತನ್ನಾಮಾನಮಸುರಂ** ದುರ್ಯೋಣ ಎಂಬ ಹೆಸರಿನಿಂದ ಪ್ರಸಿದ್ಧನಾದ ರಾಜನ ವಿಶ್ವಾಸದಿಂದ ಇಂದ್ರನು ಕುಯವನೆಂಬ ಅಸುರನನ್ನು ಯುದ್ಧದಲ್ಲಿ ನಾಶಪಡಿಸಿದನೆಂದು ಅರ್ಥವನ್ನು ವಿವರಿಸಿದೆ. ಈ ಎರಡು ವಾಕ್ಯಗಳ ಅರ್ಥವನ್ನು **ಅತ್ರ ಪರೋಕ್ಷಕೃತಃ** ಎಂದು ಸಾಯಣರು ವ್ಯಾಖ್ಯಾನವನ್ನು ವರ್ಣಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ರಪತ್**—ರಪ ಶಬ್ದೇ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. **ಬಹುಲಂ ಛಂದಸ್ಯ**— (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಅರ್ಕಸಾತೌ**—ಅರ್ಕಸ್ಯ ಸಾತಿಃ ಯಸ್ಮಿನ್. ತಸ್ಮಿನ್. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಾಸಾಯ**—ದಸಿ ಸೇವನೇ. ಧಾತು. **ದಂಸೇ ಷ್ಟಟನೌ ನ ಆ ಚ** (ಉ. ಸೂ. ೫-೬೮೮) ಎಂಬುದರಿಂದ ಟ, ಟನ್, ಪ್ರತ್ಯಯ. ಧಾತು ನಕಾರಕ್ಕೆ ಆಕಾರಾದೇಶ. **ಚುಟೂ** (ಪಾ. ಸೂ. ೧-೩-೭) ಎಂಬುದರಿಂದ ಟಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕಃ**—ಡುಕೃಞ್ ಕರಣೇ. ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರಲೋಪ. **ಮಂತ್ರೇಘಸ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ

ಗುಣ. ರ ಪರವಾಗಿ ಬರುತ್ತದೆ. **ಹಲ್‌ಙ್ಯಾಭ್ಯೋದೀರ್ಘಾತ್**—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. ರೇಫಕ್ಕೆ ವಿಸರ್ಗ. ನಿಘಾತಸ್ವರ ಬರುತ್ತದೆ.

**ಕರತ್**—ಪೂರ್ವೋಕ್ತವಾದ ಧಾತುವಿಗೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಬಂದಾಗ **ಇತಶ್ಚ ಲೋಪಃ**—ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ತಿಸ್ರಃ**—ತ್ರಿ ಶಬ್ದಕ್ಕೆ ಶಸ್ ಪರವಾದಾಗ ಉದಾತ್ತಾಂತವಾದ ತಿಸ್ರಾದೇಶ. ಯಣಾದೇಶ ಬಂದಾಗ **ಉದಾತ್ತಯಣೋಹಲ್ ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕುಯವಾಚಮ್**—ಕುಯಾ ವಾಕ್ ಯಸ್ಯ ಸಃ. ಕುಯವಾಕ್. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

**ಶ್ರೇತ್**—ಶ್ರೀಙ್ ಪಾಕೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕಾರ್ಧ-ಧಾತುಕಯೋಃ** ಎಂಬುದರಿಂದ ಧಾತುವಿನ ಇಕಾರಕ್ಕೆ ಗುಣ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂ ನಿಘಾತಸ್ವರ ಬರುತ್ತದೆ. || ೭ ||



|| ಸಂಹಿತಾಪಾಠಃ ||

**ಸನಾ ತಾ ತ ಇಂದ್ರ ನವ್ಯಾ ಆಗುಃ ಸಹೋ ನಭೋಽವಿರಣಾಯ ಪೂರ್ವೀಃ |**
**ಭಿನತ್ಪುರೋ ನ ಭಿದೋ ಅದೇವೀರ್ನನಮೋ ವಧರದೇವಸ್ಯ ಪೀಯೋಃ || ೮ ||**

|| ಪದಪಾಠಃ ||

**ಸನಾ | ತಾ | ತೇ | ಇಂದ್ರ | ನವ್ಯಾಃ | ಆ | ಅಗುಃ | ಸಹಃ | ನಭಃ | ಅವಿರಣಾಯ | ಪೂರ್ವೀಃ ||**
**ಭಿನತ್ | ಪುರಃ | ನ | ಭಿದಃ | ಅದೇವೀಃ | ನನಮಃ | ವಧಃ | ಅದೇವಸ್ಯ | ಪೀಯೋಃ || ೮ ||**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತೇ ತವ ಸಂಬಂಧೀನಿ ಸನಾ ಸದಾತನಾನಿ ನಿತ್ಯಾನಿ ತಾನಿ ಶೌರ್ಯಾಣಿ ನವ್ಯಾ ನವತರಾ ಇದಾನೀಂತನಾ ಋಷಯ ಆಗುಃ । ಆಗಚ್ಛಂತಿ । ಸ್ತುತಿವ್ಯಾಜೇನ ಪ್ರಾಪ್ನುವಂತೀತ್ಯರ್ಥಃ । ಕಾನಿ ತಾನೀತಿ ಉಚ್ಯತೇ । ಪೂರ್ವೀರ್ಬಹ್ವೀರ್ನಭೋ ಹಿಂಸಾಃ ॥ ನಭೇರ್ಹಿಂಸಾರ್ಥಾತ್ಕ್ವಿಪ್ । ತದಂತಸ್ಯೇದಂ ರೂಪಂ ॥ ತಾ ಹಿಂಸಾ ಅವಿರಣಾಯಾವಿಗತರಣಾಯ ಸಂಗ್ರಾಮನಾಶನಾಯ ಸಹಃ । ಅಭ್ಯಭವಃ । ತದರ್ಥಂ ಭಿದೋ ಭೇತ್ತ್ರ್ಯಾಘಾತಿಕಾ ಅದೇವೀರಾಸುರೀಃ ಪುರೋ ನ ಪುರೀರಪಿ ಭಿನತ್ । ವಿದಾರಿತವಾನಸಿ ॥ ಪುರುಷವ್ಯತ್ಯಯಃ । ನಶಬ್ದಶ್ಚಾರ್ಥೇ ॥ ತಥಾದೇವಸ್ಯಾಸ್ತುತ್ಯಸ್ಯ ಪೀಯೋರ್ಹಿಂಸಕಸ್ಯಾಸುರಸ್ಯ ವಧರ್ವಜ್ರಂ ನನಮಃ । ಅನಮಯಃ । ಅನುಕೂಲಮಕರೋಃ ॥ ಯದ್ವಾ । ಹೇ ಇಂದ್ರ ಸನಾ ನಿತ್ಯಂ ತತ್ತತ್ಕಾಲೇ ತೇ ತವ ಸಂಬಂಧಿನ್ಯಸ್ತಾ ತಾನಿ ॥ ಲಿಂಗವ್ಯತ್ಯಯಃ । ತಾಃ ಪೂರ್ವೀಃ ಪುರಾತನ್ಯ ಅಪೋ ನವ್ಯಾ ನೂತ್ನಾಃ ಸ್ತುತ್ಯಾಃ ಸತ್ಯ ಆಗುಃ । ಆಗಚ್ಛಂತಿ । ಕಿಮರ್ಥಂ । ಅವಿರಣಾಯಾವಿರಮಣಾಯ ಪ್ರಾಣಿನಾಮವಿನಾಶನಾಯ । ತದರ್ಥಂ ನಭೋ ಹಿಂಸಕಾನ್ಬಂಧಕಾನ್ವಾ ಮೇಘಾನ್ ಸಹಃ । ಮರ್ಷಣಮಕರೋಃ । ಕಿಂಚಾದೇವೀಃ ಪುರೋಽವರ್ಷಣೇನಾದೇವನಶೀಲಾನುದಕಪುಟಬಂಧಾನ್ ಭಿನತ್ । ಭಿನ್ನಾನಕರೋಃ । ತಥಾದೇವಸ್ಯಾದೇವನಶೀಲಸ್ಯ ಪೀಯೋಃ ಪ್ರತಿಕೂಲಸ್ಯ । ವೃತಸ್ಯ ವಧರ್ವಜ್ರಂ ನನಮಃ । ಅನಮಯಃ ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ ಸಂಬಂಧನಾದ । **ಸನಾ**—ನಿತ್ಯಗಳೂ । **ನವ್ಯಾಃ**—ನವೀನವಾದವುಗಳೂ (ಈಚಿನವೂ) । **ಪೂರ್ವೀಃ**—ಬಹುಸಂಖ್ಯಾಕಗಳೂ ಆದ । **ನಭಃ**—(ನಿನ್ನಿಂದ ಅನುಭೂತವಾದ) ಹಿಂಸೆಗಳನ್ನು । **ಆ ಅಗುಃ**—(ಋಷಿಗಳು ಸ್ತುತಿವ್ಯಾಜದಿಂದ) ಅನುಭವಿಸುತ್ತಾರೆ । **ತಾಃ**—ಆ ಹಿಂಸೆಗಳನ್ನು । **ಅವಿರಣಾಯ**—ಯುದ್ಧಗಳು ಇಲ್ಲದೇ ಇರುವುದಕ್ಕೋಸ್ಕರ । **ಸಹಃ**—ಸಹಿಸಿದೆ । (**ತದರ್ಥಂ**—ಅದಕ್ಕೋಸ್ಕರಲೇ) । **ಭಿದಃ**—ನಾಶಕಾರಕಗಳೂ । **ಅದೇವೀಃ**—ಅಸುರಸಂಬಂಧಿಗಳೂ ಆದ । **ಪುರಃ ನ**—ನಗರಿಗಳನ್ನೂ । **ಭಿನತ್**—ಭೇದಿಸಿದೆ । (**ತಥಾ**— ಹಾಗೆಯೇ) । **ಅದೇವಸ್ಯ**—ಅಸ್ತುತ್ಯನೂ । **ಪೀಯೋಃ**—ಹಿಂಸಕನೂ ಆದ ಅಸುರನ । **ವಧಃ**—ವಜ್ರಾಯುಧವನ್ನು । **ನನಮಃ**—(ಬಗ್ಗಿಸಿದೆ) ಅನುಕೂಲಿಸುವಂತೆ ಪರಿವರ್ತಿಸಿದೆ.

ಅಥವಾ(**ಹೇ**) **ಇಂದ್ರ**-ಎಲೈ ಇಂದ್ರನೇ । **ಸನಾ**—ಶಾಶ್ವತವಾಗಿ । **ತೇ**-ನಿನಗೆ ಸಂಬಂಧಿಸಿರುವ । **ಪೂರ್ವೀಃ ತಾಃ**-ಪುರಾತನಗಳಾದ ಆ ಉದಕಗಳು । **ನವ್ಯಾಃ**-ಸ್ತುತ್ಯಗಳಾಗಿ । **ಅವಿರಣಾಯ**-ಪ್ರಾಣಿಗಳು ನಾಶವಾಗದಿರುವುದಕ್ಕೋಸ್ಕರ । **ಆ ಅಗುಃ**—ಬರುತ್ತವೆ । (**ತದರ್ಥಂ**—ಅದಕ್ಕೋಸ್ಕರಲೇ) । **ನಭಃ**—ಹಿಂಸಕಗಳು ಅಥವಾ ಬಂಧಕಗಳಾದ ಮೇಘಗಳನ್ನು । **ಸಹಃ**—ನಮ್ರಗಳನ್ನಾಗಿ ಮಾಡಿದೆ । (**ಕಿಂಚ**—ಮತ್ತು) । **ಅದೇವೀಃ**—(ಮಳೆಗರೆಯದೇ) ಅಸಂತೋಷಕಾರಕಗಳಾದ । **ಪುರಃ**—ಉದಕಬಂಧನಗಳನ್ನು । **ಭಿನತ್**—ಭೇದಿಸಿದೆ । **ತಥಾ**—ಹಾಗೆಯೇ । **ಅದೇವಸ್ಯ**—ಸಂತೋಷಪಡಿಸದೇ ಇರುವ ಸ್ವಭಾವದವನಾದ । **ಪೀಯೋಃ**—(ಮತ್ತು) ಪ್ರತಿಕೂಲನಾದ ವೃತ್ರಾಸುರನ । **ವಧಃ**—ವಜ್ರಾಯುಧವನ್ನು । **ನನಮಃ**—ಬಗ್ಗಿಸಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಾಶಕಾರಕಗಳಾದ ಅಸುರ ನಗರಿಗಳನ್ನು ಭೇದಿಸಿ, ದುಃಖಕಾರಿಯೂ ಹಿಂಸಕನೂ ಆದ ಅಸುರನ ವಜ್ರಾಯುಧವನ್ನು ಮುರಿದುದು ಯುದ್ಧವನ್ನು ನಿಲ್ಲಿಸುವುದಕ್ಕೋಸ್ಕರ; ನೀನು ಈ ಉದ್ದೇಶದಿಂದ ಮಾಡಿದ ಇಂತಹ ಸಾಹಸಕಾರ್ಯಗಳನ್ನೂ, ಎದುರಿಸಿದ ಕಷ್ಟಗಳನ್ನೂ ಋಷಿಗಳು ಸರ್ವದಾ ಸ್ತುತಿಸುತ್ತಾರೆ.

## English Translation.

The sages have celebrated your everlasting (as well as your) recent (exploits, in achieving which) you have endured many injuries in putting an end to war: verily, you have de molished the hostile and undivine cities; you have bowed down the thunderbolt of the undivine Asura.

॥ ವಿಶೇಷವಿಷಯಗಳು ॥

**ನವ್ಯಾಃ ಸನಾ ಆಗುಃ**—ಈ ಋಕ್ಕಿನಲ್ಲಿ ಎರಡು ವಿಧವಾದ ಅರ್ಥವನ್ನು ವರ್ಣಿಸಿದೆ. ಮೊದಲನೆಯ ಅರ್ಥದಲ್ಲಿ **ನವ್ಯಾಃ ಇದಾನೀಂತನಾಃ ಋಷಯಃ** ಈಗಿನ ಋಷಿಗಳೆಂದು **ನವ್ಯ** ಪದದ ಅರ್ಥವನ್ನು ವಿವರಿಸಿದೆ. ಇಂದ್ರನನ್ನು ಸಂಬೋಧಿಸಿ ಪ್ರಾಚೀನರಾಗದೆ ಇರುವ ಈಗಿನ ಋಷಿಗಳು ಇಂದ್ರನಿಗೆ ಸಂಬಂಧಿಸಿರುವ ಸರ್ವಕಾಲ ದಲ್ಲಿಯೂ ಪ್ರಸಿದ್ಧವಾಗಿರುವ (ಕೀರ್ತಿಗಳನ್ನು) ಶೌರ್ಯದಿಂದ ಆಚರಿತವಾದ ಶೌರ್ಯಾಭಿವ್ಯಂಜಕವಾದ ಪರಾಕ್ರಮ ಗಳನ್ನು ಸ್ತುತಿಮಾಡುವುದರ ಮೂಲಕವಾಗಿ (ಹೊಂದುವರು) ತಿಳಿಯುವರು ಎಂದು ಅರ್ಥವನ್ನು ವಿವರಿಸಿದೆ.

**ನಭಃ** ಎಂಬ ಪದವು ನಾಮಪದವಾಗಿ ಉದಕವೇ ಮೊದಲಾದ ಅರ್ಥಗಳನ್ನು ಬೋಧಿಸುವುದೆಂದು ನಿರುಕ್ತ ಕಾರರ ವಿವರಣೆ ಇದೆ. ಇಲ್ಲಿ ಈ ಪದಕ್ಕೆ ಸಾಯಣರು ಹಿಂಸಾ ಎಂಬ ಅರ್ಥವನ್ನು ವಿವರಿಸಿದ್ದಾರೆ. **ಪೂರ್ವೀಃ ನಭಃ ಅವಿರಣಾಯ ಸಹಃ** ಇಂದ್ರನು ಪ್ರಭೂತವಾದ ಹಿಂಸೆಗಳನ್ನು, ಯುದ್ಧಗಳು ಆಗದಿರುವಂತೆ (ಪ್ರಪಂಚವನ್ನು ಉಪ ಶಾಂತವಾಗಿ ಇರುವಂತೆಮಾಡಲು) ತಿರಸ್ಕರಿಸಿರುವನು. ಮತ್ತು ಅಸುರಸಂಬಂಧವಾದ **ಪುರೋನ** ನಗರಗಳನ್ನೂ ಕೂಡ ನಾಶಪಡಿಸಿರುವನು ಎಂದು ಮಹಿಮೆಯು ವಿವೃತವಾಗಿದೆ ಎಂದು ಮೊದಲನೆಯ ಅರ್ಥವು ವರ್ಣಿತವಾಗಿದೆ.

ಎರಡನೆಯ ಅರ್ಥದಲ್ಲಿ—**ಪೂರ್ವೀಃ** ಎಂಬ ಪದಕ್ಕೆ **ಪುರಾತನ್ಯಃ ಆಪಃ** ಎಂದು ಅರ್ಥವನ್ನೂ **ನವ್ಯಾಃ ಸ್ತುತ್ಯಾಃ** ಎಂದೂ ಅರ್ಥವನ್ನು ವಿವರಿಸಿ ಇಂದ್ರನನ್ನು ಸಂಬೋಧಿಸಿ, ಪುರಾತನವಾಗಿ ಇರುವ ಉದಕಗಳು ಯಾವಾಗಲೂ ಇರತಕ್ಕವುಗಳೇ ಆದರೂ, ಆಯಾಯ ಕಾಲಗಳಲ್ಲಿ ಸ್ತುತ್ಯರ್ಹಗಳಾಗಿ ಇರುವ ರೀತಿಯಿಂದ ಪ್ರಪಂಚದಲ್ಲಿ ಕಂಡುಬರುತ್ತವೆ. ಇವುಗಳಿಂದ ಪ್ರಾಣಿಗಳ (ಸ್ಥಿತಿಯು) ಜೀವನವು ಉಂಟಾಗಿರುತ್ತದೆ ಎಂದೂ,

> **ತದರ್ಥಂ ನಭೋ ಹಿಂಸಕಾನ್ ಬಂಧಕಾನ್ ವಾ ಮೇಘಾನ್ ಸಹಃ ಮರ್ಷಣಮಕರೋಃ । ಕಿಂಚ ಅದೇವೀಃ ಪುರಃ ಅವರ್ಷಣೇನ ಅದೇವನಶೀಲಾನ್ ಉದಕಪುಟಬಂಧಾನ್ ಭಿನ್ನಾನ-ಕರೋಃ । ತಥಾ ಅದೇವಸ್ಯ ಅದೇವನಶೀಲಸ್ಯ ಪೀಯೋಃ ಪ್ರತಿಕೂಲಸ್ಯ ವೃತ್ರಸ್ಯ ವಧಃ ವಜ್ರಂ ನನಮಃ ಅನಮಯಃ ।**

ಅದಕ್ಕಾಗಿಯೇ ಹಿಂಸೆಪಡಿಸುವವುಗಳೂ, ಅಥವಾ ತೊಂದರೆಯನ್ನು ಉಂಟುಮಾಡುವವುಗಳಾದ ಮೇಘಗಳನ್ನು ಇಂದ್ರನು ತನ್ನ ಬಲದಿಂದ ಹಿಂಸೆಮಾಡದಿರುವಂತೆ ತಡೆದಿರುವನು. ವೃಷ್ಟಿಯನ್ನು ಸುರಿಸದೆ ಕತ್ತಲೆಯನ್ನು ಬೀರುವ ಸ್ವಭಾವದಿಂದ ನೀರನ್ನು ತುಂಬಿರುವ ನಗರಗಳಂತಿರುವ ಮೇಘಗಳನ್ನು ಶತ್ರುಗಳ ನಗರಗಳನ್ನು ನಾಶಪಡಿಸಿದ ಹಾಗೆ ಇಂದ್ರನು ಭೇದಿಸಿರುವನು. ಪ್ರಕಾಶವಿಲ್ಲದಿರುವ ಸ್ವಭಾವದಿಂದ ಲೋಕಪ್ರತಿಬಂಧಕವಾಗಿರುವ ಮೇಘವನ್ನು ವಜ್ರಾಯುಧದಿಂದ ಹೊಡದು ವೃಷ್ಟ್ಯುದಕವನ್ನು ಸುರಿಸುವಂತೆ ಇಂದ್ರನು ಆಚರಿಸುವನೆಂದು ಇಂದ್ರನ ಮಹಿಮೆಯು ಇಲ್ಲಿ ವಿವೃತವಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ತಾ**—ತಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಅಥವಾ ಲಿಂಗವ್ಯತ್ಯಯ.

**ಅಗುಃ**—ಇಣ್ ಗತೌ. ಧಾತು. ಲುಙ್. ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಲುಙಿಚ** (ಪಾ. ಸೂ. ೨-೪-೪೩) ಎಂಬುದರಿಂದ ಧಾತುವಿಗೆ ಗಾದೇಶ. **ಗಾತಿಸ್ಥಾಘುಪಾ**—(ಪಾ.ಸೂ. ೨-೪-೭೭) ಎಂಬುದರಿಂದ ಚ್ಲಿಗೆ ಸಿಚ್ ಬಂದಾಗ ಅದಕ್ಕೆ ಲುಕ್. **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಝಿಗೆ ಜುಸಾದೇಶ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. ಅದಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನಭಃ**—ಣಭ ಹಿಂಸಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಬಹುವಚನಾಂತರೂಪ.

**ಭಿನತ್**—ಭಿದಿರ್ ವಿದಾರಣೇ. ಧಾತು ಲಙ್ ಮಧ್ಯಮಪುರುಷ ಏಕವಚನದಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ತಿಪ್ ಪ್ರತ್ಯಯ ಬರುತ್ತದೆ. **ಇತಶ್ಚ** ಎಂಬುದರಿಂದ ಇಕಾರಲೋಪ. **ರುಧಾದಿಭ್ಯಃ ಶ್ನಮ್** ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಬಹುಲಂ ಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಬರುತ್ತದೆ.

**ಭಿದಃ**—ಪೂರ್ವೋಕ್ತ ಧಾತುವಿಗೆ ಕ್ವಿಪ್ ಪ್ರತ್ಯಯ. ದ್ವಿತೀಯಾ ಬಹುವಚನಾಂತರೂಪ.

**ಅದೇವೀಃ**—ನಞ್ ತತ್ಪುರುಷ ಸಮಾಸ. ದ್ವಿತೀಯಾ ಬಹುವಚನಾಂತರೂಪ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನನಮಃ**—ಣಮು ಪ್ರಹ್ವತ್ವೇ ಶಬ್ದೇ ಚ. ಅಂತರ್ಭಾವಿತಣ್ಯರ್ಥಕ ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರಲೋಪ. ಶಪ್ ವಿಕರಣ. ವ್ಯತ್ಯಯದಿಂದ ಧಾತುವಿಗೆ ದ್ವಿತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುವಿನಸ್ವರ ಉಳಿಯುತ್ತದೆ.

**ಪೀಯೋಃ**—ಪಾ ಪಾನೇ. ಧಾತು. **ಖರು ಶಂಕು ಪೀಯು**—(ಉ. ಸೂ. ೧-೩೬) ಎಂಬುದರಿಂದ ಕು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಷಷ್ಠ್ಯಂತರೂಪ. ॥ ೮ ॥



॥ ಸಂಹಿತಾಪಾಠಃ ॥

ತ್ವಂ ಧುನಿರಿಂದ್ರ ಧುನಿಮತೀರೃಣೋರಪಃ ಸೀರಾ ನ ಸ್ರವಂತೀಃ ।

ಪ್ರ ಯತ್ಸಮುದ್ರಮತಿ ಶೂರ ಪರ್ಷಿ ಪಾರಯಾ ತುರ್ವಶಂ ಯದುಂ ಸ್ವಸ್ತಿ ॥ ೯ ॥

॥ ಪದಪಾಠಃ ॥

**ತ್ವಂ । ಧುನಿಃ । ಇಂದ್ರ । ಧುನಿऽಮತೀಃ । ಋಣೋಃ । ಅಪಃ । ಸೀರಾಃ । ನ । ಸ್ರವಂತೀಃ ।**

**ಪ್ರ । ಯತ್ । ಸಮುದ್ರಂ । ಅತಿ । ಶೂರ । ಪರ್ಷಿ । ಪಾರಯ । ತುರ್ವಶಂ । ಯದುಂ । ಸ್ವಸ್ತಿ ॥ ೯ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಧುನಿಃ ಕಂಪಯಿತಾ ಶತ್ರೂಣಾಮಸಿ । ಅತೋ ಧುನಿಮತೀಃ ಕಂಪನೋಪೇತತರಂಗವತೀಃ । ಅಥವಾ । ಧುನಿರ್ನಾಮ ಜಲಪ್ರತಿರೋಧಕಾರ್ಯಸುರಃ । ಸ ಏವ ಪ್ರತಿಬಂಧಕತಯಾ ಯಾಸಾಂ ತಾದೃಶೀಃ । ಅಪ ಋಣೋಃ । ಅಗಮಯಃ । ಭೂಮಾವಪಾತಯಃ । ತತ್ರ ದೃಷ್ಟಾಂತಃ । ಸ್ರವಂತೀಃ ಪ್ರವಹಂತೀಃ ಸೀರಾ ನ । ನದೀನಾಮೈತತ್ । ಸರಣವತೀರ್ನದೀರಿವ । ತದ್ವತ್ಸಂತತಾ ಇತ್ಯರ್ಥಃ । ಏವಂ ಕೃತ್ವಾ ಹೇ ಶೂರ ಯದ್ಯದಾ ಸಮುದ್ರಮತಿ ಪರ್ಷಿ ಅತಿಕ್ರಮ್ಯ ಪೂರಯಸ್ಯುದಕಂ ತದಾನೀಂ ತುರ್ವಶಂ ಯದುಮುಭಾವಪಿ ರಾಜರ್ಷೀ ಸ್ವಸ್ತ್ಯವಿನಾಶಂ ಪಾರಯ । ಅಪಾಲಯಃ ಸಂಪೂರ್ಣಜಲವರ್ಷಣೇನ । ತಥಾ ಚ ಮಂತ್ರಾಂತರಂ । ತ್ವಮಪೋ ಯದವೇ ತುರ್ವಶಾಯಾರಮಯಃ । ಋ ೫-೩೧.೮. । ಇತಿ ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಧುನಿಃ (ಅಸಿ)**— (ಶತ್ರುಗಳನ್ನು ಭಯದಿಂದ) ನಡುಗಿಸುವವನಾಗಿದ್ದೀ (ಆದುದರಿಂದ) । **ಧುನಿಮತೀಃ**— ಅಲೆಗಳಿಂದ ಕೂಡಿರುವ ಅಥವಾ ಧುನಿನಾಮಕ ಅಸುರನೇ ಪ್ರತಿಬಂಧಕನಾಗಿ ಉಳ್ಳ । **ಅಪಃ**— ಉದಕಗಳನ್ನು । **ಸ್ರವಂತೀಃ**— ಪ್ರವಹಿಸುವ । **ಸೀರಾಃ ನ**—ನದಿಗಳಂತೆ (ಸತತವಾಗಿ)। **ಋಣೋಃ**—ಹೊರಡಿಸಿದೆ (ಭೂಮಿಯಮೇಲೆ ಬೀಳಿಸಿದೆ) (ಹೀಗೆಯೆಮಾಡಿ)। **ಶೂರ**-ಎಲೈ ಶೂರನೇ । **ಯತ್**— ಯಾವಾಗ । **ಸಮುದ್ರಂ**—ಸಮುದ್ರವನ್ನು । **ಪ್ರ ಅತಿ ಪರ್ಷಿ**— ಅತಿಕ್ರಮಿಸಿ ತುಂಬುತ್ತೀಯೋ । **(ತದಾ**—ಆಗ) । **ತುರ್ವಶಂ**—ತುರ್ವಶನೆಂಬ ಮತ್ತು । **ಯದುಂ**—ಯದುವೆಂಬ (ರಾಜರನ್ನು) । **ಸ್ವಸ್ತಿ**— ನಾಶಹೊಂದದಂತೆ । **ಪಾರಯ** –ರಕ್ಷಿಸಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಶತ್ರುಗಳಿಗೆ ನಡುಕವುಂಟುಮಾಡುತ್ತೀಯೇ; ಇಂತಹ ನೀನು ಉದಕಗಳನ್ನು ಪ್ರತಿಬಂಧಿಸುತ್ತಿದ್ದ ಧುನಿನಾಮಕ ಅಸುರನನ್ನು ವಧಿಸಿ, ಉದಕಗಳನ್ನು ಪ್ರವಾಹರೂಪವಾಗಿ ಹೊರಡಿಸಿ, ಅದರಿಂದ ಸಮುದ್ರವನ್ನು ಪೂರ್ಣಮಾಡಿ, ತುರ್ವಶ ಮತ್ತು ಯದುಗಳೆಂಬ ಇಬ್ಬರು ರಾಜರಿಗೆ ಮಂಗಳವನ್ನುಂಟುಮಾಡಿದೆ.

## English Translation.

You, Indra, are the terrifier (of your foes); you have made the trembling waters overspread (the earth) like flowing rivers : but, hero, when you fill the ocean, you have protected in their well-being Turvasha and Yadu.

॥ ವಿಶೇಷವಿಷಯಗಳು ॥

**ಧುನಿಃ— ಕಂಪಯಿತಾ ।** ಇಂದ್ರನು ಶತ್ರುಗಳನ್ನು ನಡುಗಿಸುವವನಾಗಿರುವನು ಎಂದು ವರ್ಣಿಸಿದೆ. **ಧೂಞ್ ಕಂಪನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಧುನಿ ಎಂಬ ಪದವು **ಧುನಿಃ ಧುನೋತೇಃ** (ನಿ. ೫-೧೨) ಎಂದು ವ್ಯಾಖ್ಯಾತವಾಗಿದೆ. ಧುನಯಃ ಎಂದು ನದೀನಾಮಗಳಲ್ಲಿ (ನಿ. ೨-೨೪) ಪಠಿತವಾಗಿದೆ.

**ಧುನಿಮತೀಃ ಅಪಃ ಋಣೋಃ— ಕಮ್ಪನೋಪೇತತರಂಗವತೀಃ । ಅಥವಾ ಜಲಪ್ರತಿರೋಧಕಾರೀ ಅಸುರಃ ಸ ಏವ ಪ್ರತಿಬಂಧಕತಯಾ ಯಾಸಾಂ ತಾದೃಶೀಃ ಅಪಃ ಭೂಮಾವಪಾತಯಃ ।** ಉದಕಗಳು ಪ್ರವಹಿಸುವಾಗ ಅಲುಗಾಡುವುದರಿಂದ ತೆರೆಗಳಿಂದ ಕೂಡಿದವುಗಳಾಗಿ ಧುನಿಮತ್ಯಃ ಎಂಬುದಾಗಿ ವ್ಯವಹರಿಸಲ್ಪಡುತ್ತವೆ. ಅಥವಾ ಉದಕವನ್ನು ಪ್ರವಹಿಸದಂತೆ ತಡೆಯುವ ಅಸುರನಿಗೆ ಧುನಿ ಎಂದು ಹೆಸರು ಇರುವುದರಿಂದ ಪ್ರವಾಹಪ್ರತಿಬಂಧಕನಾದ ಧುನಿಯನ್ನು (ಧುನಿ ಎಂಬ ಅಸುರನನ್ನು) ಹೊಂದಿರುವ ಉದಕಗಳು ಧ್ಯುನಿಮತ್ಯಃ ಎಂದು ವ್ಯಪದಿಷ್ಟಗಳಾಗುತ್ತವೆ. ಈ ಪ್ರಕಾರದಿಂದ ಇರುವ ಉದಕಗಳಲ್ಲಿ ಇರುವ ಪ್ರತಿಬಂಧಕಭಾವವನ್ನು ನಾಶಗೊಳಿಸಿ ಭೂಮಿಯಲ್ಲಿ ಉದಕಗಳು ಪ್ರವಹಿಸುವಂತೆ ಇಂದ್ರನು ಮಾಡಿರುವನು ಎಂದು ಅರ್ಥವನ್ನು ವಿವರಿಸಿದೆ.

**ಸ್ರವಂತೀಃಸೀರಾ ನ— ಸರಣವತೀರ್ನದೀರಿವ । ತದ್ವತ್ಸಂಗತಾಃ । ಸ್ರವಂತ್ಯಃ** ಎಂಬ ಪದವು ನದೀನಾಮಗಳಲ್ಲಿ (ನಿ. ೨-೨೪) ಉಕ್ತವಾಗಿದೆ. ನ ಎಂಬ ಪದವು ಇಲ್ಲಿ ಉಪಮಾವಾಚಕವಾಗಿ ಪ್ರಯುಕ್ತವಾಗಿದೆ. ಉದಕಗಳು ಒಟ್ಟಾಗಿ ಸೇರಿ ಹರಿಯುವ ನದಿಗಳ ಹಾಗೆ ಪ್ರವಹಿಸುತ್ತವೆ ಎಂದು ಹೋಲಿಸಿ ಹೇಳಿದೆ.

ಇಂದ್ರನನ್ನು ಶೂರ ಎಂಬ ಪದದಿಂದ ಸಂಬೋಧಿಸಿ **ಯತ್ ಸಮುದ್ರಮತಿಪರ್ಷಿ ತುರ್ವಶಂ ಯದುಂ ಸ್ವಸ್ತಿ ಪಾರಯ । ಯದಾ ಸಮುದ್ರಮತಿಕ್ರಮ್ಯ ಉದಕಂ ಪೂರಯಸಿ ತದಾನೀಂ ತುರ್ವಶಂ ಯದುಂ ಉಭಾವಪಿ ರಾಜರ್ಷೀ ಸಂಪೂರ್ಣಜಲವರ್ಷಣೇನ ಅವಿನಾಶಂ ಅಪಾಲಯಃ ।** ಇಂದ್ರನು ಸಮುದ್ರವೂ ತುಂಬಿ ಹರಿಯುವಂತೆ ಉದಕಗಳಿಂದ ಸಮುದ್ರವನ್ನು ತುಂಬಿಸಿದಾಗ ಯದು ತುರ್ವಶ ಎಂಬ ರಾಜರ್ಷಿಗಳು ಇಬ್ಬರೂ ಅತಿವೃಷ್ಟಿಯಿಂದ ಸಂತೋಷಪಡುವಂತೆ ಮಾಡಿ ಅವರನ್ನು ರಕ್ಷಿಸಿರುವನೆಂದು ಅರ್ಥವನ್ನು ವರ್ಣಿಸಿದೆ. ಇದೇ ಅರ್ಥವು— **ತ್ವಮಪೋ ಯದವೇ ತುರ್ವಶಾಯಾರಮಯಃ** (ಋ. ಸಂ. ೫-೩೧-೮) ಎಂಬ ಮಂತ್ರದಿಂದ ಸಾಯಣರು ಉದಾಹರಿಸಿದ್ದಾರೆ.

ನಿರುಕ್ತಕಾರರು ಸ್ವಸ್ತಿ ಎಂಬ ಶಬ್ದದ ಅರ್ಥವನ್ನು ಋಗುದಾಹರಣಪೂರ್ವಕವಾಗಿ ವಿವರಿಸಿದ್ದಾರೆ.

**ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸಚಸ್ವಾ ನಃ ಸ್ವಸ್ತಯೇ ।**

(ಋ. ಸಂ. ೧-೧-೯)

ಇಲ್ಲಿ ಸ್ವಸ್ತಿ ಎಂಬ ಪದವು **ಸ್ವಸ್ತೀತಿ ಅವಿನಾಶಿನಾಮ ಅಸ್ತಿರಭಿಪೂಜಿತಃ ಸು ಅಸ್ತೀತಿ ।** ಎಂದು ವ್ಯಾಖ್ಯಾತವಾಗಿದೆ. ಅಸ್ತಿ ಎಂಬ ಪದವು ಪೂಜಿಸು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಸು ಎಂಬ ಉಪಸರ್ಗವು (ಸೇರಿ) ಸಂಬಂಧವಾಗಿ ಸು ಅಸ್ತಿ ಸ್ವಸ್ತಿ ಎಂದು ರೂಪವಾಗಿದೆ. ಅವಿನಾಶಿ— ನಾಶರಹಿತವಾದುದು ಎಂದು ಅರ್ಥವನ್ನು ವಿವರಿದೆ ಎಂದು ದುರ್ಗಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ. ಮತ್ತು

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**
**ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ।**
(ಋ. ಸಂ. ೧೦-೬೩-೧೬)

ಸ್ವಸ್ತಿ ಎಂಬುದಾಗಿ ಪ್ರಸಿದ್ಧವಾದ ಒಂದು ದೇವತೆಯು ಅಂತರಿಕ್ಷದಲ್ಲಿ ವಾಸಮಾಡುತ್ತಿರುವ ಕಾರಣ ಮಧ್ಯಸ್ಥಾನ ದೇವತೆಯೆಂದೂ, ಆ ದೇವಿಯ ಮಹಿಮೆಯನ್ನು ಈ ಋಕ್ಕಿನಲ್ಲಿ ಈ ರೀತಿ ವರ್ಣಿಸಿದೆ.

**ಸ್ವಸ್ತಿರೇವ ಹಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತೀ ಧನವತ್ಯಭ್ಯೇತಿ ಯಾ ವಸೂನಿ ವನನೀಯಾನಿ ಸಾ ನೋಽಮಾ ಗೃಹೇ ಸಾ ನಿರಮಣೇ ಸಾ ನಿರ್ಗಮನೇ ಪಾತು ಸ್ವಾವೇಶಾ ಭವತು ದೇವೀ ಗೋಪ್ತ್ರೀ ದೇವಾನ್ ಗೋಪಾಯತ್ವಿತಿ ದೇವಾ ಏನಾಂ ಗೋಪಾಯಂತ್ವಿತಿ ವಾ ।**
(ನಿ. ೧೧-೪೮)

ಇದಕ್ಕೆ ದುರ್ಗಾಚಾರ್ಯರು—ಸ್ವಸ್ತಿದೇವಿಯು ಅಂತರಿಕ್ಷದಲ್ಲಿ ಎಲ್ಲಾ ದೇವತೆಗಳಿಗಿಂತಲೂ ಪ್ರಶಂಸಾರ್ಹಳಾಗಿದ್ದಾಳೆ. ಸರ್ವರಿಗೂ ಧನವನ್ನು ತುಂಬಿಕೊಂಡಿರುವವರಂತೆ ಅತ್ಯವಶ್ಯಕವಾಗಿರುವ ಉದಕದಿಂದ ಕೂಡಿದವಳಾಗಿ ಯಾವಾಗಲೂ ಸಂಚರಿಸುತ್ತಾಳೆ. ಅರಣ್ಯದಲ್ಲಿಯೂ, ಮನೆಯಲ್ಲಿಯೂ ವಾಸಮಾಡುತ್ತಿರುವ ನಮ್ಮನ್ನು ಆ ದೇವಿಯು ರಕ್ಷಿಸಲಿ. ನಾವು ಸುಖವಾಗಿ ಸಂಚರಿಸುವಹಾಗೆ ನಮ್ಮನ್ನು ರಕ್ಷಿಸಲಿ. ಈ ದೇವಿಯು ದೇವತೆಗಳ ಉದ್ದೇಶದಿಂದ ಅರ್ಪಿಸುವ ಹವಿಸ್ಸುಗಳನ್ನೂ ದೇವತೆಗಳನ್ನೂ ನಮ್ಮನ್ನೂ ರಕ್ಷಿಸಲಿ. ದ್ಯುಸ್ಥಾನದಲ್ಲಿರುವ ಮಾಧ್ಯಮಿಕರಾದ ದೇವತೆಗಳೂ ಅಥವಾ ರಶ್ಮಿಗಳೂ ಕೂಡ ಈ ದೇವಿಯನ್ನು ರಕ್ಷಿಸಲಿ ಎಂಬ ಅರ್ಥವನ್ನು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಧುನಿಃ**—ಧುಞ್ ಕಂಪನೇ. ಧಾತು. ಸ್ವಾದಿ. ಕರ್ತರಿಯಲ್ಲಿ ಔಣಾದಿಕ ನಿ ಪ್ರತ್ಯಯ.

**ಧುನಿಮತೀಃ**—ಧುನಿಃ ಆಸಾಂ ಸಂತಿ ಇತಿ ಧುನಿಮತ್ಯಃ ತಾಃ. ಮತುಪ್ ಪ್ರತ್ಯಯ ಬಂದಾಗ ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್.

**ಋಣೋಃ**—ಋಣು ಗತೌ. ಧಾತು. ತನಾದಿ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರ ಲೋಪ. **ತನಾದಿಕೃಞ್ಭ್ಯ ಉಃ** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. ಸಿಪ್ ನಿಮಿತ್ತವಾಗಿ ಅದಕ್ಕೆ ಗುಣ. ಪ್ರತ್ಯಯಕ್ಕೆ ರುತ್ವ ವಿಸರ್ಗ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಅಪಃ**—ದ್ವಿತೀಯಾ ಬಹುವಚನಾಂತರೂಪ. **ಊಡಿದಂ ಪದಾ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸೀರಾಃ**—ಷಿಞ್ ಬಂಧನೇ ಧಾತು. **ಶುಸಿಚಿಮೀನಾಂ ದೀರ್ಘಶ್ಚ** (ಉ. ಸೂ ೨-೧೮೩) ಎಂಬುದರಿಂದ ಕ್ರನ್ ಪ್ರತ್ಯಯ. ಧಾತುವಿಗೆ ದೀರ್ಘ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಶೂರ ಎಂಬುದೂ ಇದೇ ಸೂತ್ರದಿಂದ ಸಿದ್ಧವಾಗುತ್ತದೆ.

**ಸ್ರವಂತೀಃ**—ಸ್ರು ಗತೌ ಧಾತು. ಲಟಿಗೆ ಶತ್ರಾದೇಶ ಬಂದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ದ್ವಿತೀಯಾ ಬಹುವಚನಾಂತರೂಪ. ಙೀಪ್ ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಪರ್ಷಿ**—ಪೄ ಪಾಲನಪೂರಣಯೋಃ ಧಾತು. ಕ್ರ್ಯಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ.

**ಪಾರಯ**—ಪೂರ್ವೋಕ್ತವಾದ ಧಾತುವಿಗೆ **ಹೇತುಮತಿ ಚ** ಎಂಬುದರಿಂದ ಣಿಚ್. **ಅಚೋಞ್ಣಿತಿ** ಎಂಬುದರಿಂದ ಋಕಾರಕ್ಕೆ ವೃದ್ಧಿ. ರ ಪರವಾಗಿ ಬರುತ್ತದೆ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಅತೋಹೇಃ** ಎಂಬುದರಿಂದ ಹಿಗೆ ಲುಕ್. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ. ॥ ೯ ॥



॥ ಸಂಹಿತಾಪಾಠಃ ॥

**ತ್ವಮ॒ಸ್ಮಾಕ॑ಮಿಂದ್ರ ವಿ॒ಶ್ವಧ॑ ಸ್ಯಾ ಅ॒ವೃಕ॑ತಮೋ ನ॒ರಾಂ ನೃ॑ಪಾ॒ತಾ ।**

**ಸ ನೋ॒ ವಿಶ್ವಾ॑ಸಾಂ ಸ್ಪೃ॒ಧಾಂ ಸ॑ಹೋ॒ದಾ ವಿ॒ದ್ಯಾಮೇ॒ಷಂ ವೃ॒ಜನಂ॒ ಜೀ॒ರದಾ॑ನುಂ ॥**

॥ ಪದಪಾಠಃ ॥

**ತ್ವಂ । ಅ॒ಸ್ಮಾಕ॑ಂ । ಇ॒ಂದ್ರ॒ । ವಿ॒ಶ್ವಧ॑ । ಸ್ಯಾಃ । ಅ॒ವೃಕ॑ಽತಮಃ । ನ॒ರಾಂ । ನೃ॒ಽಪಾ॒ತಾ ।**

**ಸಃ । ನಃ॒ । ವಿಶ್ವಾ॑ಸಾಂ । ಸ್ಪೃ॒ಧಾಂ । ಸ॒ಹಃ॒ಽದಾಃ । ವಿ॒ದ್ಯಾಮ॑ । ಇ॒ಷಂ । ವೃ॒ಜನ॑ಂ । ಜೀ॒ರಽದಾ॑ನುಂ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಸ್ಮಾಕಂ ವಿಶ್ವಧ ವಿಶ್ವಸ್ಮಿನ್ನಪಿ ಕಾಲೇ ವಿಶ್ವಪ್ರಕಾರೈರ್ವಾವೃಕತಮಃ । ಛೇದ್ಯಾ । ದಾತೃತಮ ಇತ್ಯರ್ಥಃ । ಸ್ಯಾಃ । ಭವ । ತಥಾ ನರಾಂ ನೃಪಾತಾಸ್ಮದೀಯಾನಾಂ ಪುತ್ರಭೃತ್ಯಾದಿರೂಪಾಣಾಂ ಬಹೂನಾಂ ಮನುಷ್ಯಾಣಾಂ ರಕ್ಷಕೋ ಭವ । ಅಪರೋಕ್ಷ ಪ್ರತ್ಯಕ್ಷೋ ಭವನ್ ಸುನಾದಃ । ಚ ಸ ತ್ವಂ ವಿಶ್ವಾಸಾಂ ಸ್ಪೃಧಾಂ ಸರ್ವಾಸಾಂ ಸ್ಪರ್ಧಾನಿಮಿತ್ತಾನಾಮಸ್ಮತ್ಸೇನಾನಾಂ ಸಹೋದಾಸ್ತಾಸಾಮರ್ಥಾಯ್ಯೈ ಬಲಸ್ಯ ದಾತಾ ಭವ । ವಿದ್ಯಾಮೇತಿ ಗತಂ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತ್ವಂ**— ನೀನು । **ಅಸ್ಮಾಕಂ**—ನಮಗೆ । **ವಿಶ್ವಧ**—ಸಮಸ್ತಕಾಲಗಳಲ್ಲಿಯೂ (ಸಮಸ್ತವಿಧವಾಗಿ) । **ಅವೃಕತಮಃ**—ರಕ್ಷಕರಲ್ಲಿ (ದಾತೃಗಳಲ್ಲಿ) ಅತಿಶ್ರೇಷ್ಠನು । **ಸ್ಯಾಃ**—ಆಗು । (**ತಥಾ**— ಹಾಗೆಯೇ) । **ನರಾಂ ನೃಪಾತಾ**—ನಮ್ಮ ಪುತ್ರಭೃತ್ಯಾದಿ ನರರ ರಕ್ಷಕನೂ (ಆಗು) । (**ಕಿಂಚ**—ಮತ್ತೂ) **ಸಃ**—ಅಂತಹ ನೀನು । **ನಃ**— ನಮ್ಮ । **ವಿಶ್ವಾಸಾಂ**—ಸಮಸ್ತವಾದ । **ಸ್ಪೃಧಾಂ**—ಸ್ಪರ್ಧಾನಿಮಿತ್ತಕವಾದ ನಮ್ಮ ಸೇನೆಗೆ । **ಸಹೋದಾಃ** (**ಸ್ಯಾಃ**)—ಬಲದಾಯಕನಾಗು। (**ವಯಂ**—ನಾವೂ)। **ಇಷಂ**—ಅನ್ನವನ್ನು । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ನಿನ್ನನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ಸಮಸ್ತಕಾಲಗಳಲ್ಲಿಯೂ ಸಮಸ್ತವಿಧದಲ್ಲಿಯೂ ವಿಶೇಷವಾಗಿ ರಕ್ಷಿಸುವವನು ನೀನೇ; ನೀನೇ ನಮ್ಮ ಪುತ್ರಭೃತ್ಯಾದಿಗಳನ್ನೂ ರಕ್ಷಿಸು; ನಮ್ಮ ಸೇನೆಗಳಿಗೆಲ್ಲಾ ಬಲದಾನಮಾಡು; ನಮಗೆ ಆಹಾರ, ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸು.

## English Translation.

Be Indra, at all times our especial defender, the preserver of our people, the bestower of strength upon all these our emulous (followers); that we may obtain food, strength, and long life.

॥ ವಿಶೇಷವಿಷಯಗಳು ॥

**ವಿಶ್ವಧ ಅವೃಕತಮಃ ಸ್ಯಾಃ— ವಿಶ್ವಸ್ಮಿನ್ ಕಾಲೇ ವಿಶ್ವಪ್ರಕಾರೈರ್ವಾ ದಾತೃತಮಃ ಭವ ।** ಇಂದ್ರನನ್ನು ಸಂಬೋಧಿಸಿ, ಅವನು ಸರ್ವಕಾಲದಲ್ಲಿಯೂ, ಸರ್ವಪ್ರಕಾರದಿಂದಲೂ ಯಜಮಾನರಾದ ನಮ್ಮ ವಿಷಯದಲ್ಲಿ ಸೌಮ್ಯನಾಗಿರುವಂತೆಯೂ, ನಮ್ಮ ಸತ್ಯಸ್ವಭಾವವನ್ನು ತಿಳಿಯುವವನಾಗಿಯೂ, ನಮ್ಮ ಯಾಗವನ್ನು ಸರಿಯಾಗಿರುವಂತೆ ತಿಳಿಯುವನಾಗಿಯೂ, ಅಥವಾ ನಮ್ಮ ವಿಷಯದಲ್ಲಿ ಅನುಗ್ರಹವನ್ನು ಆಚರಿಸುವವನಾಗಿಯೂ, ಇರಲಿ ಎಂದು ಆಶಿಸಿದೆ. ನಿರುಕ್ತಕಾರರು,

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇನೋಽವಂತು ಪಿತರೋ ಹವೇಷು ॥**

(ಋ. ಸಂ. ೧೦-೧೫-೧)

ಈ ಋಕ್ಕನ್ನು ಉದಹರಿಸಿ **ಅವೃಕಾ ಅನಮಿತ್ರಾಃ ಸತ್ಯಜ್ಞಾ ವಾ, ಯಜ್ಞಜ್ಞಾ ವಾ** ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ದುರ್ಗಾಚಾರ್ಯರು, **ಅನಮಿತ್ರಾಃ ಸಾಮ್ಯಮುಪಗತಾಃ** ತಮ್ಮನ್ನು ಆಶ್ರಯಿಸಿರುವವರ ವಿಷಯದಲ್ಲಿ ಒಂದೇ ವಿಧವಾದ ರೀತಿಯಿಂದ ಇರುವವರು, ಸತ್ಯವನ್ನೂ ಯಜ್ಞವನ್ನೂ ತಿಳಿಯುವವರು, ಎಂದು ಅವೃಕ ಶಬ್ದದ ಅರ್ಥವನ್ನು ವರ್ಣಿಸಿದ್ದಾರೆ. ಇಂದ್ರನು ಅವೃಕತಮನಾಗಿರಲಿ ಎಂದು ಆಶಿಸಿದೆ.

**ನರಾಂ ನೃಪಾತಾ—ಅಸ್ಮದೀಯಾನಾಂ ಪುತ್ರಭೃತ್ಯಾದಿರೂಪಾಣಾಂ ಬಹೂನಾಂ ಮನುಷ್ಯಾಣಾಂ ಸರ್ವದಾ ರಕ್ಷಕೋ ಭವ ।** ಯಜಮಾನರಾದ ನಮಗೆ ಸಂಬಂಧಪಟ್ಟಿರುವ (ಪುತ್ರರು) ಮಕ್ಕಳು, ದಾಸರು ಇವರೇ ಮೊದಲಾದ ರೂಪದಿಂದ ಇರುವ ನಮ್ಮ ಜನರನ್ನು ಇಂದ್ರನು ಯಾವಾಗಲೂ ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

**ವಿಶ್ವಾಸಾಂ ಸ್ಪೃಧಾಂ ಸಹೋದಾಃ— ಸರ್ವಸಾಂ ಸ್ಪರ್ಧಾನಿಮಿತ್ತಾನಾಂ ಅಸ್ಮತ್ಸೇನಾನಾಂ ಅರ್ಥಾಯ ಬಲಸ್ಯ ದಾತಾ ಭವ ।** ಪರಸ್ಪರವಾಗಿ ವರ್ಧಿಷ್ಣುಗಳಾಗಿರುವ ಯಜಮಾನರಾದ ನಮ್ಮ ಸಹಾಯಕರಿಗೆ ಅವರ ಅಭಿವೃದ್ಧಿಯು ಹೆಚ್ಚುವುದಕ್ಕಾಗಿ ಇಂದ್ರನು ಬಲವನ್ನು ಪ್ರಭೂತವಾಗಿ ಉಂಟುಮಾಡಲಿ ಎಂದು ಅಶಂಸಿಸಿದೆ.

**ವಿದ್ಯಾಮೇಷಂ ವೃಜನಂ ಜೀರದಾನುಂ** ಎಂಬ ವಾಕ್ಯವು ಹಿಂದೆ ಎರಡು ಮೂರುಕಡೆಗಳಲ್ಲಿಯೂ, ಇಂದ್ರನ ಅನುಗ್ರಹದಿಂದ ಅನ್ನವನ್ನೂ ಬಲವನ್ನೂ ದಾನಮಾಡುವ ಶಕ್ತಿಯನ್ನೂ ಹೊಂದೋಣವೆಂದು ಆಶಿಸಿದೆ ಎಂದು ಅರ್ಥಮಾಡಿ ವಿವೃತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವಧ**—ವಿಶ್ವ ಶಬ್ದ. ಇದಕ್ಕೆ ತಸಿಲ್ ಪ್ರತ್ಯಯ. **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಲೋಪ. ತಕಾರಕ್ಕೆ ಧಕಾರಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅವೃಕತಮಃ**—ನಾಸ್ತಿ ವೃಕಃ ಅಸ್ಮಿನ್ ಇತಿ ಅವೃಕಃ. ಬಹುವ್ರೀಹಿಯಲ್ಲಿ **ನಞ್ ಸುಭ್ಯಾಮ್** ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಇದರ ಮೇಲೆ **ಅತಿಶಾಯನೇತಮಬಿಷ್ಠನೌ** ಎಂಬುದರಿಂದ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ನೃಪಾತಾ**—ಇಲ್ಲಿ ನೃ ಶಬ್ದ ಪೂರ್ವಾರ್ಥವನ್ನು ಅನುವಾದ ಮಾಡುತ್ತದೆ. ಪಾ ರಕ್ಷಣೇ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸ್ಪೃಧಾಮ್**—ಸ್ಪರ್ಧ ಸಂಘರ್ಷೇ ಧಾತು. ಕ್ವಿಪ್ ಪ್ರತ್ಯಯ. ಛಾಂದಸವಾಗಿ ಋಕಾರಕ್ಕೆ ಸಂಪ್ರಸಾರಣವೂ ಅಕಾರಲೋಪವೂ ಬರುತ್ತವೆ. ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೦ ॥

ಇಲ್ಲಿಗೆ ನೂರ ಎಪ್ಪತ್ತನಾಲ್ಕನೇ ಸೂಕ್ತ ಮುಗಿದುದು.



# ನೂರ ಎಪ್ಪತ್ತೈದನೆಯ ಸೂಕ್ತವು

**ಮತ್ಸ್ಯಪಾಯೀತಿ ಷಡೃಚಮೇಕಾದಶಂ ಸೂಕ್ತಮಾಗಸ್ತ್ಯಮೈಂದ್ರಂ । ಆದ್ಯಾ ಸ್ಕಂಧೋಗ್ರೀವೀ ಬೃಹತೀ ದ್ವಿತೀಯಪಾದಸ್ಯ ದ್ವಾದಶಾಕ್ಷರತ್ವಾದಿತರೇಷಾಂ ತ್ರಯಾಣಾಮಷ್ಟಾಕ್ಷರತ್ವಾಚ್ಚ । ದ್ವಿತೀಯಶ್ಚೇನ್ನ್ಯಂಕುಸಾರಿಣ್ಯುರೋಬೃಹತೀ ವಾ ಸ್ಕಂಧೋಗ್ರೀವೀ ವಾ । ಅನು. ೭.೩. । ಇತ್ಯುಕ್ತಲಕ್ಷಣಸದ್ಭಾವಾತ್ । ಅಂತ್ಯಾ ತ್ರಿಷ್ಟುಪ್ । ಶಿಷ್ಟಾಸ್ತಿಸ್ರೋಽನುಷ್ಟುಭಃ । ತ್ರಿಷ್ಟುಬಂತೇ ಪರಿಭಾಷಯಾ ಆನುಷ್ಟುಭಂ ತ್ವಿತಿ ವಿಶೇಷವಚನೇನಾಪೋದಿತತ್ವಾದನುಷ್ಟುಭಃ । ಮತ್ಸಿ ಷಳಾನುಷ್ಟುಭಂ ತು ತ್ರಿಷ್ಟುಬಂತಂ ತ್ವಾದ್ಯಾ ಸ್ಕಂಧೋಗ್ರೀವೀತ್ಯನುಕ್ರಾಂತಂ ॥ ದ್ವಿತೀಯೇ ಸ್ವರಸಾಮ್ನ್ಯಾದ್ಯಸ್ತೃಚಃ ಸ್ತೋತ್ರಿಯಃ । ಅಭಿಜಿದ್ಬೃಹತ್ಪೃಷ್ಠ ಇತಿ ಖಂಡೇ ಸೂತ್ರಿತಂ । ಮತ್ಸ್ಯಪಾಯಿ ತೇ ಮಹ ಏನೋನಂ ಪ್ರತ್ಯೇತೇನ । ಆ. ೮ ೫. । ಇತಿ ॥**

ಅನುವಾದವು—**ಮತ್ಸ್ಯಪಾಯಿ ತೇ** ಎಂಬ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ— **ಆದ್ಯಾ ಸ್ಕಂಧೋಗ್ರೀವೀ ಬೃಹತೀ ದ್ವಿತೀಯಪಾದಸ್ಯ ದ್ವಾದಶಾಕ್ಷರತ್ವಾದಿತರೇಷಾಂ ತ್ರಯಾಣಾಮಷ್ಟಾಕ್ಷರತ್ವಾಚ್ಚ । ದ್ವಿತೀಯಶ್ಚೇನ್ನ್ಯಂಕುಸಾರಿಣ್ಯುರೋ ಬೃಹತೀ ವಾ ಸ್ಕಂಧೋಗ್ರೀವೀ ವಾ** ಎಂದು ಹೇಳಿರುವುದು (ಅನುಕ್ರ. ೭–೩) ಎಂದರೆ, ಮೊದಲನೆಯ ಋಕ್ಕಿನಲ್ಲಿ ಮೊದಲನೆಯ ಪಾದಕ್ಕೆ ೧೨ ಅಕ್ಷರಗಳೂ ಉಳಿದ ಮೂರು ಪಾದಗಳಿಗೆ ಎಂಟೆಂಟು ಅಕ್ಷರಗಳೂ ಇರುವುದರಿಂದ ಛಂದಶ್ಶಾಸ್ತ್ರಪ್ರಕಾರ ಇಂತಹ ಋಕ್ಕಿಗೆ **ಸ್ಕಂಧೋಗ್ರೀವೀ ಬೃಹತೀ** ಅಥವಾ **ಉರೋಬೃಹತೀ** ಎಂಬ ಛಂದಸ್ಸಿನ ಋಕ್ಕೆಂದು ಹೆಸರು. ಅಥವಾ ಎರಡನೆಯ ಪಾದದಲ್ಲಿ ೧೨ ಅಕ್ಷರಗಳಿದ್ದು ಉಳಿದ ಪಾದಗಳಲ್ಲಿ ಎಂಟೆಂಟು ಅಕ್ಷರಗಳಿದ್ದರೆ ಅದಕ್ಕೆ **ನ್ಯಂಕುಸಾರಿಣೀ ಬೃಹತೀ** ಛಂದಸ್ಸೆಂದು ಹೆಸರು. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ **ಮತ್ಸಿ ಷಳಾನುಷ್ಟುಭಂ ತು ತ್ರಿಷ್ಟುಬಂತಂ ತ್ವಾದ್ಯಾ ಸ್ಕಂಧೋಗ್ರೀವೀ** ಎಂದು ಹೇಳಿರುವುದು. ಎರಡನೆಯ ಸ್ವರ ಸಾಮ್ನಿಯಲ್ಲಿ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳನ್ನು ಸ್ತೋತ್ರೀಯ ಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಭಿಜಿದ್ಬೃಹತ್ಪೃಷ್ಠ** ಎಂಬ ಖಂಡದಲ್ಲಿ **ಮತ್ಸ್ಯಪಾಯಿ ತೇ ಮಹ ಏನೋನಂ ಪ್ರತ್ಯೇತೇನ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮–೫)

## ಸೂಕ್ತ—೧೭೫

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೫ ॥

ಅಷ್ಟಕ – ೨ ॥ ಅಧ್ಯಾಯ—೪ ॥ ವರ್ಗ—೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—ಇಂದ್ರಃ ॥

॥ ಛಂದಃ—೧. ಸ್ಕಂಧೋಗ್ರೀವೀ ಬೃಹತೀ । ೨-೫. ಅನುಷ್ಟುಪ್ । ೬. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಮತ್ಸ್ಯಪಾಯಿ ತೇ ಮಹಃ ಪಾತ್ರಸ್ಯೇವ ಹರಿವೋ ಮತ್ಸರೋ ಮದಃ ।
ವೃಷಾ ತೇ ವೃಷ್ಣ ಇಂದುರ್ವಾಜೀ ಸಹಸ್ರಸಾತಮಃ ॥ ೧ ॥

॥ ಪದಪಾಠಃ ॥

ಮತ್ಸಿ । ಅಪಾಯಿ । ತೇ । ಮಹಃ । ಪಾತ್ರಸ್ಯಽಇವ । ಹರಿಽವಃ । ಮತ್ಸರಃ । ಮದಃ ।
ವೃಷಾ । ತೇ । ವೃಷ್ಣೇ । ಇಂದುಃ । ವಾಜೀ । ಸಹಸ್ರಽಸಾತಮಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಹರಿವೋ ಹರಿಭ್ಯಾಂ ತದ್ವನ್ನಿಂದ್ರ ಮಹೋ ಮಹಾನ್ ಪೂಜ್ಯೋಽಯಂ ಸೋಮಃ ಪಾತ್ರಸ್ಯೇವ ತತ್ಪಾತ್ರೇಣೇವ ಸೋಮಪಾತ್ರೇಣ ಯಥಾ ಧಾರ್ಯತೇ ಸೋಮಸ್ತತ್ಸದೃಶೇನ ತೇ ತ್ವಯಾ । ತೃತೀಯಾರ್ಥೇ ಷಷ್ಠೀ ।। ಯದ್ವಾ । ಪಾತ್ರಸ್ಯೇವ ತೇ. ತವ ಸ್ವಭೂತೋ ಮಹೋ ಮಹಾನ್ ಸೋಮ ಇತಿ ವಾ ಯೋಜನಾ । ಅಪಾಯಿ । ಪೀಯತೇ ॥ ಆಶಂಸಾಯಾ-ವಿವಕ್ಷಿತತ್ವಾದ್ಭೂತವತ್ಪ್ರಯೋಗಃ ॥ ಯತಃ ಪಿಬಸಿ ಅತೋ ಮತ್ಸಿ । ಮಾದ್ಯಸಿ ಮಾದಯಸ್ವ ವಾ । ಪಾತ್ರೇ ಯಥಾ ಸೋಮಃ ಪೂರ್ಯತೇ ತಥಾತ್ಯಧಿಕಂ ಪಿಬ ಪೀತ್ವಾ ಚ ಮಾದಯಸ್ವೇತ್ಯರ್ಥಃ । ಕಿಂಚ ವೃಷ್ಣೇ ತೇಽಭಿಮತವರ್ಷಿತ್ರೇ ತುಭ್ಯಂ । ಚತುರ್ಥ್ಯರ್ಥೇ ಷಷ್ಠೀ । ಮತ್ಸರೋ ಮದಸಾಧನೋ ಮದಸ್ತರ್ಪಯಿತಾ ವೃಷಾ ವರ್ಷಿತೇಂದುಃ ಕ್ಲೇದಯಿತಾ । ಆಹ್ಲಾದಕಾರೀತ್ಯರ್ಥಃ । ವಾಜ್ಯನ್ನವಾನ್ । ಅನ್ನವಾರ್ಯತೃಪ್ತಿಸದ್ಭಾವಾದನ್ನವಾನಿತ್ಯುಚ್ಯತೇ । ಸಹಸ್ರಸಾತಮೋಽಪರಿಮಿತದಾತೃತಮಃ ಸಹಸ್ರಪುರುಷಸಂಭಜನಪರ್ಯಾಪ್ತಶಕ್ತ್ಯತಿಶಯೋ ವಾ ಏವಂಮಹಾನುಭಾವಃ ಸೋಮಃ ಸಂಪಾದಿತಃ । ತಂ ಪಿಬೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಹೆ) **ಹರಿವಃ**—ಎಲೈ ಹರಿನಾಮಕ ಅಶ್ವದ್ವಯವಿಶಿಷ್ಟನಾದ ಇಂದ್ರನೇ । **ವೃಷ್ಣೇ**—ಕಾಮವರ್ಷಕನಾದ । **ತೇ**—ನಿನಗೋಸ್ಕರ । **ಮತ್ಸರಃ**—ಮದಸಾಧನವೂ । **ಮದಃ**—ತೃಪ್ತಿಕರವೂ । **ವೃಷಾ**—ಇಷ್ಟಾರ್ಥಪ್ರದವೂ । **ಇಂದುಃ**—ಕ್ಲೇದನಕಾರಿಯೂ (ಹರ್ಷಕಾರಿಯೂ) । **ವಾಜೀ**—ಅನ್ನವಿಶಿಷ್ಟವೂ (ಅನ್ನದಂತೆ ತೃಪ್ತಿಕರವೂ) । **ಸಹಸ್ರಸಾತಮಃ**—ಅಪರಿಮಿತವಾಗಿ ದಾನಮಾಡುವ ಶಕ್ತಿಯುಳ್ಳದ್ದೂ ಆದ (ಸೋಮವು ಸಂಪಾದಿತವಾಗಿದೆ) । **ಮಹಃ**—ಮಹನೀಯವಾದ ಈ ಸೋಮವು । **ಪಾತ್ರಸ್ಯ ಇವ**—ಪಾತ್ರಯಿಂದ ಹೇಗೆ ಧರಿಸಲ್ಪಡುತ್ತದೆಯೋ ಹಾಗೆ । **ತೇ**—ನಿನ್ನಿಂದ । **ಅಪಾಯಿ**—ಪಾನಮಾಡಲ್ಪಡುತ್ತದೆ । (ಅದರಿಂದ) **ಮತ್ಸಿ**—ಸಂತೋಷಪಡುತ್ತೀಯೆ.

॥ ಭಾವಾರ್ಥ ॥

ಹರಿನಾಮಕ ಅಶ್ವಯುಕ್ತನಾದ ಇಂದ್ರನೇ, ಕಾಮವರ್ಷಕವೂ, ತೃಪ್ತಿ ಮತ್ತು ಸಂತೋಷದಾಯಕವೂ, ಹರ್ಷಕಾರಿಯೂ, ಅನ್ನದಂತೆ ತೃಪ್ತಿಕರವೂ, ಅಪರಿಮಿತ ಆನಂದದಾಯಕವೂ ಆದ ಸೋಮರಸವು ನಿನಗೋಸ್ಕರ ಸಿದ್ಧವಾಗಿದೆ; ಈ ಪೂಜ್ಯನಾದ ಸೋಮವನ್ನು, ಪಾತ್ರೆಯಲ್ಲಿ ಭರ್ತಿಯಾಗಿ ತುಂಬುವಂತೆ, ಅತ್ಯಧಿಕವಾಗಿ ಪಾನಮಾಡಿ, ಅದರಿಂದ ಸಂತುಷ್ಟನಾಗು.

English Translation.

Lord of steeds, you are exhilarated when the sacred (Soma juice) has been imbibed by you as by its (appropriate) vessel; for to you, showerer (of benefits), it is exhilarating, inebiating, invigorating, the yielder of delight, (satisfying as) food, and the giver of a thousand (pleasures).

॥ ವಿಶೇಷವಿಷಯಗಳು ॥

"ದ್ವಿತೀಯೇ ಸ್ವರಸಾಮ್ನಿ................" ಎಂದು ಸಾಯಣರು ಈ ಸೂಕ್ತದಲ್ಲಿರುವ ಮಂತ್ರಗಳ ವಿನಿಯೋಗವನ್ನು ತಿಳಿಸಿದ್ದಾರೆ. ಸ್ವರಸಾಮ ದಿವಸಗಳಲ್ಲಿ ಪಠಿಸತಕ್ಕ ಮಂತ್ರಗಳೆಂದು ಇದರಿಂದ ತಿಳಿಯುತ್ತದೆ. **ಸ್ವರಸಾಮ**ವೆಂಬುದು ಕೆಲವು ಯಾಗದಿನಗಳ ಸಂಜ್ಞೆಯಾಗಿದೆ. ಆಶ್ವಲಾಯನ ಶ್ರೌತಸೂತ್ರದಲ್ಲೂ, ಅದರ ವೃತ್ತಿಯಲ್ಲೂ ಸ್ವರಸಾಮದ ನಿರ್ವಚನವನ್ನು ಈ ರೀತಿ ಹೇಳಿದೆ.

**"ಅಭಿಪ್ಲವತ್ರ್ಯಹಃ ಪೂರ್ವಃ ಸ್ವರಸಾಮಾನಃ । ಸ್ವರಾಣಿ ತ್ರಿಹ ಪೃಷ್ಠಾನಿ । ತೇಷಾಂ ಸ್ತೋತ್ರಿಯಾ ಯಜ್ಞಾ ಯಥಾ ಅಪೂರ್ವಮತ್ಸ್ಯೈಷಾಯಿ ತೇ ಮಹ...........**"

(ಆ. ಶ್ರೌ. ೮–೫)

ಎಂಬ ಆಶ್ವಲಾಯನ ಶ್ರೌತ ಸೂತ್ರಗಳಲ್ಲಿ ಹೇಳಿರುವ ವಿವರಣೆಯನ್ನು ವೃತ್ತಿಯಲ್ಲಿ ಇನ್ನೂ ವಿಶದವಾಗಿ ತಿಳಿಸಿದೆ.

**ಅಭಿಪ್ಲವಸ್ಯ ಯಃ ಪೂರ್ವಸ್ತ್ರ್ಯಹಸ್ತೇನಾತಿದಿಷ್ಟಾನಿ ವಕ್ಷ್ಯಮಾಣಗುಣವಿಶಿಷ್ಟಾನಿ ತ್ರೀಣ್ಯಹಾನಿ ಸ್ವರಸಾಮಸಂಜ್ಞಾನಿ ಭವಂತಿ। ಸ್ವರಸಂಜ್ಞಕಾನಿ ಸಾಮಾನಿ ಏತೇಷ್ವಹಸ್ಸು ಪೃಷ್ಠಾನಿ ಭವಂತಿ । ಏತದೇವೈಷು ಸ್ವರಸಾಮಶಬ್ದಸ್ಯ ಪ್ರವೃತ್ತಿನಿಮಿತ್ತಂ । ಯಥಾಸಂಖ್ಯೇನ ತೇಷಾಮೇತೇ ಸ್ತೋತ್ರಿಯಾ ಭವಂತಿ ।** (ನಾರಾಯಣಕೃತ ವೃತ್ತಿಃ).

ಅಭಿಪ್ಲವಯಾಗಕ್ಕೆ ಸಂಬಂಧಿಸಿದಂತೆ ಮೊದಲನೆಯ ಮೂರು ದಿನಗಳಿಗೆ ಸ್ವರಸಾಮವೆಂಬ ಸಂಜ್ಞೆಯಿದೆ. ಸ್ವರಸಂಜ್ಞಕಗಳಾದ ಸಾಮಗಳು ಈ ಅಹಸ್ಸುಗಳಲ್ಲಿ ಪೃಷ್ಠಸಂಜ್ಞಾತ್ಮಕಗಳಾಗುತ್ತವೆ. ಅದೇ ಸ್ವರಸಾಮ ಶಬ್ದಕ್ಕೆ ಪ್ರವೃನಿಮಿತ್ತವಾಗಿರುತ್ತದೆ ಎಂದಿದೆ. ಇದೇ ಅಂಶವನ್ನು ಐತರೇಯ ಬ್ರಾಹ್ಮಣದಲ್ಲೂ ವಿವರಿಸುತ್ತಾ ಸ್ವರಸಾಮದ ಮಹತ್ತ್ವವನ್ನು ಈ ರೀತಿ ಹೇಳಿದೆ.

**ಸ್ವರಸಾಮ್ನ ಉಪಯಂತೀಮೇ ವೈ ಲೋಕಾಃ ಸ್ವರಸಾಮಾನ ಇಮಾನ್ವೈ ಲೋಕಾನ್ ಸ್ವರಸಾಮಭಿರಸ್ಪೃಣ್ವಂಸ್ತತ್ಸ್ವರಸಾಮ್ನಾಂ ಸ್ವರಸಾಮತ್ವಂ ತದ್ಯತ್ಸ್ವರಸಾಮ್ನ ಉಪಯಂತ್ಯೇಷ್ವೇವೈನಂ ತಲ್ಲೋಕೇಷ್ವಾಭಜಂತಿ ।** (ಐ. ಬ್ರಾ. ೪–೧೯)

ಈ ಮೂರು ಲೋಕಗಳೇ ಸ್ವರಸಾಮದಿನಗಳು. ಯಜ್ಞಕರ್ತರು ಸ್ವರಸಾಮಗಳಿಂದ ಈ ಮೂರು ಲೋಕಗಳನ್ನೂ ತೃಪ್ತಿಪಡಿಸುವುದರಿಂದ ಈ ದಿನಗಳಿಗೆ ಸ್ವರಸಾಮದಿನಗಳೆಂಬ ಹೆಸರು ಪ್ರಸಿದ್ಧವಾಯಿತು. ಈ ಸ್ವರಸಾಮದಿನಗಳಲ್ಲಿ ಆಚರಿಸಬೇಕಾದ ಕರ್ಮಗಳನ್ನು ನೆರವೇರಿಸುವುದರಿಂದಲೇ ಯಜ್ಞಕರ್ತರು ಆದಿತ್ಯನನ್ನು ಮೂರುಲೋಕಗಳ ವ್ಯವಹಾರಗಳಿಗೂ ಕಾರಕನಾಗಿರುವಂತೆ ಪ್ರೇರಿಸುತ್ತಾರೆ, ಎಂದಿದೆ. ಇಲ್ಲಿರುವ ವಿವರಣೆಯನ್ನು Haug ಎಂಬ ಪಂಡಿತನು ಈ ರೀತಿ ವಿಮರ್ಶಿಸಿದ್ದಾನೆ

This etymology is certainly fanciful. Swara cannot be traced to the root ಸ್ವೃಙ್, a modification of ಪ್ರೀ to love. The name literally means "The samans of the tones" This appears to refer to some peculiarities in their intonations. These Samans being required only for great ಸತ್ರ which have been out of use for at least a thousand years, it is difficult now to ascertain the exact nature of the Samans.

(Aiteraya Brahmana. P. 290 Translation by Haug.)

**ಸ್ವೃಙ್** ಎಂದು ರೂಪಾಂತರವನ್ನು ಹೊಂದಿರುವ **ಪ್ರೀ** ಎಂಬ ಧಾತುವೇ ಈ ಪದದ ಮೂಲವೆಂದು ತೋರಿಸುವ ನಿರ್ವಚನವು ಅಷ್ಟು ಸಮರ್ಪಕವಾದುದಲ್ಲ. ಸ್ವರವಿನ್ಯಾಸದಲ್ಲಿ ಒಂದು ವೈಶಿಷ್ಟ್ಯವನ್ನು ಹೊಂದಿರತಕ್ಕದ್ದೂ ಸತ್ರಾದಿಗಳಲ್ಲಿ ಪಠಿಸತಕ್ಕದ್ದೂ ಆದ ಸಾಮಗಳಿಗೆ ಈ ಹೆಸರಿರಬೇಕು. ಸಹಸ್ರಾರು ವರ್ಷಗಳ ಹಿಂದೆ ಆಚರಿಸಲ್ಪಡುತ್ತಿದ್ದ ಯಾಗಾದಿಗಳು ಈಗ ಆಚರಣೆಯಲ್ಲಿಲ್ಲವಾದುದರಿಂದ ಆ ಕಾಲಗಳಲ್ಲಿ ಪಠಿಸಲ್ಪಡುತ್ತಿದ್ದ ಸಾಮಾದಿಗಳ ಸ್ವರೂಪವನ್ನೂ, ಸ್ವರವಿಧಾನವನ್ನು ನಿಷ್ಕೃಷ್ಟವಾಗಿ ತಿಳಿಯಲು ಸಾಧ್ಯವಿಲ್ಲವೆಂದು ಮೇಲ್ಕಂಡ ಪಂಡಿತನು ತನ್ನ ಅಭಿಪ್ರಾಯವನ್ನು ಹೇಳಿದ್ದಾನೆ. ಮತ್ತು ಸ್ವರಸಾಮಾದಿನಗಳ ಪರಿಗಣನೆಯನ್ನು ತಿಳಿಸಿ ಆದಿತ್ಯನ ಪರಿಭ್ರಮಣಾದಿ ಕಾರ್ಯಗಳಿಗೂ, ಈ ದಿನಗಳಲ್ಲೂ ಮತ್ತು ಸ್ವರಸಾಮದಿನಗಳಿಗೆ ಪೂರ್ವ ಮತ್ತು ಪರದಿನಗಳಲ್ಲೂ ನೆರವೇರತಕ್ಕ ಕರ್ಮಗಳಿಗೂ ಇರುವ ಪ್ರವೃತ್ತಿನಿಮಿತ್ತಗಳನ್ನೂ ಈ ರೀತಿ ವಿವರಿಸಿದೆ.

**ತಸ್ಯ ವೈ ದೇವಾ ಅದಿತ್ಯಸ್ಯ ಸ್ವರ್ಗಾಲ್ಲೋಕಾದವ ಪಾತಾದಬಿಭಯುಸ್ತಂ ತ್ರಿಭಿಃ ಸ್ವರ್ಗೈರ್ಲೋಕೈರವಸ್ತಾತ್ಪ್ರತ್ಯುತ್ತಭ್ನುವನ್ ಸ್ತೋಮಾ ವೈ ತ್ರಯೋ ಲೋಕಾಸ್ತಸ್ಯ ಪರಾಚೋऽತಿಪಾತಾದಬಿಭಯುಸ್ತಂ ತ್ರಿಭಿಃ ಸ್ವರ್ಗೈರ್ಲೋಕೈಃ ಪರಸ್ತಾತ್ಪ್ರತ್ಯುತ್ತಭ್ನುವನ್ ಸ್ತೋಮಾ ವೈ ತ್ರಯಃ ಸ್ವರ್ಗಾ ಲೋಕಾಸ್ತತ್ತ್ರಯೋऽವಸ್ತಾತ್ಸಪ್ತದಶಾ ಭವಂತಿ ತ್ರಯಃ ಪರಸ್ತಾನ್ಮಧ್ಯ ಏಷ ಏಕವಿಂಶ ಉಭಯತಃ ಸ್ವರಸಾಮಭಿರ್ಧೃತ ಉಭಯತೋ ಹಿ ವಾ ಏಷ ಸ್ವರಸಾಮಭಿರ್ಧೃತಸ್ತಸ್ಮಾದೇಷೋऽಂತರೇಮಾಲೋಕಾನ್ಯನ್ನ ವ್ಯಥತೇ ।**

(ಐ. ಬ್ರಾ. ೪-೮೧)

ದೇವತೆಗಳು ಆದಿತ್ಯನ ಪತನವುಂಟಾಗುವುದೆಂದು ಹೆದರಿ, ಮೂರು ಲೋಕಗಳ ಅಡಿಯಲ್ಲಿ ಒಂದು ಆಧಾರಸ್ತಂಭವನ್ನು ಆದಿತ್ಯನಿಗೆ ಆಸರೆಯನ್ನಾಗಿರಿಸಿದರು. ಸ್ವರಸಾಮಗಳೇ ಈ ಆಧಾರಸ್ತಂಭಗಳು. ಅನಂತರ ಪುನಃಪತನದಿಂದ ಬೆದರಿ, ಮೂರು ಲೋಕಗಳ ಮೇಲೂ ಸಹ ಸ್ವರಸಾಮರೂಪವಾದ ಆಧಾರಸ್ತಂಭವನ್ನು ಸ್ಥಾಪಿಸಿದರು. ಇವೇ ಈ ಮೂರು

ಲೋಕಗಳ ರೂಪದಲ್ಲಿವೆ. ವಿಷುವದ್ದಿನಕ್ಕೆ ಪೂರ್ವಭಾವಿಯಾದ ಸ್ತೋಮತ್ರಯವೂ, ಪಶ್ಚಾದ್ಭಾವಿಯಾದ ಸ್ತೋಮತ್ರಯವೂ ಸೇರಿ ಸಪ್ತದಶಸ್ತೋಮಗಳ ಸಮುದಾಯವಾಗುತ್ತದೆ. ಇವುಗಳ ಮಧ್ಯದಲ್ಲಿ ಸ್ವರಸಾಮದಿನಗಳ ಅವಲಂಬನವನ್ನು ಹೊಂದಿರುವುದೂ ಆದಿತ್ಯನನ್ನು ಪ್ರತಿಬಿಂಬಿಸತಕ್ಕದ್ದೂ ಆದ ಏಕವಿಂಶಾಹವಿರುತ್ತದೆ. ಸ್ವರಸಾಮಗಳಿಂದ ಧೃತನಾಗಿರುವುದರಿಂದ ಮೂರು ಲೋಕಗಳಲ್ಲೂ ಸಹ ಆದಿತ್ಯನ ಭ್ರಮಣಕ್ಕೆ ಯಾವ ತಡೆಯೂ ಇರುವುದಿಲ್ಲ.

**ತೇಷಾಂ ವೈ ದೇವಾಃ ಸಪ್ತದಶಾನಾಂ ಪ್ರಸ್ಲಯಾದಬಿಭಯುಃ ಸಮಾ ಇವ ವೈ ಸ್ತೋಮಾ ಅವಿಗೂಹ್ಯಾ ಇವೇಮೇ ಹ ನ ಪ್ರಸ್ಲಿಯೇರನ್ನಿತಿ ತಾನ್ ಸರ್ವೈಃ ಸ್ತೋಮೈರವಸ್ತಾತ್ಪರ್ಯಾರ್ಷನ್ ಸರ್ವೈಃ ಪೃಷ್ಠೈಃ ಪರಸ್ತಾತ್ತದ್ಯದಭಿಜಿತ್ಸರ್ವಸ್ತೋಮೋಽವಸ್ತಾದ್ಭವತಿ ವಿಶ್ವಜಿತ್ಸರ್ವಪೃಷ್ಠಃ ಪರಸ್ತಾತ್ತತ್ಸಪ್ತದಶಾನುಭಯತಃ ಪರ್ಯೃಷಂತಿ ಧೃತ್ಯಾ ಅಪ್ರಸ್ಲಯಾಯ ।**

(ಐ. ಬ್ರಾ. ೪-೧೯)

ಸ್ವರಸಾಮರೂಪದಲ್ಲಿರುವ ಈ ಸಪ್ತದಶಸ್ತೋಮಗಳೂ ಸಹ ಅವಲಂಬನವಿಲ್ಲದೇ ಪತನವನ್ನು ಹೊಂದಬಹುದೆಂಬ ಭಯದಿಂದ ದೇವತೆಗಳು ಅವುಗಳ ಅಧೋಭಾಗದಲ್ಲಿ ಸರ್ವಸ್ತೋಮಗಳಿಂದಲೂ ಮೇಲ್ಭಾಗದಲ್ಲಿ ಪೃಷ್ಠಗಳಿಂದಲೂ ಮುಚ್ಚಿದರು. ಆದುದರಿಂದಲೇ ಸ್ವರಸಾಮದಿನಗಳ ಪೂರ್ವದಿನವಾದ ಅಭಿಜಿದ್ದಿನದಲ್ಲಿ ಸರ್ವಸ್ತೋಮಗಳಿಂದಲೂ, ಅದರ ಪರದಿನವಾದ ವಿಶ್ವಜಿದ್ದಿನದಲ್ಲಿ ಪೃಷ್ಠವನ್ನೂ ಪಠಿಸುತ್ತಾರೆ. ಇವುಗಳು ಸಪ್ತದಶಸ್ತೋಮವನ್ನು ಪತನದಿಂದ ತಪ್ಪಿಸುತ್ತವೆ ಎಂಬುದಾಗಿ ಸ್ವರಸಾಮಗಳ ಮತ್ತು ಅವುಗಳಿಗೆ ಸಂಬಂಧಿಸಿದ ಸ್ತೋತ್ರಾದಿಗಳ ವೈಶಿಷ್ಟ್ಯವನ್ನು ಪ್ರಶಂಸಿಸಿದೆ. ಮತ್ತು ಇದರ ಉತ್ಪತ್ತಿಯ ಸ್ವರೂಪವನ್ನು ತಿಳಿಸುತ್ತಾ, ಶತಪಥ ಬ್ರಾಹ್ಮಣದಲ್ಲಿ,

**ತ್ರಿಷ್ಟುಭಂ ಛಂದೋ ಗ್ರೀಷ್ಮಾದೃತೋರ್ನಿರಮಿಮೀತ ತ್ರಿಷ್ಟುಭಃ ಸ್ವಾರಮಿತಿ ತ್ರಿಷ್ಟುಭಶ್ಛಂದಸಃ ಸ್ವಾರಗ್ಂಸಾಮ ನಿರಮಿಮೀತ ಸ್ವಾರಾದಂತರ್ಯಾಮ ಇತಿ।**

(ಶ. ಬ್ರಾ. ೮-೧-೧-೮)

ವಿಶ್ವಕರ್ಮನು ಗ್ರೀಷ್ಮಋತುವಿನಿಂದ ತ್ರಿಷ್ಟುಪ್ ಛಂದಸ್ಸನ್ನೂ, ತ್ರಿಷ್ಟುಪ್ ಛಂದಸ್ಸಿನಿಂದ ಸ್ವರಸಾಮವನ್ನೂ, ಸ್ವರಸಾಮದಿಂದ ಅಂತರ್ಯಾಮಗ್ರಹವನ್ನೂ ನಿರ್ಮಿಸಿದನು. ಎಂದು ತಿಳಿಸಿದೆ. ಮತ್ತು **ಗವಾಂ ಅಯನಂ** ಎಂಬ ಒಂದು ಸಂವತ್ಸರದ ಕಾಲದಲ್ಲಿ ನೆರವೇರಿಸತಕ್ಕ ಯಜ್ಞಾಚರಣೆಯಲ್ಲಿ ಸ್ವರಸಾಮದಿನಗಳು ಬಹು ಮುಖ್ಯವಾದವು. ಈ ಆಚರಣೆಗೆ ಕಾಲವಿಭಜನವು ಈ ರೀತಿಯಿದೆ.

1. ಪ್ರಾಯಣೀಯ ಅತಿರಾತ್ರಃ ಪ್ರಾರಂಭದ ದಿನ.
2. ಚತುರ್ವಿಂಶಾಹ.......ಚತುರ್ವಿಂಶಸ್ತೋಮಾತ್ಮಕವಾದದು.
3. ಪ್ರತಿಮಾಸದಲ್ಲೂ ನಾಲ್ಕು ಅಭಿಪ್ಲವಷಡಹಗಳನ್ನೂ ಒಂದು ಪೃಷ್ಠ್ಯಷಡಹವನ್ನೂ ಒಳಗೊಂಡಿರುವ ಐದು ಮಾಸಗಳು.
4. ಅಭಿಜಿದ್ದಿನವನ್ನೂ ಮೂರು ಸ್ವರಸಾಮದಿನಗಳನ್ನೂ ಒಳಗೊಂಡ ಮಾಸವು (ಆರನೆಯದು)
5. ಏಕವಿಂಶಸ್ತೋಮವನ್ನೊಳಗೊಂಡ ವಿಷುವದ್ದಿನವು.
6. ವಿಶ್ವಜಿದ್ದಿನವನ್ನೂ ಮತ್ತೆ ಮೂರು ಸ್ವರಸಾಮದಿನಗಳನ್ನೂ ಒಳಗೊಂಡ ಸಪ್ತಮ ಮಾಸವು. ಇತ್ಯಾದಿ

ಈ ರೀತಿ ಗವಾಂ ಅಯನದ ಕಾಲವಾದ ಸಂವತ್ಸರದ ಅಂಗವಾಗಿರತಕ್ಕದ್ದೂ, ಮುಖ್ಯವಾದದ್ದೂ ಆದ ಸ್ವರಸಾಮದಿನಗಳ ಉತ್ಪತ್ತಿಕ್ರಮವನ್ನೂ ಈ ರೀತಿ ವಿವರಿಸಿದೆ.

**ಸಂವತ್ಸರಾಚ್ಚತುರ್ವಿಗ್ಂಶಮಹಃ । ಬ್ರಹ್ಮಣೋऽಭಿಪ್ಲವಂ ಕ್ಷತ್ರಾತ್ಪೃಷ್ಠ್ಯಮಗ್ನೇರಭಿಜಿತ-ಮದ್ಭ್ಯಃ ಸ್ವರಸಾಮ್ನ ಆದಿತ್ಯಾದ್ವಿಷುವಂತಮುಕ್ತಾಃ ಸ್ವರಸಾಮಾನಃ ॥**

(ಶ. ಬ್ರಾ. ೧೨-೧-೨-೨)

ಸಂವತ್ಸರದಿಂದ ಚತುರ್ವಿಂಶಾಹವೂ, ಬ್ರಹ್ಮನಿಂದ ಅಭಿಪ್ಲವವೂ, ಕ್ಷತ್ರದಿಂದ ಪೃಷ್ಠ್ಯವೂ ಅಗ್ನಿಯಿಂದ ಅಭಿಜಿತ್ತೂ, ಅಪ್ಪಿನಿಂದ ಸ್ವರಸಾಮವೂ ಆದಿತ್ಯನಿಂದ ವಿಷುವದ್ದಿನವೂ ಉತ್ಪನ್ನನಾದವು. ಇವು ಸ್ವರಸಾಮದಿನಗಳ ಕ್ರಮುವನ್ನು ಹೇಳಿದಂತಾಯಿತು. ಇದಲ್ಲದೇ ಅಪ್ಪಿಗೂ ಆದಿತ್ಯನಿಗೂ ಸಂಬಂಧವಿರುವುದೆಂಬ ಅಂಶವನ್ನು ಮೇಲೆ ತಿಳಿಸಿದೆ. ಅದೇ ವಿಷಯವನ್ನು ಶತಪತಬ್ರಾಹ್ಮಣದಲ್ಲಿ ವಿವರಿಸುತ್ತಾ.

**ಅಥ ಯತ್ಸ್ವರಸಾಮ್ನ ಉಪಯಂತಿ । ಅಪ ಏವ ದೇವತಾಂ ಯಜಂತ ಆಪೋ ದೇವತಾ ಭವಂತ್ಯಪಾಗ್ಂ ಸಾಯುಜ್ಯಗ್ಂ ಸಲೋಕತಾಂ ಜಯತಿ। ಅಥ ಯದ್ವಿಷುವಂತಮುಪಯಂತಿ। ಆದಿತ್ಯಮೇವ ದೇವತಾಗ್ಂಯಜಂತ ಆದಿತ್ಯೋ ದೇವತಾ ಭವಂತ್ಯಾದಿತ್ಯಸ್ಯ ಸಾಯುಜ್ಯಗ್ಂ ಸಲೋಕತಾಂ ಜಯತ್ಯುಕ್ತಾಃ ಸ್ವರಸಾಮಾನಃ ।**

(ಶ. ಬ್ರಾ. ೧೨-೧-೨-೧೩)

ಸ್ವರಸಾಮದಿನಗಳಲ್ಲಿ ಕರ್ಮಾಚರಣೆಯನ್ನು ನೆರವೇರಿಸುವವರೆಲ್ಲಾ ಸ್ವರಸಾಮಕ್ಕೆ ಕಾರಣವೂ ಅಧಿದೇವತೆಯೂ ಆದ ಅಪ್ಪನ್ನೇ ಪೂಜಿಸುತ್ತಾರೆ. ಆ ಪೂಜೆಯ ಫಲವಾಗಿ ಅಪ್ಪಿನೊಡನೆ ಸಾಯುಜ್ಯವನ್ನು ಪಡೆಯುತ್ತಾರೆ. ಅದರಂತೆಯೇ ವಿಷುವದ್ದಿನದಲ್ಲಿ ಪೂಜೆಯನ್ನರ್ಪಿಸುವವರು ತತ್ಸಂಬಂಧಿಯಾದ ಆದಿತ್ಯನೊಡನೆ ಸಾಯುಜ್ಯವನ್ನು ಪಡೆಯುತ್ತಾರೆ. ಇದು ಸ್ವರಸಾಮಗಳ ವೈಶಿಷ್ಟ್ಯವು ಎಂದು ತಿಳಿಸಿದೆ. ಅಲ್ಲದೇ ಪುರುಷನಿಗೂ ಗವಾನಯನ ಕಾಲವಾದ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳುತ್ತಾ,

**ಪುರುಷೋ ವೈ ಸಂವತ್ಸರಃ । ತಸ್ಯ ಪಾದಾದೇವ ಪ್ರಾಯಣೀಯೋऽತಿರಾತ್ರಃ ಪಾದಾಭ್ಯಾಗ್ಂಹಿ ಪ್ರಯಂತಿ................ ॥ ೧ ॥**

**ಅಯಮೇವ ದಕ್ಷಿಣೋ ಬಾಹುರಭಿಜಿತ್ । ಇಮ ಏವ ದಕ್ಷಿಣೋ ತ್ರಯಃ ಪ್ರಾಣಾಃ ಸ್ವರಸಾ-ಮಾನೋ ಮೂರ್ಧಾ ವಿಷುವಾನಿಮ ಏವೋತ್ತರೇ ತ್ರಯಃ ಪ್ರಾಣಾಃ ಸ್ವರಸಾಮಾನಃ ॥ ೨ ॥**

(ಶ. ಬ್ರಾ. ೧೨-೧-೪-೨)

ಸಂವತ್ಸರವೇ ಪುರುಷನು, ಗವಾನಯನಕ್ಕೆ ಪ್ರಾರಂಭದಿನವಾದ (ಪ್ರಾಯಣೀಯ) ಅತಿರಾತ್ರವೇ ಅವನ ಪಾದವು. ಪಾದವು ಸಂಚಾರಸಾಧನವಾಗುವಂತೆ ಈ ಅತಿರಾತ್ರವು ಕರ್ಮನಿರ್ವಹಣರೂಪವಾದ ಸಂಚಾರಕ್ಕೆ ಸಾಧನವಾಗಿರುತ್ತದೆ........................ ಅಭಿಜಿದ್ದಿನವೇ ಅವನ ಬಲಭುಜವು. ಅಭಿಜಿದ್ದಿನಕ್ಕೆ ಸಂಬಂಧಿಸಿದ ಸ್ವರಸಾಮಗಳೇ ಅವನ ಬಲಭಾಗದ ಮೂರು ಮುಖ್ಯಪ್ರಾಣಗಳು. ವಿಷುವದ್ದಿನವೇ ಮೂರ್ಧವು. ಇದಕ್ಕೆ ಸಂಬಂಧಿಸಿದ ಸ್ವರಸಾಮಗಳೇ ಎಡಭಾಗದ ಮೂರು ಮುಖ್ಯ ಪ್ರಾಣಗಳು ಇತ್ಯಾದಿಯಾಗಿ ಪ್ರಶಂಸಿಸಿದೆ ಮತ್ತು ಸ್ವರಸಾಮದಿನಗಳಲ್ಲಿ ಗಾನ ಮಾಡತಕ್ಕ ಸ್ವರಸಾಮಗಳ ವೈಶಿಷ್ಟ್ಯವನ್ನೂ, ಗಾನಮಾಡುವ ಕ್ರಮುವನ್ನೂ ವಿಮರ್ಶಿಸುತ್ತಾ, Eggling ಎಂಬ ಆಂಗ್ಲ ಪಂಡಿತನು ಈ ರೀತಿ ಹೇಳಿದ್ದಾನೆ.

'ಸ್ವಾರಸಾಮನ್' is called a chanted verse which has no special concluding ನಿಧನ or finale, but in which the ಸ್ವರಿತ (circumflex), or first rising then falling pitch of the final vowel, takes the plan of the finale; whence ಸ್ವಾರ is often explained by ಸ್ವರನಿಧನ i. e, having the ಸ್ವರಿತ for its ನಿಧನ. In ಪಂಚವಿಂಶಬ್ರಾಹ್ಮಣ (IX. 3. 11) the ಸ್ವಾರಸಾಮನ್ is prescribed in case the Udgatris have previously committed an excess in their chanting...........In Latyayana Srauta Sutra (VI. 9. 6) Svara samans thus treated are called ಪದಾನುಸ್ವಾರಾಣಿ whilst those with which the musical syllables "ಹಾ ಇ" are used with a similar effect, are called ಹಾಯಿಕಾರಸ್ವರಾಣಿ.......... .............''

(Sacred Books of the East. Vol. XLIII. P. 6-7)

ಪ್ರಕೃತವಾದ "ಮತ್ಸ್ಯಪಾಯಿ.........." ಎಂಬ ಮಂತ್ರವುಳ್ಳ ಸೂಕ್ತವನ್ನು ವಿಷುವದ್ದಿನಕ್ಕೆ ಸಂಬಂಧಿಸಿದ (ಎರಡನೇ ಭಾಗದ) ಸ್ವರಸಾಮದಿನಗಳಲ್ಲಿ ಪಠಿಸತಕ್ಕದ್ದೆಂದು "ಮತ್ಸ್ಯಪಾಯಿ ತೇ ಮಹ ಏಮೇನಂ ಪ್ರತ್ಯೈತನ" ಎಂಬ ಸೂತ್ರದಲ್ಲಿ ಆಶ್ವಲಾಯನರು (ಆಶ್ವ. ಶ್ರೌ. ೮-೫) ತಿಳಿಸಿದ್ದಾರೆ.

**ಹರಿವಃ**—ಎಂಬ ಪದದಿಂದ ಇಂದ್ರನನ್ನು ಸಂಬೋಧಿಸಿದೆ. **ಹರೀ ಇಂದ್ರಸ್ಯ** (ನಿ. ೨-೨೮) ಎಂದು ಪಾಠ ಮಾಡಿದೆ. ಇಂದ್ರನ ವಾಹನಗಳಿಗೆ ಹರೀ ಎಂದು ಹೆಸರು ಇರುವ ಕಾರಣ ಸಾಯಣರು **ತದ್ವನ್ ಇಂದ್ರ** ಎಂದು ವ್ಯಾಖ್ಯಾನಮಾಡಿದ್ದಾರೆ.

**ಪಾತ್ರಸ್ಯೇವ ತೇ ಅಪಾಯಿ—ಸೋಮಪಾತ್ರೇಣ ಯಥಾ ಧಾರ್ಯತೇ ಸೋಮಃ ಯದ್ವಾ ಪಾತ್ರಸ್ಯೇವ ತೇ ತವ ಸ್ವಭೂತೋ ಮಹಾನ್ ಸೋಮ ಇತಿ ವಾ ಯೋಜನಾ** | ಪಾತ್ರಸ್ಯೇವ ಎಂಬ ಪದಕ್ಕೆ ಸೋಮಪಾತ್ರೆಯಿಂದ ಸೋಮರಸವು ತುಂಬಿ ಧರಿಸಲ್ಪಟ್ಟಿರುವಹಾಗೆ ಎಂದು ತೃತೀಯಾಂತವಾದ ಒಂದು ವಿಧವಾದ ಅರ್ಥವನ್ನೂ; **ಮಹಃ** ಎಂಬ ಪದವೂ ಪೂಜ್ಯವೆಂಬ ಅರ್ಥಬೋಧಕವಾಗಿರುವಂತೆ ಪ್ರಭೂತ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿರುವುದರಿಂದ ಮಹಃ ಎಂಬ ಪದಕ್ಕೆ ಪ್ರಭೂತವೆಂಬ ಅರ್ಥವನ್ನು ವರ್ಣಿಸಿದೆ. ಪಾತ್ರ ಶಬ್ದಕ್ಕೆ ಅರ್ಹನೆಂದು ಅರ್ಥವನ್ನು ಹೇಳಿದೆ. ಸೋಮಪಾನಾರ್ಹನಾದ ಇಂದ್ರನಿಗೆ ಸ್ವಭೂತವಾಗಿರುವ ಪ್ರಭೂತವಾದ ಸೋಮರಸವು ಪಾನಮಾಡುವುದಕ್ಕಾಗಿ ಅರ್ಪಿತವಾಗಿರುವಕಾರಣ ಇಂದ್ರನು ಸೋಮವನ್ನು ಪಾನಮಾಡಲಿ ಎಂದು ಆಶಂಸಿಸಿದೆ.

**ಮತ್ಸಿ—ಮಾದ್ಯಸಿ ಮಾದಯಸ್ವ ವಾ | ಪಾತ್ರೇ ಯಥಾ ಸೋಮಃ ಪೂರ್ಯತೇ ತಥಾ ಅತ್ಯಧಿಕಂ ಪಿಬ ಪೀತ್ವಾ ಚ ಮಾದಯಸ್ವ** | ಸೋಮಪಾನಮಾಡುವ ಪಾತ್ರೆಯಲ್ಲಿ ಸೋಮರಸವು ತುಂಬಿರುವಂತೆ, ಇಂದ್ರನು ಪ್ರಭೂತವಾಗಿ ಅದನ್ನು ಪಾನಮಾಡಿ, ಮದವನ್ನು ಹೊಂದಲಿ ಎಂಬ ಆಶಂಸೆಯು ವರ್ಣಿತವಾಗಿದೆ.

ಸೋಮರಸವು **ಮತ್ಸರಃ**—ಮದವನ್ನು ಉಂಟುಮಾಡುವುದರಲ್ಲಿ ಸಾಧನವಾದದ್ದು, **ಮದಃ**—ಸಂತೋಷವನ್ನು ಉಂಟುಮಾಡುವುದು, **ವರ್ಷಿತಾ**—ಬಲವನ್ನು ಹೆಚ್ಚಿಸುವುದು, **ಇಂದುಃ**—ಆಹ್ಲಾದವನ್ನು ವೃದ್ಧಿಮಾಡುವುದು, ಎಂದು ಸೋಮದ ಗುಣಗಳನ್ನು ವರ್ಣಿಸಿದೆ.

**ವಾಜೀ**—ಅನ್ನವು ತೃಪ್ತಿಜನಕವಾದುದರಿಂದ ಅನ್ನವಾನ್ ಎಂದೂ, **ಸಹಸ್ರಸಾತಮಃ**–ಅಪರಿಮಿತವಾಗಿ ದಾನಮಾಡುವ ಶಕ್ತಿಯನ್ನು ಅಥವಾ ಸಹಸ್ರ ವೀರರನ್ನು ತಡೆಯುವ ಪ್ರಭೂತವಾದ ಶಕ್ತಿಯನ್ನು ವೃದ್ಧಿ ಮಾಡುವುದೆಂದೂ ಸೋಮರಸಪ್ರಭಾವವು ವಿವೃತವಾಗಿದೆ. ಈ ಪ್ರಭಾವದಿಂದ ಕೂಡಿರುವ ಸೋಮರಸವನ್ನು ಇಂದ್ರನು ಪಾನಮಾಡಲಿ ಎಂದು ಆಶಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮತ್ಸಿ**—ಮದ ತೃಪ್ತಿಯೋಗೇ. ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಖರಿಚ** ಎಂಬುದರಿಂದ ದಕಾರಕ್ಕೆ ಚರ್ತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅಪಾಯಿ**—ಪಾ ಪಾನೇ. ಧಾತು. **ಆಶಂಸಾಯಾಂ ಭೂತವಚ್ಚ** (ಪಾ. ಸೂ. ೩–೩–೧೩೨) ಎಂಬುದರಿಂದ ಭೂತಕಾಲ ಪ್ರತ್ಯಯ ಲುಙ್ ಬರುತ್ತದೆ. (ಕರ್ಮಣಿ) ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಆತೋಯುಕ್ ಚಿಣ್ ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ತ ಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಪೂರ್ವದಲ್ಲಿ ತಿಙಂತವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಪಾತ್ರಸ್ಯ ಇವ—ಸುಪಾಂ ಸುಪೋ ಭವಂತಿ** ಎಂಬ ವಾಕ್ಯದಿಂದ ತೃತೀಯಾರ್ಥದಲ್ಲಿ ಷಷ್ಠೀ ಬಂದಿದೆ.

**ಮತ್ಸರಃ**—ಮದೀ ಹರ್ಷೇ. ಧಾತು. **ಕೃಧೂಮದಿಭ್ಯಃ ಕಿತ್** (ಉ. ಸೂ. ೩–೩೫೩) ಎಂಬುದರಿಂದ ಸರ ಪ್ರತ್ಯಯ. **ಖರಿ ಚ** ಸೂತ್ರದಿಂದ ಧಾತು ದಕಾರಕ್ಕೆ ತಕಾರಾದೇಶ. **ಚಿತ್** ಎಂದು ಹಿಂದಿನ ಸೂತ್ರದಿಂದ ಅನುವೃತ್ತ ವಾಗುವುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮದಃ**—ಪೂರ್ವೋಕ್ತವಾದ ಧಾತುವಿಗೆ ಬಹುಲಗ್ರಹಣದಿಂದ ಕರ್ತರಿಯಲ್ಲಿ **ಮದೋನುಪಸರ್ಗೇ** (ಪಾ. ಸೂ. ೩-೩-೬೭) ಎಂಬುದರಿಂದ ಅಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಇಂದುಃ**—ಉಂದೀ ಕ್ಲೇದನೇ. ಧಾತು. **ಉಂದೇರಿಚ್ಚಾದೇಃ** (ಉ. ಸೂ. ೧–೨) ಉನ್ ಪ್ರತ್ಯಯ. ಧಾತುವಿನ ಆದಿಗೆ ಇಕಾರಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಹಸ್ರಸಾತಮಃ**— ಸಹಸ್ರಂ ಸನುತೇ ದದಾತಿ ಇತಿ ಸಹಸ್ರಸಾಃ ಷಣು. ದಾನೇ. ಧಾತು. **ಜನಸನಖನ ಕ್ರಮಗಮೋ ವಿಟ್** (ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೯-೪-೪೧) ಎಂಬುದರಿಂದ ಧಾತುವಿನ ನಕಾರಕ್ಕೆ ಆತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಇದರ ಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಆ ನಸ್ತೇ ಗಂತು ಮತ್ಸರೋ ವೃಷಾ ಮದೋ ವರೇಣ್ಯಃ ।
ಸಹಾವಾಁ ಇಂದ್ರ ಸಾನಸಿಃ ಪೃತನಾಷಾಳಮರ್ತ್ಯಃ ॥ ೨ ॥

॥ ಪದಪಾಠಃ ॥

ಆ । ನಃ । ತೇ । ಗಂತು । ಮತ್ಸರಃ । ವೃಷಾ । ಮದಃ । ವರೇಣ್ಯಃ ।
ಸಹಸ್ವಾನ್ । ಇಂದ್ರ । ಸಾನಸಿಃ । ಪೃತನಾಷಾಟ್ । ಅಮರ್ತ್ಯಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವಾಂ ನೋಽಸ್ಮದೀಯೋ ಮತ್ಸರೋ ಮರ್ಷಣಸಾಧನಃ ಸೋಮ ಆ ಗಂತು । ಆಗಚ್ಛತು । ಕೀದೃಶೋಽಯಂ । ವೃಷಾ ವರ್ಷಕಃ ಮದಸ್ತೃರ್ಪಯಿತಾ ವರೇಣ್ಯೋ ವರಣೀಯಃ ಸಹಾವಾನ್ ಸಹಾಯವಾನ್ ಸಹಸಾ ಬಲೇನ ತದ್ವಾನ್ವಾ ಸಾನಸಿಃ ಸಂಭಜನೀಯಃ ಪೃತನಾಷಾಟ್ ಶತ್ರುಸೇನಾಯಾ ಅಭಿಭವಿತಾ ಅಮರ್ತೋಽವಿನಾಶೀ । ಈದೃಶಃ ಸೋಮಸ್ತ್ವಾಮಾಗಚ್ಛತು । ಯದ್ವಾ । ಉತ್ತರಾರ್ಧ ಇಂದ್ರಪರತಯಾ ವ್ಯಾಖ್ಯೇಯಃ । ಹೇ ಇಂದ್ರ ಸಹಾವಾನಸ್ಮದ್ದತ್ತಸೋಮಸಹಾಯವಾನ್ ಬಲವಾನ್ವಾ ಸಾನಸಿರಸ್ಮಾಭಿಃ ಸಂಭಜನೀಯಃ ಪೃತನಾಷಾಡಮರ್ತ್ಯಶ್ಚ ಭವಸಿ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮದಾದ । **ವೃಷಾ**—ಕಾಮವರ್ಷಕವೂ । **ಮದಃ**—ತೃಪ್ತಿಕರವೂ । **ವರೇಣ್ಯಃ**—ಅಪೇಕ್ಷಣೀಯವೂ । **ಸಹಾವಾನ್**—ಸಹಾಯ (ಬಲ) ವಿಶಿಷ್ಟವೂ । **ಸಾನಸಿಃ**—ಅನುಭೋಗ್ಯವೂ । **ಪೃತನಾಷಾಟ್**—ಶತ್ರುನಾಶಕವೂ ಮತ್ತು । **ಅಮರ್ತ್ಯಃ**—ಅವಿನಾಶಿಯೂ ಆದ । **ಮತ್ಸರಃ**—ಮದಸಾಧನವಾದ ಸೋಮರಸವು । **ತೇ**—ನಿನ್ನನ್ನು । **ಆ ಗಂತು**—ಸೇರಲಿ । [ಅಥವಾ **ನಃ ವೃಷಾ, ಮದಃ, ವರೇಣ್ಯಃ**—ಕಾಮವರ್ಷಕವೂ, ತೃಪ್ತಿಕರವೂ, ವರಣೀಯವೂ । **ಮತ್ಸರಃ**—ಮದಸಾಧನವೂ ಆದ ನಮ್ಮಿಂದ ಅರ್ಪಿತವಾದ ಸೋಮರಸವು । **ತೇ ಆ ಗಂತು**—ನಿನ್ನನ್ನು ಸೇರಲಿ (ಅದನ್ನು ಪಾನಮಾಡಿ ನೀನು) । **ಸಹಾವಾನ್**—ಬಲಶಾಲಿಯೂ । **ಸಾನಸಿಃ**—ನಮ್ಮಿಂದ ಪ್ರಾಪ್ಯನೂ । **ಪೃತನಾಷಾಟ್**—ಶತ್ರುನಾಶಕನೂ । **ಅಮರ್ತ್ಯಃ**—ಅವಿನಾಶಿಯೂ (ಆಗುತ್ತೀಯೆ).]

॥ ಭಾವಾರ್ಥ ॥

ಎಲೈ ಇಂದ್ರನೇ, ಕಾಮವರ್ಷಕವೂ, ತೃಪ್ತಿಕರವೂ, ಅಪೇಕ್ಷಣೀಯವೂ, ಮದಸಾಧನವೂ ಆದ ಸೋಮರಸವು ನಮ್ಮಿಂದ ಅರ್ಪಿತವಾಗಿ ನಿನ್ನನ್ನು ಸೇರುತ್ತದೆ; ಅದನ್ನು ಪಾನಮಾಡಿ ನೀನು, ಬಲಶಾಲಿಯೂ, ನಮ್ಮಿಂದ ಪ್ರಾಪ್ಯನೂ, ಶತ್ರುನಾಶಕನೂ, ಅವಿನಾಶಿಯೂ ಆಗು.

## English Translation.

May our Soma libation reach you, (for it is) exhilarating, invigorating, inebriating, most precious: it is companionable, Indra, enjoyable, the overthrower of hosts, immortal.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮತ್ಸರಃ, ವೃಷಾ, ಮದಃ, ವರೇಣ್ಯಃ, ಸಹಾವಾನ್, ಸಾನಸಿಃ, ಪೃತನಾಷಾಟ್ ಅಮರ್ತ್ಯಃ ಎಂಬ ಪದಗಳು ಸೋಮರಸಕ್ಕೆ ವಿಶೇಷಣಗಳಾಗಿ ಪ್ರಯುಕ್ತವಾಗಿರುತ್ತವೆ ಎಂದು ವರ್ಣಿಸಿದೆ. ಈ ಪದಗಳ ಅರ್ಥವು ಹಿಂದಿನ ಋಕ್ಕಿನಲ್ಲಿಯೇ ವಿವೃತವಾಗಿರುವುದರಿಂದ ಇಲ್ಲಿ ಅರ್ಥವನ್ನು ವಿವರಿಸಿಲ್ಲ.

**ಪೃತನಾಷಾಟ್**—ಪೃತನಾಃ ಎಂಬ ಪದವು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಸಂಗ್ರಾಮಗಳಲ್ಲಿ ಯುದ್ಧವನ್ನು ಮಾಡುವವರು ಸೇನಾಜನಗಳಾದುದರಿಂದ ಇಲ್ಲಿ ಶತ್ರುಸೇನೆ ಎಂದು ಅರ್ಥವನ್ನು ವಿವರಿಸಿದೆ. ಶತ್ರುಸೇನೆಯನ್ನು ಜಯಿಸುವ ಸಾಮರ್ಥ್ಯವನ್ನು ಸೋಮವು ಉಂಟುಮಾಡುವುದೆಂದು, **ಶತ್ರುಸೇನಾಯಾಃ ಅಭಿಭವಿತಾ,** ಎಂಬ ವ್ಯಾಖ್ಯಾನವು ವರ್ಣಿತವಾಗಿದೆ.

ಈ ಪದವು ಇಂದ್ರನಿಗೆ ವಿಶೇಷಣವಾಗಿದ್ದು ಇಂದ್ರನ ವೈಶಿಷ್ಟ್ಯವನ್ನು ವರ್ಣಿಸುವುದೆಂದು ರೂಢವಾದ ವ್ಯವಹಾರಾರ್ಥದಲ್ಲಿರುತ್ತದೆ. ಆದರೆ ಋಕ್ಸಂಹಿತೆಯಲ್ಲಿ ಇದು ಕೇವಲ ಇಂದ್ರನಿಗೆ ಮಾತ್ರ ವಿಶೇಷಣವಾಗಿರದೆ ಅಗ್ನ್ಯಾದಿ ದೇವತೆಗಳಿಗೂ ವಿಶೇಷಣವಾಗಿದ್ದು ಅವರ ಪರಾಕ್ರಮವನ್ನೂ ಸೂಚಿಸುತ್ತದೆ. ಉದಾಹರಣೆಗೆ—

**ಕೃಣೋತ ಧೂಮಂ ವೃಷಣಂ ಸಖಾಯೋಽಸ್ರೇಧಂತ ಇತನ ವಾಜಮಚ್ಛ ।**
**ಅಯಮಗ್ನಿಃ ಪೃತನಾಷಾಟ್ ಸುವೀರೋ ಯೇನ ದೇವಾಸೋ ಅಸಹಂತ ದಸ್ಯೂನ್ ॥**
(ಋ. ಸಂ ೩-೨೯-೯)

ಎಂಬಲ್ಲಿ **ಪೃತನೋಪಲಕ್ಷಿತಂ ಯುದ್ಧಂ ಸಹಮಾನಃ** ಎಂದು ಅಗ್ನಿಯ ಪರಾಕ್ರಮವನ್ನು ತಿಳಿಸುತ್ತದೆ. ಮತ್ತು **ವ್ಯಾಪ್ರಿಯಂತೇ ಅತ್ರ ಯೋದ್ಧಾರಃ ಇತಿ ಪೃತನಾಃ ಸಂಗ್ರಾಮಾಃ ।** ಯೋಧರು ಸೇರಿ ಗುಂಪುಕಟ್ಟಿಕೊಳ್ಳುವ ಸ್ಥಾನವಾದುದರಿಂದ ಯುದ್ಧಕ್ಕೆ ಪೃತನಾ ಎಂಬ ಹೆಸರೆಂದು ಒಂದು ಕಡೆಯೂ (ಋ. ಸಂ. ೩-೪೯-೨), ಅಲ್ಲದೇ,

**ಇಮಂ ನರೋ ಮರುತಃ ಸಶ್ಚತಾ ವೃಧಂ ಯಸ್ಮಿನ್ರಾಯಃ ಶೇವೃಧಾಸಃ ।**
**ಅಭಿ ಯೇ ಸಂತಿ ಪೃತನಾಸು ದೂಢ್ಯೋ ವಿಶ್ವಾಹಾ ಶತ್ರುಮಾದಭುಃ ॥**
(ಋ. ಸಂ. ೩-೧೬-೨)

ಎಂಬಲ್ಲಿ **ಪೃತನಾಸು ಸೇನಾಸು ತದುಪಲಕ್ಷಿತೇಷು ಸಂಗ್ರಾಮೇಷು** ಎಂದು ಇನ್ನೊಂದು ಕಡೆಯೂ ಸಾಯಣರು ಈ ಶಬ್ದದ ನಿರ್ವಚನವನ್ನು ತಿಳಿಸಿದ್ದಾರೆ. ನಿರುಕ್ತಕಾರರು ಈ ಪದವನ್ನು **ಸಂಗ್ರಾಮ** ನಾಮಗಳಲ್ಲಿ ಸೇರಿಸಿದ್ದಾರೆ, (ನಿ. ೩-೯) ಇಂತಹ ಶತ್ರುಸೈನ್ಯಗಳಿಂದ ಕೂಡಿದ ಸಂಗ್ರಾಮಗಳಲ್ಲಿ ತನ್ನ ಶಕ್ತಿಯನ್ನು ತೋರಿಸುತ್ತ ಶತ್ರುಬಲವನ್ನು ಸಹಿಸುವವನಾದುದರಿಂದ ಇಂದ್ರನಿಗಾಗಲಿ ಅಥವಾ ಅಗ್ನಿಗಾಗಲಿ ಈ ವಿಶೇಷಣವಿರುವುದು ಸಹಜವಾಗಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಸೋಮನಿಗೆ ವಿಶೇಷಣವಾಗಿದೆ.

**ಮತ್ಸರಃ—** ಈ ಪದಕ್ಕೆ ಮದಹೇತುವೆಂದು ಒಂದರ್ಥವೂ, ಮಾತ್ಸರ್ಯವಂತಃ ಎಂದು ಇನ್ನೊಂದು ಅರ್ಥವೂ ಸಾಧ್ಯವಾಗುತ್ತದೆ. ನಿರುಕ್ತಕಾರರೂ ಸಹ ಈ ಪದಕ್ಕೆ ಎರಡು ಅರ್ಥಗಳನ್ನೂ ಹೇಳಿದ್ದಾರೆ.

**ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣಃ** (ನಿ. ೨–೨೫)

ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ **ಮಂದ್** ಧಾತುವಿನಿಂದ ನಿಷ್ಪನ್ನವಾಗಿ ಸೋಮರಸಕ್ಕೆ ಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆಯೆಂದೂ, **ಮತ್ಸರ ಇತಿ ಲೋಭ ನಾಮ** । ಅತ್ಯಾಶೆಯನ್ನೂ ಅಹಮಹಮಿಕೆಯನ್ನೂ ತೋರಿಸತಕ್ಕದ್ದಾದುದರಿಂದ **ಮತ್ಸರವೆಂಬ** ಹೆಸರೆಂದೂ ಈ ಪದಕ್ಕೆ ನಿರುಕ್ತಕಾರರ ನಿರ್ವಚನವಿದೆ. ಪ್ರಕೃತವಾದ ಋಕ್ಕಿನಲ್ಲಿ ಮದಹೇತುವೆಂದಾಗಲಿ ಅಥವಾ ಇತರ ಯಜ್ಞಗಳ ಸೋಮರಸಗಳೊಂದಿಗೆ ಸ್ಪರ್ಧಿಸಿ ಉತ್ಕೃಷ್ಟವಾಗಿದೆಯೆಂದಾಗಲಿ ಅರ್ಥವಾಗುತ್ತದೆ.

ಈ ಪದಗಳಿಗೆ ಭಾಷ್ಯದಲ್ಲಿ ಹೀಗೆ ಅರ್ಥವನ್ನು ವರ್ಣಿಸಿ **ಉತ್ತರಾರ್ಧಃ ಇಂದ್ರಪರತಯಾ ವ್ಯಾಖ್ಯೇಯಃ** ಉತ್ತರಾರ್ಧವು ಇಂದ್ರನ ಪರವಾಗಿಯೂ ವ್ಯಾಖ್ಯಾನಮಾಡುವುದರಲ್ಲಿ ಉಚಿತವಾಗಿದೆ ಎಂದು ವಿವರಿಸಿದೆ.

ಇದರಿಂದ ಹೇ ಇಂದ್ರ ಎಂದು ಇಂದ್ರನನ್ನು ಸಂಬೋಧಿಸಿ, ಇಂದ್ರನು—**ಅಸ್ಮದ್ದತ್ತಸೋಮಸಹಾಯವಾನ್,** ಯಜಮಾನರು ಅರ್ಪಿಸಿದ ಸೋಮರಸದ ಸಹಾಯವುಳ್ಳವನು ಎಂದೂ, ಅಥವಾ **ಬಲವಾನ್**—ಬಲವುಳ್ಳವನೆಂದೂ, **ಸಾನಸಿಃ—**ಯಜಮಾನರಿಂದ ಹೊಂದಲರ್ಹನಾಗಿರುವನೆಂದೂ, **ಪೃತನಾಷಾಢಮರ್ತ್ಯಶ್ಚ**—ಯುದ್ಧಗಳನ್ನು ಆಚರಿಸಿ, ಶತ್ರುಸೇನೆಗಳನ್ನು ತಿರಸ್ಕರಿಸುವ ಶಕ್ತಿಯುಳ್ಳವನು ಮತ್ತು ಮರಣಧರ್ಮರಹಿತನಾಗಿರುವವನು ಎಂದೂ ಇಂದ್ರನ ಪ್ರಭೂತವಾದ ಪ್ರಭಾವವನ್ನು ಇಲ್ಲಿ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಗಂತು**—ಗಮ್ಲೃ ಗತೌ ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಏರುಃ** ಎಂಬುದರಿಂದ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಧಾತು ಮಕಾರಕ್ಕೆ ಅನುಸ್ವಾರ ಪರಸವರ್ಣ. ತಿಙಂತ ನಿಘಾತಸ್ವರ ಬರುತ್ತದೆ.

**ವರೇಣ್ಯಃ**—ವೃಞ್ ವರಣೇ. ಧಾತು. **ವೃಞ ಏಣ್ಯಃ** (ಉ. ಸೂ. ೩–೩೭೮) ಎಂಬುದರಿಂದ ಏಣ್ಯ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. ವೃಷಾದಿಯಲ್ಲಿ ಸೇರಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಹವಾನ್**—ಮತುಪ್ ಬಂದಾಗ **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. **ಅನ್ಯೇಷಾಮಪಿ ದೃಶ್ಯತೇ** ಎಂಬುದರಿಂದ ಪೂರ್ವಕ್ಕೆ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಇದಕ್ಕೆ ಇಂದ್ರ ಎಂದು ಮುಂದೆ ಇರುವಾಗ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಟಿನಿತ್ಯಮ್** (ಪಾ. ಸೂ. ೮–೩–೩) ಎಂಬುದರಿಂದ ಆಕಾರಕ್ಕೆ ಅನುನಾಸಿಕ ಭಾವ ಬರುತ್ತದೆ.

**ಸಾನಸಿಃ**—ಷಣ ಸಂಭಕ್ತೌ. ಧಾತು. ಇದಕ್ಕೆ **ಸಾನಸಿಧರ್ಣಸಿ**—(ಉ. ಸೂ. ೪–೫೪೭) ಎಂಬುದರಿಂದ ಅಸಿ ಪ್ರತ್ಯಯವೂ, ವೃದ್ಧಿಯೂ, ಅಂತೋದಾತ್ತಸ್ವರವೂ ನಿಪಾತಿತವಾಗಿದೆ.

**ಪೃತನಾಷಾಟ್**—ಷಹ ಮರ್ಷಣೇ. ಧಾತು. **ಛಂದಸಿಸಹಃ** (ಪಾ. ಸೂ. ೭-೨-೧೧೬) ಎಂಬುದರಿಂದ ಣ್ವಿ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೮-೩-೫೬) ಎಂಬುದರಿಂದ ಉಪಧಾವೃದ್ಧಿ. **ಸಹೇಃ ಸಾಡಃ ಸಃ** (ಪಾ. ಸೂ. ೮-೩-೫೬) ಎಂಬುದರಿಂದ ಪದಾಂತದಲ್ಲಿ ಧಾತು ಸಕಾರಕ್ಕೆ ಷತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

**ತ್ವಂ ಹಿ ಶೂರಃ ಸನಿತಾ ಚೋದಯೋ ಮನುಷೋ ರಥಂ ।**

**ಸಹಾವಾನ್ದಸ್ಯುಮವ್ರತಮೋಷಃ ಪಾತ್ರಂ ನ ಶೋಚಿಷಾ ॥ ೩ ॥**

॥ ಪದಪಾಠಃ ॥

**ತ್ವಂ । ಹಿ । ಶೂರಃ । ಸನಿತಾ । ಚೋದಯಃ । ಮನುಷಃ । ರಥಂ ।**

**ಸಹ್ಯವಾನ್ । ದಸ್ಯುಂ । ಅವ್ರತಂ । ಓಷಃ । ಪಾತ್ರಂ । ನ । ಶೋಚಿಷಾ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಖಲು ಶೂರಃ ಶೌರ್ಯೋಪೇತಃ ಸನಿತಾ ದಾತಾಸಿ । ಅತೋ ಮನುಷೋ ಮಾನುಷ್ಯಸ್ಯ ಮೇ ರಥಂ ರಂಹಣಂ ಸ್ಪಂದನಂ ಮನೋರಥಂ ವಾ ಸ್ವರ್ಗಗಮನಸಾಧನಂ ಯಜ್ಞಾಖ್ಯಂ ರಥಂ ವಾ ಚೋದಯಃ । ಪ್ರೇರಯ । ಕಿಂಚ ತ್ವಂ ಸಹಾವಾನ್ ಸೋಮಸಹಾಯವಾನ್ ಬಲವಾನ್ವಾ ಭೂತ್ವಾ ದಸ್ಯುಮುಪಕ್ಷಪಯಿತಾರಮವ್ರತಮಕರ್ಮಾಣಮನನುಷ್ಠಾಯಿನಮೋಷಃ । ದಹ । ಕಿಮಿವ । ಶೋಚಿಷಾ ದೀಪ್ತ್ಯಾ ಜ್ವಾಲಯಾಗ್ನಿಃ ಪಾತ್ರಂ ನ ಸ್ವಾಧಾರಂ ಪಾತ್ರವಿಶೇಷಮಿವ । ಯಾಗಾಧಿಕಾರೀ ಸನ್ಯೋ ನ ಯಜತೇ ತಂ ದಹೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**(ಹೇ ಇಂದ್ರ**—ಎಲೈ ಇಂದ್ರನೇ) । **ಶೂರಃ**—ಶೂರನಾದ । **ತ್ವಂ ಹಿ**—ನೀನೇ ಅಲ್ಲವೇ । **ಸನಿತಾ**—(ನಮಗೆ) ದಾತೃವಾಗಿರುವುದು । (ಆದುದರಿಂದ) **ಮನುಷಃ**—ಮನುಷ್ಯನಾದ ನನ್ನ । **ರಥಂ**—ಮನೋರಥವನ್ನು (ಸ್ವರ್ಗಗಮನಸಾಧನವಾದ ಯಜ್ಞಲಕ್ಷಣರಥವನ್ನು) । **ಚೋದಯಃ**—ಪ್ರೇರಿಸು । **(ಕಿಂಚ ತ್ವಂ**—ಮತ್ತೂ ನೀನು) । **ಸಹಾವಾನ್**— ಸೋಮಸಹಾಯವಿಶಿಷ್ಟನಾಗಿ (ಬಲಶಾಲಿಯಾಗಿ) । **ದಸ್ಯುಂ**— ಹಿಂಸಕನೂ । **ಅವ್ರತಂ**—ಕರ್ಮವಿಲ್ಲದವನೂ ಆದವನನ್ನು। **ಶೋಚಿಷಾ**—ಜ್ವಾಲೆಯಿಂದ (ಅಗ್ನಿಯು) । **ಪಾತ್ರಂ ನ**—ಸ್ವಾಧಾರವಾದ ಪಾತ್ರೆಯನ್ನು ದಹಿಸುವಂತೆ । **ಓಷಃ**—ದಹಿಸು.

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಶೂರನೂ ಮತ್ತು ನಮಗೆ ದಾತೃವೂ ಆಗಿದ್ದೀಯೆ; ಮನುಷ್ಯನಾದ ನನ್ನ ಮನೋರಥವನ್ನು ಅಥವಾ ಯಜ್ಞವನ್ನು ವರ್ಧಿಸುವಂತೆ ಪ್ರೇರಿಸು; ಮತ್ತು ಬಲಶಾಲಿಯಾದ ನೀನು (ಕರ್ಮಾಧಿಕಾರಿಯಾಗಿದ್ದು) ಕರ್ಮಾಚರಣೆ ಮಾಡದವನೂ, ಹಿಂಸಕನೂ ಆದವನನ್ನು, ಅಗ್ನಿಯು ಜ್ವಾಲೆಯಿಂದ ಸ್ವಾಧಾರಭೂತವಾದ ಪಾತ್ರೆಯನ್ನು ದಹಿಸುವಂತೆ ದಹಿಸು.

English Translation.

You are a hero, a benefactor, accelerate the vehicle of man (that bears him to heaven); consume, mighty one, the irreligious Dasyu, as a (wooden) vessel is burnt by fire.

|| ವಿಶೇಷವಿಷಯಗಳು ||

**ಸನಿತಾ—ದಾತಾ |** ಈ ಪದವು ದಾನಶೀಲನೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಅರ್ಥವನ್ನು ವಿವರಿಸಿ, ಇಂದ್ರನು ಮನುಷ್ಯನಾಗಿ ಯಜ್ಞಮಾಡುವ ಯಜಮಾನರಾದವರ **ರಥಂ—ರಂಹಣಂ, ಸ್ಪಂದನಂ, ಮನೋರಥಂ, ವಾ, ಸ್ವರ್ಗಗಮನಸಾಧನಂ ಯಜ್ಞಾಖ್ಯಂ ರಥಂ ವಾ—**ಇಷ್ಟಗಳು ನೆರವೇರುವಂತೆ ಅಥವಾ ಯಜಮಾನರು ಸ್ವರ್ಗಕ್ಕೆ ಹೋಗಲು ಸಾಧನವಾದ ಯಜ್ಞರೂಪವಾದ ರಥವು ನೆರವೇರುವಂತೆ ಪ್ರೇರಿಸಲಿ ಎಂಬ ಅರ್ಥವನ್ನು ವಿವರಿಸಿದೆ.

**ರಥಃ—**ಎಂಬ ಪದವು **ರಥೋ ರಂಹತೇರ್ಗತಿಕರ್ಮಣಃ** ಗಮನಾರ್ಥಕವಾದ ರಂಹ್ ಧಾತುವಿನಿಂದ ನಿಷ್ಪನ್ನವಾಗಿದೆ, ಅಥವಾ **ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ—**ಸ್ಥಿರ ಎಂಬ ಪದವು ವ್ಯತ್ಯಸ್ತವಾಗಿ ಪ್ರಯುಕ್ತವಾದಾಗ ರಥ ಎಂಬ ಪದವು ನಿಷ್ಪನ್ನವಾಗುವುದು, ಎಂದೂ, **ಅಥವಾ, ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ ರಪತೇರ್ವಾ ರಸತೇರ್ವಾ** (ನಿ. ೯-೧೨) ಯುದ್ಧಮಾಡುವವನು ಸುಖವಾಗಿ ಇರುವ ಸನ್ನಿವೇಶಸಾಧನವು ಎಂದೂ, ರಪ ಧಾತುವಿನಿಂದಲೂ, ಅಥವಾ ರಸ ಧಾತುವಿನಿಂದಲೂ ನಿಷ್ಪನ್ನವಾಗಿದೆ ಎಂದು ವಿವರಿಸಿದೆ.

ನಿರುಕ್ತಕಾರರು,

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ |**
**ಗೋಭಿಃ ಸಂನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ||**

(ಋ. ಸಂ. ೬-೪೭-೨೬)

ಎಂಬ ಋಕ್ಕನ್ನು ದಾಹರಿಸಿ ರಥದ ಸ್ವರೂಪವನ್ನು ತೋರಿಸಿದ್ದಾರೆ. ಆದರೆ ಗತ್ಯರ್ಥಕವಾದ **ರಂಹ್** ಧಾತುವಿನಿಂದ **ರಥ** ಶಬ್ದವು ನಿಷ್ಪನ್ನವಾಗಿರುವುದರಿಂದ ಓಡಾಡತಕ್ಕ ಪುತ್ರರಿಗೂ ಈ ಪದವು ವಿಶೇಷಣವಾಗಿ ಕೆಲವೆಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ಸ್ಯಂದನರೂಪವಾದ ಮನೋರಥವೆಂದು ಒಂದು ಬಗೆಯಾಗಿಯೂ, ಸ್ವರ್ಗಗಮನಸಾಧನವಾದುದೂ ಮತ್ತು ಯಜ್ಞರೂಪದಲ್ಲಿರತಕ್ಕದ್ದೂ ಆದ ರಥವೆಂದು ಇನ್ನೊಂದುಬಗೆಯಾಗಿಯೂ **ರಥ** ಶಬ್ದಕ್ಕೆ ಅರ್ಥವನ್ನು ಸಾಯಣರು ವಿವರಿಸಿದ್ದಾರೆ.

**ಸಹಾವಾನ್—ಸೋಮಸಹಾಯವಾನ್ ಬಲವಾನ್ ವಾ** । ಸಹಃ ಎಂಬ ಪದವು ಬಲನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ನಿರುಕ್ತಕಾರರಿಂದ—ಸಹಾವಾನ್ ಎಂಬ ಪದವು

**ತ್ಯಮೂ ಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಮ್ ।**
**ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹಾ ಹುವೇಮ ॥**

(ಋ. ಸಂ. ೧೦-೧೭೮-೧)

ಉದಾಹೃತವಾದ ಋಕ್ಕಿನಲ್ಲಿ **ಸಹಸ್ವಂತಂ** ಎಂದು ವ್ಯಾಖ್ಯಾತವಾಗಿದೆ. ದುರ್ಗಾಚಾರ್ಯರು—**ಸಹಾವಾನಂ ಸಹಃ ಬಲಂ ತೇನ ತದ್ವಂತಂ** ಸಹಶ್ಶಬ್ದಕ್ಕೆ ಬಲವೆಂದೂ, ಅದನ್ನು ಹೊಂದಿರುವವನೆಂದೂ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು ಇಲ್ಲಿ ಇಂದ್ರನು, ಸೋಮರೂಪವಾದ ಸಹಾಯವನ್ನು ಹೊಂದಿರುವನು ಅಥವಾ ಬಲವುಳ್ಳವನು ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ದಸ್ಯುಂ—ಉಪಕ್ಷಪಯಿತಾರಂ** । ಯಾಸ್ಕರು **ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ ರಸಾಃ ಉಪದಾಸಯತಿ ಕರ್ಮಾಣಿ** (ನಿ. ೭-೨೩) ಹಿಂಸೆಮಾಡು ಅಥವಾ ನಾಶಗೊಳಿಸು ಎಂಬ ಅರ್ಥವುಳ್ಳ ದಸು ಧಾತುವಿನಿಂದ ನಿಷ್ಪನ್ನವಾದ ದಸ್ಯು ಶಬ್ದದ ಪ್ರಯೋಗವು ಉದಕಗಳು ಶೋಷಿತವಾಗುವುವು, ಕರ್ಮಗಳು ನಾಶವಾಗುವುವು, ಎಂಬ ಅರ್ಥದಲ್ಲಿ ಇರುವುದೆಂದು ವ್ಯಾಖ್ಯಾನಮಾಡಿದ್ದಾರೆ. ಸಾಯಣರು ನಾಶಮಾಡುವವನು ಎಂದು ಅರ್ಥವನ್ನು ವರ್ಣಿಸಿದ್ದಾರೆ.

**ದಸ್ಯುಂ** ಎಂಬ ಈ ಪದವು **ಅವ್ರತಂ** ಎಂಬ ಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿದೆ. **ಅವ್ರತಂ** ಎಂಬ ಪದಕ್ಕೆ **ಅಕರ್ಮಾಣಂ ಅನನುಷ್ಠಾಯಿನಂ**—ಯಾಗರೂಪವಾದ ಕರ್ಮಗಳನ್ನೆಲ್ಲ ಆಚರಿಸದೇ ಎಲ್ಲವನ್ನೂ ನಾಶಮಾಡುವವನನ್ನು ಇಂದ್ರನು **ದಹ**—ನಾಶಮಾಡಲಿ ಎಂದು ಆದೇಶವೂ ಇಲ್ಲಿ ವರ್ಣಿತವಾಗಿದೆ. ಮತ್ತೂ ಈ ವಿಷಯದಲ್ಲಿ **ಶೋಚಿಷಾ ಪಾತ್ರಂನ ಜ್ವಾಲಯಾ ಅಗ್ನಿಃ ಸ್ವಾಧಾರಂ ಪಾತ್ರವಿಶೇಷಮಿವ**—ಅಗ್ನಿಯು ತನ್ನ ಜ್ವಾಲೆಯಿಂದ ತನ್ನ(ತನಗೆ) ಆಶ್ರಯವಾದ ಇಂಧನಾದಿಗಳನ್ನು ಸುಡುವಹಾಗೆ, **ಯಾಗಾಧಿಕಾರೀ ಯೋ ನ ಯಜತೇ ತಂ ದಹ** ಯಾಗವನ್ನು ಆಚರಿಸುವ ಯೋಗ್ಯತೆಯನ್ನು ಹೊಂದಿದ್ದರೂ ಯಾಗವನ್ನು ಮಾಡದೆ ಉದಾಸೀನಭಾವದಿಂದ ಇರುವವನಾದರೆ, ಅವನನ್ನೂ ಇಂದ್ರನು ನಾಶಮಾಡಲಿ ಎಂದು ಉಪಮಾನ ನಿರ್ದೇಶಪೂರ್ವಕವಾಗಿ ವಿವರಿಸಲ್ಪಟ್ಟಿದೆ.

ದೇವ ಶಬ್ದದಿಂದ ವಿಕಾಸಾತ್ಮಕವಾದುದೂ, ದ್ಯೋತನಾತ್ಮಕವಾದುದೂ ದಾನಾತ್ಮಕವಾದುದೂ (ನಿ. ೭-೧೫) ಆದ ಯಾವ ಅರ್ಥವು ತೋರುವುದೋ ಅದಕ್ಕೆಲ್ಲಾ ವಿರುದ್ಧವಾದ ಕ್ಷಯಾತ್ಮಕವಾದುದೂ, ಅಂಧಕಾರಮಯವಾದುದೂ ಮತ್ತು ಹಿಂಸಾತ್ಮಕವಾದುದೂ ಆದ ಅರ್ಥವನ್ನು ದಸ್ಯುಶಬ್ದವು ತೋರಿಸುತ್ತದೆ. ವೃತ್ರಾದಿ ಅಸುರರೆಲ್ಲರೂ ಈ ದಸ್ಯುವಿನ ಗುಂಪಿಗೆ ಸೇರಿದವರು. ನೀರನ್ನು ಪ್ರವಹಿಸಿದಂತೆ ತಡೆಯುವುದೂ, ಬೆಳಕನ್ನು ಮುಚ್ಚುವುದೂ ಇವರ ಕೃತ್ಯಗಳಾದುದರಿಂದ ಇವರ ನಾಶವನ್ನು ಮಾಡಿ ನೀರನ್ನುಹರಿಯಿಸಿ ಬೆಳಕನ್ನು ಹರಡುವಂತೆ ಮಾಡಿದುದರಿಂದ ಇಂದ್ರನಿಗೆ **ದಸ್ಯುಹಾ** ಎಂಬ ವಿಶೇಷಣವು ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ.

**ದಸ್ಯು** ಶಬ್ದವು ರಾಕ್ಷಸಾದಿಗಳ ಪರ್ಯಾಯವಾಗಿ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದ್ದರೂ, ಕರ್ಮಹೀನರಾದ ಮಾನವರ ವಿಷಯದಲ್ಲೂ ಕೆಲವು ಕಡೆಗಳಲ್ಲಿ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ತ್ವಂ ಹ ನು ತ್ಯದದಮಾಯೋ ದಸ್ಯೂ ರೇಕಃ ಕೃಷ್ಟೀರವನೋರಾರ್ಯಾಯ ।**
(ಋ. ಸಂ. ೬-೧೮-೩)

ಇತ್ಯಾದಿ ಋಕ್ಕುಗಳಲ್ಲಿ **ದಸ್ಯೂನ್** ಎಂಬುದಕ್ಕೆ **ಕರ್ಮಹೀನಾನ್ ಜನಾನ್** ಎಂದರ್ಥ ಮಾಡಿದೆ. ಇಂತಹ ವೃತ್ರಾದಿ ರೂಪವಾದ ದಸ್ಯುಗಳನ್ನೂ ಕರ್ಮಹೀನರೂ ಮಾನವರೂಪರೂ ಆದ ದಸ್ಯುಗಳನ್ನೂ ನಾಶಮಾಡಿದುದರಿಂದ ಇಂದ್ರನಿಗೆ **ದಸ್ಯುಹಾ** ಎಂಬ ವಿಶೇಷಣವು ಸಹಜವಾಗಿದೆ.

**ಕುವಿತ್ಸಸ್ಯ ಪ್ರ ಹಿ ವ್ರಜಂ ಗೋಮಂತಂ ದಸ್ಯುಹಾ ಗಮತ್ ।**
(ಋ. ಸಂ. ೬-೪೫-೨೪)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಈ ವಿಶೇಷಣವು ಇಂದ್ರನ ಅತ್ಯತಿಶಯವಾದ ಶಕ್ತಿಯನ್ನೂ ದಸ್ಯುಹನನದಿಂದ ಆದ ಲೋಕರಕ್ಷಣೆಯನ್ನೂ ತಿಳಿಸಿದೆ. ಮತ್ತು

**ಆರ್ಯ, ದಸ್ಯು** ಎಂಬ ಎರಡು ಪದಗಳೂ ಎರಡು ಬೇರೆ ಬೇರೆ ಗುಂಪಿನ ಜನರನ್ನು ತೋರಿಸುವ ಸಂಕೇತ ಪದಗಳೆಂದು ಕೆಲವರ ಮತವಾಗಿದೆ. ಆರ್ಯರೆಂಬುವರು ಸಂಸ್ಕೃತರೆಂದೂ, ದಸ್ಯುಗಳು ಅಸಂಸ್ಕೃತರಾಗಿಯೂ ವರ್ಣವಿಕಾರ ವುಳ್ಳವರಾಗಿಯೂ ಇದ್ದ ಜನರೆಂದೂ ಈ ಎರಡು ಗುಂಪಿನ ವ್ಯತ್ಯಾಸವನ್ನು ತೋರಿಸಿ ಇತಿಹಾಸಕಾರರು ವಿಮರ್ಶಿಸಿದ್ದಾರೆ. ಈ ವಿಷಯವನ್ನು ಉದಾಹರಣೆಗಳೊಡನೆ ಮುಂದೆ ತಿಳಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಸನಿತಾ**—ಷಣು ದಾನೇ. ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಕರ್ತರಿಯಲ್ಲಿ ತೃನ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚೋದಯಃ**—ಚುದ ಪ್ರೇರಣೇ ಧಾತು. **ಛಂದಸಿ ಲುಙ್**—(ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಙ್. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಸಿಪ್. ಶಪ್ ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ.

**ದಸ್ಯುಮ್**—ದಸು ಉಪಕ್ಷಯೇ. ಧಾತು. **ಯಜಿಮನಿ ಶುಂಧಿ**—(ಉ. ಸೂ. ೩-೩೦೦) ಎಂಬುದರಿಂದ ಯುಚ್ ಪ್ರತ್ಯಯ ವೃಷಾದಿಯಲ್ಲಿ ಸೇರಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಉಕಾರ ಇತ್ತಾದ ಯುವಿಗೆ ಅನಾದೇಶ ವಿಧಾನಮಾಡಿರುವುದರಿಂದ ಇಲ್ಲಿ ಅನಾದೇಶ ಬರುವುದಿಲ್ಲ.

**ಅವ್ರತಮ್**—ನ ವಿದ್ಯತೇ ವ್ರತಮ್ ಯಸ್ಯ ಸಃ ತಮ್. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಓಷಃ**—ಉಷ ದಾಹೇ ಧಾತು. ಭ್ವಾದಿ. ಲೋಟ್ ಅರ್ಥ ತೋರುವಾಗ ಛಾಂದಸವಾಗಿ ಲಙ್. ಮಧ್ಯಮ

ಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶೋಚಿಷಾ**—ಶುಚ ಶೋಕೇ. ಧಾತು. **ಅರ್ಚಿಶುಚಿಹು**—(ಉ. ಸೂ. ೨೧-೨೬-೫) ಎಂಬುದರಿಂದ ಇಸಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ. ॥ ೩ ॥



॥ ಸಂಹಿತಾಪಾಠಃ ॥

ಮುಷಾಯ ಸೂರ್ಯಂ ಕವೇ ಚಕ್ರಮೀಶಾನ ಓಜಸಾ ।
ವಹ ಶುಷ್ಣಾಯ ವಧಂ ಕುತ್ಸಂ ವಾತಸ್ಯಾಶ್ವೈಃ ॥ ೪ ॥

॥ ಪದಪಾಠಃ ॥

ಮುಷಾಯ । ಸೂರ್ಯಂ । ಕವೇ । ಚಕ್ರಂ । ಈಶಾನಃ । ಓಜಸಾ ।
ವಹ । ಶುಷ್ಣಾಯ । ವಧಂ । ಕುತ್ಸಂ । ವಾತಸ್ಯ । ಅಶ್ವೈಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಕವೇ ಕ್ರಾಂತದರ್ಶಿನ್ನಿಂದ್ರ ಈಶಾನಃ ಸಮರ್ಥಃ ಸನ್ ಸೂರ್ಯಂ ಸೂರ್ಯಸ್ಯ ॥ ಸುಪಾಂ ಸುಪೋ ಭವಂತೀತಿ ಷಷ್ಠ್ಯೇಕವಚನಸ್ಯ ದ್ವಿತೀಯೈಕವಚನಾದೇಶಃ ॥ ತತ್ಸಂಬಂಧಿ ಚಕ್ರಮೇಕಮೋಜಸಾ ಬಲೇನ ಸಾಮರ್ಥ್ಯಾತಿಶಯೇನ ಮುಷಾಯ । ಅಮುಷ್ಣಾಃ ॥ ಛಂದಸಿ ಶಾಯಜಪೀತಿ ಶಾಯಜಾದೇಶಃ ॥ ಪೂರ್ವಂ ಸೂರ್ಯರಥಸ್ಯ ಚಕ್ರದ್ವಯಮಸ್ತಿ ಏಕಮಿಂದ್ರೋ ಮುಮುಷ ಇತೀತಿಹಾಸಃ । ತಥಾ ಚ ಮಂತ್ರಾಂತರಂ । ಪ್ರಾನ್ಯಚ್ಚಕ್ರಮವೃಹಃ ಸೂರ್ಯಸ್ಯ ಕುತ್ಸಾ-ಯಾನ್ಯತ್ । ಋ. ೫. ೨೯. ೧೦. । ಇತಿ । ಕಿಂಚ ಶುಷ್ಣಾಯೈತನ್ನಾಮಕಾಯಾಸುರಾಯ ತದ್ವಧಾರ್ಥಂ। ದ್ವಿತೀಯಾರ್ಥೇ ವಾ ಚತುರ್ಥೀ । ಶುಷ್ಣಂ ಹಂತುಮಿತ್ಯರ್ಥಃ। ಕುತ್ಸಂ ಕರ್ತನಸಾಧನಂ ವಧಂ ವಜ್ರಂ ವಾತಸ್ಯ ವಾಯೋರಶ್ವೈರ್ವಾಯುವೇಗೈರ್ವಾಶ್ವೈರ್ಯುಕ್ತಃ ಸನ್ ವಹ । ಅವಹಃ । ಶುಷ್ಣಂ ಹಂತುಂ ವಜ್ರಮಧಾರಯಃ । ಯದ್ವಾ । ಶುಷ್ಣವಧಾಯ ವಜ್ರಮವಹಃ । ತಂ ಚ ಹತ್ವಾ ತದೀಯೈ-ರ್ವಾಯುವೇಗೈರಶ್ವೈಸ್ತದುಪಲಕ್ಷಿತೈಸ್ತದೀಯೈರ್ಧನೈಃ ಕುತ್ಸಂ ಮಹರ್ಷಿಮಗಮಃ । ಶುಷ್ಣಾಸುರಧನಂ ಕುತ್ಸಾಯಾದಾ ಇತ್ಯರ್ಥಃ । ತಥಾ ಚಾನ್ಯತ್ರ ತ್ವಂ ಕುತ್ಸಂ ಶುಷ್ಣಹತ್ಯೇಷ್ವಾವಿಥ । ಋ. ೧ ೫೧. ೬ । ಕುತ್ಸಾಯ ಶುಷ್ಣಮಶುಷಂ । ಋ. ೪-೧೬-೧೨ । ಇತ್ಯಾದೀತಿ ॥

॥ ಪ್ರತಿಪದಾರ್ಥ ॥

**(ಹೇ) ಕವೇ**—ಜ್ಞಾನಿಯಾದ ಎಲೈ ಇಂದ್ರನೇ । **ಈಶಾನಃ**— ಸಮರ್ಥನಾದ ನೀನು । **ಸೂರ್ಯಂ**—ಸೂರ್ಯನ । **ಚಕ್ರಂ**—ರಥದ ಒಂದು ಚಕ್ರವನ್ನು । **ಓಜಸಾ**—ಸಾಮರ್ಥ್ಯಾತಿಶಯದಿಂದ । **ಮುಷಾಯ**—ಅಪಹರಿಸಿದೆ । (**ಕಿಂಚ**—ಮತ್ತು) । **ಶುಷ್ಣಾಯ**—ಶುಷ್ಣನೆಂಬ ಅಸುರನ ವಧೆಗೋಸ್ಕರ । **ಕುತ್ಸಂ**—ಕರ್ತನ ಸಾಧನವಾದ । **ವಧಂ**—ವಜ್ರಾಯುಧವನ್ನು । **ವಾತಸ್ಯ**—ವಾಯುವಿನ ವೇಗವುಳ್ಳ । **ಅಶ್ವೈಃ**—ಅಶ್ವಗಳಿಂದ ಯುಕ್ತನಾಗಿ । **ವಹ**—ಧರಿಸಿದೆ । [ಅಥವಾ **ಶುಷ್ಣಾಯ**—ಶುಷ್ಣನೆಂಬ ಅಸುರನ ವಧೆಗೋಸ್ಕರ । **ವಧಂ**—ವಜ್ರಾಯುಧವನ್ನು । **ವಹ**—ಧರಿಸಿದೆ (ಅವನನ್ನು ವಧಿಸಿ) । **ವಾತಸ್ಯ**—ವಾಯುವಿಗೆ ಸಮವಾದ ವೇಗವುಳ್ಳ । **ಅಶ್ವೈಃ—ಆ** ಶುಷ್ಣನ ಅಶ್ವಗಳಿಂದ (ಅಶ್ವೋಪಲಕ್ಷಿತ ಧನದಿಂದ) ಯುಕ್ತನಾಗಿ । **ಕುತ್ಸಂ**—ಕುತ್ಸನಾಮಕ ಋಷಿಯನ್ನು (ಪ್ರಾಪ್ತನಾದೆ). ]

॥ ಭಾವಾರ್ಥ ॥

ಎಲೈ ಇಂದ್ರನೇ, ಸಮರ್ಥನಾದ ನೀನು ನಿನ್ನ ಸಾಮರ್ಥ್ಯಾತಿಶಯದಿಂದ ಸೂರ್ಯನ ರಥದ ಒಂದು ಚಕ್ರವನ್ನು ಅಪಹರಿಸಿದೆ; ಮತ್ತು ವಜ್ರಾಯುಧಧಾರಿಯಾಗಿ ಶುಷ್ಣನೆಂಬ ಅಸುರನನ್ನು ವಧಿಸಿ, ವಾಯುವೇಗವುಳ್ಳ ಅವನ ಅಶ್ವಗಳು ಮತ್ತು ಧನಸಹಿತನಾಗಿ ಕುತ್ಸಋಷಿಯನ್ನು ಪ್ರಾಪ್ತನಾಗಿ, ಆ ಧನವನ್ನು ಆ ಋಷಿಗೆ ದಾನಮಾಡಿದೆ.

English Translation.

Sage Indra, who are the lord, you have carried off by your strength one wheel of (the chariot of) the sun. Take up your bolt for the death of Shushna, and proceed with your horses, swift as the wind, to Kutsa.

॥ ವಿಶೇಷವಿಷಯಗಳು ॥

**ಕವೇ—ಕ್ರಾಂತದರ್ಶಿನ್ನಿಂದ್ರ** ಎಂದು ಸಾಯಣರು ಈ ಪದಕ್ಕೆ ಅರ್ಥವನ್ನು ಹೇಳಿದ್ದಾರೆ. ಇನ್ನು ಕೆಲವೆಡೆಗಳಲ್ಲಿ ಸಾಯಣರು ಈ ಪದದ ಅರ್ಥವನ್ನು ಎರಡುವಿಧವಾಗಿ ವಿವರಿಸಿದ್ದಾರೆ. ಮೊದಲನೆಯದಾಗಿ, **"ಯೇ ವಾ ಅನೂಚಾನಾಸ್ತೇ ಕವಯಃ"** ಎಂಬ ಶ್ರುತಿವಾಕ್ಯವನ್ನನುಸರಿಸಿ ವೇದಾಂಗಸಹಿತವಾದ ವೇದಾಧ್ಯಯನವನ್ನು ಮಾಡಿದ ಶಾಸ್ತ್ರಜ್ಞರೆಂದು ಒಂದು ವಿಧವಾಗಿಯೂ, ಎರಡನೆಯದಾಗಿ, ಕವಿಃ, ಮನೀಷೀ (ನಿ. ೩-೧೫) ಎಂಬ ನಿರುಕ್ತ ವಾಕ್ಯವನ್ನನುಸರಿಸಿ ಮೇಧಾವಿಯೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು ಎಂದು ತಿಳಿಸಿದ್ದಾರೆ.

**ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ** ।

(ನಿ. ೧೨-೧೩)

ಎಂಬುದಾಗಿ ನಿರುಕ್ತಕಾರರು **ಕವಿ** ಶಬ್ದದ ನಿರ್ವಚನವನ್ನು ಹೇಳಿದ್ದಾರೆ. **ಕ್ರಮ್** ಧಾತುವಿನಿಂದ ನಿಷ್ಪನ್ನವಾಗಿ ಕ್ರಾಂತದರ್ಶನವುಳ್ಳವನೆಂದಾಗಬಹುದು; ಅಥವಾ **ಕವ್** ಧಾತುವಿನಿಂದ ನಿಷ್ಪನ್ನವಾಗಿ ಸ್ತುತಿಮಾಡತಕ್ಕ ಸ್ತೋತೃವೆಂದರ್ಥವಾಗಬಹುದು, ಎಂದು ನಿರುಕ್ತಕಾರರ ನಿರ್ವಚನವು ತೋರಿಸುತ್ತದೆ. ಕವಿಯ ಸ್ವರೂಪವೇನು? ಕವಿಯ ಶಕ್ತಿಯೇನು ಯಾವ ಸ್ವರೂಪ ಮತ್ತು ಶಕ್ತಿಯನ್ನು ತಿಳಿಸಲು ಋಕ್ಸಂಹಿತೆಯಲ್ಲಿ **ಕವಿ** ಶಬ್ದದ ಪ್ರಯೋಗವಿದೆ ಎಂಬುದನ್ನು ತಿಳಿಯಬೇಕಾದುದು ಅವಶ್ಯಕವಾಗಿರುತ್ತದೆ.

**ಋಷಿ, ಸುಮೇಧ, ಧೀರ, ರೇಭ** ಎಂಬ ಪದಗಳು ಯಾವ ಸ್ವರೂಪವಿಶೇಷವನ್ನು ತೋರಿಸುವುವೋ **ಕವಿ** ಪದವೂ ಅದೇ ಅಂಶವನ್ನು ತಿಳಿಸಲು ಉಪಯುಕ್ತವಾಗಿದೆಯೆಂದು ಹೇಳಬಹುದು. ಭೂತಭವಿಷ್ಯದ್ವರ್ತಮಾನ ಕಾಲಗಳ ವ್ಯವಹಾರಗಳನ್ನೆಲ್ಲಾ ತಿಳಿಯತಕ್ಕ ಅಸಾಧಾರಣವೂ ಅಲೌಕಿಕವೂ ಆದ ಶಕ್ತಿಯನ್ನುಳ್ಳವನೇ **ಧೀರನು, ಋಷಿಯೂ** ಅವನೇ **ಕವಿಯು** ಈ ಶಕ್ತಿಯುಳ್ಳವನೇ ಸ್ತೋತ್ರರೂಪವಾದ ಕಾವ್ಯದ ಸೃಷ್ಟಿಗೂ ಅರ್ಹನಾಗಿದ್ದಾನೆ. ಆದುದರಿಂದ ಸ್ತುತಿಕಾರನಿಗೂ **ಕವಿ, ರೇಭ** ಇತ್ಯಾದಿಯಾದ ಹೆಸರುಗಳಿರುವುವು. ಲೌಕಿಕವಾದ ಸಾಹಿತ್ಯಗಳಲ್ಲೂ, ಲಕ್ಷಣಗ್ರಂಥಗಳಲ್ಲೂ **ಕವಿ, ಕಾವ್ಯ,** ಎಂಬ ಪದಗಳಿಗೆ ಇದೇ ರೀತಿಯ ಅಸಾಧಾರಣವಾದ ಶಕ್ತಿಯನ್ನು ಸೂಚಿಸುವ ಸಂಜ್ಞೆಯಿದ್ದರೂ ಅಲ್ಲಿಯ ನಿರ್ವಚನವು ಇದಕ್ಕಿಂತ ಕೊಂಚ ವ್ಯತ್ಯಸ್ತವಾಗಿದೆಯೆಂಬಂಶವನ್ನು ಮುಂದೆ ಸಂದರ್ಭಾನಸಾರವಾಗಿ ವಿವರಿಸಲಾಗುತ್ತದೆ]. ಕವಿಯ ನಿಜವಾದ ಸ್ವರೂಪವನ್ನು ತಿಳಿಸಲು ನಿರುಕ್ತಕಾರರು,

**ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।**
**ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥**

(ಋ. ಸಂ. ೫-೮೧-೨)

ಎಂಬ ಋಕ್ಕನ್ನುದಾಹರಿಸಿ ಇಲ್ಲಿ **ಸವಿತೃವಿಗೆ** ವಿಶೇಷಣವಾಗಿರುವ **ಕವಿ** ಶಬ್ದವು ಸವಿತೃವಿನ ಯಾವ ಸ್ವರೂಪವನ್ನು ತೋರಿಸುವುದೆಂಬುದನ್ನು ವಿವರಿಸಿದ್ದಾರೆ. ವಿಶ್ವದ ಸಕಲ ರೂಪಗಳನ್ನೂ ಪ್ರಕಾಶಪಡಿಸುವವನಾದುದರಿಂದ ಸವಿತೃವಿಗೆ ಈ ವಿಶೇಷಣವಿದೆಯೆಂದು ತಿಳಿಯುತ್ತದೆ. ಎಂದರೆ, ಗೂಢವಾಗಿ ಅಡಗಿ ಲೋಕದ ದೃಷಿಗೆ ಗೋಚರವಾಗದಿರುವ ಅಂಶಗಳನ್ನು ತನ್ನ ಶಕ್ತಿಯಿಂದ ಪ್ರಕಾಶಿತವಾಗುವಂತೆ ಮಾಡಿ ಲೋಕದ ದೃಷ್ಟಿಗೆ ಬೀಳುವಂತೆ ಮಾಡುವ ಶಕ್ತಿಯುಳ್ಳವನೆಂದರ್ಥ. ಇದೇ ಅರ್ಥದಲ್ಲಿಯೇ ಸ್ತೋತೃವಾದ ಸ್ತುತಿಕರ್ತನಿಗೂ ಸಹ **ಕವಿ** ಯೆಂಬ ಹೆಸರು ಪ್ರಸಿದ್ಧವಾಗಿದೆ. ಈ ಭಾವವು ಋಕ್ಸಂಹಿತೆಯಲ್ಲಿರುವ,

**ಬ್ರಹ್ಮಾ ಕೃಣೋತಿ ವರುಣೋ ಗಾತುವಿದಂ ತಮೀಮಹೇ ।**
**ವ್ಯೂರ್ಣೋತಿ ಹೃದಾ ಮತಿಂ ನವ್ಯೋ ಜಾಯತಾಮೃತಂ ವಿತ್ತಂ ಮೇ ಅಸ್ಯ ರೋದಸೀ ॥**

(ಋ. ಸಂ. ೧-೧೦೫-೧೫).

ಎಂಬ ಋಕ್ಕಿನಲ್ಲಿಯೂ ಹೀಗೆಯೇ ಇತರ ಋಕ್ಕುಗಳಲ್ಲಿಯೂ ಸೂಚಿತವಾಗಿದೆ ಉದಾಹೃತವಾದ ಈ ಋಕ್ಕಿನಲ್ಲಿ **ವ್ಯೂರ್ಣೋತಿ** ಎಂಬ ಪದಕ್ಕೆ **ಉಚ್ಚಾರಯತಿ, ಪ್ರಕಾಶಯತಿ** ಎಂದು ಸಾಯಣರು ಅರ್ಥಮಾಡಿದ್ದಾರೆ. **ಊರ್ಣುಞ್—ಆಚ್ಛಾದನೇ ।** ಮರೆಸು, ಹೊದ್ದಿಸು ಎಂಬರ್ಥದ **ಊರ್ಣು** ಧಾತುವು ಊರ್ಣೋತಿ ಎಂದಾಗುತ್ತದೆ. ಇಲ್ಲಿ **ವಿ** ಎಂಬ ಉಪಸರ್ಗದೊಡನೆ ಸೇರಿ ವಿಗತವಾದ ಆಚ್ಛಾದನೆ ಎಂದರೆ, ಮರೆಯನ್ನು ತಪ್ಪಿಸುವುದು ಎಂಬರ್ಥವನ್ನು ಕೊಡುತ್ತದೆ. ಪ್ರಕಾಶಪಡಿಸುವುದೆಂದು ತಾತ್ಪರ್ಯ. ಮನಸ್ಸಿನಲ್ಲಿ ಗುಪ್ತವಾಗಿರುವ ಭಾವವನ್ನು ಪ್ರಕಾಶಪಡಿಸುವುದರ ರೂಪದಲ್ಲಿ ಸೃಷ್ಟಿಸಾಮರ್ಥ್ಯವೂ, ಗುಪ್ತವಾಗಿರುವ ಅಂಶವನ್ನು ಪ್ರಕಾಶಪಡಿಸಿ ತೋರಿಸುವ ಶಕ್ತಿಯೂ ಸಹ ಕವಿಯ ಅಥವಾ ಸ್ತುತಿಕರ್ತನ ವಿಶೇಷಗುಣವೆಂದು . ಇದರಿಂದ ತಿಳಿಯುತ್ತದೆ. ಆದುದರಿಂದ ಸವಿತೃವಿಗೂ ಸ್ತುತಿಕರ್ತನಿಗೂ ಇರುವ ಸಮಾನವಾದ ಧರ್ಮವನ್ನು **ಕವಿ** ಶಬ್ದವು ಇಬ್ಬರಿಗೂ ತಿಳಿಸುವ ವಿಶೇಷಣವಾಗಿರುತ್ತದೆ. ಇದೇ ಲಕ್ಷಣವನ್ನೂ ಕವಿಕೃತಿಯನ್ನೂ ವಿವರಿಸುತ್ತಾ ಋಕ್ಸಂಹಿತೆಯಲ್ಲಿ,

**ಸಮಾನಂ ನೀಳಂ ವೃಷಣೋ ವಸಾನಾಃ ಸಂ ಜಗ್ಮಿರೇ ಮಹಿಷಾ ಅರ್ವತೀಭಿಃ ।**
**ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ ದಧಿರೇ ಪರಾಣಿ ।**

(ಋ. ಸಂ. ೧೦-೫-೨)

**ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ ।**
**ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ ॥**

(ಋ. ಸಂ ೧೦-೭೧-೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಭಾವವು ವ್ಯಕ್ತವಾಗಿರುತ್ತದೆ. ಕವಿಗಳು ಋತದ ಪಥವನ್ನು ಪ್ರವೇಶಿಸಿ ಅತ್ಯಂತ ಗೂಢವಾದ ಹೃದಯದಲ್ಲಿ ಅತ್ಯುತ್ತಮವಾದ ರಹಸ್ಯದ ನಾಮಗಳನ್ನು ಧರಿಸಿದ್ದಾರೆ. ಮತ್ತು ಅದನ್ನು ಪ್ರಕಾಶಪಡಿಸಿ ಲೋಕಕ್ಕೆ ತಿಳಿಯುವಂತೆ ಮಾಡುತ್ತಾರೆ ಎಂದು ವರ್ಣಿತವಾಗಿದೆ. ಈ ಕವಿಯ ದರ್ಶನವೂ ಪ್ರಕಾಶನರೂಪವಾದ ಸಾಧನದಿಂದಲೇ ಸಾಧ್ಯವು

**ಯಜ್ಞೇನ ವಾಚಃ ಪದವೀಯಮಾಯನ್ ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ।**
**ತಾಮಾಭೃತ್ಯಾ ವ್ಯದಧುಃ ಪುರುತ್ರಾ ತಾಂ ಸಪ್ತ ರೇಭಾ ಅಭಿ ಸಂ ನವಂತೇ ॥**

(ಋ. ಸಂ. ೧೦-೭೧-೩)

ಅತೀಂದ್ರಿಯಾರ್ಥದರ್ಶಿಗಳಾದ ಋಷಿಗಳಲ್ಲಿ ಸುಪ್ತವಾಗಿದ್ದ ವಾಕ್ಕನ್ನು ಯಜ್ಞರೂಪವಾದ ಸಾಧನದಿಂದ ಕವಿಗಳು ಪಡೆದರು. ಅನಂತರ ಲೋಕದ ಪ್ರಜೆಗಳ ಉಪಕಾರಕ್ಕಾಗಿ ಅವರಿಗೂ ಉಪದೇಶವನ್ನು ಮಾಡಿದರು. ವಿಶ್ವತತ್ತ್ವ ರೂಪವಾದ ಈ ವಾಕ್ಕನ್ನು ಗಾಯತ್ರ್ಯಾದಿ ಛಂದಸ್ಸುಗಳು ಸೇವಿಸುತ್ತವೆ, ಇತ್ಯಾದಿಯಾಗಿ ವಾಕ್ಪ್ರಕಾಶನ ರೂಪವಾದ ಸೃಷ್ಟಿಗೂ, ಯಜ್ಞರೂಪವಾದ ಕರ್ಮಕ್ಕೂ ಕೆಲವೆಡೆಗಳಲ್ಲಿ ತಾದಾತ್ಮ್ಯವನ್ನೂ ಇನ್ನು ಕೆಲವೆಡೆಗಳಲ್ಲಿ ಕಾರ್ಯಕಾರಣರೂಪ ವಾದ ಸಂಬಂಧವನ್ನೂ ತಿಳಿಸಿದೆ. ಇದೇ ಭಾವವನ್ನು ಶತಪಥಾದಿ ಬ್ರಾಹ್ಮಣಗಳಲ್ಲೂ ಈ ರೀತಿ ಹೇಳಿದೆ.

**ಅಯುರೇತಜ್ಜ್ಯೋತಿಃ ಪ್ರವಿಶತಿ ಯ ಏತಮನು ವಾ ಬ್ರೂತೇ ಭಕ್ಷಯತಿ ವಾ ತಸ್ಯ ವ್ರತಚರ್ಯಾ**
**ಯೊ ಸೃಷ್ಟ್ವಾ ॥**

(ಶ. ಬ್ರಾ. ೧೪-೧-೨-೨೬)

ಎಂಬಲ್ಲಿ ಮಂತ್ರೋಚ್ಚಾರಣಪೂರ್ವಕವಾದ ಕರ್ಮಕ್ಕೂ ನೂತನಸೃಷ್ಟಿಗೂ ತಾದಾತ್ಮ್ಯವನ್ನು ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ ಅತೀಂದ್ರಿಯವಿಷಯಪ್ರಜ್ಞೋಪೇತನೂ, ಸರ್ವಜ್ಞನೂ ಆದ ಇಂದ್ರನ ಅಸಾಧಾರಣವಾದ ಗುಣವನ್ನು ತಿಳಿಸುವ ವಿಶೇಷಣವಾಗಿದೆ. ಈ ವಿಶೇಷಣವು ಅನೇಕಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವುದರಿಂದ ಆಯಾ ಸಂದರ್ಭ ಗಳಿಗನುಗುಣವಾಗಿ ಅರ್ಥಮಾಡತಕ್ಕದಾಗಿದೆ.

**ಈಶಾನಃ ಸೂರ್ಯಂ ಚಕ್ರಂ ಓಜಸಾ ಮುಷಾಯ—ಸಮರ್ಥಃ ಸನ್ ಸೂರ್ಯಸ್ಯ ಏಕಂ ಚಕ್ರಂ ಸಾಮರ್ಥ್ಯಾತಿಶಯೇನ ಅಮುಷ್ಣಾಃ ।** ಇಂದ್ರನು ತನ್ನ ಸಾಮರ್ಥ್ಯದಿಂದ ಸೂರ್ಯನ ರಥದಲ್ಲಿದ್ದ ಎರಡು ಚಕ್ರಗಳಲ್ಲಿ ಒಂದನ್ನು ಅಪಹರಿಸಿದನು ಎಂದು ವಿವರಿಸಿ ಈ ಅರ್ಥವು **ಪೂರ್ವಂ ಸೂರ್ಯರಥಸ್ಯ ಚಕ್ರದ್ವಯ—ಮಸ್ತಿ ಏಕಮಿಂದ್ರೋ ಮುಮುಷ** ಇತೀತಿಹಾಸಃ—ಇತಿಹಾಸದಲ್ಲಿ ಪ್ರಸಿದ್ಧವಾಗಿರುವುದು ಎಂದು ವರ್ಣಿಸಿ—

**ಪ್ರಾನ್ಯಚ್ಚಕ್ರಮವೃಹಃ ಸೂರ್ಯಸ್ಯ ಕುತ್ಸಾಯಾನ್ಯದ್ವರಿವೋ ಯಾತವೇಽಕಃ ।**

ಎಂಬ ಋಕ್ಕನ್ನು ಉದಾಹರಿಸಿದ್ದಾರೆ. (ಋ. ಸಂ. ೫-೨೯-೧೦)

**ಶುಷ್ಣಾಯ—ಏತನ್ನಾಮಕಾಯ ಅಸುರಾಯ ಶುಷ್ಣಂ ಹಂತುಂ ।** ಶುಷ್ಣನೆಂಬ ಹೆಸರಿನಿಂದ ಪ್ರಸಿದ್ಧನಾದ ಅಸುರನನ್ನು ನಾಶಮಾಡುವುದಕ್ಕಾಗಿ **ವಾತಸ್ಯ ಅಶ್ವೈಃ** ವಾಯುವಿನ ವೇಗದಿಂದ ಕೂಡಿರುವ ಅಥವಾ

ಅಶ್ವಗಳಿಂದಲೂ ಕೂಡಿರುವವನಾಗಿ **ಕುತ್ಸಂ ವಧಂ ವಹಃ** ಕತ್ತರಿಸುವ ವಜ್ರಾಯುಧವನ್ನು ಇಂದ್ರನು ಧರಿಸಿರುವನು. **ಅಥವಾ ತಂ ಚ ಹತ್ವಾ ತದುಪಲಕ್ಷಿತೈಸ್ತದೀಯೈರ್ಧನೈಃ ಕುತ್ಸಂ ಮಹರ್ಷಿಮಗಮಃ ।** ಕುತ್ಸ ಎಂಬ ಪದವನ್ನು ವಜ್ರಾಯುಧಕ್ಕೆ ವಿಶೇಷಣವಾಗಿ ಪ್ರಯೋಗಿಸಿ, ಕತ್ತರಿಸುವ ಸಾಧನ ಎಂದು ಒಂದು ವಿಧವಾದ ಅರ್ಥವನ್ನು ವರ್ಣಿಸಿದೆ. ಎರಡನೆಯ ಅರ್ಥದಲ್ಲಿ ಕುತ್ಸನೆಂಬ ಮಹರ್ಷಿಗೆ ಶುಷ್ಣಾಸುರನ ಧನವನ್ನೆಲ್ಲವನ್ನೂ ಶುಷ್ಣನನ್ನು ಸಂಹರಿಸಿದ ನಂತರ ಇಂದ್ರನು ಕೊಟ್ಟಿರುವನು ಎಂದು ವಿವರಿಸಿದೆ. ಮತ್ತು—

**ತ್ವಂ ಕುತ್ಸಂ ಶುಷ್ಣಹತ್ಯೇಷ್ವಾವಿಥಾರಂಧಯೋಽತಿಥಿಗ್ವಾಯ ಶಂಬರಂ ।**
**ಮಹಾಂತಂ ಚಿದರ್ಬುದಂ ನಿ ಕ್ರಮೀಃ ಪದಾ ಸನಾದೇವ ದಸ್ಯುಹತ್ಯಾಯ ಜಜ್ಞಿಷೇ ॥**
(ಋ. ಸಂ. ೧-೫೧-೬)

**ಕುತ್ಸಾಯ ಶುಷ್ಣಮಶುಷಂ ನಿ ಬರ್ಹೀಃ ಪ್ರಪಿತ್ವೇ ಅಹ್ನಃ ಕುಯವಂ ಸಹಸಾ ।**
(ಋ. ಸಂ. ೪-೧೬-೧೨)

ಈ ಋಕ್ಕುಗಳಲ್ಲಿ ಈ ಅರ್ಥವು ಉಕ್ತವಾಗಿರುವುದೆಂದು ಸಾಯಣರು ಉದಾಹರಿಸಿದ್ದಾರೆ. ಇದೇ ಅಭಿಪ್ರಾಯವು ಮಂತ್ರಾಂತರಗಳಲ್ಲಿಯೂ ಉಕ್ತವಾಗಿರುವುದೆಂದೂ ವಿವರಿಸಿದ್ದಾರೆ. ಶುಷ್ಣ ಶಬ್ದವು ಯಾಸ್ಕರಿಂದ ಬಲನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು—

**ನಿಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿತ್ ವ್ರಂದಿನೋ ರೋರುವದ್ವನಾ ।**
**ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್ಕೃಣವಃ ಕಸ್ತ್ವಾ ಪರಿ ॥**
(ಋ. ಸಂ. ೧-೫೪-೫)

ಈ ಋಕ್ಕಿನಲ್ಲಿ **ಶುಷ್ಣಸ್ಯ ಶೋಷಯಿತುರಾದಿತ್ಯಸ್ಯ** ಎಂದು ಅರ್ಥವು ವಿವೃತವಾಗಿದೆ.

**ತ್ವಾವಿಧ್ಯದಿಲೀಬಿಶಸ್ಯ ದೃಹ್ಳಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ ।**
**ಯಾವತ್ತರೋ ಮಘವನ್ ಯಾವದೋಜೋ ವಜ್ರೇಣ ಶತ್ರುಮವಧೀಃ ಪೃತನ್ಯುಂ ॥**
(ಋ. ಸಂ. ೧-೩೩-೧೨)

ಇಲ್ಲಿ ಶುಷ್ಣ ಶಬ್ದವು **ಶುಷ್ಣಂ ಬಲವಂತಂ ಮೇಘಂ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಕುತ್ಸಂ**—ಇಲ್ಲಿ **ಕುತ್ಸ** ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದೆಂದು ಸಾಯಣರ ವಿವರಣೆಯು ತಿಳಿಸುತ್ತದೆ. ಮೊದಲನೆಯದಾಗಿ, **ಕುತ್ಸಂ-ಕರ್ತನ ಸಾಧನಂ** ಕತ್ತರಿಸುವ ಸಾಧನವಾದ ಎಂದು ವಜ್ರಾಯುಧಕ್ಕೆ ವಿಶೇಷಣವಾಗಿಯೂ ಎರಡನೆಯದಾಗಿ, **ಕುತ್ಸಂ ಕುತ್ಸನಾಮಾನಂ ಋಷಿಂ ।** ಕುತ್ಸನೆಂಬ ಋಷಿಯನ್ನು ಎಂದೂ ವಿವರಿಸಿದ್ದಾರೆ. ಋಷಿಯೆಂದರ್ಥಮಾಡಿದರೆ ಶುಷ್ಣನೆಂಬ ಅಸುರನನ್ನು ಕೊಂದು ಕುತ್ಸನಿಗೆ ಸಹಾಯಮಾಡಿದನೆಂದು ಇಂದ್ರನ ಪ್ರಶಂಸೆಯಾಗುತ್ತದೆ.

ಕುತ್ಸನಿಗೂ ಇಂದ್ರನಿಗೂ ಇರತಕ್ಕ ಸಂಬಂಧವು ಅತ್ಯಂತ ನಿಕಟವಾದುದೆಂದು ಋಕ್ಸಂಹಿತೆಯಲ್ಲಿರುವ ವರ್ಣನೆಗಳಿಂದ ತಿಳಿಯುತ್ತದೆ. ಕುತ್ಸನಿಗೆ ಆರ್ಜುನೇಯ ಎಂಬ ವಿಶೇಷಣವು ಅನೇಕ ಕಡೆಗಳಲ್ಲಿರುತ್ತದೆ. ಆರ್ಜುನೇಯ ಎಂಬ ಪದಕ್ಕೆ **ಅರ್ಜುನೀ** ಎಂಬ ಹೆಂಗಸಿನ ಮಗನೆಂದಾಗಬಹುದು. ಅಥವಾ **ಅರ್ಜುನ ಇತೀಂದ್ರಸ್ಯ ನಾಮ । ತಸ್ಯ ಪುತ್ರಃ ;** ಇಂದ್ರನಿಗೆ ಅರ್ಜುನನೆಂದು ಹೆಸರು. ಕುತ್ಸನು ಇವನ ಪುತ್ರನಾದುದರಿಂದ ಆರ್ಜುನೇಯನೆಂಬ ವಿಶೇಷಣವು ಸಹಜವಾಗಿದೆ ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳಬಹುದು. ಇಂದ್ರನಿಗೆ **ಅರ್ಜುನ** ಎಂಬ ಹೆಸರುಂಟು ಎಂದು ಸಮರ್ಥಿಸಲು ಸಾಯಣರು ಕೆಲವೆಡೆಗಳಲ್ಲಿ,

**ಏತೆದ್ವಾ ಇಂದ್ರಸ್ಯ ಗುಹ್ಯಂ ನಾಮ ಯದರ್ಜುನಃ ।**

ಎಂಬ ವಾಜಸನೇಯ ಸಂಹಿತಾಮಂತ್ರವನ್ನು ದಾಹರಿಸಿದ್ದಾರೆ. ಆದರೆ,

**ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ।**

(ಋ. ಸಂ. ೪-೨೬-೧)

**ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ।**

(ಋ. ಸಂ. ೭-೧೯-೨)

**ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ।**

(ಋ. ಸಂ. ೮-೧-೧೧)

ಎಂಬ ಋಕ್ಕುಗಳಲ್ಲಿ ಇರತಕ್ಕ **ಆರ್ಜುನೇಯ** ಪದಗಳಿಗೆಲ್ಲಾ ಸಾಯಣರೂ ಸಹ **ಅರ್ಜುನ್ಯಾಃ ಪುತ್ರಂ ಕುತ್ಸಂ । ಅರ್ಜುನೀ** ಎಂಬ ಹೆಂಗಸಿನ ಪುತ್ರನಾದ ಕುತ್ಸನೆಂದೇ ಅರ್ಥಮಾಡಿದ್ದಾರೆ. **ಅರ್ಜುನ; ಅರ್ಜುನೀ** ಎಂಬ ಪದಗಳೂ ಇಂದ್ರಸಂಬಂಧವಾದವು ಎಂದು ಶ್ರುತ್ಯಂತರಗಳಲ್ಲಿ ಹೇಳಿರುವುದರಿಂದ ಮೇಲಿನ ಎರಡು ವಿಧವಾದ ವಿವರಣೆ ಗಳೂ ಒಂದೇ ಅರ್ಥವನ್ನು ಕೊಡುವುವು ಎಂದು ಹೇಳಬಹುದು. ಉದಾಹರಣೆಗೆ—

**ಫಲ್ಗುನೀಷ್ವಗ್ನೀ ಆದಧೀತ । ಏತಾ ವಾ ಇಂದ್ರನಕ್ಷತ್ರಂ ಯತ್ಫಲ್ಗುನ್ಯೋಽಪ್ಯಸ್ಯ ಪ್ರತಿ- ನಾಮ್ನ್ಯೋಽರ್ಜುನೋ ಹ ವೈ ನಾಮೇಂದ್ರೋ ಯದಸ್ಯ ಗುಹ್ಯಂ ನಾಮಾರ್ಜುನ್ಯೋ ವೈ ನಾಮ್ನೈತಾಸ್ತಾ ಏತತ್ಪರೋಕ್ಷಮಾಚಕ್ಷತೇ ಫಲ್ಗುನ್ಯ ಇತಿ ಕೋ ಹ್ಯೇತಸ್ಯಾರ್ಹತಿ ಗುಹ್ಯಂ ನಾಮ..................... ।**

(ಶ. ಬ್ರಾ. ೨-೧-೨-೧೧)

**ಇಂದ್ರೋ ಭವತಿ ಯಚ್ಚ ಕ್ಷತ್ರಿಯೋ ಯದು ಚ ಯಜಮಾನಸ್ತಸ್ಮಾದಾಹಾರಿಷ್ವೋಽರ್ಜುನ ಇತಿ ।** (ಶ. ಬ್ರಾ. ೫-೪-೩-೭)

ಫಲ್ಗುನಿಗಳು ಐಂದ್ರನಕ್ಷತ್ರಗಳು. ಹೆಸರಿನಲ್ಲಿಯೂ ಹೊಂದಿಕೆಯಿದೆ. ಇಂದ್ರನಿಗೂ ಅರ್ಜುನನೆಂಬ ಹೆಸರು. ಫಲ್ಗುನಿ ಗಳಿಗೂ ಅರ್ಜುನಿಗಳೆಂಬ ಹೆಸರು ಎಂಬುದಾಗಿ ಶತಪಥಬ್ರಾಹ್ಮಣದಲ್ಲಿಯೂ ಇತರ ಕಡೆಗಳಲ್ಲಿಯೂ ಹೇಳಿರುವುದರಿಂದ ಕುತ್ಸನನ್ನು ಇಂದ್ರಪುತ್ರ, ಅರ್ಜುನೀಪುತ್ರ ಎಂದು ಎರಡು ವಿಧವಾಗಿಯೂ ಕರೆಯಬಹುದೆಂದು ಹೇಳಬಹುದು. ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ **ಕುತ್ಸನು** ಇಂದ್ರನ ಸಹಾಯದಿಂದಲೇ ತನ್ನ ಶತ್ರುಗಳನ್ನು ಜಯಿಸುತ್ತಾನೆಂದು ಇಂದ್ರಕುತ್ಸರ ಸಂಬಂಧವನ್ನು ತೋರಿಸಿದೆ.

**ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ ಯೂನೇ ಕುತ್ಸಾಯ ದ್ಯುಮತೇ ಸಚಾಹನ್ ।**

(ಋ. ಸಂ. ೧-೬೩-೩)

**ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿಯಾಸಿ ವಧೈಃ ।**

(ಋ. ಸಂ. ೧-೧೭೧-೯)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ ಇತರ ಅನೇಕ ಕಡೆಗಳಲ್ಲಿಯೂ ಇಂದ್ರನು ಕುತ್ಸನಿಗೆ ಸಹಾಯಮಾಡಲು ಶುಷ್ಣನನ್ನು ಕೊಂದನು ಎಂಬ ವರ್ಣನೆಯಿದೆ. ಮತ್ತು,

**ಅಹಂ ಪಿತೇವ ವೇತಸೂಁರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ ।**

(ಋ. ಸಂ. ೧೦-೪೯-೪)

ಕುತ್ಸನಿಗಾಗಿ ನಾನು ವೇತಸು, ತುಗ್ರ, ಸ್ಮದಿಭ ಇತ್ಯಾದಿ ಶತ್ರುಗಳನ್ನೆಲ್ಲಾ ಸೋಲಿಸಿ, ತನ್ನ ಮಿತ್ರನಿಗೆ ಸಹಾಯ ಮಾಡಿದೆನು ಎಂದು ಇಂದ್ರನೇ ಹೇಳಿಕೊಂಡಿದ್ದಾನೆ. ಆದರೆ,

**ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।**

(ಋ. ಸಂ. ೧–೫೩–೧೦)

**ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ ।**

(ಋ. ಸಂ. ೮-೫೩-೨)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಕುತ್ಸಾದಿಗಳನ್ನು ಸೋಲಿಸಿದುದಾಗಿಯೂ ವರ್ಣಿತವಾಗಿದೆ.

**ವಧಂ**—ವಧನಾಮವನ್ನು ನಿರುಕ್ತಕಾರರು ಬಲನಾಮಗಳಲ್ಲಿ ಪಠಿಸಿದ್ದಾರೆ. ಈ ಪದವು ಋಕ್ಸಂಹಿತೆಯಲ್ಲಿ ಪ್ರಯೋಗಿಸಲ್ಪಟ್ಟಿರುವಾಗ ಬಹುಶಃ ಬಲಪ್ರಯೋಗವನ್ನು ಮಾಡತಕ್ಕದ್ದೂ ವಧಸಾಧನವೂ ಆದ ವಜ್ರಾಯುಧಕ್ಕೆ ವಿಶೇಷಣವಾಗಿರುತ್ತದೆ. ಉದಾಹರಣೆಗೆ,

**ಸ್ವಯಂ ಸೋ ಅಸ್ಮದಾ ನಿದೋ ವಧೈರಜೇತ ದುರ್ಮತಿಂ ।**

(ಋ. ಸಂ. ೧-೧೨೯-೬)

ಇತ್ಯಾದಿ ಋಕ್ಕುಗಳಲ್ಲಿ (೧-೧೩೩-೬; ೨-೨೮-೭; ೬-೨೦-೪ ಇತ್ಯಾದಿ) **ವಧೈಃ, ವಧಂ** ಎಂಬ ಪದಗಳನ್ನು ವಧ ಸಾಧನವಾದ ವಜ್ರಾದ್ಯಾಯುಧಗಳೆಂಬರ್ಥದಲ್ಲಿಯೇ ಉಪಯೋಗಿಸಿದೆ. ಈ ವಧಸಾಧನವು ಇಂದ್ರನ ವಜ್ರಾಯುಧವೇ ಆಗಿರಬೇಕೆಂಬ ನಿಯಮವಿಲ್ಲ. ಬಲವನ್ನು ಪ್ರಯೋಗಿಸತಕ್ಕ ಯಾವ ಆಯುಧಕ್ಕಾದರೂ ಇದು ಪರ್ಯಾಯಪದವಾಗಿರ ಬಹುದು. ಉದಾಹರಣೆಗೆ—

**ಆರೇ ಗೋಹಾ ನೃಹಾ ವಧೋ ವೋ ಅಸ್ತು ಸುಮ್ನೇಭಿರಸ್ಮೇ ವಸವೋ ನಮಧ್ವಂ ।**

(ಋ. ಸಂ. ೭-೫೬-೧೭)

ಎಂಬಲ್ಲಿ ಮರುತ್ತುಗಳನ್ನುದ್ದೇಶಿಸಿ ಅವರ ಆಯುಧವು ಯಜ್ಞಕರ್ತರನ್ನು ಹಿಂಸಿಸದಿರಲಿ ಎಂದು ಪ್ರಾರ್ಥಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಇಂದ್ರನ ವಜ್ರಾಯುಧವೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಮುಷಾಯ**—ಮುಷ ಸ್ತೇಯೇ. ಧಾತು. ಕ್ರ್ಯಾದಿ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ ಹಿ ಆದೇಶ. **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ವಿಕರಣಕ್ಕೆ ಶಾಯಜಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಇದು ಙಿತ್ತಾಗುವುದರಿಂದ ಲಘೂಪಧಗುಣ ಬರುವುದಿಲ್ಲ. ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದ ರಿಂದ ಅಂತೋದಾತ್ತಸ್ವರ ಬರುತ್ತದೆ.

**ಕವೇ**—ಕು ಶಬ್ದೇ. ಧಾತು. **ಅಚಇಃ** ಎಂಬುದರಿಂದ ಇ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಗುಣ ಅವಾದೇಶ. ಸಂಬುಧ್ಯಂತರೂಪ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಈಶಾನಃ**—ಈಶ ಐಶ್ವರ್ಯೇ. ಧಾತು. ಲಡರ್ಥದಲ್ಲಿ ಶಾನಚಾದೇಶ. ಅನುದಾತ್ತೇತ್ತಿನ ಪರದಲ್ಲಿರುವುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಹ**—ವಹ ಪ್ರಾಪಣೇ. ಧಾತು. ವ್ಯತ್ಯಯದಿಂದ ಲಙಿಗೆ ಲೋಟ್. ಮಧ್ಯಮಪುರುಷ ಏಕವಚನಾಂತ ರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸೂರ್ಯಮ್**—ಸೃ ಗತೌ. ಧಾತು. **ರಾಜಸೂಯ ಸೂರ್ಯ**—ಎಂಬುದರಿಂದ ಕ್ಯ ಬಂತವಾಗಿ ನಿಪಾತಿತವಾಗಿದೆ. **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಷಷ್ಠೀ ಏಕವಚನಕ್ಕೆ ದ್ವಿತೀಯಾ ಏಕವಚನಾದೇಶ.

**ವಧಮ್**—ಹನ ಹಿಂಸಾಗತ್ಯೋಃ ಧಾತು. **ಹನಶ್ಚ ವಧಃ** (ಪಾ. ಸೂ. ೩-೩-೭೬) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಅದರೊಡನೆ ಅಂತೋದಾತ್ತಸ್ವರ ವಿಶಿಷ್ಟವಾದ ವಧಾದೇಶ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅಪ್ ಉದಾತ್ತವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಶುಷ್ಮಿಂತಮೋ ಹಿ ತೇ ಮದೋ ದ್ಯುಮ್ನಿಂತಮ ಉತ ಕ್ರತುಃ ।
ವೃತ್ರಘ್ನಾ ವರಿವೋವಿದಾ ಮಂಸೀಷ್ಠಾ ಅಶ್ವಸಾತಮಃ ॥ ೫ ॥

॥ ಪದಪಾಠಃ ॥

ಶುಷ್ಮಿನ್ಽತಮಃ । ಹಿ । ತೇ । ಮದಃ । ದ್ಯುಮ್ನಿನ್ಽತಮಃ । ಉತ । ಕ್ರತುಃ ।
ವೃತ್ರಽಘ್ನಾ । ವರಿವಃಽವಿದಾ । ಮಂಸೀಷ್ಠಾಃ । ಅಶ್ವಽಸಾತಮಃ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತೇ ತವ ಮದಃ ಸೋಮಪಾನಜನಿತಃ ಶುಷ್ಮಿಂತಮೋ ಬಲವತ್ತಮಃ । ಉತಾಪಿ ಚ ತೇ ಕ್ರತುಃ ಕರ್ಮ ವ್ಯಾಪಾರೋಽಸ್ಮದರ್ಥೋ ದ್ಯುಮ್ನಿಂತಮೋಽತಿಶಯೇನಾನ್ನವಾನ್ ಯಶೋವಾನ್ವಾ ॥ ಉಭಯತ್ರಾಯಸ್ಮಯಾದೀನಿ ಛಂದಸೀತಿ ಭಸಂಜ್ಞಾಯಾ ಬಾಧಿತತ್ವಾನ್ನ ಲೋಪಃ ॥ ಹೇ ಇಂದ್ರ ಅಶ್ವಸಾತಮೋಽಶ್ವೋಪಲಕ್ಷಿತಬಹುಧನದಾಸ್ತ್ವಂ ವೃತ್ರಘ್ನಾ ವೃತ್ರಘಾತಿನಾ ವರಿವೋವಿದಾ ಧನಸ್ಯ ಪರಿಚರಣಸ್ಯ ವಾ ವೇದಯಿತಾರೌ ಲಂಭಯಿತಾರೌ ತವ ಮದಕ್ರತೂ ಮಂಸೀಷ್ಠಾಃ । ಅನುಜ್ಞಾತವಾನಸಿ। ಶತ್ರುಘಾತಿನೌ ಧನದಾತಾರೌ ಚ ಸ್ಯಾತಾಮಿತ್ಯನುಗ್ರಹಮಕರೋರಿತ್ಯರ್ಥಃ ॥**

॥ ಪ್ರತಿಪದಾರ್ಥ ॥

(**ಹೇ ಇಂದ್ರ**—ಎಲೈ ಇಂದ್ರನೇ) । **ತೇ**—ನಿನ್ನ । **ಮದಃ**—(ಸೋಮಪಾನಜನಿತ) ಹರ್ಷವು । **ಶುಷ್ಮಿಂತಮಃ**—ಅತ್ಯಂತ ಬಲಿಷ್ಠವಾದುದು । **ಉತ**—ಮತ್ತು । (**ತೇ**—ನಿನ್ನ) । **ಕ್ರತುಃ**—(ನಮಗೋಸ್ಕರ ಮಾಡಲ್ಪಟ್ಟ) ವ್ಯಾಪಾರವೂ । **ದ್ಯುಮ್ನಿಂತಮಃ**—ಅತಿಶಯಾನ್ನ (ಬಲ) ವಿಶಿಷ್ಟವಾದುದು । (**ಹೇ ಇಂದ್ರ**—ಎಲೈ ಇಂದ್ರನೇ) । **ಅಶ್ವಸಾತಮಃ**— ಅಶ್ವೋಪಲಕ್ಷಿತ ಬಹುಧನದಾತೃವಾದ ನೀನು (ನಿನ್ನ ಮದ ಮತ್ತು ಕರ್ಮಗಳೆರಡನ್ನೂ) । **ವೃತ್ರಘ್ನಾ**—ವೃತ್ರನನ್ನು (ಶತ್ರುಗಳನ್ನು) ವಧಿಸತಕ್ಕವುಗಳೂ । **ವರಿವೋವಿದಾ**—ಧನಪ್ರಾಪಕಗಳೂ (ಆಗಿ ಎಂದು) **ಮಂಸೀಷ್ಠಾಃ**—ಅನುಜ್ಞೆಕೊಟ್ಟಿದ್ದೀಯೇ.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮಪಾನಜನಿತವಾದ ನಿನ್ನ ಹರ್ಷವು ಅತಿ ಹೆಚ್ಚಾದುದು ಮತ್ತು ನಮ್ಮ ಉದ್ದಿಶ್ಯಕವಾದ ನಿನ್ನ ಕರ್ಮಗಳೂ ಅತ್ಯಂತ ಉಪಕಾರಿಗಳು. ಎಲೈ ಇಂದ್ರನೇ ಈ ನಿನ್ನ ಹರ್ಷ ಮತ್ತು ಕರ್ಮಗಳಿಗೆ ಶತ್ರುವಧ ಮತ್ತು ಧನದಾನಶಕ್ತಿಗಳು ನಿನ್ನಿಂದ ಅನುಗೃಹೀತವಾಗಿವೆ.

English Translation·

Your inebriety is most intense; nevertheless, Your acts (for our good) are most beneficent. You desire, bountiful giver of horses, that (both your inebriety and your beneficence should be the means of) destroying enemies and distributing riches.

॥ ವಿಶೇಷವಿಷಯಗಳು ॥

ಇಂದ್ರನನ್ನು ಸಂಬೋಧಿಸಿ ಇಂದ್ರನಿಗೆ ಉಂಟಾಗಿರುವ ಮದವು ಸೋಮಪಾನದಿಂದ ಉತ್ಪನ್ನವಾದುದು ಎಂದೂ ಅದು ಇತರ ಮದಕರವಾದವುಗಳಿಗಿಂತ ಬಹಳ ಪ್ರಭೂತವಾದುದೆಂದೂ **ಮದಃ ಶುಷ್ಮಿಂತಮಃ ಬಲವತ್ತಮಃ** ಎಂಬ ವಾಕ್ಯದಿಂದ ವರ್ಣಿಸಿದೆ.

**ಕ್ರತುಃ—ಕರ್ಮ** । ಯಾಸ್ಕರು ಕ್ರತು ಶಬ್ದಕ್ಕೆ **ಕರ್ಮ ವಾ ಪ್ರಜ್ಞಾ ವಾ** (ನಿ. ೨.೨೮) ಕರ್ಮ ಅಥವಾ ಪ್ರಜ್ಞಾ ಎಂದು ಅರ್ಥವನ್ನು ವಿವರಿಸಿದ್ದಾರೆ. ಮತ್ತು ಋಕ್ಸಂಹಿತೆಯ,

**ಯೋ ಜಾತ ಏವ ಪ್ರಥಮೋ ಮನಸ್ವಾನ್ದೇವೋ ದೇವಾನ್ಕ್ರತುನಾ ಪರ್ಯಭೂಷತ್ ।**
**ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ॥**
(ಋ. ಸಂ. ೨-೧೨-೧)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಕ್ರತು** ಶಬ್ದದ ವಿಶೇಷಾರ್ಥವನ್ನು ತಿಳಿಸಿದ್ದಾರೆ. (ನಿ. ೧೦-೧೦) **ಕ್ರತು** ಶಬ್ದಕ್ಕೆ **ಕರ್ಮ**ವೆಂದು ಸಾಧಾರಣವಾಗಿ ಅರ್ಥವನ್ನು ಹೇಳಿದರೂ ಸಹ ಈ ಕರ್ಮದಲ್ಲಿ ಅತ್ಯಧಿಕವಾದ ಒಂದು ವೈಶಿಷ್ಟ್ಯವಿದೆಯೆಂದು ಈ ಪದದ ಪ್ರಯೋಗವಿರುವೆಡೆಗಳಲ್ಲೆಲ್ಲಾ ತಿಳಿಯುತ್ತದೆ. ಮತ್ತು ಕರ್ಮಕ್ಕೆ ಪ್ರಚೋದಕವಾದ ಸಂಕಲವೆಂದು ಈ ಪದದ ಮುಖ್ಯಾರ್ಥವಾಗಿದೆ. ಈ ಅರ್ಥವು ಕೆಳಗೆ ಉದಾಹೃತವಾಗಿರುವ ಋಕ್ಕಿನಿಂದ ತಿಳಿಯುತ್ತದೆ.

**ಸುಪ್ರವಾಚನಂ ತವ ವೀರ ವೀರ್ಯ೧ಂ ಯದೇಕೇನ ಕ್ರತುನಾ ವಿಂದಸೇ ವಸು ।**
**ಜಾತೂಷ್ಠಿರಸ್ಯ ಪ್ರ ವಯಃ ಸಹಸ್ವತೋ ಯಾ ಚಕರ್ಥ ಸೇಂದ್ರ ವಿಶ್ವಾಸ್ವುಕ್ಥ್ಯಃ ॥**
(ಋ. ಸಂ. ೨-೧೩-೧೧)

ಎಂಬ ಈ ಋಕ್ಕಿನಲ್ಲಿ **ಕ್ರತುನಾ** ಎಂದ ಪದಕ್ಕೆ **ಕರ್ಮಣಾ** ಎಂದು ಸಾಯಣರು ಅರ್ಥಮಾಡಿದ್ದಾರೆ. ಇಲ್ಲಿ **ಕರ್ಮ**ವೆಂಬುದಕ್ಕಿಂತ **ಸಂಕಲ್ಪ**ವೆಂದು ಹೇಳುವುದು ಉಚಿತವಾಗಿರುತ್ತದೆ. ಇದೇ ಉದಾಹರಣೆಯನ್ನು Monier Williams ಎಂಬ ಪಂಡಿತನು ವಿವರಿಸುತ್ತಾ **ಏಕೇನ ಕರ್ಮಣಾ** ಎಂಬುದಕ್ಕೆ Through the mere will (Sanskrit—English Dictionary) ಕೇವಲ ಸಂಕಲ್ಪಮಾತ್ರದಿಂದಲೇ ಎಂದರ್ಥಮಾಡಿದ್ದಾನೆ. ಇದು ಈ ಸಂದರ್ಭದಲ್ಲಿ ಸಹಜವಾದ ಅರ್ಥವಾಗಿರುತ್ತದೆ. ಹೇಗೆಂದರೆ, ಇಲ್ಲಿ ಇಂದ್ರನ ಪರಾಕ್ರಮವನ್ನು ವರ್ಣಿಸಿದೆ. ಇಂದ್ರನು ಒಂದೇ ಕರ್ಮದಿಂದ ಶತ್ರುನಾಶವನ್ನು ಮಾಡಿದನು ಎಂಬುದಕ್ಕಿಂತ ಇಲ್ಲಿ ಇಂದ್ರನು "ಕೇವಲ ಸಂಕಲ್ಪಮಾತ್ರದಿಂದಲೇ ಶತ್ರುನಾಶವನ್ನು ಮಾಡಿದನು" ಎಂಬುದೇ ಸಹಜವಾಗಿದೆ.

**ಕ್ರತು** ಶಬ್ದವನ್ನು ಕರ್ಮಪರ್ಯಾಯವಾಗಿ ಉಪಯೋಗಿಸಿದಾಗೆಲ್ಲಾ ಆ ಕರ್ಮಕ್ಕೆ ಮೂಲವಾದ ಸಂಕಲ್ಪವೂ ಮತ್ತು ಕರ್ಮದ ಗುರಿಯಾದ ಧ್ಯೇಯವೂ ಸೂಚಿತವಾಗಿ ಈ ಪದವು ಪುರುಷನ ಆಧ್ಯಾತ್ಮಿಕವಾದ ಅಸ್ತಿತ್ವವನ್ನೂ ಅದೇ ಧ್ಯೇಯವನ್ನೂ ತೋರಿಸುತ್ತದೆ. ಉದಾಹರಣೆಗೆ—

**ತ್ವಂ ಸೋಮ ಕ್ರತುಭಿಃ ಸುಕ್ರತುರ್ಭೂಸ್ತ್ವಂ ದಕ್ಷೈಃ ಸುದಕ್ಷೋ ವಿಶ್ವವೇದಾಃ ।**
**ತ್ವಂ ವೃಷಾ ವೃಷತ್ವೇಭಿರ್ಮಹಿತ್ವಾ ದ್ಯುಮ್ನೇಭಿರ್ದ್ಯುಮ್ನ್ಯಭವೋ ನೃಚಕ್ಷಾಃ ॥**
(ಋ. ಸಂ. ೧-೯೧-೨)

ಎಂಬ ಋಕ್ಕಿನಲ್ಲಿ **ಕ್ರತು** ಮತ್ತು **ದಕ್ಷ** ಎಂಬ ಎರಡು ಪದಗಳು ಸೋಮದೇವನ ಅಸಾಧಾರಣವಾದ ಗುಣಗಳನ್ನು ತಿಳಿಸುತ್ತವೆ. ಅತ್ಯುತ್ತಮವಾದ ಜ್ಞಾನಯುಕ್ತನೆಂದು ಸೋಮನನ್ನು ಸಂಬೋಧಿಸಿದೆ. ಇದರಂತೆಯೇ,

**ತೇ ಸತ್ಯೇನ ಮನಸಾ ದೀಧ್ಯಾನಾಃ ಸ್ವೇನ ಯುಕ್ತಾಸಃ ಕ್ರತುನಾ ವಹಂತಿ ।**
**ಇಂದ್ರವಾಯೂ ವೀರವಾಹಂ ರಥಂ ವಾಮೀಶಾನಯೋರಭಿ ಪೃಕ್ಷಃ ಸಚಂತೇ ॥**
(ಋ. ಸಂ. ೭-೯೦-೫)

ಎಂಬಲ್ಲಿ ಯಜ್ಞರೂಪವಾದ ಮಾನವವ್ಯವಹಾರಕ್ಕೆ ಮೂಲವಾದ ಜ್ಞಾನವೂ ಮತ್ತು ಸಂಕಲ್ಪವೂ **ಕ್ರತುನಾ** ಎಂಬ ಪದದಿಂದ ಸೂಚಿತವಾಗಿದೆ. ವಿಶ್ವವ್ಯವಹಾರವೆಲ್ಲವೂ ಯಜ್ಞಮಯವಾಗಿರುವುದರಿಂದ ಈ ವಿಶ್ವಾತ್ಮಕವಾದುದೂ, ಮತ್ತು ವೈಯಕ್ತಿಕವಾದ ಕರ್ಮಗಳಿಂದ ನಿರ್ವಹಿಸಲ್ಪಡತಕ್ಕದ್ದೂ ಆದ ಯಜ್ಞಕ್ಕೆ ಮೂಲವೇ ಪುರುಷಸಂಕಲ್ಪವು. ಪುರುಷನ ವ್ಯಕ್ತಿತ್ವವು ಈ ಸಂಕಲ್ಪ ಮತ್ತು ಧ್ಯೇಯಗಳಿಂದಲೇ ಪೂರ್ಣವಾಗಿರಬೇಕು. ಆದುದರಿಂದಲೇ ಪುರುಷನು **ಕ್ರತುಮಯ**ನೆಂದು ವರ್ಣಿಸಲ್ಪಟ್ಟಿದ್ದಾನೆ. ಇದೇ ಅಂಶವನ್ನು ಉಪನಿಷದಾದಿಗಳಲ್ಲಿ ಈ ರೀತಿ ವರ್ಣಿಸಿದೆ.

**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ । ಅಥ ಖಲು ಕ್ರತುಮಯಃ ಪುರುಷೋ ಯಥಾಕ್ರತುರಸ್ಮಿಁಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ।** (ಛಾ. ಉ. ೩-೧೪-೧)

ಎಂಬಲ್ಲಿ ಪುರುಷನನ್ನು ಕ್ರತುಮಯನೆಂದು ಹೇಳಿದೆ. ಇಲ್ಲಿ **ಕ್ರತು** ವೆಂದರೇನು ಎಂಬುದನ್ನು ವಿವರಿಸುತ್ತಾ ಶಂಕರಾಚಾರ್ಯರು ಈ ರೀತಿ ಭಾಷ್ಯವನ್ನು ಹೇಳಿದ್ದಾರೆ—

**ಕ್ರತುಂ ಕುರ್ವೀತ ಕ್ರತುರ್ನಿಶ್ಚಯೋಽಧ್ಯವಸಾಯ ಏವಮೇವ ನಾನ್ಯಥೇತ್ಯವಿಚಲಃ ಪ್ರತ್ಯಯಸ್ತಂ ಕ್ರತುಂ ಕುರ್ವೀತೋಪಾಸೀತೇತ್ಯನೇನ ವ್ಯವಹಿತೇನ ಸಂಬಂಧಃ। ಕಿಂ ಪುನಃ ಕ್ರತುಕರಣೇನ ಕರ್ತವ್ಯಂ ಪ್ರಯೋಜನಂ। ಕಥಂ ವಾ ಕ್ರತುಃ ಕರ್ತವ್ಯಃ। ಕ್ರತುಕರಣಂ ಚಾಭಿಪ್ರೇತಾರ್ಥಸಿದ್ಧಿಸಾಧನಂ ಕಥಂ? ಇತ್ಯಸ್ಯಾರ್ಥಸ್ಯ ಪ್ರತಿಪಾದನಾರ್ಥಮುಥೇತ್ಯಾದಿಗ್ರಂಥಃ।............ಯಸ್ಮಾತ್ಕ್ರತುಮಯಃ ಕ್ರತುಪ್ರಾಯೋಽಧ್ಯವಸಾಯಾತ್ಮಕಃ ಪುರುಷೋ ಜೀವಃ। ಯಥಾಕ್ರತುರ್ಯಾದೃಶಃ ಕ್ರತುಃ ಅಸ್ಯ ಸೋಽಯಂ ಯಥಾಕ್ರತುರ್ಯಥಾಧ್ಯವಸಾಯಃ ಯಾದೃಙ್ನಿಶ್ಚಯಃ ಅಸ್ಮಿನ್ನಿಹ ಪುರುಷೋ ಭವತಿ ತಥೇತೋಽಸ್ಮಾದ್ದೇಹಾತ್ಪ್ರೇತ್ಯ ವೃತ್ತಾ ಭವತಿ। ಕ್ರತ್ವನುರೂಪಫಲಾತ್ಮಕೋ ಭವತೀತ್ಯರ್ಥಃ॥**

(ಶಾಂಕರಭಾಷ್ಯ. ಛಾ. ಉ. ೩-೧೪-೧)

ಕ್ರತುವೆಂದರೆ ಮನೋನಿಶ್ಚಯ, ಮನಸ್ಸಂಕಲ್ಪ ಮತ್ತು ಅವಿಚಲವಾದ ಶ್ರದ್ಧೆ ಎಂದರ್ಥವಾಗುತ್ತದೆ ಹೀಗೆ ಸಂಕಲ್ಪ ರೂಪವಾದದ್ದೂ ಮತ್ತು ಶ್ರದ್ಧಾಮಯವಾದದ್ದೂ ಆದ ಕ್ರತುವಿನ ಉಪಾಸನೆಯನ್ನು ಪುರುಷನು ಅವಶ್ಯವಾಗಿ ಮಾಡ ತಕ್ಕದ್ದು. ಇಹಲೋಕದಲ್ಲಾಗಲಿ, ಪಾರ್ಥಿವವಾದ ದೇಹದ ತ್ಯಾಗಾನಂತರದಲ್ಲಾಗಲಿ ಪುರುಷನ ಅಸ್ತಿತ್ವವು ಅವನ ಕ್ರತುವಿನ ಸ್ವರೂಪವನ್ನನುಸರಿಸುತ್ತದೆ. ಮತ್ತು ಆ ಕ್ರತೂಪಾಸನೆಯ ಫಲವಾಗಿರುತ್ತದೆ. ಕ್ರತೂಪಾಸನೆಯಿಲ್ಲದಿದ್ದರೆ ಉತ್ತಮವಾದ ಫಲವಿಲ್ಲವೆಂಬುದೂ ಸಿದ್ಧವು ಎಂಬುದಾಗಿ ಶಾಂಕರಭಾಷ್ಯದ ವಿವರಣೆಯಿದೆ.

ಇಲ್ಲಿ **ಕ್ರತು** ಶಬ್ದಕ್ಕೆ ಸಂಕಲ್ಪವೆಂದರ್ಥವೇ ಅಥವಾ ಧ್ಯೇಯ (Purpose) ವೆಂದರ್ಥವೇ ಎಂಬ ವಿಚಾರವನ್ನು ಚರ್ಚಿಸುತ್ತಾ Edgerton (ಎಡ್ಗರ್ಟನ್) ಎಂಬ ಆಂಗ್ಲ ಪಂಡಿತನು ಶತಪಥಬ್ರಾಹ್ಮಣದ ವಾಕ್ಯವನ್ನೂ, ಮೇಲೆ ಉದಾಹೃತವಾದ ವಾಕ್ಯವನ್ನೂ ಉದಾಹರಿಸಿ ಅಲ್ಲಿ **ಕ್ರತು** ಶಬ್ದದ ಅರ್ಥವನ್ನು ಈ ರೀತಿ ವಿವರಿಸಿದ್ದಾನೆ.—

The word ಕ್ರತು is not easy to define. Eggeling translates it "understanding" but with an alternative "will; purpose" which is more in accord with the Hindu commentator on the passage who says that ಕ್ರತು means ನಿಶ್ಚಯ, ಅಧ್ಯವಸಾಯ, i.e, "fixed determination." It seems to mean man's mental costitution as a whole, the "total frame of mind," but with a strong **flavourof will, Conscious purpose**, or determination...................Man'sಕ್ರತು therefore would be his mental make up in general, but particularly any fixed determination he may entertain with regard to his future life. And his ಕ್ರತು at the moment of death decides his destimy after death.

(Annals of Bhandarkar Institute. Vol. VIII. p. 223)

ಇದರ ಸಾರಾಂಶವಿಷ್ಟೆ. ಶತಪಥಬ್ರಾಹ್ಮಣದಲ್ಲೂ (೧೦-೬-೩-೧) ಮತ್ತು ಛಾಂದೋಗ್ಯೋಪನಿಷತ್ತಿನಲ್ಲೂ (೩-೧೪-೧) ಇರುವ ಕ್ರತುಶಬ್ದಕ್ಕೆ Eggeling ಎಂಬ ಪರಿವರ್ತನಕಾರನು **ಜ್ಞಾನ** ಎಂಬರ್ಥವನ್ನು ಹೇಳಿ ನಂತರ ಸಂಕಲ್ಪ,

ಧ್ಯೇಯ ಎಂಬ ಪರ್ಯಾಯರೂಪವಾದ ಅರ್ಥವನ್ನೂ ಹೇಳಿದ್ದಾನೆ. ಒಟ್ಟಿನಲ್ಲಿ ಈ ಪದಕ್ಕೆ ಪುರುಷನ ಶಾಶ್ವತವಾದ ಸ್ಥಿತಿಗತಿಗಳನ್ನು ನಿಷ್ಕರ್ಷಿಸತಕ್ಕ ಪುರುಷನ ಮನಸ್ಸಂಕಲ್ಪವೆಂದೇ ಅರ್ಥವಾಗುತ್ತದೆ, ಎಂದಿದೆ.

ಋಕ್ಸಂಹಿತೆಯ ಅನೇಕ ಭಾಗಗಳಲ್ಲಿ ಈ ಪದಕ್ಕೆ ಯಜ್ಞವೆಂಬರ್ಥವಾದರೂ ಸಹ ಇದೇ ತಾತ್ಪರ್ಯವು ಸೂಚಿತವಾಗಿ ಸಂಕಲ್ಪಾತ್ಮಕವಾದ ಯಜ್ಞವೆಂದೇ ಅರ್ಥವಾಗುತ್ತದೆ. ಉದಾಹರಣೆಗೆ—

**ಸಾಕಂ ಹಿ ಶುಚಿನಾ ಶುಚಿಃ ಪ್ರಶಾಸ್ತಾ ಕ್ರತುನಾಜನಿ ।**
**ವಿದ್ವಾँ ಅಸ್ಯ ವ್ರತಾ ಧ್ರುವಾ ವಯಾ ಇವಾನು ರೋಹತೇ ।**

(ಋ ಸಂ ೨–೫–೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಭಾವವು ವ್ಯಕ್ತವಾಗುತ್ತದೆ. ಪುರುಷನ ಅಸ್ತಿತ್ವವೂ ಭವಿಷ್ಯತ್ತಿನ ಸ್ಥಿತಿಗತಿಗಳೂ ಈ ಕ್ರತು ರೂಪವಾದ ಕರ್ಮವನ್ನೇ ಆಶ್ರಯಿಸಿರುವುದರಿಂದ ಉಪನಿಷದಾದಿಗಳಲ್ಲಿ ಪದೇಪದೇ ಮಾನವನಿಗೆ ಈ ವಿಷಯದಲ್ಲಿ ಎಚ್ಚರಿಕೆಯನ್ನು ಕೊಡಲಾಗುತ್ತಿದೆ.

**ಓಂ ಕ್ರತೋ ಸ್ಮರ ಕೃತಗ್ಂ ಸ್ಮರ ಕ್ರತೋ ಸ್ಮರ ಕೃತಗ್ಂ ಸ್ಮರ ।**

(ಈಶ. ೧೮)

ಎಂದು ಈಶ, ಬೃಹದಾರಣ್ಯಕಾದ್ಯುಪನಿಷತ್ತುಗಳಲ್ಲಿ (ಬೃ. ಉ. ೫-೧೫-೧) ಸಂಕಲ್ಪಾತ್ಮಕನಾದ ಆತ್ಮನನ್ನುದ್ದೇಶಿಸಿ ಉಪದೇಶಿಸಿದೆ. **ಕ್ರತೋ** ಎಂಬ ಪದಕ್ಕೆ **ಹೇ ಸಂಕಲ್ಪಾತ್ಮಕ** ಎಂದೇ ಶಂಕರಾಚಾರ್ಯರು ಅರ್ಥವನ್ನು ಹೇಳಿದ್ದಾರೆ. ಆದರೆ, ಐತರೇಯೋಪನಿಷತ್ತಿನಲ್ಲಿ ಅಧ್ಯಾತ್ಮದ ಸ್ವರೂಪವನ್ನು ವಿವರಿಸುವಾಗ—

**ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ............ಸ್ಮೃತಿಃ ಸಂಕಲ್ಪಃ ಕ್ರತುಃ ।**

(ಐ. ಉ. ೩-೨)

**ಸಂಕಲ್ಪ** ಮತ್ತು **ಕ್ರತು** ಎಂಬ ಬೇರೆ ಬೇರೆ ಆತ್ಮಗುಣಗಳನ್ನು ಹೇಳಿದೆ.

ಈ ರೀತಿ ಆಧ್ಯಾತ್ಮಿಕವಾದ ಗುಣಗಳನ್ನು ತಿಳಿಸುವ ವೇಳೆಗಳಲ್ಲಿ ಮಾತ್ರವಲ್ಲದೇ ಪುರುಷನ ಭೌತಿಕವಾದ ಕರ್ಮಗಳನ್ನೂ ತಿಳಿಸುವಾಗಲೂ ಈ ಪದವು ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ನ ಹಿ ನು ಯಾದಧೀಮಸೀಂದ್ರಂ ಕೋ ವೀರ್ಯಾ ಪರಃ ।**
**ತಸ್ಮಿನ್ನೃಮ್ಣಮುತ ಕ್ರತುಂ ದೇವಾ ಓಜಾಂಸಿ ಸಂ ದಧುರರ್ಚನ್ನನು ಸ್ವರಾಜ್ಯಂ ।**

(ಋ. ಸಂ. ೧-೮೦-೧೫)

ಇತ್ಯಾದಿ ಋಕ್ಕುಗಳಲ್ಲಿ ಕ್ರತುಶಬ್ದಕ್ಕೆ ವೀರ್ಯಕರ್ಮವೆಂದೂ,

**ಯಸ್ಯಾಜಸ್ರಂ ಶವಸಾ ಮಾನಮುಕ್ಥಂ ಪರಿಭುಜದ್ರೋದಸೀ ವಿಶ್ವತಃ ಸೀಂ ।**
**ಸ ಪಾರಿಷತ್ಕ್ರತುಭಿರ್ಮಂದಸಾನೋ ಮರುತ್ವಾನ್ನೋ ಭವತ್ವಿಂದ್ರ ಊತೀ ।**

(ಋ. ಸಂ. ೧-೧೦೦-೧೪)

ಇತ್ಯಾದಿಗಳಲ್ಲಿ ಯಜ್ಞಕರ್ಮವೆಂದೂ ಅರ್ಥವಾಗುತ್ತದೆ. ಹೀಗೆಯೇ, ಶಕ್ತಿ, ಸಂಪತ್ತು, ಪ್ರಭಾವ ಇತ್ಯಾದ್ಯರ್ಥಗಳಲ್ಲಿಯೂ ಈ ಪದವ ಪ್ರಯೋಗವಿರುತ್ತದೆ.

ಇಲ್ಲಿ **ವ್ಯಾಪಾರೋ ಅಸ್ಮದರ್ಥಃ**— ಯಜಮಾನರಾದ ನಮಗಾಗಿ ಆಚರಿಸುವ ಇಂದ್ರನ ಕರ್ಮವು, **ದ್ಯುಮ್ನಿಂತಮಃ— ಅತಿಶಯೇನ ಅನ್ನವಾನ್ ಯಶೋವಾನ್ ವಾ**— ಪ್ರಭೂತವಾದ ಅನ್ನವನ್ನು ಅಥವಾ ಯಶಸ್ಸನ್ನೂ ಉಂಟುಮಾಡುವುದಕ್ಕಾಗಿಯೇ ಇರುವುದು ಎಂಬ ಅರ್ಥವು ವಿವೃತವಾಗಿದೆ. ಯಾಸ್ಕರು—

**ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತ ರಾತಿರಸ್ತು ।**

**ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥**

(ಋ. ಸಂ. ೭-೨೫-೩)

ಈ ಋಕ್ಕನ್ನು ಉದಹರಿಸಿ **ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ** ಕಾಂತಿಯಿಂದ ಬೆಳಗಿಸು ಎಂದು ಅರ್ಥವುಳ್ಳ ದ್ಯುತ ಧಾತುವಿನಿಂದ ನಿಷ್ಪನ್ನವಾದ ದ್ಯುಮ್ನ ಎಂಬ ಪದಕ್ಕೆ ಯಶಸ್ಸು ಅಥವಾ ಅನ್ನ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಅಶ್ವಸಾತಮಃ— ಅಶ್ವೋಪಲಕ್ಷಿತಬಹುಧನದಾಃ** ಇಂದ್ರನು ಅಶ್ವಸಹಿತವಾದ ಪ್ರಭೂತವಾದ ಧನವನ್ನು ಅನುಗ್ರಹಿಸುವನು ಎಂದು ಅರ್ಥವನ್ನು ವರ್ಣಿಸಿದೆ.

**ವರಿವೋವಿದಾ— ಧನಸ್ಯ ಪರಿಚರಣಸ್ಯ ವಾ ವೇದಯಿತಾರೌ ಲಂಭಯಿತಾರೌ** ವರಿವಃ ಎಂಬ ಪದವು ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ. ಸಾಯಣರು ಇಂದ್ರನ ಮದವೂ, ಕರ್ಮವೂ **ವೃತ್ರಘ್ನಾ**- ಐತಿಹಾಸಿಕಪರವಾದ ಅರ್ಥದಲ್ಲಿ ವೃತ್ರಾಸುರನನ್ನು ನಿಗ್ರಹಿಸಿರುವುದೆಂದೂ, ತತ್ತ್ವದೃಷ್ಟಿಯಿಂದ ಮೇಘವನ್ನು ಹೊಡದು ವೃಷ್ಟಿಯು ಬರುವಂತೆ ಮಾಡುವುದೆಂದೂ ವರ್ಣಿಸಿ, ಧನವನ್ನು ಕೊಡುವುವೂ, ಶತ್ರುವನ್ನು ನಿಗ್ರಹಿಸುವುವೂ ಆಗಿರು ತ್ತವೆಯಾದಕಾರಣ ಯಜ್ಞಮಾಡುವ ಯಜಮಾನರಾದ ನಮ್ಮ ವಿಷಯದಲ್ಲಿ ಈ ಮದಕ್ರತುಗಳು **ಶತ್ರುಘಾತಿನೌ ಧನದಾತಾರೌ ಚ ಸ್ಯಾತಾಮಿತ್ಯನುಗ್ರಹಮುಕರೋಃ**— ಶತ್ರುನಾಶಕಗಳಾಗಿಯೂ, ಧನಪ್ರದಗಳಾಗಿಯೂ ಇರುವಂತೆ ಇಂದ್ರನು ಅನುಗ್ರಹಿಸಿರುವನೆಂಬ ಅರ್ಥವು ವಿವೃತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶುಷ್ಮಿಂತಮಃ**— ಶುಷ್ಮ ಬಲಮಸ್ಯ ಅಸ್ತಿ ಇತಿ ಶುಷ್ಮೀ. ಅತಿಶಯೇನ ಶುಷ್ಮೀ ಶುಷ್ಮಿಂತಮಃ **ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ ಬಂದಾಗ ಅದರ ಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. **ಆಯಸ್ಮಯಾದೀನಿ ಛಂದಸಿ** (ಪಾ. ಸೂ. ೧-೪-೨೦) ಎಂಬುದರಿಂದ ತಮಪಿನ ಪೂರ್ವಕ್ಕೆ ಭ ಸಂಜ್ಞಾ ಬರುವುದರಿಂದ ಪದಸಂಜ್ಞಾ ನಿಮಿತ್ತವಾದ ನ ಲೋಪ ಬರುವುದಿಲ್ಲ. ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಇನಿ ಪ್ರತ್ಯಯ ಸ್ವರ ಉಳಿಯುತ್ತದೆ. ದ್ಯುಮ್ನಿಂತಮಃ ಎಂಬಲ್ಲಿಯೂ ಹೀಗೆಯೇ ಕಾರ್ಯಗಳು ಬರುತ್ತವೆ.

**ಮದಃ**— ಮದ ತೃಪ್ತಿಯೋಗೇ. ಧಾತು. **ಮದೋಽನುಪಸರ್ಗೇ** (ಪಾ. ಸೂ. ೩-೩-೬೭) ಎಂಬುದರಿಂದ ಅಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವೃತ್ರಘ್ನಾ**— ಹನ ಹಿಂಸಾಗತ್ಯೋಃ ಧಾತು. ಕ್ವಿಪ್ ಪ್ರತ್ಯಯ ಛಾಂದಸವಾಗಿ ಭ ಸಂಜ್ಞಾ ಇರುವುದರಿಂದ. ಅಲ್ಲೋಪ ಬರುತ್ತದೆ. **ಸುಪಾಂ ಸುಲುಕ್**- (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವರಿವೋವಿದಾ**– ವಿದ ಜ್ಞಾನೇ. ಧಾತು. ಕ್ವಿಪ್ ಪ್ರತ್ಯಯ ಹಿಂದಿನಂತೆಯೇ ವಿಭಕ್ತಿಗೆ ಆಕಾರಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಂಸೀಷ್ಠಾಃ**—ಮನ ಜ್ಞಾನೇ. ಧಾತು. ಲಿಜ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಆದೇಶ. **ಲಿಙಃ ಸೀಯುಟ್** ಎಂಬುದರಿಂದ ಸೀಯುಟ್. **ಸುಟ್ ತಿಥೋಃ** ಎಂಬುದರಿಂದ ಥಾಸಿಗೆ ಸುಟಾಗಮ. ಧಾತು ನಕಾರಕ್ಕೆ ಅನುಸ್ವಾರ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತ ವಾಗುತ್ತದೆ.

**ಅಶ್ವಸಾತಮಃ**—ಷಣು ದಾನೇ. ಧಾತು. ಕ್ವಿಪ್ ಪ್ರತ್ಯಯ. **ಜನಸನಖನಾಂ ಸನ್‌ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. ಇದರ ಮೇಲೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಯಥಾ ಪೂರ್ವೇಭ್ಯೋ ಜರಿತೃಭ್ಯ ಇಂದ್ರ ಮಯ ಇವಾಪೋ ನ ತೃಷ್ಯತೇ ಬಭೂಥ ।

ತಾಮನು ತ್ವಾ ನಿವಿದಂ ಜೋಹವೀಮಿ ವಿದ್ಯಾಮೇಷಂ ವೃಜನಂ ಜೀರದಾನುಂ ॥

॥ ಪದಪಾಠಃ ॥

ಯಥಾ । ಪೂರ್ವೇಭ್ಯಃ । ಜರಿತೃಽಭ್ಯಃ । ಇಂದ್ರ । ಮಯಃಽಇವ । ಆಪಃ । ನ । ತೃಷ್ಯತೇ । ಬಭೂಥ ।

ತಾಂ । ಅನು । ತ್ವಾ । ನಿಽವಿದಂ । ಜೋಹವೀಮಿ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪೂರ್ವೇಭ್ಯೋ ಜರಿತೃಭ್ಯಃ ಪುರಾತನೇಭ್ಯೋ ಗರಿತೃಭ್ಯಃ ಸ್ತೋತೃಭ್ಯೋ ಮಯ ಇವ ಬಭೂಥ । ಮಯಃ ಸುಖಂ । ಸುಖಸ್ವರೂಪಮಿವಾಭವಃ । ತದ್ವತ್ ಸ್ತೋತೃಭ್ಯೋಽಸ್ಮಭ್ಯಂ ಸುಖೋ ಭವ । ತತ್ರ ದೃಷ್ಟಾಂತಃ । ತೃಷ್ಯತ ಆಪೋ ನ ತೃಷಾರ್ತಸ್ಯೋದಕಾನಿ ಯಥಾ ಸುಖಕರಾಣೀತಿ ತದ್ವತ್ । ತಸ್ಮಾತ್ತ್ವಾಂ ನಿವಿದಂ,ತ್ವತ್ಪ್ರೀತಿಕರೀಂ ಪ್ರಸಿದ್ಧಾಂ ಸ್ತುತಿಂ ತ್ವಾ ತುಭ್ಯಮನು ಜೋಹವೀಮಿ । ಪುನಃ ಪುನಃ ಕರೋಮಿ । ಯದ್ವಾ । ತಾಂ ನಿವಿದಮನು ॥ ತೃತೀಯಾರ್ಥೇ । ಪಾ ೧-೪-೮೫ । ಇತ್ಯನೋಃ ಕರ್ಮಪ್ರವಚನೀಯತ್ವಂ ॥ ತಯಾ ಸ್ತುತ್ಯಾ ತ್ವಾಂ ಜೋಹವೀಮಿ । ಪುನಃ ಪುನರಾಹ್ವಯಾಮಿ । ವಿದ್ಯಾಮೇತಿ ವ್ಯಾಖ್ಯಾತಂ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಪೂರ್ವೇಭ್ಯಃ**- ಪುರಾತನರಾದ । **ಜರಿತೃಭ್ಯಃ**—ಸ್ತೋತೃಗಳಿಗೆ । **ತೃಷ್ಯತೇ**—ತೃಷಾರ್ತನಿಗೆ । **ಆಪಃ ನ**—ಉದಕಗಳು ಹೇಗೆ ತೃಪ್ತಿಕಾರಕಗಳಾಗುತ್ತವೆಯೋ ಹಾಗೆ । **ಮಯಃ ಇವ**—ಸುಖಸ್ವರೂಪನಂತೆ । **ಯಥಾ**—ಹೇಗೆ । **ಬಭೂಥ**—ಆಗಿದ್ದೆಯೋ । **(ತಥಾ**—ಹಾಗೆ ನಮಗೂ ಸುಖ ಸ್ವರೂಪನಾಗು) । (ಆದುದರಿಂದ) **ತಾಂ**—ಆ ಪ್ರಸಿದ್ಧವಾದ । **ನಿವಿದಂ ಅನು**—(ನಿನ್ನ) ಸ್ತುತಿಯನ್ನನುಸರಿಸಿ । **ತ್ವಾ**—ನಿನ್ನನ್ನು । **ಜೋಹವೀಮಿ**—ಪುನಃಪುನಃ ಆಹ್ವಾನಿಸುತ್ತೇನೆ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ನಿನ್ನನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು, ಪುರಾತನ ಸ್ತೋತೃಗಳಿಗೆ, ಉದಕಗಳು ತೃಷಾರ್ತನಿಗೆ ತೃಪ್ತಿಯನ್ನು ನೀಡುವಂತೆ ಹೇಗೆ ಸುಖಕರನಾಗಿದ್ದೆಯೋ ಹಾಗೆ ನಮಗೂ ಸುಖಪ್ರದನಾಗು; ನಾನೂ ನಿನ್ನ ಪ್ರಸಿದ್ಧವಾದ ಸ್ತುತಿವಾಕ್ಯಗಳಿಂದ ಪುನಃಪುನಃ ಸ್ತುತಿಸುತ್ತೇನೆ; ನಮಗೆ ಆಹಾರ. ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸು.

English Translation

Inasmuch, Indra, as you have been the-(giver of) happiness to your ancient encomiasts, like water to one who is thirsty, therefore I constantly repeat this your praise, that I may thence obtain food, strength, and long life.

॥ ವಿಶೇಷವಿಷಯಗಳು ॥

ಇಂದ್ರನು ಸ್ತೋತೃಗಳಿಗೆ ಉಂಟುಮಾಡತಕ್ಕ ಹರ್ಷವನ್ನು ವರ್ಣಿಸಿ ಆ ಹರ್ಷದಿಂದ ಉಂಟಾಗತಕ್ಕ ತೃಪ್ತಿಯನ್ನು ಬಾಯಾರಿದವರಿಗೆ ಜಲಪಾನದಿಂದ ಲಭಿಸುವ ತೃಪ್ತಿಗೆ ಹೋಲಿಸಿದೆ ಅಂತಹ ತೃಪ್ತಿದಾಯಕನಾದ ಇಂದ್ರನನ್ನು **ನಿವಿದ್** ಮಂತ್ರಗಳಿಂದ ಹಿಂದಿನ ಸ್ತುತಿಕಾರರು ಸ್ತುತಿಸಿದಂತೆ ತಾನೂ ಸ್ತುತಿಸುವೆನೆಂದು ಈ ಸೂಕ್ತ ದ್ರಷ್ಟೃವಾದ ಋಷಿಯೂ ಸಂಕಲ್ಪಮಾಡಿದ್ದಾನೆ.

**ನಿವಿದಂ ಜೋಹವೀಮಿ—ನಿವಿದ್** ಮಂತ್ರಗಳನ್ನು ಪಠಿಸುತ್ತೇನೆಂದು ಸಂಕಲ್ಪಿಸಿದೆ. ಹಿಂದೆ. ಋ. ಸಂ. ೧-೯೬-೨ ನೇ ಋಕ್ಕಿನ ವಿಶೇಷವಿಷಯಗಳನ್ನು ತಿಳಿಸುವಾಗ **ಸ ಪೂರ್ವಯಾ ನಿವಿದಾ** ಎಂಬ ಮಂತ್ರದಿಂದ ಸೂಚಿತವಾಗತಕ್ಕ **ನಿವಿದ್** ಮಂತ್ರಗಳ ಮಹತ್ವವನ್ನು ವಿವರಿಸಿದೆ. (ಋಗ್ವೇದಸಂಹಿತಾ ಭಾಗ ೮- ಪುಟ 74-76) ಆದರೆ, ಆ ಮಂತ್ರವು ಅಗ್ನಿ ಪರವಾಗಿದ್ದು ಅಲ್ಲಿ ನಿರ್ದಿಷ್ಟವಾಗಿರುವ **ನಿವಿದ್** ಮಂತ್ರಗಳು ಅಗ್ನಿ ಪರವಾಗಿರುವುದರಿಂದ ಆ ಸಂದರ್ಭದಲ್ಲಿ **ಅಗ್ನಿ**ದೇವತಾಕವಾದ ಮಂತ್ರಗಳನ್ನು ಮಾತ್ರ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ **ಇಂದ್ರ** ಪರವಾಗಿರುವುದರಿಂದ ಈ ಸಂದರ್ಭಕ್ಕನುಗುಣವಾದ ರೀತಿಯಲ್ಲಿ **ನಿವಿದ್** ಮಂತ್ರಗಳ ಪ್ರಭಾವವನ್ನೂ ಪ್ರಯೋಗ ಗಳನ್ನೂ ವಿವರಿಸಲಾಗುತ್ತೆ.

ಒಂದು ದೇವತೆಯನ್ನಾಗಲಿ, ಅಥವಾ ದೇವತೆಗಳ ಒಂದು ಗುಂಪನ್ನಾಗಲಿ ಉದ್ದೇಶಿಸಿ ಅವರ ಅಸಾಧಾರಣ ವಾದ ಗುಣಗಳನ್ನು ವರ್ಣಿಸಿ ಅವರನ್ನು ಆಹ್ವಾನಮಾಡುವ ಮಂತ್ರಗಳಿಗೆ **ನಿವಿದ್** ಮಂತ್ರವೆಂಬ ಹೆಸರು ಪ್ರಸಿದ್ಧ ವಾಗಿದೆ. ಇದನ್ನೇ ಬೃಹದ್ದೇವತೆಯಲ್ಲಿ ತಿಳಿಸುತ್ತಾ,

**ಕರ್ಮೈವ ತಾವತ್ಸಾವಿತ್ರ್ಯಂ ನಿವಿದಿ ಸ್ತೌತಿ ಕರ್ಮಣಾ ।**
**ಯದ್ವೇನುಃ ಸಪ್ತ್ಯನಡ್ವಾಹೌ ವೋಳ್ಹಾ ದೋಗ್ಧ್ರ್ಯಶುರೇವ ವಾ ॥**

(ಬೃಹದ್ದೇವತಾ. ೩-೫೦)

**ದೋಗ್ಧ್ರೀ** ಎನ್ನುವುದರಿಂದ ಹಾಲು ಕರೆಯುವ ಹಸುವೆಂದೂ, **ಆಶು** (ವೇಗಗಾಮೀ) ಎನ್ನುವುದರಿಂದಲೂ, **ವೋಳ್ಹಾ,** (ಹೊರೆಯನ್ನು ವಹಿಸುವುದು) ಎನ್ನುವುದರಿಂದ ಎತ್ತೆಂದೂ ಅವುಗಳ ವೈಶಿಷ್ಟ್ಯವನ್ನು ಆಯಾ ವಿಶೇಷಣ ಗಳಿಂದ ತಿಳಿಯುವಂತೆ **ನಿವಿದ್** ಮಂತ್ರಗಳ ದ್ವಾರಾ ಆಯಾ ದೇವತೆಯ ವೈಯಕ್ತಿಕವಾದ ಗುಣಗಳನ್ನು ಆಯಾ ಕರ್ಮಗಳ ವಿವರಣೆಯಿಂದ ತಿಳಿಯಬಹುದು. ಉದಾಹರಣೆಗೆ,

**ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ । ಸದಾವನ್ಭಾಗಮೀಮಹೇ ।**

(ಋ. ಸಂ. ೧ ೨೪-೩)

ಎಂಬ ಋಕ್ಕಿನಲ್ಲಿ ಸವಿತೃದೇವತೆಯನ್ನುದ್ದೇಶಿಸಿ **ನಿವಿದ್** ಮಂತ್ರವು ಸವಿತೃವಿನ ವೈಶಿಷ್ಟ್ಯವನ್ನು ಅವನ ಅಸಾಧಾರಣ ವಾದ ಕರ್ಮದ ವಿವರಣೆಯಿಂದ ತಿಳಿಸುತ್ತದೆ. **ನಿವಿದ್** ಮಂತ್ರಗಳ ಮಹಿಮೆಯೂ, ಜಗತ್ಸೃಷ್ಟಿಗೂ ಆ ಮಹಾ ಮಂತ್ರಗಳಿಗೂ ಇರುವ ಕಾರ್ಯಕಾರಣ ಸಂಬಂಧವೂ ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಪಠಿತವಾಗಿದೆ—

**ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸ ಸೋಽಕಾಮಯತ ಪ್ರಜಾಯೇಯ ಭೂಯಸ್ಯಾಂ ಸ್ಯಾಮಿತಿ ಸ ತಪೋಽತಪ್ಯತ ಸ ವಾಚಮಯಚ್ಛತ್ಸ ಸಂವತ್ಸರಸ್ಯ ಪರಸ್ತಾದ್ವ್ಯಾಹರದ್ದ್ವಾದಶಕೃತ್ವೋ ದ್ವಾದಶಪದಾ ವಾ ಏಷಾ ನಿವಿದೇತಾಂ ವಾವ ತಾಂ ನಿವಿದಂ ವ್ಯಾಹರತ್ತಾಂ ಸರ್ವಾಣಿ ಭೂತಾನ್ಯನ್ವಸೃಜ್ಯಂತ ।**

(ಐ. ಬ್ರಾ. ೧೦-೧)

ಆದಿಯಲ್ಲಿ ಪ್ರಜಾಪತಿಯು ಒಬ್ಬಂಟಿಗನಾಗಿದ್ದುದರಿಂದ ಪ್ರಜಾಸೃಷ್ಟಿಯನ್ನು ಮಾಡಿ, ಬಹುಸಂಖ್ಯಾತನಾಗಬೇಕೆಂದು ಅಪೇಕ್ಷಿಸಿ, ಒಂದು ವರ್ಷಕಾಲ ಮೌನವನ್ನಾಶ್ರಯಿಸುತ್ತಾ ತಪಸ್ಸನ್ನಾಚರಿಸಿದನು. ಅನಂತರ ಹನ್ನೆರಡು ಮಹಾವಾಕ್ಯ ಗಳನ್ನೊಳಗೊಂಡ **ನಿವಿದ್** ಮಂತ್ರಗಳನ್ನು ಹನ್ನೆರಡು ಸಲ ಪಠಿಸಿದನಂತರ ಜಗತ್ತಿನಲ್ಲಿ ಭೂತಗಳೆಲ್ಲವೂ ಸೃಷ್ಟವಾ ದವು ಎಂದು ಈ ಮಂತ್ರಗಳ ಪ್ರಭಾವವನ್ನು ತಿಳಿಸಿ ಅನಂತರ ಕರ್ಮಕಾಲಗಳಲ್ಲಿ ಈ ಮಂತ್ರದ ವೈಶಿಷ್ಟ್ಯವನ್ನೂ, ಪ್ರಯೋಗದ ಕ್ರಮವನ್ನೂ ಈ ರೀತಿ ತಿಳಿಸಿದೆ—

**ಗರ್ಭಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ತಸ್ಮಾತ್ಪರಾಂಚೋ ಗರ್ಭಾ ಧೀಯಂತೇ ಪರಾಂಚಃ ಸಂಭವತಿ। ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ತಸ್ಮಾನ್ಮಧ್ಯೇ ಗರ್ಭಾ ಧೃತಾಃ । ಯದಂತತಸ್ತೃತೀಯಸವನೇ ಧೀಯಂತೇ ತಸ್ಮಾದಮುತೋಽರ್ವಾಂಚೋ ಗರ್ಭಾಃ ಪ್ರಜಾಯಂತೇ ಪ್ರಜಾತ್ಯೈ । ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ । ಪೇಶಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಯಥೈವ ಪ್ರವಣಯತಃ ಪೇಶಃ ಕುರ್ಯಾತ್ತಾದೃಕ್ತದ್ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ಯಥೈವ ಮಧ್ಯತಃ ಪೇಶಃ ಕುರ್ಯಾತ್ತಾದ-**

**ಕ್ತೈದ್ಯದಂತತಸ್ತೃತೀಯಸವನೇ ಧೀಯಂತೇ ಯಥೈವಾವಪ್ರಜ್ಞನತಃ ಪೇಶಃ ಕುರ್ಯಾತ್ತಾದೃಕ್ತತ್ । ಸರ್ವತೋ ಯಜ್ಞಸ್ಯ ಪೇಶಸಾ ಶೋಭತೇ ಯ ಏವಂ ವೇದ ॥**

(ಐ. ಬ್ರಾ. ೧೧-೧೦)

**ನಿವಿದ್** ಮಂತ್ರಗಳು **ಉಕ್ಥ**ಗಳಿಗೆ ಗರ್ಭರೂಪದಲ್ಲಿವೆ. ಎಂದರೆ, ಪ್ರಾತಃಸವನದಲ್ಲಿ ಉಕ್ಥಗಳಿಗೆ ಪೂರ್ವಭಾವಿಯಾಗಿ ಪಠಿತವಾಗುವುವು. ಆದುದರಿಂದಲೇ ಗರ್ಭಗಳೂ ಸಹ ಪರಾಙ್ಮುಖವಾಗಿಯೇ ಪ್ರಾರಂಭವಾಗಿ ಇರುತ್ತವೆ. ಮಾಧ್ಯಂದಿನ ಸವನದಲ್ಲಿ ಈ ಮಂತ್ರಗಳು ಮಧ್ಯಕಾಲದಲ್ಲಿ ಪಠಿತವಾಗುತ್ತವೆ. ಆದುದರಿಂದಲೇ ಗರ್ಭಗಳೂ ಮಧ್ಯದಲ್ಲಿ ಧೃತವಾಗುತ್ತವೆ. ತೃತೀಯಸವನಕಾಲದಲ್ಲಿ **ನಿವಿದ್** ಮಂತ್ರಗಳು ಪಶ್ಚಾದ್ಭಾಗದಲ್ಲಿ ಪಠಿತವಾಗುವುದರಿಂದ ಗರ್ಭಸ್ಥವಾದ ಶಿಶುವೂ ಅವಾಗ್ರೂಪವಾಗಿ ಜನಿಸುತ್ತದೆ. ಈ ತತ್ತ್ವಗಳನ್ನರಿತವನು ಪ್ರಜಾಸಂಪತ್ತಿನಿಂದಲೂ, ಪಶುಸಂಪತ್ತಿನಿಂದಲೂ ಸೇರಿಕೊಳ್ಳುತ್ತಾನೆ. **ನಿವಿದ್** ಮಂತ್ರಗಳು **ಉಕ್ಥ**ಗಳಿಗೆ ಆಭರಣದ ರೂಪದಲ್ಲಿದ್ದು ಅವುಗಳ ಸೌಂದರ್ಯವನ್ನೂ ಪ್ರಕಾಶವನ್ನೂ ವೃದ್ಧಿಪಡಿಸುತ್ತವೆ. ಪ್ರಾತಃಸವನದಲ್ಲಿ ಪಠಿಸತಕ್ಕ ಮಂತ್ರಗಳು ಪ್ರವಣೋರ್ಧ್ವದ ಆಭರಣಗಳಂತೆಯೂ, ಮಾಧ್ಯಂದಿನದ ಕಾಲದಲ್ಲಿ ಪಠಿಸತಕ್ಕ ಮಂತ್ರಗಳು ಮಧ್ಯಪ್ರದೇಶದ ಆಭರಣಗಳಂತೆಯೂ, ತೃತೀಯಸವನದ ಮಂತ್ರಗಳು ಅಧೋಭಾಗದ ಆಭರಣಗಳಂತೆಯೂ ಅಲಂಕಾರಜನಕಗಳಾಗಿವೆ. ಇದನ್ನರಿತವನು ಯಜ್ಞವನ್ನೂ, ಅಲಂಕರಿಸುತ್ತಾ ತಾನೂ ಪ್ರಕಾಶಿಸುತ್ತಾನೆ. ಮತ್ತು,

**ಸೌರ್ಯಾ ವಾ ಏತಾ ದೇವತಾ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಮಧ್ಯತೋ ಮಧ್ಯಂದಿನೇ ತತಸ್ತೃತೀಯಸವನ ಆದಿತ್ಯಸ್ಯೈವ ತದ್ವ್ರತಮನು ಪರ್ಯಾವರ್ತಂತೇ । ಪಚ್ಛೋ ವೈ ದೇವಾ ಯಜ್ಞಂ ಸಮಭರಂಸ್ತಸ್ಮಾತ್ಪಚ್ಛೋ ನಿವಿದಃ ಶಸ್ಯಂತೇ । ಯದ್ವೈ ತದ್ದೇವಾ ಯಜ್ಞಂ ಸಮಭರಂಸ್ತಸ್ಮಾದಶ್ವಃ ಸಮಭವತ್ತಸ್ಮಾದಾಹುರಶ್ವಂ ನಿವಿದಾಂ ಶಂಸ್ತ್ರೇ ದದ್ಯಾದಿತಿ ತದು ಖಲು ವರಮೇವ ದದತಿ । ನ ನಿವಿದಃ ಪದಮತೀಯಾದ್ಯದ್ಯನ್ನಿವಿದಃ ಪದಮತೀಯಾದ್ಯಜ್ಞಸ್ಯ ತಚ್ಛಿದ್ರಂ ಕುರ್ಯಾದ್ಯಜ್ಞಸ್ಯ ವೈ ಛಿದ್ರಂ ಸ್ರವದ್ಯಜಮಾನೋಽನು ಪಾಪೀಯಾನ್ ಭವತಿ ತಸ್ಮಾನ್ನ ನಿವಿದಃ ಪದಮತೀಯಾತ್ । ನ ನಿವಿದಃ ಪದೇ ವಿಪರಿಹರೇದ್ಯನ್ನಿವಿದಃ ಪದೇ ವಿಪರಿಹರೇನ್ಮೋಹಯೇದ್ಯಜ್ಞಂ ಮುಗ್ಧೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ವಿಪರಿಹರೇತ್ । ನ ನಿವಿದಃ ಪದೇ ಸಮಸ್ಯೇದ್ಯನ್ನಿವಿದಃ ಪದೇ ಸಮಸ್ಯೇದ್ಯಜ್ಞಸ್ಯ ತದಾಯುಃ ಸಂಹರೇತ್ಪ್ರಮಾಯುಕೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ಸಮಸ್ಯೇತ್ । ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಮಿತ್ಯೇತೇ ಏವ ಸಮಸ್ಯೇದ್ಬ್ರಹ್ಮಕ್ಷತ್ರಯೋಃ ಸಂಶ್ರಿತ್ಯೈ ತಸ್ಮಾದ್ಬ್ರಹ್ಮ ಚ ಕ್ಷತ್ರಂ ಚ ಸಂಶ್ರಿತೇ । ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಮೇಕೈಕಂ ವೈ ನಿವಿದಃ ಪದಮೃಚಂ ಸೂಕ್ತಂ ಪ್ರತಿ ತಸ್ಮಾನ್ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಂ ನಿವಿದಾ ಹ್ಯೇವ ಸ್ತೋತ್ರಮತಿಶಸ್ತಂ ಭವತಿ ।**

(ಐ ಬ್ರಾ. ೧೧-೧೧)

ನಿವಿದ್ದೇವತೆಗಳೆಲ್ಲಾ ಸೂರ್ಯಸಂಬಂಧಿಯಾದ ದೇವತೆಗಳು. ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನದ ಮಂತ್ರಗಳು ಉದಯದಿಂದ ಅಸ್ತಮಯದವರೆಗೆ ಸೂರ್ಯನ ಗತಿಯನ್ನನುಸರಿಸುತ್ತವೆ. ಪಾದಾತ್ಮಕವಾದ ಮಿತಿಗಳಿಂದ ದೇವತೆಗಳು ಯಜ್ಞವನ್ನು ಸಂಭರಿಸಿದರು. ಆದುದರಿಂದಲೇ **ನಿವಿದ್** ಮಂತ್ರಗಳು ಪಾದಾತ್ಮಕವಾದ

ವಾಕ್ಯಗಳ ರೂಪವಲ್ಲಿವೆ. ಯಜ್ಞಭಾಗಗಳನ್ನೆಲ್ಲಾ ದೇವತೆಗಳು ಒಟ್ಟಿಗೆ ಶೇಖರವಮಾಡಿದುದರ ಪರಿಣಾಮವಾಗಿ ಅಶ್ವದ ಉತ್ಪತ್ತಿಯುಂಟಾಯಿತು. ಆದುದರಿಂದಲೇ ಈ ಮಂತ್ರಗಳನ್ನು ಪಠಿಸುವ ಋತ್ವಿಕ್ಕಿಗೆ ಅಶ್ವದಾನವನ್ನು ಮಾಡಬೇಕೆಂಬ ವಿಧಿಯಿದೆ. ನಿವಿದ್ ಮಂತ್ರಗಳಲ್ಲಿ ಯಾವ ಪದವನ್ನೂ ದಾಟಿ ಮುಂದೆ ಹೋಗಬಾರದು. ಹಾಗೆ ಯಾವ ಪದವಾದರೂ ಪಠಿತವಾಗದಿದ್ದರೆ ಯಜ್ಞವನ್ನೇ ಛಿದ್ರಮಾಡಿದಂತಾಗುತ್ತದೆ. ಅದು ಯಜ್ಞಕರ್ತನಿಗೆ ಹಾನಿಯನ್ನುಂಟುಮಾಡುತ್ತದೆ. ಈ ಮಂತ್ರಗಳಲ್ಲಿ ಎರಡು ವಾಕ್ಯಗಳನ್ನು ಒಟ್ಟಿಗೆ ಸೇರಿಸಿಬಿಡಬಾರದು, ಅಥವಾ ಹಿಂದಿನದನ್ನು ಮುಂದಕ್ಕೂ, ಮುಂದಿನದನ್ನು ಹಿಂದಕ್ಕೂ ಸೇರಿಸಿ ಪಠಿಸಬಾರದು. ಹಾಗೆ ಮಾಡಿದಲ್ಲಿ ಯಜ್ಞಕ್ರಿಯೆಯಲ್ಲಿಯೇ ಸಂದಿಗ್ಧಾವಸ್ಥೆಯು ಒದಗುತ್ತದೆ. ಯಜ್ಞಕರ್ತನೂ ಸಹ ಭ್ರಾಂತನಾಗುತ್ತಾನೆ. ಎರಡು ವಾಕ್ಯಗಳನ್ನು ಒಟ್ಟಿಗೆ ಸೇರಿಸಿಬಿಟ್ಟರೆ ಯಜ್ಞಕರ್ಮದಲ್ಲಿಯೇ ಸಂಕೋಚವುಂಟಾಗುತ್ತದೆ. ಇದರಿಂದ ಯಜ್ಞಕರ್ತನ ಆಯುಸ್ಸೂ ಸಂಕುಚಿತವಾಗಿ ಅವನು ಮೃತಿಯನ್ನು ಹೊಂದಬಹುದು. ಆದುದರಿಂದ ವಾಕ್ಯಗಳ ಮಿಶ್ರಣವನ್ನು ಮಾಡಿ ಮಂತ್ರೋಚ್ಚಾರಣೆಯಲ್ಲಿ ಸಂಕೋಚವನ್ನುಂಟುಮಾಡಬಾರದು. 'ಪ್ರೇದಂ ಬ್ರಹ್ಮ'. 'ಪ್ರೇದಂ ಕ್ಷತ್ರಂ' ಎಂದು ಪವಿತ್ರಾತ್ಮಕವಾದುದೂ, ದಿವ್ಯಸ್ವರೂಪವುಳ್ಳದ್ದೂ ಆದ ಮಂತ್ರದ್ವಯವನ್ನು ಮಾತ್ರ ಮಿಶ್ರಮಾಡಬಹುದು. ಆದುದರಿಂದಲೇ ಬ್ರಹ್ಮತೇಜಸ್ಸೂ, ಕ್ಷಾತ್ರತೇಜಸ್ಸೂ ಮಿಶ್ರಿತವಾಗತಕ್ಕವು. ನಿವಿದ್ ಮಂತ್ರಗಳು ಮೂರು ಅಥವಾ ನಾಲ್ಕು ಮಂತ್ರಗಳೊಳಗೇ ಅಂತರ್ಗತವಾಗಿರಬೇಕೇ ವಿನಹ ಅವುಗಳನ್ನು ಮೀರಬಾರದು. ನಿವಿತ್ತಿನಿಂದಲೇ ಸ್ತೋತ್ರದ ಪಠಣವು ವಿಸ್ತೃತವಾಗಿರುತ್ತದೆ.

**ಏಕಾಂ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್ । ಯದ್ದ್ವೇ ಪರಿಶಿಷ್ಯ ದಧ್ಯಾತ್ಪ್ರಜನನಂ ತದುಪಹನ್ಯಾದ್ಗರ್ಭೈಸ್ತತ್ಪ್ರಜಾ ವ್ಯರ್ಧಯೇತ್ತಸ್ಮಾದೇಕಾಮೇವ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್ । ನ ಸೂಕ್ತೇನ ನಿವಿದಮತಿಪದ್ಯೇತ; ಯೇನ ಸೂಕ್ತೇನ ನಿವಿದಮತಿಪದ್ಯೇತೆ ನ ತತ್ಪುನರುಪನಿವರ್ತೇತ ವಾಸ್ತುಹಮೇವ ತತ್ । ಅನ್ಯತ್ತದ್ದೈವತಂ ತಚ್ಛಂದಸಂ ಸೂಕ್ತಮಾಹೃತ್ಯ ತಸ್ಮಿನ್ನಿವಿದಂ ದಧ್ಯಾತ್ । ಮಾ ಪ್ರ ಗಾಮ ಪಥೋ ವಯಮಿತಿ ಪುರಸ್ತಾತ್ಸೂಕ್ತಸ್ಯ ಶಂಸತಿ । ಪಥೋ ವಾ ಏಷ ಪ್ರೈತಿ ಯೋ ಯಜ್ಞೇ ಮುಹ್ಯತಿ ಮಾ ಯಜ್ಞಾದಿಂದ್ರ ಸೋಮಿನ ಇತಿ ಯಜ್ಞಾದೇವ ತನ್ನ ಪ್ರಚ್ಯವತೇ । ಮಾಂತಸ್ಸ್ಥುರ್ನೋ ಅರಾತಯ ಇತ್ಯರಾತೀಯತ ಏವ ತದಪಹಂತಿ । ಯೋ ಯಜ್ಞಸ್ಯ ಪ್ರಸಾಧನಸ್ತಂತುರ್ದೇವೇಷ್ವಾತತಃ । ತಮಾಹುತಂ ನಶೀಮಹೀತಿ । ಪ್ರಜಾ ವೈ ತಂತುಃ ಪ್ರಜಾಮೇವಾಸ್ಮಾ ಏತತ್ಸಂತನೋತಿ । ಮನೋ ನ್ವಾಹುವಾಮಹೇ ನಾರಾಶಂಸೇನ ಸೋಮೇನೇತಿ । ಮನಸಾ ವೈ ಯಜ್ಞಸ್ತಾಯತೇ ಮನಸಾ ಕ್ರಿಯತೇ । ಸೈವ ತತ್ರ ಪ್ರಾಯಶ್ಚಿತ್ತಿಃ ಪ್ರಾಯಶ್ಚಿತ್ತಿಃ ॥**

(ಐ. ಬ್ರಾ. ೧೧-೧೧)

ತೃತೀಯಸವನದಲ್ಲಿ ಒಂದು ಋಕ್ಕನ್ನು ಬಿಟ್ಟು ನಿವಿತ್ತನ್ನು ಸೇರಿಸತಕ್ಕದ್ದು. ಆದರೆ ಎರಡು ಋಕ್ಕನ್ನು ಬಿಟ್ಟುಬಿಟ್ಟು ಸೇರಿಸಿದರೆ ಆಗ ಶಕ್ತಿಹೀನತೆಯುಂಟಾಗುತ್ತದೆ. ಆಗ ಗರ್ಭರಾಹಿತ್ಯವು ಸಂಭವಿಸುತ್ತದೆ. ಆದುದರಿಂದ ಒಂದನ್ನು ಮಾತ್ರ ಬಿಟ್ಟು ಸೇರಿಸತಕ್ಕದ್ದು. ಆಗ ಯಜ್ಞಕ್ರಿಯೆಯು ಪೂರ್ಣವಾಗುತ್ತದೆ. ಎರಡನ್ನು ಬಿಟ್ಟು ಸೇರಿಸಕೂಡದು ಹಾಗೆ ಮಾಡಿದರೆ ಉತ್ಪಾದನಶಕ್ತಿಯನ್ನು ನಾಶಮಾಡಿದಂತಾಗುತ್ತದೆ. ಆಗ ಗರ್ಭಧಾರಣಶಕ್ತಿಯು ಹೋಗಿ ಜನರು ಗರ್ಭರಹಿತರಾಗುತ್ತಾರೆ. ನಿವಿದ್ಧಾನಾರ್ಹವಾದ ಸೂಕ್ತದಲ್ಲಿ ನಿವಿದ್‌ಮಂತ್ರಗಳನ್ನು ಸೇರಿಸದೇ ಆ ಸೂಕ್ತವನ್ನು

ಪಠಿಸಬಾರದು. ಒಂದುಸಲ ಪಠಿಸಿದನಂತರ ಪುನಃ ಸೇರಿಸಲು ಅರ್ಹವಾಗುವುದಿಲ್ಲ. ಒಂದು ವೇಳೆ ಅಂತಹ ಲೋಪವು ಸಂಭವಿಸಿದಲ್ಲಿ ಅದೇ ದೇವತಾಕವಾದುದೂ, ಅದೇ ಛಂದಸ್ಸಿನಿಂದ ಕೂಡಿದುದೂ ಆದ ಬೇರೆ ಸೂಕ್ತವನ್ನು ಆರಿಸಿ ಅದರಲ್ಲಿ ಈ ನಿವಿನ್ಮಂತ್ರಗಳನ್ನು ಸೇರಿಸತಕ್ಕದ್ದು. ಅಂತಹಕಾಲದಲ್ಲಿ;

**ಮಾ ಪ್ರ ಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।**
**ಮಾಂತಃ ಸ್ಥುರ್ನೋ ಅರಾತಯಃ ॥**

(ಋ. ಸಂ. ೧೦-೫೭-೧)

ನಾವು ಮಾರ್ಗಭ್ರಷ್ಟರಾಗಿ ಹೋಗದಿರುವಂತಾಗಲಿ, ಯಜ್ಞಕ್ರಿಯೆಯಿಂದ ಬಾಹ್ಯರಾಗದಿರುವಂತಾಗಲಿ. ದುಷ್ಟಶಕ್ತಿಗಳು ನಮ್ಮನ್ನು ಆಕ್ರಮಿಸದಿರುವಂತಾಗಲಿ ಎಂದು ಮೊದಲು ಪ್ರಾರ್ಥಿಸಿ ಅನಂತರ ನಿವಿನ್ಮಂತ್ರಗಳಿಂದ ಕೂಡಿದ ಆ ಸೂಕ್ತವನ್ನು ಪಠಿಸಬೇಕು. ಆಗ ಯಾವ ವಿಧವಾದ ಭ್ರಾಂತಿಯೂ ಇಲ್ಲದೇ ಯಜ್ಞಕಾರ್ಯವು ನಿರ್ವಿಘ್ನವಾಗಿ ನಡೆದು ದುಷ್ಟಶಕ್ತಿಗಳ ನಾಶವೂ ಆಗುತ್ತದೆ. "ಯಜ್ಞಫಲವಾದ ಯಾವ ತಂತುವು ದೇವತೆಗಳಲ್ಲಿ ವಿಸ್ತೃತವಾಗಿ ಹರಡಿದೆಯೋ ಅದೇ ತಂತುವು ಯಜ್ಞಕರ್ತರಾದ ನಮ್ಮಲ್ಲೂ ಪ್ರಸರಿಸಲಿ" (ಋ. ಸಂ. ೧೦-೫೭-೨) ಎಂದು ಯಜಮಾನನು ಪಠಿಸುತ್ತಾನೆ. ಪ್ರಜಾಸಂತತಿಯೇ ಆ ತಂತುವು, ಯಜ್ಞಕರ್ತನಿಗೆ ಸಂತತಿರೂಪವಾದ ಈ ತಂತುವು ಅನುಸ್ಯೂತವಾಗಿ ಲಭಿಸುತ್ತದೆ.

**ತದ್ಯದೇತಾಂ ಪುರಸ್ತಾತ್ ಸೂಕ್ತಸ್ಯ ನಿವಿದಂ ದಧಾತಿ ಪ್ರಜಾತ್ಯೈ ।**
**ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

(ಐ. ಬ್ರಾ. ೧೦-೨)

ಈ ಕಾರಣದಿಂದಲೇ ಹೋತೃವು ಸೂಕ್ತದ ಪ್ರಾರಂಭದಲ್ಲಿ ನಿವಿನ್ಮಂತ್ರವನ್ನು ಪಠಿಸುವುದರ ಫಲವಾಗಿ ಸಂತಾನವನ್ನು ಪಡೆಯುತ್ತಾನೆ. ಈ ವಿಧವಾದ ತಿಳಿವಳಿಕೆಯುಳ್ಳ ಯಜ್ಞಕರ್ತರಿಗೆ ಸತ್ಸಂತಾನವೇ ಮುಂತಾದ ಸಕಲಸಂಪತ್ತೂ ಲಭಿಸುವುದು., ಎಂದು ಬೇರೆ ಕಡೆಯೂ ಹೇಳಿದೆ. ಮಂತ್ರಗಳ ಪಠನವು ಅತ್ಯಂತ ಶ್ರೇಷ್ಠವಾದ ಫಲವನ್ನು ಕೊಡುವುದೆಂಬ ಶ್ರದ್ಧೆಯಿಂದ ಆಯಾ ದೇವತೆಗಳನ್ನು ಆಹ್ವಾನಮಾಡುವಾಗ ಪ್ರತಿದೇವತೆಯ ಸ್ವರೂಪ, ಶಕ್ತಿ, ಮಹತ್ಕಾರ್ಯಸಾಧನೆ ಇತ್ಯಾದಿಗಳನ್ನು ಸ್ತುತಿಸಿ ಇವುಗಳ ಪಠನವನ್ನು ಮಾಡುವುದು ಸಾಂಪ್ರದಾಯಕವೆಂದು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ತಿಳಿದುಬರುತ್ತದೆ. ಉದಾಹರಣೆಗೆ—

**ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।**

(ಋ. ಸಂ. ೧-೮೯-೩)

**ಜುಷೇಥಾಂ ಯಜ್ಞಂ ಬೋಧತಂ ಹವಸ್ಯ ಮೇ ಸತ್ತೋ ಹೋತಾ ನಿವಿದಃ ಪೂರ್ವ್ಯಾ ಅನು ।**

(ಋ. ಸಂ. ೨-೩೬-೬)

**ಕಿಮು ಷ್ವಿದಸ್ಮೈ ನಿವಿದೋ ಭನಂತೇಂದ್ರಸ್ಯಾವದ್ಯಂ ದಿಧಿಷಂತ ಆಪಃ ।**

(ಋ. ಸಂ. ೪-೧೮-೭)

**ವಿ ಯದ್ವಾಚಂ ಕೀಸ್ತಾಸೋ ಭರಂತೇ ಶಂಸಂತಿ ಕೇ ಚಿನ್ನಿವಿದೋ ಮನಾನಾಃ ।**

(ಋ. ಸಂ. ೬-೬೭-೧೦)

ಇತ್ಯಾದಿ ಸನ್ನಿವೇಶಗಳಲ್ಲಿ ನಿವಿನ್ಮಂತ್ರಗಳ ಮಹಿಮೆಯು ಸ್ತುತವಾಗಿದೆ.

ಪ್ರಕೃತವಾದ (೧-೧೭೬ ೬) ಋಕ್ಕಿನಲ್ಲಿ **ಇಂದ್ರ**ಪರವಾದ ನಿವಿನ್ಮಂತ್ರವು **ತಾಮನು ತ್ವಾ ನಿವಿದಂ ಜೋಹವೀಮಿ** ಎಂಬ ವಾಕ್ಯದಿಂದ ಸೂಚಿತವಾಗಿದೆ. ಇಂದ್ರದೇವತಾಪರವಾದ ನಿವಿತ್ತುಗಳಿಂದ ಯುಕ್ತವಾದ ಸೂಕ್ತವಾವುದೆಂದು ನಿಷ್ಕರ್ಷೆಮಾಡುವುದರಲ್ಲಿ ಸ್ವಲ್ಪ ಮತಭೇದವೂ ಇದೆ. ಉದಾಹರಣೆಗೆ—

**ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ನಿವಿದ್ಧಾನಮ್ಯೈಕಾಹಿಕಂ ।**

(ಐ. ಆ. ೧-೨-೨)

**ಜನಿಷ್ಠಾ ಉಗ್ರಃ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಋ. ಸಂ. ೧೦-೭೩ ನೇ ಸೂಕ್ತವು ನಿವಿನ್ಮಂತ್ರಗಳಿಂದ ಕೂಡಿದೆಯೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ. ಆದರೆ ಶಾಂಖಾಯನ ಆರಣ್ಯಕದಲ್ಲಿ (೧-೩) **ಮಹಾँ ಇಂದ್ರೋ ನೃವದಾ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಋ. ಸಂ. ೬-೧೯ನೇ ಸೂಕ್ತವು ಈ ಮಂತ್ರಗಳಿಂದ ಕೂಡಿದೆಯೆಂದು ಹೇಳಿದೆ. ಇಂದ್ರನ ಸ್ವರೂಪವನ್ನೂ, ಪರಾಕ್ರಮವನ್ನೂ, ವೈಶಿಷ್ಟ್ಯವನ್ನೂ ಸ್ತುತಿಸುವ ನಿವಿನ್ಮಂತ್ರಗಳಿಂದ ಇಂದ್ರನನ್ನು ಪ್ರಶಂಸಿಸುತ್ತೇನೆ ಎಂದು ಪ್ರಕೃತವಾದ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ಋಷಿಯು ತನ್ನ ಸಂಕಲ್ಪವನ್ನು ತಿಳಿಸಿದ್ದಾನೆ.

॥ ವ್ಯಾಕರಣಪ್ರಕ್ರಿಯಾ ॥

**ಜರಿತೃಭ್ಯಃ**—ಜೄಷ್ ವಯೋಹಾನೌ. ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಇಡಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಬಹುವಚನಾಂತರೂಪ.

**ತೃಷ್ಯತೇ**—ಞಿತೃಷಾ ಪಿಪಾಸಾಯಾಂ ಧಾತು. ಲಟಿಗೆ ಶತ್ರಾದೇಶ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩.೧-೬೯) ಎಂಬುದರಿಂದ ಶ್ಯನ್ ವಿಕರಣ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಶತೃ ಅನುದಾತ್ತವಾಗುತ್ತದೆ. ವಿಕರಣ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಬಭೂಥ**—ಭೂ ಸತ್ತಾಯಾಂ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ **ಬಭೂಥ ತತಂಥ** — (ಪಾ. ಸೂ. ೭-೨-೬೪) ಎಂಬುದರಿಂದ ಇಡಭಾವದಿಂದ ನಿಪಾತಿತವಾಗಿದೆ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಥಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಜೋಹವೀಮಿ** —ಹು ದಾನಾದನಯೋಃ ಧಾತು. ಯಙ್‌ಲುಗಂತದ ಮೇಲೆ ಲಟ್. ಉತ್ತಮಪುರುಷ ಏಕವಚನದಲ್ಲಿ ಮಿಪ್. **ಯಙೋ ವಾ** (ಪಾ. ಸೂ. ೭-೩-೯೪) ಎಂಬುದರಿಂದ ಮಿಪಿಗೆ ಈಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ನೂರ ಎಪ್ಪತ್ತೈದನೇ ಸೂಕ್ತ ಮುಗಿದುದು.



# ನೂರ ಎಪ್ಪತ್ತಾರನೆಯ ಸೂಕ್ತವು

**ಮತ್ಸಿ ನ ಇತಿ ಷಡೃಚಂ ದ್ವಾದಶಂ ಸೂಕ್ತಮಾಗಸ್ತ್ಯಮೈಂದ್ರಮಾನುಷ್ಟುಭಂ । ಪೂರ್ವತ್ರ ತುಶಬ್ದಾತ್ ತ್ರಿಷ್ಟುಬಂತಂ ಷ್ಟಿತ್ಯುಕ್ತತ್ವಾದಂತ್ಯಾ ತ್ರಿಷ್ಟುಪ್ । ಮತ್ಸಿ ನ ಇತ್ಯನುಕ್ರಾಂತಂ । ವಿಶೇಷ-ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಮತ್ಸಿ ನ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ಇಂದ್ರನು ದೇವತೆಯು ; ಅನುಷ್ಟುಪ್ ಛಂದಸ್ಸು ; ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ **ಮತ್ಸಿ ನ** ಎಂದು ಮೊದಲಾಗಿ ಹೇಳಿರುವುದು. ವಿಶೇಷ ವಿನಿಯೋಗವು ಲೈಂಗಿಕವು.

## ಸೂಕ್ತ—೧೭೬

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೬ ॥
ಅಷ್ಟಕ - ೨ ॥ ಅಧ್ಯಾಯ—೪ ॥ ವರ್ಗ—೧೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ - ೧-೫, ಅನುಷ್ಟುಪ್ । ೬. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಮತ್ಸಿ ನೋ ವಸ್ಯಇಷ್ಟಯ ಇಂದ್ರಮಿಂದೋ ವೃಷಾ ವಿಶ ।**
**ಋಘಾಯಮಾಣ ಇನ್ವಸಿ ಶತ್ರುಮಂತಿ ನ ವಿಂದಸಿ ॥ ೧ ॥**

॥ ಪದಪಾಠಃ ॥

**ಮತ್ಸಿ । ನಃ । ವಸ್ಯಃऽಇಷ್ಟಯೇ । ಇಂದ್ರಂ । ಇಂದೋ ಇತಿ । ವೃಷಾ । ಆ । ವಿಶ ।**
**ಋಘಾಯಮಾಣಃ । ಇನ್ವಸಿ । ಶತ್ರುಂ । ಅಂತಿ । ನ । ವಿಂದಸಿ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಇಂದೋ ಕ್ಲೇದಯಿತಃ ಸೋಮ ತ್ವಂ ನೋ ವಸ್ಯಇಷ್ಟಯೇ ವಸೀಯಸೋ ಧನಸ್ಯ ಪ್ರಾಪ್ತಯ ಉತ್ಕೃಲಕ್ಷಣಾಯ ಯಾಗಾಯ ನೇಂದ್ರಂ ಮತ್ಸಿ । ಮಾದಯಸ್ವ । ತದರ್ಥಂ ತ್ವಮೇವೇಂದ್ರಂ**

**ವೃಷಾ** ಕಾಮಾನಾಂ ವರ್ಷಿತಾ ಆ ವಿಶ । ಅಥ ತಥಾ ಪೀತಃ ಸನ್ನೃಘಾಯಮಾಣಃ ಶತ್ರೂನ್ ಹಿಂಸಯನ್ನಿನ್ವಸಿ । ವ್ಯಾಪ್ನೋಷಿ । ಅತ್ಯೋಽಂತ್ಯೆಂತಿಕೇ ಶತ್ರುಂ ನ ವಿಂದಸಿ । ನ ಲಭಸೇ । ಯತಃ ಶತ್ರವಸ್ತ್ವತ್ಸಾಮರ್ಥ್ಯೇನ ಪಲಾಯಿತಾಃ ಅತೋ ನ ವಿಂದಸಿ । ಯದ್ವಾ । ಉತ್ತರಾರ್ಧ ಇಂದ್ರಪರತಯಾ ವ್ಯಾಖ್ಯೇಯಃ । ಹೇ ಇಂದ್ರ ತ್ವಂ ತಂ ಸೋಮಂ ಪೀತ್ವೆ ಘಾಯಮಾಣಃ ಸನ್ನಿನ್ವಸಿ । ಅಂತಿಕೇ ಶತ್ರುಂ ನ ವಿಂದಸಿ ॥

॥ ಪ್ರತಿಪದಾರ್ಥ ॥

(**ಹೇ**) **ಇಂದೋ**—ಎಲೈ ಸೋಮರಸವೇ | (**ತ್ವಂ**—ನೀನು) | **ನಃ**—ನಮ್ಮ | **ವಸ್ಯ ಇಷ್ಟಯೇ**—ಧನಪ್ರಾಪ್ತಿಗೋಸ್ಕರ | **ಇಂದ್ರಂ**—ಇಂದ್ರನನ್ನು | **ಮತ್ಸಿ**—ಹೃಷ್ಟನನ್ನಾಗಿ ಮಾಡು | **ವೃಷಾ**—ಕಾಮವರ್ಷಕನಾಗಿ | **ಆ ವಿಶ**—(ಇಂದ್ರನನ್ನು) ಚೆನ್ನಾಗಿ ಪ್ರವೇಶಿಸು (ವ್ಯಾಪಿಸು) | (ಹಾಗೆ ಪಾನಮಾಡಲ್ಪಟ್ಟು) **ಋಘಾಯಮಾಣಃ**—ಶತ್ರುಗಳಿಗೆ ಹಿಂಸಕನಾಗಿ | **ಇನ್ವಸಿ**—ವ್ಯಾಪಿಸುತ್ತೀ | (ಆದುದರಿಂದ) **ಅಂತಿ**—ಸಮೀಪದಲ್ಲಿ | **ಶತ್ರುಂ**—ಶತ್ರುವನ್ನು | **ನ ವಿಂದಸಿ**—ಪಡೆಯುವುದಿಲ್ಲ | [ಅಥವಾ **ಹೇ ಇಂದ್ರ ತ್ವಂ**—ಎಲೈ ಇಂದ್ರನೇ ನೀನು) | (ಆ ಸೋಮವನ್ನು ಪಾನಮಾಡಿ) **ಋಘಾಯಮಾಣಃ**—ಶತ್ರುಹಿಂಸಕನಾಗಿ | **ಇನ್ವಸಿ**—ವ್ಯಾಪಿಸುತ್ತೀಯೇ | (ಆದುದರಿಂದ) **ಅಂತಿ**—ಸಮೀಪದಲ್ಲಿ | **ಶತ್ರುಂ**—ಶತ್ರುವನ್ನು | **ನ ವಿಂದಸಿ**—ಹೊಂದುವುದಿಲ್ಲ.]

॥ ಭಾವಾರ್ಥ ॥

ಎಲೈ ಸೋಮರಸವೇ, ನಮಗೆ ಧನಾದಿಲಾಭಕ್ಕೋಸ್ಕರ, ಇಂದ್ರನನ್ನು ಹರ್ಷಗೊಳಿಸು; ಕಾಮವರ್ಷಕವಾದ ಎಲೈ ಸೋಮರಸವೇ, ಅವನನ್ನು ಚೆನ್ನಾಗಿ ವ್ಯಾಪಿಸು; ಎಲೈ ಇಂದ್ರನೇ, ಸೋಮಪಾನಮಾಡಿ, ಶತ್ರುಗಳನ್ನು ಚೆನ್ನಾಗಿ ಹಿಂಸಿಸುತ್ತಿ; ಅದರಿಂದಲೇ ಅವರು ನಿನ್ನನ್ನು ಸಮೀಪಿಸಲಾರರು.

## English Translation.

Soma, exhilarate Indra (at the sacrifice we offer). for the sake of obtaining wealth : pervade him, showerer (of benefits), for when imbibed you are the annihilator (of enemies), and suffer not a foe to be nigh.

॥ ವಿಶೇಷವಿಷಯಗಳು ॥

೧೭೬ ನೆಯ ಸೂಕ್ತವು ಅಗಸ್ತ್ಯಋಷಿಯಿಂದ ನಿರ್ಮಿತವಾದೂ, ಮತ್ತು ಇಂದ್ರನನ್ನು ಉದ್ದೇಶಿಸಿದುದೂ ಆಗಿದೆ. ಅದರಲ್ಲಿ **ಮತ್ಸಿ ನಃ** ಎಂಬ ಮೊದಲನೆಯ ಋಕ್ಕಿನಲ್ಲಿ ಇಂದ್ರನಿಗೆ ತೃಪ್ತಿಯನ್ನುಂಟುಮಾಡತಕ್ಕ ಸೋಮನನ್ನು ಉದ್ದೇಶಿಸಿ ಪ್ರಾರ್ಥಿಸಿದೆ. ಸೋಮರಸದ ಪಾನದಿಂದ;

(೧) ಇಂದ್ರನಿಗೆ ಲಭಿಸತಕ್ಕ ಅತಿಶಯವಾದ ಹರ್ಷವೂ,

(೨) ಶತ್ರುನಿಗ್ರಹಕ್ಕೆ ಸಾಧಕವಾದ ಶಕ್ತಿಯ ಬೆಳವಣಿಗೆಯೂ, ಮತ್ತು

(೩) ಈ ಹರ್ಷದಿಂದ ಇಂದ್ರನು ಯಜಮಾನನಿಗೆ ಅನುಗ್ರಹಿಸತಕ್ಕ ಧನದಾನವೂ ಸೂಚಿತವಾಗಿದೆ.

೧. **ಮತ್ಸಿ—ಮಾದಯಸ್ವ** । ತೃಪ್ತಿಯನ್ನುಂಟುಮಾಡು ಎಂದು ಪ್ರಾರ್ಥಿಸಿದೆ. ಇಂದ್ರನನ್ನು **ಸೋಮಕಾಮ**ನೆಂದು ಅನೇಕ ಕಡೆಗಳಲ್ಲಿ ವರ್ಣಿಸಿರುವುದು ಪ್ರಸಿದ್ಧವಾಗಿದೆ. ಮತ್ತು ಈ ಸೋಮರಸದ ಪಾನದಿಂದ ಲಭಿಸ

ತಕ್ಕ ಸುಖಸ್ವರೂಪವು ಅತ್ಯತಿಶಯವಾದುದೆಂದು ವರ್ಣಿತವಾಗಿರುವುದನ್ನು ಕೆಳಗಿನ ಋಕ್ಕುಗಳಲ್ಲಿರುವ ವಿವರಣೆಯಿಂದ ತಿಳಿಯಬಹುದು. ಇಂತಹ ಸುಖದಾಯಕಗಳಾದ ಸೋಮರಸವು ಇಂದ್ರಪಾನಾರ್ಥವಾಗಿ ಸಿದ್ಧವಾಗಲೆಂದೂ ಪ್ರಾರ್ಥಿಸಿದೆ.

**ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಂ ।**
**ತಸ್ಮಿನ್ಮಾಂ ಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ ಪರಿ ಸ್ರವ ॥**

(ಋ. ಸಂ. ೯-೧೧೩-೭)

**ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ ।**
**ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥**

(ಋ. ಸಂ. ೯-೧೧೩-೧೦)

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥**

(ಋ. ಸಂ. ೯-೧೧೩-೧೧)

ಇತ್ಯಾದಿ ಋಕ್ಕುಗಳಲ್ಲಿ ವಿವರಿಸಿರುವ ಸುಖದ ಸ್ವರೂಪವು ಸಾಧಾರಣವಾಗಿ ವರ್ಣಿತವಾಗಿರುವ ಸ್ವರ್ಗಸುಖಕ್ಕಿಂತಲೂ ಮೀರಿದುದಾಗಿದೆ. ನಿಕಾಮವಾದಂತಹ ಆನಂದ, ಮೋದ, ಪ್ರಮೋದಗಳು ಸೋಮನ ಅನುಗ್ರಹದಿಂದ ಲಭಿಸ ತಕ್ಕವಾಗಿವೆ. ಇಂತಹ ಸುಖದಾಯಕವಾದ ತೃಪ್ತಿಯನ್ನು ಇಂದ್ರನಿಗೆ ಉಂಟುಮಾಡಲಿ ಎಂದು ಪ್ರಕೃತವಾದ ಋಕ್ಕಿನಲ್ಲಿ **ಮತ್ಸಿ** ಎಂಬ ಪದದಿಂದ ಪ್ರಾರ್ಥಿಸಿದೆ.

೨. ಎರಡನೆಯದಾಗಿ, **ಶತ್ರುಮಂತಿ ನ ವಿಂದಸಿ; ಅಂತಿಕೇ ಶತ್ರುಂ ನ ವಿಂದಸಿ ।** ನಿನ್ನ ಪ್ರಭಾವ ದಿಂದ ಶತ್ರುಗಳನ್ನು ಹತ್ತಿರಕ್ಕೆ ಬರಮಾಡದೇ ದೂರಕ್ಕೆ ಓಡಿಸುತ್ತೀಯೇ ಎಂದು ಸೋಮರಸದ ಪ್ರಭಾವವನ್ನು ವರ್ಣಿಸಿದೆ. ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವಾಗುವುದೆಂದು ಸಾಯಣರು ತಿಳಿಸಿದ್ದಾರೆ. ಇಂದ್ರನಿಂದ ಪಾನಮಾಡಲ್ಪಟ್ಟ ಸೋಮವು ತನ್ನ ಪ್ರಭಾವದಿಂದ ಶತ್ರುಗಳನ್ನು ಹತ್ತಿರಕ್ಕೆ ಸೇರಿಸುವುದಿಲ್ಲ ಎಂದಾಗಲಿ, ಅಥವಾ **ಹೇ ಇಂದ್ರ ತ್ವಂ ಸೋಮಂ ಪೀತ್ವಾ ಅಂತಿಕೇ ಶತ್ರುಂ ನ ವಿಂದಸಿ ।** ಎಲೈ ಇಂದ್ರನೇ ನೀನು ಸೋಮರಸವನ್ನು ಪಾನಮಾಡಿ ನಿನ್ನ ಶಕ್ತಿಯನ್ನು ವೃದ್ಧಿಪಡಿಸಿಕೊಂಡು ಶತ್ರುಗಳನ್ನು ಓಡಿಸುತ್ತೀಯೆ ಎಂದು ಇಂದ್ರಪರವಾದ ಅರ್ಥ ವಾಗಲಿ ಸಾಧ್ಯವಾಗುತ್ತದೆ. ಈ ಎರಡು ವಿಧವಾದ ಅನ್ವಯಕ್ಕೂ ತಾತ್ಪರ್ಯವು ಒಂದೇ ಆಗಿರುತ್ತದೆ. ಸೋಮರಸವು ಇಂದ್ರನಿಗೆ ವೀರ್ಯದಾಯಕವಾದುದು. ಇದರ ಪಾನದಿಂದ ಇಂದ್ರನು ಶತ್ರುಗಳನ್ನು ನಿಗ್ರಹಿಸಬಲ್ಲನು ಎಂದು ತಾತ್ಪರ್ಯ. ಇದೇ ಭಾವವನ್ನು ಇದರಂತೆಯೇ ಇನ್ನೂ ಅನೇಕ ಕಡೆಗಳಲ್ಲಿ ಹೇಳಿದೆ. ಉದಾಹರಣೆಗೆ—

**ತ್ವಂ ಸದ್ಯೋ ಅಪಿಬೋ ಜಾತ ಇಂದ್ರ ಮದಾಯ ಸೋಮಂ ಪರಮೇ ವ್ಯೋಮನ್ ।**
**ಯದ್ಧ ದ್ಯಾವಾಪೃಥಿವೀ ಆವಿವೇಶೀರಥಾಭವಃ ಪೂರ್ವ್ಯಃ ಕಾರುಧಾಯಾಃ ॥**

(ಋ. ಸಂ. ೩-೩೨-೧೦)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನ ತಾಯಿಯು ಇಂದ್ರನು ಉತ್ಪನ್ನನಾದೊಡನೆಯೇ ಅವನಿಗೆ ಸೋಮರಸವನ್ನು ಪಾನ ಮಾಡಿಸಿದುದೂ, ಅದರಿಂದ ಅವನ ಮಹತ್ತ್ವವು ವೃದ್ಧಿಯಾದುದೂ ವರ್ಣಿತವಾಗಿದೆ. ಮತ್ತು ಇದರ ಫಲವಾಗಿ,

**ಅವಂಶೇ ದ್ಯಾಮಸ್ತಭಾಯದ್ಬೃಹಂತಮಾ ರೋದಸೀ ಅಪೃಣದಂತರಿಕ್ಷಂ |**
**ಸ ಧಾರಯತ್ಪೃಥಿವೀಂ ಪಪ್ರಥಚ್ಚ ಸೋಮಸ್ಯ ತಾ ಮದ ಇಂದ್ರಶ್ಚಕಾರ ||**

(ಋ. ಸಂ. ೨-೧೫-೨)

ಇಂದ್ರನು ವೀರ್ಯಶಾಲಿಯಾಗಿಯೂ, ಯುದ್ಧೋನ್ಮತ್ತನಾಗಿಯೂ ಬೆಳೆದು ದ್ಯಾವಾಪೃಥಿವಿಗಳನ್ನೂ ಸಹ ಧರಿಸುವ ಶಕ್ತಿಯನ್ನು ಪಡೆದುದಾಗಿಯೂ ವರ್ಣಿತವಾಗಿದೆ. ಈ ಶಕ್ತಿಯಿಂದಲೇ ಇಂದ್ರನು ಶತ್ರುಗಳನ್ನು ದೂರಕ್ಕೆ ಅಟ್ಟಿ ಜಯವನ್ನು ಪಡೆಯುತ್ತಾನೆಂದರ್ಥ.

೩. ಇಂದ್ರನ ವೃದ್ಧಿಯು ಯಜ್ಞಕರ್ತರಿಗೆ ನಾನಾವಿಧವಾದ ಉಪಕಾರವನ್ನು ಮಾಡಿ ಅವರ ಧನಸಂಪತ್ತನ್ನು ಹೆಚ್ಚಿಸತಕ್ಕದ್ದಾಗಿರುತ್ತದೆ. ಆದುದರಿಂದಲೇ **ವಸ್ಯ ಇಷ್ಟಯೆ ವೃಷಾ ವಿಶ** ಎಂದು ಪ್ರಾರ್ಥಿಸಿದೆ.

**ವಸ್ಯ ಇಷ್ಟಯೇ | ವಸೀಯಸೋ ಧನಸ್ಯ ಪ್ರಾಪ್ತಯೇ ಉಕ್ತಲಕ್ಷಣಾಯ ಯಾಗಾಯ ವಾ |** ಧನದ ಪ್ರಾಪ್ತಿಗಾಗಿ ಎಂದಾಗಲಿ ಅಥವಾ ಧನಸಾಧಕವಾದ ಯಜ್ಞಾರ್ಥವಾಗಿ ಎಂದಾಗಲಿ ಅರ್ಥವಾಗುತ್ತದೆ. **ವಸುವಿತ್** ಇತ್ಯಾದಿ ವಿಶೇಷಣಗಳು ಸೋಮಪರವಾಗಿಯೇ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿವೆ. ಉದಾಹರಣೆಗೆ,

**ಗೋವಿತ್ಪವಸ್ಯ ವಸುವಿದ್ಧಿರಣ್ಯವಿದ್ರೇತೋಧಾ ಇಂದೋ ಭುವನೇಷ್ವರ್ಪಿತಃ |**
**ತ್ವಂ ಸುವೀರೋ ಅಸಿ ಸೋಮ ವಿಶ್ವವಿತ್ತಂ ತ್ವಾ ವಿಪ್ರಾ ಉಪ ಗಿರೇಮ ಆಸತೇ ||**

(ಋ. ಸಂ. ೯-೮೬-೩೯)

ಎಂಬ ಋಕ್ಕಿನಲ್ಲಿ **ವಸುವಿತ್, ಹಿರಣ್ಯವಿತ್, ಗೋವಿತ್** ಎಂಬ ಮೂರು ವಿಶೇಷಣಗಳೂ ಸೋಮಪರವಾಗಿಯೇ ಇವೆ. ಇಂತಹ ಗುಣಗಳಿಂದ ಕೂಡಿದುದರಿಂದ ಸೋಮರಸವನ್ನು ಪಾನಮಾಡಿದ ಇಂದ್ರನೂ ಸಹ ಧನಸಂಪತ್ತನ್ನು ಒದಗಿಸುವ ಸಾಮರ್ಥ್ಯವುಳ್ಳವನಾಗುತ್ತಾನೆಂದರ್ಥ.

**ಇಂದೋ—ಇಂದುರಿಂಧೇರುನತ್ತೇರ್ವಾ |** ಪ್ರಜ್ವಲಿಸು ಎಂಬರ್ಥವನ್ನು ಕೊಡತಕ್ಕ **ಇಂಧ್** ಧಾತುವಿನಿಂದಾಗಲಿ ಅಥವಾ, ತೇವಮಾಡುವಂತೆ ಪ್ರವಹಿಸು ಎಂಬರ್ಥವನ್ನು ಕೊಡುವ **ಉದ್** ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಬಹುದು. (ನಿ. ೧೦-೪೨) ಎಂದು ನಿರುಕ್ತಕಾರರು,

**ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ ||** (ಋ ಸಂ. ೧-೧೨೯-೬)

ಎಂಬ ಋಕ್ಕನ್ನುದಹರಿಸಿ **ಇಂದು** ಶಬ್ದದ ಎರಡರ್ಥವನ್ನೂ ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಈ ಪದವು ಸೋಮನಿಗೆ ಪ್ರಕಾಶಮಾನವಾದ ಗುಣವನ್ನೂ ಮತ್ತು ದ್ರವರೂಪದಲ್ಲಿ ಪ್ರವಹಿಸಿ ಎಲ್ಲವನ್ನೂ ಆರ್ದ್ರವನ್ನಾಗಿ ಮಾಡತಕ್ಕ ಗುಣವನ್ನೂ ಸ್ತುತಿಸಿದೆ.

**ಋಘಾಯಮಾಣಃ— ಶತ್ರೂನ್ ಹಿಂಸಯನ್ |** ಶತ್ರುಗಳನ್ನು ಹಿಂಸಿಸುತ್ತಾ ಎಂದರ್ಥ Monier Williams Dictionary ಯಲ್ಲಿ Violence, Passion ಎಂದರೆ ತೀವ್ರವಾದ ಅಭಿನಿವೇಶ, ಆಕ್ರೋಶ ಎಂಬರ್ಥವನ್ನು ಹೇಳಿದೆ. ಈ ಪದವು ಇನ್ನೂ ಕೆಲವು ಋಕ್ಕುಗಳಲ್ಲಿಯೂ ಸಹ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ —

**ಇಂದ್ರಃ ಸುಶಿಪ್ರೋ ಮಘವಾ ತರುತ್ರೋ ಮಹಾವ್ರಾತಸ್ತುವಿಕೂರ್ಮಿರೃಘಾವಾನ್ ।**
**ಯದುಗ್ರೋ ಧಾ ಬಾಧಿತೋ ಮರ್ತ್ಯೇಷು ಕ್ವ೧ ತ್ಯಾ ತೇ ವೃಷಭ ವೀರ್ಯಾಣಿ ॥**

(ಋ. ಸಂ. ೩-೩೦-೩)

ಇತ್ಯಾದಿ ಋಕ್ಕುಗಳಲ್ಲಿಯೂ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವಂತೆ **ಶತ್ರುವಿಷಯಹಿಂಸಾವಾನ್** । ಶತ್ರುಗಳನ್ನು ಹಿಂಸಿಸಲು ಸಾಮರ್ಥ್ಯವನ್ನು ಪಡೆದಿರುವವನು ಎಂದು ತಾತ್ಪರ್ಯವನ್ನು ಹೇಳಿದೆ. ಸಾಯಣರು,

**ನಹಿ ತ್ವಾ ರೋದಸೀ ಉಭೇ ಋಘಾಯಮಾಣಮಿನ್ವತಃ ।**
**ಜೇಷಃ ಸ್ವರ್ವತೀರಪಃ ಸಂ ಗಾ ಅಸ್ಮಭ್ಯಂ ಧೂನುಹಿ ॥**

(ಋ. ಸಂ. ೧-೧೦-೮)

ಎಂಬ ಋಕ್ಕಿನಲ್ಲಿ ಈ ಪದದ ವಿವರಣೆಯನ್ನು ಹೇಳುತ್ತಾ **ನೄನ್ ಹಂತೀತಿ ಋಘಾ । ಶತ್ರುವಧಂ ಕುರ್ವಾಣಂ ।** ನರರನ್ನು ಹನನಮಾಡುವವನು ಆದುದರಿಂದ ಈ ವಿಶೇಷಣವಿದೆ ಎಂದು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಈ ಪದವು ಸೋಮನಿಗಾಗಲಿ ಅಥವಾ ಇಂದ್ರನಿಗಾಗಲಿ ವಿಶೇಷಣವಾಗಿದೆ.

**ಇನ್ವಸಿ—ಇನ್ವತಿ, ನಕ್ಷತಿ** ಇತ್ಯಾದಿ ವ್ಯಾಪ್ತಿಕರ್ಮವನ್ನು ಹೇಳುವ ಧಾತುಗಳಲ್ಲಿ ಈ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೦) **ಇನ್ವಸಿ** ಎಂದರೆ ವ್ಯಾಪಿಸುತ್ತೀಯೆ ಎಂದರ್ಥ. ಇಂದ್ರನನ್ನು ವ್ಯಾಪಿಸಿ ಅವನ ಶಕ್ತಿಯನ್ನು ವೃದ್ಧಪಡಿಸುತ್ತೀಯೆ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಮತ್ಸಿ**—ಮದೀ ಸ್ತುತಿಮೋದಮದಸ್ವಪ್ನಕಾಂತಿಗತಿಷು ಧಾತು. ಅಂತರ್ಭಾವಿತಣ್ಯರ್ಥಕವಾಗಿದೆ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಖರಿಚ** ಎಂಬುದರಿಂದ ಧಾತು ದಕಾರಕ್ಕೆ ತಕಾರಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ವಸ್ಯಇಷ್ಟಯೇ**—ವಸೀಯಸಃ ಇಷ್ಟಿಃ ಪ್ರಾಪ್ತಿಃ ತಸ್ಯೈ. ವಸು ಶಬ್ದದ ಮೇಲೆ ಮತುಪ್. ಇದರ ಮೇಲೆ ಈಯಸುನ್ ಪ್ರತ್ಯಯ ಬಂದಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ಮತುಪಿಗೆ ಲುಕ್. **ಟೇಃ** ಎಂಬುದರಿಂದ ಟಿಗೆ ಲೋಪ. ಛಾಂದಸವಾಗಿ ಯಕಾರಕ್ಕೂ ಲೋಪ ಬರುತ್ತದೆ. ಪೂರ್ವಪದ ಪ್ರಕೃತಿ ಸ್ವರ ಬರುತ್ತದೆ.

**ವಿಶ**—ವಿಶ ಪ್ರವೇಶನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಋಘಾಯಮಾಣಃ**— ಹನ ಹಿಂಸಾಗತ್ಯೋಃ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಟ್ ಪ್ರತ್ಯಯ. ದೃಶಿಗ್ರಹಣ ಸಾಮರ್ಥ್ಯದಿಂದ ನಕಾರಲೋಪ. ಹಕಾರಕ್ಕೆ ಘಕಾರಾದೇಶ. ಅನೃಘಾ ಋಘಾ ಭವತಿ ಎಂದು ಅರ್ಥವಿವಕ್ಷಾಮಾಡಿದಾಗ **ಲೋಹಿತಾದಿ ಡಾಜ್ಭ್ಯಃ ಕ್ಯಷ್** (ಪಾ. ಸೂ. ೩-೧-೧೩) ಎಂಬುದರಿಂದ ಕ್ಯಷ್ ಪ್ರತ್ಯಯ. **ವಾಕ್ಯಷಃ** (ಪಾ. ಸೂ. ೧-೩-೯೦) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಲಟಿಗೆ ಶಾನಚಾದೇಶ. ಲ ಸಾರ್ವಧಾತುಕ ಅನುದಾತ್ತವಾಗುವುದರಿಂದ ಕ್ಯಷ್ ಸ್ವರ ಉಳಿಯುತ್ತದೆ.

ಇನ್ವಸಿ—ಇವಿ ವ್ಯಾಪ್ತೌ. ಧಾತು. ಇದಿತ್ತ್ವಾದುದರಿಂದ ನುಮಾಗಮ. ಲಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

ಅಂತಿ – ಅಂತಿಕೇ ಎಂಬಲ್ಲಿ ಛಾಂದಸವಾಗಿ ಕಾದಿಗೆ ಲೋಪ ಬಂದಿದೆ.

ವಿಂದಸಿ—ವಿದ್ಲೃ ಲಾಭೇ. ಧಾತು. ತುದಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ **ಶೇಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ತಸ್ಮಿನ್ನಾ ವೇಶಯಾ ಗಿರೋ ಯ ಏಕಶ್ಚರ್ಷಣೀನಾಂ ।
ಅನು ಸ್ವಧಾ ಯಮುಪ್ಯತೇ ಯವಂ ನ ಚರ್ಕೃಷದ್ವೃಷಾ ॥ ೨ ॥

॥ ಪದಪಾಠಃ ॥

ತಸ್ಮಿನ್ । ಆ । ವೇಶಯ । ಗಿರಃ । ಯಃ । ಏಕಃ । ಚರ್ಷಣೀನಾಂ ।
ಅನು । ಸ್ವಧಾ । ಯಂ । ಉಪ್ಯತೇ । ಯವಂ । ನ । ಚರ್ಕೃಷತ್ । ವೃಷಾ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಂತರಾತ್ಮನ್ ಹೋತರ್ವಾ ತಸ್ಮಿನ್ಪ್ರಸಿದ್ಧ ಇಂದ್ರೇ ಗಿರಃ ಸ್ತುತಿರೂಪಾ ವಾಚ ಆ ವೇಶಯ । ಸ್ಥಾಪಯ । ತಂ ಸ್ತುಹೀತ್ಯರ್ಥಃ । ಯ ಇಂದ್ರಶ್ಚರ್ಷಣೀನಾಂ ಜ್ಞಾನವತಾಂ ಮನುಷ್ಯಾಣಾಮೇಕ ಏಕ ಏವ ಸ್ಥಾನೀಯಃ । ಯಮನು ಯಮೇವೇಂದ್ರಮನು ಸ್ವಧಾ ಹವಿರ್ಲಕ್ಷಣಮನ್ನಮುಪ್ಯತೇ । ದೀಯತ ಇತ್ಯರ್ಥಃ । ಸ ಚೇಂದ್ರೋ ವೃಷಾ ವರ್ಷಕಃ ಸನ್ಯವಂ ನ ಯವಮಿವ ಪಕ್ವಂ ಯವಂ ಯಥಾ ಚರ್ಕೃಷತ್ ಕ್ರಮೇಣಾದದತೇ ಕರ್ಷಕಾಃ ತದ್ವದಾದತ್ತೇ । ಯದ್ವಾ । ಅನು ಸ್ವಧಾನ್ನಸಾಧನಂ ವ್ರೀಹ್ಯಾದಿಕಮುಪ್ಯತೇ ಭೂಮೌ ಯಸ್ಯೇಂದ್ರಸ್ಯ ವೃಷ್ಟಿರೂಪಮನುಗ್ರಹಮಪೇಕ್ಷ್ಯೋಪ್ಯತ ಇತ್ಯರ್ಥಃ । ಸ ಚ ವೃಷಾ ವೃಷ್ಟೇರ್ವರ್ಷಿತಾ ಸ ಇಂದ್ರೋ ಯವಂ ನ ಯವಮಿವ ಸರ್ವಬೀಜಮಪಿ ಚರ್ಕೃಷತ್ । ಪುನಃಪುನಃ ಕರೋತಿ । ಅಂಕುರಯತಿ । ಹವಿಃಸಾಧನತ್ವಪ್ರಾಶಸ್ತ್ಯಮಪೇಕ್ಷ್ಯ ಯವಶಬ್ದಃ ಪ್ರಯುಕ್ತಃ । ಏವಂಮಹಾನುಭಾವ ಇಂದ್ರೇ ಗಿರ ಆ ವೇಶಯೇತಿ ॥

॥ ಪ್ರತಿಪದಾರ್ಥ ॥

(ಎಲೈ ಆತ್ಮವೇ ಅಥವಾ ಹೋತೃವೇ) | **ಯಃ**—ಯಾವ ಇಂದ್ರನು | **ಚರ್ಷಣೀನಾಂ**—ಜ್ಞಾನಿಗಳಿಗೆಲ್ಲಾ | **ಏಕಃ**—ಒಬ್ಬನೇ ಆಶ್ರಯ ಭೂತನೋ | **ಯಂ ಅನು**—ಯಾವ ಇಂದ್ರನನ್ನು ಅನುಸರಿಸಿಯೇ **ಸ್ವಧಾ**—ಹವಿರ್ಲಕ್ಷಣಾನ್ನವು | **ಉಪ್ಯತೇ**—ದತ್ತವಾಗುತ್ತದೆಯೋ | (**ಸಃ**—ಆ ಇಂದ್ರನು) | **ವೃಷಾ**—ಇಷ್ಟಾರ್ಥವರ್ಷಕನಾಗಿ | **ಯವಂ ನ**—ಪಕ್ವವಾದ ಯವಧಾನ್ಯವನ್ನು ಕರ್ಷಕರು ಕುಯ್ಯುವಂತೆ | **ಚರ್ಕೃಷತ್**—ಸ್ವೀಕರಿಸುತ್ತಾನೆ | [ಅಥವಾ **ಯಂ ಅನು**—ಯಾವ ಇಂದ್ರನನ್ನು (ಇಂದ್ರದತ್ತವಾದ ವೃಷ್ಟಿಯನ್ನು) ಅನುಸರಿಸಿ | **ಸ್ವಧಾ**—ಅನ್ನ ಸಾಧನವಾದ ವ್ರೀಹ್ಯಾದಿಗಳು | **ಉಪ್ಯತೇ**—ಭೂಮಿಯಲ್ಲಿ ಬಿತ್ತಲ್ಪಡುತ್ತವೆಯೋ | **ಸಃ**—ಆ | **ವೃಷಾ**—ವೃಷ್ಟಿಕಾರಕನಾದ ಇಂದ್ರನು | **ಯವಂ ನ**—ಯವಧಾನ್ಯದಂತೆ | **ಚರ್ಕೃಷತ್**—(ಸಮಸ್ತ ಬೀಜಗಳನ್ನೂ) ಪುನಃ ಪುನಃ ಅಂಕುರಿಸುವಂತೆ ಮಾಡುತ್ತಾನೆ |] **ತಸ್ಮಿನ್**—ಅಂತಹ ಇಂದ್ರನಲ್ಲಿ | **ಗಿರಃ**—ಸ್ತುತಿರೂಪ ವಾಕ್ಕುಗಳನ್ನು | **ಆ ವೇಶಯ**—ಸ್ಥಾಪಿಸು (ಇಂದ್ರನನ್ನು ಸ್ತುತಿಸು).

॥ ಭಾವಾರ್ಥ ॥

ಎಲೈ ಆತ್ಮವೇ (ಹೋತೃವೇ), ಸಮಸ್ತಜ್ಞಾನಿಗಳಿಗೂ ಏಕಮಾತ್ರಆಶ್ರಯನೂ, ಅನ್ನ ಸಾಧನವಾದ ವ್ರೀಹ್ಯಾದಿಗಳ ಬೆಳವಣಿಗೆಗೆ ಬೇಕಾದ ವೃಷ್ಟಿಕಾರಕನೂ, ಯವಾದಿ ಸಮಸ್ತ ಧಾನ್ಯಗಳು ಅಂಕುರಿಸಲು ಕಾರಣಭೂತನೂ ಆದ ಇಂದ್ರನನ್ನು ಸ್ತುತಿಸು.

## English Translation.

Pervade with our praise him who is the sole sustainer of men, to whom the oblation is presented and who, the showerer (of benefits), causes (every desire) to bud like barley.

॥ ವಿಶೇಷವಿಷಯಗಳು ॥

**ಏಕಃ ಚರ್ಷಣೀನಾಂ—ಜ್ಞಾನವತಾಂ ಮನುಷ್ಯಾಣಾಂ ಏಕ ಏವ ಸ್ಥಾನೀಯಃ** | ಪ್ರಜ್ಞಾವಂತರಾದ ಎಲ್ಲಾ ಮಾನವರಿಗೂ ಒಂದೇ ಆಧಾರವಾದ ಎಂದರೆ ಏಕಮಾತ್ರಧಾರಕನೂ, ಪೋಷಕನೂ ಆದ ಎಂದು ಇಂದ್ರನ ಮಹತ್ತ್ವವನ್ನು ಸ್ತುತಿಸಿದೆ.

**ಚರ್ಷಣಿ**—ಈಶಬ್ದವು ಮನುಷ್ಯನಾಮಗಳಲ್ಲಿ ಪಠಿತವಾಗಿದೆ (ನಿ. ೩-೭) **ಮನುಷ್ಯ** ಎಂಬರ್ಥದಲ್ಲಿ ಈ ಪದದ ಪ್ರಯೋಗವು ಅಧಿಕವಾಗಿದೆ. ಉದಾಹರಣೆಗೆ—

**ಆ ಯಾಹಿ ಪೂರ್ವೀರತಿ ಚರ್ಷಣೀರಾँ ಅರ್ಯ ಆಶಿಷ ಉಪ ನೋ ಹರಿಭ್ಯಾಂ |**
**ಇಮಾ ಹಿ ತ್ವಾ ಮತಯಃ ಸ್ತೋಮತಷ್ಟಾ ಇಂದ್ರ ಹವಂತೇ ಸಖ್ಯಂ ಜುಷಾಣಾಃ ||**

(ಋ. ಸಂ. ೩-೪೩-೨)

**ವಿಶ್ವಾ ಯಶ್ಚರ್ಷಣೀರಭ್ಯಾ ೩ ಸಾ ವಾಜೇಷು ಸಾಸಹತ್ |**

(ಶ. ಬ್ರಾ. ೫-೨೩-೧)

ಇತ್ಯಾದ್ಯನೇಕ ಕಡೆಗಳಲ್ಲಿ **ಚರ್ಷಣಿ** ಶಬ್ದಕ್ಕೆ ಪ್ರಜೆಗಳು ಎಂದರ್ಥಮಾಡಿದೆ. ಈ ವಿಶೇಷಣವು ಮಾನವರ ಒಂದು ಅಸಾಧಾರಣವಾದ ಗುಣವನ್ನು ತಿಳಿಸತಕ್ಕದಾಗಿದೆ. ಆದರೆ ಈ ಪದದ ಅವಯವಾರ್ಥವನ್ನು ಹೇಳುವಾಗ ಮತಭೇದ ವಿರುತ್ತದೆ. Monier williams ಎಂಬ ಪಂಡಿತನು ತನ್ನ Sanskrit—English Dictionary ಯಲ್ಲಿ ಈ ಪದಕ್ಕೆ, cultivating, agile, active, shift, ಕೃಷ್ಯಾದಿಗಳಲ್ಲಿ ಚಟುವಟಿಕೆಯಿಂದ ಕೂಡಿದುದ ರಿಂದ ಮಾನವರಿಗೆ ಚರ್ಷಣಿಯೆಂಬ ವಿಶೇಷಣವಿದೆಯೆಂದು ತಿಳಿಸಿದ್ದಾನೆ. ಮತ್ತು ಈ ಪದಕ್ಕೆ **ಕೃಷ್** ಎಂಬ ಧಾತುವೇ ಮೂಲವೆಂದೂ ತೋರಿಸಿದ್ದಾನೆ. ನಿರುಕ್ತಕಾರರು,

**ಹವಿಷಾ ಜಾರೋ ಅಪಾಂ ಪಿಪರ್ತಿ ಪಪುರಿರ್ನರಾ । ಪಿತಾ ಕುಟಸ್ಯ ಚರ್ಷಣಿಃ ।**

(ಋ. ಸಂ. ೧-೪೬-೪)

ಎಂಬ ಋಕ್ಕನ್ನುದಹರಿಸಿ ಆದಿತ್ಯಶಬ್ದಕ್ಕೆ ವಿಶೇಷಣವಾದ **ಚರ್ಷಣಿ** ಶಬ್ದಕ್ಕೆ **ಚಾಯಿತಾ ದ್ರಷ್ಟಾ,** ವೀಕ್ಷಿಸತಕ್ಕವನು ಎಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಜ್ಞಾನವತಾಂ ಮನುಷ್ಯಾಣಾಂ** ಎಂದು ವಿವರಿಸಿರು ವುದರಿಂದ ಜ್ಞಾನರೂಪವಾದ ದೃಷ್ಟಿಯುಳ್ಳವರು. ದರ್ಶನಸಾಮರ್ಥ್ಯವುಳ್ಳವರು ಎಂದರ್ಥವಾಗುತ್ತದೆ. ಈ ಪದವು ಕೇವಲ ಮಾನವರಿಗೆ ಮಾತ್ರ ವಿಶೇಷಣವಾಗಿರದೆ, ಇಂದ್ರಾದಿಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಮೇಲೆ ನಿರುಕ್ತಕಾರರು ಉದಹರಿಸಿರುವ (೧-೪೬-೪) ಋಕ್ಕಿನಲ್ಲಿ ಆದಿತ್ಯನ ದರ್ಶನಶಕ್ತಿಯನ್ನು ಹೇಳುವಂತೆ—

**ಯುವಾಮಿಂದ್ರಾಗ್ನೀ ವಸುನೋ ವಿಭಾಗೇ ತವಸ್ತಮಾ ಶುಶ್ರವ ವೃತ್ರಹತ್ಯೇ ।**
**ತಾವಾಸದ್ಯಾ ಬರ್ಹಿಷಿ ಯಜ್ಞೇ ಅಸ್ಮಿನ್ಪ್ರ ಚರ್ಷಣೀ ಮಾದಯೇಥಾಂ ಸುತಸ್ಯ ॥**

(ಋ. ಸಂ. ೧-೧೦೯-೫)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರಾಗ್ನಿಗಳಿಗೆ ವಿಶೇಷಣವಾಗಿ ಅವರ ದರ್ಶನಶಕ್ತಿಯನ್ನು ವಿವರಿಸುತ್ತದೆ. ಸಾಯಣರು **ಸರ್ವಸ್ಯ ದ್ರಷ್ಟಾರೌ ಇಂದ್ರಾಗ್ನೀ**— ಸಕಲವನ್ನೂ ನೋಡತಕ್ಕ ಸಾಮರ್ಥ್ಯವುಳ್ಳವರು ಎಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಜ್ಞಾನರೂಪವಾದ ದೃಷ್ಟಿಯನ್ನು ಹೊಂದಿರತಕ್ಕ ಮಾನವರ ಎಂದು ತಾತ್ಪರ್ಯ ವಾಗುತ್ತದೆ. ಇಂತಹ ಮಾನವರಿಗೆ ಇಂದ್ರನು ಏಕಮಾತ್ರನಾದ ರಕ್ಷಕನೆಂದು **ಚರ್ಷಣೀನಾಂ ಏಕಃ** ಎಂಬ ವಾಕ್ಯದ ಅರ್ಥವು.

**ಅನು ಸ್ವಧಾ ಯಮುಷ್ಯತೇ**— ಸರ್ವರಕ್ಷಕನಾದ ಇಂದ್ರನಿಗೆ **ಸ್ವಧೆಯು** ಅರ್ಪಿತವಾಗತಕ್ಕದ್ದು ಎಂಬ ವಿಧಿವಾಕ್ಯವು ಮಾನವನ ಕರ್ತವ್ಯವನ್ನು ಸೂಚಿಸುತ್ತದೆ. **ಸ್ವಧಾ— ಹವಿರ್ಲಕ್ಷಣಮನ್ನಂ ।** ಹವಿಸ್ಸಿನ ರೂಪವಾದ ಅನ್ನವೆಂದು ಪ್ರಕೃತದಲ್ಲಿ ಅರ್ಥವಾಗುತ್ತದೆ. ನಿರುಕ್ತಕಾರರು ಈ ಪದವನ್ನು **ಉದಕ** ನಾಮಗಳಲ್ಲಿಯೂ (ನಿ. ೨-೨೩) ; **ಅನ್ನ** ನಾಮಗಳಲ್ಲಿಯೂ (ನಿ. ೩-೯) ಸೇರಿಸಿದ್ದಾರೆ. ಆದರೆ ಅನೇಕ ಸಂದರ್ಭಗಳಲ್ಲಿ **ಸ್ವಧಾ** ಶಬ್ದಕ್ಕೆ ಸ್ವಮಹಿಮೆ, ಸ್ವತೇಜಸ್ಸು ಅಥವಾ ಸ್ವಾಶ್ರಯ ಎಂಬರ್ಥವಾಗುತ್ತದೆ. ಉದಾಹರಣೆಗೆ—

**ಶಶ್ವತ್ಪುರೋಷಾ ವ್ಯುವಾಸ ದೇವ್ಯಥೋ ಅದ್ಯೇದಂ ವ್ಯಾವೋ ಮಘೋನೀ ।**
**ಅಥೋ ವ್ಯುಚ್ಛಾದುತ್ತರಾ ಅನು ದ್ಯೂನಜರಾಮೃತಾ ಚರತಿ ಸ್ವಧಾಭಿಃ ॥**

(ಋ. ಸಂ. ೧-೧೧೩-೧೩)

ಎಂಬ ಋಕ್ಕಿನಲ್ಲಿ **ಉಷಸ್ಸಿನ** ಪರವಾಗಿ ಉಪಯೋಗಿಸಲ್ಪಟ್ಟಿರುವ ಈ ಪದಕ್ಕೆ **ಆತ್ಮೀಯೈಸ್ತೇಜೋಭಿಃ ।** ತನ್ನ ಸ್ವತೇಜಸ್ಸುಗಳಿಂದ ಎಂದರ್ಥಮಾಡಿದೆ. ಇದರಂತೆಯೇ,

**ಯದಂತರಿಕ್ಷೇ ಪತಥಃ ಪುರುಭುಜಾ ಯದ್ವೇಮೇ ರೋದಸೀ ಅನು ।**
**ಯದ್ವಾ ಸ್ವಧಾಭಿರಧಿತಿಷ್ಠಥೋ ರಥಮತ ಆ ಯಾತಮಶ್ವಿನಾ ॥**
(ಋ. ಸಂ ೮-೧೦-೬)

ಎಂಬಲ್ಲಿ ಅಶ್ವಿನೀದೇವತೆಗಳ ಸ್ವರೂಪವನ್ನು ವರ್ಣಿಸುತ್ತಾ **ಆತ್ಮೀಯೈಸ್ತೇಜೋಭಿರ್ಬಲೈರ್ವಾ ಸಾರ್ಧಂ ।** ನಿಮ್ಮ ಸ್ವತೇಜಸ್ಸುಗಳಿಂದ ಅಥವಾ ಸ್ವಶಕ್ತಿಗಳೊಡನೆ ಎಂದರ್ಥವಾಗುತ್ತದೆ.

**ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।**
**ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥**
(ಋ. ಸಂ. ೧೦-೧೨೯-೨)

ಎಂಬ ಋಕ್ಕಿನಲ್ಲಿ ಸಾಯಣರು **ಸ್ವಸ್ಮಿನ್ ಧೀಯತೇ ಧ್ರಿಯತೇ ಆಶ್ರಿತ್ಯ ವರ್ತತೇ ಇತಿ ಸ್ವಧಾ ।** ಸ್ವಾಶ್ರಯಾವಲಂಬಿಯಾಗಿರುವುದರಿಂದ **ಸ್ವಧಾ** ಎಂದು ಈಶ್ವರನ (ಪರಬ್ರಹ್ಮನ) ವಿಚಿತ್ರವಾದ ಶಕ್ತಿಯಾದ ಮಾಯೆಗೆ ವಿಶೇಷಣವಾಗಿದೆಯೆಂದು ವಿವರಿಸಿದ್ದಾರೆ. ಹೀಗೆ ಈ ಪದಕ್ಕೆ ನಾನಾರ್ಥಗಳಲ್ಲಿ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ ಹವಿಸ್ಸಿನ ರೂಪವಾದ ಅನ್ನವೆಂದರ್ಥವಾಗುತ್ತದೆ.

ಈ ಪದದ ಪ್ರಯೋಗವು ಪ್ರಾಚೀನವಾದುದೆಂದೂ, ಭಾಷಾಶಾಸ್ತ್ರದ ದೃಷ್ಟಿಯಿಂದ ನೋಡಿದರೆ ಅನೇಕ ವಿಶೇಷಾರ್ಥಗಳನ್ನು ಸೂಚಿಸತಕ್ಕದ್ದೆಂದೂ ಸಹ ಈ ಪದದ ವಿವರಣೆಯನ್ನು ಹೇಳುತ್ತಾ Max Muller ಎಂಬ ಪಂಡಿತನು ಈ ರೀತಿ ತಿಳಿಸಿದ್ದಾನೆ.

> **ಸ್ವಧಾ,** literally one's own place, afterwards, one's own nature. It was a great triumph for the science of comparative philology that, long before the existence of such a word as ಸ್ವಧಾ in sanskrit was known, it should have been postulated by professor Benfey in 1839. ಸ್ವಧಾ was known, it is true, in the ordinary Sanskrit but there it only occured as an exclamation used on presenting an oblation to the manes. It was also explained to mean food offered to deceased ancestors, or to be the name of a personification of ಮಾಯಾ or worldly illusion or of a nymph.
>
> The expressions ಅನು ಸ್ವಧಾಂ and ಸ್ವಧಾಂ ಅನು are of frequent occurance. They mean, according to the nature or character of the person spoken of and may be translated by as usual or accordig to a person's wont.

**ಸ್ವಧಾ** ಶಬ್ದಕ್ಕೆ ಸ್ವಸ್ಥಾನ, ಸ್ವಭಾವ ಎಂದು ಸ್ಥೂಲವಾದ ಅರ್ಥವಾಗುತ್ತದೆ. ಪಿತೃಗಳಿಗೆ ಅರ್ಪಿತವಾಗತಕ್ಕ ಅನ್ನವೆಂದು ಅರ್ಥವಾಗುವುದನ್ನೂ ತಿಳಿಸಿದೆ. ಈ ಅರ್ಥಗಳಲ್ಲದೇ ಇತರ ಅರ್ಥಗಳಲ್ಲೂ ಈ ಪದದ ಪ್ರಯೋಗವಿರುವುದನ್ನು ತಿಳಿಯಬಹುದು. ಉದಾಹರಣೆಗೆ—

**ಪ್ರ ಸು ಷ ವಿಭ್ಯೋ ಮರುತೋ ವಿರಸ್ತು ಪ್ರ ಶ್ಯೇನಃ ಶ್ಯೇನೇಭ್ಯ ಆಶುಪತ್ವಾ ।**
**ಅಚಕ್ರಯಾ ಯತ್ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಂ ॥**

(ಋ. ಸಂ. ೪-೨೬-೪)

ಎಂಬ ಋಕ್ಕಿನಲ್ಲಿ ಈ ಪದಕ್ಕೆ ಅರ್ಥವನ್ನು ಹೇಳುವಾಗ ಸಾಯಣರು, ಇಲ್ಲಿ **ಸ್ವಧಾ** ಶಬ್ದಕ್ಕೆ ರಸವೆಂದರ್ಥ ಎಂದು ಹೇಳಿ ಈ ಅರ್ಥವನ್ನು ಸಮರ್ಥಿಸಲು,

**ಅಪಶ್ಯಂ ಗ್ರಾಮಂ ವಹಮಾನಮಾರಾದಚಕ್ರಯಾ ಸ್ವಧಯಾ ವರ್ತಮಾನಂ ।**
**ಸಿಷಕ್ತ್ಯರ್ಯಃ ಪ್ರ ಯುಗಾ ಜನಾನಾಂ ಸದ್ಯಃ ಶಿಶ್ನಾ ಪ್ರಮಿನಾನೋ ನವೀಯಾನ್ ॥**

(ಋ. ಸಂ. ೧೦-೨೭-೧೯)

ಎಂಬ ಋಕ್ಕನ್ನುದಹರಿಸಿ, **ಅತ್ರ ಸ್ವಧಾಶಬ್ದೋ ರಥವಾಚೀ,** ೧೦-೨೭-೧೯ **ಇತ್ಯಾದೌ ದರ್ಶನಾತ್;** ಉದಾಹೃತವಾಗಿರುವ ಋಕ್ಕಿನಲ್ಲಿ ಅರ್ಥವಾಗುವಂತೆಯೇ ಈ ಋಕ್ಕಿನಲ್ಲಿಯೂ ಸಹ (೪-೨೬-೪) ಸ್ವಧಾ ಶಬ್ದಕ್ಕೆ ರಥವೆಂದೇ ಅರ್ಥವೆಂದು ತಿಳಿಸಿದ್ದಾರೆ. ಆದರೆ ಪುನಃ ೧೦-೨೭-೧೯ ನೇ ಋಕ್ಕನ್ನು ವಿವರಿಸುವಾಗ, **ಅಚಕ್ರಯಾ ಚಕ್ರವರ್ಜಿತಯಾ ರಥಹೀನಯಾ, ಸ್ವಧಯಾ—ಸ್ವಯಮಾತ್ಮಾನಂ ಧಾರಯಂತ್ಯಾ ಸೇನಯಾ** ಎಂದು ಸ್ವಧಾ ಶಬ್ದಕ್ಕೆ ಸೇನೆಯೆಂದರ್ಥಮಾಡಿದ್ದಾರೆ. ಈ ಸಂದರ್ಭದಲ್ಲಿ, **ಸ್ವಧಾ** ಶಬ್ದಕ್ಕೆ ನಾನಾರ್ಥಗಳಿರುವುದೆಂದು ಸೂಚಿಸಿದ್ದರೂ, ಹಿಂದೆ ಹೇಳಿರುವ ಭಾಷ್ಯದ ವಾಕ್ಯವನ್ನು ಇಲ್ಲಿ ಮರೆತಂತೆ ಕಾಣುತ್ತದೆ.

**ಸ್ವಧಾಂ ಅನು; ಅನು ಸ್ವಧಾಂ** ಎಂಬ ಪ್ರಯೋಗಗಳಿರುವಾಗ ಸಹಜವಾಗಿ, ಸ್ವಭಾವತಃ ಅಥವಾ ಪದ್ಧತಿಯಂತೆ ಎಂಬರ್ಥಗಳಾಗುತ್ತವೆ. ಉದಾಹರಣೆಗೆ,

**ಸ್ವಧಾಮನು ಶ್ರಿಯಂ ನರೋ ಮಹಿ ತ್ವೇಷಾ ಅಮವಂತೋ ವೃಷಪ್ಸವಃ ।**
**ವಹಂತೇ ಅಹ್ರುತಪ್ಸವಃ ॥** (ಋ. ಸಂ. ೮-೨೦-೭)

ಇತ್ಯಾದಿ ಋಕ್ಕುಗಳಲ್ಲಿ ಸ್ವಭಾವವಾಗಿ ಎಂದರ್ಥವಾಗುತ್ತದೆ. ಋ. ಸಂ. ೭-೫೬-೧೩ ಮುಂತಾದ ಸ್ಥಳಗಳಲ್ಲಿ **ಉದಕ**ವೆಂಬ ಅರ್ಥವೆಂದು ತಿಳಿಯುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ವೇಶಯ**—ವಿಶ ಪ್ರವೇಶನೇ. ಧಾತು. ಪ್ರಯೋಜಕವ್ಯಾಪಾರ ತೋರುವಾಗ **ಹೇತುಮತಿ ಚ** ಎಂಬುದರಿಂದ ಣಿಚ್. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಚರ್ಷಣೀನಾಮ್**—ಕೃಷ ವಿಲೇಖನೇ. ಧಾತು. **ಕೃಷೇರಾದೇಶ್ಚ ಚಃ** (ಉ. ಸೂ. ೨-೨೬೧) ಎಂಬುದರಿಂದ ಅನಿ ಪ್ರತ್ಯಯ. ಆದಿಗೆ ಚಕಾರಾದೇಶ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಷಷ್ಠೀ ಬಹುವಚನಾಂತರೂಪ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಉಪ್ಯತೇ**—ಡುವಪ್ ಬೀಜಸಂತಾನೇ. ಧಾತು. ಕರ್ಮಣಿಯಲ್ಲಿ ಲಟ್. ಪ್ರಥಮಪುರುಷ ಏಕವಚನಾಂತ ರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲ ಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಯಕ್ ಸ್ವರ ಉಳಿಯುತ್ತದೆ.

**ಚರ್ಕೃಷತ್**—ಕೃಷ ವಿಲೇಖನೇ. ಧಾತು. ಯಙ್ ಲುಕ್ ಬಂದಾಗ ಧಾತುವಿಗೆ ದ್ವಿತ್ವ. ಆದಿಹಲ್‌ಶೇಷ, ಚರ್ತ್ವ. **ರುಗ್ರಿಕೌ ಚ ಲುಕಿ** (ಪಾ. ಸೂ ೭-೪-೯೧) ಎಂಬುದರಿಂದ ಅಭ್ಯಾಸಕ್ಕೆ ರುಕಾಗಮ. ಲೇಟ್ ಪ್ರಥಮ ಪುರುಷ ಏಕವಚನದಲ್ಲಿ ತಿಪ್. **ಇತಶ್ಚ ಲೋಪಃ ಪರ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ನಾಭ್ಯಸ್ತಸ್ಯಾಚಿ ಪಿತಿ**—(ಪಾ. ಸೂ. ೭-೩-೮೭) ಎಂಬುದರಿಂದ ಲಘೂಪಧ ಗುಣಕ್ಕೆ ನಿಷೇಧ ಬರುತ್ತದೆ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಯಸ್ಯ ವಿಶ್ವಾನಿ ಹಸ್ತಯೋಃ ಪಂಚ ಕ್ಷಿತೀನಾಂ ವಸು ।
ಸ್ಪಾಶಯಸ್ವ ಯೋ ಅಸ್ಮಧ್ರುಗ್ದಿವ್ಯೇವಾಶನಿರ್ಜಹಿ ॥ ೩ ॥

॥ ಪದಪಾಠಃ ॥

ಯಸ್ಯ । ವಿಶ್ವಾನಿ । ಹಸ್ತಯೋಃ । ಪಂಚ । ಕ್ಷಿತೀನಾಂ । ವಸು ।
ಸ್ಪಾಶಯಸ್ವ । ಯಃ । ಅಸ್ಮಽಧ್ರುಕ್ । ದಿವ್ಯಾಽಇವ । ಅಶನಿಃ । ಜಹಿ ॥ ೩ ॥

॥ ಸಾಯಣಭಾಷ್ಯಂ ॥

ಯಸ್ಯೇಂದ್ರಸ್ಯ ಹಸ್ತಯೋಃ ಪಂಚ ಕ್ಷಿತೀನಾಂ । ಕ್ಷಿಯಂತಿ ನಿವಸಂತಿ ಗಚ್ಛಂತಿ ವಾ ಕ್ಷಿತಯೋ ಮನುಷ್ಯಾಃ । ಪಂಚಾನಾಂ ಮನುಷ್ಯಾಣಾಂ ಪ್ರೀಣಯಿತ್ರ್ಯಾಣಿ ವಿಶ್ವಾನಿ ಸರ್ವಾಣಿ ವಸು ವಸೂನಿ ಧೃತಾನಿ ಭವಂತಿ । ದೇವಾ ಮನುಷ್ಯಾಃ ಪಿತರಃ ಪಶವಃ ಪಕ್ಷಿಣಶ್ಚೇತಿ ಪಂಚ ಜನಾಃ । ಚತ್ವಾರೋ ವರ್ಣಾ ನಿಷಾದಪಂಚಮಾಃ ಪಂಚ ಜನಾ ಇತ್ಯನ್ಯೇ । ಸ ತಾದೃಶೇಂದ್ರ ತ್ವಂ ಸ್ಪಾಶಯಸ್ವ । ಬಾಧಸ್ವ । ಯೋಽಸ್ಮಧೃಕ್ ಅಸ್ಮಭ್ಯಂ ದ್ರುಹ್ಯತಿ ತಂ । ಕೇನ ಪ್ರಕಾರೇಣೇತಿ ಸ ಉಚ್ಯತೇ । ದಿವ್ಯಾ ದಿವಿ ಭವಾಶನಿರಿವಾಶನಿರ್ಭೂರ್ತ್ವಾಸ್ಮದ್ದ್ವೇಷ್ಟ್ಯಾಞ್ಜಹಿ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಇಂದ್ರನ । **ಹಸ್ತಯೋಃ**—ಎರಡುಕೈಗಳಲ್ಲಿಯೂ । **ಪಂಚ ಕ್ಷಿತೀನಾಂ**—ದೇವ, ಮನುಷ್ಯ, ಪಿತೃ, ಪಶು, ಪಕ್ಷಿಗಳೆಂಬ ಐದು ಜೀವರಾಶಿಗಳಿಗೆ ಪ್ರಿಯವಾದ । **ವಿಶ್ವಾನಿ**—ಸಮಸ್ತ ವಿಧವಾದ । **ವಸು**—ಧನವು (ಧೃತವಾಗಿದೆಯೋ) । (**ಹೇ ಇಂದ್ರ**—ಎಲೈ ಇಂದ್ರನೇ । **ಸಃ**—ಅಂತಹ ನೀನು) । **ಯಃ**—ಯಾವನು । **ಅಸ್ಮಧ್ರುಕ್**—ನಮಗೆ ದ್ವೇಷಿಯೋ । (**ತಂ**—ಅವನನ್ನು) । **ಸ್ಪಾಶಯಸ್ವ**—ಬಾಧಿಸು । **ದಿವ್ಯಾ**—ದ್ಯುಲೋಕಸ್ಥವಾದ । **ಅಶನಿಃ ಇವ**—ಅಶನಿಯೋ ಎಂಬುವಹಾಗೆ । **ಜಹಿ**—(ನಮ್ಮ ದ್ವೇಷಿಗಳನ್ನು) ವಧಿಸು.

॥ ಭಾವಾರ್ಥ ॥

ಐದುಜಾತಿಯ (ದೇವ, ಮನುಷ್ಯ, ಪಿತೃ, ಪಶು, ಪಕ್ಷಿ) ಜೀವರಾಶಿಗೂ ಪ್ರಿಯವಾದ ಸಮಸ್ತ ವಿಧವಾದ ಧನವು ನಿನ್ನ ಹಸ್ತಗಳಲ್ಲಿದೆ: ಎಲೈ ಇಂದ್ರನೇ, ಅಂತಹ ನೀನು ನಮ್ಮ ದ್ವೇಷಿಯಾದವನನ್ನು ಬಾಧಿಸು; ಸ್ವರ್ಗೀಯವಾದ ವಜ್ರಾಯುಧವೇ ನೀನು ಎಂಬಂತೆ, ನಮ್ಮ ದ್ವೇಷಿಗಳನ್ನು ವಧಿಸು.

## English Translation.

In whose hands are all the treasures (that are desired by) the five classes of beings : destroy, Indra, him who oppresses us ; slay him, (as if you were yourself) the heavenly thunderbolt.

॥ ವಿಶೇಷವಿಷಯಗಳು ॥

ದೇವಮಾನವಾದಿ ಸಕಲ ಭೂತಗಳ ವೃದ್ಧಿಗೂ ಹೇತುವಾದ ಸಕಲ ಸಂಪತ್ತಿಗೂ ಇಂದ್ರನೇ ಪ್ರಭುವೆಂದು ವರ್ಣಿಸಿ, ಅಂತಹ ಮಹತ್ತ್ವದಿಂದ ಕೂಡಿದ ಇಂದ್ರನು ಯಜ್ಞಕರ್ತರ ಶತ್ರುಗಳನ್ನು ನಾಶಮಾಡಲೆಂದು ಪ್ರಾರ್ಥಿಸಿದೆ.

**ಯಸ್ಯ ಹಸ್ತಯೋಃ ಪಂಚ ಕ್ಷಿತೀನಾಂ ವಿಶ್ವಾನಿ ವಸು**—ಯಾವ ಇಂದ್ರನ ಅಧೀನದಲ್ಲಿ ಪಂಚಕ್ಷಿತಿಗಳ ಸಂಪತ್ತುಗಳೂ ಇವೆಯೋ ಅಂತಹ ಇಂದ್ರನು ಎಂದು ಇಂದ್ರನ ಐಶ್ವರ್ಯವನ್ನು ವರ್ಣಿಸಿದೆ. ಇಲ್ಲಿ ಪಂಚಕ್ಷಿತಿಗಳೆಂದರೇನು ಎಂಬುದಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ,

೧. **ದೇವಾ ಮನುಷ್ಯಾಃ ಪಿತರಃ ಪಶವಃ ಪಕ್ಷಿಣಶ್ಚೇತಿ ಪಂಚ ಜನಾಃ** । ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು ಮತ್ತು ಪಕ್ಷಿಗಳು ಎಂಬ ಐದು ವಿಧವೆಂದೂ, ಎರಡನೆಯದಾಗಿ,

೨. **ಚತ್ವಾರೋ ವರ್ಣಾಃ ನಿಷಾದ ಪಂಚಮಾಃ ಪಂಚ ಜನಾ ಇತ್ಯನ್ಯೇ**— ನಿಷಾದರೊಡಗೂಡಿದ ನಾಲ್ಕು ವರ್ಣದ ಜನರೆಂದು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಈ ಎರಡು ಅರ್ಥಗಳಿಗೂ ಶ್ರುತಿವಾಕ್ಯಗಳ ಆಧಾರಗಳನ್ನು ತೋರಿಸಬಹುದು. ಮೊದಲು ಕ್ಷಿತಿ ಶಬ್ದದ ನಿರ್ವಚನವನ್ನು ಪರಿಶೀಲಿಸಿ ಅನಂತರ ಪಂಚಕ್ಷಿತಿಯೆಂಬುದಕ್ಕೆ ಪ್ರಕೃತದಲ್ಲಿ ಯಾವ ಅರ್ಥವನ್ನು ಹೇಳಬಹುದೆಂದು ಅನಂತರ ವಿಮರ್ಶಿಸಬಹುದು.

**ಕ್ಷಿತೀನಾಂ—ಕ್ಷಿಯಂತಿ ನಿವಸಂತಿ ಗಚ್ಛಂತಿ ವಾ ಕ್ಷಿತಯೋ ಮನುಷ್ಯಾಃ** । ವಾಸಿಸುತ್ತಾರೆ ಅಥವಾ ಸಂಚರಿಸುತ್ತಾರೆ ಆದ್ದರಿಂದ ಮಾನವರಿಗೆ ಈ ವಿಶೇಷಣವಿದೆ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ಕ್ಷಿತಿ ಶಬ್ದವನ್ನು **ನರಃ** ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೭)

**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।**
**ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ।**
(ಋ. ಸಂ. ೩-೨೦-೪)

ಇತ್ಯಾದಿ ಋಕ್ಕುಗಳಲ್ಲಿ ಮಾನವರಿಗೂ, ದೇವಸಂಬಂಧಿಗಳಾದ ಪ್ರಜೆಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವಾಗ ಕ್ಷಿತಿಶಬ್ದದಿಂದ ಪೃಥ್ವಿಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಪಾರ್ಥಿವವಾದ ಮಾನವರೇ ಎಂದು ನಿಸ್ಪಷ್ಟವಾಗಿ ಹೇಳುವಂತಿಲ್ಲ. ಏಕೆಂದರೆ ಇಂದ್ರನ ಐಶ್ವರ್ಯವು ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿರುತ್ತದೆ.

**ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚನ ಶವಸೋ ಅಂತಮಾಪುಃ ।**
**ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ।**
(ಋ. ಸಂ. ೧-೧೦೦-೧೫)

ಇತ್ಯಾದಿ ಋಕ್ಕುಗಳಲ್ಲಿ ದಾನಾದಿಗುಣಗಳಿಂದ ಕೂಡಿ ದೇವತಾತ್ಮಕನಾದ ಇಂದ್ರನ ಶಕ್ತಿಯು ಲೋಕದ ಇತರ ಎಲ್ಲರ ಶಕ್ತಿಗಿಂತಲೂ ಮೀರಿದುದೆಂದೂ, ಅದರ ಅಂತವನ್ನು ದೇವತೆಗಳಾಗಲಿ ಮಾನವರಾಗಲಿ ಪಡೆಯಲಾಗಲಿಲ್ಲವೆಂದೂ, ಮತ್ತು ಇಂದ್ರನು ಶತ್ರುನಾಶಕವಾದುದೂ ಪ್ರಭಾವಯುತವಾದುದೂ ಆದ ತನ್ನ ಶಕ್ತಿಯಿಂದ ಪೃಥಿವೀ ಮತ್ತು ಸ್ವರ್ಗಗಳೆರಡನ್ನೂ ಒಟ್ಟಿಗೆ ಪ್ರಕಾಶಿಸುವಂತೆ ಮಾಡುತ್ತಾನೆಂದೂ ವರ್ಣಿಸಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇಂದ್ರನ ಐಶ್ವರ್ಯವು ಸರ್ವವ್ಯಾಪಿಯೆಂದು ವರ್ಣಿತವಾಗಿರುವುದರಿಂದಲೂ ಸಹ **ಪಂಚಕ್ಷಿತೀನಾಂ** ಎನ್ನುವುದಕ್ಕೆ ಕೇವಲ ನಿಷಾದಪಂಚಮರಿಂದ ಕೂಡಿದ ವರ್ಣಚತುಷ್ಟಯವೆಂದು ಹೇಳಲಾಗುವುದಿಲ್ಲ. ಈ ವಿಷಯದಲ್ಲಿ ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೆ ಇತರರ ಅಭಿಪ್ರಾಯಗಳನ್ನು ಮಾತ್ರ ತಿಳಿಸಿರುವರು.

**ಪಂಚಜನಾ "ಮಮ ಹೋತ್ರಂ ಜುಷಧ್ವಂ" ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ।**
(ನಿ. ೩-೮)

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧವಾದ ಗುಂಪುಗಳೆಂದು ಕೆಲವರೂ, ಬ್ರಾಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ **ಪಂಚಜನ**ರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥**
(ಋ. ಸಂ. ೧೦-೫೩-೪)

**ಪಂಚಜನ**ರೂ ಸೇರಿ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾಕಾರರು ಉದಹರಿಸಿ **ಪಂಚಜನರು** ಎಂದು ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

**ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ ।**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಮ ॥**

(ಬೃ. ದೇ. ೭-೬೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನ** ಶಬ್ದವನ್ನು ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥**

(ಬೃ. ದೇ. ೭-೬೭)

ಎಂದರೆ, ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ, ಯಜಮಾನನ ಪುತ್ರಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದು ವಿಧವಾದ ಅಗ್ನಿಗಳೂ ಐದು ಬಗೆಯ ವರ್ಗಗಳೆಂದು ಸಾಂಪ್ರದಾಯಿಕವಾದ ವ್ಯವಹಾರವಾಗಿದೆ. ಈ ಮತವಲ್ಲದೇ,

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।**
**ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥**

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ **ಉರಗರಾಕ್ಷಸರು** ಒಂದು ಗುಂಪು; ಎರಡನೆಯ ಅಭಿಪ್ರಾಯದಂತೆ ಯಕ್ಷರಾಕ್ಷಸರು ಒಂದು ಗುಂಪು.

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।**
**ನಿಷಾದಪಂಚಮಾನ್ವರ್ಣಾ ಮನ್ಯತೇ ಶಾಕಟಾಯನಃ ॥**

(ಬೃ. ದೇ. ೭-೬೯)

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರ ಮತಗಳನ್ನು ಹೇಳಿದೆಯೇ ಹೊರತು ಯಾಸ್ಕರು ತಮ್ಮ ಮತವನ್ನು ನಿಷ್ಕೃಷ್ಟವಾಗಿ ತಿಳಿಸಿಲ್ಲ. ಪ್ರಾಯಃ ಅದನ್ನೇ ಅವರು ಅಂಗೀಕರಿಸಿರಬಹುದು.

**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।**

(ಬೃ. ದೇ. ೭-೭೦)

ಹೋತ್ರಾದಿ ನಾಲ್ಕು ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯುವರ ಮತವಾಗಿದೆ.

**ಚಕ್ಷುಃಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।**
**ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥**
**ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ॥**

(ಬೃ. ದೇ. ೭-೭೧,೭೨)

ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ **ಪಂಚಜನ**ರೆಂದು ಆಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯಬ್ರಾಹ್ಮಣದಲ್ಲಿ ವಿವರಿಸಿದೆ. (ಐ.ಬ್ರಾ. ೩-೩೧-೫) ಇಂತಹ ಪಂಚಜನರೂ ಹವಿಸ್ಸನ್ನು

ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯಭೇದಗಳು ತಿಳಿಸಲ್ಪಟ್ಟಿವೆ.

**ಪಂಚ ಕ್ಷಿತೀನಾಂ ವಿಶ್ವಾನಿ ವಸು ಇಂದ್ರಸ್ಯ ಹಸ್ತಯೋಃ ।** ಎಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದೆ. ಸಕಲ ಲೋಕವೂ ಇಂದ್ರನ ರಕ್ಷಣೆಗೇ ಒಳಪಟ್ಟುದುದರಿಂದ **ಪಂಚ ಕ್ಷಿತೀನಾಂ** ಎಂಬುದಕ್ಕೆ ಮೇಲಿನ ಅಭಿಪ್ರಾಯಗಳೆಲ್ಲವೂ ಹೊಂದಿಕೊಳ್ಳುತ್ತವೆ.

**ಸ್ಪಾಶಯಸ್ವ—ಬಾಧಸ್ವ । ಹಿಂಸಿಸು. ಸ್ಪಶ—ಬಾಧನಸ್ಪರ್ಶನಯೋಃ ।** ಸ್ಪರ್ಶನ ಎಂದರೆ ಮುಟ್ಟುವುದು ಅಥವಾ ಇತರ ವಿಧವಾದ ಪ್ರತ್ಯಕ್ಷದಿಂದ ತಿಳಿಯುವುದು ಎಂಬ ಅರ್ಥವುಳ್ಳದ್ದೂ ಮತ್ತು ಹಿಂಸಿಸುವುದು ಎಂಬರ್ಥವುಳ್ಳದ್ದೂ ಆದ **ಸ್ಪಶ** ಧಾತುವಿನಿಂದ ನಿಷ್ಪನ್ನವಾದ ಕ್ರಿಯಾಪದವಾಗಿದೆ. ಯಜ್ಞಕರ್ತರ ಶತ್ರುಗಳನ್ನು ಹಿಂಸಿಸಿ ನಾಶಮಾಡು ಎಂದು ಪ್ರಾರ್ಥಿಸಿದೆ. ಈ ಧಾತುವಿನಿಂದ ನಿಷ್ಪನ್ನವಾದ ನಾಮಪದದ ಪ್ರಯೋಗಗಳೂ ಇವೆ. ಆ ಸಂದರ್ಭಗಳಲ್ಲಿ ಹಿಂಸಕರಾದ ಶತ್ರುಗಳೆಂದೂ ಅಥವಾ ಶತ್ರುಹಿಂಸಕವಾದ ದೇವದೂತರೆಂದೂ ಅರ್ಥವಾಗುತ್ತದೆ.

**ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ ।**
**ಯೋ ನೋ ದೂರೇ ಅಘಶಂಸೋ ಯೋ ಅಂತ್ಯಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್ ॥**
(ಋ. ಸಂ. ೪-೪-೩)

ಎಂಬ ಋಕ್ಕಿನಲ್ಲಿ **ಸ್ಪಶಃ** ಎಂಬ ಪದಕ್ಕೆ **ಪರಬಾಧಕಾನ್ ರಶ್ಮೀನ್ ಚಾರಾನ್ ವಾ** ಶತ್ರುಹಿಂಸಕವಾದ ಅಗ್ನಿ ಕಿರಣಗಳೆಂದಾಗಲಿ ಅಥವಾ ಶತ್ರುಗಳನ್ನು ಹಿಂಸಿಸುವ ಅಗ್ನಿದೂತರೆಂದಾಗಲಿ ಅರ್ಥವಾಗುತ್ತದೆ.

ತ್ವಗಾದೀಂದ್ರಿಯಗಳ ಪ್ರತ್ಯಕ್ಷಕ್ಕೆ ಗೋಚರವಾದ ವಿಷಯವನ್ನು ತಿಳಿಸುವಾಗ ಮೇಲೆ ಹೇಳಿದ ಮೊದಲನೆಯ ಅರ್ಥದಲ್ಲೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ಪ್ರೋರೋರ್ಮಿತ್ರಾವರುಣಾ ಪೃಥಿವ್ಯಾಃ ಪ್ರ ದಿವ ಋಷ್ವಾದ್ಬೃಹತಃ ಸುದಾನೂ ।**
**ಸ್ಪಶೋ ದಧಾಥೇ ಓಷಧೀಷು ವಿಕ್ಷ್ವೃಧಗ್ಯತೋ ಅನಿಮಿಷಂ ರಕ್ಷಮಾಣಾ ॥**
(ಋ. ಸಂ. ೭-೬೧-೩)

ಇತ್ಯಾದಿ ಋಕ್ಕುಗಳಲ್ಲಿ ಪ್ರತ್ಯಕ್ಷಗೋಚರವಾದ **ರೂಪ** ವೆಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಮೇಲೆ ತಿಳಿಸಿದಂತೆ ಬಾಧಾರ್ಥದಲ್ಲಿ ಈ ಧಾತುವಿನ ಪ್ರಯೋಗವಿದ್ದು ಶತ್ರುಗಳನ್ನು ಹಿಂಸಿಸು, ನಾಶಮಾಡು ಎಂದರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಕ್ಷಿತೀನಾಮ್**—ಕ್ಷಿ ನಿವಾಸಗತ್ಯೋಃ ಧಾತು. ಕ್ತಿನ್ ಪ್ರತ್ಯಯ. ಷಷ್ಠೀ ಬಹುವಚನಾಂತರೂಪ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಸ್ಪಾಶಯಸ್ವ**—ಸ್ಪಶ ಬಾಧನಸ್ಪರ್ಶನಯೋಃ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಣಿಜಂತದ ಮೇಲೆ ಲೋಟ್. ಮಧ್ಯಮಪುರುಷ ಏಕವಚನದಲ್ಲಿ **ಥಾಸಃ ಸೇ** ಎಂಬುದರಿಂದ ಸೇ ಆದೇಶ. **ಸವಾಭ್ಯಾಂ ವಾಮೌ** ಎಂಬುದರಿಂದ ಏಕಾರಕ್ಕೆ ವತ್ವ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ

**ಅಸ್ಮಧ್ರುಕ್**—ಧ್ರುಹ ಜಿಘಾಂಸಾಯಾಮ್. ಧಾತು. **ಸತ್ಸೂದ್ವಿಷ**—(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. **ದಾದೇರ್ಧಾತೋರ್ಘಃ** (ಪಾ. ಸೂ. ೮-೨-೩೨) ಎಂಬುದರಿಂದ ಸು ಪರವಾದಾಗ ಹಕಾರಕ್ಕೆ ಘತ್ವ. **ಏಕಾಚೋ ಬಶೋ**—(ಪಾ. ಸೂ. ೮-೨-೩೭) ಎಂಬುದರಿಂದ ಆದಿಯ ದಕಾರಕ್ಕೆ ಧಕಾರಾದೇಶ. ಪದಾಂತಕ್ಕೆ ಜಸ್ತ್ವ, ಚರ್ತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಿವ್ಯಾ**—ದಿವಿ ಭವಾ ದಿವ್ಯಾ. **ದಂಡಾದಿಭ್ಯೋ ಯಃ** (ಪಾ.ಸೂ.೫-೧-೬೬) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಜಹಿ**—ಹನ ಹಿಂಸಾಗತ್ಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಹಂತೇರ್ಜಃ** (ಪಾ.ಸೂ. ೬-೪-೩೬) ಎಂಬುದರಿಂದ ಧಾತುವಿಗೆ ಜಾದೇಶ. **ಅಸಿದ್ಧವತ್ರಾಭಾತ್** (ಪಾ.ಸೂ. ೬-೪-೨೨) ಎಂಬುದರಿಂದ ಇದು ಅಸಿದ್ಧವಾದುದರಿಂದ **ಅತೋಹೇಃ** ಎಂಬುದರಿಂದ ಹಿಗೆ ಲೋಪ ಬರುವುದಿಲ್ಲ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಅಸುನ್ವಂತಂ ಸಮಂ ಜಹಿ ದೂಣಾಶಂ ಯೋ ನ ತೇ ಮಯಃ ।
ಅಸ್ಮಭ್ಯಮಸ್ಯ ವೇದನಂ ದದ್ಧಿ ಸೂರಿಶ್ಚಿದೋಹತೇ ॥ ೪ ॥

॥ ಪದಪಾಠಃ ॥

ಅಸುನ್ವಂತಂ । ಸಮಂ । ಜಹಿ । ದುಃಽನಶಂ । ಯಃ । ನ । ತೇ । ಮಯಃ ।
ಅಸ್ಮಭ್ಯಂ । ಅಸ್ಯ । ವೇದನಂ । ದದ್ಧಿ । ಸೂರಿಃ । ಚಿತ್ । ಓಹತೇ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಅಸುನ್ವಂತಂ ಸೋಮಾಭಿಷವಮಕುರ್ವಾಣಂ । ತ್ವಾಮಯಜಂತಮಿತ್ಯರ್ಥಃ । ದೂಣಾಶಂ ದುಃಖೇನ ನಾಶನೀಯಂ ಸಮಂ । ಅಯಂ ಸರ್ವಾನುದಾತ್ತಃ ಸರ್ವಶಬ್ದಪರ್ಯಾಯಃ । ಅಯಷ್ಟ್ವ್ರಾನ್ ಸರ್ವಾನ್ । ಯದ್ವಾ । ಸಮಮೇಕೋದ್ಯೋಗೇನಾವಿಶೇಷೇಣ ವಾ ಜಹಿ । ತೇನ ಕಿಮಪರಾದ್ಧಮಿತಿ ಅತ ಆಹ । ಯಸ್ತೇ ತವ ಮಯಃ । ಮಯ ಇತಿ ಸುಖನಾಮ । ತವ ಸುಖಹೇತುರ್ನ ಭವತಿ । ಯೋ ಹೋಮೇನ ಸ್ತುತ್ಯಾ ವಾ ನ ಪ್ರೀಣಾತಿ ತಂ ಜಹಿ । ಕಿಂಚಾಸ್ಯ ವೇದನಂ ಧನಮಸ್ಮಭ್ಯಂ ದದ್ಧಿ । ದೇಹಿ ॥ ದದ ದಾನ ಇತ್ಯಸ್ಮಾದ್ವ್ಯತ್ಯಯೇನ ಪರಸ್ಮೈಪದಂ । ಛಾಂದಸಃ ಶಪೋ ಲುಕ್ ॥ ಸೂರಿಶ್ಚಿದೋಹತೇ । ಚಿದೇವಾರ್ಥೇ । ಸೂರಿಸ್ತವ ಸ್ತೋತೈವಾಹತೇ । ವಹತಿ । ಪ್ರಾಪ್ನೋತಿ ಧನಂ ॥**

॥ ಪ್ರತಿಪದಾರ್ಥ ॥

**(ಹೇ ಇಂದ್ರ—**ಎಲೈ ಇಂದ್ರನೇ) | **ಯಃ—**ಯಾವ ಪುರುಷನು | **ತೇ—**ನಿನಗೆ | **ಮಯಃ ನ—** (ಹೋಮದಾನದಿಂದ) ಸುಖಹೇತುವಲ್ಲವೋ | **(ತಂ—**ಅಂತಹ) | **ಅಸುನ್ವಂತಂ—**ಸೋಮಾಭಿಷವಮಾಡದವನನ್ನು (ನಿನಗೆ ಸೋಮಾಹುತಿ ಕೊಡದವನನ್ನು) | **ದೂಣಾಶಂ—** (ಎಷ್ಟೇ) ಕಷ್ಟದಿಂದ ನಾಶನೀಯನಾದರೂ **ಸಮಂ—**ಒಂದೇ ಏಟಿಗೆ (ಅಂಥವರೆಲ್ಲರನ್ನೂ) | **ಜಹಿ—**ವಧಿಸು | **(ಕಿಂಚ—**ಮತ್ತು) | **ಅಸ್ಯ—**ಅವನ | **ವೇದನಂ—**ಧನವನ್ನು | **ಅಸ್ಮಭ್ಯಂ—**ನಮಗೆ | **ದದ್ಧಿ—**ದಾನಮಾಡು | **ಸೂರಿಃ ಚಿತ್—**ನಿನ್ನನ್ನು ಸ್ತುತಿಸುವವನೇ | **ಓಹತೇ—**(ಧನವನ್ನು) ವಹಿಸುತಾನೆ (ಪಡೆಯುತ್ತಾನೆ).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಉದ್ದಿಶ್ಯದಿಂದ ಸೋಮಾಭಿಷವಮಾಡದೇ ಇರುವವನು, ನಿನಗೆ ಹೋಮಾದಿಗಳ ಮೂಲಕ ಸುಖವನ್ನುಂಟುಮಾಡದವನು, ಇವರೆಲ್ಲರನ್ನೂ ಒಂದೇ ಏಟಿಗೆ ವಧಿಸು ; ಮತ್ತು ಅವರ ಧನವನ್ನು ನಮಗೆ ದಾನಮಾಡು; ಏಕೆಂದರೆ ನಿನ್ನ ಸ್ತೋತೃಗಳೇ ಧನವನ್ನು ಪಡೆಯಲು ಅರ್ಹರು.

English Translation.

Slay every one who offers not libations, however difficult to be destroyed : slay every one who is no delight to you : bestow upon us his wealth, for the pious (worshipper) deserves it.

॥ ವಿಶೇಷವಿಷಯಗಳು ॥

**ದೂಣಾಶಂ—ದುಃಖೇನ ನಾಶನೀಯಂ |** ದುಃಖದಿಂದ ನಾಶಮಾಡಲ್ಪಡುವವನು ಎಂದರ್ಥ. ಕೆಲವು ಶತ್ರುಗಳ ಪರಾಕ್ರಮವು ಅತ್ಯಧಿಕವಾದುದರಿಂದ ಅವರನ್ನು ನಾಶಮಾಡಲು ಶ್ರಮಸಾಧ್ಯವಾಗುತ್ತದೆ. ಆ ಅಂಶವನ್ನು ತಿಳಿಸಲು **ದೂಣಾಶ** ವೆಂಬ ಪದದ ಪ್ರಯೋಗವಿದೆ.

**ಸೂರಿಃ—ಸೂರಿಸ್ತ್ವವ ಸ್ತೋತಾ |** ಸ್ತೋತೃವೆಂದರ್ಥ. **ರೇಭಃ, ಜರಿತಾ, ಕಾರುಃ,** ಇತ್ಯಾದಿ ೧೩ **ಸ್ತೋತೃ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩- ೧೯) **ಸೂರಯಃ** ಎಂದರೆ ಸ್ತುತಿಕಾರರು, ಸ್ತೋತ್ರವನ್ನು ಪಠಿಸತಕ್ಕ ಭಕ್ತರು ಎಂದರ್ಥ. ಪ್ರಾಜ್ಞರು, ವಿವೇಕಿಗಳು, ಮೇಧಾವಿಗಳು ಎನ್ನುವ ಅರ್ಥವನ್ನು ಕೊಡತಕ್ಕ ಸಂದರ್ಭಗಳಲ್ಲಿಯೂ **ಸೂರಿ** ಶಬ್ದವನ್ನು ಅನೇಕ ಕಡೆ ಉಪಯೋಗಿಸಿದೆ. ದೇವತೆಗಳ ತತ್ವಸ್ವರೂಪಗಳನ್ನೂ, ವಿಶ್ವದ ರಹಸ್ಯ ತತ್ತ್ವಗಳನ್ನೂ ಗ್ರಹಿಸುವ ಅಲೌಕಿಕವಾದ ಚಾಕ್ಷುಷವೂ ಮಾನಸಿಕವೂ ಆದ ದರ್ಶನಶಕ್ತಿಯನ್ನು ಪಡೆದಿರುವ ಋಷಿಗಳಪರವಾಗಿ ಉಪಯೋಗಿಸಿದಾಗ ಈ ವಿಶೇಷಣವು ಒಂದ ವಿಶೇಷಾರ್ಥವನ್ನು ಕೊಡುತ್ತದೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ | ದಿವೀವ ಚಕ್ಷುರಾತತಂ ||**

(ಋ. ಸಂ. ೧-೨೨-೨೦)

ಇತ್ಯಾದಿ ಸನ್ನಿವೇಶಗಳಲ್ಲಿ ಕೇವಲ ಸ್ತೋತ್ರಮಾಡತಕ್ಕವರೆಂದು ಮಾತ್ರವಾಗದೇ ಋಷಿಗಳ ಅಸಾಧಾರಣವಾದ ದರ್ಶನಶಕ್ತಿಯನ್ನೂ ಸೂಚಿಸುತ್ತದೆ. ಮತ್ತು ಋಷಿಗಳ ಪರವಾಗಿ ಮಾತ್ರವಲ್ಲದೇ ಇಂದ್ರಾದೇವತೆಗಳಿಗೂ ವಿಶೇಷಣವಾಗಿಯೂ ಉಪಯೋಗಿಸಲ್ಪಟ್ಟಿದೆ.

**ಮಂಹಿಷ್ಠಮುಚ್ಥೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ॥**

(ಋ. ಸಂ. ೧-೬೧ ೩)

ಇತ್ಯಾದಿ ಋಕ್ಕುಗಳಲ್ಲಿ **ವಿಪಶ್ಚಿತಮಿಂದ್ರಂ** ಎಂದು ಇಂದ್ರಾದಿದೇವತೆಗಳ ಪ್ರಾಜ್ಞತ್ವವನ್ನೂ ತಿಳಿಸುತ್ತದೆ. ಇದಲ್ಲದೇ **ಪ್ರಭು, ಪ್ರೇರಕ, ಸನ್ಮಾರ್ಗಪ್ರವರ್ತಕ** ಎಂಬ ಅರ್ಥವನ್ನು ಸೂಚಿಸುವಾಗಲೂ **ಸೂರಿ**ಶಬ್ದದ ಪ್ರಯೋಗವಿದೆ. ಉದಾಹರಣೆಗೆ

**ಜನೋ ಯಃ ಪಜ್ರೇಭ್ಯೋ ವಾಜಿನೀವಾಶ್ವಾವತೋ ರಥಿನೋ ಮಹ್ಯಂ ಸೂರಿಃ ।**

(ಋ ಸಂ. ೧-೧೨೨-೮)

**ಅಸದ್ಯಥಾ ಜರಿತ್ರ ಉತ ಸೂರಿರಿಂದ್ರೋ ರಾಯೋ ವಿಶ್ವವಾರಸ್ಯ ದಾತಾ ।**

(ಋ. ಸಂ. ೬-೨೩-೧೦)

**ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ॥**

(ಋ. ಸಂ. ೧೦-೮೧-೬)

ಎಂಬಿವೇ ಮುಂತಾದ ಸನ್ನಿವೇಶಗಳಲ್ಲಿ ಪ್ರಭುಗಳೂ, ಸನ್ಮಾರ್ಗಪ್ರವರ್ತಕರೂ ಆದ ದೇವತೆಗಳನ್ನು ಕುರಿತು ಈ ವಿಶೇಷಣವು ಇಂದ್ರಾದಿಗಳ ಗುಣಗಳನ್ನೂ ವರ್ಣಿಸುತ್ತದೆ.

**ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ ವಯಃ ।**

(ಋ. ಸಂ. ೧-೧೪೧-೮)

ಇತ್ಯಾದಿ ಒಂದೊಂದು ಕಡೆಗಳಲ್ಲಿ ಮಾತ್ರ **ಮಾರ್ಗ**ವೆಂಬ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸುನ್ವಂತಮ್**—ಷುಞ್ ಅಭಿಷವೇ. ಧಾತು. ಲಟಿಗೆ ಶತ್ರಾದೇಶ. ನಞ್ ತತ್ಪುರುಷ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**—ಸೂತ್ರದಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸಮಮ್**—ಸರ್ವಾರ್ಥಕವಾದ ಈ ಸಮ ಶಬ್ದವು ಸರ್ವಾನುದಾತ್ತವಾಗುತ್ತದೆ.

**ವೇದನಮ್**—ವಿದ್ಲೃ ಲಾಭೇ. ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. ಅದನ್ನು ನಿಮಿತ್ತೀಕರಿಸಿ ಲಘೂಪಧಗುಣ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ದದ್ಧಿ**—ದದ ದಾನೇ ಧಾತು. ಭ್ವಾದಿ. **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಝಲಂತ ಪರದಲ್ಲಿರುವುದರಿಂದ **ಹುಝಲ್‌ಭ್ಯೋ ಹೇರ್ಧಿಃ** (ಪಾ ಸೂ. ೬-೪ ೧೦೧) ಎಂಬುದರಿಂದ ಹಿಗೆ ಧಿ ಆದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವ ವಿಧಾನಮಾಡಿರುವುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಓಹತೇ**—ವಹ ಪ್ರಾಪಣೇ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. **ಬಹುಲಂ ಛಂದಸಿ** ಎಂಬುದರಿಂದ ಸಂಪ್ರಸಾರಣ ಬರುತ್ತದೆ. ಅತಿಙಂ ದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೪ ‖



‖ ಸಂಹಿತಾಪಾಠಃ ‖

## ಆವೋ ಯಸ್ಯ ದ್ವಿಬರ್ಹಸೋಽರ್ಕೇಷು ಸಾನುಷಗಸತ್ ।
## ಆಜಾವಿಂದ್ರಸ್ಯೇಂದೋ ಪ್ರಾವೋ ವಾಜೇಷು ವಾಜಿನಂ ‖ ೫ ‖

‖ ಪದಪಾಠಃ ‖

ಆವಃ । ಯಸ್ಯ । ದ್ವಿಬರ್ಹಸಃ । ಅರ್ಕೇಷು । ಸಾನುಷಕ್ । ಅಸತ್ ।

ಆಜೌ । ಇಂದ್ರಸ್ಯ । ಇಂದೋ ಇತಿ । ಪ್ರ । ಆವಃ । ವಾಜೇಷು । ವಾಜಿನಂ ‖ ೫ ‖

‖ ಸಾಯಣಭಾಷ್ಯಂ ‖

**ಹೇ ಇಂದೋ ಸೋಮ ತವ ಯಸ್ಯ ದ್ವಿಬರ್ಹಸಃ ಸ್ತೋತ್ರಹವೀರೂಪದ್ವಿವಿಧಪರಿವೃಢಕರ್ಮವತೋ ಯಜಮಾನಸ್ಯಾರ್ಕೇಷು ಮಂತ್ರೇಷು ಸಾನುಷಕ್ ಸಾನುಷಂಗಃ ಸಾತತ್ಯಮಸತ್ ಭವೇತ್ ತಮಾವಃ । ತಂ ಯಜಮಾನಂ ರಕ್ಷಸಿ ತರ್ಪಯಸಿ ವಾ । ಯದ್ವಾ ‖ ಕರ್ಮಣಿ ಷಷ್ಠೀ ‖ ಯಂ ದ್ವಯೋಃ ಸ್ಥಾನಯೋಃ ಪರಿವೃಢಂ ಯಮಿಂದ್ರಂ ಹೇ ಇಂದೋ ಯದಾರ್ಕೇಷು ಸಾನುಷಗಸತ್ ಭವೇಃ ತದಾವಃ । ಅರಕ್ಷಃ । ಅತರ್ಪಯೋ ವಾ । ತಸ್ಯೈವೇಂದ್ರಸ್ಯಾಜೌ ಸಂಗ್ರಾಮೇ ಹೇ ಸೋಮ ವಾಜಿನಂ ತಥಾನ್ನವಂತಂ ತಮಿಂದ್ರಂ ವಾಜೇಷು ಬಲೇಷ್ವನ್ನೇಷು ವಾ ನಿಮಿತ್ತಭೂತೇಷು ಪ್ರಾವಃ । ಪ್ರಕರ್ಷೇಣಾರಕ್ಷಯಃ। ಪಾನಸಮಯೇ ತರ್ಪಯಿತ್ವಾ ಸಂಗ್ರಾಮಸಮಯೇ ಬಲವರ್ಧನೇನ ಜಯಪ್ರಾಪ್ತಶತ್ರುಧನತರ್ಪಣೇನ ವಾರಕ್ಷ ಇತ್ಯರ್ಥಃ ‖**

‖ ಪ್ರತಿಪದಾರ್ಥ ‖

**(ಹೇ) ಇಂದೋ**—ಎಲೈ ಸೋಮರಸವೇ । **ದ್ವಿಬರ್ಹಸಃ**—ಸ್ತೋತ್ರಹವೀರೂಪದ್ವಿವಿಧ (ಇಂದ್ರನಲ್ಲಿ) ಭಕ್ತಿವಿಶಿಷ್ಟನಾಗಿರುವ । **ಯಸ್ಯ**—ಯಾವ ಯಾಗಕರ್ತೃವಿನ । **ಅರ್ಕೇಷು**—ಮಂತ್ರಗಳಲ್ಲಿ । **ಸಾನುಷಕ್**—(ಸ್ತುತಿ ಮತ್ತು ಹೋಮಗಳ) ಸಂಯೋಗವು (ಮೇಳವು) । **ಅಸತ್**—ಇರುತ್ತದೆಯೋ । (**ತಂ**—ಅವನನ್ನೂ) । **ಆವಃ**—ರಕ್ಷಿಸುತ್ತೀಯೇ। ಅಥವಾ **(ಹೇ) ಇಂದೋ**—ಎಲೈ ಸೋಮರಸವೇ। **ಯದಾ**—ಯಾವಾಗ। **ಅರ್ಕೇಷು**—ಮಂತ್ರಗಳಲ್ಲಿ । **ಸಾನುಷಕ್**—ಸಂಯುಕ್ತವಾಗಿ । **ಅಸತ್**—ಇರುತ್ತೀಯೋ । (**ತದಾ**—ಆಗ) **ದ್ವಿಬರ್ಹಸಃ**—(ದ್ಯಾವಾ ಪೃಥಿವ್ಯಾಖ್ಯ) ಎರಡು ಲೋಕಗಳಿಗೂ ಸ್ವಾಮಿಯಾದ । **ಯಸ್ಯ**—ಯಾವ ಇಂದ್ರನನ್ನೂ । **ಆವಃ**—

ರಕ್ಷಿಸುತ್ತೀಯೋ (ತೃಪ್ತಿಪಡಿಸುತ್ತೀಯೋ) |] (**ತಸ್ಯ ಏವ**—ಅದೇ) | **ಇಂದ್ರಸ್ಯ**—ಇಂದ್ರನ | **ಆಜೌ**—ಸಂಗ್ರಾಮ ದಲ್ಲಿ | (**ಹೇ ಸೋಮ**—ಎಲೈ ಸೋಮರಸವೇ) | **ವಾಜಿನಂ**—ಅನ್ನವಿಶಿಷ್ಟನಾದ ಇಂದ್ರನನ್ನು | **ವಾಜೇಷು**--ಬಲಗಳು ಅಥವಾ ಅನ್ನಗಳು ನಿಮಿತ್ತವಾಗಿರಲು | **ಪ್ರ ಅವಃ**--ವಿಶೇಷವಾಗಿ ರಕ್ಷಿಸಿದೆ.

॥ ಭಾವಾರ್ಥ ॥

ಎಲೈ ಸೋಮರಸವೇ, ಇಂದ್ರನನ್ನು ಸ್ತೋತ್ರ ಮತ್ತು ಹವಿಸ್ಸುಗಳೆರಡರಿಂದಲೂ ಪೂಜಿಸುವ ಯಾಗಕರ್ತೃಗಳನ್ನು, ರಕ್ಷಿಸುತ್ತೀಯೇ ; (ಯಜಮಾನನು ಇಂದ್ರನನ್ನು ಸ್ತುತಿಸುವಾಗ ದ್ಯಾವಾಪೃಥಿವಿಗಳಿಗೆ ಸ್ವಾಮಿಯಾದ ಇಂದ್ರನನ್ನು ಯಜಮಾನನು ಉಚ್ಚರಿಸುವ ಮಂತ್ರಗಳೊಡನೆ ಬೆರೆತು ರಕ್ಷಿಸುತ್ತೀಯೇ ಅಥವಾ ತೃಪ್ತಿಪಡಿಸುತ್ತೀಯೇ) ; ಬಲಿಷ್ಠನಾದ ಅದೇ ಇಂದ್ರನಿಗೆ, ಯುದ್ಧಗಳಲ್ಲಿ ಅನ್ನಾದಿಗಳನ್ನು ಪಡೆಯಲು ಸಹಾಯಮಾಡು.

English Translation.

Soma, you protect him in whose prayers, doubly devout, there is the combination (of praise and oblation) : protect, especially, Indra in war ; protect the vigorous Indra in battles.

॥ ವಿಶೇಷವಿಷಯಗಳು ॥

**ಪಾನಸಮಯೇ ತರ್ಪಯಿತ್ವಾ, ಸಂಗ್ರಾಮಸಮಯೇ ಬಲವರ್ಧನೇನ ಜಯಪ್ರಾಪ್ತಶತ್ರುಧನ ತರ್ಪಣೇನ ವಾ ಅರಕ್ಷಃ** ॥ ಸೋಮಪಾನದನಂತರ ಇಂದ್ರನಿಗೆ ಉಂಟಾಗತಕ್ಕ ತೃಪ್ತಿಯನ್ನೂ ಮತ್ತು ಯುದ್ಧಕಾಲ ದಲ್ಲಿ ಉಂಟಾಗತಕ್ಕ ಬಲವೃದ್ಧಿಯಿಂದ ಶತ್ರುಜಯವು ಆದರ ಪರಿಣಾಮವಾದ ಶತ್ರುವಿನ ಧನಪ್ರಾಪ್ತಿಯನ್ನೂ ವರ್ಣಿಸಿ ಸೋಮವು ಇಂದ್ರನಿಗೆ ಎಲ್ಲಾ ಸನ್ನಿವೇಶಗಳಲ್ಲೂ ರಕ್ಷಕವಾಗಿರುತ್ತದೆ ಎಂಬುದನ್ನು ತಿಳಿಸುವುದೇ ಈ ಮಂತ್ರದ ಮುಖ್ಯಾರ್ಥವೆಂದು ಸಾಯಣರು ತಿಳಿಸಿದ್ದಾರೆ.

**ದ್ವಿಬರ್ಹಸಃ— ಸ್ತೋತ್ರಹವೀರೂಪದ್ವಿವಿಧಪರಿವೃಢಕರ್ಮವತಃ ಯಜಮಾನಸ್ಯ**—ವೃದ್ಧಿಕಾರಕಗಳೂ, ಸ್ವತಃ ವೃದ್ಧಿಯನ್ನು ಹೊಂದಿದವೂ ಆದ ಸ್ತೋತ್ರ ಮತ್ತು ಹವಿಸ್ಸಿನ ರೂಪದಲ್ಲಿರುವ ಕರ್ಮಯುಕ್ತನಾದ ಯಜಮಾನನ ಎಂದು ಯಜ್ಞಕರ್ತನಿಗೆ ವಿಶೇಷಣವಾಗಿದೆಯೆಂದು ಒಂದು ವಿಧವಾಗಿಯೂ, ಅಥವಾ **ಯಂ ದ್ವಯೋಃ ಸ್ಥಾನಯೋಃ ಪರಿವೃಢಂ ಯಂ ಇಂದ್ರಂ (ಕರ್ಮಣಿ ಷಷ್ಠೀ)** ಪೃಥಿವ್ಯಂತರಿಕ್ಷಗಳೆರಡರಲ್ಲೂ ವೃದ್ಧಿಯನ್ನು ಪಡೆದ ಇಂದ್ರನನ್ನು (ಇಲ್ಲಿ ಕರ್ಮಸ್ಥಾನದಲ್ಲಿ ಷಷ್ಠೀಪ್ರಯೋಗವಿದೆ) ಎಂದು ಇನ್ನೊಂದು ವಿಧವಾಗಿಯೂ ಅರ್ಥ ಮಾಡಬಹುದೆಂದು ಸಾಯಣರು ತಿಳಿಸಿದ್ದಾರೆ. ಎರಡನೆಯ ಅರ್ಥವು ನಿರುಕ್ತಕಾರರ ವಿವರಣೆಗೆ ಅನುಗುಣವಾಗಿದೆ. ನಿರುಕ್ತಕಾರರು, **ದ್ವಿಬರ್ಹಾಃ** ಎಂಬ ಪದದ ನಿರ್ವಚನವನ್ನು ಈ ರೀತಿ ತಿಳಿಸಿದ್ದಾರೆ.

**ದ್ವಿಬರ್ಹಾಃ—ದ್ವಿಬರ್ಹಾ ದ್ವಯೋಃ ಸ್ಥಾನಯೋಃ ಪರಿವೃಢೋ ಮಧ್ಯಮೇ ಚ ಸ್ಥಾನ ಉತ್ತಮೇ ಚ |** (ನಿ. ೬-೧೭)

ದ್ಯುಲೋಕದಲ್ಲೂ ಅಂತರಿಕ್ಷದಲ್ಲೂ ವೃದ್ಧಿಯನ್ನು ಪಡೆದಿರುವವನು ಎಂದರ್ಥವೆಂದು ತಿಳಿಸಿ,

**ಮಹಾँ ಇಂದ್ರೋ ನೃವದಾ ಚರ್ಷಣಿಪ್ರಾ ಉತ ದ್ವಿಬರ್ಹಾ ಅಮಿನಃ ಸಹೋಭಿಃ ।**
**ಅಸ್ಮದ್ರ್ಯಗ್ವಾವೃಧೇ ವೀರ್ಯಾಯೋರುಃ ಪೃಥುಃ ಸುಕೃತಃ ಕರ್ತೃಭಿರ್ಭೂತ್ ॥**

(ಋ. ಸಂ. ೬-೧೯ ೧)

ಎಂಬ ಋಕ್ಕನ್ನುದಹರಿಸಿ ಈ ಪದದ ಪ್ರಯೋಗವನ್ನು ತೋರಿಸಿದ್ದಾರೆ. ಇಲ್ಲಿ **ದ್ವಿಬರ್ಹಾಃ** ಎಂಬ ಪದವು ಇಂದ್ರನಿಗೆ ವಿಶೇಷಣವಾಗಿದೆ. **ದ್ವಯೋರ್ಲೋಕಯೋಃ ಪರಿವೃಢಃ** ಎಂದು ಸಾಯಣರು ಈ ಪದದ ತಾತ್ಪರ್ಯವನ್ನು ಹೇಳಿದ್ದಾರೆ. ಇದೇ ರೀತಿಯಲ್ಲಿ,

**ಆ ದ್ವಿಬರ್ಹಾ ಅಮಿನೋ ಯಾತ್ವಿಂದ್ರೋ ವೃಷಾ ಹರಿಭ್ಯಾಂ ಪರಿಷಿಕ್ತಮಂಧಃ ।**
**ಗವ್ಯಾ ಸುತಸ್ಯ ಪ್ರಭೃತಸ್ಯ ಮಧ್ವಃ ಸತ್ರಾ ಖೇದಾಮರುಶಹಾ ವೃಷಸ್ವ ॥**

(ಋ. ಸಂ ೧೦-೧೧೬-೪)

ಎಂಬಲ್ಲಿಯೂ ಇಂದ್ರನಿಗೆ ವಿಶೇಷಣವಾಗಿದೆ. ಇಲ್ಲಿ **ದ್ವಾಭ್ಯಾಂ ಸ್ತುತಿಶಸ್ತ್ರಾಭ್ಯಾಂ ವರ್ಧನೀಯಃ । ವೃಹೇರ್ವರ್ಧನಾರ್ಥಸ್ಯ ಕರ್ಮಣ್ಯಸುನ್ । ವೃಹ್** ಧಾತುವಿನಿಂದ ನಿಷ್ಪನ್ನವಾಗಿ ವೃದ್ಧಿಯನ್ನು ಪಡೆದವನು ಎಂಬರ್ಥವನ್ನು ಕೊಡುತ್ತವೆಂದು ವಿವರಿಸಿ ಈ ಪದದ ರೂಪನಿಷ್ಪತ್ತಿಯನ್ನು ತೋರಿಸಿದೆ.

[**ದ್ವಿಬರ್ಹಾಃ**– ಎಂಬ ಪ್ರಯೋಗವಿರುವಂತೆ **ಅದ್ರಿಬರ್ಹಾಃ** ಎಂಬ ಪ್ರಯೋಗವೂ ಸಹ ೧೦–೬೩–೩ ಇತ್ಯಾದಿ ಋಕ್ಕುಗಳಲ್ಲಿವೆ. ವೃದ್ಧಿಯನ್ನು ಪಡೆದ ಅದ್ರಿಗಳೆಂದರ್ಥವು.]

**ಅರ್ಕೇಷು—ಮಂತ್ರೇಷು**—ಪೂಜಾಸಾಧನವಾದ ಮಂತ್ರಗಳಲ್ಲಿ ಎಂದು ಅರ್ಥಮಾಡಿದೆ.

**ಅರ್ಕೋ ದೇವೋ ಭವತಿ ಯದೇನಮರ್ಚಂತಿ । ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ । ಅರ್ಕಮನ್ನಂ ಭವತ್ಯರ್ಚತಿ ಭೂತಾನಿ । ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕುಟುಕಿಮ್ನಾ ।** (ನಿ. ೫-೪)

ಪೂಜಾವಿಷಯವಾದುದರಿಂದ ಅರ್ಕವೇ ದೈವವು. ಪೂಜಾಸಾಧನವಾದುದರಿಂದ ಅರ್ಕವೇ ಮಂತ್ರವು. ಭೂತಗಳಿಗೆ ಚೈತನ್ಯದಾಯಿಯಾದುದರಿಂದ ಅರ್ಕವೇ ಅನ್ನವು. ಕಹಿಯಾದ ಒಂದು ವಿಶೇಷಜಾತಿಯ ವೃಕ್ಷವು ಎಂದು ನಿರುಕ್ತಕಾರರ ಬೇರೆ ಬೇರೆ ಅರ್ಥಗಳನ್ನು ತಿಳಿಸಿ,

**ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।**
**ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ॥**

(ಋ. ಸಂ. ೧-೧೦-೧)

ಎಂಬ ಋಕ್ಕನ್ನುದಹರಿಸಿ **ಅರ್ಕ** ಶಬ್ದದ ಪ್ರಯೋಗವನ್ನೂ ಅದರ ಅರ್ಥವನ್ನೂ ತಿಳಿಸಿದ್ದಾರೆ. **ಅರ್ಕದ** ಪ್ರಭಾವವು ಅತ್ಯಧಿಕವಾದುದೆಂದು ನಾನಾ ಕಡೆಗಳಲ್ಲಿ ಅದರ ಮಹಿಮೆಯನ್ನು ಸ್ತುತಿಸಿದೆ. ಐತರೇಯಾರಣ್ಯಕದಲ್ಲಿ,

**ಅಥಾತಃ ಶಿರಃ । ಯದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯಗ್ರಮಂಗಾನಾಂ ಶಿರಃ । ತದರ್ಕವತೀಷು ಭವತ್ಯಗ್ನಿರ್ವಾ ಅರ್ಕಃ । ತಾ ನವ ಭವಂತಿ ನವ ಕಪಾಲಂ ಶಿರಃ ॥**

(ಐ. ಆ. ೧-೪-೧)

ಎಂಬ ವಾಕ್ಯವನ್ನುದಹರಿಸಿ, **ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ** । (ಋ.ಸಂ. ೧-೭-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಮುಂದಿನ ೯ ಋಕ್ಕುಗಳು ಅರ್ಕಮಂತ್ರಗಳೆಂದೂ, ಅವೇ ಶಿರ ಆತ್ಮಕಗಳಾದ ಮಂತ್ರ ಗಳೆಂದೂ, ಗಾಯತ್ರವೇ ಪ್ರಧಾನವಾದ ತತ್ತ್ವವಾಗಿ ಈ ಮಂತ್ರಗಳೂ ಆ ಗಾಯತ್ರರೂಪದಲ್ಲಿರುವುದರಿಂದ ಅರ್ಕ ಮಂತ್ರಗಳು ಎಲ್ಲಾ ಮಂತ್ರಗಳಿಗಿಂತಲೂ ಪ್ರಧಾನವಾದ ಸ್ಥಾನವನ್ನು ಹೊಂದಿವೆಯೆಂದೂ ತಿಳಿಸಿದೆ. ಬೃಹದಾರಣ್ಯ ಕೋಪನಿಷತ್ತಿನಲ್ಲಿ ಅರ್ಕಶಬ್ದದ ನಿರ್ವಚನವನ್ನು ತಿಳಿಸುತ್ತಾ,

> **ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಮೇ ಕಮಭೂದಿತಿ ತದೇವಾ-ರ್ಕಸ್ಯಾರ್ಕತ್ವಂ ಕಂ ಹ ವಾ ಅಸ್ಮೈ ಭವತಿ ಯ ಏವಮೇತದರ್ಕಸ್ಯಾರ್ಕತ್ವಂ ವೇದ** ।
> (ಬೃ. ಉ. ೧-೨-೧)

ಮೃತ್ಯುವು ಅರ್ಚಿಸುತ್ತಾ ದೇಹಾನ್ವೇಷಣಕ್ಕಾಗಿ ಸಂಚರಿಸುತ್ತಿರುವಾಗ ಅಪ್ಪಿನ ಉತ್ಪತ್ತಿಯಾಯಿತು. ಆದುದರಿಂದಲೇ ಅಪ್ಪಿಗೆ **ಅರ್ಕ** ವೆಂದು ಹೆಸರು ಪ್ರಸಿದ್ಧವಾಯಿತು. ಇದಕ್ಕಾಗಿಯೇ,

> **ಆಪೋ ವಾ ಅರ್ಕಃ ತದ್ಯದಪಾಂ ಶಿರ ಆಸೀತ್ತತ್ಸಮಹನ್ಯತ** ।
> (ಬೃ. ಉ. ೧-೨-೨)

ಇತ್ಯಾದಿಯಾಗಿ ವರ್ಣಿಸಿದೆ. ಇಲ್ಲಿ **ಅರ್ಕವು** ಗೂಢವಾದ ವಿಶ್ವತತ್ತ್ವವನ್ನು ಪ್ರತಿಬಿಂಬಿಸತಕ್ಕುದಾಗಿದೆ. ಪ್ರಜಾಪತಿತತ್ತ್ವಪ್ರತಿಪಾದಕವಾದ ಅರ್ಕದ ಮಹಿಮೆಯನ್ನೂ, ಅದರ ಸ್ವರೂಪವಿವರಣೆಯನ್ನೂ ಶತಪಥಬ್ರಾಹ್ಮಣದಲ್ಲಿ ಆರುಣಿಯ ಉಪದೇಶ ಸಂದರ್ಭದಲ್ಲಿ ಈ ರೀತಿ ವಿವರಿಸಿದೆ.

> **ಶ್ವೇತಕೇತುರ್ಹಾರುಣೇಯಃ ಯಕ್ಷ್ಯಮಾಣಾ ಆಸ ತಗ್ಂ ಹ ಪಿತೋವಾಚ ಕಾನ್ನೃತ್ವಿಜೋಽವೃಥಾ ಇತಿ ಸ ಹೋವಾಚಾಯಂ ನ್ವೇವ ಮೇ ವೈಶ್ವಾವಸವ್ಯೋ ಹೋತೇತಿ ತಗ್ಂಹ ಪ್ರಪ್ರಚ್ಛ ವೇತ್ಥ ಬ್ರಾಹ್ಮಣಾ ವೈಶ್ವಾವಸವ್ಯ** ॥
> (ಶ. ಬ್ರಾ. ೧೦-೩-೪-೧)

ಉದ್ದಾಲಕ ಆರುಣಿಯ ಪುತ್ರನಾದ ಶ್ವೇತಕೇತು ಆರುಣಿಯು ಯಜ್ಞವನ್ನು ನೆರವೇರಿಸುವ ಪ್ರಯತ್ನದಲ್ಲಿದ್ದಾಗ ಅವನ ತಂದೆಯು ಯಜ್ಞಕರ್ಮಕ್ಕೆ ಯಾವ ಋತ್ವಿಕ್ಕುಗಳನ್ನು ಆರಿಸಿದ್ದೀಯೆ ಎಂದು ಅವನನ್ನು ಪ್ರಶ್ನಿಸಲು ಶ್ವೇತಕೇತುವು **ವೈಶ್ವಾವಸವ್ಯನೇ** ತನ್ನ ಹೋತೃವೆಂದು ಹೇಳಿದನು. ಆಗ ತಂದೆಯು,

> **ಚತ್ವಾರಿ ಮಹಾಂತೀತಿ । ವೇದ ಭೋ೩ ಇತಿ ಹೋವಾಚ................ವೇತ್ಥ ಚತ್ವಾರಿ ಕ್ಯಾನೀತಿ ವೇದ ಭೋ೩ ಇತಿ ಹೋವಾಚ ವೇತ್ಥ ಚತ್ವಾರಿ ಕ್ಯಾನಾಂ ಕ್ಯಾನೀ೩ಇತಿ ವೇದ ಭೋ೩ ಇತಿ ಹೋವಾಚ ವೇತ್ಥ ಚತ್ವಾರಿ ಅರ್ಕಾನಿತಿ ವೇದ ಭೋ ಇತಿ ಹೋವಾಚ ವೇತ್ಥ ಚತುರೋಽ-ರ್ಕಾಣಾಮರ್ಕಾನಿತಿ ವೇದ ಭೋ ಇತಿ ಹೋವಾ ಚ** ॥
> (ಶ. ಬ್ರಾ. ೧೦-೩-೪-೨)

ನೀನು ನಾಲ್ಕು ಮಹಾತತ್ತ್ವಗಳನ್ನು ತಿಳಿದಿದ್ದೀಯಾ? **ಕ** (ಪ್ರಜಾಪತಿ) ಸಂಬಂಧಿಯಾದ ತತ್ತ್ವವನ್ನು ತಿಳಿದಿದ್ದೀಯಾ? ಅದರಲ್ಲೂ ಅತ್ಯಂತ ಗೂಢವಾದ ನಾಲ್ಕು ತತ್ತ್ವಗಳು ನಿನಗೆ ಗೊತ್ತೇ, ನಾಲ್ಕು ವಿಶ್ವಜ್ಯೋತಿಗಳ

ಸ್ವರೂಪವನ್ನು ಅರಿತಿದ್ದೀಯಾ? ಜ್ಯೋತಿಗಳಿಗೂ ಜ್ಯೋತೀರೂಪವಾದ ತತ್ತ್ವವನ್ನು ಮನನಮಾಡಿದ್ದೀಯಾ ಎಂದು ಪ್ರಶ್ನಿಸಲು ಶ್ವೇತಕೇತುವು ಅದೆಲ್ಲಾ ತನಗೆ ಗೊತ್ತಿಂದು ತಿಳಿಸಿದನು. ಪುನಃ ತಂದೆಯು,

**ವೇತ್ಥಾರ್ಕಮಿತಿ। ಅಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಪರ್ಣೇ ಇತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಪುಷ್ಪೇ ಇತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಕೋಶ್ಯಾವಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಸಮುದ್ಗಾವಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಧಾನಾ ಇತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಾಷ್ಠೀಲಾಮಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಮೂಲಮಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ॥**

(ಶ. ಬ್ರಾ. ೧೦-೩-೪-೩)

ನಿನಗೆ ಅರ್ಕದ ಸ್ವರೂಪವೂ, ಅರ್ಕಪರ್ಣದ ಮತ್ತು ಅರ್ಕಪುಷ್ಪಗಳ ಸ್ವರೂಪವೂ ಗೊತ್ತೇ? ಅರ್ಕಕೋಶಗಳ ಮತ್ತು ಅರ್ಕಧಾನ್ಯಗಳ ಸ್ವರೂಪವು ತಿಳಿದಿದೆಯೇ? ಅರ್ಕದ ಮೂಲವು ಗೊತ್ತೇ ಎಂದು ಕೇಳಲು ಅವೆಲ್ಲವೂ ತನಗೆ ಗೊತ್ತಿಲ್ಲವೆಂದೂ ಅವನ್ನು ತನಗೆ ವಿವರಿಸಬೇಕೆಂದೂ ಕೇಳಿದನು. ಆಗ ತಂದೆಯು ಅರ್ಕದ ವಿವರಣೆಯನ್ನು ಹೇಳುತ್ತಾ ಅದರ ಗೂಢಾರ್ಥವನ್ನೂ ತಿಳಿಸಿದ್ದಾನೆ.

**ಅಥ ಹ ವೈ ಯತ್ತದುವಾಚ। ವೇತ್ಥಾರ್ಕಮಿತಿ ಪುರುಷಗ್ಂ ಹೈವ ತದುವಾಚ। ವೇತ್ಥಾರ್ಕಪರ್ಣೇ ಇತಿ ಕರ್ಣೌ ಹೈವ ತದುವಾಚ ವೇತ್ಥಾರ್ಕಪುಷ್ಪೇ ಇತ್ಯಕ್ಷಿಣೀ ಹೈವ ತದುವಾಚ ವೇತ್ಥಾರ್ಕಕೋಶ್ಯಾವಿತಿ ನಾಸಿಕೇ ಹೈವ ತದುವಾಚ ವೇತ್ಥಾರ್ಕಸಮುದ್ಗಾವಿತ್ಯೋಷ್ಠೌ ಹೈವ ತದುವಾಚ ವೇತ್ಥಾರ್ಕಧಾನಾ ಇತಿ ದಂತಾನ್ಹೈವ ತದುವಾಚ ವೇತ್ಥಾರ್ಕಾಷ್ಠೀಲಾಮಿತಿ ಜಿಹ್ವಾಗ್ಂ ಹೈವ ತದುವಾಚ ವೇತ್ಥಾರ್ಕಮೂಲಮಿತ್ಯನ್ನಗ್ಂ ಹೈವ ತದುವಾಚ ಸ ಏಷೋಽಗ್ನಿರರ್ಕೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಮರ್ಕಂ ಪುರುಷಮುಪಾಸ್ತೇಽಯಮಹಮಗ್ನಿರರ್ಕೋಽಸ್ಮೀತಿ ವಿದ್ಯಯಾ ಹೈವಾಸ್ಯೈಷ ಆತ್ಮನ್ನಗ್ನಿರರ್ಕಶ್ಚಿತೋ ಭವತಿ ॥** (ಶ. ಬ್ರಾ. ೧೦-೩-೪-೫)

ಅರ್ಕವೆಂದರೆ ಪುರುಷನು ಎಂದರ್ಥ. ಅರ್ಕಪರ್ಣಗಳೇ ಪುರುಷನ ಕರ್ಣಗಳು; ಅರ್ಕಪುಷ್ಪಗಳೇ ನೇತ್ರಗಳು. ಅರ್ಕಕೋಶ್ಯಗಳು ನಾಸಿಕದ್ವಾರಗಳು. ಅರ್ಕಸಮುದ್ಗವೆಂದರೆ ಓಷ್ಠಗಳು; ಅರ್ಕಧಾನಗಳೇ ದಂತಗಳು; ಅರ್ಕಾಷ್ಠೀಲವೇ ಜಿಹ್ವೆಯು; ಅರ್ಕಮೂಲವೇ ಅನ್ನವು; ಈ ಅರ್ಕದಿಂದ ಪ್ರತಿಪಾದಿತನಾಗಿರುವ ಪುರುಷನೇ ಯಜ್ಞಾಗ್ನಿಯು. ಈ ರೀತಿ ಅರ್ಕ, ಅಗ್ನಿ ಮತ್ತು ಪುರುಷ ಈ ಮೂರಕ್ಕೂ ತಾದಾತ್ಮ್ಯವನ್ನು ತಿಳಿದಿರುವವನ ಯಜ್ಞವೇದಿಯಲ್ಲಿ ಯಜ್ಞಾಗ್ನಿಯ ಪ್ರತ್ಯಕ್ಷವಾಗುತ್ತದೆ ಎಂದು **ಅರ್ಕ** ಶಬ್ದದ ಗೂಢಾರ್ಥವನ್ನು ತಿಳಿಸಿದ್ದಾನೆ. ಈ ಅರ್ಕವೇ **ಅಕ್ಷರ** ರೂಪಿಯಾದ **ಪರಬ್ರಹ್ಮ**ತತ್ತ್ವವೆಂದು ಪುನಃ ವಿವರಿಸುತ್ತಾ;

**ತದ್ಧೈತತ್ಪಶ್ಯನ್ನೃಷಿರಭ್ಯನೂವಾದ। ಭೂತಂ ಭವಿಷ್ಯತ್ಪ್ರಸ್ತೌಮಿ। ಮಹದ್ಬ್ರಹ್ಮೈಕಮಕ್ಷರಂ ಬಹು ಬ್ರಹ್ಮೈಕಮಕ್ಷರಮಿತ್ಯೇತದ್ಧೈವಾಕ್ಷರಗ್ಂ ಸರ್ವೇ ದೇವಾಃ ಸರ್ವಾಣಿ ಭೂತಾನ್ಯಭಿ**

**ಸಂಪದ್ಯಂತೇ ತದೇತದ್ಬ್ರಹ್ಮ ಚ ಕ್ಷತ್ರಂ ಚಾಗ್ನಿರೇವ ಬ್ರಹ್ಮೇಂದ್ರಃ ಕ್ಷತ್ರಮಿಂದ್ರಾಗ್ನೀ ವೈ ವಿಶ್ವೇ ದೇವಾ ವಿಡು ವಿಶ್ವೇ ದೇವಾಸ್ತದೇತದ್ಬ್ರಹ್ಮ ಕ್ಷತ್ರಂ ವಿಟ್ ||**

(ಶ. ಬ್ರಾ. ೧೦-೪-೧-೯)

ಭೂತಭವಿಷ್ಯದ್ವರ್ತಮಾನಗಳನ್ನು ಪ್ರತಿಬಿಂಬಿಸುತ್ತಲೂ, ಸರ್ವವ್ಯಾಪಕವಾಗಿರುತ್ತಲೂ ಇರುವ ಪರಬ್ರಹ್ಮವೇ ಈ ಅರ್ಕವು. ಸಕಲ ದೇವತೆಗಳೂ ಅರ್ಕರೂಪವೂ, ಅಕ್ಷರರೂಪವೂ ಆದ ಈ ಪರಬ್ರಹ್ಮದಲ್ಲಿ ಅಂತರ್ಗತರಾಗಿದ್ದಾರೆ. ಬ್ರಹ್ಮಶಕ್ತಿಯನ್ನೂ, ಕ್ಷಾತ್ರಶಕ್ತಿಯನ್ನೂ ಇದೊಂದೇ ಪ್ರತಿಬಿಂಬಿಸುತ್ತದೆ. ಸಕಲ ದೇವತೆಗಳೂ ಇದರಲ್ಲೇ ಅಂತರ್ಗತ ರಾಗಿದ್ದಾರೆ. ಎಂದು ಋಷಿಯು ಯಾವ ತತ್ತ್ವವನ್ನು ವಿವರಿಸಿದನೋ ಅದೇ ಈ ಅರ್ಕತತ್ತ್ವವು; ಎಂದು ತಿಳಿಸಿದೆ. ಮತ್ತು,

**ಸ ಏಷ ಏವಾರ್ಕಃ । ಯೋಽಯಮಗ್ನಿಶ್ಚಿತಸ್ತಸ್ಯೈತದನ್ನಂ ಕ್ಯಮೇಷ ಸೌಮ್ಯೋಽಧ್ವರಸ್ತದರ್ಕ್ಯಂ..................ಸಹೋದಕ್ರಾಮದೇಷ ಚಂದ್ರಮಾಃ ||**

(ಶ. ಬ್ರಾ. ೧೦-೪-೧-೨೧)

ಅರ್ಕವೇ ಈ ಯಜ್ಞವೇದಿಯು. ಕ್ಯ ತತ್ತ್ವವೇ ಎಂದರೆ ಸೋಮಯಾಗವೇ ಅದರ ಅನ್ನವು. ಇವೆರಡರ ಸಾಮರಸ್ಯವು ಅರ್ಕ್ಯವಾಗುತ್ತದೆ.

**ಸ ಏಷ ಏವಾರ್ಕೋ ಯ ಏಷ ತಪತಿ । ತಸ್ಯೈತದನ್ನಂ ಕ್ಯಮೇಷ ಚಂದ್ರಮಾಸ್ತದರ್ಕ್ಯಂ ಯಜುಷ್ವ ಏಷ ಏವ ಮಹಾನ್................ || ಇತ್ಯಧಿದೈವತಂ ।**

(ಶ. ಬ್ರಾ. ೧೦-೪-೧-೨೨)

ಅಂತರಿಕ್ಷದಲ್ಲಿ ಪ್ರಜ್ವಲಿಸುತ್ತಿರುವ ಆದಿತ್ಯನೇ ಅರ್ಕವು. ಚಂದ್ರನೇ ಅದರ ಅನ್ನವು. ಇವೆರಡರ ಸಾಮರಸ್ಯವು ಅರ್ಕ್ಯವಾಗುತ್ತದೆ. ಇದು ಅಧಿದೈವತಪಕ್ಷವು.

**ಅಥಾಧ್ಯಾತ್ಮಂ । ಪ್ರಾಣೋ ವಾ ಅರ್ಕಸ್ತಸ್ಯಾನ್ನಮೇವ ಕ್ಯಂ........... ||**

ಪ್ರಾಣವೇ ಅರ್ಕವು. ಕ್ಯತತ್ತ್ವವೇ ಅದರ ಅನ್ನವು. ಇದರ ಸಾಮರಸ್ಯವು ಅರ್ಕ್ಯವಾಗುತ್ತದೆ. ಇತ್ಯಾದಿ ಅರ್ಕತತ್ತ್ವವನ್ನು ಅಧಿದೈವತಪಕ್ಷದಲ್ಲೂ, ಅಧ್ಯಾತ್ಮಪಕ್ಷದಲ್ಲೂ ವಿವರಿಸಿದೆ.

**ಸಾನುಷಕ್—ಸಾನುಷಂಗಃ ಸಾತತ್ಯಂ ।** ಅನುಸ್ಯೂತವಾಗಿ ಎಂದರ್ಥ. ಇಂದ್ರನಿಗೂ ಅರ್ಕರೂಪವಾದ ಮಂತ್ರಗಳಿಗೂ ಅವಿಚ್ಛಿನ್ನವಾದ ಸಂಬಂಧವಿದೆಯೆಂದು ತಾತ್ಪರ್ಯ.

**ವಾಜೇಷು—ಬಲೇಷು; ಅನ್ನೇಷು ವಾ ।** ಬಲನಿಮಿತ್ತವಾಗಿಯಾಗಲಿ, ಅನ್ನನಿಮಿತ್ತವಾಗಿಯಾಗಲಿ ಎಂದು ಎರಡು ವಿಧವಾದ ಅರ್ಥವನ್ನು ಹೇಳಿದೆ. **ವಾಜ** ಶಬ್ದವು **ಅನ್ನನಾಮ** ಗಳಲ್ಲಿಯೂ (ನಿ. ೩-೯;) **ಸಂಗ್ರಾಮ** ನಾಮಗಳಲ್ಲಿಯೂ (೩-೯) ಪಠಿಸಿದೆ. ಸ್ತುತ್ಯರ್ಥದಲ್ಲಿಯೂ ಈ ಪದದ ಪ್ರಯೋಗವಿದೆ. ಅತ್ಯಂತಶ್ರೇಷ್ಠವಾದ ಬಲವೆಂದೂ ಅರ್ಥವಾಗುತ್ತದೆ. ಇದರ ವಿಶೇಷಾರ್ಥಗಳನ್ನೂ, ವಿಶೇಷರೂಪವಾದ ಪ್ರಯೋಗಗಳನ್ನೂ ಹಿಂದೆ ವಿವರಿಸಿ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಆವಃ**—ಅವ ರಕ್ಷಣೇ. ಧಾತು. ಛಾಂದಸವಾಗಿ ಲಙ್. ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುರಿಂದ ಆದ್ಯುದಾತ್ತವಾಗುತ್ತದೆ.

**ದ್ವಿಬರ್ಹಸಃ**—ಬೃಹ ಬೃಹಿ ವೃದ್ಧೌ. ಧಾತು. ದ್ವಯೋಃ ಸ್ಥಾನಯೋಃ ಬರ್ಹತೇ ಪ್ರವರ್ಧತೇ ಇತಿ ದ್ವಿಬರ್ಹಾಃ. ತಸ್ಯ. ಔಣಾದಿಕ ಅಸುನ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಸಾನುಷಕ್**—ಷಂಜ ಸಂಗೇ. ಧಾತು. ಕ್ವಿಪ್ ಪ್ರತ್ಯಯ. **ಅನಿದಿತಾಂ ಹಲ ಉ**—ಎಂಬುದರಿಂದ ಉಪಧಾನಕಾರಕ್ಕೆ ಲೋಪ. ಪದಾಂತ ಜಕಾರಕ್ಕೆ ಕುತ್ವ. ಚರ್ತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಸತ್**—ಅಸ ಭುವಿ. ಧಾತು. ಲೇಟ್ ಪ್ರಥಮಪುರುಷ ಏಕವಚನಾಂತರೂಪ. ಪ್ರತ್ಯಯದ ಇಕಾರಕ್ಕೆ ಲೋಪ ಬಂದಾಗ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಆಜೌ**—ಅಜ ಗತಿಕ್ಷೇಪಣಯೋಃ ಧಾತು. **ಅಜ್ಯತಿಭ್ಯಾಂ ಚ** (ಉ ಸೂ. ೪-೫೭೦) ಎಂಬುದರಿಂದ ಇಣ್ ಪ್ರತ್ಯಯ. **ಅತ ಉಪಧಾಯಾಃ** ಎಂಬುದರಿಂದ ಉಪಧಾವೃದ್ಧಿ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮ್ಯೇಕವಚನಾಂತರೂಪ. ॥ ೫ ॥



॥ ಸಂಹಿತಾಪಾಠಃ ॥

**ಯಥಾ ಪೂರ್ವೇಭ್ಯೋ ಜರಿತೃಭ್ಯ ಇಂದ್ರ ಮಯ ಇವಾಪೋ ನ ತೃಷ್ಯತೇ ಬಭೂಥ ।**
**ತಾಮನು ತ್ವಾ ನಿವಿದಂ ಜೋಹವೀಮಿ ವಿದ್ಯಾಮೇಷಂ ವೃಜನಂ ಜೀರದಾನುಂ ॥**

॥ ಪದಪಾಠಃ ॥

**ಯಥಾ । ಪೂರ್ವೇಭ್ಯಃ । ಜರಿತೃಽಭ್ಯಃ । ಇಂದ್ರ । ಮಯಃಽಇವ । ಆಪಃ । ನ । ತೃಷ್ಯತೇ । ಬಭೂಥ ।**
**ತಾಂ । ಅನು । ತ್ವಾ । ನಿಽವಿದಂ । ಜೋಹವೀಮಿ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥ ೬ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಪೂರ್ವೇಭ್ಯೋ ಜರಿತೃಭ್ಯಃ ಪುರಾತನೇಭ್ಯೋ ಗರಿತೃಭ್ಯಃ ಸ್ತೋತೃಭ್ಯೋ ಮಯ ಇವ ಬಭೂಥ । ಮಯಃ ಸುಖಂ । ಸುಖಸ್ವರೂಪಮಿವಾಭವಃ । ತದ್ವತ್ ಸ್ತೋತೃಭ್ಯೋಽಸ್ಮಭ್ಯಂ ಸುಖೋ**

ಭವ । ತತ್ರ ದೃಷ್ಟಾಂತಃ । ತೃಷ್ಯತೆ ಆಪೋ ನ ತೃಷಾರ್ತಸ್ಯೋದಕಾನಿ ಯಥಾ ಸುಖಕರಾಣೀತಿ ತದ್ವತ್ । ತಸ್ಮಾತ್ತ್ವಾಂ ನಿವಿದಂ ತ್ವತ್ಪ್ರೀತಿಕರೀಂ ಪ್ರಸಿದ್ಧಾಂ ಸ್ತುತಿಂ ತ್ವಾ ತುಭ್ಯಮನು ಜೋಹವೀಮಿ । ಪುನಃ ಪುನಃ ಕರೋಮಿ । ಯದ್ವಾ । ತಾಂ ನಿವಿದಮನು ॥ ತೃತೀಯಾರ್ಥೇ । ಪಾ ೧-೪-೮೫ । ಇತ್ಯನೋಃ ಕರ್ಮಪ್ರವಚನೀಯತ್ವಂ ॥ ತಯಾ ಸ್ತುತ್ಯಾ ತ್ವಾಂ ಜೋಹವೀಮಿ । ಪುನಃಪುನರಾಹ್ವಯಾಮಿ । ವಿದ್ಯಾಮೇತಿ ವ್ಯಾಖ್ಯಾತಂ

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಪೂರ್ವೇಭ್ಯಃ**--ಪುರಾತನರಾದ । **ಜರಿತೃಭ್ಯಃ**—ಸ್ತೋತೃಗಳಿಗೆ । **ತೃಷ್ಯತೇ**—ತೃಷಾರ್ತನಿಗೆ । **ಆಪಃ ನ**—ಉದಕಗಳು ಹೇಗೆ ತೃಪ್ತಿಕಾರಕಗಳಾಗುತ್ತವೆಯೋ ಹಾಗೆ । **ಮಯಃ ಇವ**—ಸುಖಸ್ವರೂಪನಂತೆ । **ಯಥಾ**—ಹೇಗೆ । **ಬಭೂಥ**—ಆಗಿದ್ದೆಯೋ । **(ತಥಾ**—ಹಾಗೆ ನಮಗೂ ಸುಖಸ್ವರೂಪನಾಗು) । (ಆದುದರಿಂದ) **ತಾಂ**—ಆ ಪ್ರಸಿದ್ಧವಾದ । **ನಿವಿದಂ ಅನು**—(ನಿನ್ನ) ಸ್ತುತಿಯನ್ನನುಸರಿಸಿ । **ತ್ವಾ**—ನಿನ್ನನ್ನು । **ಜೋಹವೀಮಿ**—ಪುನಃಪುನಃ ಆಹ್ವಾನಿಸುತ್ತೇನೆ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ನಿನ್ನನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು, ಪುರಾತನ ಸ್ತೋತೃಗಳಿಗೆ, ಉದಕಗಳು ತೃಷಾರ್ತನಿಗೆ ತೃಪ್ತಿಯನ್ನು ನೀಡುವಂತೆ ಹೇಗೆ ಸುಖಕರನಾಗಿದ್ದೆಯೋ ಹಾಗೆ ನಮಗೂ ಸುಖಪ್ರದನಾಗು; ನಾನೂ ನಿನ್ನ ಪ್ರಸಿದ್ಧವಾದ ಸ್ತುತಿವಾಕ್ಯಗಳಿಂದ ಪುನಃಪುನಃ ಸ್ತುತಿಸುತ್ತೇನೆ; ನಮಗೆ ಆಹಾರ, ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸು.

## English Translation.

Inasmuch, Indra, as you have been the (giver of) happiness to your ancient encomiasts, like water to one who is thirsty, therefore I constantly repeat this your praise, that I may thence obtain food, strength, and long life.

॥ ವಿಶೇಷವಿಷಯಗಳು ॥

ಇಂದ್ರನು ಸ್ತೋತೃಗಳಿಗೆ ಉಂಟುಮಾಡತಕ್ಕ ಹರ್ಷವನ್ನು ವರ್ಣಿಸಿ ಆ ಹರ್ಷದಿಂದ ಉಂಟಾಗತಕ್ಕ ತೃಪ್ತಿಯನ್ನು ಬಾಯಾರಿದವರಿಗೆ ಜಲಪಾನದಿಂದ ಲಭಿಸುವ ತೃಪ್ತಿಗೆ ಹೋಲಿಸಿದೆ. ಅಂತಹ ತೃಪ್ತಿದಾಯಕನಾದ ಇಂದ್ರನನ್ನು **ನಿವಿದ್** ಮಂತ್ರಗಳಿಂದ ಹಿಂದಿನ ಸ್ತುತಿಕಾರರು ಸ್ತುತಿಸಿದಂತೆ ತಾನೂ ಸ್ತುತಿಸುವೆನೆಂದು ಈ ಸೂಕ್ತ ದ್ರಷ್ಟೃವಾದ ಋಷಿಯೂ ಸಂಕಲ್ಪಮಾಡಿದ್ದಾನೆ.

**ನಿವಿದಂ ಜೋಹವೀಮಿ—ನಿವಿದ್** ಮಂತ್ರಗಳನ್ನು ಪಠಿಸುತ್ತೇನೆಂದು ಸಂಕಲ್ಪಿಸಿದೆ. ಹಿಂದೆ. ಋ. ಸಂ. ೧-೯೬-೨ ನೇ ಋಕ್ಕಿನ ವಿಶೇಷವಿಷಯಗಳನ್ನು ತಿಳಿಸುವಾಗ **ಸ ಪೂರ್ವಯಾ ನಿವಿದಾ** ಎಂಬ ಮಂತ್ರದಿಂದ ಸೂಚಿತವಾಗತಕ್ಕ **ನಿವಿದ್** ಮಂತ್ರಗಳ ಮಹತ್ವವನ್ನು ವಿವರಿಸಿದೆ. (ಋಗ್ವೇದಸಂಹಿತಾ ಭಾಗ ೮- ಪುಟ 74-76) ಆದರೆ, ಆ ಮಂತ್ರವು ಅಗ್ನಿಪರವಾಗಿದ್ದು ಅಲ್ಲಿ ನಿರ್ದಿಷ್ಟವಾಗಿರುವ **ನಿವಿದ್** ಮಂತ್ರಗಳು ಅಗ್ನಿಪರವಾಗಿರುವುದರಿಂದ

ಆ ಸಂದರ್ಭದಲ್ಲಿ **ಅಗ್ನಿ**ದೇವತಾಕವಾದ ಮಂತ್ರಗಳನ್ನು ಮಾತ್ರ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ **ಇಂದ್ರ** ಪರವಾಗಿರುವುದರಿಂದ ಈ ಸಂದರ್ಭಕ್ಕನುಗುಣವಾದ ರೀತಿಯಲ್ಲಿ **ನಿವಿದ್** ಮಂತ್ರಗಳ ಪ್ರಭಾವವನ್ನೂ ಪ್ರಯೋಗ ಗಳನ್ನೂ ವಿವರಿಸಲಾಗುತ್ತೆ.

ಒಂದು ದೇವತೆಯನ್ನಾಗಲಿ, ಅಥವಾ ದೇವತೆಗಳ ಒಂದು ಗುಂಪನ್ನಾಗಲಿ ಉದ್ದೇಶಿಸಿ ಅವರ ಅಸಾಧಾರಣ ವಾದ ಗುಣಗಳನ್ನು ವರ್ಣಿಸಿ ಅವರನ್ನು ಆಹ್ವಾನಮಾಡುವ ಮಂತ್ರಗಳಿಗೆ **ನಿವಿದ್** ಮಂತ್ರವೆಂಬ ಹೆಸರು ಪ್ರಸಿದ್ಧ ವಾಗಿದೆ. ಇದನ್ನೇ ಬೃಹದ್ದೇವತೆಯಲ್ಲಿ ತಿಳಿಸುತ್ತಾ,

**ಕರ್ಮ್ಯೈವ ತಾವತ್ಸಾವಿತ್ರ್ಯಾಂ ನಿವಿದಿ ಸ್ತೌತಿ ಕರ್ಮಣಾ ।**
**ಯದ್ದೇನುಃ ಸಪ್ತ್ಯನಡ್ವಾಹೌ ವೋಳ್ಹಾ ದೋಗ್ಧ್ರ್ಯಾಶುರೇವ ವಾ ॥**

(ಬೃಹದ್ದೇವತಾ. ೩-೫೦)

**ದೋಗ್ಧ್ರೀ** ಎನ್ನುವುದರಿಂದ ಹಾಲು ಕರೆಯುವ ಹಸುವೆಂದೂ, **ಆಶು** (ವೇಗಗಾಮೀ) ಎನ್ನುವುದರಿಂದಲೂ, **ವೋಳ್ಹಾ,** (ಹೊರೆಯನ್ನು ವಹಿಸುವುದು) ಎನ್ನುವುದರಿಂದ ಎತ್ತೆಂದೂ ಅವುಗಳ ವೈಶಿಷ್ಟ್ಯವನ್ನು ಆಯಾ ವಿಶೇಷಣ ಗಳಿಂದ ತಿಳಿಯುವಂತೆ **ನಿವಿದ್** ಮಂತ್ರಗಳ ದ್ವಾರಾ ಆಯಾ ದೇವತೆಯ ವೈಯಕ್ತಿಕವಾದ ಗುಣಗಳನ್ನು ಆಯಾ ಕರ್ಮಗಳ ವಿವರಣೆಯಿಂದ ತಿಳಿಯಬಹುದು. ಉದಾಹರಣೆಗೆ,

**ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ । ಸದಾವನ್ಭಾಗಮೀಮಹೇ ।**

(ಋ. ಸಂ. ೧-೨೪-೩)

ಎಂಬ ಋಕ್ಕಿನಲ್ಲಿ ಸವಿತೃದೇವತೆಯನ್ನುದ್ದೇಶಿಸಿ **ನಿವಿದ್** ಮಂತ್ರವು ಸವಿತೃವಿನ ವೈಶಿಷ್ಟ್ಯವನ್ನು ಅವನ ಅಸಾಧಾರಣ ವಾದ ಕರ್ಮದ ವಿವರಣೆಯಿಂದ ತಿಳಿಸುತ್ತದೆ. **ನಿವಿದ್** ಮಂತ್ರಗಳ ಮಹಿಮೆಯೂ, ಜಗತ್ಸೃಷ್ಟಿಗೂ ಆ ಮಹಾ ಮಂತ್ರಗಳಿಗೂ ಇರುವ ಕಾರ್ಯಕಾರಣ ಸಂಬಂಧವೂ ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಪಠಿತವಾಗಿದೆ—

**ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸ ಸೋಽಕಾಮಯತ ಪ್ರಜಾಯೇಯ ಭೂಯಸ್ಸ್ಯಾ- ಮಿತಿ ಸ ತಪೋಽತಪ್ಯತ ಸ ವಾಚಮಯಚ್ಛತ್ಸ ಸಂವತ್ಸರಸ್ಯ ಪರಸ್ತಾದ್ವ್ಯಾಹರದ್ದ್ವಾದಶ- ಕೃತ್ವೋ ದ್ವಾದಶಪದಾ ವಾ ಏಷಾ ನಿವಿದೇತಾಂ ವಾವ ತಾಂ ನಿವಿದಂ ವ್ಯಾಹರತ್ತಾಂ ಸರ್ವಾಣಿ ಭೂತಾನ್ಯನ್ವಸೃಜ್ಯಂತ ।**

(ಐ. ಬ್ರಾ. ೧೦-೧)

ಆದಿಯಲ್ಲಿ ಪ್ರಜಾಪತಿಯು ಒಬ್ಬಂಟಿಗನಾಗಿದ್ದುದರಿಂದ ಪ್ರಜಾಸೃಷ್ಟಿಯನ್ನು ಮಾಡಿ, ಬಹುಸಂಖ್ಯಾತನಾಗಬೇಕೆಂದು ಅಪೇಕ್ಷಿಸಿ, ಒಂದು ವರ್ಷಕಾಲ ಮೌನವನ್ನಾಶ್ರಯಿಸುತ್ತಾ ತಪಸ್ಸನ್ನಾ ಚರಿಸಿದನು. ಅನಂತರ ಹನ್ನೆರಡು ಮಹಾವಾಕ್ಯ ಗಳನ್ನೊಳಗೊಂಡ **ನಿವಿದ್** ಮಂತ್ರಗಳನ್ನು ಹನ್ನೆರಡು ಸಲ ಪಠಿಸಿದನಂತರ ಜಗತ್ತಿನಲ್ಲಿ ಭೂತಗಳೆಲ್ಲವೂ ಸೃಷ್ಟವಾ ದವು ಎಂದು ಈ ಮಂತ್ರಗಳ ಪ್ರಭಾವವನ್ನು ತಿಳಿಸಿ, ಅನಂತರ ಕರ್ಮಕಾಲಗಳಲ್ಲಿ ಈ ಮಂತ್ರದ ವೈಶಿಷ್ಟ್ಯವನ್ನೂ, ಪ್ರಯೋಗದ ಕ್ರಮವನ್ನೂ ಈ ರೀತಿ ತಿಳಿಸಿದೆ—

**ಗರ್ಭಾ ವಾ ಏತೆ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ತಸ್ಮಾತ್ಪರಾಂಚೋ ಗರ್ಭಾ ಧೀಯಂತೇ ಪರಾಂಚಃ ಸಂಭವತಿ। ಯನ್ಮಧ್ಯತೋ ಮಧ್ಯಂದಿನೇ**

**ಧೀಯಂತೇ ತಸ್ಮಾನ್ಮಧ್ಯೇ ಗರ್ಭಾ ಧ್ರೃತಾಃ । ಯದಂತತಸ್ತೃತೀಯಸವನೇ ಧೀಯಂತೇ ತಸ್ಮಾದಮುತೋಽರ್ವಾಂಚೋ ಗರ್ಭಾಃ ಪ್ರಜಾಯಂತೇ ಪ್ರಜಾತ್ಯೈ । ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ । ಪೇಶಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಯಥೈವ ಪ್ರವಣಯತಃ ಪೇಶಃ ಕುರ್ಯಾತ್ತಾದೃಕ್ತದ್ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ಯಥೈವ ಮಧ್ಯತಃ ಪೇಶಃ ಕುರ್ಯಾತ್ತಾದೃಕ್ತದ್ಯದಂತತಸ್ತೃತೀಯಸವನೇ ಧೀಯಂತೇ ಯಥೈನಾವಪ್ರಜ್ಞನತಃ ಪೇಶಃ ಕುರ್ಯಾತ್ತಾದೃಕ್ತತ್ । ಸರ್ವತೋ ಯಜ್ಞಸ್ಯ ಪೇಶಸಾ ಶೋಭತೇ ಯ ಏವಂ ವೇದ ॥**

(ಐ. ಬ್ರಾ. ೧೧-೧೦)

ನಿವಿದ್ ಮಂತ್ರಗಳು ಉಕ್ಥಗಳಿಗೆ ಗರ್ಭರೂಪದಲ್ಲಿವೆ. ಎಂದರೆ, ಪ್ರಾತಃಸವನದಲ್ಲಿ ಉಕ್ಥಗಳಿಗೆ ಪೂರ್ವಭಾವಿಯಾಗಿ ಪಠಿತವಾಗುವುವು. ಆದುದರಿಂದಲೇ ಗರ್ಭಗಳೂ ಸಹ ಪರಾಙ್ಮುಖವಾಗಿಯೇ ಪ್ರಾರಂಭವಾಗಿ ಇರುತ್ತವೆ. ಮಾಧ್ಯಂದಿನ ಸವನದಲ್ಲಿ ಈ ಮಂತ್ರಗಳು ಮಧ್ಯಕಾಲದಲ್ಲಿ ಪಠಿತವಾಗುತ್ತವೆ. ಆದುದರಿಂದಲೇ ಗರ್ಭಗಳೂ ಮಧ್ಯದಲ್ಲಿ ಧೃತವಾಗುತ್ತವೆ. ತೃತೀಯಸವನಕಾಲದಲ್ಲಿ ನಿವಿದ್ ಮಂತ್ರಗಳು ಪಶ್ಚಾದ್ಭಾಗದಲ್ಲಿ ಪಠಿತವಾಗುವುದರಿಂದ ಗರ್ಭಸ್ಥವಾದ ಶಿಶುವೂ ಅವಾಗ್ರೂಪವಾಗಿ ಜನಿಸುತ್ತದೆ. ಈ ತತ್ತ್ವಗಳನ್ನರಿತವನು ಪ್ರಜಾಸಂಪತ್ತಿನಿಂದಲೂ, ಪಶುಸಂಪತ್ತಿನಿಂದಲೂ ಸೇರಿಕೊಳ್ಳುತ್ತಾನೆ. ನಿವಿದ್ ಮಂತ್ರಗಳು ಉಕ್ಥಗಳಿಗೆ ಆಭರಣದ ರೂಪದಲ್ಲಿದ್ದು ಅವುಗಳ ಸೌಂದರ್ಯವನ್ನೂ ಪ್ರಕಾಶವನ್ನೂ ವೃದ್ಧಿಪಡಿಸುತ್ತವೆ. ಪ್ರಾತಃಸವನದಲ್ಲಿ ಪಠಿಸತಕ್ಕ ಮಂತ್ರಗಳು ಪ್ರವಣೋರ್ಧ್ವದ ಆಭರಣಗಳಂತೆಯೂ, ಮಾಧ್ಯಂದಿನದ ಕಾಲದಲ್ಲಿ ಪಠಿಸತಕ್ಕ ಮಂತ್ರಗಳು ಮಧ್ಯಪ್ರದೇಶದ ಆಭರಣಗಳಂತೆಯೂ, ತೃತೀಯಸವನದ ಮಂತ್ರಗಳು ಅಧೋಭಾಗದ ಆಭರಣಗಳಂತೆಯೂ ಅಲಂಕಾರಜನಕಗಳಾಗಿವೆ. ಇದನ್ನರಿತವನು ಯಜ್ಞವನ್ನೂ, ಅಲಂಕರಿಸುತ್ತಾ ತಾನೂ ಪ್ರಕಾಶಿಸುತ್ತಾನೆ. ಮತ್ತು,

**ಸೌರ್ಯಾ ವಾ ಏತಾ ದೇವತಾ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಮಧ್ಯತೋ ಮಧ್ಯಂದಿನೇ ತತಸ್ತೃತೀಯಸವನ ಆದಿತ್ಯಸ್ಯೈವ ತದ್ವ್ರತಮನು ಪರ್ಯಾವರ್ತಂತೇ । ಪಚ್ಛೋ ವೈ ದೇವಾ ಯಜ್ಞಂ ಸಮಭರಂಸ್ತಸ್ಮಾತ್ಪಚ್ಛೋ ನಿವಿದಃ ಶಸ್ಯಂತೇ । ಯದ್ವೈ ತದ್ದೇವಾ ಯಜ್ಞಂ ಸಮಭರಂಸ್ತಸ್ಮಾದಶ್ವಃ ಸಮಭವತ್ತಸ್ಮಾದಾಹುರಶ್ವಂ ನಿವಿದಾಂ ಶಂಸ್ತ್ರೇ ದದ್ಯಾದಿತಿ ತದು ಖಲು ವರಮೇವ ದದತಿ । ನ ನಿವಿದಃ ಪದಮತೀಯಾದ್ಯದ್ಯನ್ನಿದವಃ ಪದಮತೀಯಾದ್ಯಜ್ಞಸ್ಯ ತಚ್ಛಿದ್ರಂ ಕುರ್ಯಾದ್ಯಜ್ಞಸ್ಯ ವೈ ಛಿದ್ರಂ ಸ್ರವದ್ಯಜಮಾನೋಽನು ಪಾಪೀಯಾನ್ ಭವತಿ ತಸ್ಮಾನ್ನ ನಿವಿದಃ ಪದಮತೀಯಾತ್ । ನ ನಿವಿದಃ ಪದೇ ವಿಪರಿಹರೇದ್ಯನ್ನಿವಿದಃ ಪದೇ ವಿಪರಿಹರೇನ್ಮೋಹಯೇದ್ಯಜ್ಞಂ ಮುಗ್ಧೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ವಿಪರಿಹರೇತ್ । ನ ನಿವಿದಃ ಪದೇ ಸಮಸ್ಯೇದ್ಯನ್ನಿವಿದಃ ಪದೇ ಸಮಸ್ಯೇದ್ಯಜ್ಞಸ್ಯ ತದಾಯುಃ ಸಂಹರೇತ್ಪ್ರಮಾಯುಕೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ಸಮಸ್ಯೇತ್ । ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಮಿತ್ಯೇತೇ ಏವ ಸಮಸ್ಯೇದ್ಬ್ರಹ್ಮಕ್ಷತ್ರಯೋಃ ಸಂಶ್ರಿತ್ಯೈ ತಸ್ಮಾದ್ಬ್ರಹ್ಮ ಚ ಕ್ಷತ್ರಂ ಚ ಸಂಶ್ರಿತೇ । ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಮೇಕೈಕಂ ವೈ ನಿವಿದಃ ಪದಮೃಚಂ ಸೂಕ್ತಂ ಪ್ರತಿ**

**ತಸ್ಮಾನ್ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಂ ನಿವಿದಾ ಹ್ಯೇವ ಸ್ತೋತ್ರಮತಿಶಸ್ತಂ ಭವತಿ ।** (ಐ ಬ್ರಾ. ೧೧-೧೧)

ನಿವಿದ್ದೇವತೆಗಳೆಲ್ಲಾ ಸೂರ್ಯಸಂಬಂಧಿಯಾದ ದೇವತೆಗಳು. ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನದ ಮಂತ್ರಗಳು ಉದಯದಿಂದ ಅಸ್ತಮಯದವರೆಗೆ ಸೂರ್ಯನ ಗತಿಯನ್ನನುಸರಿಸುತ್ತವೆ. ಪಾದಾತ್ಮಕವಾದ ಮಿತಿಗಳಿಂದ ದೇವತೆಗಳು ಯಜ್ಞವನ್ನು ಸಂಭರಿಸಿದರು. ಆದುದರಿಂದಲೇ **ನಿವಿದ್** ಮಂತ್ರಗಳು ಪಾದಾತ್ಮಕವಾದ ವಾಕ್ಯಗಳ ರೂಪದಲ್ಲಿವೆ. ಯಜ್ಞಭಾಗಗಳನ್ನೆಲ್ಲಾ ದೇವತೆಗಳು ಒಟ್ಟಿಗೆ ಶೇಖರಮಾಡಿದುದರ ಪರಿಣಾಮವಾಗಿ ಅಶ್ವದ ಉತ್ಪತ್ತಿಯುಂಟಾಯಿತು. ಆದುದರಿಂದಲೇ ಈ ಮಂತ್ರಗಳನ್ನು ಪಠಿಸುವ ಋತ್ವಿಕ್ಕಿಗೆ ಅಶ್ವದಾನವನ್ನು ಮಾಡಬೇಕೆಂಬ ವಿಧಿಯಿದೆ. ನಿವಿದ್ ಮಂತ್ರಗಳಲ್ಲಿ ಯಾವ ಪದವನ್ನೂ ದಾಟಿ ಮುಂದೆ ಹೋಗಬಾರದು. ಹಾಗೆ ಯಾವ ಪದವಾದರೂ ಪಠಿತವಾಗದಿದ್ದರೆ ಯಜ್ಞವನ್ನೇ ಛಿದ್ರಮಾಡಿದಂತಾಗುತ್ತದೆ. ಅದು ಯಜ್ಞಕರ್ತನಿಗೆ ಹಾನಿಯನ್ನುಂಟುಮಾಡುತ್ತದೆ. ಈ ಮಂತ್ರಗಳಲ್ಲಿ ಎರಡು ವಾಕ್ಯಗಳನ್ನು ಒಟ್ಟಿಗೆ ಸೇರಿಸಿಬಿಡಬಾರದು, ಅಥವಾ ಹಿಂದಿನದನ್ನು ಮುಂದಕ್ಕೂ, ಮುಂದಿನದನ್ನು ಹಿಂದಕ್ಕೂ ಸೇರಿಸಿ ಪಠಿಸಬಾರದು. ಹಾಗೆ ಮಾಡಿದಲ್ಲಿ ಯಜ್ಞಕ್ರಿಯೆಯಲ್ಲಿಯೇ ಸಂದಿಗ್ಧಾವಸ್ಥೆಯು ಒದಗುತ್ತದೆ. ಯಜ್ಞಕರ್ತನೂ ಸಹ ಭ್ರಾಂತನಾಗುತ್ತಾನೆ. ಎರಡು ವಾಕ್ಯಗಳನ್ನು ಒಟ್ಟಿಗೆ ಸೇರಿಸಿಬಿಟ್ಟರೆ ಯಜ್ಞಕರ್ಮದಲ್ಲಿಯೇ ಸಂಕೋಚವುಂಟಾಗುತ್ತದೆ. ಇದರಿಂದ ಯಜ್ಞಕರ್ತನ ಆಯುಸ್ಸೂ ಸಂಕುಚಿತವಾಗಿ ಅವನು ಮೃತಿಯನ್ನು ಹೊಂದಬಹುದು. ಆದುದರಿಂದ ವಾಕ್ಯಗಳ ಮಿಶ್ರಣವನ್ನು ಮಾಡಿ ಮಂತ್ರೋಚ್ಚಾರಣೆಯಲ್ಲಿ ಸಂಕೋಚವನ್ನುಂಟುಮಾಡಬಾರದು. **'ಪ್ರೇದಂ ಬ್ರಹ್ಮ'. 'ಪ್ರೇದಂ ಕ್ಷತ್ರಂ'** ಎಂದು ಪವಿತ್ರಾತ್ಮಕವಾದುದೂ, ದಿವ್ಯಸ್ವರೂಪವುಳ್ಳದ್ದೂ ಆದ ಮಂತ್ರದ್ವಯವನ್ನು ಮಾತ್ರ ಮಿಶ್ರಮಾಡಬಹುದು. ಆದುದರಿಂದಲೇ ಬ್ರಹ್ಮತೇಜಸ್ಸೂ, ಕ್ಷಾತ್ರತೇಜಸ್ಸೂ ಮಿಶ್ರಿತವಾಗತಕ್ಕವು. ನಿವಿದ್ ಮಂತ್ರಗಳು ಮೂರು ಅಥವಾ ನಾಲ್ಕು ಮಂತ್ರಗಳೊಳಗೇ ಅಂತರ್ಗತವಾಗಿರಬೇಕೇ ವಿನಹ ಅವುಗಳನ್ನು ಮೀರಬಾರದು. ನಿವಿತ್ತಿನಿಂದಲೇ ಸ್ತೋತ್ರದ ಪಠಣವು ವಿಸ್ತೃತವಾಗಿರುತ್ತದೆ.

**ಏಕಾಂ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್ । ಯದ್ದ್ವೇ ಪರಿಶಿಷ್ಯ ದಧ್ಯಾತ್ಪ್ರಜನನಂ ತದುಪಹನ್ಯಾದ್ಗರ್ಭೈಸ್ತತ್ಪ್ರಜಾ ವ್ಯರ್ಧಯೇತ್ತಸ್ಮಾದೇಕಾಮೇವ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್ । ನ ಸೂಕ್ತೇನ ನಿವಿದಮತಿಪದ್ಯೇತ; ಯೇನ ಸೂಕ್ತೇನ ನಿವಿದಮತಿಪದ್ಯೇತ ನ ತತ್ಪುನರುಪನಿವರ್ತೇತ ವಾಸ್ತುಹಮೇವ ತತ್ । ಅನ್ಯತ್ತದ್ದೈವತಂ ತಚ್ಛಂದಸಂ ಸೂಕ್ತಮಾಹೃತ್ಯ ತಸ್ಮಿನ್ನಿವಿದಂ ದಧ್ಯಾತ್ । ಮಾ ಪ್ರ ಗಾಮ ಪಥೋ ವಯಮಿತಿ ಪುರಸ್ತಾತ್ಸೂಕ್ತಸ್ಯ ಶಂಸತಿ । ಪಥೋ ವಾ ಏಷ ಪ್ರೈತಿ ಯೋ ಯಜ್ಞೇ ಮುಹ್ಯತಿ ಮಾ ಯಜ್ಞಾದಿಂದ್ರ ಸೋಮಿನ ಇತಿ ಯಜ್ಞಾದೇವ ತನ್ನ ಪ್ರಚ್ಯವತೇ । ಮಾಂತಸ್ಸ್ಥುರ್ನೋ ಅರಾತಯ ಇತ್ಯರಾತೀಯತ ಏವ ತದಪಹಂತಿ । ಯೋ ಯಜ್ಞಸ್ಯ ಪ್ರಸಾಧನಸ್ತಂತುರ್ದೇವೇಷ್ವಾತತಃ । ತಮಾಹುತಂ ನಶೀಮಹೀತಿ । ಪ್ರಜಾ ವೈ ತಂತುಃ ಪ್ರಜಾಮೇವಾಸ್ಮಾ ಏತತ್ಸಂತನೋತಿ । ಮನೋ ನ್ವಾಹುವಾಮಹೇ ನಾರಾಶಂಸೇನ ಸೋಮೇನೇತಿ । ಮನಸಾ ವೈ ಯಜ್ಞಸ್ತಾಯತೇ ಮನಸಾ ಕ್ರಿಯತೇ । ಸೈವ ತತ್ರ ಪಾಯಶ್ಚಿತ್ತಿಃ ಪ್ರಾಯಶ್ಚಿತ್ತಿಃ ॥**

(ಐ. ಬ್ರಾ. ೧೧-೧೧)

ತೃತೀಯಸವನದಲ್ಲಿ ಒಂದು ಋಕ್ಕನ್ನು ಬಿಟ್ಟು ನಿವಿತ್ತನ್ನು ಸೇರಿಸತಕ್ಕದ್ದು. ಆದರೆ ಎರಡು ಋಕ್ಕನ್ನು ಬಿಟ್ಟುಬಿಟ್ಟು ಸೇರಿಸಿದರೆ ಆಗ ಶಕ್ತಿಹೀನತೆಯುಂಟಾಗುತ್ತದೆ. ಆಗ ಗರ್ಭರಾಹಿತ್ಯವು ಸಂಭವಿಸುತ್ತದೆ. ಆದುದರಿಂದ ಒಂದನ್ನು ಮಾತ್ರ ಬಿಟ್ಟು ಸೇರಿಸತಕ್ಕದ್ದು. ಆಗ ಯಜ್ಞಕ್ರಿಯೆಯು ಪೂರ್ಣವಾಗುತ್ತದೆ. ಎರಡನ್ನು ಬಿಟ್ಟು ಸೇರಿಸಕೂಡದು ಹಾಗೆ ಮಾಡಿದರೆ ಉತ್ಪಾದನಶಕ್ತಿಯನ್ನು ನಾಶಮಾಡಿದಂತಾಗುತ್ತದೆ. ಆಗ ಗರ್ಭಧಾರಣಶಕ್ತಿಯು ಹೋಗಿ ಜನರು ಗರ್ಭರಹಿತರಾಗುತ್ತಾರೆ. ನಿವಿದ್ಧಾನಾರ್ಹವಾದ ಸೂಕ್ತದಲ್ಲಿ ನಿವಿದ್‌ಮಂತ್ರಗಳನ್ನು ಸೇರಿಸದೇ ಆ ಸೂಕ್ತವನ್ನು ಪಠಿಸಬಾರದು. ಒಂದುಸಲ ಪಠಿಸಿದನಂತರ ಪುನಃ ಸೇರಿಸಲು ಅರ್ಹವಾಗುವುದಿಲ್ಲ. ಒಂದು ವೇಳೆ ಅಂತಹ ಲೋಪವು ಸಂಭವಿಸಿದಲ್ಲಿ ಅದೇ ದೇವತಾಕವಾದುದೂ, ಅದೇ ಛಂದಸ್ಸಿನಿಂದ ಕೂಡಿದ್ದುದೂ ಆದ ಬೇರೆ ಸೂಕ್ತವನ್ನು ಆರಿಸಿ ಅದರಲ್ಲಿ ಈ ನಿವಿನ್ಮಂತ್ರಗಳನ್ನು ಸೇರಿಸತಕ್ಕದ್ದು. ಅಂತಹಕಾಲದಲ್ಲಿ;

**ಮಾ ಪ್ರ ಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।**
**ಮಾಂತಃ ಸ್ಥುರ್ನೋ ಅರಾತಯಃ ॥**

(ಋ. ಸಂ. ೧೦-೫೭-೧)

ನಾವು ಮಾರ್ಗಭ್ರಷ್ಟರಾಗಿ ಹೋಗದಿರುವಂತಾಗಲಿ, ಯಜ್ಞಕ್ರಿಯೆಯಿಂದ ಬಾಹ್ಯರಾಗದಿರುವಂತಾಗಲಿ. ದುಷ್ಟಶಕ್ತಿಗಳು ನಮ್ಮನ್ನು ಆಕ್ರಮಿಸದಿರುವಂತಾಗಲಿ ಎಂದು ಮೊದಲು ಪ್ರಾರ್ಥಿಸಿ ಅನಂತರ ನಿವಿನ್ಮಂತ್ರಗಳಿಂದ ಕೂಡಿದ ಆ ಸೂಕ್ತವನ್ನು ಪಠಿಸಬೇಕು. ಆಗ ಯಾವ ವಿಧವಾದ ಭ್ರಾಂತಿಯೂ ಇಲ್ಲದೇ ಯಜ್ಞಕಾರ್ಯವು ನಿರ್ವಿಘ್ನವಾಗಿ ನಡೆದು ದುಷ್ಟಶಕ್ತಿಗಳ ನಾಶವೂ ಆಗುತ್ತದೆ. ''ಯಜ್ಞಫಲವಾದ ಯಾವ ತಂತುವು ದೇವತೆಗಳಲ್ಲಿ ವಿಸ್ತೃತವಾಗಿ ಹರಡಿದೆಯೋ ಅದೇ ತಂತುವು ಯಜ್ಞಕರ್ತರಾದ ನಮ್ಮಲ್ಲೂ ಪ್ರಸರಿಸಲಿ'' (ಋ. ಸಂ. ೧೦-೫೭-೨) ಎಂದು ಯಜಮಾನನು ಪಠಿಸುತ್ತಾನೆ. ಪ್ರಜಾಸಂತತಿಯೇ ಆ ತಂತುವು, ಯಜ್ಞಕರ್ತನಿಗೆ ಸಂತತಿರೂಪವಾದ ಈ ತಂತುವು ಅನುಸ್ಯೂತವಾಗಿ ಲಭಿಸುತ್ತದೆ.

**ತದ್ಯದೇತಾಂ ಪುರಸ್ತಾತ್ ಸೂಕ್ತಸ್ಯ ನಿವಿದಂ ದಧಾತಿ ಪ್ರಜಾತ್ಯೈ ।**
**ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

(ಐ. ಬ್ರಾ. ೧೦-೨)

ಈ ಕಾರಣದಿಂದಲೇ ಹೋತೃವು ಸೂಕ್ತದ ಪ್ರಾರಂಭದಲ್ಲಿ ನಿವಿನ್ಮಂತ್ರವನ್ನು ಪಠಿಸುವುದರ ಫಲವಾಗಿ ಸಂತಾನವನ್ನು ಪಡೆಯುತ್ತಾನೆ. ಈ ವಿಧವಾದ ತಿಳಿವಳಿಕೆಯುಳ್ಳ ಯಜ್ಞಕರ್ತರಿಗೆ ಸತ್ಸಂತಾನವೇ ಮುಂತಾದ ಸಕಲಸಂಪತ್ತೂ ಲಭಿಸುವುದು., ಎಂದು ಬೇರೆ ಕಡೆಯೂ ಹೇಳಿದೆ. ಮಂತ್ರಗಳ ಪಠನವು ಅತ್ಯಂತ ಶ್ರೇಷ್ಠವಾದ ಫಲವನ್ನು ಕೊಡುವುದೆಂಬ ಶ್ರದ್ಧೆಯಿಂದ ಆಯಾ ದೇವತೆಗಳನ್ನು ಆಹ್ವಾನಮಾಡುವಾಗ ಪ್ರತಿದೇವತೆಯ ಸ್ವರೂಪ, ಶಕ್ತಿ, ಮಹತ್ಕಾರ್ಯಸಾಧನೆ ಇತ್ಯಾದಿಗಳನ್ನು ಸ್ತುತಿಸಿ ಇವುಗಳ ಪಠನವನ್ನು ಮಾಡುವುದು ಸಾಂಪ್ರದಾಯಕವೆಂದು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ತಿಳಿದುಬರುತ್ತದೆ ಉದಾಹರಣೆಗೆ—

**ತಾನ್ಪೂರ್ವಯಾ ನಿವಿದಾ ಹೂಮಹೇ ವಯಂ ಭಗಂ ಮಿತ್ರಮದಿತಿಂ ದಕ್ಷಮಸ್ರಿಧಂ ।**

(ಋ. ಸಂ. ೧-೮೯-೩)

**ಜುಷೇಥಾಂ ಯಜ್ಞಂ ಬೋಧತಂ ಹವಸ್ಯ ಮೇ ಸತ್ತೋ ಹೋತಾ ನಿವಿದಃ ಪೂರ್ವ್ಯಾ ಅನು ।**

(ಋ. ಸಂ. ೨-೩೬-೬)

**ಕಿಮು ಷ್ವಿದಸ್ಮೈ ನಿವಿದೋ ಭನಂತೇಂದ್ರಸ್ಯಾವದ್ಯಂ ದಿಧಿಷಂತ ಆಪಃ ।**
(ಋ. ಸಂ. ೪-೧೮-೭)

**ವಿ ಯದ್ವಾಚಂ ಕೀಸ್ತಾಸೋ ಭರಂತೇ ಶಂಸಂತಿ ಕೇ ಚಿನ್ನಿವಿದೋ ಮನಾನಾಃ ।**
(ಋ. ಸಂ. ೬-೬೭-೧೦)

ಇತ್ಯಾದಿ ಸನ್ನಿವೇಶಗಳಲ್ಲಿ ನಿವಿನ್ಮಂತ್ರಗಳ ಮಹಿಮೆಯು ಸ್ತುತವಾಗಿದೆ.

ಪ್ರಕೃತವಾದ (೧-೧೭೬-೬) ಋಕ್ಕಿನಲ್ಲಿ **ಇಂದ್ರ**ಪರವಾದ ನಿವಿನ್ಮಂತ್ರವು **ತಾಮನು ತ್ವಾ ನಿವಿದಂ ಜೋಹವೀಮಿ** ಎಂಬ ವಾಕ್ಯದಿಂದ ಸೂಚಿತವಾಗಿದೆ. ಇಂದ್ರದೇವತಾಪರವಾದ ನಿವಿತ್ತುಗಳಿಂದ ಯುಕ್ತವಾದ ಸೂಕ್ತವಾವುದೆಂದು ನಿಷ್ಕರ್ಷೆಮಾಡುವುದರಲ್ಲಿ ಸ್ವಲ್ಪ ಮತಭೇದವೂ ಇದೆ. ಉದಾಹರಣೆಗೆ—

**ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ನಿವಿದ್ಧಾನಮ್ಯೈಕಾಹಿಕಂ ।**
(ಐ. ಆ. ೧-೨-೨)

**ಜನಿಷ್ಠಾ ಉಗ್ರಃ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಋ. ಸಂ. ೧೦-೭೩ ನೇ ಸೂಕ್ತವು ನಿವಿನ್ಮಂತ್ರಗಳಿಂದ ಕೂಡಿದೆಯೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ. ಆದರೆ ಶಾಂಖಾಯನ ಆರಣ್ಯಕದಲ್ಲಿ (೧-೩) **ಮಹಾ ಇಂದ್ರೋ ನೃವದಾ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಋ. ಸಂ. ೬-೧೯ನೇ ಸೂಕ್ತವು ಈ ಮಂತ್ರಗಳಿಂದ ಕೂಡಿದೆಯೆಂದು ಹೇಳಿದೆ. ಇಂದ್ರನ ಸ್ವರೂಪವನ್ನೂ, ಪರಾಕ್ರಮವನ್ನೂ, ವೈಶಿಷ್ಟ್ಯವನ್ನೂ ಸ್ತುತಿಸುವ ನಿವಿನ್ಮಂತ್ರಗಳಿಂದ ಇಂದ್ರನನ್ನು ಪ್ರಶಂಸಿಸುತ್ತೇನೆ ಎಂದು ಪ್ರಕೃತವಾದ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ಋಷಿಯು ತನ್ನ ಸಂಕಲ್ಪವನ್ನು ತಿಳಿಸಿದ್ದಾನೆ.

॥ ವ್ಯಾಕರಣಪ್ರಕ್ರಿಯಾ ॥

**ಜರಿತೃಭ್ಯಃ**—ಜ್ಯ್ಹಷ್ ವಯೋಹಾನೌ. ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಇಡಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಬಹುವಚನಾಂತರೂಪ.

**ತೃಷ್ಯತೇ**—ಞಿತೃಷಾ ಪಿಪಾಸಾಯಾಂ ಧಾತು. ಲಟಿಗೆ ಶತ್ರಾದೇಶ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩.೧-೬೯) ಎಂಬುದರಿಂದ ಶ್ಯನ್ ವಿಕರಣ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಶತೃ ಅನುದಾತ್ತವಾಗುತ್ತದೆ. ವಿಕರಣ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಬಭೂಥ**—ಭೂ ಸತ್ತಾಯಾಂ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ **ಬಭೂಥ ತತಂಥ**—(ಪಾ. ಸೂ. ೭-೨-೬೪) ಎಂಬುದರಿಂದ ಇಡಭಾವದಿಂದ ನಿಪಾತಿತವಾಗಿದೆ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಥಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಜೋಹವೀಮಿ** – ಹು ದಾನಾದನಯೋಃ ಧಾತು. ಯಙ್‌ಲುಗಂತದ ಮೇಲೆ ಲಟ್. ಉತ್ತಮಪುರುಷ ಏಕವಚನದಲ್ಲಿ ಮಿಪ್. **ಯಙೋ ವಾ** (ಪಾ. ಸೂ. ೭-೩-೯೪) ಎಂಬುದರಿಂದ ಮಿಪಿಗೆ ಈಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ನೂರ ಎಪ್ಪತ್ತಾರನೇ ಸೂಕ್ತ ಮುಗಿದುದು.

# ನೂರ ಎಪ್ಪತ್ತೇಳನೆಯ ಸೂಕ್ತವು

**ಆ ಚರ್ಷಣಿಪ್ರಾ ಇತಿ ಪಂಚರ್ಚಂ ತ್ರಯೋದಶಂ ಸೂಕ್ತಮಾಗಸ್ತ್ಯಮೈಂದ್ರಂ ತ್ರೈಷ್ಟುಭಂ । ಆ ಚರ್ಷಣಿಪ್ರಾಃ ಪಂಚೇತ್ಯನುಕ್ರಮಣಿಕಾ ॥ ಹೋತ್ರಕಶಸ್ತ್ರೇಷು ಸ್ತೋಮವೃದ್ಧಾವಸ್ಯ ವಿಶೇಷ ವಿನಿಯೋಗಃ । ಐಂದ್ರಾಣಿ ತ್ರೈಷ್ಟುಭಾನ್ಯಮರುಚ್ಛಬ್ದಾನ್ಯಾವಪೇರನ್ । ಆ. ೭-೧೨ । ಇತಿ ಸೂತ್ರಿತತ್ವಾತ್॥**

ಅನುವಾದವು— **ಆ ಚರ್ಷಣಿಪ್ರಾ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು ; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಆ ಚರ್ಷಣಿಪ್ರಾಃ ಪಂಚ** ಎಂದು ಮೊದಲಾಗಿ ಹೇಳಿರುವುದು. ಸ್ತೋಮವೃದ್ಧಿಗಾಗಿ ಶಸ್ತ್ರಮಂತ್ರಗಳನ್ನು ಹೋತೃವರ್ಗದ ಋತ್ವಿಜರು ಪಠಿಸುವಾಗ ಈ ಸೂಕ್ತದ ವಿಶೇಷವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಐಂದ್ರಾಣಿತ್ರೈಷ್ಟುಭಾನ್ಯಮರುಚ್ಛಬ್ದಾನ್ಯಾವಪೇರನ್** (ಆ. ೭-೧೨) ಎಂಬ ಸೂತ್ರದಿಂದ ವಿವೃತವಾಗಿರುವುದು.

## ಸೂಕ್ತ—೧೭೭

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೭ ॥
ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೨೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ಚರ್ಷಣಿಪ್ರಾ ವೃಷಭೋ ಜನಾನಾಂ ರಾಜಾ ಕೃಷ್ಟೀನಾಂ ಪುರುಹೂತ ಇಂದ್ರಃ ।
ಸ್ತುತಃ ಶ್ರವಸ್ಯನ್ನವಸೋಪ ಮದ್ರಿಗ್ಯುಕ್ತ್ವಾ ಹರೀ ವೃಷಣಾ ಯಾಹ್ಯರ್ವಾಙ್ ॥೧॥

॥ ಪದಪಾಠಃ ॥

ಆ । ಚರ್ಷಣಿಽಪ್ರಾಃ । ವೃಷಭಃ । ಜನಾನಾಂ । ರಾಜಾ । ಕೃಷ್ಟೀನಾಂ । ಪುರುಽಹೂತಃ । ಇಂದ್ರಃ ।
ಸ್ತುತಃ । ಶ್ರವಸ್ಯನ್ । ಅವಸಾ । ಉಪ । ಮದ್ರಿಕ್ । ಯುಕ್ತ್ವಾ । ಹರೀ ಇತಿ । ವೃಷಣಾ । ಆ । ಯಾಹಿ । ಅರ್ವಾಙ್ ॥ ೧ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಶ್ಚರ್ಷಣಿಪ್ರಾಃ । ಚರ್ಷಣಯೋ ಮನುಷ್ಯಾಃ । ತೇಷಾಂ ಧನಾದಿನಾ ಪ್ರೀಣಯಿತಾ । ಜನಾನಾಂ ಸರ್ವೇಷಾಂ ವೃಷಭಃ ಕಾಮಾನಾಂ ವರ್ಷಿತಾ । ತಥಾ ಕೃಷ್ಟೀನಾಂ । ಮನುಷ್ಯನಾಮೈತತ್ । ಮನುಷ್ಯಾಣಾಂ ರಾಜಾ ಸ್ವಾಮೀ ಪುರುಹೂತೋ ಬಹುಭಿರಾಹೂತಃ । ಈದೃಶ ಇಂದ್ರೋಽಸ್ಮಾನಾಜಾನಾತ್ವಾಗಚ್ಛತು ವಾ । ಉತ್ತರಾರ್ಧಃ ಪರೋಕ್ಷವಾದಃ । ಹೇ ಇಂದ್ರ ಸ್ತುತ್ಯೋಽಸ್ಮಾಭಿಃ ಶ್ರವಸ್ಯನ್ ಹವಿರ್ಲಕ್ಷಣಾನ್ನಮಿಚ್ಛನ್ನವಸಾಸ್ಮದ್ರಕ್ಷಣೇನ ತರ್ಪಣೇನ ವಾ ಯುಕ್ತಃ ಸನ್ಮದ್ರಿಜ್ಮದಭಿಮುಖಮುಂಚನ್ ವೃಷಣಾ ವರ್ಷಕೌ ಯುವಾನೌ ಹರೀ ಅಶ್ವೌ ಯುಕ್ತ್ವಾ ರಥೇ ಯೋಜಯಿತ್ವಾರ್ವಾಙಸ್ಮದಭಿಮುಖಮಾ ಯಾಹಿ । ಆಗಚ್ಛ ॥

॥ ಪ್ರತಿಪದಾರ್ಥ ॥

**ಚರ್ಷಣಿಪ್ರಾಃ**—ಮನುಷ್ಯರಿಗೆ (ಧನಾದಿಗಳಿಂದ) ಪ್ರೀತಿಯುಂಟುಮಾಡುವವನೂ । **ಜನಾನಾಂ**—ಎಲ್ಲಾ ಜನರಿಗೂ । **ವೃಷಭಃ**—ಕಾಮವರ್ಷಕನೂ । **ಕೃಷ್ಟೀನಾಂ**—ಮನುಷ್ಯರಿಗೆ । **ರಾಜಾ**—ಸ್ವಾಮಿಯೂ । **ಪುರುಹೂತಃ**—ಅನೇಕರಿಂದ (ಅನೇಕ ವಿಧವಾಗಿ) ಆಹೂತನೂ (ಆದ) । **ಇಂದ್ರಃ**—ಇಂದ್ರನು । **ಆ**—ಆಗಮಿಸಲಿ (ನಮ್ಮನ್ನು ತಿಳಿಯಲಿ) । **(ಹೇ ಇಂದ್ರ,**—ಎಲೈ ಇಂದ್ರನೇ) । **ಸ್ತುತಃ**—ನಮ್ಮಿಂದ ಸ್ತುತನಾಗಿ । **ಶ್ರವಸ್ಯನ್**—ಹವಿರ್ಲಕ್ಷಣಾನ್ನವನ್ನು ಇಚ್ಛಿಸುತ್ತಾ । **ಅವಸಾ**—ನಮ್ಮ ರಕ್ಷಣೆಯಿಂದ (ತೃಪ್ತಿಯಿಂದ ಸಹಿತನಾಗಿ) । **ಮದ್ರಿಕ್**—ನಮಗೆ ಅಭಿಮುಖನಾಗಿ ಹೊರಟು । **ವೃಷಣಾ**—ಯುವಕರಾದ । **ಹರೀ**—(ನಿನ್ನ) ಎರಡು ಅಶ್ವಗಳನ್ನು । **ಯುಕ್ತ್ವಾ**—(ರಥಕ್ಕೆ) ಹೂಡಿ । **ಅರ್ವಾಙ್**—ನಮ್ಮನ್ನುದ್ದೇಶಿಸಿ । **ಆ ಯಾಹಿ**—ಆಗಮಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಧನವೊದಲಾದವುಗಳಿಂದ ಮನುಷ್ಯರನ್ನು ತೃಪ್ತಿಪಡಿಸುತ್ತೀಯೆ. ಮನುಷ್ಯರಿಗೆ ಇಷ್ಟಾರ್ಥಪ್ರದನು, ಮಾನವವರ್ಗಕ್ಕೇ ಸ್ವಾಮಿಯು, ಅನೇಕರಿಂದ ಆಹೂತನು ; ನಮ್ಮಿಂದ ಸ್ತುತನಾಗಿ, ನಾವು ಅರ್ಪಿಸುವ ಹವಿರ್ಲಕ್ಷಣಾನ್ನವನ್ನು ಸ್ವೀಕರಿಸಿ, ನಮ್ಮನ್ನು ರಕ್ಷಿಸುವುದಕ್ಕೋಸ್ಕರ, ತಾರುಣ್ಯದಲ್ಲಿರುವ ನಿನ್ನ ಅಶ್ವಗಳನ್ನು ರಥಕ್ಕೆಹೂಡಿ, ನಮಗೆ ಅಭಿಮುಖನಾಗಿ ಹೊರಟು ಬಾ.

English Translation.

May Indra, who is the cherisher of men, the benefactor of menkind, the lord of men, the adored of many, (come to us). Indra, you who are praised (by us), and are desirous of :the oblation, harness your vigorous steeds, and come down to me for (my) preservation.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನ ಐಶ್ವರ್ಯವನ್ನೂ ಔದಾರ್ಯವನ್ನೂ ವರ್ಣಿಸಿ ಯಜ್ಞಕರ್ಮಕ್ಕೆ ಅಭಿಮುಖವಾಗಿ ಅವನ ಆಗಮನವನ್ನು ಪ್ರಾರ್ಥಿಸಿದೆ. ಇಲ್ಲಿ ಇಂದ್ರನ ಐಶ್ವರ್ಯವನ್ನೂ, ಪ್ರಭುತ್ವವನ್ನೂ ವರ್ಣಿಸುವಾಗ **ಚರ್ಷಣಿಪ್ರಾ ; ವೃಷಭೋ ಜನಾನಾಂ ; ರಾಜಾ ಕೃಷ್ಟೀನಾಂ** ಎಂಬ ವಿಶೇಷಣಗಳು ಗಮನಾರ್ಹವಾದುವು. ಇಲ್ಲಿ

ಚರ್ಷಣಿ; ಜನ; ಮತ್ತು ಕೃಷ್ಟಿ ಈ ಮೂರು ಪದಗಳೂ ಮನುಷ್ಯಪರ್ಯಾಯಪದಗಳು. ಆದರೆ ಬೇರೆ ಬೇರೆ ಪ್ರಯೋಗಗಳಿರುವುದರಿಂದ ಮನುಷ್ಯನ ಸ್ವರೂಪದಲ್ಲೂ, ವೃತ್ತಿಯಲ್ಲೂ ವೈವಿಧ್ಯವನ್ನು ತೋರಿಸತಕ್ಕ ವಿಶೇಷಣಗಳೆಂದು ತಿಳಿಯಬೇಕು.

**ಚರ್ಷಣಿ** ಶಬ್ದವು ಬಹುಶಃ ಬಹುವಚನದಲ್ಲಿಯೇ ಪ್ರಯೋಗಿಸಲ್ಪಟ್ಟಿದೆ. ಇದರ ರೂಪನಿಷ್ಪತ್ತಿಯನ್ನೂ, ಅರ್ಥವೈವಿಧ್ಯವನ್ನೂ ಹಿಂದೆ ೧೭೭ ನೇ ಸೂಕ್ತದ ೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಸಂಚರಿಸು ಎಂಬರ್ಥವುಳ್ಳ **ಚರ್** ಧಾತುವಿನಿಂದಾಗಲಿ, ಅಥವಾ ವ್ಯವಸಾಯವನ್ನು :ಮಾಡು ಎಬರ್ಥವುಳ್ಳ **ಕೃಷ್** ಧಾತುವಿನಿಂದಾಗಲಿ ನಿಷ್ಪನ್ನವಾಗಿರುತ್ತದೆ. ಮೂಲಾರ್ಥವು ಹೀಗಿದ್ದರೂ ಸಹ ಈ ಪದದ ಪ್ರಯೋಗವಿರುವೆಡೆಗಳಲ್ಲಿ ಸಾಯಣರು ಅನೇಕಕಡೆ ಜ್ಞಾನರೂಪವಾದ ದೃಷ್ಟಿಯುಳ್ಳ ಮಾನವರು ಎಂದೇ ಅರ್ಥ ಮಾಡಿದ್ದಾರೆ. ಈ ಪದವು ಕೇವಲ ಮಾನವರಿಗೆ ಮಾತ್ರ ವಿಶೇಷಣವಾಗಿರದೆ ಅಸಾಧಾರಣವಾದ ಜ್ಞಾನವನ್ನು ಹೊಂದಿರುವ ಇಂದ್ರಾದಿ ದೇವತೆಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿರುವುದನ್ನೂ ಹಿಂದೆ ತಿಳಿಸಿದೆ. **ರಾಜಾಚರ್ಷಣೀನಾಂ ; ಚರ್ಷಣಿಪ್ರಾಃ** ಎಂಬ ವಿಶೇಷಣಗಳೂ ಸಹ ಅಧಿಕವಾಗಿ ಇಂದ್ರಾಗ್ನಿಗಳ ಪರವಾಗಿಯೇ ಉಪಯೋಗಿಸಲ್ಪಟ್ಟಿದೆ. [ಋ.ಸಂ. ೩-೧೦-೧ ; ೫-೩೯-೪ ಇತ್ಯಾದಿ] ಪ್ರಾಜ್ಞರೂ, ಸೂಕ್ತದ್ರಷ್ಟೃಗಳೂ, ಯಜ್ಞಕರ್ತರೂ ಆದ ಮಾನವರಿಗೆ ಇಂದ್ರನು ರಕ್ಷಕನೆಂದು ತಾತ್ಪರ್ಯವು. **ಕೃಷ್ಟಿ**ಶಬ್ದಕ್ಕೂ ಮನುಷ್ಯಜಾತರೆಂದು ಸಾಧಾರಣವಾದ ಅರ್ಥವಿದೆ. ನಿರುಕ್ತಕಾರರು,

**ಆ ದಧಿಕ್ರಾಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ।**

(ಋ. ಸಂ. ೪-೩೮-೧೦)

ಎಂಬ ಋಕ್ಕಿನಲ್ಲಿರುವ **ಪಂಚ ಕೃಷ್ಟೀಃ** ಎಂಬ ಪದಕ್ಕೆ **ಪಂಚ ಜನಾನ್** (ನಿ. ೧೦-೩೧) ಎಂದು ಸಕಲ ಮನುಷ್ಯಜಾತರನ್ನೂ ಸೇರಿಸಿ ಅರ್ಥಮಾಡಿದ್ದಾರೆ. ಈ ಪದಕ್ಕೆ Keith ಎಂಬ ಪಂಡಿತನು ಈ ರೀತಿ ವಿವರಣೆಯನ್ನು ಹೇಳಿದ್ದಾನೆ.

> ಕೃಷ್ಟಿ denotes 'people' in general from the Rig-Veda onwards. Its common and regular use in this sense appears to show that the Aryans, when they invaded India, were already Agriculturists, though the employment of the words reffering to ploughing mentioned under ಕೃಷಿ indicates that not all of the people devoted themselves equally to that occupation. Indra and Agni are **Pre exellence** the lords of men. the word (ಕೃಷ್ಟಿ) Sometimes is further defined by the addition of an adjective meaning "belonging to mankind" (ಮಾನುಷೀಃ :ಮಾನವೀಃ)

[Vedic Index of Names and Subjects. By Keith anc Maedoneth
[Vol. I. P. 183.]

ಮೇಲಿನ ವಿವರಣೆಯಿಂದ ಕೃಷ್ಯಾದಿ ವೃತ್ತಿಗಳಲ್ಲಿ ನಿರತರಾಗಿದ್ದುದರಿಂದ ಕೃಷ್ಟಿಪದವು ಆರ್ಯರ ಜೀವನಕ್ರಮವನ್ನು ತಿಳಿಸುವುದಾಗಿ ಸೂಚಿಸಿದೆ.

**ಸ ಯುಧ್ಮಃ ಸತ್ವಾ ಖಜಕೃತ್ಸಮದ್ವಾ ತುವಿಮ್ರಕ್ಷೋ ನದನುಮಾಁ ಋಜೀಷೀ ।**
**ಬೃಹದ್ರೇಣುಶ್ಚ್ಯವನೋ ಮಾನುಷೀಣಾಮೇಕಃ ಕೃಷ್ಟೀನಾಮಭವತ್ಸಹಾವಾ ॥**

(ಋ ಸಂ. ೬-೧೮-೨)

ಇತ್ಯಾದಿ ಋಕ್ಕುಗಳಲ್ಲಿ **ಮಾನುಷೀಣಾಂ ಕೃಷ್ಟೀನಾಂ** ಎಂಬ ವಿಶೇಷಣ ಪೂರ್ವಕವಾದ ಪ್ರಯೋಗವಿದೆ.

**ಚರ್ಷಣಿ, ಕೃಷ್ಟಿ** ಎಂಬ ಪದಗಳು ಮಾನವ ಪ್ರಜೆಗಳ ಪರ್ಯಾಯ ಪದಗಳಾಗಿರುವಂತೆಯೇ, ನಿವಾಸವುಳ್ಳವರು, ವಸತಿಯುಳ್ಳವರು. ಎಂಬರ್ಥವನ್ನು ಕೊಡುವ **ಕ್ಷಿತಿ** ಶಬ್ದವೂ ಸಹ ಇಂತಹ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟಿದೆ. **ಮನುಷ್ಯಾಃ ನರಃ** ಇತ್ಯಾದಿ ಮನುಷ್ಯನಾಮಗಳಲ್ಲಿ ಪಠಿತವಾಗಿದೆ. (ನಿ. ೩-೭)

ಇಂದ್ರನು ಯಜ್ಞಕರ್ತರಾದ ಪ್ರಜೆಗಳ ರಕ್ಷಕನು ; ಅವರ ಒಡೆಯನು ; ಅವರಿಗೆಲ್ಲಾ ಪಾಲಕನಾದ ಪ್ರಭುವು ಎಂದು ಇಂದ್ರನ ಅಸಾಧಾರಣವಾದುದೂ, ವಿಶ್ವಪ್ರಿಯವಾದುದೂ ಆದ ಗುಣಗಳನ್ನು ವರ್ಣಿಸಿದೆ. ಆದುದರಿಂದಲೇ **ಪುರುಹೂತಃ—ಬಹುಭಿರಾಹೂತಃ ।** ಅನೇಕರಿಂದ ಕರೆಯಲ್ಪಡುವವನು ಎಂಬ ವಿಶೇಷಣವಿದೆ. ಇಂತಹ ಇಂದ್ರನು ನಮ್ಮ ಯಜ್ಞಾಭಿಮುಖವಾಗಿ ಬರಲಿ ಎಂದು ಪ್ರಾರ್ಥಿಸಿದೆ.

**ಶ್ರವಸ್ಯನ್—ಹವಿರ್ಲಕ್ಷಣಮನ್ನಮಿಚ್ಛನ್ ।** ಹವಿಸ್ಸಿನ ರೂಪವಾದ ಅನ್ನವನ್ನು ಅಪೇಕ್ಷಿಸುತ್ತಾ ಎಂದು ಇಂದ್ರನ ಇಚ್ಛೆಯನ್ನೂ ತಿಳಿಸಿದೆ. **ಶ್ರವಸ್** ಶಬ್ದಕ್ಕೆ **ಅನ್ನ** ಅಥವಾ **ಕೀರ್ತಿ** ಎಂಬ ಎರಡರ್ಥಗಳೂ ಸಾಧ್ಯವಾಗುತ್ತದೆ. ನಿರುಕ್ತಕಾರರು,

**ಆಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ ।**
**ಅಭಿ ಶ್ರವ ಋಜ್ಯಂತೋ ವಹೇಯುರ್ನೂ ಚಿನ್ನು ವಾಯೋರಮೃತಂ ವಿ ದಸ್ಯೇತ್ ॥**

(ಋ. ಸಂ. ೬-೩೭-೩)

ಎಂಬ ಋಕ್ಕನ್ನು ವಿವರಿಸುವಾಗ **ಶ್ರವ** ಶಬ್ದಕ್ಕೆ **ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ ।** ಸರ್ವತ್ರ ಪ್ರಸಿದ್ಧವಾಗಿರುತ್ತದೆಯಾದುದರಿಂದ (ಎಲ್ಲರಿಂದಲೂ ಕೇಳಲ್ಪಡುವುದಾದುರಿಂದ) **ಶ್ರು** ಧಾತುವಿನಿಂದ ನಿಷ್ಪನ್ನವಾದ **ಶ್ರವ** ಶಬ್ದಕ್ಕೆ ಅನ್ನವೆಂದೂ (ನಿ. ೧೦-೩) ಮತ್ತು,

**ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ।**

(ಋ. ಸಂ. ೧೦-೫೦-೧)

ಎಂಬಲ್ಲಿ **ಶ್ರವಣೀಯಂ ಯಶಃ ।** ಎಲ್ಲರಿಂದಲೂ ಕೇಳಲ್ಪಡುವ ಎಂದರೆ ಸರ್ವತ್ರ ಪ್ರಸಿದ್ಧವಾದ **ಯಶಸ್ಸನ್ನು** ಎಂದೂ ಅರ್ಥಮಾಡಿದ್ದಾರೆ. (ನಿ. ೧೧-೯) ಅನ್ನವು ಯಶೋಭಾಗಿಯಾರುವುದರಿಂದ ಯಶಸ್ಸಿಗೆ ಸಾಧನವಾದ ಅನ್ನವೆಂದೂ ಅರ್ಥಮಾಡಬಹುದು. ಇದಕ್ಕೆ ಆಧಾರವಾಗಿ,

**ಬೃಹತ್ಯಾ ಶ್ರೀಕಾಮೋ ಯಶಸ್ಕಾಮಃ ಕುರ್ವೀತ। ಶ್ರೀರ್ವೈ ಯಶಶ್ಛಂದಸಾಂ ಬೃಹತೀ। ಶ್ರಿಯಮೇವ ಯಶ ಆತ್ಮನ್ಧತ್ತೇ ॥**

(ಐ. ಬ್ರಾ. ೧-೫)

ಎಂಬಲ್ಲಿ ಧನಧಾನ್ಯಾದಿ ಸಂಪತ್ತಿನ ರೂಪವಾದ **ಶ್ರೀಗೂ,** ಅದರಿಂದ ಲಭಿಸತಕ್ಕ ಯಶಸ್ಸಿಗೂ ತಾದಾತ್ಮ್ಯವನ್ನು ಹೇಳಿದೆ. ಯಶಸ್ಸಿಗೆ ಅನ್ನಾದಿಸಂಪತ್ತೇ ಆಧಾರವು. ಮತ್ತು ಅನ್ನಾದಿಸಂಪತ್ತುಗಳಿದ್ದರೆ ಯಶಸ್ಸು ತಾನಾಗಿಯೇ ಲಭಿಸುತ್ತಾದುದರಿಂದ **ಶ್ರವ** ಶಬ್ದಕ್ಕೆ ಎರಡರ್ಥಗಳೂ ಸಾಧ್ಯವಾಗುತ್ತವೆ. ಪ್ರಕೃತವಾದ ಋಕ್ಕಿನಲ್ಲಿ, ಯಜಮಾನನ ಯಶಸ್ಸಿಗೆ ಸಾಧನವಾದ ಹವಿಸ್ಸಿನರೂಪವಾದ ಅನ್ನವೆಂದರ್ಥಮಾಡಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಚರ್ಷಣಿ ಪ್ರಾಃ**—ಪ್ರಾ ಪೂರಣೇ. ಧಾತು. ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೃಷಭಃ**—ವೃಷು ಸೇಚನೇ. ಧಾತು. ಔಣಾದಿಕ ಅಭಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಕೃಷ್ಟೀನಾಮ್**—ಷಷ್ಠೀ ಬಹುವಚನಾಂತರೂಪ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ

**ಶ್ರವಸ್ಯನ್**—ಶ್ರವಃ ಅನ್ನಂ ಆತ್ಮನಃ ಇಚ್ಛನ್ ಶ್ರವಸ್ಯನ್. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಕ್ಯಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಪ್ರಥಮಾ ಏಕವಚನಾಂತರೂಪ. ಕ್ಯಚ್ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಮದ್ರಿಕ್**—ಅಂಚು ಗತಿಪೂಜನಯೋಃ ಧಾತು. **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತರೂಪ ಸಿದ್ಧಿಯಾಗುತ್ತದೆ.

**ಯುಕ್ತ್ವಾ**—ಯುಜಿರ್ ಯೋಗೇ. ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಸಮಾನಕರ್ತೃಕಯೋಃ**—(ಪಾ. ಸೂ. ೩-೪-೨೧)ಎಂಬುದರಿಂದ ಕ್ತ್ವಾ ಪ್ರತ್ಯಯ. **ಚೋಃ ಕುಃ** ಎಂಬುದರಿಂದ ಧಾತು ಜಕಾರಕ್ಕೆ ಕುತ್ವ. ಚರ್ತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಾಹಿ**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ ತಿಙಂತ ನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

**ಯೇ ತೇ ವೃಷಣೋ ವೃಷಭಾಸ ಇಂದ್ರ ಬ್ರಹ್ಮಯುಜೋ ವೃಷರಥಾಸೋ ಅತ್ಯಾಃ ।**

**ತಾಁ ಆ ತಿಷ್ಠ ತೇಭಿರಾ ಯಾಹ್ಯರ್ವಾಙ್ ಹವಾಮಹೇ ತ್ವಾ ಸುತ ಇಂದ್ರ ಸೋಮೇ ॥**

॥ ಪದಪಾಠಃ ॥

ಯೇ । ತೇ । ವೃಷಣಃ । ವೃಷಭಾಸಃ । ಇಂದ್ರ । ಬ್ರಹ್ಮsಯುಜಃ । ವೃಷsರಥಾಸಃ । ಅತ್ಯಾಃ ।

ತಾನ್ । ಆ । ತಿಷ್ಠ । ತೇಭಿಃ । ಆ । ಯಾಹಿ । ಅರ್ವಾಙ್ । ಹವಾಮಹೇ । ತ್ವಾ । ಸುತೇ । ಇಂದ್ರ ।

ಸೋಮೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸಂಬಂಧಿನೋ ವೃಷಣೋ ವರ್ಷಕಾ ಯುವಾನೋ ವರ್ಷಣವಂತೋ ವಾ ವೃಷಭಾಸಃ ಶ್ರೇಷ್ಠಾ ಬ್ರಹ್ಮಯುಜಃ ಪರಿವೃಢೇನ ಮಂತ್ರೇಣ ಯುಜ್ಯಮಾನಾ ವೃಷರಥಾಸೋ ವರ್ಷಣರಥವಂತಃ । ತತ್ರ ನಿಯುಕ್ತಾ ಇತ್ಯರ್ಥಃ । ಈದೃಶಾ ಅತ್ಯಾ ಅಶ್ವಾ ಯೇ ಸಂತಿ ತಾನಾ ತಿಷ್ಠ ಆಶ್ರಯ । ಆರೋಹ । ತೇಭಿಸ್ತೈರರ್ವಾಙಸ್ಮದಭಿಮುಖಮಾ ಯಾಹಿ । ಆಗಚ್ಛ । ವಯಂ ಚ ಹೇ ಇಂದ್ರ ಸೋಮೇ ಸುತೇ ಸತಿ ತ್ವಾ ತ್ವಾಂ ಹವಾಮಹೇ । ಆಹ್ವಯಾಮಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ವೃಷಣಃ**—(ಕಾಮ) ವರ್ಷಕಗಳೂ ಅಥವಾ ಪ್ರಾಯದಲ್ಲಿರುವುವುಗಳೂ । **ವೃಷಭಾಸಃ**—ಶ್ರೇಷ್ಠಗಳೂ । **ಬ್ರಹ್ಮಯುಜಃ**—ಮಂತ್ರದಿಂದಲೇ ಹೂಡಲ್ಪಡತಕ್ಕವುಗಳೂ । **ವೃಷರಥಾಸಃ**—ಇಷ್ಟಾರ್ಥವರ್ಷಕವಾದ ರಥಯುಕ್ತಗಳೂ ಆದ । **ತೇ**—ನಿನ್ನ । **ಅತ್ಯಾಃ**—ಅಶ್ವಗಳು । **ಯೇ (ಸಂತಿ)**—ಯಾವುವು ಇವೆಯೋ । **ತಾನ್**—ಅವುಗಳನ್ನು । **ಆ ತಿಷ್ಠ**—ಆಶ್ರಯಿಸು (ಆರೋಹಿಸು) । **ತೇಭಿಃ**—ಅವುಗಳಿಂದ ಯುಕ್ತನಾಗಿ । **ಅರ್ವಾಙ್**—(ನಮಗೆ) ಅಭಿಮುಖನಾಗಿ । **ಆ ಯಾಹಿ**—ಆಗಮಿಸು । **(ವಯಂ ಚ**—ನಾವೂ) । **(ಹೇ) ಇಂದ್ರ**—ಎಲೈ ಇಂದ್ರನೇ । **ಸೋಮೇ**—ಸೋಮರಸವು । **ಸುತೇ (ಸತಿ)**—ಅಭಿಷುತವಾಗಲು । **ತ್ವಾಂ**—ನಿನ್ನನ್ನು । **ಹವಾಮಹೇ**—ಆಹ್ವಾನಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಇಷ್ಟಾರ್ಥಪ್ರದವಾದ ರಥಕ್ಕೆ ಯುಕ್ತವಾಗಿರತಕ್ಕವುಗಳೂ, ಮಂತ್ರದಿಂದಲೇ ನಿಯುಕ್ತವಾಗತಕ್ಕವೂ ಆದ, ಶ್ರೇಷ್ಠವಾದ ಮತ್ತು ಪ್ರಾಯದ ಕುದುರೆಗಳನ್ನು ಏರಿಕೊಂಡು ನಮಗೆ ಅಭಿಮುಖವಾಗಿ ಹೊರಟು ಬಾ ; ನಾವೂ, ಸೋಮರಸವನ್ನು ಸಿದ್ಧಪಡಿಸಿ, ನಿನ್ನನ್ನು ಕರೆಯುತ್ತೇವೆ.

## English Translation.

Mount, Indra, your steeds, who are young and vigorous, tractable to prayer, and harnessed to a bounty-shedding car : come down with them to us. We invoke you, Indra, the libation being poured out.

॥ ವಿಶೇಷವಿಷಯಗಳು ॥

**ವೃಷಣಃ, ವೃಷಭಾಸಃ, ವೃಷರಥಾಸಃ**—ಎಂಬ ಶಬ್ದಗಳು ಇಂದ್ರನ ಅಶ್ವಗಳಿಗೆ ವಿಶೇಷಣಗಳಾಗಿದ್ದು ಆ ಅಶ್ವಗಳ ಸಾಮರ್ಥ್ಯವಿಶೇಷಗಳನ್ನು ತಿಳಿಸುತ್ತವೆ. **ವೃಷನ್** ಶಬ್ದದಿಂದ ನಿಷ್ಪನ್ನವಾದ ಈ ಪದಗಳಿಗಿರುವ ಅರ್ಥ ವ್ಯತ್ಯಾಸಗಳನ್ನೂ, ಅವುಗಳ ಪ್ರಯೋಗಗಳನ್ನೂ ಸಹ ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ. **ಬ್ರಹ್ಮಯುಜಃ, ಅತ್ಯಾಃ** ಎಂಬ ವಿಶೇಷಣಗಳನ್ನು ಮಾತ್ರ ಇಲ್ಲಿ ವಿವರಿಸಲಾಗುವುದು.

**ಬ್ರಹ್ಮಯುಜಃ—ಪರಿವೃಢೇನ ಮಂತ್ರೇಣ ಯುಜ್ಯಮಾನಾಃ ।** ಪ್ರವೃದ್ಧವಾದ ಮಂತ್ರದ ಉಚ್ಚಾರಣೆಯೊಡನೆ ಕಟ್ಟಲ್ಪಟ್ಟ ಎಂದು ಇಂದ್ರನ ಅಶ್ವಗಳಿಗೆ ವಿಶೇಷಣವಾಗಿದೆ. ವೃದ್ಧಿಯನ್ನು ಹೊಂದು ಎಂಬರ್ಥವುಳ್ಳ **ಬೃಹಿ** ಧಾತುವಿನಿಂದ ಪ್ರಕೃತವಾದ ಬ್ರಹ್ಮಶಬ್ದವು ನಿಷ್ಪನ್ನವಾಗಿ ವೃದ್ಧಿಯನ್ನು ಹೊಂದಿದ ಮಂತ್ರವೆಂದರ್ಥವಾಗುತ್ತದೆ. **ಬ್ರಹ್ಮಯುಜಃ** ಎಂಬ ಪದವು ಇಲ್ಲಿ ಇಂದ್ರಾಶ್ವಕ್ಕೆ ವಿಶೇಷಣವಾಗಿರುವಂತೆ **ಬ್ರಹ್ಮವಾಹಃ** ಎಂಬ ಪದವು ಇಂದ್ರನಿಗೆ ವಿಶೇಷಣವಾಗಿ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಅಲ್ಲೆಲ್ಲಾ **ಬ್ರಹ್ಮಣಾ ಮಂತ್ರರೂಪೇಣ ಸ್ತೋತ್ರೇಣೋಹ್ಯಮಾನ ಪ್ರಾಪ್ಯಮಾಣೇಂದ್ರ ।** ಸ್ತೋತ್ರದ ಮೂಲಕ ಹೊಂದಲು ಯೋಗ್ಯನಾದ ಇಂದ್ರನೇ ಎಂದರ್ಥ. ಇಲ್ಲಿಯೂ ಸಹ ಅದರಂತೆ ಸ್ತೋತ್ರದ ಮೂಲಕ ಕಟ್ಟಲ್ಪಟ್ಟ ಅಶ್ವಗಳೆಂದರ್ಥ.

**ಬ್ರಹ್ಮಣಾ ತೇ ಬ್ರಹ್ಮಯುಜಾ ಯುನಜ್ಮಿ ಹರೀ ಸಖಾಯಾ ಸಧಮಾದ ಆ ಶೂ ।**
**ಸ್ಥಿರಂ ರಥಂ ಸುಖಮಿಂದ್ರಾಧಿತಿಷ್ಠನ್ಪ್ರಜಾನನ್ವಿದ್ವಾँ ಉಪ ಯಾಹಿ ಸೋಮಂ ॥**

(ಋ. ಸಂ. ೩-೩೫-೪)

ಇತ್ಯಾದಿ ಋಕ್ಕುಗಳಲ್ಲಿ ಮಂತ್ರಶಕ್ತಿಯಿಂದ ಇಂದ್ರಾಶ್ವಗಳು ಇಂದ್ರನ ರಥಕ್ಕೆ ಕಟ್ಟಲ್ಪಡುವ ಕ್ರಮವನ್ನು ವರ್ಣಿಸಿರುವಂತೆ, ಪ್ರಕೃತವಾದ ಋಕ್ಕಿನಲ್ಲಿಯೂ ಆ ಅಂಶವನ್ನು ತಿಳಿಸಿದೆ.

**ಅತ್ಯಾಃ—ಅಶ್ವಾಃ ।** ಇಂದ್ರನ ಕುದುರೆಗಳು. **ಅಪೇಕ್ಷಿತಪ್ರದೇಶಂ ಪ್ರತಿ ಅತನಶೀಲಾಃ ।** ತಾನು ಇಷ್ಟಬಂದ ಪ್ರದೇಶಕ್ಕೆ ಸಂಚರಿಸುವ ಸ್ವಭಾವ ಮತ್ತು ಶಕ್ತಿಯುಳ್ಳವು ಎಂದರ್ಥವಾಗುತ್ತದೆ. ಅಶ್ವಕ್ಕೆ ಮಾತ್ರವಲ್ಲದೆ, ಈ ಪದವು ಅಗ್ನಿ, ಆದಿತ್ಯ ಇವರುಗಳಿಗೂ ವಿಶೇಷಣವಾಗಿರುತ್ತದೆ.

**ಏಷ ಪ್ರ ಪೂರ್ವೀರವ ತಸ್ಯ ಚಮ್ರಿಷೋಽತ್ಯೋ ನ ಯೋಷಾಮುದಯಂಸ್ತ ಭುರ್ವಣಿಃ ।**
**ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ ಹರಿಯೋಗಮೃಭ್ವಸಂ ॥**

(ಋ. ಸಂ. ೧-೫೬-೧)

ಎಂಬಲ್ಲಿ **ಅತ್ಯಃ** ಎಂಬುದು ಅಶ್ವಪರ್ಯಾಯವಾಗಿಯೂ,

**ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ ।**
**ಮೃಗಾಣಾಂ ನ ಹೇತಯೋ ಯಂತಿ ಚೇಮಾ ಬೃಹಸ್ಪತೇರಹಿಮಾಯಾँ ಅಭಿ ದ್ಯೂನ್ ॥**

(ಋ. ಸಂ. ೧-೧೯೦-೪)

ಇತ್ಯಾದಿ ಋಕ್ಕುಗಳಲ್ಲಿ **ಅತನಶೀಲಃ ಆದಿತ್ಯಃ ।** ಸಂಚರಿಸತಕ್ಕ ಆದಿತ್ಯನೆಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಪರ್ಯಾಯವಾದ ಪದವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಬ್ರಹ್ಮಯುಜಃ**—ಬ್ರಹ್ಮಣಾ ಯುಜ್ಯಂತೇ ಇತಿ ಬ್ರಹ್ಮಯುಜಃ ಯುಜಿರ್ ಯೋಗೇ. ಧಾತು. **ಸತ್ಸೂದ್ವಿಷ-ದ್ರುಹದುಹಯುಜ**—(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ವೃಷರಥಾಸಃ**—ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವ ಪದ ಪ್ರಕೃತಿಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ತಾನ್+ಆ—ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವಾಕಾರಕ್ಕೆ ನಿತ್ಯಾನುನಾಸಿಕತ್ವ.

**ತಿಷ್ಠ**—ಷ್ಠಾ ಗತಿನಿವೃತ್ತೌ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. **ಬಹುಲಂ ಛಂದಸಿ** ಎಂಬುದರಿಂದ ಲಟಿನಲ್ಲಿ ಸಂಪ್ರಸಾರಣ. ಉತ್ತಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುತೇ**—ಷುಞ್ ಅಭಿಷವೇ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮ್ಯಂತರೂಪ. ॥ ೨ ॥

॥ ಸಂಹಿತಾಪಾಠಃ ॥

ಆ ತಿಷ್ಠ ರಥಂ ವೃಷಣಂ ವೃಷಾ ತೇ ಸುತಃ ಸೋಮಃ ಪರಿಷಿಕ್ತಾ ಮಧೂನಿ ।
ಯುಕ್ತ್ವಾ ವೃಷಭ್ಯಾಂ ವೃಷಭ ಕ್ಷಿತೀನಾಂ ಹರಿಭ್ಯಾಂ ಯಾಹಿ ಪ್ರವತೋಪ ಮದ್ರಿಕ್ ॥ ೩ ॥

॥ ಪದಪಾಠಃ ॥

ಆ । ತಿಷ್ಠ । ರಥಂ । ವೃಷಣಂ । ವೃಷಾ । ತೇ । ಸುತಃ । ಸೋಮಃ । ಪರಿಽಸಿಕ್ತಾ । ಮಧೂನಿ ।
ಯುಕ್ತ್ವಾ । ವೃಷಽಭ್ಯಾಂ । ವೃಷಭ । ಕ್ಷಿತೀನಾಂ । ಹರಿಽಭ್ಯಾಂ । ಯಾಹಿ । ಪ್ರಽವತಾ । ಉಪ । ಮದ್ರಿಕ್ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ರಥಮಾ ತಿಷ್ಠ । ಆಶ್ರಯ ಯಜ್ಞಗಮನಾರ್ಥಂ । ಕೀದೃಶಂ ರಥಂ । ವೃಷಣಂ ವರ್ಷಕಂ ಕಾಮಾನಾಂ । ಕಿಮರ್ಥಮಿತಿ ಚೇತ್ ಉಚ್ಯತೇ । ತೇ ತ್ವದರ್ಥಂ ವೃಷಾ ವರ್ಷಕಃ ಸೋಮಃ ಸುತಃ । ಅಭಿಷುತಃ । ತಥಾ ಮಧೂನಿ·ಮಧುರಾಣಿ ಘೃತಕ್ಷೀರಾದೀನಿ ಪರಿಷಿಕ್ತಾ । ಪರಿತಃ ಸಿಕ್ತಾನಿ ಸಂಪಾದಿತಾನಿ । ಯದ್ವಾ । ಮಧೂನಿ ಮಧುರಾಃ ಸೋಮರಸಾಶ್ಚಮಸೇಷು ಪೂರಿತಾಃ । ಆಗಮನಪ್ರಕಾರ ಉಚ್ಯತೇ । ಹೇ ವೃಷಭ ವರ್ಷಕೇಂದ್ರ ವೃಷಭ್ಯಾಂ ವರ್ಷಕಾಭ್ಯಾಂ ಹರಿಭ್ಯಾಂ ಯುಕ್ತ್ವಾ ರಥಂ ಯೋಜಯಿತ್ವಾ ಕ್ಷಿತೀನಾಂ ಕರ್ಮಸು ನಿವಸತಾಂ ಯಜಮಾನಾನಾಮಸ್ಮಾಕಮನುಗ್ರಹಾಯ । ಕ್ಷಿತೀನಾಂ ವೃಷಭೇತಿ ವಾ ಯೋಜ್ಯಂ । ಪ್ರವತಾ ವೇಗವತಾ ರಥೇನ ಮದ್ರಿಙ್ಮದಭಿಮುಖಮಂಚನ್ಮದಾಭಿಮುಖ್ಯೇನೋಪ ಯಾಹಿ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ತೇ**—ನಿನಗೋಸ್ಕರ । **ವೃಷಾ**—ಇಷ್ಟಾರ್ಥವರ್ಷಕವಾದ । **ಸೋಮಃ**—ಸೋಮರಸವು । **ಸುತಃ**—ಹಿಂಡಲ್ಪಟ್ಟಿದೆ (**ತಥಾ**—ಹಾಗೆಯೇ) । **ಮಧೂನಿ**—ಮಧುರವಾದ ಘೃತಕ್ಷೀರಾದಿಗಳು **ಪರಿಷಿಕ್ತಾ**—ಸುತ್ತಲೂ ಇಡಲ್ಪಟ್ಟಿವೆ । [ಅಥವಾ **ಮಧೂನಿ**—ಮಧುರವಾದ; ಸೋಮರಸಗಳು । **ಪರಿಷಿಕ್ತಾ**—(ಚಮಸಗಳಲ್ಲಿ) ತುಂಬಿವೆ]। (ಆದುದರಿಂದ) **ವೃಷಣಂ**—ಬೇಕಾದುದನ್ನು ಕೊಡುವ । **ರಥಂ**—(ನಿನ್ನ) ರಥವನ್ನು । **ಆ ತಿಷ್ಠ**—ಆಶ್ರಯಿಸು । **ಕ್ಷಿತೀನಾಂ**—(ಕರ್ಮ) ನಿರತರಾದ ಯಜಮಾನರಿಗೆ । **(ಹೇ) ವೃಷಭ**—ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ । **ವೃಷಭ್ಯಾಂ**—ವರ್ಷಕಗಳಾದ । **ಹರಿಭ್ಯಾಂ**—(ಎರಡು) ಅಶ್ವಗಳಿಂದ । **ಯುಕ್ತ್ವಾ**—(ರಥವನ್ನು) ಯೋಜಿಸಿ । **ಕ್ಷಿತೀನಾಂ**—ಕರ್ಮನಿರತರೂ ಯಾಗಕರ್ತೃಗಳೂ ಆದ ನಮ್ಮ ಅನುಗ್ರಹಾರ್ಥವಾಗಿ । **ಪ್ರವತಾ**—ವೇಗಶಾಲಿಯಾದ ರಥದಿಂದ । **ಮದ್ರಿಕ್**—ನಮಗೆ ಅಭಿಮುಖನಾಗಿ । **ಉಪ ಯಾಹಿ**—ನಮ್ಮ ಸಮಿಾಪಕ್ಕೆ ಬಾ.

॥ ಭಾವಾರ್ಥ ॥

ಎಲೈ ಇಂದ್ರನೇ ಕಾಮವರ್ಷಕವೂ,ಮಧುರವೂ ಆದ ಸೋಮರಸವು ಅಭಿಷುತವಾಗಿ ಚಮಸಗಳಲ್ಲಿ ನಿನಗಾಗಿ ಮಿಾಸಲಾಗಿವೆ (ಮಧುರವಾದ ಘೃತಕ್ಷೀರಾದಿಗಳೂ ಸಿದ್ಧವಾಗಿವೆ;) ಆದುದರಿಂದ ಇಷ್ಟಾರ್ಥವರ್ಷಕವಾದ ನಿನ್ನ ರಥವನ್ನೇರು : ಯಾಗಕರ್ತೃಗಳಿಗೆ ಅಭೀಷ್ಟಪ್ರದನಾದ ಎಲೈ ಇಂದ್ರನೇ, ಬೇಕಾದ್ದನ್ನು ಕೊಡುವ ಅಶ್ವಗಳೆರಡನ್ನೂ ರಥಕ್ಕೆಹೂಡಿ, ಯಾಗಕರ್ತೃಗಳಾದ ನಮ್ಮ ಅನುಗ್ರಹಾರ್ಥವಾಗಿ, ವೇಗಶಾಲಿಯಾದ ರಥದಲ್ಲಿ ಕುಳಿತು ನಮಗೆ ಅಭಿಮುಖನಾಗಿ ಬಾ.

## English Translation.

Ascend your bounty-shedding car, for, for you the Soma, the showerer of benefiits, is effused, the sweet libations are prepared. Bounty-shedding Indra, having harnessed them, came with your vigorous steeds for (the good of) mankind ; come with your rapid (car) to my presence.

॥ ವಿಶೇಷವಿಷಯಗಳು ॥

ವೃಷಣಂ ರಥಂ; ವೃಷಾ ಸೋಮಃ; ವೃಷಭ್ಯಾಂ ಹರಿಭ್ಯಾಂ; ವೃಷಭ ಇತ್ಯಾದಿಯಾಗಿ **ವೃಷನ್** ಶಬ್ದ ದಿಂದ ನಿಷ್ಪನ್ನವಾದ ಪದಗಳನ್ನು ರಥಕ್ಕೂ, ಸೋಮಕ್ಕೂ, ಇಂದ್ರನ ಅಶ್ವಗಳಿಗೂ, ಇಂದ್ರನಿಗೂ ಸಹ ವಿಶೇಷಣವನ್ನಾಗಿ ಮಾಡಿ ಪ್ರಯೋಗಿಸಿದೆ. ಮೂಲಧಾತುವಿನ ಅರ್ಥವು ಒಂದೇ ಆದರೂ ಸಹ ಈ ವಿಶೇಷಣಗಳಿಗೆ ಆಯಾ ಸಂದರ್ಭಕ್ಕನುಗುಣವಾದ ಅರ್ಥವ್ಯತ್ಯಾಸವಿರುತ್ತದೆ.

**ವೃಷು ಸೇಚನೇ; ವೃಷ ಶಕ್ತಿಬಂಧನೇ;** ಎಂಬ ಎರಡು ಧಾತುಗಳಲ್ಲಿ ಸುರಿಸು, ಚಿಮುಕಿಸು ಎಂಬರ್ಥವನ್ನು ಕೊಡುವ **ವೃಷ** ಧಾತುವಿನಿಂದ ವೃಷಾ ವೃಷಣ. ಎಂಬ ಪದಗಳೂ, ಶಕ್ತಿ ಮತ್ತು ಸಾಮರ್ಥ್ಯ ಎಂಬರ್ಥವನ್ನು ಕೊಡುವ ಎರಡನೆಯ ಧಾತುವಿನಿಂದ **ವೃಷಭ್ಯಾಂ, ವೃಷಭ** ಎಂಬ ಪದಗಳೂ ನಿಷ್ಪನ್ನವಾಗಿರಬಹುದು. **ವೃಷನ್** ಎಂಬ ಪದಕ್ಕೂ ಈ ಮೂಲದಿಂದ ವ್ಯುತ್ಪನ್ನವಾಗುವ ಇತರ ವಿಶೇಷಣಗಳಿಗೂ ಸಂದರ್ಭಾನುಸಾರವಾದ ಅರ್ಥವನ್ನು ಹೇಳಬೇಕಾಗುತ್ತದೆ.

ಸೇಚನಸಾಮರ್ಥ್ಯವುಳ್ಳ **ಪುಮಾನ್** ಎಂಬರ್ಥದಲ್ಲಿ **ವೃಷನ್** ಶಬ್ದವನ್ನು ಅನೇಕ ಕಡೆ ಉಪಯೋಗಿಸಿದೆ **ಪುಮಾನ್** ಎಂಬ **ಪುಲ್ಲಿಂಗ** ಸೂಚಕವಾಗಿ ಪುರುಷಪರ್ಯಾಯವಾಗಿಯಾಗಲಿ, ಅಥವಾ ಅಶ್ವಾದಿ ಇತರ ಪ್ರಾಣಿಗಳ ಪರ್ಯಾಯವಾಗಿಯಾಗಲಿ ಈ ಪದದ ಪ್ರಯೋಗವಿರುತ್ತದೆ.

**ಯೇ ತ ಇಂದ್ರ ದದುಷೋ ವರ್ಧಯಂತಿ ಮಹಿ ಕ್ಷತ್ರಂ ಸ್ಥವಿರಂ ವೃಷ್ಣ್ಯಂ ಚ ।**

(ಋ. ಸಂ. ೧-೫೪-೮)

ಎಂಬಲ್ಲಿ **ವೃಷ್ಣ್ಯಂ** ಎಂಬ ಪದಕ್ಕೆ ವೃಷತ್ವಂ । **ಪುಂಸ್ತ್ವಂ** ಎಂದೂ,

**ಸ್ತುತಃ ಶ್ರವಸ್ಯನ್ನವಸೋಪ ಮದ್ರಿಗ್ಯುಕ್ತ್ವಾ ಹರೀ ವೃಷಣಾ ಯಾಹ್ಯರ್ವಾಙ್ ।**

(ಋ. ಸಂ. ೧-೧೭೭-೧)

ಎಂಬ ಹಿಂದಿನ ಋಕ್ಕಿನಲ್ಲಿ **ಯುವಾನಾ** । ಪ್ರಾಯದವರು ಎಂದೂ,

**ಭೂಷನ್ನ ಯೋಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿ ರೋರುವತ್ ।**

(ಋ. ಸಂ. ೧-೧೪೦-೬)

ಎಂಬಲ್ಲಿ **ವೃಷಾ ಇವ** ಎನ್ನುವುದಕ್ಕೆ **ಸೇಕ್ತಾ ವೃಷಭ** ಇವ—ಸೇಚನೆಮಾಡುವ ವೃಷಭದಂತೆ ಎಂದೂ,

**ಮಿನಾತಿ ಶ್ರಿಯಂ ಜರಿಮಾ ತನೂನಾಮಪ್ಯೂ ನು ಪತ್ನೀರ್ವೃಷಣೋ ಜಗಮ್ಯುಃ ॥**

(ಋ. ಸಂ. ೧-೧೭೯-೧)

ಎಂಬ ಋಕ್ಕಿನಲ್ಲಿ **ವೃಷಣಃ** ಎಂಬುದಕ್ಕೆ **ಸೇಕ್ತಾರಃ ಪುರುಷಾಃ** ಎಂದೂ, ಇನ್ನೂ ಹೀಗೆಯೇ ಅನೇಕ ಕಡೆಗಳಲ್ಲಿ ಇದರಂತೆಯೇ ಪುಲ್ಲಿಂಗಸೂಚಕವಾದುದೂ, ಪುರುಷಪ್ರಾಣಿಯ ಶಕ್ತಿಯನ್ನು ತೋರಿಸತಕ್ಕದ್ದೂ ಆದ ಅರ್ಥಗಳಲ್ಲಿ ಈ ಪದವು ಪ್ರಯೋಗಿಸಲ್ಪಟ್ಟಿದೆ. ಮತ್ತು ಇದರಂತೆಯೇ,

**ವೃಷಾ ವಾಂ ಮೇಘೋ ವೃಷಣಾ ಪೀಪಾಯ ಗೋರ್ನ ಸೇಕೇ ಮನುಷೋ ದಶಸ್ಯನ್ ।**

(ಋ. ಸಂ. ೧-೧೮೧-೮)

**ಪಸ್ತ್ಯೋ ಹಿ ಷ್ಮಾ ವೃಷಣಂ ಪಿನ್ವಸಿ ತ್ವಚಂ ಕಂ ಚಿದ್ಯಾ ವೀರರರುಂ ಶೂರ ಮರ್ತ್ಯಂ ಪರಿವೃಣಕ್ಷಿ ಮರ್ತ್ಯಂ ॥** (ಋ. ಸಂ. ೧-೧೨೯-೩)

**ತಾ ತೂ ತೇ ಸತ್ಯಾ ತುವಿನೃಮ್ಣ ವಿಶ್ವಾ ಪ್ರ ಧೇನವಃ ಸಿಸ್ರತೇ ವೃಷ್ಣ ಊಧ್ನಃ ॥**

(ಋ. ಸಂ. ೪-೨೨-೬)

ಇತ್ಯಾದಿ ಸ್ಥಳಗಳಲ್ಲಿ **ವರ್ಷಕಃ, ವರ್ಷಣಪರಮನಸ್ಕಃ** । ನೀರನ್ನು ಸುರಿಸುವುದು, ಇಷ್ಟಾರ್ಥಗಳನ್ನು ಸುರಿಸುವವನು ಎಂಬರ್ಥದಲ್ಲಿ ಉಪಯೋಗಿಸಿದೆ. ಇದರೊಂದಿಗೆ ಇನ್ನೂ ಇತರ ಅರ್ಥಗಳೂ ಅಪರೂಪವಾಗಿ ಅಲ್ಲಲ್ಲಿ ತೋರಿದರೂ ಸಹ **ವೃಷ್ಣ್ಯ** ಶಬ್ದಕ್ಕೆ ಅಸಾಧಾರಣವಾದ ಶಕ್ತಿ, ವೀರ್ಯ ಎಂಬರ್ಥವೇ ಮುಖ್ಯವಾಗಿ ನಾನಾ ಕಡೆಗಳಲ್ಲಿ ತೋರುತ್ತದೆ.

**ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ ।**

(ಋ. ಸಂ. ೧-೯೧-೧೬)

**ಮಹಾँ ಅಸಿ ಮಹಿಷ ವೃಷ್ಣ್ಯೇಭಿರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।**

(ಋ. ಸಂ. ೩-೪೬-೨)

**ವಿ ಚರ್ಮಣೀವ ಧಿಷಣೇ ಅವರ್ತಯದ್ವೈಶ್ವಾನರೋ ವಿಶ್ವಮಧತ್ತ ವೃಷ್ಣ್ಯಂ ।**

(ಋ. ಸಂ. ೬-೮-೩)

ಇತ್ಯಾದಿ ನಾನಾ ಋಕ್ಕುಗಳಲ್ಲಿ ವೃಷ್ಣ್ಯ ಶಬ್ದಕ್ಕೆ ವೀರ್ಯ ಮತ್ತು ಪರಾಕ್ರಮ ಎಂಬ ಅರ್ಥವು ಸಾಧಾರಣವಾಗಿದೆ. ಇದೂ ಅಲ್ಲದೇ ಅನೇಕ ಸಂದರ್ಭಗಳಲ್ಲಿ ಇಂದ್ರಾದಿ ದೇವತೆಗಳ ಪರ್ಯಾಯವಾಗಿಯೇ **ವೃಷನ್** ಶಬ್ದವನ್ನು ಉಪಯೋಗಿಸಿರುವುದರಿಂದ ಅಂತಹ ಕಡೆಗಳಲ್ಲಿ ಸಂದರ್ಭಕ್ಕೆ ಅನುಗುಣವಾಗಿ ಆಯಾ ದೇವತೆಗಳನ್ನುದ್ದೇಶಿಸಿದೆಯೆಂದು ಊಹಿಸಿಕೊಳ್ಳಬೇಕಾಗುತ್ತದೆ.

**ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ । ನಿ ಯತ್ಸೀಂ ಶಿಶ್ನಥದ್ವೃಷಾ ।**

(ಋ. ಸಂ. ೪-೩೦-೧೦)

ಎಂಬಲ್ಲಿ ಇಂದ್ರನ ಪರ್ಯಾಯಪದವಾಗಿದೆಯೆಂದು ಊಹಿಸಬಹುದು. ಆದರೆ ಅನೇಕ ಕಡೆಗಳಲ್ಲಿ ಯಾವ ದೇವತೆಯನ್ನುದ್ದೇಶಿಸಿದೆಯೆಂಬ ಸಂಶಯಕ್ಕೂ ಕಾರಣವಾಗುತ್ತದೆ. ಒಂದೊಂದುಸಲ ಸಾಯಣಾಚಾರ್ಯರೂ ಸಹ ಈ ವಿಶೇಷಣಕ್ಕೆ ಅರ್ಥಮಾಡುವಾಗ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಹೇಳಿರುವುದಿಲ್ಲ. ಉದಾಹರಣೆಗೆ—

**ವೃಷಾ ಛಂದುರ್ಭವತಿ ಹರ್ಯತೋ ವೃಷಾ ಕ್ಷೇಮೇಣ ಧೇನಾಂ ಮಘವಾ ಯದಿನ್ವತಿ ।**

(ಋ. ಸಂ. ೧-೫೫-೪)

ಎಂಬ ಋಕ್ಕಿನಲ್ಲಿ **ವೃಷಾ** ಎಂಬ ಪದಕ್ಕೆ ಮೊದಲು **ವೃಷಾ—ಹವಿಷಾಂ ವರ್ಷಯಿತಾ ಯಜಮಾನಃ** ಎಂದೂ, ಅನಂತರ **ಯುದ್ಧಾ ವೃಷಾ ಇಂದ್ರಃ** ಎಂದೂ ಹೇಳಿರುವಾಗ ಸಂಶಯಕ್ಕೆ ಅವಕಾಶವನ್ನು ಕೊಟ್ಟಿರುತ್ತಾರೆ. ಹೀಗೆ ನಾನಾ ಅರ್ಥಗಳಲ್ಲಿ ಉಪಯೋಗಿಸಿರುವುದರಿಂದ ಒಂದೊಂದು ಸನ್ನಿವೇಶದಲ್ಲೂ ಅದಕ್ಕನುಗುಣವಾದ ಭಾವವನ್ನು ಅರ್ಥಮಾಡಬೇಕಾಗುತ್ತದೆ. ಭಾವಗರ್ಭಿತವಾದ ಈ ಪದದ ವಿವರಣೆಯನ್ನು ಮಾಡುವಾಗ Max Muller (ಮಾಕ್ಸ್-ಮುಲ್ಲರ್) ಎಂಬ ಆಂಗ್ಲವ್ಯಾಖ್ಯಾಕಾರನು ಈ ಪದದಿಂದ ಸೂಚಿತವಾಗುವ ಭಾವಗಳ ಗಭೀರತೆಯನ್ನು ಕೆಳಗೆ ಕಂಡಂತೆ ತಿಳಿಸಿದ್ದಾನೆ.

> In Vrishan we have one of those words which it is almost impossible to translate accurately. It accurs over and over again in the Vedic hymns and if we once know the various ideas which it either expresses or implies, we have little difficulty in understanding its import in a vague and general way, though we look in vain for corresponding terms in any modern language.......................and we shall see how difficult it would be to translate such terms without losing either the key-note that was still sounding or the harmonies which were set vibrating by it in the minds of the poets and their listeners.
>
> [F. Max Muller S. B. E. Vol. XXXII. P. 138-39]

ಪ್ರಕೃತವಾದ ಋಕ್ಕಿನಲ್ಲಿ ಮೇಲೆ ಹೇಳಿದ ಎಲ್ಲಾ ಅರ್ಥಗಳಲ್ಲೂ ಸಹ **ವೃಷನ್** ಶಬ್ದದ ಪ್ರಯೋಗವಿದೆಯೆಂದು ಹೇಳಬಹುದು.

**ಹರಿಭ್ಯಾ--ಹರೀ ಇಂದ್ರಸ್ಯ** (ನಿ. ೨-೨೮) ಇಂದ್ರನ ಅಶ್ವಗಳಿಗೆ ಈ ಹೆಸರು ಪ್ರಸಿದ್ಧವಾಗಿದೆಯೆಂದ ನಿರುಕ್ತಕಾರರು ತಿಳಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಪರಿಷಿಕ್ತಾ—**ಷಿಚಿರ್ ಕ್ಷರಣೇ. ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಚೋಃ ಕುಃ** ಎಂಬುದರಿಂದ ಧಾತು ಚಕಾರಕ್ಕೆ ಕುತ್ವ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಕ್ಕೆ ಅಪವಾದವಾಗಿ ಪೂರ್ವದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ.

**ಕ್ಷಿತೀನಾಮ್**—ಕ್ಷಿ ನಿವಾಸಗತ್ಯೋಃ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. ಷಷ್ಠೀ ಬಹುವಚನದಲ್ಲಿ **ನಾಮನ್ಯತರಸ್ಯಾಮ್** (ಪಾ ಸೂ. ೬-೧-೧೭೭) ಎಂಬುದರಿಂದ ಉದಾತ್ತಸ್ವರ ನಾಮಿಗೆ ಬರುತ್ತದೆ.

**ಪ್ರವತಾ— ಉಪಸರ್ಗಾಚ್ಛಂದಸಿ ಧಾತ್ವರ್ಥೇ** (ಪಾ. ಸೂ. ೫-೧-೧೧೮) ಎಂಬುದರಿಂದ ಪ್ರ ಎಂಬುದರ ಮೇಲೆ ವತಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ. ॥ ೩ ॥



॥ ಸಂಹಿತಾಪಾಠಃ ॥

ಅಯಂ ಯಜ್ಞೋ ದೇವಯಾ ಅಯಂ ಮಿಯೇಧ ಇಮಾ ಬ್ರಹ್ಮಾಣ್ಯಯಮಿಂದ್ರ ಸೋಮಃ ।
ಸ್ತೀರ್ಣಂ ಬರ್ಹಿರಾ ತು ಶಕ್ರ ಪ್ರ ಯಾಹಿ ಪಿಬಾ ನಿಷದ್ಯ ವಿ ಮುಚಾ ಹರೀ ಇಹ ॥ ४ ॥

॥ ಪದಪಾಠಃ ॥

ಅಯಂ । ಯಜ್ಞಃ । ದೇವಽಯಾಃ । ಅಯಂ । ಮಿಯೇಧಃ । ಇಮಾ । ಬ್ರಹ್ಮಾಣಿ । ಅಯಂ । ಇಂದ್ರ । ಸೋಮಃ ।
ಸ್ತೀರ್ಣಂ । ಬರ್ಹಿಃ । ಆ । ತು । ಶಕ್ರ । ಪ್ರ । ಯಾಹಿ । ಪಿಬ । ನಿಽಸದ್ಯ । ವಿ । ಮುಚ । ಹರೀ ಇತಿ । ಇಹ ॥ ४ ॥

॥ ಸಾಯಣಭಾಷ್ಯಂ ॥

ಅಹರ್ಗಣೇಷು ಮಧ್ಯೇಷ್ವಹಃಸು ಹಾರಿಯೋಜನಗ್ರಹಸ್ಯ ಯಾಜ್ಯಾ । ಅಗ್ನಿಷ್ಟೋಮೋಽತ್ಯ-ಗ್ನಿಷ್ಟೋಮ ಇತಿ ಖಂಡೇ ಸೂತ್ರಿತಂ । ಅಯಂ ಯಜ್ಞೋ ದೇವಯಾ ಅಯಂ ಮಿಯೇಧ ಇತೀತರೇಷು। ಆ ೬-೧೧। ಇತಿ ॥ ಹೇ ಇಂದ್ರ ಅಯಂ ಯಜ್ಞೋ ದೇವಯಾ ದೇವಾನ್ಗಚ್ಛನ್ಭವತಿ। ತಥಾಯಂ ಯಜ್ಞೋ ಮಿಯೇಧಃ । ಮೇಧಃ ಪಶುಃ । ಪಶುರ್ವೈ ಮೇಧ ಇತಿ ಹಿ ಶ್ರುತಿಃ । ಇಮೇಮಾನಿ ಬ್ರಹ್ಮಾಣಿ ಮಂತ್ರಾಃ। ಅಯಂ ಸುತಃ ಸೋಮಃ । ಸ್ತೀರ್ಣಂ ಬರ್ಹಿಃ । ಆಸನಾಯಾಸ್ತೃತಾ ದರ್ಭಾಃ । ಏತೇ ಪದಾರ್ಥಾ-ಸ್ತ್ವದುಚಿತಾ ಏವಂ ಸಂಪಾದಿತಾಃ । ಹೇ ಶಕ್ರೇಂದ್ರ ತು ಪುನಃ ಕಿಮಿತ್ಯುಕ್ತೇ ಆ ಪ್ರ ಯಾಹಿ । ಪ್ರಕರ್ಷೇಣ ಶೀಘ್ರಮಾಗಚ್ಛ । ಆಗತ್ಯ ಚ ನಿಷದ್ಯ ಬರ್ಹಿಷ್ಯುಪವಿಶ್ಯ ಪಿಬ ಸೋಮಂ। ತದರ್ಥಮಿಹಾ-ಸ್ಮಿನ್ದೇವಯಜನೇ ಹರೀ ಅಶ್ವೌ ವಿ ಮುಚ । ವಿಯೋಜಯ ॥ ಛಾಂದಸೋ ನುಮಭಾವಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಅಯಂ ಯಜ್ಞಃ**—ಈ ಯಜ್ಞವು । **ದೇವಯಾಃ**—ದೇವತೆಗಳನ್ನು ಉದ್ದೇಶಿಸಿ ಹೋಗುತ್ತದೆ । **ಅಯಂ**—ಇದು । **ಮಿಯೇಧಃ**—ಪಶುಯಜ್ಞವು (ಯಾಗಾರ್ಹವಾದ ಪಶುವು) । **ಇಮಾ**—ಇವುಗಳು । **ಬ್ರಹ್ಮಾಣಿ**—ಮಂತ್ರಗಳು । **ಅಯಂ**—ಇದು । **ಸೋಮಃ**—(ಸುತವಾದ) ಸೋಮರಸವು । **ಬರ್ಹಿಃ**—ದರ್ಭೆಯು । **ಸ್ತೀರ್ಣಂ**—(ಆಸನಾರ್ಥವಾಗಿ) ಹರಡಲ್ಪಟ್ಟಿದೆ । (ಆದುದರಿಂದ) **(ಹೇ)**

**ಶಕ್ರ**—ಎಲೈ ಇಂದ್ರನೇ । **ತು**—ಪುನಃ । **ಆ ಪ್ರ ಯಾಹಿ**—ಶೀಘ್ರವಾಗಿ ಆಗಮಿಸು । (ಬಂದು) **ನಿಷದ್ಯ**—(ದರ್ಭೆಗಳಮೇಲೆ) ಆಸೀನನಾಗಿ । **ಪಿಬ**—(ಸೋಮರಸವನ್ನು) ಪಾನಮಾಡು । (ಅದಕ್ಕೋಸ್ಕರ) **ಇಹ**— ಈ ಯಾಗಶಾಲೆಯಲ್ಲಿ । **ಹರೀ**—(ನಿನ್ನ) ಅಶ್ವಗಳೆರಡನ್ನು । **ವಿ ಮುಚ**—(ರಥದಿಂದ) ಬಿಚ್ಚಿಬಿಡು.

॥ ಭಾವಾರ್ಥ ॥

ಎಲೈ ಇಂದ್ರನೇ, ದೇವತೆಗಳ ಉದ್ದಿಶ್ಯಕವಾದ ಈ ಯಾಗವು, ಯಾಗಾರ್ಹವಾದ ಈ ಪಶುವು, ಈ ಮಂತ್ರಗಳು, ಅಭಿಷುತವಾದ ಈ ಸೋಮರಸವು, ಆಸ್ತೀರ್ಣವಾದ ಈ ದರ್ಭೆಗಳು, ಇವೆಲ್ಲವೂ ನಿನಗೋಸ್ಕರ ಸಿದ್ಧವಾಗಿವೆ; ಆದುದರಿಂದ ಎಲೈ ಇಂದ್ರನೇ, ಶೀಘ್ರವಾಗಿ ಬಂದು, ಕುದುರೆಗಳನ್ನು ರಥದಿಂದ ಬಿಚ್ಚಿಬಿಟ್ಟು, ದರ್ಭಾಸನದಲ್ಲಿ ಕುಳಿತು, ಸೋಮರಸವನ್ನು ಪಾನಮಾಡು.

English Translation.

This is the sacrifice offered to the gods : this is the offering of the victim : these are the prayers : this Indra, is the Soma juice : the sacred grass is ready strewn : come therefore, Indra, quickly, sit down, drink (the libation). here let loose your steeds.

॥ ವಿಶೇಷವಿಷಯಗಳು ॥

**ಅಹರ್ಗಣೇಷು ಮಧ್ಯೇಷ್ವಹಃಸು ಹಾರಿಯೋಜನಗ್ರಹಸ್ಯ ಯಾಜ್ಯಾ**—ಎಂಬುದಾಗಿ ಸಾಯಣರು ಈ ಮಂತ್ರದ ವಿನಿಯೋಗವನ್ನು ತಿಳಿಸಿದ್ದಾರೆ. **ಹಾರಿಯೋಜನ** ಶಬ್ದಕ್ಕೆ ಇಂದ್ರನು ತನ್ನ ಹರಿಗಳನ್ನು (ಅಶ್ವಗಳನ್ನು) ರಥಕ್ಕೆ ಯೋಜಿಸುವುದು ಎಂದು ಸಾಮಾನ್ಯವಾದ ಅರ್ಥವನ್ನು ಹೇಳಬಹುದು. ಪ್ರಕೃತವಾದ ಸನ್ನಿವೇಶದಲ್ಲಿ ಇಂದ್ರನ ಸೋಮರಸಪಾನ, ಇಂದ್ರನು ರಥಕ್ಕೆ ಅಶ್ವಗಳನ್ನು ಯೋಜಿಸುವುದು ಇವೆಲ್ಲವೂ ಸೇರಿರುವುದರಿಂದ **ಹಾರಿಯೋಜನ ಗ್ರಹ**ವೆಂಬುದು ಈ ಎಲ್ಲಾ ಅಂಶಗಳನ್ನೂ ಒಳಗೊಂಡಿರುವುದಾಗಿ ತಿಳಿಯುತ್ತದೆ. ಋಕ್ಸಂಹಿತೆಯಲ್ಲಿ **ಹಾರಿಯೋಜನ**ವೆಂಬ ಪದದ ಪ್ರಯೋಗವು ಎರಡು ಕಡೆಗಳಲ್ಲಿ ಮಾತ್ರವಿರುತ್ತದೆ. ಆದರೆ ಈ ಗ್ರಹಕ್ಕೆ ಸಂಬಂಧಪಟ್ಟ ಮಂತ್ರಗಳು ಬೇರೆಯಾಗಿರುತ್ತವೆ. ಆದುದರಿಂದ ಈ ಪದ ಪ್ರಯೋಗವಿರುವಾಗ ಭಾಷ್ಯಕಾರರು ಏನರ್ಥವನ್ನು ಮಾಡಿದ್ದಾರೆ, ಮತ್ತು ಹಾರಿಯೋಜನಗ್ರಹಕ್ಕೆ ಸಂಬಂಧಪಟ್ಟ ಋಕ್ಕುಗಳಲ್ಲಿರುವ ವಿಶೇಷಾರ್ಥವೇನು ಎಂಬ ಎರಡು ವಿಷಯಗಳನ್ನೂ ಪ್ರಕೃತದಲ್ಲಿ ಪರಿಶಿಲಿಸಬೇಕಾಗಿದೆ.

**ಏವಾ ತೇ ಹಾರಿಯೋಜನಾ ಸುವೃಕ್ತೀಂದ್ರ ಬ್ರಹ್ಮಾಣಿ ಗೋತಮಾಸೋ ಅಕ್ರನ್ ।**
**ಐಷು ವಿಶ್ವಪೇಶಸಂ ಧಿಯಂ ಧಾಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥**

(ಋ. ಸಂ. ೧-೬೧-೧೬)

ಎಂಬಲ್ಲಿ **ಹಾರಿಯೋಜನ** ಎಂಬ ಪದವು ಇಂದ್ರನಿಗೆ ವಿಶೇಷಣವಾಗಿದೆ. **ಹರ್ಯೋರಶ್ವಯೋರ್ಯೋಜನಂ ಯಸ್ಮಿನ್ರಥೇ ಸ ತಥೋಕ್ತಃ । ತಸ್ಯ ಸ್ವಾಮಿತ್ವೇನ ಸಂಬಂಧೀ ಹಾರಿಯೋಜನಃ ಇಂದ್ರಃ** ಯಾವ ಇಂದ್ರನ ರಥಕ್ಕೆ ಹರೀ ಎಂಬ ಅಶ್ವಗಳನ್ನು ಕಟ್ಟಲ್ಪಟ್ಟಿರುವುದೋ ಆ ಇಂದ್ರನು ಎಂದು ಅರ್ಥವಾಗುತ್ತದೆಂದು ಸಾಯಣರು ವಿವರಿಸಿದ್ದಾರೆ. ಆದರೆ,

**ಸ ಘಾ ತಂ ವೃಷಣಂ ರಥಮಧಿ ತಿಷ್ಠಾತಿ ಗೋವಿದಂ ।**
**ಯಃ ಪಾತ್ರಂ ಹಾರಿಯೋಜನಂ ಪೂರ್ಣಮಿಂದ್ರ ಚಿಕೇತತಿ ಯೋಜಾ ನ್ವಿಂದ್ರ ತೇ ಹರೀ ॥**

(ಋ. ಸಂ. ೧-೮೨-೪)

ಎಂಬಲ್ಲಿ **ಹಾರಿಯೋಜನಮೋತ್ಸಂಜ್ಞಕಂ ಧಾನಾ ಮಿಶ್ರಿತಂ ಸೋಮೇನ ಪೂರ್ಣಂ ಪಾತ್ರಂ ಜ್ಞಾಪಯತಿ ।** **ಹಾರಿ** ಎಂಬ ಧಾನ್ಯದಿಂದ ಮಿಶ್ರಿತವಾದ ಸೋಮರಸವೆಂದು ಅರ್ಥಮಾಡಿದೆ. **ಕೌಶೀತಕೀಬ್ರಾಹ್ಮಣದಲ್ಲಿ ಹಾರಿಯೋಜನಗ್ರಹ** ವೆಂಬ ಭಾಗದಲ್ಲಿ ಆ ಗ್ರಹಕ್ಕೆ ಸಂಬಂಧಪಟ್ಟ ಎರಡು ಋಕ್ಕುಗಳನ್ನು ಪಠಿಸಿದೆ. ಅವುಗಳಲ್ಲಿ ಮೊದಲನೆಯದು,

**ತಿಷ್ಠಾ ಸು ಕಂ ಮಘವನ್ಮಾ ಪರಾ ಗಾಃ ಸೋಮಸ್ಯ ನು ತ್ವಾ ಸುಷುತಸ್ಯ ಯಕ್ಷಿ ।**
**ಪಿತುರ್ನ ಪುತ್ರಃ ಸಿಚಮಾ ರಭೇ ತ ಇಂದ್ರ ಸ್ವಾದಿಷ್ಠಯಾ ಗಿರಾ ಶಚೀವಃ ॥**

(ಋ. ಸಂ. ೩-೫೩-೨)

ಎಂಬುದೂ, ಎರಡನೆಯದಾಗಿ, ಮೇಲೆ ಉದಾಹೃತವಾಗಿರುವ ೧-೮೨-೪ ನೇ ಋಕ್ಕೂ ಈ ಕಾಲಗಳಲ್ಲಿ ಪಠಿಸತಕ್ಕ ಎರಡು ಮಂತ್ರಗಳೆಂದು ತಿಳಿಸಿದೆ. ತೈತ್ತಿರೀಯ ಸಂಹಿತೆಯಲ್ಲಿ **ಹರಿಯೋಜನದ** ವಿಷಯವನ್ನು ಈ ರೀತಿ ತಿಳಿಸಿದೆ.

**ಹರಿರಸಿ ಹಾರಿಯೋಜನೋ ಹರ್ಯೋಃ ಸ್ಥಾತಾ ವಜ್ರಸ್ಯ ಭರ್ತಾ ಪೃಶ್ನೇಃ ಪ್ರೇತಾ ತಸ್ಯ ತೇ ದೇವ ಸೋಮೇಷ್ಟಯಜುಷಃ ಸ್ತುತಸ್ತೋಮಸ್ಯ ಶಸ್ತೋಕ್ಥಸ್ಯ ಹರಿವಂತಂ ಗ್ರಹಂ ಗೃಹ್ಣಾಮಿ ಹರೀಃ ಸ್ಥ ಹರ್ಯೋರ್ಧಾನಾಃ ಸಹ ಸೋಮಾ ಇಂದ್ರಾಯ ಸ್ವಾಹಾ ॥**

(ತೈ. ಸಂ. ೧-೪-೨೮)

ಇಲ್ಲಿ ಪ್ರಯೋಗಿಸಲ್ಪಟ್ಟಿರುವ **ಹಾರಿಯೋಜನ** ಶಬ್ದಕ್ಕೆ ಭಟ್ಟಭಾಸ್ಕರರು ವ್ಯಾಖ್ಯಾನಮಾಡುತ್ತಾ,

**ಹರಿರಸೀತಿ । ಸೋಮ ಏವೋಚ್ಯತೇ । ಹರಿರಿಂದ್ರಃ । ಸ ಏವ ತ್ವಮಸೀತೀಂದ್ರಾತ್ಮನಾ ಸೋಮಃ ಸ್ತೂಯತೇ । ಯದ್ವಾ ಹರಿರ್ಹರ್ತಾ ಅಭಿಮತಾನಾಂ ಶ್ರೇಯಸಾಮಾಹರ್ತಾ ತ್ವಮಸಿ । ಹಾರಿಯೋಜನಃ ಹರಿಃ ಅಶ್ವವಿಶೇಷಃ ಯೋಜನೋ ವಾಹನಂ ಯಸ್ಯ ಸ ಹರಿಯೋಜನಃ ಇಂದ್ರಃ ತಸ್ಯ ಸ್ವಭೂತಃ ಹಾರಿಯೋಜನಃ ಇಂದ್ರೋಽಸೀತ್ಯರ್ಥಃ ।**

ಹಾರಿಯೋಜನಶಬ್ದಕ್ಕೆ ಸೋಮಪರವಾಗಿ ಅರ್ಥಮಾಡಿದ್ದಾರೆ. **ಹರೀ** ಎಂದರೆ ಇಂದ್ರನ ಕುದುರೆಗಳು. ಆ ಕುದುರೆಗಳೇ ವಾಹನವಾಗಿ ಉಳ್ಳವನಿಗೆ **ಹರಿಯೋಜನ** ಎಂದರೆ ಇಂದ್ರನೆಂದು ಹೆಸರು. ಆ ಇಂದ್ರನಿಗೆ ಸಂಬಂಧಿಸಿದುದರಿಂದ ಹಾರಿಯೋಜನ ಎಂಬ ಹೆಸರು ಪ್ರಸಿದ್ಧವಾಯಿತು, ಎಂದು ವಿವರಿಸಿದ್ದಾರೆ. ಶತಪಥಬ್ರಾಹ್ಮಣದಲ್ಲಿ ಇದೇ ಅಂಶವನ್ನು ವಿವರಿಸುತ್ತಾ,

**ಅಥ ಹಾರಿಯೋಜನಂ ಗೃಹ್ಣಾತಿ । ಛಂದಾಂಸಿ ವೈ ಹಾರಿಯೋಜನಶ್ಛಂದಾಗ್‌ಸ್ಯೇವೈತತ್ಸಂತರ್ಪಯತಿ ತಸ್ಮಾದ್ಧಾರಿಯೋಜನಂ ಗೃಹ್ಣಾತಿ ॥**

(ಶ. ಬ್ರಾ. ೪-೪-೩-೨)

ಇತ್ಯಾದಿಯಾಗಿ **ಹಾರಿಯೋಜನ** ಗ್ರಹದ ವಿಷಯವನ್ನು ವಿವರಿಸಿದೆ. ಪ್ರಕೃತದಲ್ಲಿ ಆ ವಿಶದವಾದ ವಿವರಣೆಯು ಬೇಕಾಗಿರುವುದಿಲ್ಲ. ಆದುದರಿಂದ ಮುಂದೆ ಇದನ್ನು ವಿವರಿಸುವ ಆವಶ್ಯಕತೆಯು ಸಂಭವಿಸುವಾಗ ಈ ಗ್ರಹದ ಸ್ವರೂಪವನ್ನೂ, ಕರ್ಮಾಂಗತ್ವದ ಸ್ವರೂಪವನ್ನೂ ತಿಳಿಸಲಾಗುತ್ತದೆ. ಇಂತಹ **ಹಾರಿಯೋಜನ** ಗ್ರಹಕ್ಕೆ ಸಂಬಂ

ಧಿಸಿದ ಪ್ರಕೃತವಾದ ಮಂತ್ರದಲ್ಲಿ, **ಅಯಂ ಯಜ್ಞಃ; ಅಯಂ ಮಿಯೇಧಃ;** ಈ ಯಜ್ಞವು ಅರ್ಪಿತವಾಗಿದೆ; ಈ ಪಶುವು ಅರ್ಪಿತವಾಗಿದೆ ಇತ್ಯಾದಿಯಾಗಿ ಇಂದ್ರನನ್ನು ನಿರ್ದೇಶಿಸಿ ಹೇಳಿದೆ.

**ಯಜ್ಞಃ**— ಯಜ್ಞವೆಂದರೆ ಪೂಜಾಕರ್ಮವೆಂದು ಸ್ಥೂಲವಾದ ಅರ್ಥವಾಗುತ್ತದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ವಿಶದವಾಗಿ ತಿಳಿಸುತ್ತಾ,

> **ಯಜ್ಞಃ ಕಸ್ಮಾತ್ ಪ್ರಖ್ಯಾತಂ ಯಜತಿ ಕರ್ಮೇತಿ ನೈರುಕ್ತಾಃ । ಯಾಚ್ಞೋ ಭವತೀತಿ ವಾ ಯಜುರುನ್ನೋ ಭವತೀತಿ ವಾ ಬಹುಕೃಷ್ಣಾಜಿನ ಇತ್ಯೌಪಮನ್ಯವೋ ಯಜೂಂಷ್ಯೇನಂ ನಯಂತೀತಿ ವಾ ॥** (ನಿ. ೩-೧೯)

ಯಜ್ಞವೆಂದರೆ ಪೂಜಾಕರ್ಮವೆಂದರ್ಥವೆಂಬುದು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರ ಮತವಾಗಿದೆ. ದೇವತೆಗಳ ಸನ್ನಿಧಿಯಲ್ಲಿ ಯಾಚ್ಞಾಕರ್ಮವೆಂದು ಕೆಲವರೂ, ಯಜುರ್ಮಂತ್ರಗಳಿಂದ ಪ್ರೋಕ್ಷಿಸಲ್ಪಡತಕ್ಕದಾದುದರಿಂದ ಈ ಹೆಸರೆಂದು ಇನ್ನು ಕೆಲವರೂ, ಈ ಕರ್ಮದಲ್ಲಿ ಕೃಷ್ಣಾಜಿನದ ಸಂಖ್ಯೆಯು ಅಧಿಕವಾಗಿರುವುದರಿಂದ ಈ ಹೆಸರೆಂದು ಇನ್ನು ಕೆಲವರೂ, ಅಥವಾ ಯಜುರ್ಮಂತ್ರಗಳಿಂದ ಮುಂದುವರೆಯುವುದಾದುದರಿಂದ ಈ ಹೆಸರೆಂದು ಮತ್ತೆ ಕೆಲವರೂ ಅಭಿಪ್ರಾಯಪಡುತ್ತಾರೆಂದು ಬೇರೆ ಬೇರೆ ನಿರ್ವಚನಗಳನ್ನು ತಿಳಿಸಿದೆ.

**ಮಿಯೇಧಃ**—ಮಿಯೇಧಪದವನ್ನು ಇಲ್ಲಿ ಪಶು ಶಬ್ದಕ್ಕೆ ಪರ್ಯಾಯಪದವಾಗಿ ಉಪಯೋಗಿಸಿದೆ. ಮಿಯೇಧವೆಂದರೆ ಮೇಧಾರ್ಹವೆಂದರ್ಥ. ಯಜ್ಞಾರ್ಹ ಅಥವಾ ಸ್ತುತ್ಯರ್ಹ ಎಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ಯಜ್ಞಪರ್ಯಾಯವಾಗಿಯೂ ಕೆಲವು ಕಡೆಗಳಲ್ಲಿ ಇದನ್ನು ಪಯೋಗಿಸಿದೆ. ಉದಾಹರಣೆಗೆ—

> **ಆ ದೇವಾನಾಮುಗ್ರಯಾವೇಹ ಯಾತು ನರಾಶಂಸೋ ವಿಶ್ವರೂಪೇಭಿರಶ್ವೈಃ ।**
> **ಋತಸ್ಯ ಪಥಾ ನಮಸಾ ಮಿಯೇಧೋ ದೇವೇಭ್ಯೋ ದೇವತಮಃ ಸುಷೂದತ್ ॥**
> (ಋ. ಸಂ. ೧೦-೭೦-೨)

ಎಂಬಲ್ಲಿ ಮಿಯೇಧಃ **ಮೇಧ್ಯಃ ಯಜ್ಞಹಿತಃ ಸ್ತುತಿಯೋಗ್ಯೋ ವಾ**—ಮೇಧಾರ್ಹನು, ಯಜ್ಞಾರ್ಹನು ಮತ್ತು ಸ್ತುತಿಯೋಗ್ಯನು ಎಂದು **ಅಗ್ನಿ**ಗೆ ವಿಶೇಷಣವಾಗಿದೆ. ಮತ್ತು,

> **ಅಗ್ನಿಂ ಹೋತಾರಂ ಪ್ರ ವೃಣೇ ಮಿಯೇಧೇ ಗೃತ್ಸಂ ಕವಿಂ ವಿಶ್ವವಿದಮಮೂರಂ ।**
> **ಸ ನೋ ಯಕ್ಷದ್ದೇವತಾತಾ ಯಜೀಯಾನ್ರಾಯೇ ವಾಜಾಯ ವನತೇ ಮಘಾನಿ ॥**
> (ಋ.ಸಂ. ೩-೧೯-೧)

ಎಂಬಲ್ಲಿ **ಮಿಯೇಧೇ ಅಸ್ಮಾಭಿಃ ಕ್ರಿಯಮಾಣೇಽಸ್ಮಿನ್ ಯಜ್ಞೇ ।** ನಮ್ಮಿಂದ ನೆರವೇರಿಸಲ್ಪಡತಕ್ಕ ಈ ಯಜ್ಞದಲ್ಲಿ ಎಂದು ಯಜ್ಞಕ್ಕೆ ಪರ್ಯಾಯಪದವಾಗಿ ಉಪಯೋಗಿಸಲ್ಪಟ್ಟಿದೆ.

ಪ್ರಕೃತವಾದ ಋಕ್ಕಿನಲ್ಲಿ **ಮೇಧಃ ಪಶುಃ। ಮಿಯೇಧ** ಪದವು ಯಜ್ಞಾರ್ಹವಾದ **ಪಶುವಿನ** ಪರ್ಯಾಯ ಪದವಾಗಿದೆಯೆಂದು ಭಾಷ್ಯಕಾರರು ತಿಳಿಸಿ ತಮ್ಮ ಅರ್ಥಕ್ಕೆ ಸಮರ್ಥನೆಯನ್ನು ತೋರಿಸಲು **ಪಶುರ್ವೈ ಮೇಧಃ** ಎಂಬ ಶ್ರುತಿವಾಕ್ಯವನ್ನುದಹರಿಸಿದ್ದಾರೆ. ಇದರಂತೆಯೇ, ಶತಪಥಬ್ರಾಹ್ಮಣದಲ್ಲಿಯೂ ಸಹ

> **ಕತಮೋ ಯಜ್ಞ ಇತಿ ಪಶವ ಇತಿ।** (ಶ. ಬ್ರಾ. ೧೧-೬-೩-೯-)

ಎಂಬ ವಾಕ್ಯದಿಂದ ಯಜ್ಞವೇ ಪಶುವೆಂದೂ ಅಥವಾ ಪಶುವೇ ಯಜ್ಞವೆಂದು ಈ ಎರಡು ಪದಗಳಿಗೂ ತಾದಾತ್ಮ್ಯವನ್ನು ತೋರಿಸಿ ವರ್ಣಿಸಿದೆ. ಅದೇ ಆಧಾರದ ಮೇಲೆ ಪ್ರಕೃತವಾದ ಋಕ್ಕಿನಲ್ಲಿಯೂ **ಪಶು**ವೆಂದರ್ಥಮಾಡಬಹುದು. ಇದೇ ನಿನ್ನ ಪಶುವು ಎಂದು ಇಂದ್ರನಿಗರ್ಪಿಸಿದೆ.

**ಶಕ್ರ— ಸರ್ವಕಾರ್ಯಸಮರ್ಥೇಂದ್ರ**—ಸಕಲಕಾರ್ಯಗಳಲ್ಲಿಯೂ ಸಮರ್ಥನಾದವನು ಎಂದು ಇಂದ್ರನ ಸಾಮರ್ಥ್ಯವನ್ನು ಸೂಚಿಸುತ್ತದೆ. ಋಕ್ಸಂಹಿತೆಯಲ್ಲಿ ಈ ವಿಶೇಷಣವು ಇತರ ದೇವತೆಗಳಪರವಾಗಿಯೂ ಉಪಯೋಗಿಸಲ್ಪಟ್ಟಿದೆ. ಆದರೆ ಇದು ಅಪರೂಪ. ಅತ್ಯಧಿಕವಾದ ಇಂದ್ರನಸಾಮರ್ಥ್ಯವನ್ನೇ ವರ್ಣಿಸುವ ವಿಶೇಷಣವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ದೇಪಯಾಃ**—ಯಾ ಪ್ರಾಪಣೇ. ಧಾತು. ಕ್ವಿಪ್ ಪ್ರತ್ಯಯ. ಪ್ರಥಮಾ ಏಕವಚನಾಂತರೂಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಿಯೇಧಃ**—ಮೇಧಃ ಎಂದು ರೂಪವಾದಾಗ ಛಾಂದಸವಾಗಿ ವರ್ಣವಿಕಾರ ಬಂದಿದೆ.

**ಇಮಾ—ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕ ಬಹುವಚನದಲ್ಲಿ ಶಿಗೆ ಲೋಪ

**ಸ್ತೀರ್ಣಮ್—**ಸ್ತೃಞ್ ಆಚ್ಛಾದನೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿಗೆ ಇತ್ವ. ರಪರವಾಗಿ ಬರುತ್ತದೆ. **ಹಲಿ ಚ** ಎಂಬುದರಿಂದ ದೀರ್ಘ. **ರದಾಭ್ಯಾಂ ನಿಷ್ಠಾತೋ ನಃ—**(ಪಾ ಸೂ. ೮-೨-೪೨) ಎಂಬುದರಿಂದ ಕ್ತ ಪ್ರತ್ಯಯಕ್ಕೆ ನತ್ವ. **ರಷಾಭ್ಯಾಂ ನೋ—**ಎಂಬುದರಿಂದ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಿಬ**—ಪಾ. ಪಾನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ನಿಷದ್ಯ—**ಷದ್ಲೃ ವಿಶರಣಗತ್ಯವಸಾದನೇಷು ಧಾತು. **ಕ್ತ್ವಾ** ಪ್ರತ್ಯಯ ಬಂದಾಗ **ಸಮಾಸೇ ನಞ್-ಪೂರ್ವೇ ಕ್ತ್ವೋ ಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಅದಕ್ಕೆ ಲ್ಯಬಾದೇಶ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. **ಉಪಸರ್ಗಾತ್ ಸುನೋತಿ—**(ಪಾ. ಸೂ. ೮-೩-೬೫.) ಎಂಬುದರಿಂದ ಷತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮುಚ** - ಮುಚ್ಲೃ ಮೋಕ್ಷಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ಶೇ ಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ಬರಬೇಕಾದ ನುಮಾಗಮವು ಛಾಂದಸವಾಗಿ ಬರುವುದಿಲ್ಲ. ಹಿಂದಿನಂತೇ **ದ್ವ್ಯಚೋಽತಸ್ತಿಙಃ** ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಓ ಸುಷ್ಟುತ ಇಂದ್ರ ಯಾಹ್ಯರ್ವಾಙುಪ ಬ್ರಹ್ಮಾಣಿ ಮಾನ್ಯಸ್ಯ ಕಾರೋಃ ।
ವಿದ್ಯಾಮ ವಸ್ತೋರವಸಾ ಗೃಣಂತೋ ವಿದ್ಯಾಮೇಷಂ ವೃಜನಂ ಜೀರದಾನುಂ ॥

॥ ಪದಪಾಠಃ ॥

ಓ ಇತಿ । ಸುऽಸ್ತುತಃ । ಇಂದ್ರ । ಯಾಹಿ । ಅರ್ವಾಙ್ । ಉಪ । ಬ್ರಹ್ಮಾಣಿ । ಮಾನ್ಯಸ್ಯ । ಕಾರೋಃ ।
ವಿದ್ಯಾಮ । ವಸ್ತೋಃ । ಅವಸಾ । ಗೃಣಂತಃ । ವಿದ್ಯಾಮ । ಇಷಂ । ವೃಜನಂ । ಜೀರऽದಾನುಂ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಸುಷ್ಟುತೋऽಸ್ಮಾಭಿಃ ಸಮ್ಯಕ್ಸ್ತುತಃ ಸನ್ನರ್ವಾಙಸ್ಮದಭಿಮುಖಮಾ ಯಾಹಿ । ಆಗಚ್ಛೈವ । ಮಾ ವಿಲಂಬಯ । ಕಿಮುದ್ದಿಶ್ಯ । ಮಾನ್ಯಸ್ಯ ಮಾನನೀಯಸ್ಯ ಕಾರೋಃ ಸ್ತೋತುರ್ಹೋತುಃ ಕರ್ತುರ್ಯಜಮಾನಸ್ಯ ವಾ ಬ್ರಹ್ಮಾಣಿ ಮಂತ್ರಾನುಪೋಪಲಕ್ಷ್ಯ । ಗೃಣಂತಃ ಸ್ತುವಂತೋऽಭಿಮತಂ ಶಬ್ದಯಂತೋ ವಾ ವಯಮವಸಾ ತ್ವದ್ರಕ್ಷಣೇನ ರಕ್ಷಿತಾಃ ಸಂತೋ ವಸ್ತೋರ್ವಸ್ತುಂ ಸುಖೇನ ಸಂಸ್ಥಾತುಮಹನಿ ವಾ ಸರ್ವೇಷ್ವಹಃಸ್ವನ್ನಾದಿಕಂ ವಿದ್ಯಾಮ । ಲಭೇಮಹಿ । ವಿದ್ಯಾಮೇತ್ಯಾದಿ ವ್ಯಾಖ್ಯಾತಂ ॥**

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಸುಷ್ಟುತಃ**—(ನಮ್ಮಿಂದ) ಚೆನ್ನಾಗಿ ಸ್ತುತನಾಗಿ । **ಮಾನ್ಯಸ್ಯ**—ಮಾನ್ಯನಾದ । **ಕಾರೋಃ**—ಸ್ತೋತೃವಾದ ಹೋತೃವಿನ ಅಥವಾ ಯಾಗಕರ್ತೃವಾದ ಯಜಮಾನನ । **ಬ್ರಹ್ಮಾಣಿ**—ಮಂತ್ರಗಳನ್ನು । **ಉಪ**—ಉದ್ದೇಶಿಸಿ । **ಅರ್ವಾಙ್**—(ನಮಗೆ) ಅಭಿಮುಖನಾಗಿ । **ಓ ಯಾಹಿ**—ಖಂಡಿತವಾಗಿ ಬಾ । **ಗೃಣಂತಃ**—ಸ್ತುತಿಕರ್ತೃಗಳಾದ ಅಥವಾ ಅಭಿಮತವನ್ನು ನಿನಗೆ ಹೇಳಿಕೊಳ್ಳುತ್ತಿರುವ ನಾವು । **ಅವಸಾ**—ನಿನ್ನ ರಕ್ಷಣೆಯಿಂದ (ರಕ್ಷಿತರಾಗಿ) । **ವಸ್ತೋಃ**—(ಸುಖವಾಗಿ) ವಾಸಮಾಡಲು ಅಥವಾ ಎಲ್ಲಾ ದಿನಗಳಲ್ಲೂ ಅನ್ನಾದಿಗಳನ್ನು । **ವಿದ್ಯಾಮ**—ಪಡೆಯೋಣ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ** (ನಿನ್ನನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮಿಂದ ಚೆನ್ನಾಗಿ ಸ್ತುತನಾಗಿ, ಯಾಗಕರ್ತೃವಿನ ಸ್ತುತಿರೂಪಮಂತ್ರಗಳನ್ನು ಉದ್ದೇಶಿಸಿ ಆಗಮಿಸು; ನಿನ್ನಿಂದ ರಕ್ಷಿತರಾದ ನಮಗೆ ಸುಖವಾಗಿ ವಾಸಮಾಡುವುದಕ್ಕೆ, ಅನ್ನ, ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸು.

English Translation.

Glorified by us, Indra, come to (our) presence to accept the prayers of the venerable offerer (of the oblation); so that we may ever enjoy prosperity through your protection, and thence obtain food, strength, and long life.

॥ ವಿಶೇಷವಿಷಯಗಳು ॥

ಬ್ರಹ್ಮಾಣಿ—ಬ್ರಹ್ಮಶಬ್ದಕ್ಕೆ ಇರತಕ್ಕ ಅನೇಕಾರ್ಥಗಳನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಇದರ ಹಿಂದಿನ ಋಕ್ಕಿನಲ್ಲಿಯೂ ಮಂತ್ರಗಳು ಎಂಬರ್ಥದಲ್ಲಿ ಈ ಪದವನ್ನು ಪ್ರಯೋಗಿಸಿದೆ. ಪರಿವೃಢವಾದ ಮಂತ್ರಗಳೆಂದರ್ಥ.

**ಕಾರೋಃ—ಸ್ತೋತುರ್ಹೋತುಃ ಕರ್ತುರ್ಯಜಮಾನಸ್ಯ ।** ಸ್ತುತಿಕರ್ತನೂ ಯಜ್ಞಕರ್ತನೂ ಆದವನ್ನ ಎಂದು ಅರ್ಥಮಾಡಿದೆ. ನಿರುಕ್ತಕಾರರು **ಕಾರು** ಶಬ್ದವನ್ನು **ಸ್ತೋತೃ** ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೧೯) ಬೃಹದ್ದೇವತಾಕಾರರು ಈ ಪದವನ್ನು **ಕವಿಗಳು** ಸೂಕ್ತದ್ರಷ್ಟೃಗಳಾದ ಋಷಿಗಳು ಎಂಬರ್ಥದಲ್ಲಿ ಉಪಯೋಗಿಸಿದ್ದಾರೆ.

**ಅಗ್ನೇಸ್ತು ಯಾನಿ ಸೂಕ್ತಾನಿ ಪಂಚ ನಾಮಾನಿ ಕಾರವಃ ।**
**ಷಡ್ವಿಂಶತಿಸ್ತಥೇಂದ್ರಸ್ಯ ಪ್ರಾಹುಃ ಸೂರ್ಯಸ್ಯ ಸಪ್ತ ಚ ॥**

(ಬೃ. ದೇ. ೨-೨೨)

**ಪೃಥಕ್ತ್ವೇನ ಸಮಾಸೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥**

(ಬೃ. ದೇ. ೨-೨೮)

ಎಂಬ ವಾಕ್ಯಗಳಲ್ಲಿ **ಕಾ-ುಗಳು** ಸ್ತುತಿಸುತ್ತಾರೆ ಎಂದು ಕವಿಪರ್ಯಾಯವಾದ ಪದವಾಗಿ ಉಪಯೋಗಿಸಿದ್ದಾರೆ. ಋಕ್ಸಂಹಿತೆಯಲ್ಲಿಯೂ ಸಹ,

**ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ ।**
**ಉಭೇ ವಾಚೌ ವದತಿ ಸಾಮಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನು ರಾಜತಿ ।**

(ಋ. ಸಂ. ೨-೪೩-೧)

**ವಿ ಚೇದುಚ್ಛಂತ್ಯಶ್ವಿನಾ ಉಷಾಸಃ ಪ್ರ ವಾಂ ಬ್ರಹ್ಮಾಣಿ ಕಾರವೋ ಭರಂತೇ ।**
**ಊರ್ಧ್ವಂ ಭಾನುಂ ಸವಿತಾ ದೇವೋ ಅಶ್ರೇದ್ಬೃಹದಗ್ನಯಃ ಸಮಿಧಾ ಜರಂತೇ ॥**

(ಋ. ಸಂ. ೭-೭೨-೪)

ಇತ್ಯಾದಿ ಋಕ್ಕುಗಳಲ್ಲಿ **ಸ್ತೋತಾರಃ** ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ತುತಿಕರ್ತನಾದ ಯಜಮಾನನ ಎಂದರ್ಥ

॥ ವ್ಯಾಕರಣಪ್ರಕ್ರಿಯಾ ॥

**ಸುಷ್ಟುತಃ**—ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸು) ಉದಾತ್ತಸ್ವರ ಬರುತ್ತದೆ.

**ಕಾರೋಃ**—ಡುಕೃಞ್ ಕರಣೇ. ಧಾತು. **ಕೃವಾಪಾ**—ಎಂಬುದರಿಂದ ಉಣ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ವೃದ್ಧಿ. ರಪರವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ವಸ್ತೋಃ**—ವಸ ನಿವಾಸೇ. ಧಾತು. ತುಮುನರ್ಥತೋರುವಾಗ **ಈಶ್ವರೇ ತೋಸುನ್ ಕಸುನೌ** (ಪಾ.ಸೂ. ೩-೪-೧೬) ಎಂಬುದರಿಂದ ತೋಸುನ್ ಪ್ರತ್ಯಯ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗೃಣಂತಃ**—ಗೄ ಶಬ್ದೇ. ಧಾತು. ಲಟಿಗೆ ಶತ್ರಾದೇಶ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಋಕಾರದ ಪರದಲ್ಲಿರುವುದರಿಂದ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ॥ ೫ ॥

# ನೂರ ಎಪ್ಪತ್ತೆಂಟನೆಯ ಸೂಕ್ತವು

**ಯದ್ಧ ಸ್ಯೇತಿ ಪಂಚರ್ಚಂ ಚತುರ್ದಶಂ ಸೂಕ್ತಮಾಗಸ್ತ್ಯಮೈಂದ್ರಂ ತ್ರೈಷ್ಟುಭಂ । ಯದ್ಧ ಸ್ಯೇತ್ಯನುಕ್ರಮಣಿಕಾ ॥ ವಿಶೇಷವಿನಿಯೋಗಃ ಪೂರ್ವವತ್ ॥**

ಅನುವಾದವು— **ಯದ್ಧ ಸ್ಯಾ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಯದ್ಧ ಸ್ಯಾ** ಎಂದು ಮೊದಲಾಗಿ ಹೇಳಿರುವುದು. ಹಿಂದೆ ಹೇಳಿದಂತೆ ಎಂದರೆ ಹಿಂದಿನ ಸೂಕ್ತಕ್ಕೆ ಹೇಳಿರುವ ಸ್ತೋಮವೃದ್ಧಿಗಾಗಿ ಶಸ್ತ್ರಮಂತ್ರಗಳ ಪಠನೆಗಾಗಿ ಈ ಸೂಕ್ತದ ವಿಶೇಷ ವಿನಿಯೋಗವಿರುವುದು.

## ಸೂಕ್ತ—೧೭೮

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೮ ॥
ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಅಗಸ್ತ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯದ್ಧ ಸ್ಯಾ ತ ಇಂದ್ರ ಶ್ರುಷ್ಟಿರಸ್ತಿ ಯಯಾ ಬಭೂಥ ಜರಿತೃಭ್ಯ ಊತೀ ।

ಮಾ ನಃ ಕಾಮಂ ಮಹಯಂತಮಾ ಧಗ್ವಿಶ್ವಾ ತೇ ಅಶ್ಯಾಂ ಪರ್ಯಾಪ ಆಯೋಃ ॥

॥ ಪದಪಾಠಃ ॥

ಯತ್ । ಹ । ಸ್ಯಾ । ತೇ । ಇಂದ್ರ । ಶ್ರುಷ್ಟಿಃ । ಅಸ್ತಿ । ಯಯಾ । ಬಭೂಥ । ಜರಿತೃಽಭ್ಯಃ । ಊತೀ ।

ಮಾ । ನಃ । ಕಾಮಂ । ಮಹಯಂತಂ । ಆ । ಧಕ್ । ವಿಶ್ವಾ । ತೇ । ಅಶ್ಯಾಂ । ಪರಿ । ಆಪಃ । ಆಯೋಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯದ್ಧ್ಯಾ ಸ್ಯಾಸೌ ಪ್ರಸಿದ್ಧಾ ಶ್ರುಷ್ಟಿಃ ಸರ್ವತ್ರ ಶ್ರೂಯಮಾಣಾ ಸಮೃದ್ಧಿಸ್ತೇ ತವಾಸ್ತಿ ಯಯಾ ಜರಿತೃಭ್ಯಃ ಸ್ತೋತೃಭ್ಯ ಊತ್ಯೂತ್ಯೈ ರಕ್ಷಣಾಯ ಬಭೂಥ ಸಮರ್ಥೋ ಭವಸಿ ನೋಽಸ್ಮಾಕಂ ಮಹಯಂತಮಸ್ಮಾನ್ಮಹತಃ ಕುರ್ವಾಣಂ ಕಾಮಮಭೀಷ್ಟಂ ಮಾ ಧಕ್ । ಮಾ ಧಾಕ್ಷೀಃ । ತೇ ತವ ಸಂಬಂಧೀನಿ ವಿಶ್ವಾ ಸರ್ವಾಣಿ ಭೋಗಜಾತಾನ್ಯಾಪ ಆಪ್ತವ್ಯಾನಿ । ಯದ್ವಾ । ವಿಶ್ವಾ ಸರ್ವಾ ಆಪ ಆಪ್ತಾಃ ಶ್ರುತಯ ಆಯೋರ್ಮನುಷ್ಯಸ್ಯೋಚಿತಾಃ । ಪರ್ಯಶ್ಯಾಂ । ಪರಿತೋ ವ್ಯಾಪ್ನುಯಾಂ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಯತ್ ಹ**— ಯಾವ ಕಾರಣದಿಂದ । **ಸ್ಯಾ**—ಈ ಪ್ರಸಿದ್ಧವಾದ | **ಶ್ರುಷ್ಟಿಃ**—ಸರ್ವತ್ರಶ್ರೂಯಮಾಣವಾದ ಸಮೃದ್ಧಿಯು | **ತೇ**—ನಿನಗೆ | **ಅಸ್ತಿ**—ಇದೆಯೋ (ಮತ್ತು)| **ಯಯಾ**—ಯಾವ ಸಮೃದ್ಧಿಯಿಂದಲೇ | **ಜರಿತೃಭ್ಯಃ**—ಸ್ತೋತೃಗಳ | **ಊತೀ**—ರಕ್ಷಣೆಗೆ | **ಬಭೂಥ**—ಸಮರ್ಥನಾಗಿದ್ದೀಯೋ | **(ತತ್**—ಆದಕಾರಣ) | **ನಃ**—ನಮಗೆ | **ಮಹಯಂತಂ**—ಮಹತ್ತ್ವವನ್ನುಂಟುಮಾಡುವ | **ಕಾಮಂ**—ನಮ್ಮ ಅಭೀಷ್ಟವನ್ನು| **ಮಾ ಆ ಧಕ್**—ವಿಫಲಗೊಳಿಸಬೇಡ | **ಆಯೋಃ**—ಮನುಷ್ಯನಿಗೆ ಉಚಿತವೂ | **ತೇ**—ನಿನಗೆ ಸಂಬಂಧಿಸಿದವೂ | **ವಿಶ್ವಾ ಆಪಃ**—ಪ್ರಾಪ್ತವ್ಯವೂ ಆದ ಸಮಸ್ತಭೋಗಾದಿಗಳನ್ನು | **ಪರಿ ಅಶ್ಯಾಂ**—(ನಿನ್ನನುಗ್ರಹದಿಂದ) ಪಡೆಯುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಸರ್ವತ್ರ ಪ್ರಸಿದ್ಧವೂ, ನಿನ್ನ ಸ್ತೋತೃಗಳನ್ನು ರಕ್ಷಿಸಲು ಸಮರ್ಥವೂ ಆದ ಸಮೃದ್ಧಿಕಾರಕ ಶಕ್ತಿಯು ನಿನ್ನಲ್ಲಿದೆ; ಆದುದರಿಂದ, ಮಹತ್ವಾಕಾಂಕ್ಷಿಗಳಾದ ನಮ್ಮ ಮನೋರಥವನ್ನು ವಿಫಲಗೊಳಿಸಬೇಡ. ಮತ್ತು ನಿನಗೆ ಸಂಬಂಧಿಸಿದ ಭೋಗಗಳಲ್ಲಿ ಮನುಷ್ಯರಿಗೆ ಯೋಗ್ಯವಾದವುಗಳನ್ನು ನಾವು ಪಡೆಯುವಂತೆ ಅನುಗ್ರಹಿಸು.

## English Translation

Inasmuch, Indra, as the praise by which you are (induced to bestow) protection on your adorers is heard (by all), therefore disappoint not the desire (that would raise us) to greatness: may I obtain, through your (favour), all things that are obtainable by man.

॥ ವಿಶೇಷವಿಷಯಗಳು ॥

**ಶ್ರುಷ್ಟಿಃ—ಶ್ರುಷ್ಟೀತಿ ಕ್ಷಿಪ್ರನಾಮ ಆಶು ಅಷ್ಟೀತಿ ।** ಶೀಘ್ರವಾಗಿ ವ್ಯಾಪಿಸುವುದು ಎಂದು ತಾತ್ಪರ್ಯವನ್ನು ಕೊಡುವ **ಶ್ರುಷ್ಟಿ** ಶಬ್ದವನ್ನು ನಿರುಕ್ತಕಾರರು **ಕ್ಷಿಪ್ರ** ನಾಮಗಳಲ್ಲಿ ಸೇರಿಸಬೇಕೆಂದು ತಿಳಿಸಿದ್ದಾರೆ. (ನಿ. ೬-೧೨) ಮತ್ತು ಈ ಪದದ ಪ್ರಯೋಗವನ್ನು ತಿಳಿಸಲು ಋಕ್ಸಂಹಿತೆಯು,

**ತಾ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ।**

(ಋ. ಸಂ. ೭-೩೯-೪)

ಎಂಬ ಋಕ್ಕನ್ನುದಾಹರಿಸಿ ವಿವರಿಸಿದ್ದಾರೆ. ಸಾಯಣರೂ ಸಹ ಕ್ಷಿಪ್ರವೆಂದೇ ಅರ್ಥಮಾಡಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ **ಶ್ರುಷ್ಟಿಃ ಸರ್ವತ್ರ ಶ್ರೂಯಮಾಣಾ ಸಮೃದ್ಧಿಃ ।** ಸಕಲ ಪ್ರದೇಶಗಳಲ್ಲಿ ಪ್ರಸಿದ್ಧವಾದ ಸಂಪತ್ಸಮೃದ್ಧಿಯೆಂದರ್ಥಮಾಡಿದ್ದಾರೆ. ಆ ಅರ್ಥವನ್ನು ಹೇಳಿದರೆ ಇಲ್ಲಿ ಮೂಲಧಾತುವೇ ಬೇರೆಯಾಗಬೇಕಾಗುತ್ತದೆ. ಇದೇ ಪದವನ್ನು ಇತರ ಕಡೆಗಳಲ್ಲಿ ಹೇಗೆ ವಿವರಿಸಿರುವರು ಎಂಬುದನ್ನು ಗಮನಿಸಿದರೆ,

**ವನೇಷು ಜಾಯುರ್ಮರ್ತೇಷು ಮಿತ್ರೋ ವೃಣೀತೇ ಶ್ರುಷ್ಟಿಂ ರಾಜೇವಾಜುರ್ಯಂ ।**

(ಋ. ಸಂ. ೧-೬೭-೧)

ಎಂಬ ಋಕ್ಕಿನಲ್ಲಿ ನಿರುಕ್ತಕಾರರ ನಿರ್ವಚನವನ್ನೇ ಉದಾಹರಿಸಿ (ನಿ ೬-೧೨) ಕರ್ಮಗಳನ್ನು ಕ್ಷಿಪ್ರವಾಗಿ ಆಚರಿಸುವವನಾದುದರಿಂದ ಯಜಮಾನನಿಗೆ ಪರ್ಯಾಯವಾಗಿ ಈ ಪದದ ಪ್ರಯೋಗವಿದೆಯೆಂದು ತಿಳಿಸಿದ್ದಾರೆ. ಹೀಗೆಯೇ ಸಂದರ್ಭಕ್ಕನುಸಾರವಾಗಿ ಬೇರೆ ಬೇರೆ ಅರ್ಥಗಳೂ ಸಾಧ್ಯವಾಗುತ್ತದೆ. ಉದಾಹರಣೆಗೆ—

**ನಕಿಷ್ಟ ಏತಾ ವ್ರತಾ ಮಿನಂತಿ ನೃಭ್ಯೋ ಯದೇಭ್ಯಃ ಶ್ರುಷ್ಟಿಂ ಚಕರ್ಥ ।**

(ಋ. ಸಂ. ೧-೬೯-೪)

ಎಂಬ ಋಕ್ಕಿನಲ್ಲಿ "**ಶು ಆಶು ಅಶ್ನುತೇ ವ್ಯಾಪ್ನೋತೀತಿ ಶ್ರುಷ್ಟಿರ್ಯಜ್ಞಫಲರೂಪಂ ಸುಖಂ**" ಯಜ್ಞಾಚರಣೆಯೊಡನೆಯೇ ಶೀಘ್ರವಾಗಿ ಯಜಮಾನನನ್ನು ಸೇರುವುದರಿಂದ ತತ್ಫಲವಾದ **ಸುಖಕ್ಕೆ** ಪರ್ಯಾಯವಾಗಿ ಈ ಪದದ ಪ್ರಯೋಗವಿದೆ. ಹೀಗೆಯೇ ಋಕ್ಸಂಹಿತೆಯಲ್ಲಿರುವ,

**ಗಿರಾ ಚ ಶ್ರುಷ್ಟಿಃ ಸಭರಾ ಅಸನ್ನೋ ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ।**

(ಋ. ಸಂ. ೧೦-೧೦೧-೩)

ಎಂಬಲ್ಲಿ ಅನ್ನವೆಂದರ್ಥಮಾಡಿದೆ. ಮತ್ತು,

**ಆಪೀ ವೋ ಅಸ್ಮೇ ಪಿತರೇವ ಪುತ್ರೋಗ್ರೇವ ರುಚಾ ನೃಪತೀವ ತುರ್ಯೈ ।**<br>
**ಇರ್ಯೇವ ಪುಷ್ಟ್ಯೈ ಕಿರಣೇವ ಭುಜ್ಯೈ ಶ್ರುಷ್ಟೀವಾನೇವ ಹವಮಾ ಗಮಿಷ್ಟಂ ॥**

(ಋ. ಸಂ. ೧೦-೧೦೬-೪)

ಎಂಬಲ್ಲಿ ಎರಡು ವಿಧವಾಗಿಯೂ ವಿವರಿಸಿದ್ದಾರೆ. ಮೊದಲನೆಯದಾಗಿ **ಶ್ರುಷ್ಟೀವಾನಿವ ಕ್ಷಿಪ್ರವಂತೌ ಅಶ್ವಾವಿವ** ಎಂದೂ ಎರಡನೆಯದಾಗಿ **ಸುಖವಂತೌ ಪುರುಷಾವಿವ** ಎಂದೂ ತಾತ್ಪರ್ಯವನ್ನು ಹೇಳಿದ್ದಾರೆ. ಹೀಗೆ ಈ ಪದಕ್ಕೆ ಸಂದರ್ಭಾನುಸಾರವಾದ ಅರ್ಥವನ್ನು ಹೇಳಬೇಕಾಗುತ್ತದೆ. Monier Williams ಎಂಬ ಪಂಡಿತನು ತನ್ನ Sanskrit-English Dictonary ಯಲ್ಲಿ ಈ ಪದಕ್ಕೆ obedience, willing service ಎಂಬರ್ಥವನ್ನು ಸೇರಿಸಿದ್ದಾನೆ. ಅದಕ್ಕೂ ಕ್ಷಿಪ್ರವೆಂದೇ ತಾತ್ಪರ್ಯವಾಗುತ್ತದೆ. ಇತರರ ಇಷ್ಟವನ್ನನುಸರಿಸಿ ಒಡನೆಯೇ ಆ ಇಚ್ಛಾನುಸಾರವಾದ ಕಾರ್ಯವನ್ನು ಮಾಡುವುದು ಎಂಬರ್ಥವನ್ನು ಸೂಚಿಸುವಾಗ ಈ ಪದವು ಪ್ರಯೋಗಿಸಲ್ಪಡುತ್ತದೆಯೆಂದು ಇದರಿಂದ ತಿಳಿಯುತ್ತದೆ. ಒಟ್ಟಿನಲ್ಲಿ ಸನ್ನಿವೇಶಕ್ಕನುಗುಣವಾಗಿ ಈ ಪದಕ್ಕೆ ಅರ್ಥವನ್ನು ಹೇಳಬೇಕು. ಪ್ರಕೃತವಾದ ಋಕ್ಕಿನಲ್ಲಿ "ಶೀಘ್ರವಾಗಿ ಖ್ಯಾತಿಯನ್ನು ಪಡೆಯತಕ್ಕ ಸಂಪತ್ಸಮೃದ್ಧಿ"ಯೆಂದು ಸಾಯಣರ ವಿವರಣೆಯು ಇರುತ್ತದೆ.

**ಆಯೋಃ—ಆಯು** ಶಬ್ದಕ್ಕೆ ಇಲ್ಲಿ ಮನುಷ್ಯನೆಂದರ್ಥಮಾಡಿದೆ. ಈ ಪದಕ್ಕೂ ಸಹ ಸಂದರ್ಭಾನುಸಾರವಾಗಿಯೇ ಅರ್ಥವನ್ನು ಮಾಡಬೇಕಾಗಿರುತ್ತದೆ. ಸಂಚಾರಾರ್ಹತೆಯನ್ನು ಪಡೆದಿರುವ ವ್ಯಕ್ತಿಯಾಗಲಿ ಅಥವಾ ಸಮುದಾಯವಾಗಲಿ ಈ ಪದದಿಂದ ಸೂಚಿತವಾಗುತ್ತದೆ. ನಿರುಕ್ತಕಾರರೂ ಸಹ ಈ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ. ಹೇಗೆಂದರೆ.—ನಿರುಕ್ತದಲ್ಲಿ,

**ಮಾ ನೋ॑ ಮಿ॒ತ್ರೋ ವರು॑ಣೋ ಅರ್ಯ॒ಮಾಯುರಿಂದ್ರ॑ ಋಭು॒ಕ್ಷಾ ಮ॒ರುತಃ॒ ಪರಿ॑ ಖ್ಯನ್ ।**
**ಯದ್ವಾ॒ಜಿನೋ॑ ದೇ॒ವಜಾ॑ತಸ್ಯ॒ ಸಪ್ತೇಃ॑ ಪ್ರವ॒ಕ್ಷ್ಯಾಮೋ॑ ವಿ॒ದಥೇ॑ ವೀ॒ರ್ಯಾ॑ಣಿ ।**

(ಋ. ಸಂ. ೧-೧೬೨-೧)

ಎಂಬ ಋಕ್ಕಿನಲ್ಲಿರುವ **ಆಯು** ಶಬ್ದವು ವಿವೃತವಾಗಿದೆ. ಇಲ್ಲಿ **ಆಯು** ಶಬ್ದಕ್ಕೆ ವಾಯುವೆಂದರ್ಥ. **ಆಯುಶ್ಚ ವಾಯುರಯನಃ** ಅಯನವುಳ್ಳೋಣದರಿಂದ ಆಯುವೆಂದರೆ ವಾಯುವೆಂದರ್ಥವಾಗುತ್ತದೆ. **ಏತಿಹ್ಯಸೌ ವಿಶ್ವಂ** ವಿಶ್ವವನ್ನೆಲ್ಲಾ ಸಂಚರಿಸುವುದರಿಂದ ವಾಯುವಿಗೆ (ವಕಾರ ಲೋಪ) ಆಯುವೆಂದು ಹೆಸರು ಪ್ರಸಿದ್ಧವಾಗಿದೆಯೆಂದು ದುರ್ಗಾಚಾರ್ಯರು ವಿವರಿಸಿದ್ದಾರೆ. (ನಿ. ೯-೩). ಇದಲ್ಲದೆ **ಆಯು** ಶಬ್ದವು **ಆಯುಸ್ಸು, ಮನುಷ್ಯ** ಇತ್ಯಾದ್ಯರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದಲ್ಲದೆ ಅನೇಕ ಕಡೆಗಳಲ್ಲಿ ಅಂಕಿತನಾಮವಾಗಿಯೂ ಉಪಯೋಗಿಸಲ್ಪಟ್ಟು ಬೇರೆ ಬೇರೆ ವ್ಯಕ್ತಿಗಳನ್ನು ಸೂಚಿಸುತ್ತದೆ. ಉದಾಹರಣೆಗೆ—

**ಯೇನ॒ ಜ್ಯೋತೀಂ॑ಷ್ಯಾ॒ಯವೇ॒ ಮನ॑ವೇ ಚ ವಿ॒ವೇದಿ॑ಥ ।**
**ಮಂ॒ದಾ॒ನೋ ಅ॒ಸ್ಯ ಬ॒ರ್ಹಿಷೋ॒ ವಿ ರಾ॑ಜಸಿ ॥**

(ಋ. ಸಂ. ೮-೧೫-೫)

ಎಂಬಲ್ಲಿ **ಔರ್ವಶೇಯಾಯ ಆಯವೇ, ಮನವೇ ಚ** ಎಂದು **ಆಯು, ಮನು** ಎಂಬ ಬೇರೆ ಬೇರೆ ವ್ಯಕ್ತಿಗಳೆಂದು ತಿಳಿಯುತ್ತದೆ. ಇಲ್ಲಿ **ಆಯುವು** ಅಂಕಿತನಾಮವಾಗಿ ಉಪಯೋಗಿಸಲ್ಪಟ್ಟಿದೆ. ಕೆಲವು ಆಂಗ್ಲವ್ಯಾಖ್ಯಾಕಾರರು (Vedic Subjects and Proper Names by Madedonell & Kieth. Vol. I,)

**ತ್ವಮ॒ಸ್ಮೈ ಕುತ್ಸ॑ಮತಿಥಿ॒ಗ್ವಮಾ॒ಯುಂ ಮ॒ಹೇ ರಾಜ್ಞೇ॒ ಯೂನೇ॑ ಅರಂಧನಾಯಃ ।**

(ಋ. ಸಂ. ೧-೫೩-೧೦)

**ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ ।**

(ಋ ಸಂ. ೮-೫೩-೨)

ಎಂಬ ಎರಡು ಋಕ್ಕುಗಳನ್ನು ಉದಾಹರಿಸಿ **ಆಯು**ವೆಂಬ ವ್ಯಕ್ತಿಯು ಇಲ್ಲಿ ಇಂದ್ರನಿಗೆ ವಿರೋಧಿಯಾದವನಾಗಿರ ಬೇಕೆಂದೂಹಿಸುತ್ತಾರೆ. **ಅರಂಧನಾಯಃ, ಅರ್ದಯಃ,** ಹಿಂಸಿಸಿದನು, ವಶಮಾಡಿಕೊಂಡನು ಎಂದಿರುವುದರಿಂದ ಇವನು ಇಂದ್ರಶತ್ರುವೆಂದು ತಿಳಿಯುತ್ತದೆಂದು ಹೇಳಿದ್ದಾರೆ. ಆದರೆ, ಈ ಸಂದರ್ಭದಲ್ಲಿ ಸಾಯಣಭಾಷ್ಯದಲ್ಲಿ, **ಅರ್ದಯಃ** ಎನ್ನುವುದಕ್ಕೆ **ಆಯುಂ ಆಯುನಾಮಾನಂ ಋಷಿಂ ವರಪ್ರದಾನೇನ ಪೀಡಯಸಿ ।** ಆಯುವೇ ಮೊದಲಾದ ನಿನ್ನ ಮಿತ್ರಭೂತರಾದ ಭಕ್ತರಿಗೆ ವರಪ್ರದಾನರೂಪವಾದ ಭಾರವನ್ನು ಕೊಟ್ಟು, ಹಿಂಸಿಸುವೆ ಎಂದು ವಿವರಿಸಿರುವರು. ಆದರೆ ಇದು ಉತ್ಪ್ರೇಕ್ಷಿತವಾದ ಅರ್ಥವಾಗುತ್ತದೆ. ವಿವರಣೆಯು ಸಹಜವಾಗಿರುವುದಿಲ್ಲ. ಅದೂ ಅಲ್ಲದೆ—

**ಮಾ ನೋ ಗುಹ್ಯಾ ರಿಪ ಆಯೋರಹನ್ ದಭನ್ಮಾ ನ ಆಭ್ಯೋ ರೀರಧೋ ದುಚ್ಛುನಾಭ್ಯಃ ।**

(ಋ. ಸಂ. ೨-೩೨-೨)

ಎಂಬಲ್ಲಿ **ಆಯೋಃ** ಎಂಬ ಪದಕ್ಕೆ ಸಾಯಣರೇ **ಶತ್ರುಭೂತಸ್ಯ ಮನುಷ್ಯಸ್ಯ,** ಶತ್ರುಭೂತನಾದ ಮಾನವನಿಗೆ ಎಂದು ವಿಶದವಾಗಿಯೇ ತಿಳಿಸಿದ್ದಾರೆ. ಮತ್ತು,

**ಯುಯೋಪ ನಾಭಿರುಪರಸ್ಯಾಯೋಃ ಪ್ರ ಪೂರ್ವಾಭಿಸ್ತಿರತೇ ರಾಷ್ಟಿ ಶೂರಃ ।**

(ಋ. ಸಂ. ೧-೧೦೪-೪)

ಎಂಬಲ್ಲಿಯೂ ಸಹ ಆಯೋಃ **ಪರೇಷಾಮುಪದ್ರವಾರ್ಥಮಿತಸ್ತತೋ ಗಚ್ಛತಃ ಕುಯವಸ್ಯಾಸುರಸ್ಯ ।** ಇತರ ರನ್ನು ಹಿಂಸಿಸಲು ಎಲ್ಲಾ ಕಡೆಯೂ ಸಂಚರಿಸುತ್ತಿರುವ ಅಸುರನೆಂದರ್ಥಮಾಡಿ ವಿವರಿಸಿದೆ. ಇದು ಶತ್ರುರೂಪನಾದ ವ್ಯಕ್ತಿಯೆಂದು ಸ್ಥಿರವಾಗುತ್ತದೆ. ಅಲ್ಲದೇ,

**ಕುತ್ಸಸ್ಯಾಯೋರತಿಥಿಗ್ವಸ್ಯ ವೀರಾನ್ನ್ಯೃವೃಣಗ್ಭರತಾ ಸೋಮಮಸ್ಮೈ ।**

(ಋ. ಸಂ. ೨-೧೪-೭)

ಇತ್ಯಾದಿ ಸ್ಥಳಗಳಲ್ಲಿ **ಕುತ್ಸ, ಅತಿಥಿಗ್ವ, ಆಯು** ಇವರೆಲ್ಲರೂ ಇಂದ್ರನಿಗೆ ಬೇಕಾದ ಮಿತ್ರರೆಂಬುದು ಖಚಿತವಾಗಿಯೇ ಇದೆ. ಹೀಗೆ **ಆಯು**ವೆಂಬ ಹೆಸರುಳ್ಳ ವ್ಯಕ್ತಿಗಳನೇಕವಿದ್ದು ದೇವತೆಗಳಿಗೂ ಯಜ್ಞಕರ್ತರಿಗೂ ಶತ್ರುವಾಗಿದ್ದ ಆಯುವೇ ಬೇರೆ, ಇಂದ್ರನ ಮಿತ್ರನಾದ ಆಯುವೇ ಬೇರೆ, ಅಗ್ನಿಗೆ ಮಿತ್ರನಾದ ಆಯುವೇ ಬೇರೆ ಎಂಬಂಶವೂ ಮತ್ತು ಆಯುವೆಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಸಂತತಿಯೇ ಇದ್ದಿತೆಂಬ ವಿಷಯವೂ ಅನೇಕ ಶ್ರುತಿವಾಕ್ಯಗಳಿಂದ ತಿಳಿಯುತ್ತದೆ. ಉದಾಹರಣೆಗೆ—

**ಉರ್ವಶ್ಯಸೀತ್ಯಥೋತ್ತರಾರಣ್ಯಾ ಜ್ಯವಿಲಾಪನೀಮುಪಸ್ಪೃಶತ್ಯಾಯುರಸೀತಿ ತಾಮಭಿನಿದಧಾತಿ ಪುರೂರವಾ ಅಸೀತ್ಯುರ್ವಶೀ ವಾಪ್ಸರಾಃ ಪುರೂರವಾಃ ಪತಿರಥ ಯತ್ತಸ್ಮಾನ್ಮಿಥುನಾದಜಾಯತ ತದಾಯುರೇವಮೇವೈಷ ಏತಸ್ಮಿನ್ಮಿಥುನಾದ್ಯಜ್ಞಂ ಜನಯತಿ ।**

(ಶ. ಬ್ರಾ. ೩-೪-೧-೨೦)

ಎಂಬಲ್ಲಿ **ಆಯುವು** ಉರ್ವಶೀಪುರೂರವಸ್ಸುಗಳಿಂದ ಉತ್ಪನ್ನನಾದವನು ಎಂದು ಹೇಳಿ **ಆಯು**ವಿಗೂ **ಅಗ್ನಿ**ಗೂ ತಾದಾತ್ಮ್ಯವನ್ನು ಹೇಳಿದೆ. ಇದರಂತೆಯೇ,

**ಆಯುಷೋ ನ ಮಧ್ಯಾದಿತ್ಯಗ್ನಿರ್ವಾ ಆಯುಃ ।**

(ಶ. ಬ್ರಾ. ೭-೨-೧-೧೫)

ಎಂಬ ವಾಕ್ಯದಲ್ಲಿಯೂ ಅಗ್ನಿಗೂ ಆಯುವಿಗೂ ತಾದಾತ್ಮ್ಯವನ್ನು ಹೇಳಿದೆ. ಆದರೆ ಇಲ್ಲಿ ಆಯುವೆಂಬ ಪದವು ಅಂಕಿತನಾಮವೆಂಬುದು ಒಂದು ಮತ. ಅಲ್ಲವೆಂದು ಇನ್ನೊಂದು ಮತವಾಗಿದೆ. ಅನೇಕಕಡೆಗಳಲ್ಲಿ **ಆಯೋಃ** ಎಂಬ ಪದಕ್ಕೆ ಮನುವೆಂದರ್ಥಮಾಡಿರುವುದರಿಂದ ಸೃಷ್ಟಿಕರ್ತರಾದ ಪ್ರಜಾಪತಿಗಳಲ್ಲಿ ಒಬ್ಬನಾದ ಮನುವೆಂದು ತಿಳಿಯಬಹುದು.

ಯಜ್ಞಕರ್ತರಾದವರೂ, ಯಜ್ಞಾಚರಣೆಗಾಗಿ ಇತಸ್ತತಃ ಅಯನ (ಸಂಚಾರ) ವುಳ್ಳವರೂ ಆದ ಮಾನವರೆಂದು ಹೇಳುವುದಕ್ಕೆ ಪರ್ಯಾಯವಾಗಿ **ಆಯುಃ, ಆಯೋಃ** ಎಂಬ ಪದವನ್ನು ಅನೇಕಕಡೆಗಳಲ್ಲಿ ಉಪಯೋಗಿಸಿದೆ. ಉದಾಹರಣೆಗೆ—

**ಹೋತ್ರಾಭಿರಗ್ನಿರ್ಮನುಷಃ ಸ್ವಧ್ವರೋ ರಾಜಾ ವಿಶಾಮತಿಥಿಶ್ಚಾರುರಾಯವೇ ।**

(ಋ. ಸಂ. ೨-೨-೮)

**ಇಮಂ ವಿಧಂತೋ ಅಪಾಂ ಸಧಸ್ಥೇ ದ್ವಿತಾದಧುರ್ಭೃಗವೋ ವಿಕ್ಷ್ವಾ೩ ಯೋಃ ।**

(ಋ. ಸಂ. ೨-೪-೨)

**ಪ್ರ ಸ್ವಾದನಂ ಪಿತೂನಾಮಸ್ತತಾತಿಂ ಚಿದಾಯವೇ ।**

(ಋ. ಸಂ. ೫-೭-೬)

ಇತ್ಯಾದ್ಯನೇಕ ಋಕ್ಕುಗಳಲ್ಲಿರುವ **ಆಯು** ಶಬ್ದಕ್ಕೆ ಯಜ್ಞಕರ್ತನಾದ ಯಜಮಾನನೆಂದರ್ಥವೆಂದು ಭಾಷ್ಯದಿಂದ ತಿಳಿಯುತ್ತದೆ. ಆದರೆ Oldenberg ಮುಂತಾದ ಆಂಗ್ಲಪರಿವರ್ತನಕಾರರು ಇವೆಲ್ಲಾ ಅಂಕಿತನಾಮವೆಂದು ಅಭಿಪ್ರಾಯವನ್ನಿಟ್ಟುಕೊಂಡೇ ಋಕ್ಕುಗಳನ್ನು ಪರಿವರ್ತಿಸಿದ್ದಾರೆ. ಹೀಗೆ ಅನೇಕಾರ್ಥಗಳಲ್ಲಿ ಈ ಪದದ ಪ್ರಯೋಗವಿರುವಾಗ ಪ್ರಕೃತವಾದ ಋಕ್ಕಿನಲ್ಲಿ ಯಜ್ಞಕರ್ತನಾದ ಮಾನವನೆಂದರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ತಿ—ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ಜರಿತೃಭ್ಯಃ—**ಜ್ಯಾಷ್ ವಯೋಹಾನೌ. ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಬಹುವಚನಾಂತರೂಪ.

**ಊತೀ—ಊತಿಯೂತಿ ಜೂತಿ—**(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನಪರವಾದಾಗ **ಸುಪಾಂಸುಲುಕ್—**(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ.

**ಮಹಯಂತಮ್**—ಮಹ ಪೂಜಾಯಾಂ ಧಾತು. **ಹೇತುಮತಿಚ** ಎಂಬುದರಿಂದ ಣಿಚ್. ಣಿಜಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ, ಅಯಾದೇಶ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ. ದ್ವಿತೀಯಾ ಏಕ ವಚನಾಂತರೂಪ.

**ಧಕ್**—ದಹ ಭಸ್ಮೀಕರಣೇ. ಧಾತು. **ಮಾಙಿಲುಙ್** (ಪಾ. ಸೂ. ೩-೩-೧೭೫) ಎಂಬುದರಿಂದ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರಲೋಪ. **ಮಂತ್ರೇಘಸಹ್ವರ**—(ಪಾ. ಸೂ. ೨-೪-೮೦) ಎಂಬುದ ರಿಂದ ಚ್ಲಿಗೆ ಲುಕ್. **ಹಲ್ಙ್ಯಾಭ್ಯೋ**—ಸೂತ್ರದಿಂದ ಸಿಪಿಗೆ ಲೋಪ. **ದಾದೇರ್ಧಾತೋರ್ಘಃ** ಎಂಬುದರಿಂದ ಧಾತು ಹಕಾರಕ್ಕೆ ಘತ್ವ. **ಏಕಾಚೋಬಶೋಭಷ್**—ಸೂತ್ರದಿಂದ ಆದಿಯ ದಕಾರಕ್ಕೆ ಧಕಾರಾದೇಶ. **ವಾವಸಾನೇ** ಸೂತ್ರದಿಂದ ಅಂತ್ಯಕ್ಕೆ ಚರ್ತ್ವ. **ನಮಾಙ್ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ ತಿಙಂತನಿಘಾತಸ್ವರ ಬರುತ್ತದೆ.

**ವಿಶ್ವಾ**—**ಶೇಶ್ಛಂದಸಿ ಬಹುಲಮ್** (ಪಾ. ಸೂ ೬-೧-೭೦) ಎಂಬುದರಿಂದ ಶಿಗೆ ಲೋಪ.

**ಅಶ್ಯಾಮ್**—ಅಶೂ ವ್ಯಾಪ್ತೌ. ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದ ರಿಂದ ಪರಸ್ಮೈಪದಿಯಾಗುತ್ತದೆ. ಲಙ್ ಉತ್ತಮಪುರುಷ. ಏಕವಚನದಲ್ಲಿ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಯಾಸುಟಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಆಯೋಃ**—ಇಣ್ ಗತೌ. ಧಾತು. **ಛಂದಸೀಣಃ** (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಆಯಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ ॥ ೧ ॥



॥ ಸಂಹಿತಾಪಾಠಃ ॥

ನ ಘಾ ರಾಜೇಂದ್ರ ಆ ದಭನ್ನೋ ಯಾ ನು ಸ್ವಸಾರಾ ಕೃಣವಂತ ಯೋನೌ ।
ಆಪಶ್ಚಿದಸ್ಮೈ ಸುತುಕಾ ಅವೇಷನ್ಗಮನ್ನ ಇಂದ್ರಃ ಸಖ್ಯಾ ವಯಶ್ಚ ॥ ೨ ॥

॥ ಪದಪಾಠಃ ॥

ನ । ಘ । ರಾಜಾ । ಇಂದ್ರಃ । ಆ । ದಭತ್ । ನಃ । ಯಾ । ನು । ಸ್ವಸಾರಾ । ಕೃಣವಂತ । ಯೋನೌ ।
ಆಪಃ । ಚಿತ್ । ಅಸ್ಮೈ । ಸುऽತುಕಾಃ । ಅವೇಷನ್ । ಗಮತ್ । ನಃ । ಇಂದ್ರಃ । ಸಖ್ಯಾ । ವಯಃ । ಚ ॥

॥ ಸಾಯಣಭಾಷ್ಯಂ ॥

ಅಯಂ ರಾಜಾ ರಾಜಮಾನ ಈಶ್ವರೋ ನೇಂದ್ರೋ ನೋಽಸ್ಮದೀಯಾನಿ ಕರ್ಮಾಣಿ ನಾ ದಭತ್ । ಸರ್ವತೋ ನ ಹಿಂಸ್ಯಾತ್ । ಕಾನೀತಿ ಉಚ್ಯತೇ । ಯಾ ಯಾನಿ ಕರ್ಮಾಣಿ ವೃಷ್ಟ್ಯಾದಿ-ರೂಪಾಣಿ ಸ್ವಸಾರಾ ಪರಸ್ಪರಂ ಸ್ವಸೃಭೂತೇ ಸ್ವಯಂಸರಣಭೂತೇ ಅಹೋರಾತ್ರೇ । ನು ಪೂರಣಃ । ಯೋನೌ ಸ್ವಕೀಯೇ ಸ್ಥಾನೇ ಕೃಣವಂತ ॥ ದ್ವಿವಚನಸ್ಥಾನೇ ಬಹುವಚನಂ ॥ ಕುರುತಃ ॥ ಕೃವಿ ಹಿಂಸಾಕರಣಯೋಶ್ಚ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಬಹುಲಗ್ರಹಣಾಚ್ಛಪ್ ॥ ತಾನಿಂದ್ರೋಽಪ್ಯನುಜಾನಾತ್ವಿತ್ಯರ್ಥಃ । ಸ್ವಸೃಭೂತಾವಧ್ವರ್ಯುರ್ಯಜಮಾನೌ ವಾ ಕುರುತಃ । ಯದ್ವಾ । ಸ್ವಸಾರೋಽಂಗುಲಯೋ ಯೋನೌ ಫಲೋತ್ಪಾದನಸ್ಥಾನೇ ಯಜ್ಞೇ ಯಾನಿ ಕೃತವಂತಸ್ತಾನೀತಿ ಯೋಜ್ಯಂ । ಕಿಂಚಾಸ್ಮಾ ಇಂದ್ರಾಯ ಸುತುಕಾಃ ಶೋಭನಬಲಹೇತೂನ್ಯಾಪೋಽಪ್ಕಾರ್ಯಾಣಿ ಹವೀಂಷ್ಯವೇಷನ್ । ವ್ಯಾಪ್ನುವಂತಿ । ನೋಽಸ್ಮಭ್ಯಮಿಂದ್ರಃ ಸಖ್ಯಾ ಸಖ್ಯಾನಿ ವಯಶ್ಚ ಪ್ರಭೂತಮನ್ನಂ ಚ ಗಮತ್ । ಗಮಯತು ॥

॥ ಪ್ರತಿಪದಾರ್ಥ ॥

**ಯಾ ನು**—ಯಾವ (ವೃಷ್ಟ್ಯಾದಿರೂಪ) ಕರ್ಮಗಳನ್ನು । **ಸ್ವಸಾರಾ**—ಪರಸ್ಪರಸ್ವಸೃಭೂತರಾದ ಅಹೋರಾತ್ರಿಗಳು । **ಯೋನೌ**—ಸ್ವಸ್ಥಾನದಲ್ಲಿ । **ಕೃಣವಂತ**—ಮಾಡುತ್ತವೆಯೋ । [ಅಥವಾ **ಯಾ**—ಯಾವ ಕರ್ಮಗಳನ್ನು । **ಸ್ವಸಾರಾ**—ಸ್ವಸೃಪ್ರಾಯರಾದ ಅಧ್ವರ್ಯು ಯಜಮಾನರು । **ಯೋನೌ**—ಯಜ್ಞದಲ್ಲಿ । **ಕೃಣವಂತ**—ಮಾಡುತ್ತಾರೋ । ] ಅಥವಾ [**ಸ್ವಸಾರಾ**—ಅಂಗುಲಿಗಳು । **ಯೋನೌ**—ಫಲೋತ್ಪಾದನಸ್ಥಾನವಾದ ಯಜ್ಞದಲ್ಲಿ । **ಕೃಣವಂತ**—ಮಾಡುತ್ತವೆಯೋ] (**ತಾನಿ**—ಅಂಥಹ) । **ನಃ**— ನಮ್ಮ (ಕರ್ಮಗಳನ್ನು) **ರಾಜಾ**—ರಾಜಮಾನನಾದ ಅಥವಾ ಈಶ್ವರನಾದ । **ಇಂದ್ರಃ ಘ**—ಇಂದ್ರನು । **ನ ಆ ದಭತ್**—ಅಡ್ಡಿಮಾಡದಿರಲಿ । (**ಕಿಂಚ**—ಮತ್ತು) । **ಅಸ್ಮೈ**—ಈ ಇಂದ್ರನಿಗೆ (ಇಂದ್ರನನ್ನು) । **ಸುತುಕಾಃ**—ಶುಭವಾದ ಬಲಹೇತುಗಳಾದ । **ಆಪಃ ಚಿತ್**—ಹವಿರಾದಿಗಳು । **ಅವೇಷನ್**—ವ್ಯಾಪಿಸುತ್ತವೆ । **ನಃ**—ನಮಗೆ । **ಇಂದ್ರಃ**—ಇಂದ್ರನು । **ಸಖ್ಯಾ**—ಮೈತ್ರಿಯನ್ನೂ । **ವಯಃ ಚ**—ಪ್ರಭೂತಾನ್ನವನ್ನೂ । **ಗಮತ್**—ಸೇರಿಸಲಿ.

॥ ಭಾವಾರ್ಥ ॥

ಸ್ವಸೃಪ್ರಾಯಗಳಾದ ಅಹೋರಾತ್ರಿಗಳು ಆಯಾ ಸ್ಥಳಗಳಲ್ಲಿ ನಡೆಸುತ್ತಿರುವ ವೃಷ್ಟ್ಯಾದಿಕರ್ಮಗಳನ್ನು (ಅಧ್ವರ್ಯು ಯಜಮಾನರು ಯಜ್ಞದಲ್ಲಿ ಮಾಡುವ ಕರ್ಮಗಳನ್ನೂ) ರಾಜನಾದ ಇಂದ್ರನು ಹಿಂಸಿಸದಿರಲಿ (ಅನುಮೋದಿಸಲಿ) ಬಲಹೇತುಗಳಾದ ಈ ಹವಿರಾದಿಗಳೆಲ್ಲವೂ ಇಂದ್ರನನ್ನೇ ಸೇರುತ್ತವೆ. ನಮಗೆ ಅವನ ಸಖ್ಯ ಮತ್ತು ಪ್ರಭೂತಾನ್ನಗಳು ಅನುಗ್ರಹೀತವಾಗಲಿ.

English Translation.

Let not the royal Indra frustrate those our actions, which the sisters, (day and night), are directing to their object. May these invigorating offerings propitiate him, so that he may bestow upon us friendly (regard), and (abundant) food.

॥ ವಿಶೇಷವಿಷಯಗಳು ॥

ಪ್ರಕೃತವಾದ ಋಕ್ಕಿನಲ್ಲಿ **ಸ್ವಸಾರಾ** ಎಂಬ ಪದಕ್ಕೆ ಮೂರುವಿಧವಾದ ಅರ್ಥವನ್ನು ಸಾಯಣರು ಹೇಳಿದ್ದಾರೆ. ಮೊದಲನೆಯದಾಗಿ ಅಹೋರಾತ್ರಗಳೆಂದೂ, ಎರಡನೆಯದಾಗಿ ಸ್ವಸೃಪ್ರಾಯರಾದ ಅಧ್ವರ್ಯು ಮತ್ತು ಯಜಮಾನ ರೆಂದೂ, ಮೂರನೆಯದಾಗಿ ಯಜ್ಞಕರ್ಮಕ್ಕೆ ಸಾಧನಗಳಾದ ಅಂಗುಲಿಗಳೆಂದೂ ಅರ್ಥಮಾಡಿದೆ. ಈ ಅರ್ಥಕ್ಕನು ಗುಣವಾಗಿ **ಯೋನಿ** ಶಬ್ದಕ್ಕೂ ಅರ್ಥಮಾಡಬೇಕಾಗುತ್ತದೆ: ಮೊದಲನೆಯದಾಗಿ,

**ಯೊ ನು ಸ್ವಸಾರಾ ಯೋನೌ ಕೃಣವಂತೆ**—ಎಂಬುದಕ್ಕೆ ಯಾವ ವೃಷ್ಟ್ಯಾದಿ ಕರ್ಮಗಳನ್ನು ಸ್ವಸೃಭೂತ ರಾದ ಅಹೋರಾತ್ರಗಳು ಸ್ವಸ್ಥಾನದಲ್ಲಿ ಮಾಡುತ್ತಾರೆಯೋ ಅಂತಹ ಕರ್ಮಗಳೆಂದರ್ಥ. ಈ ಅರ್ಥವು ಸರಿಯಾಗಿ ದೆಯೇ ಎಂದು ನೋಡಲು ಅಹೋರಾತ್ರಗಳ ಸ್ವರೂಪಗಳನ್ನೂ, ಅವರ ಪರಸ್ಪರೋಪಕಾರಕಗಳಾದ ಕರ್ಮಗಳನ್ನೂ ಪರಿಶೀಲಿಸಬೇಕು.

ಉಷಸ್ಸು ರಾತ್ರಿಯ ಹಿರಿಯ ಸಹೋದರಿಯೆಂದು ಹೇಳಿದೆ. ಉಷಸ್ಸಿನ ಉದಯವಾದೊಡನೆಯೇ ರಾತ್ರಿಯು ಅದೃಶ್ಯಳಾಗಿ ತನ್ನ ಸಹೋದರಿಗೆ ಸ್ಥಾನವನ್ನು ಕಲ್ಪಿಸಿಕೊಡುತ್ತಾಳೆ.

**ಅರುಷಸ್ಯ ದುಹಿತರಾ ವಿರೂಪೇ ಸ್ತೃಭಿರನ್ಯಾ ಪಿಪಿಶೇ ಸೂರೋ ಅನ್ಯಾ ।**
**ಮಿಥಸ್ತುರಾ ವಿಚರಂತೀ ಪಾವಕೇ ಮನ್ಮ ಶ್ರುತಂ ನಕ್ಷತ ಋಚ್ಯಮಾನೇ ॥**

(ಋ. ಸಂ. ೬-೪೯-೩)

ಇತ್ಯಾದ್ಯನೇಕ ಋಕ್ಕುಗಳಲ್ಲಿ ರಾತ್ರಿಯ ಮತ್ತು ಉಷಸ್ಸಿನ (ಅಹಸ್ಸಿನ) ಸಂಬಂಧವನ್ನು ವರ್ಣಿಸಿ, ಯಾವ ರೀತಿ ಅವರಿಬ್ಬರೂ ಸಹ ತಮ್ಮ ಸತತವಾದ ಮತ್ತು ನಿಯಮಿತವಾದ ಸಂಚಾರದಿಂದ ಲೋಕಯಾತ್ರೆಗೆ ಕಾರಣರಾಗಿರುವವ ರೆಂದು ವಿವರಿಸಿದೆ. ಅಹೋರಾತ್ರಗಳು ಯಜ್ಞಾಧ್ಯಕ್ಷನಾದ ಅಗ್ನಿಯ ಉತ್ಪತ್ತಿಗೆ ಕಾರಣರಾದ ಮಾತೃಗಳಾಗಿರುವುದ ರಿಂದ ಯಜ್ಞಫಲವಾದ ಪರ್ಜನ್ಯಕ್ಕೂ, ತತ್ಫಲವಾದ ಅನ್ನಾದಿಗಳಿಗೂ ಇವರೇ ಮೂಲಕಾರಣರಾದಂತಾಯಿತು.

**ನಕ್ತೋಷಾಸೌ ಚ ಯೇ ದೇವ್ಯಾವಾಗ್ನೇಯ್ಯಾವೇವ ತೇ ಸ್ಮೃತೇ ।**

(ಬೃ. ದೇ. ೩-೮)

**ನಕ್ತೋಷಾಸಾ ವರ್ಣಮಾಮೇಮ್ಯಾನೇ ಧಾಪಯೇತೇ ಶಿಶುಮೇಕಂ ಸಮೀಚೀ ।**

(ಋ. ಸಂ. ೧-೯೬-೫)

ಇತ್ಯಾದಿ ಸ್ಥಳಗಳಲ್ಲಿ ಅಹೋರಾತ್ರಗಳು ಯಜ್ಞಾಧ್ಯಕ್ಷನಾದ ಅಗ್ನಿಗೆ ಹವಿಃಪಾನಮಾಡಲು ಸಹಾಯಮಾಡುತ್ತಾರೆಂದು ಹೇಳಿದೆ. ಈ ಸಂಬಂಧವಿರುವುದರಿಂದಲೇ,

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**
**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ।**

(ಋ. ಸಂ. ೧೦-೧೧೦-೬)

ಇತ್ಯಾದಿ ಋಕ್ಕುಗಳಲ್ಲಿ ಅಹೋರಾತ್ರಗಳು ಯಜ್ಞಕರ್ತರ ಸಮೀಪವರ್ತಿನಿಯರೆಂದು ಹೇಳಿದೆ. ವಿಶ್ವವ್ಯವಹಾರಗಳಿಗೆ ಕಾರಣವಾದ ಯಜ್ಞಸಂಬಂಧಿಗಳಾದುದರಿಂದಲೇ ಅವರಿಗೆ **ಋತಸ್ಯ ಮಾತರಾ** ಎಂಬ ವಿಶೇಷಣಗಳೂ ಇರುತ್ತವೆ. ಇಂತಹ ಸ್ವಸೃಭೂತರಾದ ಅಹೋರಾತ್ರಗಳು ತಮ್ಮ ಸ್ವಯೋನಿಯಲ್ಲಿ ವೃಷ್ಟ್ಯಾದಿಕರ್ಮಗಳನ್ನು ನೆರವೇರಿಸಿದರು

ಎಂದು ವಿವರಿಸಿದೆ. ಇಲ್ಲಿ **ಯೋನಿ** ಶಬ್ದಕ್ಕೆ ಉತ್ಪತ್ತಿಸ್ಥಾನವೆಂದರ್ಥಮಾಡಿದೆ. **ಯೋನಿ** ಶಬ್ದಕ್ಕೆ ಇರತಕ್ಕ ಅನೇಕಾರ್ಥಗಳನ್ನು ಹಿಂದೆ ತಿಳಿಸಿದೆ. ಅವುಗಳಲ್ಲಿ ಉತ್ಪತ್ತಿಸ್ಥಾನವೆಂಬರ್ಥವೇ ಅಧಿಕವಾಗಿ ಪ್ರಸಿದ್ಧಿಯಲ್ಲಿದೆ.

**ವೇದಿಷದೇ ಪ್ರಿಯಧಾಮಾಯ ಸುದ್ಯುತೇ ಧಾಸಿಮಿವ ಪ್ರ ಭರಾ ಯೋನಿಮಗ್ನಯೇ ।**

(ಋ. ಸಂ. ೧-೧೪೦-೧)

ಇತ್ಯಾದಿ ಋಕ್ಕುಗಳಲ್ಲಿ **ಯೋನಿ** ಎಂಬುದಕ್ಕೆ ವೇದ್ಯಾಖ್ಯವಾದ ಸ್ಥಾನವೆಂಬುದು ಪ್ರಸಿದ್ಧವಾಗಿದೆ. **'ಆ ಸ್ವೇ ಯೋನೌ ನಿಷೀದತು'** (ಋ. ಸಂ. ೬-೧೬-೪೧) ಇತ್ಯಾದಿ ಸಂಹಿತಾವಾಕ್ಯಗಳಲ್ಲೂ, **ಏಷ ಹ ವಾ ಅಸ್ಯ ಸ್ವೋ ಯೋನಿರ್ಯದಗ್ನಿರಗ್ನೇಃ** (ಐ. ಬ್ರಾ. ೧-೧೬) ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ಸಹ ಈ ಅರ್ಥವು ವಿವರಿಸಲ್ಪಟ್ಟಿದೆ. ಇದಲ್ಲದೇ, **ಯೋನೌ** ಎಂಬುದಕ್ಕೆ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಫಲೋತ್ಪಾದನಸ್ಥಾನೇ ಯಜ್ಞೇ** ಎಂದು **ಯೋನಿ** ಶಬ್ದವನ್ನು ಯಜ್ಞಪರ್ಯಾಯವಾಗಿಯೇ ಅರ್ಥಮಾಡಿದ್ದಾರೆ. ಈ ಅರ್ಥವೂ ಸಹಜವಾಗಿಯೇ ಇರುತ್ತದೆ. ಹೇಗೆಂದರೆ, ಯಜ್ಞವೇ ಸಕಲ ವಿಶ್ವಗಳ ಉತ್ಪತ್ತಿಗೂ, ಸ್ಥಿತಿಗೂ ಕಾರಣವಾಗಿ ದೇವಮಾನವಾದಿ ಸಕಲ ಭೂತಗಳಿಗೂ ಪರಸ್ಪರವಾದ ಸಂಬಂಧವನ್ನು ಬೆಳೆಸುವ ಬಂಧಕಸಾಧನವಾಗಿರುವುದರಿಂದ ಇದಕ್ಕೆ **ಭುವನಸ್ಯ ಯೋನಿಃ, ಭುವನಸ್ಯ ನಾಭಿಃ** ಇತ್ಯಾದಿಯಾದ ವರ್ಣನೆಗಳಿವೆ. ವಿಶ್ವವ್ಯವಹಾರಕ್ಕೆಲ್ಲಾ ಯಜ್ಞವೇ ಉತ್ಪತ್ತಿಸ್ಥಾನವಾದುದರಿಂದ ಇದು **ಯೋನಿ** ಯೆಂದು ಪ್ರಸಿದ್ಧವಾಗಿದೆ. ಹೇಗೆಂದರೆ—

**ಸ ಏತೇನ ಯಜ್ಞೇನ । ದೇವೇಭ್ಯ ಆತ್ಮಾನಂ ನಿರಕ್ರೀಣೀತ ಸ ಯದ್ವ್ರತಮುಪೈತಿ ಯಥೈವ ಯತ್ಪ್ರಜಾಪತಿರ್ದೇವೇಭ್ಯ ಆತ್ಮಾನಂ ಪ್ರಾಯಚ್ಛದೇವಮೇವೈಷ ಏತದ್ದೇವೇಭ್ಯ ಆತ್ಮಾನಂ ಪ್ರಯಚ್ಛತಿ ತಸ್ಮಾದು ಸಂಯತ ಏನ್ವೈತಾಗ್ಂ ರಾತ್ರಿಂ ಚಿಚರಿಷೇದ್ಯಥಾ ಹವಿಷಾ ಚರೇದೇವಗ್ಂ ಹವಿರ್ಹ್ಯೇಷ ದೇವಾನಾಂ ಭವತಿ ।**

(ಶ. ಬ್ರಾ. ೧೧.೧-೮-೩)

ದೇವತೆಗಳ ಯಜ್ಞದಿಂದ ತೃಪ್ತನಾದ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನಂತರ ಪುನಃ ಯಜ್ಞಪ್ರತಿನಿಧಿಯಾದ ತನ್ನ ಪ್ರತಿರೂಪವನ್ನು ಸೃಷ್ಟಿಮಾಡಿದನು. ಈ ರೀತಿ ಯಜ್ಞಾರ್ಥವಾಗಿ, ತನ್ನ ಯಜ್ಞಾರ್ಥವಾಗಿ ತನ್ನ ಪ್ರತಿರೂಪವನ್ನು ಸೃಷ್ಟಿಸಿ, ಯಜ್ಞವನ್ನು ಪ್ರತಿಬಿಂಬಿಸಿದುದರಿಂದ ತಿಳಿದವರು ಜಗದ್ಯೋನಿಯಾದ ಪ್ರಜಾಪತಿಯನ್ನೇ ಯಜ್ಞವೆಂಬ ಪರ್ಯಾಯನಾಮದಿಂದ ಕರೆಯುತ್ತಾರೆ. ಈ ಯಜ್ಞವು ವಿಶ್ವಕ್ಕೆಲ್ಲಾ ಏಕಸಂಬಂಧವನ್ನು ತೋರಿಸತಕ್ಕ ತಂತುವಾಗಿದೆ. ಇದನ್ನೇ ವಿಶ್ವಚಕ್ರವೆಂದೂ ಕರೆದಿದೆ. ಉದಾಹರಣೆಗೆ—

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥** (ಭ. ಗೀ. ೩-೧೩. ರಿಂದ ೧೫)

ಕರ್ಮರೂಪವಾದ ಯಜ್ಞದಿಂದ ಪರ್ಜನ್ಯವೂ, ಪರ್ಜನ್ಯದಿಂದ ಅನ್ನವೂ, ಅನ್ನದಿಂದ ಭೂತಗಳೂ ಉತ್ಪನ್ನವಾಗುವುವು. ಈ ಯಜ್ಞರೂಪವಾದ ಕರ್ಮವು ಬ್ರಹ್ಮನಿಂದ ಉತ್ಪನ್ನವಾಯಿತು. ಆದುದರಿಂದ ವಿಶ್ವದ ಸೃಷ್ಟಿಯಿಂದ

ಪ್ರಾರಂಭಿಸಿ, ಸಕಲ ವಿಧವಾದ ವ್ಯವಹಾರಗಳಿಗೂ ಪುನರಾವೃತ್ತಿರೂಪವಾದ ವಿಶ್ವಚಕ್ರಕ್ಕೂ ಸಹ ಮೂಲನಾದ ಪರಬ್ರಹ್ಮನೇ ಯಜ್ಞದಲ್ಲಿ ನಿತ್ಯವಾಗಿ ಪ್ರತಿಷ್ಠಿತನಾಗಿದ್ದಾನೆ. ಇತ್ಯಾದಿಯಾಗಿ ಗೀತಾದಿಗಳಲ್ಲಿ ಶ್ರುತಿವಾಕ್ಯಪ್ರತಿಪಾದಿತವಾದ ಯಜ್ಞಕರ್ತೃವು ವಿವರಿಸಲ್ಪಟ್ಟಿದೆ. **ಭುವನಸ್ಯ ಯೋನಿಃ** ಎಂದು ವರ್ಣಿತವಾಗಿರುವ ಈ ಯಜ್ಞತತ್ತ್ವವನ್ನು ಋಕ್ಸಂಹಿತೆಯ ಬೇರೆಬೇರೆ ಭಾಗಗಳಲ್ಲಿಯೂ ಈ ರೀತಿ ಪ್ರಶಂಸಿಸಿದೆ. ಉದಾಹರಣೆಗೆ—

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।**
**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥**

(ಋ. ಸಂ. ೧೦-೯೦-೧೬)

ದೇವತೆಗಳು ತಮ್ಮ ಸಂಕಲ್ಪರೂಪವಾದುದೂ, ಧ್ಯಾನಾತ್ಮಕವಾದುದೂ ಆದ ಯಜ್ಞದಿಂದ ಯಜ್ಞರೂಪಿಯಾದ ಪ್ರಜಾಪತಿಯನ್ನು ಪೂಜಿಸಿದರು. ಪ್ರಾಪಂಚಿಕವಾದ ಧರ್ಮಗಳಿಗೆಲ್ಲಾ ಈ ವಿಧವಾದ ಯಜ್ಞವೇ ಮೂಲವಾಯಿತು. ಈ ಯಜ್ಞದ ಧರ್ಮಗಳೇ ಅಂತರಿಕ್ಷದಲ್ಲಿ ಸ್ಥಾಪಿತವಾಗಿ ದ್ಯುಲೋಕಸ್ಥರಾದ ದೇವತೆಗಳನ್ನು ಅವರವರ ಸ್ಥಾನದಲ್ಲಿರಿಸುತ್ತದೆ. ಯಜ್ಞದಿಂದಲೇ ಸಕಲ ಭೂತಗಳೂ ತಮ್ಮ ಸ್ಥಿತಿಹೇತುವಾದ ಅನ್ನವನ್ನೂ ಶಕ್ತಿಯನ್ನೂ ಪಡೆಯುತ್ತವೆ. ಈ ಯಜ್ಞವೇ ಮೂರು ಲೋಕಗಳನ್ನೂ ಸ್ಥಿತಿಯಲ್ಲೂ ನಿಯಮದಲ್ಲೂ ಇಡುತ್ತದೆ. ಹೇಗೆಂದರೆ—

**ಕಲ್ಪಂತೇಽಸ್ಮಾ ಇಮೇ ಲೋಕಾ ಊರ್ಜಂ ಪ್ರಜಾಸು ದಧಾತಿ ತ್ರಿರಾತ್ರೇಣೈವೇಮಂ ಲೋಕಂ ಕಲ್ಪಯತಿ ತ್ರಿರಾತ್ರೇಣಾಂತರಿಕ್ಷಂ ತ್ರಿರಾತ್ರೇಣಾಮುಂ ಲೋಕಂ ಯಥಾ ಗುಣೇ ಗುಣಮನ್ವಸ್ಯತ್ಯೇವಮೇವ ತಲ್ಲೋಕೇ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ ।**

(ತೈ. ಸಂ. ೭-೨-೪-೨)

ನವರಾತ್ರರೂಪವಾದ ಈ ಯಜ್ಞದಿಂದ ಲೋಕತ್ರಯಕ್ಕೂ ಚೈತನ್ಯವು ದೊರೆಯಿತು. ತ್ರಿರಾತ್ರದಿಂದ ಪೃಥ್ವಿಗೂ, ತ್ರಿರಾತ್ರದಿಂದ ಅಂತರಿಕ್ಷಕ್ಕೂ, ಉಳಿದ ತ್ರಿರಾತ್ರದಿಂದ ದ್ಯುಲೋಕಕ್ಕೂ ಪ್ರಜಾಪತಿಯು ಸ್ಥಿತಿಶಕ್ತಿಯನ್ನು ಈ ಯಜ್ಞದ ಶಕ್ತಿಯಿಂದ ಕಲ್ಪಿಸಿದನು. ಓತಪ್ರೋತರೂಪದಿಂದ, ತಂತುವಿನೊಡನೆ ತಂತುವನ್ನು ಸೇರಿಸಿ ಪಟವನ್ನು (ಬಟ್ಟೆಯನ್ನು) ನಿರ್ಮಿಸುವಂತೆ, ಶೈಥಿಲ್ಯವನ್ನು ತಪ್ಪಿಸುವುದಕ್ಕೂ ಮತ್ತು ವಿಶ್ವಕ್ಕೆಲ್ಲಾ ಒಂದೇ ಸಂಬಂಧರೂಪವಾದ ಶಕ್ತಿಯನ್ನು ಉತ್ಪಾದನೆಮಾಡಿ ಮೂರು ಲೋಕಗಳೂ ಅವುಗಳ ನಿಯತವಾದ ಸ್ಥಿತಿಯಲ್ಲಿರುವುದಕ್ಕೂ ಈ ಯಜ್ಞದಿಂದ ಲೋಕತ್ರಯಕ್ಕೂ ಓತಪ್ರೋತರೂಪವಾದ ಸಂಬಂಧವನ್ನು ಕಲ್ಪಿಸಿದನು. ಈ ಯಜ್ಞವು ವಿಶ್ವಜೀವದ ನಾಡಿಯಾಗಿದೆ. ಇದನ್ನೇ ಶತಪಥಬ್ರಾಹ್ಮದಲ್ಲಿ ವರ್ಣಿಸುತ್ತಾ,

**ಸರ್ವೇಷಾಂ ವಾ ಏಷ ಭೂತಾನಾಗ್ಂ ಸರ್ವೇಷಾಂ ದೇವಾನಾಮಾತ್ಮಾ ಯದ್ಯಜ್ಞಸ್ತಸ್ಯ ಸಮೃದ್ಧಿಮನು ಯಜಮಾನಃ ಪ್ರಜಯಾ ಪಶುಭಿರ್ಋಧ್ಯತೇ ॥**

(ಶ. ಬ್ರಾ. ೧೪-೩-೨-೧)

ಈ ಯಜ್ಞವು ಸಕಲ ಮಾನವರ ಮತ್ತು ಸಲಕ ದೇವತೆಗಳ ಆತ್ಮವೇ ಆಗಿದೆಯೆಂದು ಸ್ತುತವಾಗಿದೆ. ಹೀಗೆ ವಿಶ್ವತತ್ತ್ವದಲ್ಲಿ ಪ್ರತಿವ್ಯಕ್ತಿಯೂ ಸಹ ತನ್ನ ಪ್ರಭಾವ ಪೂರಿತವಾದ ಅಸ್ತಿತ್ವವನ್ನು ಹೊಂದಬೇಕಾದರೆ ಯಜ್ಞವು ಈ ಸಾಮಾನ್ಯ ವಿಶೇಷಗಳಿಗೆ ಸಂಬಂಧವನ್ನು ಕಲ್ಪಿಸುವ ಸೂತ್ರವಾಗಿರುತ್ತದೆ. ಸೂತ್ರರೂಪವಾದ ಈ ಯಜ್ಞವೂ ಸಹ ವಿಶ್ವದ ವಿಕಾಸ ಮತ್ತು ಸಂಕೋಚಗಳೊಡನೆ ತಾನೂ ಸಹ ಒಂದು ಸಲ ಬೆಳೆಯುತ್ತದೆ. ಇನ್ನೊಂದು ಸಲ ಸಂಕುಚಿತವಾಗುತ್ತದೆ

ವಿಶ್ವಗತಿಯೊಡನೆ ತನ್ನ ಗತಿಯನ್ನೂ ಹೊಂದಿಕೊಳ್ಳುತ್ತದೆ. ಈ ಅಂಶವನ್ನು ವಿವರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಯಜ್ಞಶಬ್ದದ ನಿರ್ವಚನವನ್ನು ಈ ರೀತಿ ತಿಳಿಸಿದೆ.

**ಅಥ ಯಸ್ಮಾದ್ಯಜ್ಞೋ ನಾಮ । ಘ್ನಂತಿ ವಾ ಏನಮೇತದ್ಯದಭಿಷುಣ್ವಂತಿ ತದ್ಯದೇನಂ ತನ್ವತೇ ತದೇನಂ ಜನಯಂತಿ ಸ ತಾಯಮಾನೋ ಜಾಯತೇ ಸ ಯಂಜ್ಞಾಯತೇ ತಸ್ಮಾದ್ಯಜ್ಞೋ ಯಂಜ್ಞೋ ಹ ವೈ ನಾಮೈತದ್ಯಜ್ಞ ಇತಿ............ ॥**

(ಶ. ಬ್ರಾ. ೩-೯-೪-೨೩)

ಅಭಿಷವಕಾಲದಲ್ಲಿ ಹನನಮಾಡುತ್ತಾರೆ. ಪುನಃ ಉತ್ಪನ್ನವಾಗುವಂತೆ ಮಾಡುತ್ತಾರೆ. ಪ್ರಸಾರರೂಪವಾದ ಗತಿಯೊಂದಿಗೆ ಉತ್ಪನ್ನವಾಗುವುದರಿಂದ **ಯಜ್ಞ** ವೆಂಬ ಹೆಸರು ಪ್ರಸಿದ್ಧವಾಯಿತು. ಈ ಯಜ್ಞವು ವಿಶ್ವದ ಸ್ಥಿತಿಗತಿಗಳಿಗನುಗುಣವಾಗಿಯೇ ಇರುವುದರಿಂದ ವಿಶ್ವಕ್ಕೆ ಉಪಕಾರವಾಗಿದೆ. ಅದು ಹೇಗೆಂದರೆ,

**ಭುಜ್ಯುಃ ಸುಪರ್ಣ ಇತಿ । ಯಜ್ಞೋ ವೈ ಭುಜ್ಯುಃ ಯಜ್ಞೋ ಹಿ ಸರ್ವಾಣಿ ಭುನಕ್ತಿ ಯಜ್ಞೋ ಗಂಧರ್ವಃ.................. ॥**

(ಶ. ಬ್ರಾ. ೯-೪-೧-೧೧)

ಯಜ್ಞವು ಸಕಲ ಭೂತಗಳನ್ನೂ ತನ್ನ ಆಹುತಿಗಾಗಿ ಅಪೇಕ್ಷಿಸುತ್ತದೆ. ಪುನಃ ಸಕಲ ಭೂತಗಳ ಉಪಕಾರಕ್ಕಾಗಿ ಪ್ರಸರಿಸುತ್ತದೆ. ಇತ್ಯಾದಿಯಾಗಿ ವಿಶ್ವತತ್ತ್ವಕ್ಕೂ ಯಜ್ಞಕ್ಕೂ ಇರತಕ್ಕ ತಾದಾತ್ಮ್ಯ ಸಂಬಂಧವನ್ನೂ ತಿಳಿಸಿ ವ್ಯವಹಾರಿತವಾದ ಸಮಸ್ತ ವಿಶ್ವವ್ಯವಹಾರಗಳಿಗೂ ಸಹ ಯಜ್ಞವೇ ಕಾರಣವು, ಅದೇ ಸೂತ್ರರೂಪವಾದ ಸಂಬಂಧವು, ವಿಶ್ವನಾಭಿಯು ಎಂದು ತಿಳಿಸಿದೆ. ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ **ಯೋನಿ** ಶಬ್ದದಿಂದ ಸೂಚಿಸಿದೆ.

ಈ ವಿಶ್ವಯೋನಿಯಲ್ಲಿ ಕರ್ಮವನ್ನಾಚರಿಸಿ ವಿಶ್ವವ್ಯವಹಾರಿಗಳು ತಡೆಯಿಲ್ಲದಂತೆ ಮಾಡಲು ಸ್ವಸೃಗಳು ಉದ್ಯುಕ್ತರಾಗುತ್ತಾರೆಂದು ತಿಳಿಸಿದೆ. ಈ ಸ್ವಸೃಗಳು,

೧. ಅಹೋರಾತ್ರರೂಪದಲ್ಲಿರಬಹದು. ಅಥವಾ

೨. ಯಜಮಾನ ಮತ್ತು ಅಧ್ವರ್ಯುರೂಪದಲ್ಲಿರಬಹುದು. ಅಥವಾ

೩. ಯಜ್ಞಸಾಧನವಾದ ಅಂಗುಲಿಗಳ ರೂಪದಲ್ಲಿರಬಹುದು. (ನಿರುಕ್ತಕಾರರು ಸ್ವಸೃ ಶಬ್ದವನ್ನು **ಅಂಗುಲಿ** ನಾಮಗಳಲ್ಲಿ ಸೇರಿಸಿದ್ದಾರೆ (ನಿ. ೩-೮). ಇಂತಹ ವಿಶ್ವಯೋನಿಯಲ್ಲಿ ನೆರವೇರಿಸಿದ ಕರ್ಮಗಳನ್ನು ನಿರ್ವಿಘ್ನವಾಗಿ ಫಲದಾಯಕವಾಗುವಂತೆ ಮಾಡು ಎಂದು ಇಂದ್ರನನ್ನು ಪ್ರಾರ್ಥಿಸಿದೆ.

**ಸುತುಕಾಃ**—ಈ ಪದಕ್ಕೆ ಸಾಯಣರು **ಶೋಭನಬಲೋಪೇತಾಃ** ಶ್ರೇಷ್ಠವಾದ ಬಲದಿಂದ ಕೂಡಿದವು ಎಂದರ್ಥಮಾಡಿದ್ದಾರೆ. ನಿರುಕ್ತಕಾರರು **ಸುತುಕ** ಶಬ್ದಕ್ಕೆ ಶ್ರೇಷ್ಠವಾದ ಗಮನವುಳ್ಳ ಎಂದರ್ಥಮಾಡಿ ಋಕ್ಸಂಹಿತೆಯಲ್ಲಿ ಅಗ್ನಿಯ ಪ್ರಸರವನ್ನು ವರ್ಣಿಸತಕ್ಕ,

**ಸ ಆ ವಕ್ಷಿ ಮಹಿ ನ ಆ ಚ ಸತ್ಸಿ ದಿವಸ್ಪೃಥಿವ್ಯೋರರತಿರ್ಯುವತ್ಯೋಃ ।**
**ಅಗ್ನಿಃ ಸುತುಕಃ ಸುತುಕೇಭಿರಶ್ವೈ ರಭಸ್ವದ್ಭೀ ರಭಸ್ವಾँ ಏಹ ಗಮ್ಯಾಃ ॥**

(ಋ. ಸಂ. ೧೦-೩-೭)

ಎಂಬ ಋಕ್ಕನ್ನುದಾಹರಿಸಿ **ಸುತುಕನಃ** ಎಂದು ವಿವರಿಸಿದ್ದಾರೆ.

ಉದಾಹೃತವಾಗಿರುವ ಈ ಋಕ್ಕಿನಲ್ಲಿ ಸಾಯಣರೂ ಸಹ **ತುಕಿರ್ಗತ್ಯರ್ಥಃ । ಸುಗಮಃ ಸ್ತೋತೃಭಿಃ ಯಷ್ಟೃಭಿಶ್ಚ ಸುಖೇನ ಪ್ರಾಪ್ತವ್ಯಃ ।** ಸ್ತೋತೃಗಳಿಂದಲೂ ಯಜ್ಞಕರ್ತರಿಂದಲೂ ಸುಖವಾಗಿ ಸಮೀಪಿಸಲ್ಪಡತಕ್ಕ ಎಂದರ್ಥಮಾಡಿದ್ದಾರೆ. ಆದರೆ ನಿರುಕ್ತಕಾರರ ನಿರ್ವಚನ ಪ್ರಕಾರ ಅಗ್ನಿಯ ಶ್ರೇಷ್ಠವಾದ ಗಮನವನ್ನು ಅಥವಾ ಪ್ರಸರವನ್ನು ಇಲ್ಲಿ ವರ್ಣಿಸುವುದಾಗಿ ತೋರುತ್ತೆ. ಪ್ರಕೃತವಾದ ಋಕ್ಕಿನಲ್ಲಿ **ಆಪಃ** ಎಂಬ ಪದಕ್ಕೆ ವಿಶೇಷಣವಾಗಿದ್ದು ಶೀಘ್ರವಾಗಿ ಫಲಕಾರಿಯಾಗತಕ್ಕ ಎಂದು ತಾತ್ಪರ್ಯವಾಗಬಹುದಾಗಿದೆ.

**ರಾಜಾ ಇಂದ್ರಃ—ರಾಜಮಾನಃ ಈಶ್ವರೋ ವಾ ।** ಪ್ರಕಾಶಮಾನನಾದ ಅಥವಾ ಸಾರ್ವಭೌಮನಾದ ಎಂದು ಇಂದ್ರನಿಗೆ **ರಾಜಾ** ಎಂಬ ಪದವು ವಿಶೇಷಣವಾಗಿದೆ. ಇಂದ್ರನಿಗೆ **ಸಮ್ರಾಟ್, ಸ್ವರಾಟ್** ಇತ್ಯಾದಿ ವಿಶೇಷಣಗಳು ಅನೇಕಕಡೆಗಳಲ್ಲಿವೆ. ಉದಾಹರಣೆಗೆ, ಋಕ್ಸಂಹಿತೆಯ—

**ಅವಾಸೃಜಂತ ಜಿವ್ರಯೋ ನ ದೇವಾ ಭುವಃ ಸಮ್ರಾಳಿಂದ್ರ ಸತ್ಯಯೋನಿಃ ।**

(ಋ. ಸಂ. ೪-೧೯-೨)

ಎಂಬ ಋಕ್ಕಿನಲ್ಲಿ **ಸಮ್ರಾಟ್**—ಸಕಲಲೋಕಗಳಿಗೂ ರಕ್ಷಕನಾಗಿ ಸತ್ಯಕ್ಕೆ ನಿವಾಸಭೂತನಾದವನೆಂದು ವರ್ಣಿತವಾಗಿದೆ. ಮತ್ತು ಹೀಗೆಯೇ,

**ಸಮ್ರಾಳನ್ಯಃ ಸ್ವರಾಳನ್ಯ ಉಚ್ಯತೇ ವಾಂ ಮಹಾಂತಾವಿಂದ್ರಾವರುಣಾ ಮಹಾವಸೂ ।**
**ವಿಶ್ವೇ ದೇವಾಸಃ ಪರಮೇ ವ್ಯೋಮನಿ ಸಂ ವಾಮೋಜೋ ವೃಷಣಾ ಸಂ ಬಲಂ ದಧುಃ ॥**

(ಋ. ಸಂ. ೭-೮೨-೨)

ಇತ್ಯಾದಿ ಋಕ್ಕುಗಳಲ್ಲಿ ಅನನ್ಯಪರಾಧೀನಕರಾದ ಇಂದ್ರಾವರುಣರನ್ನು **ಸಮ್ರಾಟ್, ಸ್ವರಾಟ್** ಎಂಬ ವಿಶೇಷಣಗಳಲ್ಲಿ ವರ್ಣಿಸಿದೆ. ಇಂದ್ರಾವರುಣರಿಗೆ ಈ ವಿಶೇಷಣಗಳು ಇರುವ ಮಹತ್ತ್ವವನ್ನೂ ಋಕ್ಸಂಹಿತೆಯಲ್ಲಿ ಈ ವಿಶೇಷಣಗಳ ವೈಶಿಷ್ಟವನ್ನೂ ಮುಂದೆ ವಿವರಿಸಲಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇದೇ **ರಾಜಾ** ಎಂಬ ವಿಶೇಷಣದಿಂದ ಇದೇ ಭಾವವನ್ನು ತೋರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಘಾ—ಋಚಿತುನುಘ** —(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದಭತ್**—ದಂಭು ದಂಭೇ ಧಾತು. ಲೋಡರ್ಥದಲ್ಲಿ ಛಾಂದಸವಾಗಿ ಲಙ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್ಯೋಗೇಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಯಾ—ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್.

**ಸ್ವಸಾರಾ—ಸುಪಾಂ ಸುಲುಕ್**—ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

**ಕೃಣವಂತ**—ಕೃವಿ ಹಿಂಸಾಕರಣಯೋಶ್ಚ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದವೂ ದ್ವಿವಚನಕ್ಕೆ ಬಹುವಚನಪ್ರತ್ಯಯವೂ ಬರುತ್ತವೆ. ಝು ಪ್ರತ್ಯಯಕ್ಕೆ ಅಂತಾದೇಶ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦)ಎಂಬುದರಿಂದ ಉ ಪ್ರತ್ಯಯ. ಅಕಾರ ಅಂತಾದೇಶ. **ಅತೋ ಲೋಪಃ** ಎಂಬುದರಿಂದ ಅದಕ್ಕೆ ಲೋಪ. ಛಾಂದಸವಾಗಿ ಶಪ್. ಅದನ್ನು ನಿಮಿತ್ತೀಕರಿಸಿ ಉ ಪ್ರತ್ಯಯಕ್ಕೆ ಗುಣ. ಅವಾದೇಶ. ಛಾಂದಸವಾಗಿ ಅಡಾಗಮಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಉ ವಿಕರಣ ಸ್ವರ ಉಳಿಯುತ್ತದೆ.

**ಸುತುಕಾಃ**—ಬಹುವ್ರೀಹಿಯಲ್ಲಿ ಸುಸ್ವರಕ್ಕೆ ಬಾಧಕವಾಗಿ **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಅವೇಷನ್**—ವಿಷ್‌ಲೃ ವ್ಯಾಪ್ತೌ. ಧಾತು. ಛಾಂದಸವಾಗಿ ಲಙ್ ಬಹುವಚನದಲ್ಲಿ ಛಾಂದಸವಾಗಿ ಶಪ್. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧ ಗುಣ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಗಮುತ್**—ಗಮ್ಲೃ ಗತೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕ ವಾಗಿದೆ. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ತಿಪ್ ಪರವಾದಾಗ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತಪದದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಸಖ್ಯಾ**—ಸಖ್ಯುರ್ಭಾವಃ ಸಖ್ಯಮ್. **ಸಖ್ಯುರ್ಯಃ** ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಇಕಾರಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ॥ ೨ ॥



॥ ಸಂಹಿತಾಪಾಠಃ ॥

ಜೇತಾ ನೃಭಿರಿಂದ್ರಃ ಪೃತ್ಸು ಶೂರಃ ಶ್ರೋತಾ ಹವಂ ನಾಧಮಾನಸ್ಯ ಕಾರೋಃ ।
ಪ್ರಭರ್ತಾ ರಥಂ ದಾಶುಷ ಉಪಾಕ ಉದ್ಯಂತಾ ಗಿರೋ ಯದಿ ಚ ತ್ಮನಾ ಭೂತ್ ॥

॥ ಪದಪಾಠಃ ॥

ಜೇತಾ । ನೃಽಭಿಃ । ಇಂದ್ರಃ । ಪೃತ್ಽಸು । ಶೂರಃ । ಶ್ರೋತಾ । ಹವಂ । ನಾಧಮಾನಸ್ಯ । ಕಾರೋಃ ।
ಪ್ರಽಭರ್ತಾ । ರಥಂ । ದಾಶುಷಃ । ಉಪಾಕೇ । ಉತ್ಽಯಂತಾ । ಗಿರಃ । ಯದಿ । ಚ । ತ್ಮನಾ । ಭೂತ್ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಃ ಶೂರೋ ವಿಕ್ರಾಂತಃ ಸನ್ನೃಭಿಃ ಸಂಗ್ರಾಮನೇತೃಭಿರ್ಮರುದ್ಭಿಃ ಸಹಿತಃ ಸನ್ಪೃತ್ಸು ಸಂಗ್ರಾಮೇಷು ಜೇತಾ ಜಯಶೀಲಃ ಶತ್ರೂಣಾಂ ತಥಾ ನಾಧಮಾನಸ್ಯ ತ್ವದನುಗ್ರಹಂ ಯಾಚಮಾನಸ್ಯ ಕಾರೋಃ ಸ್ತೋತುರ್ಹವಮಾಹ್ವಾನಂ ಶ್ರೋತಾ ಭವತಿ । ಕಿಂಚ ಯದಿ ಚ ಯದಾ ಚ ತ್ಮನಾತ್ಮನಾನನ್ಯಪ್ರೇರಿತ ಏವ ಗಿರಃ ಸ್ತುತಿರೂಪಾಣಿ ವಚಾಂಸಿ ಸ್ತೋತ್ರಾನೋದ್ಯಂತೋಚ್ಛ್ರಯಿತಾ ಭೂತ್ ಭವೇತ್ ತದಾ ದಾಶುಷೋ ಹವಿರ್ದತ್ತವತೋ ಯಜಮಾನಸ್ಯೋಪಾಕೇ ಸಮೀಪನಾಮ್ನೈತತ್ । ಸಮೀಪ ಏವ ಯಾಗದೇಶೇ ರಥಂ ಪ್ರಭರ್ತಾ । ಸಮ್ಯಕ್ಪ್ರಭರನ್ಭವತಿ ॥ ಜೇತೇತ್ಯಾದಿಷು ತೃನಂತೇಷು ನ ಲೋಕಾವ್ಯಯೇತ್ಯಾದಿನಾ ಕರ್ಮಣಿ ಷಷ್ಠೀಪ್ರತಿಷೇಧಃ ॥ ಯದಾ ಸ್ತುತಿಂ ಶ್ರೋತುಮಿಚ್ಛತಿ ತದಾ ಸ್ವಯಮೇವ ಶೀಘ್ರಂ ರಥಂ ಧಾವಯಿತ್ವಾ ಯಾಗಂ ಪ್ರಾಪ್ನೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಶೂರಃ**—ಶೂರನಾದ | **ಇಂದ್ರಃ**—ಇಂದ್ರನು | **ನೃಭಿಃ**—ಸಂಗ್ರಾಮನಾಯಕರಾದ ಮರುತರಿಂದ ಸಹಿತನಾಗಿ | **ಪೃತ್ಸು**—ಯುದ್ಧಗಳಲ್ಲಿ | **ಜೇತಾ**—ಜಯಶೀಲನು (ಆಗುತ್ತಾನೆ) | (**ತಥಾ**—ಹಾಗೆಯೇ) | **ನಾಧಮಾನಸ್ಯ**—(ಅವನ ಅನುಗ್ರಹವನ್ನು) ಯಾಚಿಸುವ | **ಕಾರೋಃ**—ಸ್ತೋತೃವಿನ | **ಹವಂ**—ಕರೆಯನ್ನು | **ಶ್ರೋತಾ**—(ಕೇಳುವವನೂ) ಆಗುತ್ತಾನೆ | **ಯದಿ ಚ**—ಯಾವಾಗ | **ತ್ಮನಾ**—ತಾನಾಗಿಯೇ (ಅನನ್ಯಪ್ರೇರಿತನಾಗಿ) | **ಗಿರಃ**—ಸ್ತುತಿರೂಪ ವಾಕ್ಕುಗಳನ್ನು (ಸ್ತೋತೃಗಳನ್ನು) | **ಉದ್ಯಂತಾ ಭೂತ್**—ಎತ್ತಿಹಿಡಿಯುವವನಾಗುತ್ತಾನೋ | (**ತದಾ**—ಆಗ) | **ದಾಶುಷಃ**—ಹವಿರ್ದಾತೃವಾದ ಯಜಮಾನನ | **ಉಪಾಕೇ**—ಸಮೀಪದಲ್ಲಿಯೇ | **ರಥಂ**—ರಥವನ್ನು | **ಪ್ರಭರ್ತಾ**—ಶೀಘ್ರವಾಗಿ ತರುವವನಾಗುತ್ತಾನೆ.

॥ ಭಾವಾರ್ಥ ॥

ಶೂರನೂ, ಮರುತ್ಸಹಿತನಾಗಿ ಸಂಗ್ರಾಮಗಳಲ್ಲಿ ಜಯಶೀಲನೂ, ಅನುಗ್ರಹಾಪೇಕ್ಷಿಯಾದ ಯಜಮಾನನ ಆಹ್ವಾನವನ್ನು ಮನ್ನಿಸುವವನೂ ಆದ ಇಂದ್ರನು ಸ್ತೋತೃವಿನ ಸ್ತುತಿಗಳನ್ನು ಕೇಳಬೇಕೆಂಬ ಇಚ್ಛೆಬಂದಾಗ, ಯಜಮಾನನ ಸಮೀಪಕ್ಕೇ ರಥವನ್ನು ವೇಗವಾಗಿ ನಡೆಯಿಸಿಕೊಂಡು ಬರುತ್ತಾನೆ.

## English Translation.

Indra, the hero, the victor in battles, along with the leaders (of his hosts, the Maruts), will hear the invocation of his supplicating worshipper, and when disposed to accept his praises, will, of his own accord, drive his chariot close to the donor (of the oblation).

॥ ವಿಶೇಷವಿಷಯಗಳು ॥

**ಕಾರೋಃ**—ಈ ಪದಕ್ಕೆ ಸ್ತೋತ್ರವನ್ನು ಪಠಿಸತಕ್ಕ ಯಜಮಾನನೆಂದು ಅರ್ಥಮಾಡಿದೆ. ನಿರುಕ್ತಕಾರರು **ಕಾರು** ಶಬ್ದವನ್ನು **ಸ್ತೋತೃ** ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೧೬) **ರೇಭಃ, ಜರಿತಾ** ಇತ್ಯಾದಿ ಪದಗಳು ಪರ್ಯಾಯಪದಗಳೆಂದು ತಿಳಿಯುತ್ತದೆ ಎಂದು ವಿವರಿಸಿ ಋಕ್ಸಂಹಿತೆಯಲ್ಲಿನ—

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।**
**ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥**

(ಋ. ಸಂ. ೧೦-೧೧೦-೭)

ಎಂಬ ಋಕ್ಕಿನಲ್ಲಿ **ಕರ್ತಾರೌ ಋತ್ವಿಜೌ ।** ಯಜ್ಞಕ್ರಿಯೆಗೆ ಕರ್ತೃಗಳಾದ ಇಬ್ಬರು ಋತ್ವಿಕ್ಕುಗಳೆಂದರ್ಥಮಾಡಿದ್ದಾರೆ. ಬೃಹದ್ದೇವತಾಕಾರರು ಈ ಪದವನ್ನು ಕವಿಗಳು, ಸೂಕ್ತದ್ರಷ್ಟೃಗಳಾದ ಋಷಿಗಳು ಎಂಬರ್ಥದಲ್ಲಿ ಉಪಯೋಗಿಸಿದ್ದಾರೆ ಸ್ತುತಿನಿರ್ಮಾಪಕರು ಎಂಬರ್ಥವನ್ನು ತೋರಿಸುತ್ತದೆ.

**ಅಗ್ನೇಸ್ತು ಯಾನಿ ಸೂಕ್ತಾನಿ ಪಂಚನಾಮಾನಿ ಕಾರವಃ ।**
**ಷಡ್ವಿಂಶತಿಸ್ತಥೇಂದ್ರಸ್ಯ ಪ್ರಾಹುಃ ಸೂರ್ಯಸ್ಯ ಸಪ್ತ ಚ ॥**

(ಬೃ. ದೇ. ೨-೨೨)

**ಪೃಥಕ್ತ್ವೇನ ಸಮಾಸೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥** (ಬೃ. ದೇ. ೨-೨೮)

ಇತ್ಯಾದಿ ವಾಕ್ಯಗಳಲ್ಲಿ ಕಾರುಗಳು ಸ್ತುತಿಸಿದ್ದಾರೆಂದು ಹೇಳಿ ಇದು ಕವಿಪರ್ಯಾಯಪದವೆಂದು ತಿಳಿಸಿದ್ದಾರೆ. ಋಕ್ಸಂಹಿತೆಯಲ್ಲಿಯೂ ಸಹ,

**ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ ।**
**ಉಭೇ ವಾಚೌ ವದತಿ ಸಾಮಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನು ರಾಜತಿ ॥**

(ಋ. ಸಂ. ೨-೪೩-೧)

ಇತ್ಯಾದಿ ಋಕ್ಕುಗಳಲ್ಲಿ **ಸ್ತೋತಾರಃ** ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ತುತಿನಿರ್ಮಾಪಕರಾದ ಕವಿಗಳು (ಋಷಿಗಳು) ಎಂದರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಜೇತಾ**—ಜಿ ಜಯೇ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದೇ ಮೊದಲ್ಗೊಂಡು ಮೂರು ತೃನ್ನಂತ ಶಬ್ದಗಳ ಯೋಗವಿರುವಾಗ **ಕರ್ತೃಕರ್ಮಣೋಃ ಕೃತಿ** ಎಂಬುದರಿಂದ ಕರ್ಮಕ್ಕೆ ಷಷ್ಠೀ ಪ್ರಾಪ್ತವಾದರೂ **ನಲೋಕಾವ್ಯಯ—**(ಪಾ. ಸೂ. ೨-೩-೬೯) ಎಂಬುದರಿಂದ ನಿಷೇಧ ಬರುವುದರಿಂದ ಷಷ್ಠೀ ಬರುವುದಿಲ್ಲ.

**ಪೃತ್ಸು**—ಪೃತನಾಶಬ್ದ. ಇದಕ್ಕೆ ಸಪ್ತಮೀ ಬಹುವಚನಪರವಾದಾಗ **ಮಾಂಸಪೃತನಾಸಾನೂನಾಂ ಮಾಂಸ್‌ಪೃತ್ಸ್ನವೋ ಶಸಾದೌ ವಾ ವಾಚ್ಯಾಃ** ಎಂಬ ವಚನದಿಂದ ಪೃದಾದೇಶ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನಾಧಮಾನಸ್ಯ**—ನಾಧೃ ಯಾಚ್ಞಾಯಾಂ ಧಾತು. ಲಟಿಗೆ ಶಾನಚಾದೇಶ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್**—(ಪಾ.ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದಾಶುಷಃ**—ದಾಶೃ ದಾನೇ ಧಾತು. **ದಾಶ್ವಾನ್ ಸಾಹ್ವಾನ್**—(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತನಿಪಾತಿತವಾಗಿದೆ. ಷಷ್ಠೀ ಏಕವಚನ ಪರವಾದಾಗ ಭಸಂಜ್ಞಾ ಇರುವುದರಿಂದ ಸಂಪ್ರಸಾರಣ. ಪೂರ್ವರೂಪ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಪ್ರಭರ್ತಾ**—ಭೃಞ್ ಭರಣೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. **ತಾದೌ ಚ ನಿತಿಕೃತ್ಯತೌ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ.

**ತ್ಮನಾ**—ಆತ್ಮನಾ ಎಂದು ರೂಪವಾದಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆದಿಯ ಅಕಾರಕ್ಕೆ ಲೋಪ. ॥ ೩ ॥



॥ ಸಂಹಿತಾಪಾಠಃ ॥

ಏವಾ ನೃಭಿರಿಂದ್ರಃ ಸುಶ್ರವಸ್ಯಾ ಪ್ರಖಾದಃ ಪೃಕ್ಷೋ ಅಭಿ ಮಿತ್ರಿಣೋ ಭೂತ್ ।
ಸಮರ್ಯ ಇಷಃ ಸ್ತವತೇ ವಿವಾಚಿ ಸತ್ರಾಕರೋ ಯಜಮಾನಸ್ಯ ಶಂಸಃ ॥ ೪ ॥

॥ ಪದಪಾಠಃ ॥

ಏವ । ನೃಽಭಿಃ । ಇಂದ್ರಃ । ಸುಽಶ್ರವಸ್ಯಾ । ಪ್ರಽಖಾದಃ । ಪೃಕ್ಷಃ । ಅಭಿ । ಮಿತ್ರಿಣಃ । ಭೂತ್ ।
ಸಽಮರ್ಯೇ । ಇಷಃ । ಸ್ತವತೇ । ವಿಽವಾಚಿ । ಸತ್ರಾಽಕರಃ । ಯಜಮಾನಸ್ಯ । ಶಂಸಃ ॥ ೪ ॥

॥ ಸಾಯಣಭಾಷ್ಯಂ ॥

ಅಯಮಿಂದ್ರೋ ನೃಭಿಃ ಕರ್ಮನಿರ್ವಾಹಕೈರ್ಯಜಮಾನೈರ್ದತ್ತಂ ಪೃಕ್ಷೋ ಹವಿರ್ಲಕ್ಷಣಮನ್ನಂ ಸುಶ್ರವಸ್ಯಾ ಶೋಭನಾನ್ನೇಚ್ಛಯಾನ್ನೇಚ್ಛುರ್ವಾ ಪ್ರಖಾದಃ ಪ್ರಕರ್ಷೇಣ ಖಾದಿತಾ ಏವೈವಂ ಏವಮೇವ ಪೂರ್ವಂ ಯಥಾ ತಥೈವ ಮಿತ್ರಿಣಃ ಸಹಾಯವತೋಽಪಿ ಯಜಮಾನಸ್ಯ ಶತ್ರೂನಭಿ ಭೂತ್ । ಅಭಿಭವತಿ । ಯದ್ವಾ । ನೃಭಿರ್ನ್ಯಸ್ತಿನೇತೃಭಿರ್ಮರುದ್ಭಿಃ ಸಹಿತೋಽಯಮಿಂದ್ರಃ ಸುಶ್ರವಸ್ಯಾ ಪ್ರಖಾದಃ ಸನ್ನೇವಮೇವ ಮಿತ್ರಿಣ ಋತ್ವಿಗ್ರೂಪಮಿತ್ರವತೋ ಯಜಮಾನಸ್ಯಾರ್ಥೇ ತದಭಿಮುಖತಾಯಾಭಿ ಭೂತ್ । ಅಭೀತ್ಯನರ್ಥಕಃ । ಭವತಿ । ಅಭಿಮುಖ್ಯೇನ ವಾ ಭವತಿ । ತಸ್ಯ ಹವಿಃ ಸ್ವೀಕೃತ್ಯ ತದಭಿಮುಖತಾಯ ಭವತೀತ್ಯರ್ಥಃ । ಅಥ ತಥಾಭೂಃ ಸನ್ ವಿವಾಚಿ ವಿವಿಧಪರಸ್ಪರಾಹ್ವಾನಧ್ವನಿಯುಕ್ತೇ ಸಮರ್ಯೇ ಸಂಗ್ರಾಮೇ ವಿವಿಧಸ್ತೋತ್ರ ಶಸ್ತ್ರಧ್ವನಿಯುಕ್ತೇ ಸಮರ್ಯೇ ಮರ್ತ್ಯಯುಕ್ತೇ ಯಜ್ಞೇ ವಾ ತನ್ನಿಮಿತ್ತಂ ಯಜಮಾನಸ್ಯ ಶಂಸಃ ಶಂಸಕಃ ಸನ್ ಸತ್ರಾಕರಃ ಫಲಾನಾಂ ಸತ್ಯಕಾರ್ಯಯಮಿಂದ್ರ ಇಷೋ ಹವಿರ್ಲಕ್ಷಣಮನ್ನಂ ಸ್ತವತೇ । ಸ್ತೌತಿ ॥

‖ ಪ್ರತಿಪದಾರ್ಥ ‖

**ಇಂದ್ರಃ**—ಇಂದ್ರನು| **ನೃಭಿಃ**—ಕರ್ಮನಿರ್ವಾಹಕರಾದ ಯಜಮಾನರಿಂದ ದತ್ತವಾದ | **ಪೃಕ್ಷಃ**—ಹವಿರ್ಲಕ್ಷಣಾನ್ನವನ್ನು | **ಸುಶ್ರವಸ್ಯಾ**—ಶೋಭನಾನ್ನೇಚ್ಛುವಾಗಿ ಅಥವಾ ಅನ್ನೇಚ್ಛೆಯಿಂದ | **ಪ್ರಖಾದಃ**—ಚೆನ್ನಾಗಿ ಭಕ್ಷಿಸುವವನು (ಆಗುತ್ತಾನೆ) | **ಏವ**—ಇದೇರೀತಿ | **ಮಿತ್ರಿಣಃ**—(ಯಜಮಾನನು) ಸಹಾಯಯುಕ್ತನಾಗಿದ್ದರೂ (ಅವನ ಶತ್ರುಗಳನ್ನು) | **ಅಭಿ ಭೂತ್**-ಸೋಲಿಸುತ್ತಾನೆ; [ಅಥವಾ **ನೃಭಿಃ**-ವೃಷ್ಟಿನೇತೃಗಳಾದ ಮರುದ್ದೇವತೆಗಳಿಂದ ಸಹಿತನಾದ| ಇಂದ್ರಃ—(ಈ) ಇಂದ್ರನು | **ಸುಶ್ರವಸ್ಯಾ**—ಮಂಗಳಕರಾನ್ನೇಚ್ಛೆಯಿಂದ | **ಪೃಕ್ಷಃ**—ಹವಿರ್ಲಕ್ಷಣಾನ್ನವನ್ನು | **ಪ್ರಖಾದಃ** –ಚೆನ್ನಾಗಿ ಭಕ್ಷಿಸಿದವನಾಗಿ | **ಏವ**—ಹಾಗೆಯೇ | **ಮಿತ್ರಿಣಃ**—ಋತ್ವಿಗ್ರೂಪ ಮಿತ್ರಯುಕ್ತನಾದ ಯಜಮಾನನ(ಅಭಿಮತಕ್ಕೋಸ್ಕರ) | **ಅಭಿ ಭೂತ್**-ಆಗುತ್ತಾನೆ(ಅನಂತರ) ]| **ವಿವಾಚಿ**—ವಿವಿಧ ಪರಸ್ಪರಾಹ್ವಾನಯುಕ್ತವಾದ | **ಸಮರ್ಯೇ**-ಸಂಗ್ರಾಮದಲ್ಲಿ[ಅಥವಾ | **ವಿವಾಚಿ**-ವಿವಿಧಸ್ತೋತ್ರಶಸ್ತ್ರಧ್ವನಿಯುಕ್ತವಾದ | **ಸಮರ್ಯೇ**-ಮನುಷ್ಯರಿಂದಸಹಿತವಾದ ಯಜ್ಞದಲ್ಲಿ] | **ಯಜಮಾನಸ್ಯ**—ಯಜಮಾನನ | **ಶಂಸಃ**-ಶಂಸಕನೂ | **ಸತ್ರಾಕರಃ**—ಫಲಗಳನ್ನು ಸತ್ಯವನ್ನಾಗಿ ಮಾಡುವವನೂ ಆದ | **ಇಂದ್ರಃ**—ಇಂದ್ರನು | **ಇಷಃ**—ಹವಿರ್ಲಕ್ಷಣಾನ್ನವನ್ನು | **ಸ್ತವತೇ**—ಸ್ತುತಿಸುತ್ತಾನೆ.

‖ ಭಾವಾರ್ಥ ‖

ಶೋಭನಾನ್ನೇಚ್ಛುವಾದ ಈ ಇಂದ್ರನು ಯಜಮಾನರಿಂದ ದತ್ತವಾದ ಹವೀರೂಪಾನ್ನವನ್ನು ಹೆಚ್ಚಾಗಿ ಭಕ್ಷಿಸಿ, ಋತ್ವಿಗಾದಿಸಹಿತನಾದ ಯಜಮಾನನಿಗೆ ಅಭಿಮತದಾಯಕನಾಗುತ್ತಾನೆ; ಸ್ತೋತ್ರಾದಿ ವಿವಿಧಧ್ವನಿವಿಶಿಷ್ಟವಾದ ಯಾಗದಲ್ಲಿ, ಯಜಮಾನನನ್ನು ಪ್ರಶಂಸಿಸುತ್ತಾ, ತದ್ದತ್ತಹವಿರಾದ್ಯನ್ನವನ್ನು ಪ್ರಶಂಸಿಸುತ್ತಾನೆ.

English Translation.

Verily, Indra, through desire of (sacrificial) food, is the devourer (of that which is presented) by (his) worshippers, and overcomes (the adversaries) of his friend : in the many-voiced assembly (of men), Indra, the faithful (performer of his promise), commeding (the piety) of his worshi pper, approves of the (offered) food.

‖ ವಿಶೇಷವಿಷಯಗಳು ‖

**ಸಮರ್ಯೇ**—**ಸಮರ**ಶಬ್ದಕ್ಕೆ ಸಾಯಣರು ಮರ್ತ್ಯರಿಂದ ಕೂಡಿದ ಯಜ್ಞದಲ್ಲಿ ಎಂದರ್ಥಮಾಡಿದ್ದಾರೆ. ಸಾಧಾರಣವಾಗಿ **ಸಮರ್ಯ** ಶಬ್ದವು **ಸಂಗ್ರಾಮ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩.೯) ಯುದ್ಧವೆಂದೇ ಅರ್ಥವಾಗುತ್ತದೆ **ಮರ್ಯಾಃ ಮನುಷ್ಯಾಃ ತೈಃ ಸಹ ವರ್ತತೆ ಇತಿ ಸಮರ್ಯಃ ಸಂಗ್ರಾಮಃ |** ಯಾವಾಗಲೂ ಯುದ್ಧದಲ್ಲಿ ಮಾನವರು ಗುಂಪುಕಟ್ಟಿಕೊಂಡು ಕೂಡಿರುವುದರಿಂದ **ಸಮರ್ಯ** ಎಂದಾಗಿದೆ. **ಸಮರ್ಯಜಿತ್** ಇತ್ಯಾದಿ ಜಯಾರ್ಥಕವಾದ ಶಬ್ದದೊಡನೆ ಕೂಡಿರುವಾಗ ನಿಯತವಾಗಿ **ಸಮರ್ಯ** ಶಬ್ದಕ್ಕೆ ಸಂಗ್ರಾಮವೆಂದೇ ಅರ್ಥವಾಗುತ್ತದೆ. ಆದರೆ ಕೇವಲ **ಸಮರ್ಯ** ಶಬ್ದವಿರುವಾಗ ಯುದ್ಧವೆಂಬ ಅರ್ಥವೇ ನಿಯತವಾಗಿರಬೇಕಾಗಿಲ್ಲ. **ಮರ್ಯ**ರೊಂದಿಗೆ (ಮನುಷ್ಯರೊಂದಿಗೆ) ಕೂಡಿರುವುದು ಯುದ್ಧರಂಗಮಾತ್ರವಲ್ಲ, ಯಜ್ಞವೂ ಆಗಬಹುದು. ಉದಾಹರಣೆಗೆ—

**ಯೋ ವಾಂ ಯಜ್ಞೋ ನಾಸತ್ಯಾ ಹವಿಷ್ಮಾನ್ಕೃತಬ್ರಹ್ಮಾ ಸಮರ್ಯೋ ೩ ಭವಾತಿ ।**

(ಋ. ಸಂ. ೭-೭೦-೬)

ಎಂಬ ಋಕ್ಕಿನಲ್ಲಿ **ಋತ್ವಿಗ್ರೂಪೈರ್ಮರ್ತ್ಯೈಃ ಸಹಿತಃ ಯಜ್ಞಃ ಕರ್ತಾ ಯಜಮಾನಃ** ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅದರಂತೆಯೇ ಮರ್ತ್ಯಯುಕ್ತವಾದ ಯಜ್ಞವೆಂದರ್ಥಮಾಡಿದ್ದಾರೆ. ಆದರೆ ರೂಢಿಯಲ್ಲಿ ಸಮರ್ಯ ಶಬ್ದವು ಸಂಗ್ರಾಮ ಪರ್ಯಾಯವಾಗಿಯೇ ಅಧಿಕವಾಗಿರುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಆ ಅರ್ಥಕ್ಕೂ ಅವಕಾಶವಿದೆ ಯೆಂದು ತೋರಿಸಿದ್ದಾರೆ. ಹೇಗೆಂದರೆ,

**ವಿವಾಚಿ ಸಮರ್ಯೇ** ಎನ್ನುವಾಗ, **ಸಮರ್ಯೇ** ಎಂಬುದನ್ನು ಸಂಗ್ರಾಮಾರ್ಥದಲ್ಲಿ ತೆಗೆದುಕೊಂಡರೆ, ಆಗ **ವಿವಾಚಿ** ಎಂಬ ವಿಶೇಷಣಕ್ಕೆ **ವಿವಿಧಪರಸ್ಪರಾಹ್ವಾನಧ್ವನಿಯುಕ್ತೇ ।** ಪರಸ್ಪರ ಸಹಾಯಕ್ಕಾಗಿ ಆಹ್ವಾನಮಾಡುವ ಶಬ್ದವುಳ್ಳ ಎಂಬರ್ಥವೂ, **ಸಮರ್ಯೇ** ಎಂಬುದಕ್ಕೆ **ಯಜ್ಞೇ** ಎಂದರ್ಥಮಾಡಿದರೆ **ವಿವಾಚಿ** ಎಂಬ ವಿಶೇಷಣಕ್ಕೆ **ವಿವಿಧಸ್ತೋತ್ರಶಸ್ತ್ರಧ್ವನಿಯುಕ್ತೇ**-ನಾನಾ ವಿಧವಾದ ಸ್ತೋತ್ರಾದಿ ಧ್ವನಿಗಳಿಂದ ಕೂಡಿದ ಎಂಬರ್ಥವೂ ಆಗುತ್ತದೆ. ಈ ಅರ್ಥವನ್ನನುಸರಿಸಿಯೇ **ಮಿತ್ರಿಣಃ ಅಭಿಭೂತ್** ಎಂಬುದಕ್ಕೂ ಅರ್ಥವನ್ನು ಹೇಳಬೇಕು. ಸಂಗ್ರಾಮಾರ್ಥದಲ್ಲಿಯಾದರೆ, **ಮಿತ್ರಿಣಃ ಸಹಾಯವತಃ ಅಪಿ (ಯಜಮಾನಸ್ಯ) ಶತ್ರೂನ್ ಅಭಿಭವತಿ ।** ಯಜಮಾನನ ಶತ್ರುಗಳು ಸಂಗ್ರಾಮದಲ್ಲಿ ಅನೇಕ ಮಿತ್ರರೊಡಗೂಡಿದ್ದರೂ ಸಹ ಸೋಲಿಸಬಹುದೆಂದೂ, ಅಲ್ಲದೇ **ಯಜ್ಞಾರ್ಥ**ದಲ್ಲಿಯಾದರೆ, ನಾನಾ ವಿಧವಾದ ಋತ್ವಿಗಾದಿ ಮಿತ್ರರೊಡಗೂಡಿದ ಯಜಮಾನನಿಗೆ ಸಹಾಯಕನಾಗುತ್ತಾನೆಂದೂ ಅರ್ಥವಾಗುತ್ತದೆ.

**ಸತ್ರಾಕರಃ—ಸತ್ರಾ** ಶಬ್ದವು **ಸತ್ಯ** ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೩). **ಸತ್ರಾಜಿತ್, ಸತ್ರಾಸಹ** ಎಂಬುದೂ ಸಹ ಕಾರ್ಯದ ಅಥವಾ ಫಲದ ಸತ್ಯತ್ವವನ್ನು ತೋರಿಸುತ್ತದೆ. ಕೆಲವೆಡೆಗಳಲ್ಲಿ **ಸತ್ರಾ** ಎಂಬ ಪದಕ್ಕೆ ಸರ್ವದಾ ಎಂಬರ್ಥವನ್ನೂ ಸಹ ಹೇಳಿದಾರೆ. ಉದಾಹರಣೆಗೆ—

**ತುವಿಗ್ರಯೇ ವಹ್ನಯೇ ದುಷ್ಟರೀತವೇ ಸತ್ರಾಸಾಹೇ ನಮ ಇಂದ್ರಾಯ ವೋಚತ ।**

(ಋ. ಸಂ ೨-೨೧-೨)

ಇತ್ಯಾದಿ ಋಕ್ಕುಗಳಲ್ಲಿ **ಸರ್ವದಾ ಅಭಿಭವಿತ್ರೇ** ಅಥವಾ **ಮಹತಃ ಅಭಿಭವಿತ್ರೇ** ಎಂದು ವಿವರಿಸಿದೆ **ಸರ್ವದಾ** ಎನ್ನುವಾಗಲೂ ಸಹ ನಿಯತವಾಗಿಯೂ, ಒಂದು ಸಲವೂ ತಪ್ಪದೆಯೂ ಶತ್ರುನಿಗ್ರಹವಾಗುವುದರಿಂದ ಇಲ್ಲಿಯೂ ಸತ್ಯಾರ್ಥವೇ ಆಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಏವಾ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸುಪ್ರವಸ್ಯಾ—ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಆತ್ಮೇಚ್ಛಾದಲ್ಲಿ ಕ್ಯಚ್. **ಅಪ್ರತ್ಯಯಾತ್**(ಪಾ. ಸೂ. ೩-೩-೧೦೨) ಎಂಬುದರಿಂದ ಕ್ಯಜಂತದಮೇಲೆ ಅಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ತೃತೀಯಾ ಏಕವಚನ ಪರವಾದಾಗ **ಸುಪಾಂ ಸುಲುಕ್**— (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಪ್ರಖಾದಃ**— ಖಾದೃ ಭಕ್ಷಣೇ. ಧಾತು. **ನಂದಿಗ್ರಹ ಪಚಾದಿಭ್ಯೋ**— (ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಅಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಿತ್ರಿಣಃ**— ಮಿತ್ರಮಸ್ಯ ಅಸ್ತಿ ಇತಿ ಮಿತ್ರೀ. ತಸ್ಯ ಮಿತ್ರಿಣಃ. **ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಷಷ್ಠೀ ಏಕವಚನಾಂತರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಸಮರ್ಯೇ**— ಮೃಜ್ ಪ್ರಾಣತ್ಯಾಗೇ. ಧಾತು. **ಛಂದಸಿನಿಷ್ಟರ್ಕ್ಯ ದೇವಹೂಯ**—(ಪಾ. ಸೂ. ೩-೧-೧೨೩) ಎಂಬುದರಿಂದ ಯದಂತವಾಗಿ ನಿಪಾತಿತವಾಗಿದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸ್ತವತೇ**— ಷ್ಟುಞ್ ಸ್ತುತೌ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. ಛಾಂದಸವಾಗಿ ಶಪಿಗೆ ಲುಕ್ ಬರುವುದಿಲ್ಲ. ಅದನ್ನು ನಿಮಿತ್ತೀಕರಿಸಿ ಉಕಾರಕ್ಕೆ ಗುಣ. ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿವಾಚಿ**— ವಿವಿಧಾಃ ವಾಚಃ ಯಸ್ಮಿನ್. ತಸ್ಮಿನ್. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸತ್ರಾಕರಃ**— ಡುಕೃಞ್ ಕರಣೇ. ಧಾತು. ಪಚಾದಿನಿಬಂಧನವಾಗಿ ಅಚ್ ಪ್ರತ್ಯಯ ಅದನ್ನು ನಿಮಿತ್ತೀಕರಿಸಿ ಋಕಾರಕ್ಕೆ ಗುಣ. ಶೇಷ ಷಷ್ಠೀ ಸಮಾಸ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. || ೪ ||



|| ಸಂಹಿತಾಪಾಠಃ ||

ತ್ವಯಾ ವಯಂ ಮಘವನ್ನಿಂದ್ರ ಶತ್ರೂನಭಿ ಷ್ಯಾಮ ಮಹತೋ ಮನ್ಯಮಾನಾನ್।
ತ್ವಂ ತ್ರಾತಾ ತ್ವಮು ನೋ ವೃಧೇ ಭೂರ್ವಿದ್ಯಾಮೇಷಂ ವೃಜನಂ ಜೀರದಾನುಂ ॥

|| ಪದಪಾಠಃ ||

ತ್ವಯಾ । ವಯಂ । ಮಘ್ವನ್ । ಇಂದ್ರ । ಶತ್ರೂನ್ । ಅಭಿ । ಸ್ಯಾಮ । ಮಹತಃ । ಮನ್ಯಮಾನಾನ್ ।
ತ್ವಂ । ತ್ರಾತಾ । ತ್ವಂ । ಊಂ ಇತಿ । ನಃ । ವೃಧೇ । ಭೂಃ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥

|| ಸಾಯಣಭಾಷ್ಯಂ ||

ಹೇ ಮಘವನ್ಧನವನ್ನಿಂದ್ರ ತ್ವಯಾ ಸಹಾಯೇನ ವಯಂ ಯಜಮಾನಾ ಮಹತೋ ಮನ್ಯಮಾನಾನತಿಬಲಾನವಧ್ಯಾನ್ಮನ್ಯಮಾನಾಞ್ಛತ್ರೂನಭಿ ಷ್ಯಾಮ । ಅಭಿಭವಿತಾರೋ ಭವೇಮ । ಹೇ ಇಂದ್ರ

**ತ್ವಂ ತ್ರಾತಾ ತ್ವಮೇವಾಸ್ಮಾಕಂ ರಕ್ಷಕಃ । ಅತಸ್ತ್ವಮು ತ್ವಮೇವ ನೋಽಸ್ಮಾಕಂ ವೃಧೇ ಧನಾದಿವರ್ಧನಾಯ ಭೂಃ । ಭವ । ವಿದ್ಯಾಮೇತ್ಯಾದಿ ಗತಂ ॥**

॥ ಪ್ರತಿಪದಾರ್ಥ ॥

**ಮಘವನ್**—ಧನವಿಶಿಷ್ಟನಾದ । **(ಹೇ)ಇಂದ್ರ**—ಎಲೈಇಂದ್ರನೇ । **ತ್ವಯಾ**—ಸಹಾಯ ಭೂತನಾದ ನಿನ್ನಿಂದ ಯುಕ್ತರಾದ । **ವಯಂ**—ಯಾಗಕರ್ತೃಗಳಾದ ನಾವು । **ಮಹತಃ ಮನ್ಯಮಾನಾನ್**—ಅತಿಬಲಾಢ್ಯರೆಂದು ತಿಳಿದಿರುವ । **ಶತ್ರೂನ್**—ಶತ್ರುಗಳನ್ನು । **ಅಭಿಷ್ಯಾಮ**—ಸೋಲಿಸುವವರಾಗುತ್ತೇವೆ । **ಹೇ ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನೇ । **ತ್ರಾತಾ**—[ನಮಗೆ]ರಕ್ಷಕನು । [ಅದುದರಿಂದ]**ತ್ವಂ ಉ**—ನೀನೇ । **ನಃ**—ನಮ್ಮ । **ವೃಧೇ**—ಧನಾದಿವೃದ್ಧಿಗೆ । **ಭೂಃ**—ಆಗು । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಸ್ಸವನ್ನೂ । **ವಿದ್ಯಾಮ**—ಪಡೆಯೋಣ.

॥ ಭಾವಾರ್ಥ ॥

ಎಲೈ ಧನವಂತನಾದ ಇಂದ್ರನೇ, ನೀನೇ ನಮಗೆ ರಕ್ಷಕನು ; ನಿನ್ನ ಸಹಾಯದಿಂದಲೇ, ಅತಿಬಲಾಢ್ಯರು ಅವಧ್ಯರು ಎಂದು ತಿಳಿದುಕೊಂಡಿದ್ದ ನಮ್ಮ ಶತ್ರುಗಳನ್ನೂ ಸೋಲಿಸಿದೆವು ; ನಮಗೆ ಧನಾದಿ ಸಮೃದ್ಧಿಯನ್ನೂ, ಆಹಾರ,ಬಲ ಮತ್ತು ದೀರ್ಘಾಯುಸ್ಸುಗಳನ್ನೂ ಅನುಗ್ರಹಿಸು.

English Translation.

By you, opulent Indra, may we overcome our mighty and formidable enemies : you are our protector : may you be propitious to our prosperity, that we may thence obtain food, strength, and long life.

॥ ವಿಶೇಷವಿಷಯಗಳು ॥

**ಮಘವನ್—ಮಘ**ಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಈ ಪದಕ್ಕೆ ನಿರುಕ್ತಕಾರರ ನಿರ್ವಚನವು ಈ ರೀತಿಯಲ್ಲಿದೆ.

**"ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ"** (ನಿ. ೧-೭)

ದಾನಾರ್ಥಕವಾದ **ಮಂಹ್** ಧಾತುವಿನಿಂದ ಮಘ ಶಬ್ದವು ನಿಷ್ಪನ್ನವಾಗಿ ಧನವೆಂಬರ್ಥವನ್ನು ಕೊಡುತ್ತದೆಂದು ವಿವರಿಸಿ ನಿರುಕ್ತಕಾರರು ಋಕ್ಸಂಹಿತೆಯಲ್ಲಿನ—

**ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।**
**ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್‌ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥**

(ಋ. ಸಂ. ೨-೧೧-೨೧)

ಎಂಬ ಋಕ್ಕನ್ನುದಾಹರಿಸಿ **ಮಘೋನೀ** ಎಂಬ ಪದದ ಅರ್ಥವನ್ನು ತಿಳಿಸಿದ್ದಾರೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. **ಮಘ** ವನ್ನು ಉಳ್ಳೋಣದರಿಂದ **ಮಘವಾ** ಎಂದು ಇಂದ್ರನಿಗೆ

ಪರ್ಯಾಯವಾದ ಪದವಾಗಿದೆ. ಇದಲ್ಲದೆ **ಮಘವಾ** ಎಂಬುದಕ್ಕೆ ವಿಷ್ಣುವಿನೊಡನೆ ಕೂಡಿಕೊಂಡಿರುವ ಇಂದ್ರನೆಂದು ಹೇಳಿದರೂ ತಪ್ಪಾಗಲಾರದು. ಇಂದ್ರನು ಅಸುರಾದಿಗಳೊಡನೆ ಯುದ್ಧಮಾಡುವಾಗ ವಿಷ್ಣುವಿನ ಸಹಾಯವನ್ನು ಪಡೆಯುವುದರಿಂದಲೂ, ವಿಷ್ಣುವಿಗೆ **ಮಖ** ನೆಂಬ ಹೆಸರು ಪ್ರಸಿದ್ಧವಾಗಿರುವುದರಿಂದಲೂ ಸಹ ಈ ಅರ್ಥವನ್ನು ಇಂತಹ ಸಂದರ್ಭಗಳಲ್ಲಿ ಹೇಳಲು ಶ್ರುತಿಯ ಆಧಾರವಿರುತ್ತದೆ. ಹೇಗೆಂದರೆ—

**ಸ ಉ ಏವ ಮಖಃ ಸ ವಿಷ್ಣುಃ । ತತ ಇಂದ್ರೋ ಮಖವಾನಭವನ್ಮಖವಾನ್ಹ ವೈ ತಂ ಮಘವಾ ನಿತ್ಯಾಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾಃ ।**

(ಶ. ಬ್ರಾ. ೧೪-೧-೧-೧೩)

ಮಖವೇ ವಿಷ್ಣುವಾದುದರಿಂದಲೂ, ಇಂದ್ರನು ಇಂತಹ ಮಖವಂತನಾದುದರಿಂದಲೂ, ಇಂತಹ ಮಖವಂತನಾದ ಇಂದ್ರನನ್ನೇ ಮಘವಂತನೆಂದು ಪರೋಕ್ಷಕಾಮಿಗಳಾದ ದೇವತೆಗಳು ಕರೆಯುತ್ತಾರೆ ಎಂದು ಶತಪಥಬ್ರಾಹ್ಮಣದಲ್ಲಿ ಮಘವಚ್ಛಬ್ದವನ್ನು ವಿವರಿಸಿದೆ. ಅಲ್ಲದೆ,

**ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ ನವತಿಂ ಚ ಶ್ನಥಿಷ್ಟಂ ।**

(ಋ. ಸಂ. ೭-೯೯-೫)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ವಿಷ್ಣುವಿನೊಡನೆ ಸೇರಿಕೊಂಡು ಅಸುರರ ಹನನವನ್ನು ಮಾಡಿದನೆಂದು ವರ್ಣಿತವಾಗಿರುವುದರಿಂದಲೂ, ಅಂತಹ ವಿಷ್ಣುವಿನೊಡನೆ ಸೇರಿಕೊಂಡಿರುವುದರಿಂದ **ಮಘವಾ** ಎಂಬ ವಿಶೇಷಣವಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ಯಾಮ**— ಅಸ ಭುವಿ. ಧಾತು. ಲಙ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ಪೂರ್ವದಲ್ಲಿ ಅಭಿ ಎಂಬ ಉಪಸರ್ಗವಿರುವುದರಿಂದ **ಉಪಸರ್ಗಪ್ರಾದುಭ್ಯಾರ್ಮಸ್ತಿರ್ಯಚ್ ಪರಃ** (ಪಾ. ಸೂ. ೮-೩-೮೭) ಎಂಬುದರಿಂದ ಆದಿ ಸಕಾರಕ್ಕೆ ಷತ್ವ ಬರುತ್ತದೆ.

**ಮಹತಃ**— **ಬೃಹನ್ಮಹತೋರುಪಸಂಖ್ಯಾನಮ್** ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಮನ್ಯಮಾನಾನ್**— ಮನು ಅವಬೋಧನೇ ಧಾತು. ಲಟಿಗೆ. ಶಾನಚಾದೇಶ. ಶ್ಯನ್ ವಿಕರಣ. **ಆನೇಮುಕ್** ಎಂಬುದರಿಂದ ಮುಕಾಗಮ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತ್ರಾತಾ**— ತ್ರೈಙ್ ಪಾಲನೇ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಆದೇ ಚ ಉಪದೇಶೇಶಿತಿ** (ಪಾ. ಸೂ. ೬-೧ ೪೫) ಎಂಬುದರಿಂದ ಧಾತುವಿಗೆ ಆತ್ವ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವೃಧೇ**— ವೃಧು ವರ್ಧನೇ. ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ ಸೂ ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭೂಃ**— ಭೂ ಸತ್ತಾಯಾಂ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ॥ ೫ ॥

# ನೂರ ಎಪ್ಪತ್ತೊಂಭತ್ತನೆಯ ಸೂಕ್ತವು

**ಪೂರ್ವೀರಹಮಿತಿ ಷಡೃಚಂ ಪಂಚದಶಂ ಸೂಕ್ತಂ ತ್ರೈಷ್ಟುಭಂ। ಉಪಾಂತ್ಯಾ ಬೃಹತೀ। ಅತ್ರ ತ್ರಯಾಣಾಂ ದ್ವ್ಯೃಚಾನಾಂ ಲೋಪಾಮುದ್ರಾಗಸ್ತ್ಯತಚ್ಛಿಷ್ಯೈರ್ದೃಷ್ಟತ್ವಾತ್ತ ಏವರ್ಷಯಃ। ಸೂಕ್ತಪ್ರತಿಪಾದ್ಯೋಽರ್ಥೋ ರತಿದೇವತಾ। ಅತ್ರಾನುಕ್ರಮಣಿಕಾ। ಪೂರ್ವೀಃ ಷಡ್ವ್ಯಾಪತ್ಯೋರ್ಲೋಪಾಮುದ್ರಾಯಾ ಅಗಸ್ತ್ಯಸ್ಯ ಚ ದ್ವ್ಯೃಚಾಭ್ಯಾಂ ರತ್ಯರ್ಥಂ ಸಂವಾದಂ ಶ್ರುತ್ವಾಂತೇವಾಸೀ ಬ್ರಹ್ಮಚಾರ್ಯಂತ್ಯೇ ಬೃಹತ್ಯಾದೀ ಅಪಶ್ಯದಿತಿ॥ ವಿಶೇಷವಿನಿಯೋಗೋ ಲೈಂಗಿಕಃ॥**

ಅನುವಾದವು— **ಪೂರ್ವೀರಹಂ** ಎಂಬ ಈ ಸೂಕ್ತವು ಇಪ್ಪತ್ತಮೂರನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ತ್ರಿಷ್ಟುಪ್ ಛಂದಸ್ಸು. ಆದರೆ ಕೊನೆಯ ಹಿಂದಿನ ಋಕ್ಕು ಎಂದರೆ ಐದನೆಯ ಋಕ್ಕು ಬೃಹತೀ ಛಂದಸ್ಕವು. ಈ ಸೂಕ್ತದಲ್ಲಿ ಎರಡೆರಡು ಋಕ್ಕುಗಳಿಗೆ ಎಂದರೆ ೧-೨ ಋಕ್ಕುಗಳಿಗೆ ಲೋಪಾಮುದ್ರೆಯೂ ೩-೪ ಋಕ್ಕುಗಳಿಗೆ ಅಗಸ್ತ್ಯನೂ, ೫-೬ ಋಕ್ಕುಗಳಿಗೆ ಅಗಸ್ತ್ಯಶಿಷ್ಯನೂ ಮಂತ್ರದ್ರಷ್ಟೃಗಳಾದ್ದರಿಂದ ಆಯಾ ಋಕ್ಕುಗಳಿಗೆ ಅವರೇ ಋಷಿಗಳು. ಸೂಕ್ತದಲ್ಲಿ ಪ್ರತಿಪಾದನೆಮಾಡಲ್ಪಟ್ಟಿರುವ ರತಿ ಎಂಬ ವಿಷಯವೇ ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ— **ಪೂರ್ವೀಃ ಷಡ್ವ್ಯಾಪತ್ಯೋರ್ಲೋಪಾಮುದ್ರಾಯಾ ಅಗಸ್ತ್ಯಸ್ಯ ಚ ದ್ವ್ಯೃಚಾಭ್ಯಾಂ ರತ್ಯರ್ಥಂ ಸಂವಾದಂ ಶ್ರುತ್ವಾಂತೇವಾಸೀ ಬ್ರಹ್ಮಚಾರ್ಯಂತ್ಯೇ ಬೃಹತ್ಯಾದೀ ಅಪಶ್ಯದಿತಿ** ಎಂದು ಹೇಳಿರುವುದು ಎಂದರೆ ಪೂರ್ವೀರಹಂ ಎಂಬ ಆರು ಋಕ್ಕಿನ ಈ ಸೂಕ್ತದಲ್ಲಿ ೧-೪ ಋಕ್ಕುಗಳಲ್ಲಿ ದಂಪತಿಗಳಾದ ಲೋಪಾಮುದ್ರೆ ಮತ್ತು ಅಗಸ್ತ್ಯಋಷಿಗೆ ರತಿ ವಿಷಯದಲ್ಲಿ ನಡೆದ ಸಂಭಾಷಣೆಯು ಉಕ್ತವಾಗಿರುವುದು. ಈ ಸಂಭಾಷಣೆಯನ್ನು ಇವರ ಶಿಷ್ಯನು ಕೇಳಿದ ವಿಷಯವು ೫-೬ ನೇ ಋಕ್ಕುಗಳಲ್ಲಿ ಉಕ್ತವಾಗಿರುವುದು. ೫ ನೇ ಋಕ್ಕು ಮಾತ್ರ ಬೃಹತೀ ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಈ ಸೂಕ್ತದ ವಿಶೇಷವಿನಿಯೋಗವು ಲೈಂಗಿಕವು.

## ಸೂಕ್ತ—೧೭೯

ಮಂಡಲ—೧ ॥ ಅನುವಾಕ—೨೩ ॥ ಸೂಕ್ತ—೧೭೯ ॥

ಅಷ್ಟಕ— ೨ ॥ ಅಧ್ಯಾಯ—೪ ॥ ವರ್ಗ—೨೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥

॥ ಋಷಿಃ—೧-೨, ಲೋಪಾಮುದ್ರಾ। ೩-೪, ಅಗಸ್ತ್ಯಃ। ೫-೬, ಅಂತೇವಾಸೀ ಬ್ರಹ್ಮಚಾರೀ ॥

॥ ಛಂದಃ—೧-೪, ೬. ತ್ರಿಷ್ಟುಪ್। ೫. ಬೃಹತೀ ॥

॥ ಸಂಹಿತಾಪಾಠಃ ॥

**ಪೂರ್ವೀರಹಂ ಶರದಃ ಶಶ್ರಮಾಣಾ ದೋಷಾ ವಸ್ತೋರುಷಸೋ ಜರಯಂತೀಃ।**

**ಮಿನಾತಿ ಶ್ರಿಯಂ ಜರಿಮಾ ತನೂನಾಮಪ್ಯೂ ನು ಪತ್ನೀರ್ವೃಷಣೋ ಜಗಮ್ಯುಃ॥**

॥ ಪದಪಾಠಃ ॥

ಪೂರ್ವೀಃ । ಅಹಂ । ಶರದಃ । ಶಶ್ರಮಾಣಾ । ದೋಷಾಃ । ವಸ್ತೋಃ । ಉಷಸಃ । ಜರಯಂತೀಃ ।

ಮಿನಾತಿ । ಶ್ರಿಯಂ । ಜರಿಮಾ । ತನೂನಾಂ । ಅಪಿ । ಊಂ ಇತಿ । ನು । ಪತ್ನೀಃ । ವೃಷಣಃ । ಜಗಮ್ಯುಃ ॥

॥ ಸಾಯಣಭಾಷ್ಯಂ ॥

**ಲೋಪಾಮುದ್ರಾಹ ।**

ಹೇ ಅಗಸ್ತ್ಯ ಅಹಂ ಲೋಪಾಮುದ್ರಾ ಪೂರ್ವೀಃ ಶರದಃ ಪುರಾತನಾನಸಂಖ್ಯಾತಾನ್ಸಂವತ್ಸರಾನ್ ದೋಷಾ ರಾತ್ರೀರ್ವಸ್ತೋರಹಾನಿ ತಥಾ ದೇಹಂ ಜರಯಂತೀರುಷಸ ಉಷಃಕಾಲಾಂಶ್ಚ ॥ ಸರ್ವತ್ರಾ- ತ್ಯಂತಕಾಲಸಂಯೋಗೇ ದ್ವಿತೀಯಾ ॥ ಅದ್ಯತನಕಾಲಪರ್ಯಂತಂ ಬಹುಸಂವತ್ಸರಂ ಕಾರ್ತ್ಸ್ನ್ಯೇನ ತ್ವಚ್ಛುಶ್ರೂಷಯಾ ಶಶ್ರಮಾಣಾ ಶ್ರಾಂತಾಭೂವಂ । ಇದಾನೀಂ ತು ಜರಿಮಾ ಜರಾ ತನೂನಾಮಂಗಾನಾಂ ಶ್ರಿಯಂ ಸೌಂದರ್ಯಂ ಮಿನಾತಿ । ಹಿನಸ್ತಿ । ಏವಮಪಿ ನಾನುಗೃಹ್ಣಾಸೀತ್ಯರ್ಥಃ । ಅಪ್ಯೂ ನು । ಅಪಿಃ ಸಂಭಾವನಾಯಾಂ । ಉ ಇತ್ಯವಧಾರಣೇ । ನ್ವಿತಿ ವಿತರ್ಕೇ । ಇದಾನೀಮಪಿ ಕಿಂ ಸಂಭಾವನೀಯಂ। ಲೋಕೇ ಹಿ ಪತ್ನೀಃ ಸ್ತ್ರಿಯೋ ವೃಷಣಃ ಸೇಕ್ತಾರಃ ಪುರುಷಾ ಜಗಮ್ಯುಃ । ಗಚ್ಛೇಯುಃ । ಸಂಭೋಗಂ ಕುರ್ಯುಃ । ಅತೋ ಮಾಂ ಕಿಮಿತ್ಯವಮನ್ಯಸೇ । ಇದಾನೀಮಪಿ ವಾ ಸಂಭಾವಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**(ಹೇ ಅಗಸ್ತ್ಯ**—ಎಲೈ ಅಗಸ್ತ್ಯನೇ) । **ಅಹಂ**—ನಾನು (ಲೋಪಾಮುದ್ರೆ ಎಂಬುವಳು) । **ಪೂರ್ವೀಃ**—ಪುರಾತನವಾದ । **ಶರದಃ**—ಅನೇಕ ಸಂವತ್ಸರಗಳ । **ದೋಷಾಃ**—ರಾತ್ರಿಗಳ । **ವಸ್ತೋಃ**—ಹಗಲುಗಳ । (ಮತ್ತು) **ಜರಯಂತೀ**—ದೇಹವನ್ನು ಜೀರ್ಣಮಾಡುವ । **ಉಷಸಃ**—ಉಷಃಕಾಲಗಳ (ಪರ್ಯಂತ) । **ಶಶ್ರ ಮಾಣಾ**—(ಕಷ್ಟಪಟ್ಟು ನಿನ್ನನ್ನು ಸೇವಿಸುವುದರಲ್ಲಿ) ಶ್ರಾಂತಳಾಗಿದ್ದೇನೆ । (ಈಗಲಾದರೋ) **ಜರಿಮಾ**—ಮುಪ್ಪು । **ತನೂನಾಂ**—ಅಂಗಾಂಗಗಳ । **ಶ್ರಿಯಂ**—ಸೌಂದರ್ಯವನ್ನು । **ಮಿನಾತಿ**—ಹಿಂಸಿಸುತ್ತದೆ (ನಾಶಪಡಿಸುತ್ತದೆ) । **ಅಪಿ ಊ ನು**—ಈಗ ಏನುತಾನೇ ಮಾಡಲಿ? **(ಲೋಕೇ ಹಿ**—ಲೋಕದಲ್ಲಿಯಾದರೋ) । **ಪತ್ನೀಃ**—ಪತ್ನಿಯರನ್ನು । **ವೃಷಣಃ**—ರೇತಃಸೇಚಕರಾದ ಪತಿಗಳು । **ಜಗಮ್ಯುಃ**—(ಸಂಭೋಗಾರ್ಥವಾಗಿ) ಪ್ರಾಪ್ತರಾಗುತ್ತಾರೆ.

॥ ಭಾವಾರ್ಥ ॥

ಲೋಪಾಮುದ್ರೆಯು ಹೇಳುತ್ತಾಳೆ:—ಎಲೈ ಅಗಸ್ತ್ಯನೇ, ನಾನು ಈಗ ಅನೇಕ ವರ್ಷಗಳಿಂದ ಹಗಲು, ರಾತ್ರಿ, ಉಷಃಕಾಲಗಳಲ್ಲಿ ಅವಿಶ್ರಾಂತಳಾಗಿ ನಿನ್ನನ್ನು ಸೇವಿಸುವುದರಲ್ಲಿಯೇ ಜೀರ್ಣಳಾಗಿದ್ದೇನೆ; ಈಗಲಾದರೋ ಮುಪ್ಪು ನನ್ನ ಅಂಗಾಂಗಗಳ ಸೌಂದರ್ಯವನ್ನು ಹಾಳುಮಾಡುತ್ತಲಿದೆ; ಈಗ ಏನುಮಾಡಲಿ? ಲೋಕದಲ್ಲಿ ಯಾದರೋ ಪುರುಷರು ಸಂಭೋಗಾರ್ಥವಾಗಿ ತಮ್ಮ ತಮ್ಮ ಪತ್ನಿಯರನ್ನು ಸಮೀಪಿಸುತ್ತಾರೆ. (ನೀನು ಮಾತ್ರ ಇನ್ನೂ ನನ್ನಲ್ಲಿ ಅನುಗ್ರಹ ಮಾಡುವುದಿಲ್ಲ).

## English Translation.

(Lopamudra),—Many years have I been serving you diligently, both day and night, and through mornings, bringing on old age : decay now imqairs the beauty of my limbs : what, therefore, is now (to be done) : let husbands approach their wives.

॥ ವಿಶೇಷವಿಷಯಗಳು ॥

ಋ. ಸಂ. ೧-೧೭೯ ನೇ ಸೂಕ್ತದಲ್ಲಿ ಲೋಪಾಮುದ್ರೆಗೂ ಅಗಸ್ತ್ಯನಿಗೂ ನಡೆದ ಸಂಭಾಷಣೆಯು ವರ್ಣಿಸಲ್ಪಟ್ಟಿದೆ. ಈ ಪ್ರಕರಣವನ್ನು ಬೃಹದ್ದೇವತಾಕಾರರು ಈ ರೀತಿಯಲ್ಲಿ ನಿರೂಪಿಸಿದ್ದಾರೆ.

**ಋತೌ ಸ್ನಾತಾಮೃಷಿರ್ಭಾರ್ಯಾಂ ಲೋಪಾಮುದ್ರಾಂ ಯಶಸ್ವಿನೀಂ ।**
**ಉಪಜಲ್ಪಿತುಮಾರೇಭೇ ರಹಃಸಂಯೋಗಕಾಮ್ಯಯಾ ॥**
**ದ್ವಾಭ್ಯಾಂ ಸಾ ತ್ವಬ್ರವೀದೃಗ್ಭ್ಯಾಂ ಪೂರ್ವೀರಿತಿ ಚಿಕೀರ್ಷಿತಂ ।**
**ರಿರಂಸುಸ್ತಾಮಥಾಗಸ್ತ್ಯ ಉತ್ತರಾಭ್ಯಾಮತೋಷಯತ್ ॥**
**ವಿದಿತ್ವಾ ತಪಸಾ ಸರ್ವಂ ತಯೋರ್ಭಾವಂ ರಿರಂಸತೋಃ ।**
**ಶ್ರುತ್ವೈನಃ ಕೃತವಾನಸ್ಮಿ ಬ್ರಹ್ಮಚಾರ್ಯುತ್ತಮೋ ಜಗೌ ॥** (ಬೃ. ದೇ. ೪-೫೭ ರಿಂದ ೫೯)

ಋತುಸ್ನಾನಾನಂತರ ತನ್ನ ಭಾರ್ಯೆಯಾದ ಲೋಪಾಮುದ್ರೆಯೊಂದಿಗೆ ಸಂಯೋಗವನ್ನು ಹೊಂದಬೇಕೆಂಬ ಇಚ್ಛೆಯಿಂದ ಅಗಸ್ತ್ಯನು ಅವಳೊಂದಿಗೆ ಸಂಭಾಷಣೆಯನ್ನು ಆರಂಭಿಸಿದನು ಅವಳೂ ಸಹ, **"ಪೂರ್ವೀರಹಂ ಶರದಃ"** (ಋ. ಸಂ. ೧-೧೭೯-೧), ಮತ್ತು **"ಯೇ ಚಿದ್ಧಿ ಪೂರ್ವೇ"** (೧-೧೭೯-೨) ಎಂಬ ಎರಡು ಋಕ್ಕುಗಳಿಂದ ಅವಳ ಉದ್ದಿಶ್ಯವನ್ನು ನಿವೇದನ ಮಾಡಿಕೊಂಡಳು. ಆಗ ಅಗಸ್ತ್ಯನು, **"ನ ಮೃಷಾ ಶ್ರಾಂತಂ"** (೧-೧೭೯-೩) ಮತ್ತು **"ನದಸ್ಯ ಮಾ ರುಧತಃ"** (೧-೧೭೯-೪) ಎಂಬ ಎರಡು ಋಕ್ಕುಗಳಿಂದ ತನ್ನ ಅಭಿಲಾಷೆಯನ್ನೂ ಅವಳಿಗೆ ತಿಳಿಸಿ, ಅವಳನ್ನು ತೃಪ್ತಿಗೊಳಿಸಿದನು. ಈ ಸಂದರ್ಭದಲ್ಲಿ ಅಗಸ್ತ್ಯನ ಶಿಷ್ಯನು ಇವರೀರ್ವರ ಸಂಭೋಗಾಭಿಲಾಷೆಯನ್ನು ತಿಳಿಸುವ ಸಂಭಾಷಣೆಯನ್ನು ತನ್ನ ತಪಃಶಕ್ತಿಯಿಂದ ಅರಿತನು. ಆಗ ಅವನಿಗೆ ಈ ಸಂಭಾಷಣೆಯನ್ನು ಕೇಳಿ ತಿಳಿದುದು ಪಾಪಕಾರ್ಯವೆಂಬರಿವುಂಟಾಗಿ ತಾನೂ ಸಹ **"ಇಮಂ ನು ಸೋಮಂ"** (೧-೧೭೯-೫) ಮತ್ತು **"ಅಗಸ್ತ್ಯಃ ಖನಮಾನಃ"** (೧-೧೭೯-೬) ಎಂಬ ಎರಡು ಋಕ್ಕುಗಳನ್ನು ಪಠಿಸಿದನು ಎಂದು ಬೃಹದ್ದೇವತೆಯಲ್ಲಿ ವಿವರಿಸಿದೆ.

**ದೋಷಾಃ; ವಸ್ತೋಃ;** ಎಂಬ ಈ ಎರಡು ಪದಗಳಲ್ಲಿ **ದೋಷಾಃ** ಎಂಬುದು ರಾತ್ರಿ ನಾಮಗಳಲ್ಲಿಯೂ (ನಿ. ೩-೯) ಮತ್ತು **ವಸ್ತೋಃ** ಎಂಬುದು ಅಹರ್ನಾಮಗಳಲ್ಲಿಯೂ ಪಠಿತವಾಗಿದೆ ಮತ್ತು ಈ ಎರಡು ಪದಗಳ ಅರ್ಥಗಳನ್ನು ವಿವರಿಸುವಾಗ ನಿರುಕ್ತಕಾರರು ಋಕ್ಸಂಹಿತೆಯಲ್ಲಿನ,

**ಕುಹಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।**
**ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ॥**
(ಋ. ಸಂ. ೧೦-೪೦-೨)

ಎಂಬ ಋಕ್ಕನ್ನುದಾಹರಿಸಿ **ದೋಷಾ** ಶಬ್ದಕ್ಕೆ ರಾತ್ರಿಯೆಂದೂ, **ವಸ್ತೋಃ** ಎಂಬ ಪದಕ್ಕೆ ಹಗಲೆಂದೂ ಅರ್ಥ ಮಾಡಿದ್ದಾರೆ.

**ಶರದಃ—ಶರಚ್ಛ್ರೃತಾ ಅಸ್ಯಾಮೋಷಧಯೋ ಭವಂತಿ । ಶೀರ್ಣಾ ಆಪ ಇತಿ ವಾ ।**

(ನಿ. ೪–೨೫)

ಈ ಕಾಲದಲ್ಲಿ ಓಷಧಿಗಳು ಅಭಿವೃದ್ಧಿವನ್ನು ಹೊಂದುತ್ತವೆಯೆಂದಾಗಲಿ ಅಥವಾ ನೀರುಗಳು ಒಣಗಿಹೋಗುತ್ತವೆ ಯೆಂದಾಗಲಿ ಶರತ್ಕಾಲವೆಂಬ ಹೆಸರು ಪ್ರಸಿದ್ಧವಾಗಿದೆ. ಈ ಪದವು ಕೇವಲ ಒಂದು ಕಾಲವೆಂದು ಮಾತ್ರವಲ್ಲದೇ, ಅನೇಕ ಕಡೆಗಳಲ್ಲಿ ವರ್ಷಪರ್ಯಾಯವಾಗಿಯೂ ಈ ಪದವನ್ನು ಪ್ರಯೋಗಿಸಿದೆ. ಉದಾಹರಣೆಗೆ—ನಿರುಕ್ತಕಾರರು ಉದಾಹರಿಸಿರುವ (ನಿ. ೪–೨೫)

**ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ ।**

(ಋ. ಸಂ. ೧೦-೮೫-೩೯)

ಎಂಬಲ್ಲಿ **ಶರದಃಶತಂ** ಎಂಬ ಪದಕ್ಕೆ ನೂರು ಸಂವತ್ಸರವೆಂದರ್ಥ.

**ವೃಷಣಃ—ವೃಷನ್** ಶಬ್ದದಿಂದ ನಿಷ್ಪನ್ನವಾಗತಕ್ಕ ಪದಗಳಿಗಿರುವ ಅರ್ಥಗಳನ್ನೂ, ಋಕ್ಸಂಹಿತೆಯಲ್ಲಿ ಆ ಪ್ರಯೋಗಗಳ ಸನ್ನಿವೇಶಗಳನ್ನೂ ಹಿಂದೆ ತಿಳಿಸಿದೆ. (ಋ. ಸಂ. ೧-೭೭-೩) ಪ್ರಕೃತದಲ್ಲಿ ಸೇಚನಸಾಮರ್ಥ್ಯವುಳ್ಳ **ಪುಮಾನ್** ಎಂಬರ್ಥವನ್ನು ಕೊಡುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಪೂರ್ವೀಃ**—ಇದೇ ಮೊದಲಾದ ನಾಲ್ಕು ಶಬ್ದಗಳಲ್ಲಿ **ಕಾಲಾಧ್ವನೋರತ್ಯಂತಸಂಯೋಗೇ ದ್ವಿತೀಯಾ** (ಪಾ. ಸೂ. ೨-೩-೫) ಎಂಬುದರಿಂದ ಪ್ರತಿಯೊಂದರಲ್ಲಿಯೂ ಸಂಬಂಧವಿರುವುದರಿಂದ ದ್ವಿತೀಯಾ ಬಂದಿದೆ.

**ಶಶ್ರಮಾಣಾಃ—**ಶ್ರಮು ತಪಸಿ ಖೇದೇ ಚ ಧಾತು. ವ್ಯತ್ಯಯ ಲಟಿಗೆ ಶಾನಚಾದೇಶ· **ಬಹುಲಂ ಛಂದಸಿ** ಎಂಬುದರಿಂದ ಶ್ಲುವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. **ಅಟ್‌ಕುಪ್ವಾಙ್–** ಎಂಬುದರಿಂದ ಪ್ರತ್ಯಯನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಸ್ತೋಃ**—ವಸ ನಿವಾಸೇ. ಧಾತು· ತುಮುನರ್ಥದಲ್ಲಿ ತೋಸುನ್ ಪ್ರತ್ಯಯ.

**ಜರಯಂತೀಃ**—ಜೄಷ್ ವಯೋಹಾನೌ ಧಾತು. ಣಿಜಂತದ ಮೇಲೆ ಶತೃ ಬಂದಾಗ ಸ್ತ್ರೀತ್ವದಲ್ಲಿ ಉಗಿತ್ತಾ ದುದರಿಂದ ಙೀಪ್. **ಜನೀಜ್ಯೄಷ್‌ಕ್ನಸುರಂಜೋಽಮಾಂತಾಶ್ಚ** ಎಂಬುದರಿಂದ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ** (ಪಾ· ಸೂ. ೬-೪-೯೨) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. ಲಸಾರ್ವಧಾತುಕವು ಅನು ದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ.

**ಮಿನಾತಿ**—ಮೀಙ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ. ಏಕವಚನಾಂತರೂಪ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಬರುತ್ತದೆ. ಪಾದಾದಿಯಲ್ಲಿರುವುದ ರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಜರಿಮಾ**—ಜ್ಯೄಷ್ ವಯೋಹಾನೌ ಧಾತು. ಭಾವಾರ್ಥದಲ್ಲಿ ಔಣಾದಿಕ ಇಮನಿಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜಗಮ್ಯುಃ**—ಗಮ್ಲೃ ಗತೌ. ಧಾತು. ಲಿಙ್ ಪ್ರಥಮಪುರುಷ ಬಹುವಚನಕ್ಕೆ ಉಸಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶ್ಲುವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಯೇ ಚಿದ್ಧಿ ಪೂರ್ವ ಋತಸಾಪ ಆಸನ್ತ್ಸಾಕಂ ದೇವೇಭಿರವದನ್ನೃತಾನಿ ।
ತೇ ಚಿದವಾಸುರ್ನಹ್ಯಂತಮಾಪುಃ ಸಮೂ ನು ಪತ್ನೀರ್ವೃಷಭಿರ್ಜಗಮ್ಯುಃ ॥ ೨ ॥

॥ ಪದಪಾಠಃ ॥

ಯೇ । ಚಿತ್ । ಹಿ । ಪೂರ್ವೇ । ಋತಽಸಾಪಃ । ಆಸನ್ । ಸಾಕಂ । ದೇವೇಭಿಃ । ಅವದನ್ । ಋತಾನಿ ।
ತೇ । ಚಿತ್ । ಅವ । ಅಸುಃ । ನಹಿ । ಅಂತಂ । ಆಪುಃ । ಸಂ । ಊಂ ಇತಿ । ನು । ಪತ್ನೀಃ । ವೃಷಽಭಿಃ ।
ಜಗಮ್ಯುಃ ॥ ೨ ॥

॥ ಸಾಯಣಭಾಷ್ಯಂ ॥

**ಸಾ ತಮೇಹವಾ ॥**

**ಹೇ ಪತೇಽಗಸ್ತ್ಯ ಯೇ ಚಿದ್ಧಿ ಯೇಽಪಿ ತು ಪೂರ್ವೇ ಪುರಾತನಾ ಋತಸಾಪಃ ಸತ್ಯಸ್ಯಾಪಯಿತಾರೋ ವ್ಯಾಪ್ನುವಾನಾ ಮಹರ್ಷಯ ಆಸನ್ ತೇ ದೇವೇಭಿರ್ದೇವೈಃ ಸಾಕಂ ಸಹರ್ತಾನಿ ಸತ್ಯವಾಕ್ಯಾನ್ಯವದನ್ । ವದಂತಿ । ಯೇ ಮಹತ್ತಪೋ ಯಜ್ಞಂ ವಾನುತಿಷ್ಠಂತಿ ಯೇ ಚ ದೇವವಾಕ್ಯಾನಿ ದೇವಸ್ತುತಿರುಪಾಣಿ ವದಂತಿ ತೇ ಚಿತ್ । ಚಿದಪ್ಯರ್ಥೇ । ತೇ ಚಿದವಾಸುಃ । ಅವಕ್ಷಿಪಂತಿ ರೇತಃ ॥ ಸ್ಯತಿರುಪಸೃಷ್ಟೋ ವಿಮೋಚನೇ ವರ್ತತೇ ॥ ತೇ ನಹ್ಯಂತಮಾಪುಃ । ನ ಹಿ ಬ್ರಹ್ಮಚರ್ಯಾದೇರಂತಂ ಪ್ರಾಪ್ನುವನ್ । ಬ್ರಹ್ಮಚರ್ಯಮನಿಷಿದ್ಧರ್ತುಕಾಲಗಮನಮಪಿ ಕುರ್ವಂತೀತ್ಯರ್ಥಃ । ತಥಾ ಪತ್ನೀಃ ಪತ್ನ್ಯಶ್ಚ ತಪಸ್ಯಮಾನಾನ್ವೃಷಭಿರ್ಭೋಗವರ್ಷಕೈಃ ಪತಿಭಿಃ ಸಹ ಸಮೂ ನ ಜಗಮ್ಯುಃ । ಉ ನ್ವಿತಿ ಪೂರಣೌ । ಸಂಗಚ್ಛೇರನ್ । ಅತಸ್ತ್ವಂ ಕಥಂ ಮಾಂ ನಾನುಭವಸೀತ್ಯರ್ಥಃ ॥**

॥ ಪ್ರತಿಪದಾರ್ಥ ॥

(**ಹೇ ಅಗಸ್ತ್ಯ**— ಎಲೈ ಅಗಸ್ತ್ಯನೇ) । **ಯೇ ಚಿತ್ ಹಿ**—ಯಾವ । **ಪೂರ್ವೇ**—ಪುರಾತನರಾದ । **ಋತಸಾಪಃ**— (ಯಜ್ಞಾದಿಗಳನ್ನೂ ಆಚರಿಸುತ್ತಿದ್ದ) ಸತ್ಯವನ್ನು ವ್ಯಾಪಿಸುವಂತೆ ಮಾಡುವ ಮಹರ್ಷಿಗಳು ।

**ಆಸನ್**—ಇದ್ದರೋ | (**ಯೇ**— ಯಾರು) | **ದೇವೇಭಿಃ ಸಾಕಂ**—ದೇವತೆಗಳೊಡನೆ | **ಋತಾನಿ**—ಸತ್ಯವಾಕ್ಯಗಳನ್ನು (ತತ್ತ್ವಗಳನ್ನು) **ಅವದನ್**—ಹೇಳುತ್ತಿದ್ದರೋ (ಚರ್ಚಿಸುತ್ತಿದ್ದರೋ) | **ತೇ ಚಿತ್**- ಅಂತಹ ಮಹರ್ಷಿಗಳೂ ಕೂಡ | **ಅವಾಸುಃ**—ರೇತೋ ವಿಸರ್ಜನೆಮಾಡುತ್ತಿದ್ದರು | (**ತೇ**— ಅವರು) | **ಅಂತಂ**—(ತಮ್ಮ ಬ್ರಹ್ಮಚರ್ಯದ) ಅಂತವನ್ನು | **ನ ಹಿ ಆಪುಃ**—ಪ್ರಾಪ್ತರಾಗಲಿಲ್ಲ | (**ತಥಾ**—ಹಾಗೆಯೇ) | **ಪತ್ನೀಃ**— (ತಪಸ್ವಿನಿಗಳಾದ) ಪತ್ನಿಯರೂ | **ವೃಷಭಿಃ**— ಭೋಗವರ್ಷಕರಾದ ಪತಿಗಳೊಡನೆ | **ಸಂ ಊ ನು ಜಗಮ್ಯುಃ**—ಸಂಭೋಗಿಸುತ್ತಿದ್ದರು.

॥ ಭಾವಾರ್ಥ ॥

ಎಲೈ ಅಗಸ್ತ್ಯನೇ, ಯಜ್ಞಾದಿಗಳನ್ನು ಆಚರಿಸುವವರೂ, ದೇವತೆಗಳೊಡನೆ ತತ್ತ್ವವಿಚಾರಗಳನ್ನು ಚರ್ಚಿಸುತ್ತಿದ್ದವರೂ ಆದ ಪುರಾತನ ಮಹರ್ಷಿಗಳೂ ಕೂಡ ಪ್ರಜೋತ್ಪಾದನೆಗಾಗಿ ಸಂಭೋಗಮಾಡುತ್ತಿದ್ದರು ; ಅದರಿಂದ ಅವರ ಬ್ರಹ್ಮಚರ್ಯವೇನೂ ಹೋಗಲಿಲ್ಲ ; ತಪಸ್ವಿನಿಯರಾದ ಸ್ತ್ರೀಯರೂ ತಮ್ಮ ಪುರುಷರೊಡನೆ ಸಂಭೋಗಿಸಿದಾರೆ; (ಆದರೂ ನೀನು ಮಾತ್ರ ನನ್ನಲ್ಲಿ ಅನುಗ್ರಹ ಮಾಡಿಲ್ಲ).

## English Translation

The ancient sages, disseminators of truth, who, verily, conversed of truths with the gods, begot (progeny), nor thereby violated (their vow of continence), therefore should wives be approached by their husbands.

॥ ವಿಶೇಷವಿಷಯಗಳು ॥

ಪ್ರಕೃತವಾದ ಋಕ್ಕಿನಲ್ಲಿಯೂ ಇದರ ಹಿಂದಿನ ಋಕ್ಕಿನಲ್ಲಿಯೂ ಸಹ ಲೋಪಾಮುದ್ರೆಯು ಅಗಸ್ತ್ಯನನ್ನು ಕುರಿತು ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸುತ್ತಾಳೆ. ತನ್ನ ಪತಿಗೆ ತನ್ನ ಕಾಮವನ್ನು ಸ್ಪಷ್ಟವಾಗಿ ತಿಳಿಸುತ್ತಾಳೆ. ಆದರೆ ಆ ಕಾಮಾಭಿಲಾಷೆಯನ್ನು ತೃಪ್ತಿಗೊಳಿಸುವುದರಿಂದ ತನ್ನ ಧರ್ಮಕ್ಕಾಗಲೀ ಅಥವಾ ತನ್ನ ಪತಿಯ ಧರ್ಮಕ್ಕಾಗಲಿ ಯಾವ ವಿಧವಾದ ಲೋಪವೂ ಬರುವುದಿಲ್ಲವೆಂದು ಸ್ಪಷ್ಟಪಡಿಸಲು ಹಿಂದಿನ ಋಷಿಗಳ ಉದಾಹರಣೆಯನ್ನು ತೋರಿಸಿ ಹೇಗೆ ಮಹರ್ಷಿಗಳೂ ಕೂಡ ಕಾಮವನ್ನು ಜಯಿಸಲಾಗಲಿಲ್ಲವೆಂದೂ, ಯಾವ ರೀತಿ ಅದು ಮಾನವನಿಗೆ ಸಹಜವಾದ ಇಚ್ಛೆಯೆಂತಲೂ ಅದನ್ನು ತೃಪ್ತಿಪಡಿಸಲೇಬೇಕೆಂದೂ ತಿಳಿಸುತ್ತಾಳೆ. **ಯೇ ಚೇತ್ ಋತಸಾಪಃ ಆಸನ್, ಯೇ ದೇವೇಭಿಃ ಸಾಕಂ ಋತಾನಿ ಅವದನ್, ತೇ ಚಿತ್ ಅವಾಸುಃ** ಯಾರು **ಋತಸಾಪ**ಗಳಾಗಿದ್ದರೋ, ದೇವತೆಗಳೊಡನೆ ಯಾರು **ಋತವಾಕ್ಯ**ಗಳನ್ನೇ ನುಡಿಯುತ್ತಿದ್ದರೋ ಅಂತಹ ಪುರಾತನರಾದ ಋಷಿಗಳೂ ಸಹ ತಮ್ಮ ಕಾಮಸಂತೃಪ್ತಿಗಾಗಿ ಪತ್ನಿಯರೊಡಗೂಡುತ್ತಿದ್ದರು ಎಂದು ಪ್ರಕೃತವಾದ ಋಕ್ಕಿನಲ್ಲಿ ಲೋಪಾಮುದ್ರೆಯು ತನ್ನ ಪತಿಗೆ ತಿಳಿಸಿ ಅವನ ಸಂಗವನ್ನು ಬಯಸುತ್ತಾಳೆ. **ಋತಸಾಪಃ, ಋತಾನಿ** ಎಂಬ ಪದಗಳು ಸೂಚಿಸುವ ಅರ್ಥವನ್ನು, ಇಲ್ಲಿ ಮುಖ್ಯವಾಗಿ ಗಮನಿಸಬೇಕು. **ಋತ** ಶಬ್ದವು ಅಧ್ಯಾತ್ಮಿಕವಾದ ಭೌತಿಕತತ್ತ್ವವನ್ನೂ ಮತ್ತು ನೈತಿಕವಾದ ನಿಯಮವನ್ನೂ ತೋರಿಸತಕ್ಕ ಪದವಾಗಿದೆ. ದೇವಮಾನವಾದಿಗಳೆಲ್ಲರೂ ಸಹ ಈ ಋತದ ಪಥವನ್ನೇ ಅರ್ಥಮಾಡಿಕೊಂಡು ಅದರ ನಿಯಮವನ್ನೇ ಪಾಲಿಸಬೇಕೆಂದು ವೈದಿಕ ಮತದ ಸಾರಾಂಶ. ಇಂತಹ ತತ್ತ್ವಜ್ಞರೂ, ನಿಯಮಪಾಲಕರೂ ಆದ ಋಷಿಗಳೂ ಸಹ ಕಾಮಸಂತೃಪ್ತಿಯನ್ನು ಪಡೆದರೆಂಬುದೇ ಲೋಪಾಮುದ್ರೆಯ ವಾದ.

**ಋತಸಾಪಃ, ಋತಾನಿಃ**—**ಋತ**ಶಬ್ದವನ್ನು ನಿರುಕ್ತಕಾರರು **ಉದಕ**ನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೯) ಆದರೂ ಸಹ ಅಧಿಕವಾಗಿ **ಋತ**ಶಬ್ದವು ಬರುವೆಡೆಗಳಲ್ಲೆಲ್ಲಾ **ಸತ್ಯಂ ವಾ ಯಜ್ಞಂ ವಾ** ಎಂದೇ ಅರ್ಥಮಾಡಿದ್ದಾರೆ. (ನಿ. ೪-೧೯) ಇತ್ಯಾದಿ. ಸಾಯಣರೂ ಸಹ **ಋತಸಾಪಃ** ಎಂಬ ಪದವು ಪ್ರಯುಕ್ತವಾಗಿರುವೆಡೆಗಳಲ್ಲೆಲ್ಲಾ **ಯಜ್ಞಸ್ಪೃಶಃ** ಎಂದಾಗಲಿ ಅಥವಾ **ಸತ್ಯಜ್ಞಾಃ** ಎಂದಾಗಲಿ ಅರ್ಥಮಾಡಿದ್ದಾರೆ. ಅನೇಕ ಕಡೆಗಳಲ್ಲಿ **ಋತ** ಶಬ್ದವು ವಿಶ್ವನಿಯಮವನ್ನೇ ವರ್ಣಿಸತಕ್ಕ ಪದವಾಗಿದೆ. "Standing, as it does inter alia, for impersonal Order or Law, pervading the physical and moral world and sustaining alike the worlds of the gods and nature, the concept of the Rita may be said to have created a land-mark in the history of Vedic thought and culture" ವೈದಿಕ ಸಂಸ್ಕೃತಿಯಲ್ಲಿ **ಋತ**ಶಬ್ದದಿಂದ ಸೂಚಿತವಾಗುವ ಭಾವವು ಒಂದು ವೈಶಿಷ್ಟ್ಯವನ್ನು ಪಡೆದಿದೆಯೆಂದು ಮೇಲಿನ ವಾಕ್ಯಗಳಲ್ಲಿ Eggeling ಎಂಬ ಆಂಗ್ಲ ಪಂಡಿತನು ಹೇಳಿದ್ದಾನೆ. ಈ ಪದದ ಪ್ರಯೋಗಗಳನ್ನು ಆಯಾ ಸನ್ನಿವೇಶಗಳಲ್ಲಿ ಈ ಪದವು ಸೂಚಿಸುವ ಭಾವಗಳನ್ನೂ ಸೂಕ್ಷ್ಮವಾಗಿ ಇಲ್ಲಿ ಪರಿಶೀಲಿಸಬೇಕಾದುದು ಅವಶ್ಯಕವಾಗಿದೆ.

ಋಕ್ಸಂಹಿತೆಯ ಪ್ರಥಮಮಂಡಲದ ಪ್ರಥಮಸೂಕ್ತದಲ್ಲಿಯೇ ಈ ಪದವು ಪ್ರಯೋಗಿಸಲ್ಪಟ್ಟಿದೆ. ಅಲ್ಲಿ ಅಗ್ನಿಯ ಮಹದ್ಗುಣಗಳನ್ನು ವರ್ಣಿಸುತ್ತಾ,

**ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ । ವರ್ಧಮಾನಂ ಸ್ವೇ ದಮೇ ।**

(ಋ. ಸಂ. ೧-೧-೮)

ಎಂಬಲ್ಲಿ **ಋತಸ್ಯ ಗೋಪಾಂ** ಎಂಬುದಕ್ಕೆ ಸಾಯಣರು **ಋತಸ್ಯ ಸತ್ಯಸ್ಯಾವಶ್ಯಂಭಾವಿನಃ ಕರ್ಮಫಲಸ್ಯ** ಎಂದರ್ಥಮಾಡಿದ್ದಾರೆ. ಯಾಸ್ಕರೂ ಸಹ **ಸತ್ಯ** ವೆಂಬರ್ಥವನ್ನೇ ಹೇಳಿ ಇದಕ್ಕೆ ಸಮರ್ಥನೆಯನ್ನಿತ್ತಿದ್ದಾರೆ.

Max Muller ಎಂಬ ಪಂಡಿತನು **ಋತ**ಶಬ್ದದ ಮೂಲಾರ್ಥವನ್ನೂ ಅದರ ಬೆಳವಣಿಗೆಯನ್ನೂ ವಿಮರ್ಶಿಸುತ್ತಾ ಪ್ರಥಮತಃ ಋತವು ಸೂರ್ಯಚಂದ್ರಾದಿಗಳ ಸಂಚಾರಕ್ರಮವನ್ನು ತೋರಿಸತಕ್ಕ ಪದವಾಗಿತ್ತೆಂದೂ, ಕ್ರಮವಾಗಿ ಆ ಸೂರ್ಯಚಂದ್ರಾದಿಗಳ ಭ್ರಮಣವನ್ನನುಸರಿಸುವ ಅಯನಋತ್ವಾದಿಗಳನ್ನನುಸರಿಸಿ ನೆರವೇರಿಸಲ್ಪಡತಕ್ಕ ಯಜ್ಞಯಾಗಾದಿಗಳ ಪರ್ಯಾಯವಾಗಿ ಪ್ರಯೋಗಿಸಲ್ಪಡುತ್ತಿತ್ತೆಂದೂ ಹೇಳಿದ್ದಾನೆ. ಈ ನಿಯಮವನ್ನೇ ಪ್ರತಿಬಿಂಬಿಸುವುದಾದ್ದರಿಂದ ಕೊನೆಗೆ ಇದೇ ಪದವು ಪ್ರಕೃತಿನಿಯಮ ಅಥವಾ ಧರ್ಮವನ್ನೂ ವರ್ಣಿಸುವ ಪರ್ಯಾಯಪದವಾಯಿತು, Keith ಎಂಬ ಪಂಡಿತನು ಇದರ ವಿಷಯದಲ್ಲಿ ಈ ರೀತಿ ಹೇಳಿದ್ದಾನೆ.

"In the physical world there rules a regular order ಋತ, which is clearly an inheritance from the physical; it is an easy step to the conception of the ಋತ,................ in the moral world".

"The term for Cosmic order, ಋತ and and its opposite ಅನೃತ express also moral order as in the dialogue of Yama and Yami. ಋತ forbids and

doubtless also commands positive action. ಋತ is more than truth, ಸತ್ಯ. Law is denoted by ಧರ್ಮ, which denotes that which supports and that which is supported ; It applies like ಋತ to all aspects of the world, to the sequence of of events in Nature, to the sacrifice and to man's life."

ಭೌತಿಕ ಪ್ರಪಂಚದಲ್ಲಿ ವಿಶ್ವನಿಯಮವನ್ನು ವರ್ಣಿಸುವಾಗಲೆಲ್ಲಾ **ಋತ** ಶಬ್ದದಿಂದಲೇ ಆ ನಿಯಮವು ಸೂಚಿಸಲ್ಪಡುತ್ತದೆ. ಅದರಂತೆಯೇ ಮಾನವನ ನೈತಿಕ ವ್ಯವಹಾರದಲ್ಲೂ ಸಹ **ಋತ** ಮತ್ತು ತದ್ವಿರೋಧಿಯಾದ **ಅನೃತ** ಎಂಬ ಪದಗಳು ಮಾನವನ ನೈತಿಕನಿಯಮ ಮತ್ತು ಅನೈತಿಕವಾದ ವ್ಯವಹಾರ ಇವುಗಳನ್ನು ತಿಳಿಸುತ್ತವೆ. ಮಾನವನ ಯಜ್ಞಕರ್ಮವು ಭೌತಿಕ ಮತ್ತು ನೈತಿಕ ವ್ಯವಹಾರಗಳೆರಡಕ್ಕೂ ಸಾಕ್ಷಾತ್ತಾಗಿ ಸಂಬಂಧಿಸಿದುದರಿಂದ **ಋತವು** ಯಜ್ಞಪರ್ಯಾಯವಾಗಿಯೂ ಉಪಯೋಗಿಸಲ್ಪಟ್ಟಿದೆ. ಆದುದರಿಂದಲೇ **ಸತ್ಯ** ಪರ್ಯಾಯವಾದ ಪದವೂ ಆಗಿದೆ ಅಥವಾ ಸತ್ಯಶಬ್ದದಿಂದ ಸೂಚಿತವಾಗುವ ಅರ್ಥಕ್ಕಿಂತಲೂ ಹೆಚ್ಚು ಅರ್ಥವನ್ನು ಕೊಡುತ್ತದೆ ಎಂಬುದೇ ಮೇಲಿನವಾಕ್ಯಗಳ ಸಾರಾಂಶವಾಗಿದೆ.

ಸಕಲ ದೇವತೆಗಳೂ ಸಹ ವೈಯಕ್ತಿಕವಾಗಿಯಾಗಲಿ ಅಥವಾ ಸಾಮೂಹಿಕವಾಗಲಿ ಋತಾಧ್ಯಕ್ಷರಾಗಿಯೂ ಮತ್ತು ಋತದಿಂದಲೇ ವ್ಯಾಪೃತರಾಗಿಯೂ ಆಗಿದ್ದಾರೆಂಬ ವರ್ಣನೆಯು ಋಕ್ಸಂಹಿತೆಯಲ್ಲಿ ಪದೇ ಪದೇ ತಿಳಿಸಲ್ಪಟ್ಟಿದೆ. ಈ ಭಾವವನ್ನು ಪೂರ್ಣವಾಗಿ ತಿಳಿಸುವ ಒಂದು ಮಂತ್ರವನ್ನು ಉದಾಹರಣೆಗೆ ತೆಗೆದುಕೊಂಡರೆ ಅಂಶವು ವಿಶದವಾಗಿ ತಿಳಿಯುತ್ತದೆ.

**ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ ।**
**ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ॥**

(ಋ. ಸಂ. ೪-೪೦-೫)

ಎಂಬ ಋಕ್ಕಿನಲ್ಲಿ ವಿಶ್ವನಿಯಮವು ತಿಳಿಸಲ್ಪಟ್ಟಿದೆ. ವಿಶ್ವದಲ್ಲಿ ಪ್ರತಿಯೊಂದು ವ್ಯಕ್ತಿಗೂ ಅದರದರ ನಿಯತವಾದ ಸ್ಥಾನವು **ಋತ** ದಿಂದ ನಿಯಮಿಸಲ್ಪಟ್ಟಿದೆ. ಅದು ಹೇಗೆಂದರೆ—ಆದಿತ್ಯನ ಸ್ಥಾನವು ಆಕಾಶದಲ್ಲಿಯೂ, ಹೋತೃವಿನ ಸ್ಥಾನವು ಯಜ್ಞವೇದಿಕೆಯಲ್ಲಿಯೂ, ಅತಿಥಿಯ ಸ್ಥಾನವು ಗೃಹದಲ್ಲಿಯೂ ನಿಯಮಿತವಾಗಿದೆ. ಆದರೆ ಋತದ ಸ್ಥಾನವು ಮಾತ್ರ ವಿಶ್ವವ್ಯಾಪಿಯಾಗಿದೆ. ಪೃಥ್ವಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಮಾನವರಲ್ಲಿಯೂ, ದೇವತೆಗಳಲ್ಲಿಯೂ, ಯಜ್ಞಯಾಗಾದಿಗಳಲ್ಲಿಯೂ, ಆದಿತ್ಯನ ಕರ್ಮಗಳಲ್ಲೂ, ಪರ್ವತಾದಿಗಳಲ್ಲೂ ಸಹ ಋತವು ವ್ಯಾಪ್ತವಾಗಿ ಸಮಸ್ತ ವಿಶ್ವದಲ್ಲೂ ಹರಡಿಕೊಂಡಿದೆ, ಎಂಬುದೇ ಈ ಮಂತ್ರದ ವರ್ಣನೆಯಾಗಿದೆ. ಇದು ವಿಶ್ವದ ಆಧ್ಯಾತ್ಮಿಕ ಮತ್ತು ನೈತಿಕ ತತ್ತ್ವವನ್ನು ತಿಳಿಸುವ ಸನ್ನಿವೇಶವಾಗಿದೆ. ಈ ಋತದ ಮಹತ್ತ್ವವನ್ನು ತಿಳಿಸುತ್ತಾ Bloomfield ಎಂಬ ಪಂಡಿತನು ಈ ರೀತಿ ತಿಳಿಸಿದ್ದಾನೆ.

"If therefore an ethics of the Rig-veda, rooted in the concept of Ritaf be at all conceded, it is not to be construed as an ethies o, naturalism with its apothesis of la bete humaine. It provides in the stricter sense, an ethics in accordance with the highest human

idial which was destined to realise all its ethical implications in the Law of ಕರ್ಮ. Of that there is surely no room for misgivings; for accredited exponents of the philosophy and history of religion, like Pfleiderer, view the Rita and Karma of the Hindus as more or less hyphenated in their nature, and classify them on grounds of functional similarity, with the Nemesis of the Greeks, the Ashavaista of the Persians and the Tao of the Chinese"

ಮೇಲೆ ಹೇಳಿರುವಂತೆ ಈ ವಾಕ್ಯಗಳೂ ಸಹ **ಋತುವು** ವಿಶ್ವನಿಯಮನವನ್ನು ಪ್ರತಿಬಿಂಬಿಸುವ ತತ್ತ್ವದ್ಯೋತಕವಾದ ಪದವೆಂಬುದನ್ನು ತಿಳಿಸಿ, ಇದರಂತೆಯೇ ಬೇರೆ ಜನಾಂಗಗಳ ನಂಬಿಕೆಯಲ್ಲಿರುವ Nemesis, Tao ಇತ್ಯಾದಿ ಪದಗಳು ತಿಳಿಸುವ ಭಾವವನ್ನೇ ಇದೂ ತಿಳಿಸುತ್ತದೆ ಎಂದು ಹೇಳಿದೆ. ಆದರೆ ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. **ಋತ** ಶಬ್ದವು ಅನೇಕ ಸನ್ನಿವೇಶಗಳಲ್ಲಿ ಬಹುವಚನದಲ್ಲಿ ಪ್ರಯೋಗಿಸಲ್ಪಟ್ಟಿದೆ. ಆ ಸಂದರ್ಭಗಳಲ್ಲಿ ವಿಶ್ವನಿಯಮವೆಂದು ಅರ್ಥ ಮಾಡುವುದು ಉಚಿತವಾಗಿರುವುದಿಲ್ಲ. ಹೀಗೆ ಇನ್ನೂ ಕೆಲವು ಸಂದರ್ಭಗಳಲ್ಲಿ ಸನ್ನಿವೇಶಕ್ಕನುಗುಣವಾಗಿ ಬೇರೆ ಅರ್ಥವನ್ನು ಹೇಳಬೇಕಾಗುತ್ತದೆ. ಆದುದರಿಂದ ಅಂತಹ ಸಂದರ್ಭಗಳಿರತಕ್ಕ ಒಂದೆರಡುದಾಹರಣೆಗಳೊಡನೆ ಈ ಪದದ ವಿಶೇಷಾರ್ಥಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗುತ್ತದೆ.

**ವಿ ಶ್ರಯಂತಾಮೃತಾವೃಧೋ ದ್ವಾರೋ ದೇವೀರಸಶ್ಚತಃ । ಅದ್ಯಾ ನೂನಂ ಚ ಯಷ್ಟವೇ ॥**

(ಋ. ಸಂ. ೧-೧೩-೬)

ಎಂಬಲ್ಲಿ ದೇವೀದ್ವಾರರೆಂಬ ದೇವತೆಗಳನ್ನು ಋತಾವೃಧರೆಂದು ಕರೆದಿದೆ. ಇಲ್ಲಿ ಯಜ್ಞರಕ್ಷಣವೆಂದೇ ಅರ್ಥವಾಗುತ್ತದೆ. ಋತವು ಇಲ್ಲಿ ಯಜ್ಞಪರ್ಯಾಯಪದವಾಗಿರಲೇಬೇಕು. ಮತ್ತು,

**ನಮಸ್ಯತ ಹವ್ಯದಾತಿಂ ಸ್ವಧ್ವರಂ ದುವಸ್ಯತ ದಮ್ಯಂ ಜಾತವೇದಸಂ ।**
**ರಥೀರ್ಋತಸ್ಯ ಬೃಹತೋ ವಿಚರ್ಷಣಿರಗ್ನಿರ್ದೇವಾನಾಮಭವತ್ಪುರೋಹಿತಃ ॥**

(ಋ. ಸಂ. ೩-೨-೮)

ಎಂಬಲ್ಲಿ ಅಗ್ನಿಯ **ಋತಕ್ಕೆ** ರಥಿಯೆಂದು ವರ್ಣಿತನಾಗಿದ್ದಾನೆ ಇಲ್ಲಿ ಋತವೆಂದರೆ ಯಜ್ಞವೆಂದೇ ಅರ್ಥವಾಗಬೇಕು. ಅದಲ್ಲದೇ ಬೇರೆಯರ್ಥಮಾಡಲು ಅವಕಾಶವಿಲ್ಲ. ಆದರೆ,

**ಸಸಸ್ಯ ಯದ್ವಿಯುತಾ ಸಸ್ಮಿನ್ನೂಧನ್ನೃತಸ್ಯ ಧಾಮನ್ರಣಯಂತ ದೇವಾಃ ।**
**ಮಹಾಁ ಅಗ್ನಿರ್ನಮಸಾ ರಾತಹವ್ಯೋ ವೇರಧ್ವರಾಯ ಸದಮಿದೃತಾವಾ ॥**

(ಋ. ಸಂ. ೪-೭-೭)

ಎಂಬ ಋಕ್ಕಿನಲ್ಲಿ ಎರಡುವಿಧವಾಗಿ ಅರ್ಥಮಾಡಬಹುದು. ಮೊದಲನೆಯದಾಗಿ, **ಋತಸ್ಯ ಧಾಮ** ಮತ್ತು **ಋತಾವಾ** ಎಂಬ ಎರಡು ಪದಗಳಿವೆ. ಇಲ್ಲಿ ಮೊದಲನೆಯದಾದ **ಋತಸ್ಯ** ಎಂಬ ಪದಕ್ಕೆ ಸಾಯಣರು ಉದಕವೆಂದೂ, ಎರಡನೆಯದಾದ **ಋತಾವಾ** ಎಂಬಲ್ಲಿ ಋತ ಶಬ್ದಕ್ಕೆ **ಸತ್ಯವಾನ್** ಎಂದೂ ಮೊದಲನೆಯ ಅರ್ಥವನ್ನು ತೋರಿಸಿ, ಎರಡನೆಯದಾಗಿ, **ಋತಸ್ಯ ಧಾಮ** ಎಂಬುದಕ್ಕೆ **ಸತ್ಯಸ್ಯ ಯೋನಿಃ** ಎಂದರೆ ಯಜ್ಞವೆಂಬುದಾಗಿಯೂ, **ಋತಾವಾ** ಎಂಬುದಕ್ಕೆ **ಸತ್ಯವಾನ್** ಎಂದೂ ಅರ್ಥಮಾಡಿದ್ದಾರೆ. ಅಥವಾ ದೇವತೆಗಳಿಗೂ ಮಾನವರಿಗೂ ಪರಸ್ಪರ

ಸಂಬಂಧವನ್ನು ಬೆಳೆಸತಕ್ಕ ಯಜ್ಞವೇ ಸತ್ಯಾತ್ಮಕವಾದ ವಿಶ್ವನಿಯಮವನ್ನು ಪಾಲಿಸತಕ್ಕದ್ದಾದುದರಿಂದ **ಋತವು** ಯಜ್ಞಕ್ಕೂ ಮತ್ತು **ಸತ್ಯಕ್ಕೂ** ತಾದಾತ್ಮ್ಯವನ್ನು ತೋರಿಸುವ ಪದವಾಗಿರುತ್ತದೆ. ಉದಾಹರಣೆಗೆ—

**ಋತೇನ ಋತಮಪಿಹಿತಂ ಧ್ರುವಂ ವಾಂ ಸೂರ್ಯಸ್ಯ ಯತ್ರ ವಿಮುಚಂತ್ಯಶ್ವಾನ್ ।**

**ಋತೇನ್ಮೃತೇನ ಸಪಂತೇಷಿರಂ ದಕ್ಷಮಾಶಾತೇ । ಅದ್ರುಹಾ ದೇವೌ ವರ್ಧೇತೇ ॥**

(ಋ. ಸಂ. ೫ ೬೮-೪)

ಎಂಬಲ್ಲಿ **ಋತೇದಿಂದ ಋತವನ್ನು** ಬೆಳೆಸತಕ್ಕವರು ಎಂದು ಮಿತ್ರಾವರುಣರನ್ನು ಪ್ರಶಂಸಿಸಿದೆ. ಈ ವಾಕ್ಯವು ಸತ್ಯಾತ್ಮಕವಾದ ಯಜ್ಞವನ್ನೂ, ಯಜ್ಞಾತ್ಮಕವಾದ ಸತ್ಯವನ್ನೂ ವರ್ಣಿಸುವುದಾಗಿದೆ. "ಯಜ್ಞೇನ ಯಜ್ಞಮಯಜಂತ ದೇವಾಃ'' ಎಂಬ ವಾಕ್ಯದಲ್ಲಿರುವ ಭಾವವೇ ಈ ವಾಕ್ಯದಲ್ಲಿಯೂ ಇರುತ್ತದೆ. ವಿಶ್ವನಿಯಮವನ್ನು ಸತ್ಯಾತ್ಮಕವಾದ ಯಜ್ಞವು ಪಾಲಿಸುತ್ತದೆಯಾದುದರಿಂದ ಋತವು ಈ ಎರಡು ತತ್ತ್ವಗಳನ್ನೂ ಪ್ರತಿಬಿಂಬಿಸುವ ಪದವಾಗಿರುತ್ತದೆ ಯೆಂದು ಹೇಳಬಹುದು. (ಋತಪಾಲಕರಾದ ಮಿತ್ರಾವರುಣಾದಿ ದೇವತೆಗಳಿಗೂ ಋತಕ್ಕೂ ಇರುವ ಸಂಬಂಧವನ್ನೂ, ಯಾವ ಯಾವ ದೇವತೆಗಳು ಋತಾವೃಧರು ಎಂಬ ಅಂಶವನ್ನೂ ಮುಂದೆ ತಿಳಿಸಲಾಗುತ್ತದೆ).

ಪ್ರಕೃತವಾದ ಋಕ್ಕಿನಲ್ಲಿ ಲೋಪಾಮುದ್ರೆಯು ತನ್ನ ಪತಿಯಾದ ಅಗಸ್ತ್ಯನ ಸಂಗವನ್ನಿಚ್ಛಿಸಿ ಪೂರ್ವದಲ್ಲಿ ಸತ್ಯಪಾಲಕರೂ, ಯಜ್ಞಪಾಲಕರೂ, ಯಜ್ಞದ ಮೂಲಕವಾಗಿ ದೇವತೆಗಳ ಸಂಬಂಧವನ್ನು ಪಡೆದವರೂ ಆದ ಋಷಿಗಳೆಲ್ಲರೂ ಕಾಮಸಂತೃಪ್ತಿಯನ್ನು ಪಡೆದರು. ಮಾನವನ ಕಾಮವು ಮಾನವನಿಗೆ ಸಹಜವಾದ ಇಚ್ಛೆಯಾದುದರಿಂದಲೂ ಅದನ್ನು ತೃಪ್ತಿಗೊಳಿಸದಿದ್ದರೆ ಅಸ್ವಾಭಾವಿಕವಾದ ವರ್ತನೆಯಾಗುವುದೆಂದೂ ತಿಳಿಸಿ ಪತಿಯ ಸಂಗವನ್ನು ಬಯಸುತ್ತಾಳೆ. ಇದೇ ಆನುಪೂರ್ವಿಯುಳ್ಳ ಋಕ್ಕಿನಿಂದ ಮುಂದೆ ಯಮಯಮಿಯರ ಸಂಭಾಷಣದ ಕಾಲದಲ್ಲಿ ಯಮಿಯು ಸಹೋದರನಾದ ಯಮನನ್ನು ಕುರಿತು ಪ್ರಾರ್ಥಿಸುತ್ತಾಳೆ. ಋತುನಿಯಮವನ್ನನುಸರಿಸಿ ನಡೆದ ಋಷಿಗಳೆಲ್ಲರೂ ಕಾಮಸಂತೃಪ್ತಿಯನ್ನು ಪಡೆದರು ಎಂದು ತಿಳಿಸುತ್ತಾ,

**ಯೇ ಚಿತ್ಪೂರ್ವ ಋತಸಾಪ ಋತಾವಾನ ಋತಾವೃಧಃ ।**

**ಪಿತೄನ್ ತಪಸ್ವತೋ ಯಮ ತಾँಶ್ಚಿದೇವಾಪಿ ಗಚ್ಛತಾತ್ ॥**

(ಋ. ಸಂ. ೧೦-೧೫೪-೪)

ಎಂಬ ಋಕ್ಕಿನಲ್ಲಿ ಯಮನ ಸಂಗವನ್ನು ಬಯಸುವ ಪ್ರಾರ್ಥನೆಯನ್ನು ಮಾಡುತ್ತಾಳೆ, ಆದರೆ ಪ್ರಕೃತವಾದ ಋಕ್ಕಿನಲ್ಲಿರುವ ಪತ್ನಿಯ ಪ್ರಾರ್ಥನೆಯು ನ್ಯಾಯವಾದುದರಿಂದ ಪತಿಯಾದ ಅಗಸ್ತ್ಯನು ಅದನ್ನು ಅಂಗೀಕರಿಸುತ್ತಾನೆ. ಉದಾಹೃತವಾಗಿರುವ ಋಕ್ಕಿನಲ್ಲಿರುವ ಪ್ರಾರ್ಥನೆಯು, ಸಹೋದರಿಯಾದ ಯಮಿಯು ಸಹೋದರನಾದ ಯಮನಲ್ಲಿ ಮಾಡಿದುದರಿಂದ ಅದು ಅನೈತಿಕವಾದ ವ್ಯವಹಾರವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಋತಸಾಪಃ**— ಆಪ್ಲೃ ವ್ಯಾಪ್ತೌ. ಧಾತು. ಕ್ವಿಪ್‌ಪ್ರತ್ಯಯ. ಛಾಂದಸವಾಗಿ ಸಕಾರವು ಅಧಿಕವಾಗಿ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಆಸನ್**— **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅವದನ್**—ವದ ವ್ಯಕ್ತಾಯಾಂ ವಾಚಿ. ಧಾತು. ಲಙ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಅಸುಃ**—ಷೋಂತಕರ್ಮಣಿ. ಧಾತು. ಅವ ಎಂಬ ಉಪಸರ್ಗ ಸಂಬಂಧದಿಂದ ಬಿಡುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಬಹುವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆಪುಃ**—ಆಪ್ಲೃ ವ್ಯಾಪ್ತೌ. ಧಾತು. ಲಿಟ್ ಪ್ರಥಮಪುರುಷ ಬಹುವಚನಾಂತರೂಪ. **ಹಿಚ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಪತ್ನೀಃ**—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಜಸ್ ಪರವಾದಾಗ ಪೂರ್ವ ಸವರ್ಣದೀರ್ಘ. ॥ ೨ ॥

॥ ಸಂಹಿತಾಪಾಠಃ ॥

ನ ಮೃಷಾ ಶ್ರಾಂತಂ ಯದವಂತಿ ದೇವಾ ವಿಶ್ವಾ ಇತ್ಸ್ಪೃಧೋ ಅಭ್ಯಶ್ನವಾವ ।
ಜಯಾವೇದತ್ರ ಶತನೀಥಮಾಜಿಂ ಯತ್ಸಮ್ಯಂಚಾ ಮಿಥುನಾವಭ್ಯಜಾವ ॥ ೩ ॥

॥ ಪದಪಾಠಃ ॥

ನ । ಮೃಷಾ । ಶ್ರಾಂತಂ । ಯತ್ । ಅವಂತಿ । ದೇವಾಃ । ವಿಶ್ವಾಃ । ಇತ್ । ಸ್ಪೃಧಃ । ಅಭಿ । ಅಶ್ನವಾವ ।
ಜಯಾವ । ಇತ್ । ಅತ್ರ । ಶತಽನೀಥಂ । ಆಜಿಂ । ಯತ್ । ಸಮ್ಯಂಚಾ । ಮಿಥುನೌ । ಅಭಿ । ಅಜಾವ ॥

॥ ಸಾಯಣಭಾಷ್ಯಂ ॥

ಅಗಸ್ತ್ಯಸ್ತಾಮಾಹ ॥

ಭೋಃ ಪತ್ನಿ ತ್ವಯಾ ಮಯಾ ನ ಮೃಷಾ ಶ್ರಾಂತಂ । ವ್ಯರ್ಥಂ ನೈವ ಖಿನ್ನಮಾವಾಭ್ಯಾಂ । ಯದ್ಯಸ್ಮಾದ್ದೇವಾ ಅವಂತಿ ರಕ್ಷಂತಿ ತಪೋಭಿಃ ಪ್ರೀತಾ ದೇವಾಃ । ವಿಶ್ವಾಃ ಸರ್ವಾಃ ಸ್ಪೃಧೋಽಭ್ಯಶ್ನವಾವ । ಅಭಿತೋ ವ್ಯಾಪ್ನುಯಾವ । ಅತ್ರಾಸ್ಮಿನ್ಸಂಸಾರೇ ಶತನೀಥಮಪರಿಮಿತಭೋಗಪ್ರಾಪ್ತಿಸಾಧನಮಾಜಿಂ ಪ್ರಾಪ್ತಿಂ ಪರಸ್ಪರಂ ಜಯಾವ । ಜಯಲಕ್ಷಣಂ ಸುರತಸಂಗ್ರಾಮಂ ವಾ ಜಯಾವ । ಯದ್ಯಸ್ಮಾತ್ಸಮ್ಯಂಚಾ ಸಮ್ಯಕ್ಪರಸ್ಪರಂ ಗಚ್ಛಂತೌ ಪ್ರಜಯಂತೌ ವಾ ಮಿಥುನಾ ಮಿಥುನೌ ಸ್ತ್ರೀಪುರುಷರೂಪೌ ಸಂತಾವಭ್ಯಜಾವ । ತ್ವಂ ಚಾಹಮಪಿ ಪರಸ್ಪರಮಭಿಜಯಾವೇತ್ಯೇವಂ ತಯೋಃ ಕ್ತಂ ಸಂಭೋಗಂ ಸಂಭಾವಯಾಮಾಸ ॥

॥ ಪ್ರತಿಪದಾರ್ಥ ॥

(**ಭೋಃ ಪತ್ನಿ**—ಎಲೈ ಪತ್ನಿಯಾದ ಲೋಪಾಮುದ್ರೆಯೇ) । **ಯತ್**—ಯಾವ ಕಾರಣ । **ದೇವಾಃ**—ದೇವತೆಗಳು । **ಅವಂತಿ**—(ನಮ್ಮ ತಪಸ್ಸಿನಿಂದ ತೃಪ್ತರಾಗಿ) ರಕ್ಷಿಸುತ್ತಾರೋ । (**ತತ್**—ಆದುದರಿಂದ) ।

**ಮೃಷಾ**—ವ್ಯರ್ಥವಾಗಿ । **ನ ಶ್ರಾಂತಂ**—(ನಮ್ಮಿಬ್ಬರಿಂದ) ಶ್ರಮವು ವಹಿಸಲ್ಪಟ್ಟಿಲ್ಲ । **ವಿಶ್ವಾಃ**—ಎಲ್ಲಾ । **ಸ್ಪೃಧಃ ಇತ್**—ಅಭೀಷ್ಟಗಳನ್ನೂ । **ಅಭಿ ಅಶ್ನವಾವ**—ಹೊಂದೋಣ । **ಅತ್ರ**—ಈ ಸಂಸಾರದಲ್ಲಿ । **ಮಿಥುನಾ**—ಸ್ತ್ರೀಪುರುಷರಂತೆ । **ಸಮ್ಯಂಚಾ**—ಚೆನ್ನಾಗಿ ಪರಸ್ಪರ ಸಂಗತರಾಗಿ । **ಯೆತ್ ಅಭಿ ಅಜಾವ**—(ಒಬ್ಬರನ್ನೊಬ್ಬರು ಜಯಿಸಿದರೆ) ಅಥವಾ ಚೆನ್ನಾಗಿ ಪ್ರಯತ್ನಿಸಿದರೆ । **ಶತನೀಥಂ**—ಅಪರಿಮಿತ ಭೋಗಪ್ರಾಪ್ತಿ ಸಾಧನವಾದ । **ಆಜಿಂ**—ಪರಸ್ಪರಪ್ರಾಪ್ತಿಯನ್ನು । **ಜಯಾವ**—ಪಡೆಯುತ್ತೇವೆ । [ಅಥವಾ **ಆಜಿಂ**—ಸುರತರೂಪ ಸಂಗ್ರಾಮವನ್ನು । **ಜಯಾವ ಇತ್**—(ನಾವಿಬ್ಬರೂ) ಖಂಡಿತವಾಗಿ ಜಯಿಸೋಣ.]

॥ ಭಾವಾರ್ಥ ॥

ಎಲೈ ಪತ್ನಿಯೇ, ಲೋಪಾಮುದ್ರೆಯೇ, ನಮ್ಮ ತಪಸ್ಸಿನಿಂದ ತೃಪ್ತರಾದ ದೇವತೆಗಳು ನಮ್ಮನ್ನು ರಕ್ಷಿಸುತ್ತಾರೆ ಮತ್ತು ಅವರ ಅನುಗ್ರಹದಿಂದ ಸಮಸ್ತ ಆಭೀಷ್ಟಗಳನ್ನೂ ಪಡೆಯುತ್ತೇವೆ; ಆದುದರಿಂದ ನಾವು ಪಟ್ಟಶ್ರಮವು ವ್ಯರ್ಥವೆನ್ನಬೇಡ. ಮತ್ತು ಈ ಸಂಸಾರದಲ್ಲಿ, ಪತಿಪತ್ನಿಯರಾದ ನಾವಿಬ್ಬರೂ ಪರಸ್ಪರ ಮಿಳಿತರಾಗಿ ಚೆನ್ನಾಗಿ ಪ್ರಯತ್ನಿಸಿದರೆ, ಅಪರಿಮಿತ ಭೋಗಗಳನ್ನು ಸಾಧಿಸಬಹುದು. (ನಾವಿಬ್ಬರೂ ಸುರತರೂಪಸಂಗ್ರಾಮದಲ್ಲಿ ಭೋಗರೂಪ ಜಯವನ್ನು ಗಳಿಸೋಣ).

English Translation

(Agastya)—Penance has not been practised in vain : since the gods protect us, we may indulge all our desires : in this world we may triumph in many conflicts, if we exert ourselves mutually together.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗಸ್ತ್ಯನು ತನ್ನ ಪತ್ನಿಯಾದ ಲೋಪಾಮುದ್ರೆಗೆ ತನ್ನ ಉತ್ತರವನ್ನು ಹೇಳಿ ಅವಳು ಇಚ್ಛಿಸಿದಂತೆ ಅವಳೊಡನೆ ಸಂಗಮಾಡಲು ತನ್ನ ಒಪ್ಪಿಗೆಯನ್ನು ಕೊಡುತ್ತಾನೆ. ಆದರೆ ಇಲ್ಲಿ ಇನ್ನೊಂದು ವಿಶೇಷವನ್ನು ಗಮನಿಸಬೇಕು. ಈ ಸಂಭಾಷಣೆಯಲ್ಲಿ ಕಾಮವನ್ನೇ ಪ್ರಥಮಪುರುಷಾರ್ಥವನ್ನಾಗಿ ಮಾಡಿ ತೋರಿಸಿಲ್ಲ. ಧಾರ್ಮಿಕವಾದ ಯಜ್ಞಾದಿಕಾರ್ಯಗಳೆಲ್ಲಾ ನೆರವೇರಿಸಲ್ಪಟ್ಟು ಅದರಿಂದ ದೇವತಾತೃಪ್ತಿಯನ್ನುಂಟುಮಾಡಿ ಅವರ ಅನುಗ್ರಹವನ್ನು ಪಡೆದೇ ಅನಂತರ ಈ ಇಚ್ಛೆಯನ್ನು ಅಗಸ್ತ್ಯನು ಪ್ರಕಟಿಸುತ್ತಾನೆ. ಅದರಲ್ಲೂ ಇನ್ನೊಂದಂಶವನ್ನೂ ಗಮನಿಸತಕ್ಕದ್ದು. "ನ ಮೃಷಾ ಶ್ರಾಂತಂ............" ದೇವತೆಗಳನ್ನು ತೃಪ್ತಿಗೊಳಿಸಲು ನಾವು ಪಟ್ಟ ಶ್ರಮವು ವ್ಯರ್ಥವಾಗುವುದಿಲ್ಲವೆಂದೂ ಹೇಳುವಾಗ ದೇವತಾ ತೃಪ್ತಿಯು ಪುನಃ ಮಾನವನನ್ನು ಅನುಗ್ರಹಿಸುವುದಕ್ಕಾಗಿಯೇ ಎಂಬುದು ಪ್ರಸಿದ್ಧವಾಗಿದೆ. ಈ ಪ್ರಯತ್ನಕ್ಕೆ ತಕ್ಕ ಪ್ರತಿಫಲಗಳಲ್ಲಿ ಐಹಿಕ ಸುಖವೂ ಒಂದಾದುದರಿಂದ ದೇವತೆಗಳ ಅನುಗ್ರಹದ್ವಾರಾ ಸಂಪಾದಿತವಾಗತಕ್ಕ ಐಹಿಕ ಸುಖವನ್ನು ಅನುಭವಿಸಲು ಅಗಸ್ತ್ಯನು ಅಪೇಕ್ಷಿಸುತ್ತಾನೆ.

**ಸ್ಪೃಧಃ**—**ಸ್ಪೃಧ** ಶಬ್ದವನ್ನು ನಿರುಕ್ತಕಾರರು **ಸಂಗ್ರಾಮ**ನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಅಪೇಕ್ಷೆಯೆಂದರ್ಥಮಾಡಿದ್ದಾರೆ. **ಸ್ಪರ್ಧ್** ಧಾತುವಿನಿಂದ ನಿಷ್ಪನ್ನವಾದರೆ ಆಗ ಅಪೇಕ್ಷೆಯೆಂದೂ ಅರ್ಥವಾಗುತ್ತದೆ.

ಕಾಮನಿರೋಧವು ಅತ್ಯಂತ ಕಠಿಣವಾದ ಸಾಧನವಾದುದರಿಂದ ಇಲ್ಲಿ ಸಂಗ್ರಾಮಕ್ಕೆ ಹೋಲಿಸಿದೆ.

**ಆಜಿಂ—ಆಜಯೆನಸ್ಯಾಜವನಸ್ಯೇತಿ ವಾ** (ನಿ. ೯–೨೩) ಜಯವನ್ನು ಪಡೆಯುವ ಸ್ಥಾನವೆಂಬುದರಿಂದಾಗಲಿ ಅಥವಾ ವೇಗವಾದ ಸ್ಥಾನವೆಂಬುದರಿಂದಾಗಲಿ ಸಂಗ್ರಾಮಕ್ಕೆ ಆಜಿಯೆಂದು ಹೆಸರು. ಈ ಪದವನ್ನು ವಿವರಿಸುವಾಗ ನಿರುಕ್ತಕಾರರು ಋಕ್ಸಂಹಿತೆಯಲ್ಲಿರುವ.

**ನ್ಯಕ್ರಂದಯನ್ನುಪಯಂತ ಏನಮಮೇಹಯನ್ ವೃಷಭಂ ಮಧ್ಯ ಆಜೇಃ ।**
**ತೇನ ಸೂಭರ್ವಂ ಶತವತ್ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ ॥**

(ಋ. ಸಂ. ೧೦-೧೦೨-೫)

ಎಂಬ ಋಕ್ಕನ್ನುದಾಹರಿಸಿ ಇಲ್ಲಿರುವ **ಆಜೇಃ** ಎಂಬ ಪದಕ್ಕೆ ಮೇಲಿನ ನಿರ್ವಚನವನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸಾಯಣರು ಎರಡರ್ಥವನ್ನೂ ತಿಳಿಸಿದ್ದಾರೆ. ಮೊದಲನೆಯದಾಗಿ **ಆಜಿಂ ಪರಸ್ಪರಪ್ರಾಪ್ತಿಂ** ಎಂದೂ ಎರಡನೆಯದಾಗಿ, **ಸುರತರೂಪಸಂಗ್ರಾಮಂ ವಾ** ಎಂದರ್ಥಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಶ್ರಾಂತಮ್**—ಶ್ರಮು ತಪಸಿ ಖೇದೇ ಚ. ಧಾತು. ಕ್ತ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವಂತಿ**—ಅವ ರಕ್ಷಣೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯದಾನುತ್ತೇತ್**–(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಶ್ನವಾವ**—ಅಶೂ ವ್ಯಾಪ್ತೌ ಧಾತು. ಸ್ವಾದಿ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೋಟ್ ಉತ್ತಮಪುರುಷ. ದ್ವಿವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಜಯಾವ**—ಜಿ ಜಯೇ ಧಾತು. ಲೋಟ್ ಉತ್ತಮ ಪುರುಷ ದ್ವಿವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಶತನೀಥಮ್**—ಣೀಞ್ ಪ್ರಾಪಣೇ. ಧಾತು. **ಹನಿಕುಷಿನೀರಮಿಕಾಶಿಭ್ಯಃ ಕ್ಥನ್** (ಉ. ಸೂ. ೨–೧೫೯) ಎಂಬುದರಿಂದ ಕ್ಥನ್ ಪ್ರತ್ಯಯ. ಬಹುವ್ರೀಹಿ ಸಮಾಸದಲ್ಲಿ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿ ಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸಮ್ಯಂಚಾ—ಸುಪಾಂ ಸುಲುಕ್**–(ಪಾ. ಸೂ. ೩–೧–೩೯) ಎಂಬುದರಿಂದ ದ್ವಿವಚನ ಓಕಾರ ವಿಭಕ್ತಿಗೆ ಆಕಾರಾದೇಶ.

**ಅಜಾವ**—ಅಜ ಗತಿಕ್ಷೇಪಣಯೋಃ. ಧಾತು. ಲೋಟ್ ಉತ್ತಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. ॥ ೩ ॥

॥ ಸಂಹಿತಾಪಾಠಃ ॥

ನದಸ್ಯ ಮಾ ರುಧತಃ ಕಾಮ ಆಗನ್ನಿತ ಆಜಾತೋ ಅಮುತಃ ಕುತಶ್ಚಿತ್ ।
ಲೋಪಾಮುದ್ರಾ ವೃಷಣಂ ನೀ ರಿಣಾತಿ ಧೀರಮಧೀರಾ ಧಯತಿ ಶ್ವಸಂತಂ ॥ ೪ ॥

॥ ಪದಪಾಠಃ ॥

ನದಸ್ಯ । ಮಾ । ರುಧತಃ । ಕಾಮಃ । ಆ । ಅಗನ್ । ಇತಃ । ಆऽಜಾತಃ । ಅಮುತಃ । ಕುತಃ । ಚಿತ್ ।
ಲೋಪಾಮುದ್ರಾ । ವೃಷಣಂ । ನಿಃ । ರಿಣಾತಿ । ಧೀರಂ । ಅಧೀರಾ । ಧಯತಿ । ಶ್ವಸಂತಂ ॥ ೪ ॥

॥ ಸಾಯಣಭಾಷ್ಯಂ ॥

ಅಥ ಚತುರ್ಥ್ಯಾಗಸ್ತ್ಯ ಆಹ ॥

ಹೇ ಜಾಯೇ ನದಸ್ಯ ನದನಸ್ಯ ಜಪಶಬ್ದಯಿತುರ್ಜಪಾಧ್ಯಯನಕರ್ತೂ ರುಧತೋ ರೇತೋ ನಿರೋದ್ಧುರ್ಬ್ರಹ್ಮಚರ್ಯಮಾಸ್ಥಿತಸ್ಯ ॥ ಉಭೇ ಕರ್ಮಣಿ ಷಷ್ಠ್ಯೌ ॥ ಉಕ್ತಲಕ್ಷಣಂ ಮಾಂ ಕಾಮ ಆಗನ್ । ಆಗಮತ್ । ನದನಸ್ಯ ಮಾ ರುಧತಃ ಕಾಮ ಆಗಮದಿತಿ ನಿರುಕ್ತಂ । ೫-೨ । ಕಸ್ಯ ಹೇತೋರಿತಿ ಉಚ್ಯತೇ । ಇತಸ್ತ್ವತ್ಸಂಗಮನಿಮಿತ್ತಾತ್ ತಥಾಮುತೋ ವಸಂತಾದಿಕಾಲಾತ್ ಕುತಶ್ಚಿತ್ಕಾರಣಾದಾಜಾತಃ ಸರ್ವತ ಉತ್ಪನ್ನಃ । ಯದ್ವಾ । ಇತ ಏತಲ್ಲೋಕಜನಿತಾದಮುತೋ ಲೋಕಾಂತರಜನಿತಾದ್ವಾ ಕುತಶ್ಚಿನ್ನಿಮಿತ್ತಾತ್ಕಾಮಾತ್ । ಕಥಮಿತಿ ಉಚ್ಯತೇ । ಇಯಂ ಲೋಪಾಮುದ್ರಾ ವೃಷಣಂ ರೇತಸಃ ಪ್ರವರ್ತಕಂ ಮಾಂ ನೀ ರಿಣಾತಿ । ನಿತರಾಂ ಗಚ್ಛತು । ಕಿಂಚ ಧೀರಂ ಧೀಮಂತಂ ನಿಯಮಾದವಿಚಾಲಿನಂ ಶ್ವಸಂತಂ ಮಹಾಪ್ರಾಣಂ ಮಹಾಬಲಮಧೀರಾ ಕಾತರೈಷಾ ಯೋಷಿದ್ಧಯತಿ । ಉಪಭುಂಕ್ತಾಂ ॥

॥ ಪ್ರತಿಪದಾರ್ಥ ॥

**(ಹೇ ಜಾಯೇ**—ಎಲೈ ಪತ್ನಿಯೇ) । **ನದಸ್ಯ**—(ಜಪಾಧ್ಯಯನರೂಪ) ಶಬ್ದಮಾಡುತ್ತಿರುವವನೂ । **ರುಧತಃ**—ರೇತೋನಿರೋಧವನ್ನು (ಬ್ರಹ್ಮಚರ್ಯವನ್ನು) ಚರಿಸುತ್ತಿರುವವನೂ (ಆದ) । **ಮಾ**—ನನ್ನನ್ನು । **ಇತಃ**—(ನಿನ್ನ ಸಂಗಮರೂಪವಾದ) ಈ ಕಾರಣದಿಂದ । **ಅಮುತಃ**—(ವಸಂತಾದಿಕಾಲರೂಪವಾದ) ಆ ಕಾರಣದಿಂದ । ಅಥವಾ **ಕುತಶ್ಚಿತ್**— ಮತ್ತ್ಯಾವುದೋ ಕಾರಣದಿಂದ । [ಅಥವಾ **ಇತಃ**—ಈ ಲೋಕದಿಂದ ಜನಿತವಾದ । ಅಥವಾ **ಅಮುತಃ** ಪರಲೋಕಜನಿತವಾದ । **ಕುತಃ ಚಿತ್**—ಯಾವುದೋ ಒಂದು ಕಾರಣದಿಂದ । ] **ಆಜಾತಃ**—ಉತ್ಪನ್ನವಾದ । **ಕಾಮಃ**—ವಿಷಯಾಭಿಲಾಷೆಯು । **ಆ ಅಗನ್**—ಉತ್ಪನ್ನವಾಗಿದೆ । **(ಇಯಂ) ಲೋಪಾಮುದ್ರಾ**—ಈ ಲೋಪಾಮುದ್ರೆಯು । **ವೃಷಣಂ**—ರೇತಃಪ್ರವರ್ತಕನಾದ ನನ್ನನ್ನು । **ನಿಃ ರಿಣಾತಿ**—ಸಮಾಪಿಸುತ್ತಾಳೆ (ಸಮಾಪಿಸಲಿ) । **ಕಿಂಚ**—ಮತ್ತು । **ಅಧೀರಾ**—ಕಾತರಳಾದ ಸ್ತ್ರೀಯು । **ಧೀರಂ**—ಧೀಮಂತನೂ । **ಶ್ವಸಂತಂ**—ಮಹಾಬಲಶಾಲಿಯೂ (ಆದವನನ್ನು) । **ಧಯತಿ**—ಉಪಭೋಗಿಸುತ್ತಾಳೆ.

॥ ಭಾವಾರ್ಥ ॥

ಎಲೈ ಲೋಪಾಮುದ್ರೆಯೇ, ಜಪಾಧ್ಯಯನಾಸಕ್ತನೂ, ಬ್ರಹ್ಮಚರ್ಯವ್ರತನಿಷ್ಠನೂ ಆದ ನನ್ನಲ್ಲಿ, ನಿನ್ನ ಸಾಮಿಪ್ಯಜನಿತವೋ ಅಥವಾ ಮತ್ತ್ಯಾವುದೋ ಕಾರಣದಿಂದ ಕಾಮವು ಉತ್ಪನ್ನವಾಗಿದೆ; ಆದುದರಿಂದ ರೇತಸ್ಸೇಚಕನಾದ ನನ್ನನ್ನು ಸಮೀಪಿಸು; ಎಂತಹ ಜ್ಞಾನಿಯೂ, ಬಲಶಾಲಿಯೂ ಆದರೂ ಪುರುಷನನ್ನು ಕಾತರಳಾದ ಸ್ತ್ರೀಯು ವಿಕಲಚಿತ್ತನನ್ನಾಗಿ ಮಾಡುತ್ತಾಳೆ.

## English Translation.

Desire, either from this cause or from that, has come upon me whilst engaged in prayer and suppressing (passion) : let Lopamudra approach her husband : the unsteady famale beguiles the firm and resolute man.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗಸ್ತ್ಯನು ತನ್ನ ಪತ್ನಿಯಾದ ಲೋಪಾಮುದ್ರೆಗೆ ಪುನಃ ಭರವಸೆಯನ್ನು ಕೊಟ್ಟು ಅವಳನ್ನು ತೃಪ್ತಿಪಡಿಸುವುದಾಗಿ ಹೇಳುತ್ತಾನೆ. ಮತ್ತು ತನ್ನ ಅಭಿಲಾಷೆಯನ್ನೂ ಸ್ಪಷ್ಟಪಡಿಸುತ್ತಾನೆ.

ನಿರುಕ್ತಕಾರರು ಈ ಋಕ್ಕಿಗೆ ಕೆಳಗೆ ಕಂಡಂತೆ ವಿವರಣೆಯನ್ನು ಹೇಳಿದ್ದಾರೆ.

**" ನದನಸ್ಯ ಮಾ ರುಧತಃ ಕಾಮ ಆಗಮತ್ । ಸಂರುದ್ಧಪ್ರಜನನಸ್ಯ ಬ್ರಹ್ಮಚಾರಿಣ ಇತ್ಯೃಷಿಪುತ್ರ್ಯಾ ವಿಲಪಿತಂ ವೇದಯಂತೇ ॥** (ನಿ. ೫-೨)

ಆತ್ಮಸಂಯಮಿಯಾದ ಋಷಿಯೊಂದಿಗೆ ನಾನು ವಿವಾಹಿತಳಾಗಿ ಅವನ ನಿಷ್ಕಾಮವಾದ ಪ್ರೀತಿಗೆ ಪಾತ್ರಳಾಗಬೇಕಾಯಿತು. ಅವನಿಗೆ ಕಾಮೇಚ್ಛೆಯೇ ಇಲ್ಲ. ಅವನು ಬ್ರಹ್ಮಚಾರಿಯಾಗಿಯೇ ಇದ್ದಾನೆ ಇತ್ಯಾದಿಯಾಗಿ ಋಷಿಪುತ್ರಿಯು ತನ್ನ ದುಃಖವನ್ನು ನಿವೇದನಮಾಡಿಕೊಂಡಳು ಎಂದಿದೆ. ಇಲ್ಲಿ ಬೃಹದ್ದೇವತಾವಾಕ್ಯಕ್ಕೂ ನಿರುಕ್ತವಾಕ್ಯಕ್ಕೂ ಕೊಂಚ ವಿರೋಧವು ಕಾಣುತ್ತದೆ. ಬೃಹದ್ದೇವತೆಯಲ್ಲಿ—

**ರಿರಂಸುಸ್ತಾಮಥಾಗಸ್ತ್ಯ ಉತ್ತರಾಭ್ಯಾಮತೋಷಯತ್ ।**

(ಬೃ. ದೇ. ४-೫೮)

ಅಗಸ್ತ್ಯನು ಮುಂದಿನ ಎರಡು ಋಕ್ಕುಗಳಿಂದ ಎಂದರೆ ಪ್ರಕೃತವಾದ ಸೂಕ್ತದಲ್ಲಿ ೩ ಮತ್ತು ४ ನೇ ಋಕ್ಕುಗಳಿಂದ ತನ್ನ ಅಭೀಷ್ಟವನ್ನು ತಿಳಿಸಿ ಪತ್ನಿಯಾದ ಲೋಪಾಮುದ್ರೆಯನ್ನು ಸಂತೋಷಪಡಿಸಿದನು ಎಂದಿದೆ. ಆದರೆ ಇಲ್ಲಿ ಎಂದರೆ ನಿರುಕ್ತವಾಕ್ಯದ ಪ್ರಕಾರ ಇದು ಲೋಪಾಮುದ್ರೆಯ ವಾಕ್ಯವೆಂದೂ, ಲೋಪಾಮುದ್ರೆಯು ತನ್ನ ಮನಃಖೇದವನ್ನು ಈ ವಾಕ್ಯಗಳಿಂದ ತಿಳಿಸುತ್ತಾಳೆಂದೂ ಅರ್ಥವಾಗುತ್ತದೆ. ದುರ್ಗಾಚಾರ್ಯರು ನಿರುಕ್ತವಾಕ್ಯಕ್ಕೆ ಈ ರೀತಿ ವ್ಯಾಖ್ಯಾನವನ್ನು ಹೇಳಿದ್ದಾರೆ.

**ಅಗಸ್ತ್ಯಲೋಪಾಮುದ್ರಾಬ್ರಹ್ಮಚಾರಿಸೂಕ್ತಸಂವಾದೇ ಲೋಪಾಮುದ್ರಯಾ ಇಯಮಾರ್ಷಂ । ಸಾ ಅಬ್ರವೀದಗಸ್ತ್ಯಂ ಭರ್ತಾರಮಭಿಪ್ರೇತ್ಯ "ನದಸ್ಯ ನದನಸ್ಯ........."....। ಇತ್ಯೇವಂ ವಿಲಪಮಾನಾ ಕಾಮಾರ್ತಾ ಲೋಪಾಮುದ್ರಾ ರಾಜರ್ಷಿಪುತ್ರಿಕಾ । ........ಏವಂ ಲೋಪಾ-**

ಮುದ್ರಾವಾಕ್ಯೇ " ನದಸ್ಯ ರುಧತೋ ಮಾಮಾಗಮತ್ ಕಾಮಃ " ಇತಿ ಪ್ರಕರಣಾದೃಷಿರ್ನದ-ಶಬ್ದೇನೋಚ್ಯತೇ ಇತ್ಯುಪಪದ್ಯತೇ ||

(ನಿರುಕ್ತವ್ಯಾಖ್ಯಾ. ೫-೨)

ನಿರುಕ್ತಕಾರರು ಲೋಪಾಮುದ್ರೆಯನ್ನು ಋಷಿಪುತ್ರಿಯೆಂದೂ, ದುರ್ಗಾಚಾರ್ಯರು ರಾಜರ್ಷಿಪುತ್ರಿಯೆಂದೂ ಕರೆದಿದ್ದಾರೆ. ಇವಳು ಅಗಸ್ತ್ಯಪುತ್ರಿಯೆಂದೂ, ತನಗೆ ಸುಂದರಳಾದ ಸ್ತ್ರೀಯು ದೊರಕಬೇಕೆಂಬ ಉದ್ದಿಶ್ಯದಿಂದ ಅಗಸ್ತ್ಯನೇ ಇವಳನ್ನು ನಿರ್ಮಿಸಿ ವಿದರ್ಭರಾಜನಲ್ಲಿ ಬಿಟ್ಟುಬಂದನೆಂದೂ ಒಂದು ಕಥೆಯಿದೆ. ಅದು ಮಹಾಭಾರತದಲ್ಲಿ ಈ ರೀತಿ ವರ್ಣಿತವಾಗಿದೆ. ಇದು ಬೃಹದ್ದೇವತಾವಾಕ್ಯಗಳಿಗನುಸಾರವಾಗಿರುವುದರಿಂದ ಇಲ್ಲಿ ಉದಾಹೃತವಾಗಿದೆ.

ತತಃ ಪ್ರಸವಸಂತಾನಂ ಚಿಂತಯನ್ಭಗವಾನೃಷಿಃ | ಆತ್ಮನಃ ಪ್ರಸವಸ್ಯಾರ್ಥೇ ನಾಪಶ್ಯತ್ಸದೃಶೀಂ ಸ್ತ್ರಿಯಂ || ಸ ತಸ್ಯ ತಸ್ಯ ಸತ್ವಸ್ಯ ತತ್ತದಂಗಮನುತ್ತಮಂ | ಸಂಗೃಹ್ಯ ತತ್ಸಮೈರಂಗೈರ್ನಿರ್ಮಮೇ ಸ್ತ್ರಿಯಮುತ್ತಮಾಂ || ಸ ತಾಂ ವಿದರ್ಭರಾಜಾಯ ಪುತ್ರಕಾಮಾಯ ಕಾಮ್ಯತೇ | ನಿರ್ಮಿತಾಮಾತ್ಮನೋಽರ್ಥಾಯ ಮುನಿಃ ಪ್ರಾದಾನ್ಮಹಾತಪಾಃ || ಸಾ ತತ್ರ ಜಜ್ಞೇ ಸುಭಗಾ ವಿದ್ಯುತ್ಸೌದಾಮಿನೀ ಯಥಾ | ವಿಭ್ರಾಜಮಾನಾ ವಪುಷಾ ವ್ಯವರ್ಧತ ಶುಭಾನನಾ || ಜಾತಮಾತ್ರಾಂ ಚ ತಾಂ ದೃಷ್ಟ್ವಾ ವೈದರ್ಭಃ ಪೃಥಿವೀಪತಿಃ | ಪ್ರಹರ್ಷೇಣ ದ್ವಿಜಾತಿಭ್ಯೋ ನ್ಯವೇದಯತ ಭಾರತ || ಅಭ್ಯನಂದಂತ ತಂ ಸರ್ವೇ ಬ್ರಾಹ್ಮಣಾ ವಸುಧಾಧಿಪ | ಲೋಪಾಮುದ್ರೇತಿ ತಸ್ಯಾಶ್ಚ ಚಕ್ರಿರೇ ನಾಮ ತೇ ದ್ವಿಜಾಃ || ವವೃಧೇ ಸಾ ಮಹಾರಾಜ ಬಿಭ್ರತೀ ರೂಪಮುತ್ತಮಂ | ಅಪ್ಸ್ವಿವೋತ್ಪಲಿನೀ ಶೀಘ್ರಮಗ್ನೇರಿವ ಶಿಖಾ ಶುಭಾ |...... ವೈದರ್ಭೀಂ ತು ತಥಾಯುಕ್ತಾಂ ಯುವತೀಂ ಪ್ರೇಕ್ಷ್ಯ ವೈ ಪಿತಾ | ಮನಸಾ ಚಿಂತಯಾಮಾಸ ಕಸ್ಮೈ ದದ್ಯಾಮಿಮಾಂ ಸುತಾಂ || ಯದಾ ತ್ವಮನ್ಯತಾಗಸ್ತ್ಯೋ ಗಾರ್ಹಸ್ಥ್ಯೇ ತಾಂ ಕ್ಷಮಾಮಿತಿ | ತದಾಭಿಗಮ್ಯ ಪ್ರೋವಾಚ ವೈದರ್ಭಂ ಪೃಥಿವೀಪತಿಂ || ರಾಜನ್ನಿವೇಶೇ ಬುದ್ಧಿರ್ಮೇ ವರ್ತತೇ ಪುತ್ರಕಾರಣಾತ್ | ವರಯೇ ತ್ವಾಂ ಮಹೀಪಾಲ ಲೋಪಾಮುದ್ರಾಂ ಪ್ರಯಚ್ಛ ಮೇ || ಏವಮುಕ್ತಃ ಸ ಮುನಿನಾ ಮಹೀಪಾಲೋ ವಿಚೇತನಃ | ಪ್ರತ್ಯಾಖ್ಯಾನಾಯ ಚಾಶಕ್ತಃ ಪ್ರದಾತುಂ ಚೈವ ನೈಚ್ಛತ || ತತಃ ಸ ಭಾರ್ಯಾಮಭ್ಯೇತ್ಯ ಪ್ರೋವಾಚ ಪೃಥಿವೀಪತಿಃ | ಮಹರ್ಷಿರ್ವೀರ್ಯವಾನೇಷ ಕ್ರುದ್ಧಃ ಶಾಪಾಗ್ನಿನಾ ದಹೇತ್ || ತಂ ತಥಾ ದುಃಖಿತಂ ದೃಷ್ಟ್ವಾ ಸಭಾರ್ಯಂ ಪೃಥಿವೀಪತಿಂ | ಲೋಪಾಮುದ್ರಾಭಿಗಮ್ಯೇದಂ ಕಾಲೇ ವಚನಮಬ್ರವೀತ್ || ನ ಮತ್ಕೃತೇ ಮಹೀಪಾಲ ಪೀಡಾಮಭ್ಯೇತುಮರ್ಹಸಿ | ಪ್ರಯಚ್ಛ ಮಾಮಗಸ್ತ್ಯಾಯ ತ್ರಾಹ್ಯಾತ್ಮಾನಂ ಮಯಾ ಪಿತಃ || ದುಹಿತುರ್ವಚನಾದ್ರಾಜಾ ಸೋಽಗಸ್ತ್ಯಾಯ ಮಹಾತ್ಮನೇ | ಲೋಪಾಮುದ್ರಾಂ ತತಃ ಪ್ರಾದಾದ್ವಿಧಿಪೂರ್ವಂ ವಿಶಾಂಪತೇ|| ಪ್ರಾಪ್ಯ ಭಾರ್ಯಾಮಗಸ್ತ್ಯಸ್ತು ಲೋಪಾಮುದ್ರಾಮಭಾಷತ | ಮಹಾರ್ಹಾಣಿವಿಸೃಜೈತಾನಿ ವಾಸಾಂಸ್ಯಾಭರಣಾನಿ ಚ || ತತಃ ಸಾ ದರ್ಶನೀಯಾನಿ ಮಹಾರ್ಹಾಣಿ ತನೂನಿ ಚ | ಸಮುತ್ಸಸರ್ಜ ರಂಭೋರೂರ್ವಸನಾನ್ಯಾಯತೇಕ್ಷಣಾ || ತತಶ್ಚೀರಾಣಿ ಜಗ್ರಾಹ ವಲ್ಕಲಾನ್ಯಜಿನಾನಿ ಚ | ಸಮಾನವ್ರತಚರ್ಯಾ

**ಚ ಬಭೂವಾಯತಲೋಚನಾ ॥ ಗಂಗಾದ್ವಾರಮಥಾಗಮ್ಯ ಭಗವಾನೃಷಿಸತ್ತಮಃ । ಉಗ್ರ-ಮಾತಿಷ್ಠತ ತಪಃ ಸಹ ಪತ್ನ್ಯಾನುಕೂಲಯಾ ॥ ಸಾ ಪ್ರೀತ್ಯಾ ಬಹುಮಾನಾಚ್ಚ ಪತಿಂ ಪರ್ಯಚರತ್ತದಾ । ಅಗಸ್ತ್ಯಶ್ಚ ಪರಾಂ ಪ್ರೀತಿಂ ಭಾರ್ಯಾಯಾಮುಪಾಗಮತ್ಪ್ರಭುಃ ॥ ತತೋ ಬಹುತಿಥೇ ಕಾಲೇ ಲೋಪಾಮುದ್ರಾಂ ವಿಶಾಂಪತೇ । ತಪಸಾ ದ್ಯೋತಿತಾಂ ಸ್ನಾತಾಂ ದದರ್ಶ ಭಗವಾನೃಷಿಃ ॥ ಸ ತಸ್ಯಾಃ ಪರಿಚಾರೇಣ ಶೌಚೇನ ಚ ದಮೇನ ಚ । ಶ್ರಿಯಾ ರೂಪೇಣ ಚ ಪ್ರೀತೋ ಮೈಥುನಾಯಾಜುಹಾವ ತಾಂ ॥**

(ಮಹಾಭಾರತ, ವನಪರ್ವ, ೯೭-೯೭)

ಅನಂತರ ಅಗಸ್ತ್ಯ ಋಷಿಯು ಸಂತಾನಫಲವನ್ನು ಪಡೆಯಬೇಕೆಂದಿಚ್ಛಿಸಿದನು. ಆದರೆ ತನಗೆ ಅನುರೂಪಳಾದ ಸ್ತ್ರೀಯು ಯಾರೂ ದೊರಕಲಿಲ್ಲ. ಅನಂತರ ತಾನೇ ತನಗನುರೂಪಳಾದ ಒಂದು ಕನ್ಯೆಯನ್ನು ಸೃಷ್ಟಿಮಾಡಿದನು. ಅವಳನ್ನು ಪುತ್ರೇಚ್ಛೆಯುಳ್ಳವನಾದ ವಿದರ್ಭರಾಜನಲ್ಲಿ ಪೋಷಣೆಗಾಗಿ ಬಿಟ್ಟನು. ವಿದರ್ಭರಾಜನು ಅವಳನ್ನು ಪಡೆದು ಸಂತುಷ್ಟನಾದನು. ಅವನ ಮಿತ್ರರೆಲ್ಲರೂ ಸಹ ಅವನನ್ನು ಇಂತಹ ಸುಂದರಳಾದ ಪುತ್ರಿಯ ಲಾಭಕ್ಕಾಗಿ ಅಭಿನಂದಿಸಿದರು. ಅವಳಿಗೆ ಲೋಪಾಮುದ್ರೆಯೆಂಬ ಹೆಸರನ್ನಿಟ್ಟರು. ಅವಳು ವಿದರ್ಭರಾಜನ ಅರಮನೆಯಲ್ಲಿ ಸುಖವಾಗಿ ಬೆಳೆದು ತಾರುಣ್ಯವನ್ನು ಪಡೆದಳು. ಆಗ ಅಗಸ್ತ್ಯನು ಬಂದು ತನ್ನ ಪತ್ನಿಯನ್ನಾಗಿ ಅವಳನ್ನು ಕೊಡಬೇಕೆಂದು ವಿದರ್ಭರಾಜನನ್ನು ಪ್ರಾರ್ಥಿಸಿದನು. ಆಗ ಅವನು ಅದಕ್ಕಿಷ್ಟಪಡಲಿಲ್ಲ. ಆದರೆ ಕ್ರುದ್ಧನಾದ ಋಷಿಯು ಶಪಿಸಿಬಿಡಬಹುದೆಂಬ ಭಯವುಂಟಾಗಿ ಆ ವಿಷಯದಲ್ಲಿ ತನ್ನ ಪತ್ನಿಯ ಅನುಮತಿಯನ್ನು ಕೇಳಲುಹೋದನು. ಆಗ ಲೋಪಾಮುದ್ರೆಯೇ ತಂದೆಯ ಹತ್ತಿರಕ್ಕೆ ಬಂದು ತನ್ನನ್ನು ಅಗಸ್ತ್ಯನಿಗೆ ಕೊಡಬೇಕೆಂಬುದಾಗಿ ಹೇಳಿದಳು. ಅನಂತರ ವಿದರ್ಭರಾಜನು ಅವಳನ್ನು ವಿಧಿಪೂರ್ವಕವಾಗಿ ಅಗಸ್ತ್ಯನಿಗೆ ವಿವಾಹಮಾಡಿಕೊಟ್ಟನು. ಅಗಸ್ತ್ಯನು ಲೋಪಾಮುದ್ರೆಯನ್ನು ಪತ್ನಿಯನ್ನಾಗಿ ಪಡೆದನಂತರ ಅವಳನ್ನೂ ಸಹ ಋಷಿನಿಯಮದಲ್ಲಿರಿಸಬೇಕೆಂದಿಚ್ಛಿಸಿ ಅವಳ ಆಭರಣಾದಿಗಳನ್ನು ಕಳೆದು, ಅವಳೂ ಯತಿವೇಷವನ್ನು ಧರಿಸಬೇಕೆಂದು ಹೇಳಿದೊಡನೆಯೇ ಅವಳು ಪತಿಯ ಮಾತಿಗನುಸಾರವಾಗಿ ವಲ್ಕಲಗಳನ್ನು ಧರಿಸಿ ಪತಿಗನುಕೂಲಳಾಗಿದ್ದಳು. ಇಂತಹ ಅನುರೂಪಳಾದ ಪತ್ನಿಯನ್ನು ಪಡೆದು, ಅವಳ ಜೊತೆಯಲ್ಲಿ ಗಂಗಾತೀರದಲ್ಲಿ ಉಗ್ರವಾದ ತಪಸ್ಸನ್ನಾಚರಿಸುತ್ತಿದ್ದನು. ಅವಳೂ ಸಹ ಪತಿಯ ಮೇಲಿನ ಪ್ರೀತಿಯಿಂದಲೂ ಗೌರವಬುದ್ಧಿಯಿಂದಲೂ ಅವನನ್ನು ಪಚರಿಸುತ್ತಾ ಅವನಿಗೆ ಸಹಾಯಕಳಾಗಿದ್ದಳು. ಒಂದುಸಲ ಲೋಪಾಮುದ್ರೆಯು ಋತುಸ್ನಾತಳಾದಾಗ ಅಗಸ್ತ್ಯನಿಗೆ ಅವಳ ಆತ್ಮಶುದ್ಧಿಯಿಂದಲೂ, ದೇಹಸೌಂದರ್ಯದಿಂದಲೂ ಮತ್ತು ಪತಿಪ್ರೇಮದಿಂದಲೂ ತುಷ್ಟನಾಗಿ, ಅವಳೊಡನೆ ಸಂಗವನ್ನು ಬಯಸಿದನು ಎಂದು ಮಹಾಭಾರತದಲ್ಲಿ ಕಥೆಯಿದೆ. ಆದರೆ ಲೋಪಾಮುದ್ರೆಯು ಕಠಿಣವಾದ ತಪಸ್ಸಿನಿಂದ ವಿಶ್ರಾಂತಿಯನ್ನು ಪಡೆದು, ಪತಿಯ ಸಂಗವನ್ನಪೇಕ್ಷಿಸಿದಳು ಎಂದು ಋಕ್ಸಂಹಿತೆಯಲ್ಲಿ ವರ್ಣಿತವಾಗಿದೆ. ಮಹಾಭಾರತದಲ್ಲಿ ಅಗಸ್ತ್ಯನೇ ಅಪೇಕ್ಷಿಸಿದನೆಂದಿದೆ. ಉಳಿದ ಕಥೆಯೆಲ್ಲವೂ ಸಮಾನವಾಗಿದೆ. ಬೃಹದ್ದೇವತೆಯಲ್ಲಿ "**ಋತುಸ್ನಾತಾಮೃಷಿರ್ಭಾರ್ಯಾಂ ಲೋಪಾಮುದ್ರಾಂ ಯಶಸ್ವಿನೀಂ । ಉಪಜಲ್ಪಿತುಮಾರೇಭೇ ರಹಃಸಂಯೋಗಕಾಮ್ಯಯಾ ॥** ಎಂದಿರುವಂತೆಯೇ ಮಹಾಭಾರತದಲ್ಲೂ ಸಹ "**ತಪಸಾ ದ್ಯೋತಿತಾಂ ಸ್ನಾತಾಂ ದದರ್ಶ ಭಗವಾನೃಷಿಃ**" ಎಂದಿದೆ. ಈ ಕಥೆಯ ಆನುಪೂರ್ವಿಯಲ್ಲಿ ವೇದದಲ್ಲಿರುವ ವರ್ಣನೆಗೂ, ಇತಿಹಾಸದ ವರ್ಣನೆಗೂ ಅಧಿಕವಾದ ವ್ಯತ್ಯಾಸವಿರುವುದಿಲ್ಲ. ಅದೇ ವಿಷಯವನ್ನು ನಿರುಕ್ತಕಾರರು **ಋಷಿಪುತ್ರ್ಯಾ ವಿಲಪಿತಂ** ಎಂದು ತಿಳಿಸಿದ್ದಾರೆ.

**ನದಸ್ಯ—ನದನಸ್ಯ ಜಪಶಬ್ದಯಿತುರ್ಜಪಾಧ್ಯಯನಕರ್ತುಃ ।** ಜಪ, ಸ್ತೋತ್ರ ಇತ್ಯಾದಿಗಳನ್ನು ಪಠಿಸುವರೂಪದಲ್ಲಿ ಶಬ್ದಮಾಡತಕ್ಕ ಸ್ತುತಿಕರ್ತನ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ಈ ಋಕ್ಕಿನ ವಿವರಣೆಯನ್ನು ಹೇಳುವಾಗ ಈ ಪದದ ನಿರ್ವಚನವನ್ನು ಕೆಳಗೆ ಕಂಡಂತೆ ತಿಳಿಸಿದ್ದಾರೆ.

**"ಋಷಿರ್ನದೋ ಭವತಿ ನದತೇಃ ಸ್ತುತಿಕರ್ಮಣಃ''** (ನಿ. ೫-೨)

ಸ್ತುತಿಸು ಎಂಬರ್ಥವನ್ನು ಕೊಡುವ **ನದ್** ಧಾತುವಿನಿಂದ ನಿಷ್ಪನ್ನವಾದ **ನದ** ಶಬ್ದಕ್ಕೆ ಸ್ತುತಿಕರ್ತನಾದ ಋಷಿಯೆಂದರ್ಥ. ಋಷಿಪರ್ಯಾಯವಾಗಿ ಹೀಗೆಯೇ ಈ ಪದವನ್ನು ಅನೇಕ ಕಡೆಗಳಲ್ಲಿ ಉಪಯೋಗಿಸಿದೆ. ಉದಾಹರಣೆಗೆ—

**ರಸದ್ಗಂಧರ್ವೀರಪ್ಯಾ ಚ ಯೋಷಣಾ ನದಸ್ಯ ನಾದೇ ಪರಿ ಪಾತು ಮೇ ಮನಃ ।**
(ಋ. ಸಂ. ೧೦-೧೧-೨)

ಎಂಬಲ್ಲಿ **ನದಸ್ಯ, ನಾದೇ** ಎಂಬ ಎರಡು ಪದಗಳಿವೆ. ಇವುಗಳಲ್ಲಿ **ನದಸ್ಯ** ಎಂಬ ಪದಕ್ಕೆ **ಸ್ತೋತುಃ** ಎಂದೂ, **ನಾದೇ** ಎಂಬ ಪದಕ್ಕೆ ಸ್ತುತಿರೂಪವಾದ ಶಬ್ದವೆಂದೂ ಅರ್ಥಮಾಡಿದೆ. ಆದರೆ ಈ ಪದವಿರುವ ಕಡೆಗಳಲ್ಲೆಲ್ಲಾ ಸ್ತೋತೃವೆಂಬ ಅರ್ಥವೇ ಇರಬೇಕೆಂಬ ನಿಯಮವಿಲ್ಲ. ಉದಾಹರಣೆಗೆ—

**ಉಕ್ಷಂತೇ ಅಶ್ವಾ ಅತ್ಯಾ ಇವಾಜಿಷು ನದಸ್ಯ ಕರ್ಣೈಸ್ತುರಯಂತ ಆಶುಭಿಃ ।**
(ಋ. ಸಂ. ೨-೩೪-೩)

ಎಂಬಲ್ಲಿ **ಶಬ್ದವತಃ ಮೇಘಸ್ಯ ।** ಶಬ್ದವನ್ನು ಮಾಡತಕ್ಕ ಮೇಘದ ಎಂದರ್ಥಮಾಡಿದ್ದಾರೆ.

**ನಿಃ ರಿಣಾತಿ—ರಿಣಾತಿ** ಎಂಬ ಪದವು ಗತ್ಯರ್ಥಕನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ ಸಮೀಪಿಸುತ್ತಾಳೆ ಎಂದರ್ಥಮಾಡಿದೆ. ಆದರೆ ಈ ಪದಕ್ಕೆ ಅರ್ಥವು ಒಟ್ಟು ಋಕ್ಕಿನ ಅನ್ವಯವನ್ನನುಸರಿಸುತ್ತದೆ. ಹೇಗೆಂದರೆ, ಸಾಯಣರು ಹೇಳಿರುವಂತೆ ಈ ವಾಕ್ಯವು ಅಗಸ್ತ್ಯನಿಂದ ಪಠಿತವಾಗಿದ್ದರೆ ಆಗ ಸಮೀಪಿಸುತ್ತಾಳೆಂಬರ್ಥವುಳ್ಳದ್ದಾಗುತ್ತದೆ. ಅಥವಾ ನಿರುಕ್ತಕಾರರ ಮತದಂತೆ ಲೋಪಾಮುದ್ರೆಯ ವಾಕ್ಯವಾಗಿದ್ದರೆ ಆಗ ದಹಿಸುತ್ತದೆ ಎಂಬರ್ಥವುಳ್ಳದ್ದಾಗುತ್ತದೆ. ಸಾಧಾರಣವಾಗಿ ಈ ಪದವು ಶೋಷಿಸು, ದಹಿಸು ಎಂಬರ್ಥಗಳಲ್ಲಿಯೇ ಅಧಿಕವಾಗಿ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ಪುರೂಣಿ ದಸ್ಮೋ ನಿ ರಿಣಾತಿ ಜಂಭೈರಾದ್ರೋಚತೇ ವನ ಆ ವಿಭಾವಾ ।**
(ಋ. ಸಂ. ೧-೧೪೮-೪)

ಇತ್ಯಾದಿ ಋಕ್ಕುಗಳಲ್ಲಿ ದಹಿಸು ಎಂಬರ್ಥವನ್ನು ಕೊಡುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸಂಯಮಿಯ ಪ್ರೇಮದಲ್ಲಿ ಕಾಮಸಂತೃಪ್ತಿಗೆ ಅವಕಾಶವಿಲ್ಲದುದರಿಂದ ದೇಹವನ್ನು ದಹಿಸುತ್ತದೆ ಎಂದು ಅರ್ಥಮಾಡಿದರೆ ಅದು ತಪ್ಪಾಗಲಾರದು. **ಇತಃ, ಅಮುತಃ** ಎಂಬ ಪದಗಳಿಗೂ ಹೀಗೆಯೇ ಅರ್ಥವ್ಯತ್ಯಾಸವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ನದಸ್ಯ—**ಣದ ಅವ್ಯಕ್ತೇ ಶಬ್ದೇ. ಧಾತು. **ನಂದಿಗ್ರಹಪಚಾದಿಭ್ಯೋ—** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ರುಧತೆ**—ರುಧಿರ್ ಆವರಣೇ ಧಾತು. ಲಟಿಗೆ ಶತ್ರಾದೇಶ. ಛಾಂದಸವಾಗಿ ವಿಕರಣಕ್ಕೆ ಲುಕ್. ಷಷ್ಠೀ ಏಕವಚನಾಂತರೂಪ. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಅಗನ್**—ಗಮ್ಲೃ ಗತೌ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಹಲ್‌ಙ್ಯಾಭ್ಯೋ ದೀರ್ಘಾತ್**—ಎಂಬುದರಿಂದ ತಿಪಿಗೆ ಲೋಪ. **ಮೋ ನೋ ಧಾತೋಃ** (ಪಾ. ಸೂ. ೮-೨-೬೪) ಎಂಬುದರಿಂದ ಧಾತುಮಕಾರಕ್ಕೆ ನಕಾರಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಅಜಾತೇಃ**—**ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಕ್ತಾಂತಪರದಲ್ಲಿರುವುದರಿಂದ ಗತಿಗೆ (ಆ) ಉದಾತ್ತಸ್ವರ ಬರುತ್ತದೆ.

**ರಿಣಾತಿ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಅಧೀರಾ**—ನಞ್ ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಧಯತಿ**—ಧೇಟ್ ಪಾನೇ. ಧಾತು. ಲೇಟ್ ಪ್ರಥಮಪುರುಷ ತಿಪ್ ಪರವಾದಾಗ ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಏಕಾರಕ್ಕೆ ಆಯಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಶ್ವಸಂತಮ್**—ಶ್ವಸ ಪ್ರಾಣನೇ. ಧಾತು. ಲಟಿಗೆ ಶತ್ರಾದೇಶ. ಶಪಿಗೆ ಲುಕ್. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ॥ ೪ ॥



॥ ಸಂಹಿತಾಪಾಠಃ ॥

ಇಮಂ ನು ಸೋಮಮಂತಿತೋ ಹೃತ್ಸು ಪೀತಮುಪ ಬ್ರುವೇ ।
ಯತ್ಸೀಮಾಗಶ್ಚಕೃಮಾ ತತ್ಸು ಮೃಳತು ಪುಲುಕಾಮೋ ಹಿ ಮರ್ತ್ಯಃ ॥ ೫ ॥

॥ ಪದಪಾಠಃ ॥

ಇಮಂ । ನು । ಸೋಮಂ । ಅಂತಿತಃ । ಹೃತ್ಽಸು । ಪೀತಂ । ಉಪ । ಬ್ರುವೇ ।
ಯತ್ । ಸೀಂ । ಆಗಃ । ಚಕೃಮ । ತತ್ । ಸು । ಮೃಳತು । ಪುಲುಽಕಾಮಃ । ಹಿ । ಮರ್ತ್ಯಃ ॥ ೫ ॥

॥ ಸಾಯಣಭಾಷ್ಯಂ ॥

ಅಥಾನಯೋರ್ದಂಪತ್ಯೋಃ ಸಂಭೋಗಸಂಲಾಪಂ ಶ್ರುತ್ವಾ ತತ್ಪ್ರಾಯಶ್ಚಿತ್ತಂ ಚಿಕೀರ್ಷುರುತ್ತರಾಭ್ಯಾಮಾಹ । ಅನಯೋರ್ವಿನಿಯೋಗಃ ಶೌನಕೇನೋಕ್ತಃ । ಇಮಂ ನು ಸೋಮಮಿತ್ಯೇತೇ ದ್ವೇ ಋಚೌ ಪ್ರಯತೋ ಜಪನ್ । ಸರ್ವಾನ್ಕಾಮಾನವಾಪ್ನೋತಿ ಪಾಪೇಭ್ಯಶ್ಚ ಪ್ರಮುಚ್ಯತೇ । ಋಗ್ವಿ. ೧-೨೬. ॥ ಇತಿ ॥

ಉಪೇತ್ಯ ಮನಸಾ ಪ್ರಾಪ್ಯ ಪ್ರಾರ್ಥಯತೇ । ಕಿಂ ಬ್ರವೀತಿ ಉಚ್ಯತೇ । ಯದಾಗೋ ಗುರ್ವೋಃ ಕಾಮಪ್ರಲಾಪಶ್ರವಣವಿಷಯಂ ಪಾಪಂ ಚಕೃಮ ಕೃತವಂತೋ ವಯಂ ತತ್ತಸ್ಮಾದಾಗಸಃ ಸ ಸೋಮಃ ಸು ಸಮ್ಯಗ್ಮೃಳತು । ಸುಖಯತು । ಪಾಪಜನಿತದುಃಖಂ ಮಾ ಕರೋತ್ವಿತ್ಯರ್ಥಃ । ಮಹತ್ಪಾಪಮನುಭುಜ್ಯಮಾನಂ ಪ್ರಾರ್ಥನಯಾ ಕಥಂ ಲುಪ್ಯತ ಇತಿ ಅತ ಆಹ । ಹಿ ಯಸ್ಮಾನ್ಮರ್ತ್ಯೋ ಮನುಷ್ಯಃ ಪುಲುಕಾಮೋ ಬಹುಕಾಮನಾವಾನ್ । ಅಲ್ಪೇನೈವ ಕರ್ಮಣಾ ಬಹುಕಾಮಾನಾಕಾಲಯತಿ । ಯಸ್ಮಾದೇವಂ ತಸ್ಮಾತ್ಪರಿಹರೇತ್ಯರ್ಥಃ । ಯದ್ವಾ । ಅಯಮುಪವರ್ಜನೀಯತಯಾ ಪ್ರಾಪ್ಯತ ಇವೇತ್ಯಾಹ । ಪುಲುಕಾಮೋ ಹಿ ಖಲು ಮರ್ತ್ಯಃ ಕಾಮಹತಃ ಸನ್ ಕಾಮೇನ ನಿರುದ್ಧ ಏವ ವರ್ತತೇ । ಅತಸ್ತಯೋರುತ್ಸೇಕೋಽಯುಕ್ತಃ । ತಚ್ಛಬ್ದಶ್ರವಣದೋಷೋಽಪಿ ಪ್ರಾಮಾದಿಕೋಽಸ್ಮಾಕಂ ಪ್ರಾಪ್ತೇನ ಸೋಮೇನ ಪರಿಹರ್ತವ್ಯ ಇತ್ಯರ್ಥಃ । ಯದ್ವಾ । ಅಯಂ ಮಂತ್ರಶ್ಚಂದ್ರಪರೋ ವ್ಯಾಖ್ಯೇಯೋ ಮನಸೋಽಭಿಮಾನಿತ್ವಾಚ್ಚ ತಸ್ಯ ಪಾಪಸ್ಯಾಪಿ ಮನಸ್ಯೇವ ಸಂಭಾವಿತತ್ವಾತ್। ಅಸ್ಮಿನ್ಪಕ್ಷೇ ಹೃತ್ಸು ಪೀತಂ ಹೃದಯಸ್ಥಿತಮಿತ್ಯರ್ಥಃ । ಶಿಷ್ಟಂ ಸ್ಪಷ್ಟಂ ॥

॥ ಪ್ರತಿಪದಾರ್ಥ ॥

**ಹಿ**—ಯಾವ ಕಾರಣದಿಂದ । **ಮರ್ತ್ಯಃ**—ಮನುಷ್ಯನು । **ಪುಲುಕಾಮಃ**—(ಅಲ್ಪಕರ್ಮದಿಂದ) ಹೆಚ್ಚು ಲಾಭವನ್ನು ಅಪೇಕ್ಷಿಸುವನೋ । (**ತತ್**—ಆದುದರಿಂದ) । **ಯತ್ ಸೀಂ**—ಯಾವ ಈ (ಗುರುಪತ್ನಿಯರ ಕಾಮಪ್ರಲಾಪ ಶ್ರವಣರೂಪವಾದ) । **ಆಗಃ**—ಪಾಪವನ್ನು । **ಚಕೃಮ**—ಮಾಡಿದ್ದೇವೆಯೋ । **ತತ್**—ಆ ಪಾಪವನ್ನು । **ಸು ಮೃಳತು**—ಚೆನ್ನಾಗಿ ಸುಖಕರವಾಗಿ ಮಾಡಲಿ (ಪಾಪ ಜನಿತದೋಷವುಂಟಾಗದಂತೆ ಮಾಡಲಿ) ಎಂದು। **ನು**—ಈಗ । **ಹೃತ್ಸು ಪೀತಂ**— ಹೃತ್ಪೂರ್ವಕವಾಗಿ ಪೀತವಾದ (ಮನಸಾಪೀತವಾದ) । **ಇಮಂ ಸೋಮಂ**—ಈ ಸೋಮರಸವನ್ನು । **ಅಂತಿತಃ**—ಸಮೀಪದಿಂದ । **ಉಪ ಬ್ರುವೇ**— ಪ್ರಾರ್ಥಿಸುತ್ತೇನೆ । [ಅಥವಾ **ಹೃತ್ಸು ಪೀತಂ**—ಹೃದಯಸ್ಥಿತನಾದ (ಮನೋಭಿಮಾನಿಯಾದ)। **ಇಮಂ ಸೋಮಂ**—ಈ ಚಂದ್ರನನ್ನು। **ಅಂತಿತಃ ಉಪ ಬ್ರುವೇ**—ಸಮೀಪಿಸಿ ಪ್ರಾರ್ಥಿಸುತ್ತೇನೆ.]

॥ ಭಾವಾರ್ಥ ॥

ಮನುಷ್ಯರು ಬಹುಕಾಮರು, ಆದುದರಿಂದ ನಮ್ಮಿಂದ (ಶಿಷ್ಯನಿಂದ) ಕೃತವಾದ (ಗುರು ಗುರುಪತ್ನೀಕಾಮಪ್ರಲಾಪ ಶ್ರವಣರೂಪ) ದೋಷವನ್ನು ಪರಿಹರಿಸೆಂದು, ಮನಸಾಪೀತವಾದ ಈ ಸೋಮವನ್ನು ಸಮೀಪಿಸಿ ಪ್ರಾರ್ಥಿಸುತ್ತೇನೆ. (ಮನೋಭಿಮಾನಿಯಾದ ಚಂದ್ರನನ್ನು ಪಾಪವನ್ನು ಪರಿಹರಿಸೆಂದು ಬೇಡುತ್ತೇನೆ.)

## English Translation.

(Pupil),—I beseech the Soma juice, which has been drunk in my heart, that it may fully expiate the sin we have committed: man is subject to many desires.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಎರಡು ಮೂರು ವಿಧವಾಗಿ ಅರ್ಥಮಾಡಿದ್ದಾರೆ. ಇಲ್ಲಿ ಅಗಸ್ತ್ಯಶಿಷ್ಯನು ತನ್ನ ಪಾಪಕಾರ್ಯಕ್ಕಾಗಿ ಪಶ್ಚಾತ್ತಾಪವನ್ನು ಸೂಚಿಸಿದ್ದಾನೆ. ಆ ಪಶ್ಚಾತ್ತಾಪವು ಅಗಸ್ತ್ಯಲೋಪಾಮುದ್ರೆಗಳ ಕಾಮಾಭಿಲಾಷೆಯ ವಿಷಯವಾದ ಸಂಭಾಷಣೆಯನ್ನು ಕೇಳಿದುದರಿಂದ ಉಂಟಾದ ಪಾಪದ ಪಶ್ಚಾತ್ತಾಪವಾಗಿರಬಹುದು. ಅಥವಾ ಮಾನವನ ಸಹಜವಾದ ದೋಷಗಳು ಅನೇಕವಾಗಿದ್ದು ಅದರಲ್ಲಿ ಉತ್ಕಟವಾದ ಕಾಮವೂ ಒಂದಾದುದರಿಂದ ಅಂತಹ ದೋಷಕ್ಕಾಗಿ ಪಶ್ಚಾತ್ತಾಪವನ್ನು ಪ್ರಕಟಿಸಿರಬಹುದು. ಮತ್ತು ಈ ಪಾಪಪರಿಹಾರವು ಆಗಬೇಕಾದರೆ ಸಾಧನವಾವುದೆಂದರೆ ಸೋಮವನ್ನುದ್ದೇಶಿಸಿದ ಪ್ರಾರ್ಥನೆಯೇ ಆಗಿರುವುದು. ಆದರೆ ಇಲ್ಲಿ **ಸೋಮಂ** ಎಂಬುದಕ್ಕೆ ಸೋಮರಸವೆಂದರ್ಥವೇ ಅಥವಾ ಚಂದ್ರನೆಂದರ್ಥವೇ ಎಂಬ ವಿಷಯದಲ್ಲಿಯೂ ವಿಪ್ರತಿಪತ್ತಿಯಿರಲು ಅವಕಾಶವಿದೆ. ಆದುದರಿಂದ ಸಾಯಣರೇ ಈ ಋಕ್ಕಿಗೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಲು ಸಾಧ್ಯವಾಗಿಲ್ಲ. ಪ್ರಥಮತಃ,

**ಆಗಃ—ಗುರ್ವೋಃ ಕಾಮಪ್ರಲಾಪಶ್ರವಣವಿಷಯಂ ಪಾಪಂ ಕೃತವಂತಃ ತಸ್ಮಾದಾಗಸಃ ಸುಮೃಳತು ।** ನಮ್ಮ ಗುರುಗಳ (ದಂಪತಿಗಳ) ಕಾಮಪ್ರಲಾಪದ ವಿಷಯವನ್ನು ಕುರಿತು ಸಂಭಾಷಣೆಯನ್ನು ಕೇಳಿದ್ದರಿಂದ ಉಂಟಾದ ಪಾಪದ ಪರಿಹಾರವಾಗಲಿ ಎಂದೂ ಎರಡನೆಯದಾಗಿ,

**ಪುರುಕಾಮೋ ಹಿ ಮರ್ತ್ಯಃ ಕಾಮಹತಃಸನ್ ಕಾಮೇನ ನಿರುದ್ಧ ಏವ ವರ್ತತೇ ।** ನಾನಾ ಕಾಮಗಳಿಂದ ಪೀಡಿತನಾಗಿರುವ ಮನುಷ್ಯನು ವಿಷಯೇಚ್ಛೆಯಿಂದಲೂ ಸಹ ನಿರುದ್ಧನಾಗಿ ಪಾಪವನ್ನು ಗಳಿಸುತ್ತಾನೆ. ಇಂತಹ ಪಾಪದ ಪರಿಹಾರವಾಗಲಿ ಎಂದೂ ಪ್ರಾರ್ಥಿಸಿದೆ. ಆದರೆ ಈ ಪಾಪದ ಪರಿಹಾರವು ಹೇಗೆಂದರೆ, ಸೋಮನನ್ನುದ್ದೇಶಿಸಿದ ಪ್ರಾರ್ಥನೆಯ ಮೂಲಕ ಎಂದಿದೆ. ಸೋಮಶಬ್ದಕ್ಕೆ ಅರ್ಥವೇನೆಂದರೆ, ಸೋಮರಸವಾಗಬಹುದು ಅಥವಾ ಚಂದ್ರನಾಗಬಹುದು. ಋಗ್ವೇದದಲ್ಲಿ ಸೋಮವೆಂಬ ಶಬ್ದಕ್ಕೆ ಚಂದ್ರನೆಂದು ಎಲ್ಲಿಯೂ ಅರ್ಥಮಾಡಿಲ್ಲ. ಆದರೆ ಸೋಮದೇವತೆಯೆಂದು ಹೇಳಿದರೆ ಎರಡು ಅರ್ಥಕ್ಕೂ ಅನ್ವಯಿಸುತ್ತದೆ. ಸೋಮದೇವತೆಗೂ ಚಂದ್ರನಿಗೂ ತಾದಾತ್ಮ್ಯವು ಅನೇಕಕಡೆಗಳಲ್ಲಿ ಹೇಳಲ್ಪಟ್ಟಿರುವುದರಿಂದಲೂ, ಮತ್ತು ಅನೇಕ ಕಡೆಗಳಲ್ಲಿ ಪಾಪ ಪರಿಹಾರಕ್ಕಾಗಿ ಈ ಸೋಮದೇವತೆಯನ್ನುದ್ದೇಶಿಸಿ ಪ್ರಾರ್ಥಿಸಿರುವುದರಿಂದಲೂ ಸಹ ಇಲ್ಲಿ ಎರಡರ್ಥಕ್ಕೂ ಅವಕಾಶವಿದೆ.

**ಸೋಮೇನಾದಿತ್ಯಾ ಬಲಿನಃ ಸೋಮೇನ ಪೃಥಿವೀ ಮಹೀ ।**
**ಅಥೋ ನಕ್ಷತ್ರಾಣಾಮೇಷಾಮುಪಸ್ಥೇ ಸೋಮ ಆಹಿತಃ ॥**

(ಋ. ಸಂ. ೧೦-೮೫-೨)

ಎಂಬಲ್ಲಿ ಇಂದ್ರಾದಿ ದೇವತೆಗಳೂ, ಪೃಥಿವ್ಯಾದಿ ಲೋಕಗಳೂ ಸಹ **ಸೋಮ**ನಿಂದಲೇ ವೃದ್ಧಿಯನ್ನು ಪಡೆಯುತ್ತವೆ. ಎಂದು ವರ್ಣಿತವಾಗಿರುವಾಗ ಇಲ್ಲಿ ಸೋಮರಸವೆಂದರೂ ಅರ್ಥವು ಹೊಂದಿಕೊಳ್ಳುತ್ತದೆ. ಚಂದ್ರನು ಸಕಲ ಲೋಕಗಳ ಪುಷ್ಟಿಗೂ ಕಾರಣನಾಗಿರುವುದರಿಂದ ಚಂದ್ರನೆಂದರ್ಥಮಾಡಿದರೂ ಸಹ ಸಹಜವಾಗಿರುತ್ತದೆ ಮತ್ತು ಶತಪಥ ಬ್ರಾಹ್ಮಣದಲ್ಲಿ,

**ಏಷ ವೈ ಸೋಮೋ ರಾಜಾ ದೇವಾನಾಮನ್ನಂ ಯಚ್ಚಂದ್ರಮಾಃ ।**

(ಶ. ಬ್ರಾ. ೧–೬–೪–೫)

ಎಂದು ಚಂದ್ರನಿಗೂ ಸೋಮಕ್ಕೂ ತಾದಾತ್ಮ್ಯವನ್ನು ವರ್ಣಿಸಿದೆ. ಇದರಂತೆಯೇ ಕೆಳಗಿನ ವಾಕ್ಯಗಳಲ್ಲೂ ಸಹ ಈ ವಿಧವಾದ ವರ್ಣನೆಯಿರುತ್ತದೆ.

**ಚಂದ್ರಮಾ ವೈ ಬ್ರಹ್ಮಾ ಸೋಮೋ ವೈ ಚಂದ್ರಮಾಃ ।**

(ಶ. ಬ್ರಾ. ೧೨-೧-೧-೨)

**ಸೂರ್ಯ ಏವಾಗ್ನೇಯಃ । ಚಂದ್ರಮಾಃ ಸೌಮ್ಯಃ ।**

(ಶ. ಬ್ರಾ. ೧-೬-೩-೨೪)

ಹೀಗೆ ನಾನಾಕಡೆಗಳಲ್ಲಿ ಚಂದ್ರನನ್ನು ಸೌಮ್ಯನೆಂದು ಹೇಳಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಹೃತ್ಸು ಪೀತಂ ಇಮಂ ಸೋಮಂ** ಎಂಬುದಕ್ಕೆ ಹೃದಯಸ್ಥಿತನಾದ ಎಂದರೆ ಮನೋಭಿಮಾನಿಯಾದ ಈ ಚಂದ್ರನನ್ನು ಎಂದೂ ಸಹ ಎರಡನೆಯ ಅರ್ಥವನ್ನು ಹೇಳಿದೆ. ಮತ್ತು ಪಾಪಪರಿಹಾರಕ್ಕಾಗಿ,

**ಉರುಷ್ಯಾ ಣೋ ಅಭಿಶಸ್ತೇಃ ಸೋಮ ನಿ ಪಾಹ್ಯಂಹಸಃ । ಸಖಾ ಸುಶೇವ ಏಧಿ ನಃ ।**

(ಋ ಸಂ. ೧-೯೧-೧೫)

ಇತ್ಯಾದಿ ಋಕ್ಕುಗಳಲ್ಲಿ "ಎಲೈ ಸೋಮದೇವನೇ, ನಮ್ಮನ್ನು ಅಪವಾದರೂಪವಾದ ಕಳಂಕದಿಂದ ಕಾಪಾಡು. ನಾವು ಮಾಡಿದ ಅಥವಾ ಮಾಡಬಹುದಾದ ಪಾಪದಿಂದ ಪೂರ್ಣವಾಗಿ ರಕ್ಷಿಸು" ಇತ್ಯಾದಿಯಾಗಿ ಪ್ರಾರ್ಥಿಸಿರುತ್ತದೆ. ಅದರಂತೆಯೇ ಇಲ್ಲಿಯೂ ಸಹ ಶಿಷ್ಯನು ತನ್ನ ಪಾಪಪರಿಹಾರಕ್ಕಾಗಿ ಪ್ರಾರ್ಥಿಸುತ್ತಾನೆ. ಅಥರ್ವವೇದದಲ್ಲಿ,

**ಸೋಮೋ ಮಾ ದೇವೋ ಮುಂಚತು ಯಮಾಹುಶ್ಚಂದ್ರಮಾ ಇತಿ ।**

(ಅ. ವೇ. ೧೧-೬ ೭)

ಯಾವ ದೇವನನ್ನು ಚಂದ್ರನೆಂದು ಸಕಲರೂ ಕರೆಯುತ್ತಾರೆಯೋ ಅಂತಹ ಸೋಮದೇವನು ನನ್ನನ್ನು ಪಾಪದಿಂದ ಬಿಡಿಸಲಿ ಎಂಬ ಪ್ರಾರ್ಥನೆಯಲ್ಲಿ ಸೋಮ ಮತ್ತು ಚಂದ್ರರ ತಾದಾತ್ಮ್ಯವು ವಿಶದವಾಗಿಯೇ ಇದೆ.

**ಪುಲುಕಾಮಃ—ಪುಲುಕಾಮಃ ಪುರುಕಾಮಃ ಪುಲುಕಾಮೋ ಹಿ ಮರ್ತ್ಯಃ ಇತ್ಯೆಪಿ ನಿಗಮೋ ಭವತಿ ।** (ನಿ. ೬-೪) ಪುರುಷನು ಅನೇಕವಿಧವಾದ ಕಾಮವುಳ್ಳ ವನೆಂದು ಮರ್ತ್ಯನ ಸ್ವರೂಪವನ್ನು ತಿಳಿಸಿದೆ. ಈ ರೀತಿ ಅನೇಕ ವಿಧವಾದ ಕಾಮಗಳಿರುವುದರಿಂದಲೇ ಮನುಷ್ಯನಿಗೆ **ಆಗವು** ಎಂದರೆ ಪಾಪವು ಸಹಜವಾಗಿರುತ್ತದೆಯಾದ್ದರಿಂದ ಈ ಪಾಪದಿಂದ ತಪ್ಪಿಸು ಎಂದು ಪ್ರಾರ್ಥಿಸಿದೆ.

**ಆಗಃ—ಆಙ್ಪೂರ್ವಾದ್ಗಮೇಃ ।** (ನಿ. ೧೧-೨೪). **ಗಮ್** ಧಾತುವಿಗೆ **ಆಙ್** ಎಂಬ ಉಪಸರ್ಗವು ಸೇರಿ **ಆಗಃ** ಎಂಬ ರೂಪನಿಷ್ಪತ್ತಿಯಾಗಿದೆ. ಎಂದರೆ ಪಾಪಕಾರ್ಯಗಳನ್ನು ಮಾಡಿದ ಫಲವಾಗಿ ಪುರುಷನಿಗೆ ಈ ಪಾಪಸಂಸ್ಕಾರವೂ (ಅದಕ್ಕೆ ಫಲವೂ) ನಿಶ್ಚಯವಾಗಿಯೂ ಬಂದೇ ತೀರುತ್ತದೆಂಬ ಅರ್ಥವನ್ನು ತೋರಿಸುವುದಾದುದರಿಂದ **ಆಗಃ** ಎಂಬ ಹೆಸರು ಪ್ರಸಿದ್ಧವೆಂದು ನಿರುಕ್ತಕಾರರು ವಿವರಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಹೃತ್ಸು—ಊಡಿದಂಪದಾದಿ—**(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪೀತಮ್**—ಪಾ ಪಾನೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಘುಮಾಸ್ಥಾಗಾಪಾಜಹಾತಿಸಾಂ ಹಲಿ** (ಪಾ. ಸೂ. ೬-೪-೬೬) ಎಂಬುದರಿಂದ ಆಕಾರಕ್ಕೆ ಈತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಬ್ರುವೇ**—ಬ್ರೂ‌ಞ್ ವ್ಯಕ್ತಾಯಾಂ ವಾಚಿ. ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆಗಃ**—ಇಣ್ ಗತೌ. ಧಾತು. **ಇಣ ಆಗೋಽಪರಾಧೇ ಚ** (ಉ. ಸೂ ೪-೬೫೧) ಎಂಬುದರಿಂದ ಅಸುನ್ ಪ್ರತ್ಯಯ. ಧಾತುವಿಗೆ ಆಗಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚಕೃಮ**—ಡುಕೃಞ್ ಕರಣೇ. ಧಾತು. ಲಿಟ್ ಉತ್ತಮಪುರುಷ ಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಮೃಳತು**—ಮೃಡ ಸುಖನೇ. ಧಾತು ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪುಲುಕಾಮಃ**—ಬಹುವ್ರೀಹಿಯಲ್ಲಿ **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಅಗಸ್ತ್ಯಃ ಖನಮಾನಃ ಖನಿತ್ರೈಃ ಪ್ರಜಾಮಪತ್ಯಂ ಬಲಮಿಚ್ಛಮಾನಃ ।
ಉಭೌ ವರ್ಣಾವೃಷಿರುಗ್ರಃ ಪುಪೋಷ ಸತ್ಯಾ ದೇವೇಷ್ವಾಶಿಷೋ ಜಗಾಮ ॥ ೬ ॥

॥ ಪದಪಾಠಃ ॥

ಅಗಸ್ತ್ಯಃ । ಖನಮಾನಃ । ಖನಿತ್ರೈಃ । ಪ್ರಽಜಾಂ । ಅಪತ್ಯಂ । ಬಲಂ । ಇಚ್ಛಮಾನಃ ।
ಉಭೌ । ವರ್ಣೌ । ಋಷಿಃ । ಉಗ್ರಃ । ಪುಪೋಷ । ಸತ್ಯಾಃ । ದೇವೇಷು । ಆಽಶಿಷಃ । ಜಗಾಮ ॥ ೬ ॥

॥ ಸಾಯಣಭಾಷ್ಯಂ ॥

**ಅಥ ವಿನಿಯುಕ್ತಯೋರ್ಮಧ್ಯೇ ದ್ವಿತೀಯೆಯಾ ಸೂಕ್ತೇ ಷಷ್ಠ್ಯಾಂತೇವಾಸ್ಯಾಹ ॥**

**ಅಯಮಗಸ್ತ್ಯೋ ಮದ್ಗುರುಃ ಋನಿತ್ರೈಃ ಫಲಸ್ಯೋತ್ಪಾದನಸಾಧನೈರ್ಯಜ್ಞಸ್ತೋತ್ರಾದಿಭಿಃ ಋನಮಾನಃ ಫಲಮಭಿಮತಮುತ್ಪಾದಯನ್ ಪ್ರಜಾಂ ಪ್ರಕರ್ಷೇಣ ಪುನಃಪುನರ್ಜಾಯಮಾನಮಪತ್ಯಂ ಕುಲಸ್ಯಾಪತನಸಾಧನಂ ಪುತ್ರಾದಿಕಂ ಬಲಂ ಚೇಚ್ಛಮಾನಃ ಸನ್ । ಯದ್ವಾ । ಪ್ರಜಾಂ ಭೃತ್ಯಾದಿರೂಪಾಂ ಚೇಚ್ಛನ್ । ಋಷಿರತೀಂದ್ರಿಯದ್ರಷ್ಟಾ ಮಹಾನುಭಾವ ಉಗ್ರ ಉದ್ಗೂರ್ಣಃ ಸಂಸಾರೇ ಸಂಚರನ್ನಪ್ಯ-ಪಾಪಃ ಸನ್ನುಭೌ ವರ್ಣೌ ವರ್ಣನೀಯಾವಾಕಾರೌ ಕಾಮಂ ಚ ತಪಶ್ಚ ಪುಪೋಷ । ಸತ್ಯಾ ಆಶಿಷೋ ದೇವೇಷು ದೇವೇಭ್ಯೋ ಜಗಾಮ । ಪ್ರಾಪ್ತವಾನ್ । ಯತೋಽಯಂ ಮಹಾನುಭಾವಸ್ತಸ್ಮಾ-ದಸ್ಮಾನ್ಪಾತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಋನಿತ್ರೈಃ**—ಫಲೋತ್ಪಾದನಸಾಧನಗಳಾದ ಯಜ್ಞ ಸ್ತೋತ್ರಾದಿಗಳಿಂದ । **ಋನಮಾನಃ**—ಅಭಿಮತಫಲೋತ್ಪಾದನೆ ಮಾಡುವವನೂ । **ಪ್ರಜಾಂ**—ಭೃತ್ಯಾದಿ ಪ್ರಜೆಯನ್ನೂ (ಸಂತತಿಯನ್ನು) । **ಅಪತ್ಯಂ**—ಕುಲೋದ್ಧಾರಕರಾದ ಪುತ್ರಪೌತ್ರಾದಿಗಳನ್ನೂ । **ಬಲಂ (ಚ)**—ಬಲವನ್ನೂ । **ಇಚ್ಛಮಾನಃ**—ಇಚ್ಛಿಸುವವನೂ । **ಋಷಿಃ**—ಅತೀಂದ್ರಿಯದ್ರಷ್ಟೃವೂ । **ಉಗ್ರಃ**—(ಸಂಸಾರ ಮಗ್ನನಾದರೂ) ಪಾಪರಹಿತನೂ ಆದ । **ಅಗಸ್ತ್ಯಃ**—ನಮ್ಮ ಗುರುವಾದ ಅಗಸ್ತ್ಯನು । **ಉಭೌ ವರ್ಣೌ**—ಕಾಮ ಮತ್ತು ತಪಸ್ಸುಗಳೆಂಬ ಎರಡು ವಿಧವಾದ ಕರ್ಮಗಳನ್ನು । **ಪುಪೋಷ**—ಅಭಿವೃದ್ಧಿಪಡಿಸಿದನು: (ಮತ್ತು) । **ದೇವೇಷು**—ದೇವತೆಗಳಲ್ಲಿ (ದೇವತೆಗಳಿಂದ) **ಸತ್ಯಾಃ**—ಸತ್ಯಫಲಗಳಾದ । **ಆಶಿಷಃ**—ಆಶೀರ್ವಾದಗಳನ್ನು । **ಜಗಾಮ**—ಹೊಂದಿದನು.

॥ ಭಾವಾರ್ಥ ॥

ಯಜ್ಞ, ಸ್ತುತಿ ಮೊದಲಾದ ಸಾಧನಗಳಿಂದ ಅಭಿಮತಸಾಧಕನೂ, ಪುತ್ರ, ಭೃತ್ಯ, ಬಲಾದಿಕಾಮಿಯೂ, ಅತೀಂದ್ರಿಯದ್ರಷ್ಟೃವೂ, ಸಂಸಾರಮಗ್ನನಾದರೂ ಪಾಪರಹಿತನೂ ಆದ ಅಗಸ್ತ್ಯಋಷಿಯು ಕಾಮ ಮತ್ತು ತಪಸ್ಸುಗಳೆರಡನ್ನೂ ಸಾಧಿಸಿಕೊಂಡು ಬಂದಿದ್ದಾನೆ; ಆದುದರಿಂದಲೇ, ದೇವತೆಗಳಿಂದ ಸತ್ಯಫಲಗಳಾದ ಆಶೀರ್ವಾದಗಳನ್ನು (ದೇವತೆಗಳ ಅನುಗ್ರಹವನ್ನೂ) ಸಂಪಾದಿಸಿದ್ದಾನೆ.

English Translation.

Agastya, a venerable sage, working with (fit) implements, desiring progeny, offspring, and strength, practised both classes (of obligations), and received true benedictions from the gods.

॥ ವಿಶೇಷವಿಷಯಗಳು ॥

**ಉಭೌ ವರ್ಣೌ ಋಷಿರುಗ್ರಃ ಪುಪೋಷ**—ಅಗಸ್ತ್ಯಋಷಿಯು ಎರಡು ವಿಧವಾದ ವರ್ಣಗಳನ್ನೂ ವೃದ್ಧಿಪಡಿಸಿದನು ಎಂದಿದೆ. **ಉಭೌ ವರ್ಣೌ** ಎಂಬುದಕ್ಕೆ ಸಾಯಣರು **ಕಾಮಂ ಚ ತಪಶ್ಚ** ಎಂದರ್ಥಮಾಡಿ

ದ್ದಾರೆ. ಅಥವಾ ಐಹಿಕಾಮುಷ್ಮಿಕವಾದ ಸಂಪತ್ತುಗಳೆಂದೂ ಅರ್ಥಮಾಡಬಹುದು. ಪಾರ್ಥಿವವಾದ ಸಂಪತ್ತೆಲ್ಲವೂ ಕಾಮದ ಫಲವು; ಆಮುಷ್ಮಿಕವಾದ ಸಂಪತ್ತೆಲ್ಲವೂ ತಪಸ್ಸಿನ ಫಲವು. ಈ ಎರಡು ಫಲಗಳನ್ನೂ ಅಗಸ್ತ್ಯನು ವೃದ್ಧಿ ಪಡಿಸಿದನು ಎಂದರ್ಥಮಾಡಬಹುದು. ಈ ವಿಧವಾಗಿ ಎರಡು ಲೋಕಗಳಿಗೂ ಸಂಬಂಧಿಸಿದ ಐಶ್ವರ್ಯವನ್ನು ತನ್ನ ಸ್ವಶಕ್ತಿಯಿಂದ ಸಂಪಾದಿಸಬೇಕಾದರೆ ಅಗಸ್ತ್ಯನಿಗೆ ಅಸಾಧಾರಣವಾದ ಸತ್ತ್ವವಿರಬೇಕು. ಅದರ ಮಹತ್ತ್ವವೇನೆಂಬು ದನ್ನು ಅವನ ಉತ್ಪತ್ತಿಯ ಕ್ರಮವು ತಿಳಿಸುತ್ತದೆ.

ಅಗಸ್ತ್ಯನು ಮಿತ್ರಾವರುಣರ ಪುತ್ರನಾದುದರಿಂದ ಮಿತ್ರಾವರುಣರ ವೈಯಕ್ತಿಕವಾದ ಶಕ್ತಿಯೆರಡೂ ಸೇರಿ ಅಗಸ್ತ್ಯನಲ್ಲಿ ಒಂದು ವಿಶೇಷಶಕ್ತಿಯನ್ನುಂಟುಮಾಡಿವೆ. ಅಗಸ್ತ್ಯನು ಮೈತ್ರಾವರುಣಿಯೆಂದು ಪ್ರಸಿದ್ಧನಾದುದು ಹೇಗೆ ಮತ್ತು ಏತಕ್ಕೆ ಎಂಬ ವಿಷಯವನ್ನು ಬೃಹದ್ದೇವತಾಕಾರರು ಈ ರೀತಿ ತಿಳಿಸಿದ್ದಾರೆ.

**ತಯೋರಾದಿತ್ಯಯೋಃ ಸತ್ರೇ ದೃಷ್ಟ್ವಾಪ್ಸರಸಮುರ್ವಶೀಂ ।**
**ರೇತಶ್ಚಸ್ಕಂದ ತತ್ಕುಂಭೇ ನ್ಯಪತದ್ವಾಸತೀವರೇ ॥**
**ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।**
**ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥**
**ಬಹುಧಾ ಪತಿತಂ ರೇತಃ ಕಲಶೇ ಚ ಜಲೇ ಸ್ಥಲೇ ।**
**ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತ ಋಷಿಸತ್ತಮಃ ॥**
**ಕುಂಭೇ ತ್ವಗಸ್ತ್ಯಃ ಸಂಭೂತೋ ಜಲೇ ಮತ್ಸ್ಯೋ ಮಹಾದ್ಯುತಿಃ ।**
**ಉದಿಯಾಯ ತತೋಽಗಸ್ತ್ಯಃ ಶಮ್ಯಾಮಾತ್ರೋ ಮಹಾತಪಾಃ ॥**
**ಮಾನೇನ ಸಂಮಿತೋ ಯಸ್ಮಾತ್ತಸ್ಮಾನ್ಮಾನ್ಯ ಇಹೋಚ್ಯತೇ ।**
**ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ॥**
**ಕುಂಭ ಇತ್ಯಭಿಧಾನಂ ಚ ಪರಿಮಾಣಸ್ಯ ಲಕ್ಷ್ಯತೇ ॥**

(ಬೃ. ದೇ. ೫–೧೪೯ ರಿಂದ ೧೫೪)

ಈ ಆದಿತ್ಯರಲ್ಲಿ ಮಿತ್ರಾವರುಣರಿಬ್ಬರೂ ಸಹ ಸತ್ರಕಾಲದಲ್ಲಿ ಅಪ್ಸರಸ್ತ್ರೀಯಾದ ಊರ್ವಶಿಯನ್ನು ನೋಡಿ ಮೋಹ ಗೊಂಡರು. ಆಗ ಅವರ ರೇತಸ್ಸು ಸ್ಖಲಿತವಾಗಿ ವಸತೀವರಿಯಿರತಕ್ಕ ಕುಂಭದೊಳಕ್ಕೆ ಬಿದ್ದುಹೋಯಿತು.

**ತಸ್ಯಾ ದರ್ಶನಾನ್ಮಿತ್ರಾವರುಣಯೋ ರೇತಶ್ಚಸ್ಕಂದ ।** (ನಿ. ೫–೧೩)

ಆ ಒಡನೆಯೇ ವಸಿಷ್ಠ ಮತ್ತು ಅಗಸ್ತ್ಯ ಎಂಬಿಬ್ಬರು ತಪಸ್ವಿಗಳೂ ವೀರ್ಯವಂತರೂ ಆದ ಋಷಿಗಳು ಉತ್ಪನ್ನರಾದರು. ಎಂದರೆ, ರೇತಸ್ಸು ಕುಂಭದಲ್ಲಿಯೂ ಉದಕದಲ್ಲಿಯೂ ಮತ್ತು ಭೂಮಿಯ ಮೇಲೆಯೂ ಸಹ ಬಿದ್ದುಬಿಟ್ಟಿತು. ಅದರಿಂದ ಭೂಮಿಯ ಮೇಲೆ ಬಿದ್ದ ರೇತಸ್ಸಿನ ಪ್ರಭಾವದಿಂದ ಋಷಿಶ್ರೇಷ್ಠನಾದ ವಸಿಷ್ಠನು ಉತ್ಪನ್ನನಾದನು. ಅಗಸ್ತ್ಯನು ಕುಂಭದಿಂದಲೂ, ಮತ್ಸ್ಯವು ಉದಕದಿಂದಲೂ ಉತ್ಪನ್ನರಾದರು. ಮಹಾತಪಸ್ವಿಯಾದ ಅಗಸ್ತ್ಯನು **ಶಮ್ಯಾ** ಮಾತ್ರವುಳ್ಳವನಾದನು. ಪರಿಮಾಣವುಳ್ಳ ಸ್ವರೂಪವುಳ್ಳವನಾದುದರಿಂದ ಇವನಿಗೆ ಮಾನ್ಯನೆಂದೂ **ಹೆಸರುಂಟಾಯಿತು** ಎಂದು ಅಗಸ್ತ್ಯನ ಉತ್ಪತ್ತಿರೂಪವಾದ ಕಥೆಯಿದೆ. ಮಿತ್ರಾವರುಣರಿಗೆ ಜನಿಸಿದ ಅಗಸ್ತ್ಯನು ಅವರೀರ್ವರ ಅಸಾಧಾರಣ ವಾದ ಶಕ್ತಿಗಳನ್ನೂ ಪಡೆದೇ ಇರಬೇಕು. ಅವರ ವೈಯಕ್ತಿಕವಾದ ಶಕ್ತಿಗಳನ್ನೂ ಶ್ರುತಿಗಳಲ್ಲಿ ಈ ರೀತಿ ವರ್ಣಿಸಿದೆ.

**ಇಮಾಂ ವಾಂ ಮಿತ್ರಾವರಣಾ ಸುವೃಕ್ತಿಮಿಷಂ ನ ಕೃಣ್ವೇ ಅಸುರಾ ನವೀಯಃ ।**
**ಇನೋ ವಾಮನ್ಯಃ ಪದವೀರದಬ್ಧೋ ಜನಂ ಚ ಮಿತ್ರೋ ಯತತಿ ಬ್ರುವಾಣಃ ॥**

(ಋ. ಸಂ. ೭-೩೬-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರ ವೈಯಕ್ತಿಕವಾದ ಸ್ವರೂಪವನ್ನೂ ಕಾರ್ಯವನ್ನೂ ವರ್ಣಿಸಿದೆ. ಅದರಲ್ಲಿ ವರುಣನು ಧರ್ಮಾಧರ್ಮಗಳಿಗೆ ಅಧ್ಯಕ್ಷನಾಗಿ ಪ್ರಜೆಗಳನ್ನು ಪ್ರಾಪಂಚಿಕವಾದ ವ್ಯವಹಾರಗಳಿಗೆ ಒಯ್ಯುತ್ತಾನೆ ಎಂದಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಗಸ್ತ್ಯನ ಈ ಎರಡು ಶಕ್ತಿಗಳನ್ನೂ ವರ್ಣಿಸಿದೆ. ಮತ್ತು ಶತಪಥಬ್ರಾಹ್ಮಣದಲ್ಲಿ ವರ್ಣಿಸಿರುವಂತೆ ಮಿತ್ರಾವರುಣರ ವೈಯಕ್ತಿಕವಾದ ಗುಣಗಳೇ ಈ ಎರಡು ವಿಧವಾದ ಶಕ್ತಿಗಳಿಗೂ ಮೂಲವಾಗಿರುವುದೆಂದು ತಿಳಿಯುತ್ತದೆ. ಉದಾಹರಣೆಗೆ-

**ವಾಗೇವಾಗ್ನಿಃ ಪ್ರಾಣೋದಾನೌ ಮಿತ್ರಾವರುಣೌ ।** (ಶ. ಬ್ರಾ. ೩-೨-೨-೧೩)

ಮಿತ್ರನು ಪ್ರಾಣಸ್ವರೂಪನು ಮತ್ತು ವರುಣನು ಉದಾನಸ್ವರೂಪನು. ಛಾಂದೋಗ್ಯದಲ್ಲಿ ವರ್ಣಿತವಾಗಿರುವಂತೆ,

**"..............ಸ ಪ್ರಾಣಃ ತಚ್ಚಕ್ಷುಃ ಸ ಆದಿತ್ಯಸ್ತದೇತತ್ತೇಜೋಽನ್ನಾದ್ಯಮಿತ್ಯುಪಾಸೀತ ತೇಜಸ್ವ್ಯನ್ನಾದೋ ಭವತಿ ಯ ಏವಂ ವೇದ"** (ಛಾ. ಉ ೩-೧೩-೧)

ಪ್ರಾಣವೇ ಆದಿತ್ಯರೂಪನು. ಅದನ್ನು ಅನ್ನವೆಂದೂ ತೇಜೋರೂಪವೆಂದೂ ತಿಳಿದು ಉಪಾಸನೆಮಾಡಬೇಕು. ಈ ತತ್ತ್ವವನ್ನು ತಿಳಿದವನು ತೇಜಸ್ವಿಯೂ ಅನ್ನಾದ್ಯನೂ ಆಗುತ್ತಾನೆ ಎಂದು ಪ್ರಾಣವನ್ನು ಪ್ರಶಂಸಿಸಿದೆ. ಇದು ಐಹಿಕ ಸಂಪತ್ತಿನ ಗುಣವು. ಈ ಐಹಿಕಸಂಪತ್ತನ್ನು ವೃದ್ಧಿಪಡಿಸಲು ಅಗಸ್ತ್ಯನು ಮಿತ್ರನ ಗುಣವನ್ನು ಪಡೆದಿದ್ದನು. ಮತ್ತು ವರುಣನ ಗುಣವಾದ ಉದಾನವನ್ನು ಈ ರೀತಿ ಪ್ರಶಂಸಿಸಿದೆ.

**"..............ಸ ಉದಾನಃ ಸ ವಾಯುಃ ಸ ಆಕಾಶಸ್ತದೇತದೋಜಶ್ಚ ಮಹಶ್ಚೇತ್ಯುಪಾಸೀತೌಜಸ್ವೀ ಮಹಸ್ವಾನ್ಭವತಿ ಯ ಏವಂ ವೇದ"** (ಛಾ. ಉ. ೩-೧೩-೫)

ಉದಾನವೇ ವಾಯ್ವಾಕಾಶಸ್ವರೂಪವು. ಅದನ್ನೇ ಓಜೋರೂಪವೆಂದೂ ಮಹದ್ರೂಪವೆಂದೂ ತಿಳಿದು ಉಪಾಸನೆ ಮಾಡಬೇಕು. ಈ ತತ್ತ್ವವನ್ನು ತಿಳಿದವನು ಓಜಸ್ವಿಯೂ ಮತ್ತು ಮಹದ್ಗುಣವುಳ್ಳವನೂ ಆಗುತ್ತಾನೆ ಎಂದು ಆಧ್ಯಾತ್ಮಿಕಸಂಪತ್ತಿನ ವಿಷಯವನ್ನು ಪ್ರಶಂಸಿಸಿದೆ. ಇದು ವರುಣನ ಗುಣವು. ಇದನ್ನು ಅಗಸ್ತ್ಯನು ಪಡೆದು ಆಧ್ಯಾತ್ಮಿಕವಾದ ಸಂಪತ್ತನ್ನೂ ಪೂರ್ಣವಾಗಿ ಪಡೆದಿದ್ದನೆಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದೆ.

**ಕ್ರತೂದಕ್ಷೌ ಹ ವಾ ಅಸ್ಯ ಮಿತ್ರಾವರುಣೌ । ಏತನ್ನ್ವಧ್ಯಾತ್ಮಂ ಸ ಯದೇವ ಮನಸಾ ಕಾಮಯತ ಇದಂ ಮೇ ಸ್ಯಾದಿದಂ ಕುರ್ವೀಯೇತಿ ಸ ಏವ ಕ್ರತುರಥ ಯದಸ್ಮೈ ತತ್ಸಮೃಧ್ಯತೇ ಸ ದಕ್ಷೋ ಮಿತ್ರ ಏವ ಕ್ರತುರ್ವರುಣೋ ದಕ್ಷೋ ಬ್ರಹ್ಮೈವ ಮಿತ್ರಃ ಕ್ಷತ್ರಂ ವರುಣೋಽಭಿಗಂತೈವ ಬ್ರಹ್ಮ ಕರ್ತಾ ಕ್ಷತ್ರಿಯಃ ॥** (ಶ. ಬ್ರಾ. ೪-೧-೪-೧)

ಮಿತ್ರಾವರಣದಲ್ಲಿ ಮಿತ್ರನು ಸಂಕಲ್ಪರೂಪನು ಮತ್ತು ವರುಣನು ಆಧ್ಯಾತ್ಮಶಕ್ತಿಸ್ವರೂಪನು. ಕಾರ್ಯಸಿದ್ಧಿಗೆ ಸಂಕಲ್ಪ ಮಾಡುವುದು ಮಿತ್ರನ ಕಾರ್ಯ. ಅದನ್ನು ಸಾಧಿಸುವುದು ವರುಣನ ಕಾರ್ಯ. ಮತ್ತು, ಮಿತ್ರನು ಬ್ರಹ್ಮರೂಪನು ಮತ್ತು ವರುಣನು ಕ್ಷತ್ರರೂಪನು, ಬ್ರಹ್ಮನು ಕ್ರತುರೂಪನು ಮತ್ತು ವರುಣನು ಎಲ್ಲಕ್ಕೂ ದಕ್ಷನು. ಮತ್ತು,

**ಅಯಂ ವೈ ಲೋಕೋ ಮಿತ್ರಃ ಅಸೌ ವರುಣಃ ।** (ಶ. ಬ್ರಾ. ೧೨-೯-೨-೧೨)

ಮಿತ್ರನು ಇಹ ಲೋಕರೂಪನು, ವರುಣನು ದಿವ್ಯಲೋಕಸ್ವರೂಪನು ಎಂದು ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ. ಇದೇ ಅಂಶಗಳು ಇವರ ಪುತ್ರನಾದ ಅಗಸ್ತ್ಯನಲ್ಲಿ ಇದ್ದುದರಿಂದ ಅವನು ಪುತ್ರಾದಿರೂಪದಲ್ಲಿ ಐಹಿಕಸಂಪತ್ತನ್ನೂ ಧರ್ಮ ರೂಪದಲ್ಲಿ ನೈತಿಕ ಮತ್ತು ಆಧ್ಯಾತ್ಮಿಕವಾದ ಸಂಪತ್ತನ್ನೂ ಒಟ್ಟಿಗೆ ಸಂಪಾದಿಸಲು ಶಕ್ತನಾದನು ಎಂದು ಪ್ರಾಕೃತವಾದ ಋಕ್ಕಿನಲ್ಲಿ ಶಿಷ್ಯನು ಗುರುವಿನ ಮಹದ್ಗುಣಗಳನ್ನು ಪ್ರಶಂಸಿಸುತ್ತಾನೆ.

**ಋಷಿಃ**—ಅಗಸ್ತ್ಯನು ತಪಸ್ವಿಗಳಲ್ಲಿ ಶ್ರೇಷ್ಠನಾದುದರಿಂದ ಇವನು ಋಷಿಯೆಂದು ಸ್ತುತನಾಗಿದ್ದಾನೆ. ಋಷಿಶಬ್ದದ ನಿರ್ವಚನವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ಹೇಳಿದೆ. ಜೊತೆಯಲ್ಲಿಯೇ ಸೃಷ್ಟಿಗೂ ಋಷಿಗೂ ಇರತಕ್ಕ ಸಂಬಂಧವನ್ನೂ ಸಹ ತಿಳಿಸಿದೆ.

**"ಅಸದ್ವಾ ಇದಮಗ್ರ ಆಸೀತ್ । ತದಾಹುಃ ಕಿಂ ತದಸದಾಸೀದಿತ್ಯೃಷಯೋ ವಾವ ತೇಽಗ್ರೇಽ- ಸದಾಸೀತ್ತದಾಹುಃ ಕೇ ತ ಋಷಯ ಇತಿ ಪ್ರಾಣಾ ವಾ ಋಷಯಸ್ತೇ ಯತ್ಪುರಾಸ್ಮಾತ್ಸರ್ವ ಸ್ಮಾದಿದಮಿಚ್ಛಂತಃ ಶ್ರಮೇಣ ತಪಸಾರಿಷಂಸ್ತಸ್ಮಾದೃಷಯಃ"**

(ಶ. ಬ್ರಾ. ೬-೧-೧-೧)

ಸೃಷ್ಟಿಗೆ ಪೂರ್ವದಲ್ಲಿ ಅಸತ್ತು ಮಾತ್ರವಿದ್ದಿತು. ಈ ಋಷಿಗಳೇ ಆ ರೂಪದಲ್ಲಿದ್ದರು. ಋಷಿಗಳಾರೆಂದರೆ ಅವರೇ ಮುಖ್ಯ ಪ್ರಾಣರು. ಸೃಷ್ಟಿಗೆ ಪೂರ್ವದಲ್ಲಿ ಜಗತ್ಸೃಷ್ಟಿಯನ್ನಿಚ್ಛಿಸಿ ಅದಕ್ಕಾಗಿ ತಪಸ್ಸನ್ನಾಚರಿಸಿ ಶ್ರಮಿಸಿದರು ಆದುದರಿಂದ ಅವರಿಗೆ ಋಷಿಗಳೆಂದು ಹೆಸರು ಎಂದು ಋಷಿ ಶಬ್ದದ ನಿರ್ವಚನವನ್ನು ಹೇಳಿದೆ. (ತಪಸಾರಿಷಂಸ್ತಸ್ಮಾದೃಷಯಃ) ಮತ್ತು,

**"..........ತ್ವಯಿ ತಂತುಮೇತಮಿತಿ ಯೋಽಸಾವೃಷಿಭಿಸ್ತಂತುಸ್ತತಸ್ತಮೇತದಾಹ"**

(ಶ. ಬ್ರಾ. ೮-೬-೩-೨೨)

ವಿಶ್ವಾತ್ಮಕವಾದ ಯಜ್ಞತಂತುವನ್ನು ನೂತರು; ಜಗತ್ತಿನ ವಿಸ್ತೃತಿಗೆ ಕಾರಣರಾದರು ಎಂದು ಋಷಿಶಕ್ತಿಯನ್ನು ಪ್ರಶಂಸಿಸಿದೆ. ಆದುದರಿಂದಲೇ ಸೃಷ್ಟಿಮೂಲನಾದ ಬ್ರಹ್ಮಸ್ವರೂಪರೆಂದೂ ಹೇಳಿದೆ.

**"ಪ್ರಾಣಾ ವಾ ಋಷಯಃ ಪ್ರಥಮಜಾಸ್ತದ್ಧಿ ಬ್ರಹ್ಮ ಪ್ರಥಮಜಂ"**

(ಶ. ಬ್ರಾ. ೮-೬-೧-೫)

ಎಂದು ಋಷಿಗಳಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ತೋರಿಸಿದೆ. ಇದೊಂದು ವಿಧವಾದ ನಿರ್ವಚನವಾದರೆ, ಇದಕ್ಕೆ ಪ್ರತಿಯಾಗಿ ಇನ್ನೊಂದು ನಿರ್ವಚನವೂ ಸಾಧ್ಯವಾಗುತ್ತದೆ. ವಾಚಸ್ಪತ್ಯದಲ್ಲಿ ಹೇಳಿರುವಂತೆ,

**"ಋಷತಿ ಜ್ಞಾನೇನ ಸಂಸಾರಪಾರಂ"**

ಸಂಸಾರಪಾರವನ್ನು ಜ್ಞಾನದ ಮೂಲಕ ದಾಟುವುದರಿಂದ **ಋಷ್** ಧಾತುವಿನಿಂದ ನಿಷ್ಪನ್ನವಾದ ಋಷಿಶಬ್ದಕ್ಕೆ ಜ್ಞಾನಿಗಳೆಂದರ್ಥವಾಗುತ್ತದೆ. ಹೀಗೆ ಒಂದು ನಿರ್ವಚನದ ಪ್ರಕಾರ ಜಗತ್ಸೃಷ್ಟಿಗೆ ಋಷಿಗಳು ಮೂಲಕಾರಣರೆಂದೂ, ಇನ್ನೊಂದು ನಿರ್ವಚನದ ಪ್ರಕಾರ ಸಂಸಾರನಿವೃತ್ತಿಗೆ ಕಾರಣರೆಂದೂ ಅರ್ಥವಾಗುತ್ತದೆ. ಅಗಸ್ತ್ಯನಲ್ಲಿ ಈ ಎರಡು ಶಕ್ತಿಗಳೂ ಇದ್ದವೆಂದು ಪ್ರಕೃತವಾದ ಋಕ್ಕಿನ ವರ್ಣನೆಯಿರುತ್ತದೆ. **"ಉಭೌ ವರ್ಣಾ ಪುಪೋಷ"** ಎಂಬಲ್ಲಿ ಕಾಮಸಂತೃಪ್ತಿಯನ್ನು ಪಡೆದುದರಿಂದ ಸೃಷ್ಟಿಸಾಮರ್ಥ್ಯವೂ, ಆಧ್ಯಾತ್ಮಿಕವಾದ ಜ್ಞಾನವನ್ನು ಪಡೆದುದರಿಂದ ಸಂಸಾರ ನಿವೃತ್ತಿಗೆ ಸಾಧನವಾದ ಶಕ್ತಿಯೂ ವರ್ಣಿತವಾಗಿದೆ.

**ಋಷೀ (ಋಷ್) ಗತೌ** । ಎಂಬ ಗತ್ಯರ್ಥಕವಾದ ಧಾತುವಿನಿಂದ ಋಷಿಶಬ್ದವು ನಿಷ್ಪನ್ನವಾಗಿದೆಯೆಂದು ಮೇಲೆ ಹೇಳಿದ ನಿರ್ವಚನವು ತಿಳಿಸುತ್ತದೆ. ಅಲ್ಲದೇ **ದೃಶ್** ಧಾತುವಿನಿಂದಲೂ ಋಷಿಶಬ್ದವು ನಿಷ್ಪನ್ನವಾಗಿರಲು ಸಾಧ್ಯವೆಂದು Monier Williams ಎಂಬ ಪಂಡಿತನು ತನ್ನ Sanskrit–English Dictionary ಯಲ್ಲಿ ತಿಳಿಸಿ **ಋಷಿಕೃತ್** ಎಂಬ ಶಬ್ದಕ್ಕೆ ಅರ್ಥವನ್ನು ಹೇಳುವಾಗ ಎರಡು ಆಧಾರಗಳನ್ನು ತೋರಿಸಿ, Causing to see, enlightening ಎಂಬರ್ಥವನ್ನು ಹೇಳಿದ್ದಾನೆ. ಈ ಉದಾಹರಣೆಗಳಲ್ಲಿ ಮೊದಲನೆಯದಾಗಿ,

**ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ ಯಮಗಾಮ ದೂರಾತ್ ।**
**ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ ॥**

(ಋ. ಸಂ. ೧-೩೧-೧೬)

ಎಂಬ ಋಕ್ಕಿನಲ್ಲಿ **ಋಷಿಕೃತ್** ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆ. ಸಾಯಣರು ಈ ಪದಕ್ಕೆ **ದರ್ಶನಕಾರೀ** ಎಂಬರ್ಥವನ್ನು ಹೇಳಿದ್ದಾರೆ. ಇದರಂತೆಯೇ,

**ಋಷಿಮನಾ ಯ ಋಷಿಕೃತ್ಸ್ವರ್ಷಾಃ ಸಹಸ್ರಣೀಥಃ ಪದವೀಃ ಕವೀನಾಂ ।**
**ತೃತೀಯಂ ಧಾಮ ಮಹಿಷಃ ಸಿಷಾಸನ್ತ್ಸೋಮೋ ವಿರಾಜಮನು ರಾಜತಿ ಷ್ಟುಪ್ ॥**

(ಋ. ಸಂ. ೯-೯೬-೧೮)

ಎಂಬ ಋಕ್ಕಿನಲ್ಲಿಯೂ ಸಹ **ಋಷಿಮನಾಃ** ಎಂಬ ಪದಕ್ಕೆ **ಸರ್ವದರ್ಶನಶೀಲ ಮನಸ್ಕಃ** ಎಂದೂ, **ಋಷಿಕೃತ್** ಎಂಬುದಕ್ಕೆ **ಸರ್ವಸ್ಯ ದರ್ಶನಕರ್ತಾ** ಎಂದೂ ಅರ್ಥಮಾಡಿದೆ. ಲೌಕಿಕವಾಗಿಯೂ ಸಹ ತತ್ತ್ವಜ್ಞಾನಕ್ಕೆ ದರ್ಶನವೆಂಬ ಪರ್ಯಾಯಪದವು ಈ ಅಭಿಪ್ರಾಯಗಳನ್ನು ತಿಳಿಸುತ್ತದೆ. ಅಗಸ್ತ್ಯನು ತತ್ತ್ವಜ್ಞಾನರೂಪವಾದ ದರ್ಶನವನ್ನು ಪಡೆದುದರಿಂದ ಅವನು **ಋಷಿ**ಯೆಂದು ಪ್ರಶಂಸಿತನಾಗಿದ್ದಾನೆಂದು ಹೇಳಬಹುದು.

**ಸತ್ಯಾಃ**—ಸತ್ಯಫಲಾತ್ಮಕವಾದ (ಆಶಿಷಃ) ಎಂದರ್ಥ. ಈ ಪದದ ನಿರ್ವಚನವನ್ನೂ, ವಿಶೇಷಾರ್ಥವನ್ನೂ ಸಹ ೧-೧೮೦-೭ ನೇ ಋಕ್ಕಿನಲ್ಲಿ ವಿವರಿಸಲಾಗುತ್ತದೆ.

**ಇಮಂ ನು ಸೋಮಮಿತ್ಯೇತೇ ದ್ವೇ ಋಚೌ ಪ್ರಯತೋ ಜಪನ್ ।**
**ಸರ್ವಾನ್ ಕಾಮಾನವಾಪ್ನೋತಿ ಪಾಪೇಭ್ಯಶ್ಚ ಪ್ರಮುಚ್ಯತೇ ॥**

(ಋಗ್ವಿಧಾನಂ ೧-೧೪೭)

**ಇಮಂ ಸೋಮಂ, ಅಗಸ್ತ್ಯಃ ಖನಮಾನಃ** ಎಂಬ ಎರಡು ಋಕ್ಕುಗಳನ್ನು ಸಹ ಪ್ರಯತ್ನಮಾನಸನಾಗಿ ಪಠಿಸಿದರೆ ಮಾನವನಿಗೆ ಸಕಲವಾದ ಇಷ್ಟಾರ್ಥಗಳೂ ಸಿದ್ಧಿಸುವುವು ಮತ್ತು ಅವನು ಪಾಪದಿಂದ ಮುಕ್ತನಾಗುತ್ತಾನೆ ಎಂದು ಋಗ್ವಿಧಾನವು ಈ ಮಂತ್ರಗಳನ್ನು ಪ್ರಶಂಸಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಖನಮಾನಃ**—ಖನು ಅವಧಾರಣೇ. ಧಾತು. ಲಟಿಗೆ ಶಾನಚಾದೇಶ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಖನಿತ್ರೈಃ**—ಪೂರ್ವೋಕ್ತವಾದ ಧಾತು. **ಉಷಿಖನಿಭ್ಯಾಂ ಕಿತ್**—(ಉ. ಸೂ. ೪-೬೦೧) ಎಂಬುದರಿಂದ ಷ್ಟ್ರನ್ ಪ್ರತ್ಯಯ. ಇಡಾಗಮ. ವ್ಯತ್ಯಯದಿಂದ ಮಧ್ಯೋದಾತ್ತವಾಗುತ್ತದೆ.

**ಇಚ್ಛಮಾನಃ**—ಇಷು ಇಚ್ಛಾಯಾಂ ಧಾತು. ವ್ಯತ್ಯಯದಿಂದ ಲಟಿಗೆ ಶಾನಚಾದೇಶ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛಕಾರಾಂತಾದೇಶ. **ಆನೇಮುಕ್** ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್**—ಸೂತ್ರದಿಂದ ಲ ಸಾರ್ವಧಾತುಕ ಅನುದಾತ್ತವಾಗುವುದರಿಂದ ಶ ವಿಕರಣಸ್ವರ ಉಳಿಯುತ್ತದೆ.

**ಪುಪೋಷ**—ಪುಷ ಪುಷ್ಟೌ. ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ನೂರ ಎಪ್ಪತ್ತೊಂಭತ್ತನೇ ಸೂಕ್ತ ಮುಗಿದುದು.



# ನೂರ ಎಂಭತ್ತನೆಯ ಸೂಕ್ತವು

**ಅಥ ಚತುರ್ವಿಂಶೇಽನುವಾಕೇ ದ್ವಾದಶ ಸೂಕ್ತಾನಿ । ತತ್ರ ಯುವೋ ರಜಾಂಸೀತಿ ದಶರ್ಚಂ ಪ್ರಥಮಂ ಸೂಕ್ತಮಾಗಸ್ತ್ಯಂ ತ್ರೈಷ್ಟುಭಂ । ತುಹ್ಯಾದಿಪರಿಭಾಷಯೇದಮಾದಿಸೂಕ್ತಪಂಚಕಮಾಶ್ವಿನಂ। ಯುವೋರ್ದಶಾಶ್ವಿನಂ ವಾ ಇತ್ಯನುಕ್ರಮಣಿಕಾ ॥ ಏತದಾದೀನಿ ತೃತೀಯವರ್ಜಿತಾನಿ ಪಂಚ ಸೂಕ್ತಾನಿ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸಿ ವಿನಿಯುಕ್ತಾನಿ। ಅಥಾಶ್ವಿನ ಇತಿ ಖಂಡೇ ಸೂತ್ರಿತಂ। ಯುವೋ ರಜಾಂಸೀತಿ ಪಂಚಾನಾಂ ತೃತೀಯಮುದ್ಧರೇತ್ । ಆ. ೪-೧೫ । ಇತಿ ॥**

ಅನುವಾದವು—ಈ ಸೂಕ್ತದಿಂದ ಪ್ರಥಮ ಮಂಡಲದ ಇಪ್ಪತ್ತನಾಲ್ಕನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಹನ್ನೆರಡು ಸೂಕ್ತಗಳಿರುವವು. ಅವುಗಳಲ್ಲಿ **ಯುವೋ ರಜಾಂಸಿ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ತು ಹಿ** ಮೊದಲಾದ ಪಾರಿಭಾಷಿಕ ಶಬ್ದಪ್ರಯೋಗವಿರುವುದರಿಂದ ಈ ಸೂಕ್ತದಿಂದ ಮುಂದಿನ ಐದು ಸೂಕ್ತಗಳಿಗೂ ಅಶ್ವಿನೀದೇವತೆಗಳೇ ದೇವತೆಯೆಂದು ತಿಳಿಯಬೇಕು. ಅನುಕ್ರಮಣಿಕೆಯಲ್ಲಿ—**ಯುವೋರ್ದಶಾಶ್ವಿನಂ** ಎಂದು ಹೇಳಿರುವುದು. ಅಶ್ವಿನೀ ದೇವತಾಕವಾದ ಈ ಐದು ಸೂಕ್ತಗಳಲ್ಲಿ ಮೂರನೆಯ (೧೮೨ನೆಯ ಸೂಕ್ತ) ಸೂಕ್ತವನ್ನು ಬಿಟ್ಟು ಉಳಿದ ನಾಲ್ಕು ಸೂಕ್ತಗಳಿಗೆ ಎಂದರೆ ೧೮೦, ೧೮೧, ೧೮೩, ೧೮೪ನೆಯ ಸೂಕ್ತಗಳಿಗೆ ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸುವಾಗ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಅಥಾಶ್ವಿನ** ಎಂಬ ಖಂಡದ **ಯುವೋ ರಜಾಂಸೀತಿ ಪಂಚಾನಾಂ ತೃತೀಯಮುದ್ಧರೇತ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೫).

# ಸೂಕ್ತ—೧೮೦

ಮಂಡಲ—೧ ‖ ಅನುವಾಕ—೨೪ ‖ ಸೂಕ್ತ—೧೮೦ ‖

ಅಷ್ಟಕ—೨ ‖ ಅಧ್ಯಾಯ—೪ ‖ ವರ್ಗ—೨೩-೨೪ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ‖

‖ ಋಷಿಃ—ಅಗಸ್ತ್ಯಃ ‖

‖ ದೇವತಾ—ಅಶ್ವಿನೌ ‖

‖ ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಯುವೋ ರಜಾಂಸಿ ಸುಯಮಾಸೋ ಅಶ್ವಾ ರಥೋ ಯದ್ವಾಂ ಪರ್ಯರ್ಣಾಂಸಿ
ದೀಯತ್ ।
ಹಿರಣ್ಯಯಾ ವಾಂ ಪವಯಃ ಪ್ರುಷಾಯನ್ಮಧ್ವಃ ಪಿಬಂತಾ ಉಷಸಃ ಸಚೇಥೇ ॥

‖ ಪದಪಾಠಃ ‖

ಯುವೋಃ । ರಜಾಂಸಿ । ಸುಽಯಮಾಸಃ । ಅಶ್ವಾಃ । ರಥಃ । ಯತ್ । ವಾಂ । ಪರಿ । ಅರ್ಣಾಂಸಿ ।
ದೀಯತ್ ।
ಹಿರಣ್ಯಯಾಃ । ವಾಂ । ಪವಯಃ । ಪ್ರುಷಾಯನ್ । ಮಧ್ವಃ । ಪಿಬಂತೌ । ಉಷಸಃ । ಸಚೇಥೇ ಇತಿ ॥

‖ ಸಾಯಣಭಾಷ್ಯಂ ‖

ಹೇ ಅಶ್ವಿನೌ ಯುವೋರ್ಯುವಯೋರಶ್ವಾ ರಥವೋಢಾರೋ ರಜಾಂಸಿ ರಂಜಕಾಲ್ಲೋಕಾನ್ ಸುಯಮಾಸಃ ಶೋಭನನಿಯಮನಾಃ । ಲೋಕತ್ರಯಸಂಚಾರಿಣ ಇತ್ಯರ್ಥಃ । ಕದೇತಿ ಆಹ । ಯದ್ಯದಾ ವಾಂ ರಥೋಽರ್ಣಾಂಸ್ಯರಣೀಯಾನಭಿಮತದೇಶಾನ್ ಪರಿ ದೀಯತ್ ಪರಿಗಚ್ಛೇತ್ ಪರಿತೋ ಗಚ್ಛತಿ ವಾ । ತದೇತ್ಯರ್ಥಃ । ದೀಯತಿರ್ಗತಿಕರ್ಮಾ ದೀಯತಿ ತಕತೀತಿ ತತ್ಕರ್ಮಸು ಪಾಠಾತ್ । ಕಿಂಚ ರಥಾಗಮನಕಾಲೇ ವಾಂ ಯುವಯೋಃ ಪವಯೋ ವಜ್ರಾ ರಥನೇಮಯೋ ವಾ ಹಿರಣ್ಯಯಾ ಹಿರಣ್ಮಯಾಃ ಪ್ರುಷಾಯನ್ । ಪ್ರುಷ್ಣಂತ್ಯಭಿಮತಂ । ಯದ್ವಾ । ಹಿರಣ್ಯಯಾನಿ ಪವಯೋ ಮಧುಪಾತ್ರಾಣಿ ವಾಂ ಯುವಾಭ್ಯಾಮರ್ಥಾಯ । ಯಸ್ಮಾದೇವಂ ತಸ್ಮಾದ್ಯುವಾಂ ಮಧ್ವೋ ಮಧುನೋ ಮಧುಸದೃಶಸ್ಯ ಸೋಮರಸಸ್ಯ ‖ ಕರ್ಮಣಿ ಷಷ್ಠೀ ‖ ಸೋಮರಸಂ ಪಿಬಂತಾವಾಸ್ವಾದಯಂತಾವುಷಸ ಉಷಃಸಂಬಂಧಿನಿ ಕಾಲೇ ಸಚೇಥೇ । ಯಜ್ಞಂ ಸಂಗಚ್ಛೇಥೇ । ಅತ್ರ ಕ್ರಮೋ ನ ವಿವಕ್ಷಿತಃ । ಉಷಃಕಾಲ ಏವಾಗತ್ಯ ಮಧುರಂ ಸೋಮರಸಂ ಪಿಬತಮಿತ್ಯರ್ಥಃ ‖

॥ ಪ್ರತಿಪದಾರ್ಥ ॥

**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ | **ಯತ್**—ಯಾವಾಗ | **ವಾಂ**—ನಿಮ್ಮಿಬ್ಬರ | **ರಥಃ**—ರಥವು | **ಅರ್ಣಾಂಸಿ**—ಅಭಿಮತದೇಶಗಳಿಗೆ | **ಪರಿ ದೀಯತ್**—ಸುತ್ತಲೂ ಹೋಗುತ್ತದೆಯೋ | (**ತದಾ**—ಆಗ) **ಯುವೋಃ**—ನಿಮ್ಮಿಬ್ಬರ| **ಅಶ್ವಾಃ**—ರಥಾಶ್ವಗಳು | **ರಜಾಂಸಿ**—ಮೂರು ಲೋಕಗಳನ್ನೂ | **ಸುಯಮಾಸಃ**—ನಿಯತವಾಗಿ ಸಂಚರಿಸತಕ್ಕವು | (**ಕಿಂಚ**—ಮತ್ತು) | **ವಾಂ**—ನಿಮ್ಮ | **ಹಿರಣ್ಯಯಾಃ**—ಸುವರ್ಣಮಯವಾದ | **ಪವಯಃ**— ವಜ್ರಾಯುಧಗಳು ಅಥವಾ ರಥನೇಮಿಗಳು | **ಪ್ರುಷಾಯನ್**—ಅಭಿಮತಸೇಚನಮಾಡುತ್ತವೆ (ಇಷ್ಟಾರ್ಥವನ್ನು ವರ್ಷಿಸುತ್ತವೆ) | [ಅಥವಾ **ಹಿರಣ್ಯಯಾಃ**-ಸುವರ್ಣಮಯವಾದ | **ಪವಯಃ**-ಮಧುಪಾತ್ರೆಗಳು **ವಾಂ**—ನಿಮ್ಮಿಬ್ಬರಿಗೋಸ್ಕರ | **ಪ್ರುಷಾಯನ್**—(ಅಭಿಮತವಾದ ಮಧುವನ್ನು) ಸೇಚನಮಾಡುತ್ತವೆ] (ಆದುದರಿಂದ ನೀವಿಬ್ಬರು) **ಮಧ್ವಃ**— ಮಧುಸದೃಶವಾದ ಸೋಮರಸವನ್ನು | **ಪಿಬಂತೌ**—ಪಾನಮಾಡುವವರಾಗಿ | **ಉಷಸಃ**—ಉಷಸ್ಸಿನ ಸಂಬಂಧವಾದ ಕಾಲದಲ್ಲಿ | **ಸಚೇಥೇ**--(ಯಜ್ಞವನ್ನು) ಸೇರುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮಗೆ ಉದ್ದಿಷ್ಟವಾದ ಸ್ಥಳಕ್ಕೆ ನಿಮ್ಮ ರಥವು ಹೊರಟಾಗ, ನಿಮ್ಮ ರಥಾಶ್ವಗಳು ಮೂರುಲೋಕಗಳನ್ನೂ ಸಂಚರಿಸುತ್ತವೆ; ಈ ರಥಾಗಮನಕಾಲದಲ್ಲಿ, ಸುವರ್ಣಮಯವಾದ ನಿಮ್ಮ ಆಯುಧಗಳು ಅಥವಾ ರಥನೇಮಿಗಳು ಅಭಿಮತವಾದುದನ್ನು ವರ್ಷಿಸುತ್ತವೆ (ಸುವರ್ಣಮಯವಾದ ಮಧುಪಾತ್ರೆಗಳು ನಿಮಗೆ ಇಷ್ಟವಾದ ಮಧುವನ್ನು ಸೇಚನಮಾಡುತ್ತವೆ); ಆದುದರಿಂದ, ನೀವಿಬ್ಬರೂ, ಉಷಃಕಾಲದಲ್ಲಿ ಯಾಗಶಾಲೆಗೆ ಬಂದು ಮಧುಸದೃಶವಾದ ಸೋಮರಸವನ್ನು ಪಾನಮಾಡುತ್ತೀರಿ.

## English Translation.

Ashwins, your horses are traversers of the (three) regions, when your chariot proceeds to (its desired) quarters: the golden fellies of your wheels grant (whatever is wished for): drinking the Soma juice, you participate in the morning (rite).

॥ ವಿಶೇಷವಿಷಯಗಳು ॥

**ರಥಃ—ರಥಃ ರಂಹತೇರ್ಗತಿಕರ್ಮಣಃ | ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ | ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ | ರಪತೇರ್ವಾ ರಸತೇರ್ವಾ ||**

(ನಿ. ೯-೧೧)

**ಗತಿ** ಅಥವಾ **ವೇಗ**ವೆಂದು ಅರ್ಥವನ್ನು ಕೊಡುವ **ರಂಹ್** ಧಾತುವಿನಿಂದಾಗಲಿ, ಅಥವಾ ವರ್ಣವ್ಯತ್ಯಯವಾಗಿ **ಸ್ಥಿರ** ಎಂಬುದರಿಂದಾಗಲಿ, ಇದರಲ್ಲಿ ಕುಳಿತು **ಹರ್ಷ**ಪಡು ಎಂಬರ್ಥವನ್ನು ಕೊಡುವ **ರಮ್** ಧಾತುವಿನಿಂದಾಗಲಿ ಅಥವಾ ಶಬ್ದಮಾಡು ಎಂಬರ್ಥವುಳ್ಳ **ರಪ್** ಅಥವಾ **ರಸ್** ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು,

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ ।**
**ಗೋಭಿಃ ಸನ್ನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ॥**
(ಋ. ಸಂ. ೬–೪೭–೨೬)

ಎಂಬ ಋಕ್ಕನ್ನುದಹರಿಸಿ **ರಥ** ಶಬ್ದದ ನಿರ್ವಚನವನ್ನು ಹೇಳಿದ್ದಾರೆ [ಕೆಲವೆಡೆಗಳಲ್ಲಿ ರಥಗಳಲ್ಲಿ ಓಡಾಡತಕ್ಕ ಪುತ್ರಾದಿಗಳಿಗೂ ಈ ಪದದಿಂದಲೇ ನಿರ್ದೇಶಮಾಡಿದೆ.] ಕೆಲವೆಡೆಗಳಲ್ಲಿ ಈ ಪದವನ್ನು ಆದಿತ್ಯಪರ್ಯಾಯವಾಗಿಯೂ ಉಪಯೋಗಿಸುವುದುಂಟು. (ಉದಾಹರಣೆಗೆ— ಋ. ಸಂ. ೧-೧೬೪-೨)

**ರಜಾಂಸಿ—ರಜೋ ರಜ್ಯತೇರ್ಜ್ಯೋತೀ ರಜ ಉಚ್ಯತೇ ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ ।** (ನಿ. ೪-೧೯) ಬೆಳಗು ಎಂಬರ್ಥವನ್ನು ಕೊಡುವ **ರಂಜ್** ಧಾತುವಿನಿಂದ ನಿಷ್ಪನ್ನವಾಗಿ **ರಜಸ್** ಶಬ್ದಕ್ಕೆ ಜ್ಯೋತಿಯೆಂದೂ ಉದಕವೆಂದೂ ಮತ್ತು ಲೋಕಗಳೆಂದೂ ಅರ್ಥವಾಗುತ್ತದೆ.

**ರಜಾಂಸಿ ಚಿತ್ರಾ ವಿ ಚರಂತಿ ತನ್ಯವೋ ದಿವಃ ಸಮ್ರಾಜಾ ಪಯಸಾ ನ ಉಕ್ಷತಂ ।**
(ಋ. ಸಂ. ೫-೬೩-೫)

ಎಂಬ ಋಕ್ಕನ್ನುದಾಹರಿಸಿ ನಿರುಕ್ತಕಾರರು **ರಜಾಂಸಿ** ಎಂಬ ಪದಕ್ಕೆ **ಲೋಕ**ಗಳು ಎಂಬರ್ಥವಾಗುವುದೆಂದು ಹೇಳಿದ್ದಾರೆ. ನಿರುಕ್ತದ ೧೦ ನೇ ಅಧ್ಯಾಯದ ೪೪ ನೇ ಖಂಡದಲ್ಲಿ,

**ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಸ್ಸು ಷೀದನ್ ।**
(ಋ. ಸಂ. ೭-೩೪-೧೬)

ಎಂಬ ಋಕ್ಕನ್ನು ವಿವರಿಸುವಾಗ **ರಜಸ್ಸು** ಎಂಬ ಪದಕ್ಕೆ **ಉದಕೇಷು,**—ಉದಕಗಳಲ್ಲಿ ಎಂದರ್ಥವಾಗುತ್ತದೆಂದೂ ಮತ್ತು ೧೨ ನೇ ಅಧ್ಯಾಯದ ೭ ನೆಯ ಖಂಡದಲ್ಲಿ,

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
(ಋ. ಸಂ. ೧-೯೨-೧)

ಎಂಬ ಋಕ್ಕನ್ನು ವಿವರಿಸುವಾಗ **ರಜಸಃ** ಎನ್ನುವುದಕ್ಕೆ ಅಂತರಿಕ್ಷವೆಂದೂ ಅರ್ಥ ಮಾಡಿದ್ದಾರೆ.

**ತ್ರೀಣಿ ಭಾಂತಿ ರಜಾಂಸ್ಯಸ್ಯ ಯತ್ಪದಾನಿ ತು ತೇಜಸಾ ।**

ಎಂದು ಬೃಹದ್ದೇವತಾಕಾರರು ವಿಷ್ಣುವಿನ ಮೂರು ಲೋಕಗಳ ಆಕ್ರಮಣವನ್ನೂ ವರ್ಣಿಸುವಾಗ ಮೂರು ಲೋಕಗಳ ಪರ್ಯಾಯಪದವಾಗಿ **ರಜಾಂಸಿ** ಎಂಬ ಪದವನ್ನು ಪಯೋಗಿಸಿದ್ದಾರೆ. **ರಜಃ, ರಜಾಂಸಿ** ಎಂದರೆ ಸಾಮಾನ್ಯವಾಗಿ ಲೋಕಪರ್ಯಾಯವಾದ ಪದವಾಗಿರುತ್ತದೆ. ಆದರೆ,

**ಯನ್ನಾ ಸೋಮಾಸೋ ಮಮದನ್ಯದುಕ್ಥೋಭೇ ಭಯೇತೇ ರಜಸೀ ಅಪಾರೇ ।**
(ಋ. ಸಂ. ೪-೪೨-೬)

ಇತ್ಯಾದಿ ಋಕ್ಕುಗಳಲ್ಲಿ ಈ ಪದವು ದ್ವಿವಚನದಲ್ಲಿದ್ದು ದ್ಯಾವಾಪೃಥಿವಿಗಳೆಂದು ಪಾರಿಭಾಷಿಕವಾದ ಅರ್ಥವೇ ಹೇಳಲ್ಪಟ್ಟಿದೆ. ಕೆಲವೆಡೆಗಳಲ್ಲಿ ಮಾತ್ರ, ಎಂದರೆ,

**ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ।**
(ಋ. ಸಂ. ೬–೯–೧)

ಇತ್ಯಾದಿ ಒಂದೆರಡು ಋಕ್ಕುಗಳಲ್ಲಿ **ರಜಸೀ ಜಗದ್ರಂಜಯಂತೌ** ಎಂದು ಧಾತುವಿನ ಮೂಲಾರ್ಥವೇ ಮುಖ್ಯವಾಗಿರುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಪ್ರಕಾಶಮಾನವಾದ ಮೂರು ಲೋಕಗಳನ್ನೂ ಎಂದರ್ಥವಾಗುತ್ತದೆ.

**ಪವಯಃ**—**ಪವಿ** ಶಬ್ದವು ವಾಙ್ನಾಮಗಳಲ್ಲಿಯೂ (ನಿ. ೨-೨೩) **ವಜ್ರ** ನಾಮಗಳಲ್ಲಿಯೂ (ನಿ. ೩-೧೧) ಪಠಿತವಾಗಿರುವುದಲ್ಲದೆ—**ಪವೀ ರಥನೇಮಿರ್ಭವತಿ ಯದ್ವಿಪುನಾತಿ ಭೂಮಿಂ** । (ನಿ. ೫-೫) ಭೂಮಿಯನ್ನು ಉಜ್ಜುವುದರಿಂದ ರಥಚಕ್ರಕ್ಕೆ **ಪವಿ**ಯೆಂದು ಹೆಸರೆಂದು ನಿರುಕ್ತಕಾರರು ಅರ್ಥಮಾಡಿ,

**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ** ।

(ಋ. ಸಂ. ೫-೫೨-೯)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಪವಿ** ಶಬ್ದಕ್ಕೆ **ರಥನೇಮಿ**ಯೆಂಬರ್ಥವೆಂದು ತಿಳಿಸಿದ್ದಾರೆ. **ಪವಿ** ಶಬ್ದಕ್ಕೆ **ಶಲ್ಯ**ವೆಂಬರ್ಥವನ್ನೂ ತೋರಿಸುತ್ತಾ,

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ** ।

(ಋ. ಸಂ. ೧೦-೬೫-೧೩)

ಎಂಬ ಋಕ್ಕನ್ನುದಹರಿಸಿ (ನಿ. ೧೨-೩೦) **ಪವಿಃ ಶಲ್ಯೋ ಭವತಿ ಯದ್ವಿಪುನಾತಿ ಕಾಯಂ ತದ್ವತ್ಪವೀರಮಾಯುಧಂ ತದ್ವಾನಿಂದ್ರಃ ಪವೀರವಾನ್** । ದೇಹವನ್ನು ಭೇದಿಸುವುದರಿಂದ ಶಲ್ಯಕ್ಕೆ ಪವಿಯೆಂದು ಹೆಸರು. ಇದನ್ನು ಹೊಂದಿರುವುದರಿಂದ ಇಂದ್ರನಿಗೆ **ಪವೀರವಾನ್** ಎಂದು ವಿಶೇಷಣವಿದೆಯೆಂದು ವಿವರಿಸಿ,

**ಯೋ ಜನಾನ್ ಮಹಿಷಾँ ಇವಾತಿತಸ್ಥೌ ಪವೀರವಾನ್ । ಉತಾಪವೀರವಾನ್ ಯುಧಾ** ।

(ಋ. ಸಂ. ೧೦-೬೦-೩)

ಎಂಬ ಋಕ್ಕನ್ನುದಾಹರಿಸಿ ವಿವರಿಸಿದ್ದಾರೆ. ಪ್ರಕೃತವಾದ ಋಕ್ಕನ್ನು ಸಾಯಣರು **ಪವಯಃ—ವಜ್ರಾ, ರಥನೇಮಯೋ ವಾ** ಎಂದು ವೈಕಲ್ಪಿತವಾದ ಅರ್ಥವನ್ನು ಹೇಳಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಯುವೋಃ**—ಷಷ್ಠೀ ದ್ವಿವಚನ ಪರವಾದಾಗ **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಷಷ್ಠೀ ದ್ವಿವಚನ ಆದೇಶ ಬರುತ್ತದೆ. ಆದುದರಿಂದ **ಯೋಚಿ** (ಪಾ. ಸೂ. ೭-೨-೮೯) ಎಂಬುದರಿಂದ ಯಾದೇಶ ಬರುವುದಿಲ್ಲ. **ಶೇಷೇ ಲೋಪಃ** ಎಂಬುದರಿಂದ ಟಿ ಗೆ ಲೋಪ. ಉದಾತ್ತ ನಿವೃತ್ತಿಸ್ವರದಿಂದ ವಿಭಕ್ತಿ ಉದಾತ್ತವಾಗುತ್ತದೆ.

**ಸುಯಮಾಸಃ**—**ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ದೀಯತ್**—ದೀಯ ಗತೌ. ಛಾಂದಸ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ **ಇತಶ್ಚ ಲೋಪಃ**-(ಪಾ. ಸೂ. ೩-೪ ೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ. ದೀಯತಿ, ತಕತಿ ಎಂದು ಯಾಸ್ಕರು ಗತಿಕರ್ಮಕ ಧಾತುಗಳ ಮಧ್ಯೆ ಪಾಠಮಾಡಿರುತ್ತಾರೆ.

**ಹಿರಣ್ಯಯೋಃ**—**ಋತ್ವ್ಯ ವಾಸ್ತ್ವ್ಯ ವಾಸ್ತ್ವ**—(ಪಾ. ಸೂ. ೬-೪-೧೭೫) ಎಂಬುದರಿಂದ ಮಕಾರಲೋಪ ಬಂದು ನಿಪಾತವಾಗಿದೆ. ಪ್ರತ್ಯಯ ಸ್ವರದಿಂದ ಅಕಾರ ಉದಾತ್ತವಾಗಿರುವಾಗ ಪೂರ್ವಾನುದಾತ್ತದೊಡನೆ ಏಕಾದೇಶ ವಾದಾಗ **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ಉದಾತ್ತವಾಗುತ್ತದೆ.

**ಪ್ರುಷಾಯನ್**—ಪ್ರುಷ ಪ್ಲುಷ ಸ್ನೇಹನಸೇಚನಪೂರಣೇಷು. ಧಾತು. ಕ್ರ್ಯಾದಿ. ಲೇಟ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ ಬಂದಾಗ **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರ ಲೋಪ. **ಛಂದಸಿ ಶಾಯಜಪಿ** ಎಂಬುದರಿಂದ ವ್ಯತ್ಯಯದಿಂದ ಶ್ನಾ ವಿಕರಣಕ್ಕೆ ಶಾಯಜಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಧ್ವಃ**—**ಜಸಾದಿಷು ಛಂದಸಿ ವಾ ವಚನಮ್** ಎಂಬುದರಿಂದ ಗುಣಾದಿಗಳು ಬಾರದಿರುವಾಗ ಯಣಾದೇಶ ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಪಿಬಂತೌ**—ಪಾ ಪಾನೇ. ಧಾತು. ಲಟಿಗೆ ಶತ್ರಾದೇಶ. ಶಪ್ ವಿಕರಣ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಪಿಬಾದೇಶ. ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಚೇಥೇ**—ಷಚ ಸಮವಾಯೇ. ಧಾತು. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

## ಯುವಮತ್ಯಸ್ಯಾವ ನಕ್ಷಥೋ ಯದ್ವಿಪತ್ಮನೋ ನರ್ಯಸ್ಯ ಪ್ರಯಜ್ಯೋಃ ।
## ಸ್ವಸಾ ಯದ್ವಾಂ ವಿಶ್ವಗೂರ್ತೀ ಭರಾತಿ ವಾಜಾಯೇಟ್ಟೇ ಮಧುಪಾವಿಷೇ ಚ ॥

॥ ಪದಪಾಠಃ ॥

**ಯುವಂ । ಅತ್ಯಸ್ಯ । ಅವ । ನಕ್ಷಥಃ । ಯತ್ । ವಿऽಪತ್ಮನಃ । ನರ್ಯಸ್ಯ । ಪ್ರऽಯಜ್ಯೋಃ ।**

**ಸ್ವಸಾ । ಯತ್ । ವಾಂ । ವಿಶ್ವಗೂರ್ತೀ ಇತಿ ವಿಶ್ವऽಗೂರ್ತೀ । ಭರಾತಿ । ವಾಜಾಯ । ಈಟ್ಟೇ ।**
**ಮಧುऽಪೌ । ಇಷೇ । ಚ ॥ ೨ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವಂ ಯುವಾಂ ಯದತ್ಯಸ್ಯಾತನಶೀಲಸ್ಯ ಸತತಸಂಚಾರಿಣೋ ವಿಪತ್ಮನೋ ವಿವಿಧಗಮನಸ್ಯ ವಿಚಿತ್ರಗಮನಸ್ಯ ವಾ ನರ್ಯಸ್ಯ ಮನುಷ್ಯಾಣಾಂ ಹಿತಸ್ಯ ಪ್ರಯಜ್ಯೋಃ ಪ್ರಕರ್ಷೇಣ**

**ಪೂಜ್ಯಸ್ಯ ॥ ಏತಾನಿ ಕರ್ಮಣಿ ಷಷ್ಠ್ಯಂತಾನಿ ॥ ಉಕ್ತರೂಪಂ ರಥಮವಾವಸ್ತಾತ್ತ್ವದುದಯಾತ್ಪೂರ್ವಂ ನಕ್ಷಥಃ ವ್ಯಾಪ್ನುಥೋ ದೇವಯಜನಂ ಗಂತುಂ । ಕಿಂಚ ಯದ್ಯದಾ ಹೇ ವಿಶ್ವಗೂರ್ತೀ ಸರ್ವಸ್ತುತ್ಯೌ ಸರ್ವದೋದ್ಗೂರ್ಣೌ ವಾ ವಾಂ ಯುವಯೋಃ ಸ್ವಸಾ ಸ್ವಸೃಸ್ಥಾನೀಯಾ ಸ್ವಯಂಸಾರಿಣೀ ವೋಷಾ ಭರಾತಿ ಪೋಷತೇ ತ್ವದಾಗಮನಾಯ ಪ್ರಭಾತಂ ಕರೋತಿ । ಯದಾ ಹೇ ಮಧುಪೌ ಮಧುರಸ್ಯ ಸೋಮರಸಸ್ಯ ಪಾತಾರೌ ಯುವಾಂ ಯಜಮಾನೋ ವಾಜಾಯ ಬಲಾಯ ಗಮನಾಯ ವೇಷೇ ಪ್ರಭೂತಾನ್ನಾಯೇಟ್ಟೇ ಸ್ತೌತಿ । ತದಾ ರಥಂ ಪ್ರಾಪ್ನುಥ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

(**ಹೇ ಅಶ್ವಿನೌ—** ಎಲೈ ಅಶ್ವಿನೀ ದೇವತೆಗಳೇ) । **ಯುವಂ**—ನೀವಿಬ್ಬರೂ । **ಯತ್**—ಯಾವಾಗ । **ಅತ್ಯಸ್ಯ**—ಸತತಗಮನಶೀಲವೂ । **ವಿಪತ್ಮನಃ**—ವಿವಿಧ (ವಿಚಿತ್ರ) ಗತಿಯುಳ್ಳವೂ । **ನರ್ಯಸ್ಯ**—ಮನುಷ್ಯರಿಗೆ ಹಿತ ಕರವೂ । **ಪ್ರಯಜ್ಯೋಃ**-ವಿಶೇಷವಾಗಿ ಪೂಜ್ಯವೂ (ಆದ ನಿಮ್ಮ ರಥವನ್ನು) । **ಅವ**-ಅಧೋಮುಖವಾಗಿ । **ನಕ್ಷಥಃ**- (ಯಾಗ ಶಾಲೆಗೆ ಹೊರಡುವುದಕ್ಕೆ) ಪ್ರಾಪ್ತರಾಗುತ್ತೀರೋ । (**ಕಿಂ ಚ**—ಮತ್ತು) । **ಯತ್**—ಯಾವಾಗ । (**ಹೇ**) **ವಿಶ್ವಗೂರ್ತೀ**—ಸರ್ವಸ್ತುತ್ಯರಾದ (ಸರ್ವದಾ ಉಗ್ರರಾದ) ಎಲೈ ಅಶ್ವಿನೀ ದೇವತೆಗಳೇ । **ವಾಂ**—ನಿಮ್ಮಿಬ್ಬರಿಗೆ । **ಸ್ವಸಾ**—ಸ್ವಸೃಸ್ಥಾನೀಯಳಾದ (ಸ್ವತಃ ಗಮನಶಕ್ತಿಯುಳ್ಳ) ಉಷೋದೇವಿಯು । **ಭರಾತಿ**—(ನಿಮ್ಮನ್ನು) ಪೋಷಿಸು ತ್ತಾಳೋ (ನಿಮ್ಮ ಆಗಮನಕ್ಕಾಗಿ ಬೆಳಕುಂಟುಮಾಡುತ್ತಾಳೋ) । (**ತದಾ**—ಆಗ) । (**ಹೇ**) **ಮಧುಪೌ**—ಸೋಮ ರಸವನ್ನು ಪಾನಮಾಡುವ ಎಲೈ ಅಶ್ವಿನೀ ದೇವತೆಗಳೇ । (**ವಾಂ**— ನಿಮ್ಮಿಬ್ಬರನ್ನು) । **ವಾಜಾಯ**—ಬಲ ಅಥವಾ ಗಮನಕ್ಕೋಸ್ಕರ (ಮತ್ತು) । **ಇಷೇ ಚ**—ಪ್ರಭೂತಾನ್ನಕ್ಕೋಸ್ಕರಲೂ । **ಈಟ್ಟೇ**—(ಯಜಮಾನನು) ಸ್ತುತಿಸುತ್ತಾನೆ.

॥ ಭಾವಾರ್ಥ ॥

ಸರ್ವಸ್ತುತ್ಯರೂ, ಸೋಮಪಾತ್ರಗಳೂ ಆದ ಎಲೈ ಅಶ್ವಿನೀ ದೇವತೆಗಳೇ, ಸತತಗಮನಶೀಲವೂ, ವಿವಿಧ ಗತಿಯುಳ್ಳವೂ, ಮನುಷ್ಯರಿಗೆ ಹಿತಕರವೂ, ಅತ್ಯಂತ ಪೂಜ್ಯವೂ ಆದ ನಿಮ್ಮ ರಥವು, ನಿಮಗೆ ಸ್ವಸೃಸ್ಥಾನೀಯಳಾದ ಉಷೋದೇವಿಯು ನಿಮ್ಮ ಆಗಮನಕ್ಕೋಸ್ಕರಲೇ ಉದಿಸಿದಾಗ ಯಾಗಶಾಲೆಯನ್ನು ಉದ್ದೇಶಿಸಿ ಹೊರಡುತ್ತದೆ; ಆಗ ಯಜಮಾನನು, ಬಲ ಮತ್ತು ಆಹಾರಗಳನ್ನು ಅನುಗ್ರಹಿಸಿ ಎಂದು ನಿಮ್ಮನ್ನು ಸ್ತುತಿಸುತ್ತಾನೆ.

## English Translation.

Direct downwards (the course) of your (car) swift moving, variously going, friendly to man, and to be especially venerated, when, all adorable, your sister (dawn) prepares (for your approach), and (the institutor of the ceremony) worships you, drinkers of the Soma juice, for the sake (of obtaining) strength and food.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳ ರಥದ ಸ್ವರೂಪವನ್ನೂ, ಮತ್ತು ಅವರಿಗೂ ಉಷೋದೇವತೆಗೂ ಇರತಕ್ಕ ಸಂಬಂಧವನ್ನೂ ಸಹ ವರ್ಣಿಸಿದೆ.

**ಅತ್ಯಸ್ಯ— ಅತನಶೀಲಸ್ಯ, ಸತತಸಂಚಾರಿಣಃ ।** ಯಾವಾಗಲೂ ವಿಚ್ಛಿತ್ತಿಯಿಲ್ಲದೇ ಸಂಚರಿಸುವ ಸ್ವಭಾವವುಳ್ಳ ಎಂದರ್ಥ. ಈ ಪದವು ರಥಕ್ಕೆ ವಿಶೇಷಣವಾಗಿ ರಥದ ಸ್ವರೂಪವನ್ನು ತಿಳಿಸುತ್ತದೆ. ಸಾಧಾರಣವಾಗಿ ಯಾವಾಗಲೂ ಸಂಚರಿಸುವ ಸ್ವಭಾವವುಳ್ಳ ಅಶ್ವಕ್ಕೂ ಆದಿತ್ಯನಿಗೂ ಈ ಪದವು ವಿಶೇಷಣವಾಗಿ ಪ್ರಯೋಗಿಸಲ್ಪಡುತ್ತದೆ.

**ಏಷ ಪ್ರ ಪೂರ್ವೀರವ ತಸ್ಯ ಚಮ್ರಿಷೋಽತ್ಯೋ ನ ಯೋಷಾಮುದಯಂಸ್ತ ಭುರ್ವಣಿಃ ।**
**ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ ಹರಿಯೋಗಮೃಭ್ವಸಂ ।**
(ಋ. ಸಂ. ೧-೫೬-೧)

ಎಂಬ ಋಕ್ಕಿನಲ್ಲಿ **ಅತ್ಯಃ** ಎಂಬುದು ಅಶ್ವಪರವಾಗಿಯೂ,

**ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ ।**
**ಮೃಗಾಣಾಂ ನ ಹೇತಯೋ ಯಂತಿ ಚೇಮಾ ಬೃಹಸ್ಪತೇರಹಿಮಾಯಾँ ಅಭಿ ದ್ಯೂನ್ ।**
(ಋ. ಸಂ. ೧-೧೯೦-೪)

ಎಂಬಲ್ಲಿ **ಅತನಶೀಲಃ ಆದಿತ್ಯಃ** ಎಂದೂ ಅರ್ಥವಾಗುವಂತೆ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ ರಥಕ್ಕೆ ವಿಶೇಷಣವಾಗಿದೆ.

**ವಿಶ್ವಗೂರ್ತೀ— ಗುರೀ (ಗುರ್)— ಉದ್ಯಮನೇ** ಎಂಬ ಧಾತುವಿನಿಂದ ಗೂರ್ತಿ ಶಬ್ದವು ನಿಷ್ಪನ್ನವಾಗಿದೆ. **ಗೂರ್ತಿ** ಶಬ್ದಕ್ಕೆ ಕೇವಲ ಉದ್ಯಮ ಅಥವಾ ಕಾರ್ಯದ ಪ್ರಯತ್ನವೆಂಬರ್ಥಮಾತ್ರವಾಗದೆ ಆ ಉದ್ಯಮದಲ್ಲಿ ಒಂದು ಶ್ರದ್ಧೆಯೂ ಸಂಕಲ್ಪವೂ ಇರುವುದೆಂಬುದನ್ನು ಈ ಪದದ ಪ್ರಯೋಗವಿರುವೆಡೆಗಳಲ್ಲೆಲ್ಲಾ ತಿಳಿಸುತ್ತದೆ. ಉದಾಹರಣೆಗೆ—

**ಯೂಪವ್ರಸ್ಕಾ ಉತ ಯೇ ಯೂಪವಾಹಾಶ್ಚಷಾಲಂ ಯೇ ಅಶ್ವಯೂಪಾಯ ತಕ್ಷತಿ ।**
**ಯೇ ಚಾರ್ವತೇ ಪಚನಂ ಸಂಭರಂತ್ಯುತೋ ತೇಷಾಮಭಿಗೂರ್ತಿರ್ನ ಇನ್ವತು ।**
(ಋ. ಸಂ. ೧-೧೬೨-೬)

ಎಂಬಲ್ಲಿ ಸಾಯಣರು ಶ್ರದ್ಧಾಯುತವಾದ ಸಂಕಲ್ಪವೆಂದರ್ಥಮಾಡಿದ್ದಾರೆ ಇದರಂತೆಯೇ **ಸ್ವಗೂರ್ತಿ, ರಾಧೋಗೂರ್ತಿ, ಅರಿಗೂರ್ತಿ** ಇತ್ಯಾದಿ ಪದಗಳಿಗೂ, **ಗೂರ್ತಮನಾಃ, ಗೂರ್ತಶ್ರವಾಃ, ಗೂರ್ತವಸುಃ** ಇತ್ಯಾದಿ ಪದಗಳಿಗೂ ಇರತಕ್ಕ ಸಂದರ್ಭಾನುಸಾರವಾದ ಅರ್ಥಗಳನ್ನು ತಿಳಿಯಬೇಕು. ನಿರುಕ್ತಕಾರರು **ಸ್ವಗೂರ್ತ** ವೆಂಬ ಶಬ್ದವಿರತಕ್ಕ,

**ಸಮಸ್ಮಿಞ್ಜಾಯಮಾನ ಆಸತ ಗ್ನಾ ಉತೇಮವರ್ಧನ್ನದ್ಯಃ ಸ್ವಗೂರ್ತಾಃ ।**
**ಮಹೇ ಯತ್ತ್ವಾ ಪುರೂರವೋ ರಣಾಯಾವರ್ಧಯನ್ ದಸ್ಯುಹತ್ಯಾಯ ದೇವಾಃ ॥**
(ಋ. ಸಂ. ೧೦-೯೫-೭)

ಎಂಬ ಋಕ್ಕನ್ನುದಾಹರಿಸಿ ಅಲ್ಲಿರತಕ್ಕ **ಸ್ವಗೂರ್ತಾಃ** ಎಂಬ ಪದಕ್ಕೆ **ಸ್ವಯಂಗಾಮಿನ್ಯಃ** ಎಂದರ್ಥಮಾಡಿದ್ದಾರೆ. ಇಲ್ಲಿ **ಗೂರ್ತ** ಶಬ್ದಕ್ಕೆ **ಶ್ರದ್ಧೆ** ಅಥವಾ **ಸಂಕಲ್ಪ** ಇತ್ಯಾದ್ಯರ್ಥಗಳು ಇರುವ ಕಾರಣವಿಲ್ಲ. ಕೇವಲ **ಗಮನಾರ್ಥ**ದಲ್ಲಿ ಮಾತ್ರ ಈ ಪ್ರಯೋಗವಿರುತ್ತದೆಂದು ತಿಳಿಯುತ್ತದೆ. ಇದರಂತೆಯೇ,

**ಅಸದ್ಯಥಾ ನೋ ವರುಣಃ ಸುಕೀರ್ತಿರಿಷಶ್ಚ ಪರ್ಷದರಿಗೂರ್ತಃ ಸೂರಿಃ ।**

(ಋ. ಸಂ. ೧-೧೮೬-೩)

ಎಂಬಲ್ಲಿಯೂ ಶತ್ರುಹನನಾಯ ಉದ್ಯುಕ್ತಃ ಎಂದು ಕೇವಲ ಉದ್ಯಮನಾರ್ಥವನ್ನು ಮಾತ್ರ ತೋರಿಸುತ್ತದೆಂದು ಸಾಯಣರು ವಿವರಿಸಿದ್ದಾರೆ. ಆದರೆ, **ಗೂರ್ತಶ್ರವಾಃ, ಗೂರ್ತಮವಾಃ** ಇತ್ಯಾದಿ ಪದಗಳಲ್ಲಿ **ಗೂರ್ತ** ಶಬ್ದಕ್ಕೆ ಪ್ರಶಸ್ಯವೆಂಬರ್ಥವಿರುತ್ತದೆ. ಉದಾಹರಣೆಗೆ—

**ಸ ಪ್ರಾಥತೋ ನಹುಷೋ ದಂಸುಜೂತಃ ಶರ್ಧಸ್ತರೋ ನರಾಂ ಗೂರ್ತಶ್ರವಾಃ ।**

(ಋ. ಸಂ. ೧-೧೨೨-೧೦)

ಎಂಬಲ್ಲಿ **ಗೂರ್ತಶ್ರವಾಃ** ಎಂಬ ಪದಕ್ಕೆ **ಉದ್ಗೂರ್ಣದೀಪ್ತಿಃ** ಅಥವಾ **ಪ್ರಖ್ಯಾತಾನ್ನೋ ವಾ ।** ಪ್ರಶಸ್ಯವಾದ ಅಥವಾ ಪ್ರಕಟಿತವಾದ ಕಾಂತಿ ಅಥವಾ ಪ್ರಸಿದ್ಧಿಯನ್ನು ಪಡೆದ ಅನ್ನವೆಂದರ್ಥಮಾಡಿದ್ದಾರೆ. ಅಥವಾ ಪ್ರಶಸ್ಯವಾದ ಅನ್ನವೆಂದೂ ಅರ್ಥವಾಗುತ್ತದೆ. ಮತ್ತು ೬-೬೩-೪ ನೇ ಋಕ್ಕಿನಲ್ಲಿರುವ **ಗೂರ್ತಮನಾಃ** ಎಂಬ ಶಬ್ದಕ್ಕೆ **ಪ್ರಕರ್ಷೇಣ ಉದ್ಯುಕ್ತಮನಾಃ** ಎಂದರ್ಥಮಾಡಿದೆ. ಹೀಗೆ **ಗೂರ್ತ** ಶಬ್ದಕ್ಕೆ ಸಂದರ್ಭಾನುಸಾರವಾದ ಅರ್ಥವನ್ನು ಹೇಳಬೇಕಾಗಿರುವಾಗ, ಪ್ರಕೃತವಾದ ಋಕ್ಕಿನಲ್ಲಿ **ವಿಶ್ವಗೂರ್ತೀ** ಎಂಬ ಪದವು ಅಶ್ವಿನೀದೇವತೆಗಳಿಗೆ ವಿಶೇಷಣವಾಗಿದ್ದು **ಸರ್ವಸ್ತುತ್ಯೌ** ಎಲ್ಲರಿಂದಲೂ ಪ್ರಶಂಸಿತರಾಗಿರುವವರು ಎಂಬರ್ಥವನ್ನು ಕೊಡುತ್ತದೆ.

**ಸ್ವಸಾ ಭರಾತಿ—ಸ್ವಸೃ** ಶಬ್ದಕ್ಕೆ ಇಲ್ಲಿ **ಉಷಸ್ಸೆಂದು** ತಾತ್ಪರ್ಯ. ಅಶ್ವಿನೀದೇವತೆಗಳಿಗೂ ಉಷಸ್ಸಿಗೂ ಇರುವ ಸಂಬಂಧವನ್ನೂ ಅಶ್ವಿನೀದೇವತೆಗಳು ಯಜ್ಞದಲ್ಲಿ ಭಾಗವಹಿಸುವಾಗ ಉಷೋದೇವಿಯು ಆವಿರ್ಭೂತಳಾಗಿ ಪ್ರಶಸ್ಯವಾದ ಕಾಲವನ್ನು ಸೂಚಿಸುವ ಅಂಶವನ್ನೂ ಮುಂದೆ ತಿಳಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ನಕ್ಷಥಃ**—ಣಕ್ಷ ಗತೌ ಧಾತು. **ಣೋ ನಃ** ಎಂಬುದರಿಂದ ಆದಿಗೆ ನತ್ವ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಿಪತ್ಮನಃ**—ಪತ್ಲೃ ಗತೌ. ಧಾತು. ಔಣಾದಿಕ ಮನಿನ್ ಪ್ರತ್ಯಯ. ವಿವಿಧಾಃ ಪತ್ಮಾನಃ ಯಸ್ಯ. ತಸ್ಯ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನರ್ಯಸ್ಯ**—ನರಾಯ ಹಿತಮ್. ತಸ್ಯ. **ಛಂದಸಿ ಚ** (ಪಾ. ಸೂ. ೫-೪-೧೪೨) ಎಂಬುದರಿಂದ ಯತ್. ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಯತೋ ನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ವಗೂರ್ತೀ**—ವಿಶ್ವಾ ಗೂರ್ತಿಃ ಯಯೋಸ್ತೌ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಭರಾತಿ**—ಭೃಞ್ ಭರಣೇ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಶಪ್ ನಿಮಿತ್ತವಾಗಿ ಧಾತುವಿಗೆ ಗುಣ. ರ ಪರವಾಗಿ

ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ತಿಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಈಟ್ಟೇ**—ಈಡ ಸ್ತುತೌ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇಷೇ—ಸಾವೇಕಾಚಸ್ತೃತೀಯಾದಿಃ** (ಪಾ. ಸೂ ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

**ಯುವಂ ಪಯ ಉಸ್ರಿಯಾಯಾಮಧತ್ತಂ ಪಕ್ವಮಾಮಾಯಾಮವ ಪೂರ್ವ್ಯಂ ಗೋಃ।**
**ಅಂತರ್ಯದ್ವನಿನೋ ವಾಮೃತಪ್ಸೂ ಹ್ವಾರೋ ನ ಶುಚಿರ್ಯಜತೇ ಹವಿಷ್ಮಾನ್ ॥**

॥ ಪದಪಾಠಃ ॥

ಯುವಂ । ಪಯಃ । ಉಸ್ರಿಯಾಯಾಂ । ಅಧತ್ತಂ । ಪಕ್ವಂ । ಆಮಾಯಾಂ । ಅವ । ಪೂರ್ವ್ಯಂ । ಗೋಃ ।
ಅಂತಃ । ಯತ್ । ವನಿನಃ । ವಾಂ । ಋತಪ್ಸೂ ಇತ್ಯೃತऽಪ್ಸೂ । ಹ್ವಾರಃ । ನ । ಶುಚಿಃ । ಯಜತೇ ।
ಹವಿಷ್ಮಾನ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಮುಸ್ರಿಯಾಯಾಂ। ಗೋನಾಮೈತತ್ । ಭೋಗೋತ್ಪಾದಿಕಾಯಾಂ ಗವಿ ಪಯೋऽಧತ್ತಂ। ಅಧಾರಯತಂ । ಸ್ಥಾಪಿತವಂತೌ । ತಥಾಮಾಯಾಮಪಕ್ವಾಯಾಂ ಪಕ್ವಂ ಪರಿಪಕ್ವಂ ಭೋಗಯೋಗ್ಯಂ ಗೋಸಂಬಂಧಿ ದುಗ್ಧಂ ಪೂರ್ವ್ಯಂ ಪೂರ್ವಭವಂ ತತ್ರೈವೋತ್ಪನ್ನಮವಾವಸ್ರಾದಧಾರಯತಂ। ಗವಿ ಕ್ಷೀರಮುತ್ಪಾದ್ಯ ಪುನರ್ಭೋಗಾಯ ಪೃಥಕ್ಕೃತವಂತಾವಿತ್ಯರ್ಥಃ । ಯದ್ಯಸ್ಮಾತ್ ಹೇ ಋತಪ್ಸೂ ಸತ್ಯಸ್ವರೂಪೌ ಯಜ್ಞಿಯಹವಿರ್ಭಕ್ಷಯಿತಾರೌ ವಾ ಹೇ ಅಶ್ವಿನೌ ವಾಂ ವನಿನ ಉದಕವತ ಉದಕೋಪಲಕ್ಷಿತಹವಿಷ್ಮತೋ ಯಜ್ಞಸ್ಯಾಂತರ್ಮಧ್ಯೇ ಹವಿಷ್ಮಾನ್ ಪ್ರದೇಯಹವಿಷಾ ತದ್ವಾನ್ ಶುಚಿಃ ಶುದ್ಧೋ ಯಜಮಾನೋ ಯಜತೇ ಪೂಜಯತಿ ಯುವಾಂ ತಸ್ಮಾದೇವಮಕುರುತಂ । ಯದ್ವಾ। ಯದ್ಯೈವಂ ಯಜಮಾನಃ ಕರೋತಿ ತದೇತ್ಯರ್ಥಃ । ತತ್ರ ದೃಷ್ಟಾಂತಃ । ವನಿನೋ ವನಸಂಬಂಧಿವೃಕ್ಷಸಮೂಹಸ್ಯಾಂತರ್ಮಧ್ಯೇ ಹ್ವಾರೋ ನ ಚೋರ ಇವ। ಸ ಯಥಾ ಜಾಗರೂಕೋ ವರ್ತತೇ ತಥಾ ಯಜಮಾನೋऽಪೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹೇ ಋತಪ್ಸೂ**—ಸತ್ಯ ಸ್ವರೂಪರಾದ (ಯಜ್ಞ ಸಂಬಂಧ ಹವಿರ್ಭಕ್ಷಕರಾದ) ಎಲೈ ಅಶ್ವಿನೀದೇವತೆಗಳೇ | **ಯತ್**—ಯಾವ ಕಾರಣ | **ಹವಿಷ್ಮಾನ್**—ನಿಮಗೆ ಪ್ರದೇಯವಾದ ಹವಿಯುರ್ಕ್ತನೂ | **ಶುಚಿಃ**—ಶುದ್ಧನೂ ಆದ ಯಜಮಾನನು | **ವಾಂ**—ನಿಮ್ಮಿಬ್ಬರನ್ನು | **ವನಿನಃ**—ಹವಿರ್ವಿಶಿಷ್ಟವಾದ ಯಜ್ಞದ | **ಅಂತಃ**— ಮಧ್ಯದಲ್ಲಿ | [ಅಥವಾ **ವನಿನಃ**—ವನಸಂಬಂಧವಾದ ವೃಕ್ಷಸಮೂಹದ | **ಅಂತಃ**—ಮಧ್ಯೆ ಇರುವ] | **ಹ್ವಾರಃ ನಃ**—ಚೋರನು ಎಷ್ಟುಜಾಗರೂಕನಾಗಿರುತ್ತಾನೋ (ಅಷ್ಟು ಜಾಗರೂಕನಾಗಿ) | **ಯಜತೇ**—ಪೂಜಿಸುತ್ತಾನೋ | (**ತತ್**—ಆದ್ದ ರಿಂದ)| (**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ)| **ಯುವಂ**—ನೀವಿಬ್ಬರು | **ಉಸ್ರಿಯಾಯಾಂ**—ಗೋವಿನಲ್ಲಿ| **ಪಯಃ**—ಕ್ಷೀರವನ್ನು | **ಅಧತ್ತಂ**—ಸ್ಥಾಪಿಸಿದಿರಿ (ಮತ್ತು) | **ಗೋಃ**—ಗೋವಿನ ಕೆಚ್ಚಲಿನಲ್ಲಿ | **ಆಮಾಯಾಂ**—ಅಪಕ್ವವಾದ | **ಪೂರ್ವ್ಯಂ**—ಅದರಲ್ಲಿಯೇ ಉತ್ಪನ್ನವಾದ | **ಪಕ್ವಂ**—ಪಕ್ವವಾದ ಕ್ಷೀರವನ್ನು | **ಅವ** | (**ಅಧತ್ತಂ**)—ಸ್ಥಾಪಿಸಿದಿರಿ.

॥ ಭಾವಾರ್ಥ ॥

ಸತ್ಯಸ್ವರೂಪರಾದ (ಯಜ್ಞಾಂಗಹವಿರ್ಭಕ್ಷಕರಾದ) ಎಲೈ ಅಶ್ವಿನೀದೇವತೆಗಳೇ, ಹವಿರಾದಿವಿಶಿಷ್ಟನಾಗಿ ಯಜಮಾನನು, ವನದಲ್ಲಿ ಅಡಗಿರುವ ಕಳ್ಳನಷ್ಟು ಜಾಗರೂಕನಾಗಿ ಯಜ್ಞದಲ್ಲಿ ನಿಮ್ಮನ್ನು ಪೂಜಿಸುತ್ತಾನೆ, ಆದುದ ರಿಂದಲೇ, ನೀವು ಅವರ :ಗೋವುಗಳಲ್ಲಿ ಪ್ರಭೂತವಾದ ಕ್ಷೀರವನ್ನು ಸ್ಥಾಪಿಸಿದಿರಿ ಮತ್ತು ಅವರಿಗೆ ಸೇರಿದ ಕಡಸು ಗಳಲ್ಲಿಯೂ ಪಕ್ವವಾದ ಕ್ಷೀರವನ್ನು ಉಂಟುಮಾಡಿರಿ.

## English Translation·

You have restored milk to the cow : you have (brought) down the prior mature (secretion) into the unripe (or barren udder) of the cow : the devont offerer of the oblation worships you, whose froms are truth, (as vigilant in the midst of the ceremony), as a thief (in the midst) of a thicket,

॥ ವಿಶೇಷವಿಷಯಗಳು ॥

**ಋತಪ್ಸೂ—ಋತ** ಶಬ್ದಕ್ಕೆ ಸತ್ಯ, ಯಜ್ಞ ಇತ್ಯಾದ್ಯರ್ಥಗಳಲ್ಲಿ ಪ್ರಯೋಗವಿರುವುದನ್ನೂ ಋತವು ವಿಶ್ವ ನಿಯಮವನ್ನು ಯಾವ ರೀತಿ ಪ್ರತಿಬಿಂಬಿಸುವುದೆಂಬುದನ್ನೂ ಹಿಂದೆ ಇದೇ ಭಾಗದಲ್ಲಿ ಋ. ಸಂ. ೧-೧೭೯-೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. · ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀ ದೇವತೆಗಳನ್ನು ಸತ್ಯಸ್ವರೂಪರೆಂದು **ಋತಪ್ಸೂ**ಎಂಬ ಪದದಿಂದ ವರ್ಣಿಸಿದೆ. ವಿಶ್ವವನ್ನೆಲ್ಲಾ ದ್ಯಾವಾಪೃಥಿವೀ ರೂಪಗಳಿಂದಲೂ, ಸೂರ್ಯಾಚಂದ್ರಮಸ್ಸು ಗಳ ರೂಪದಲ್ಲೂ, ಅಹೋರಾತ್ರಿಗಳ ರೂಪದಲ್ಲೂ ವ್ಯಾಪಿಸಿರುವುದರಿಂದ ಸತ್ಯಾತ್ಮಕವಾದ ಸಕಲ ವಿಶ್ವರೂಪರೂ ಇವರೇ ಆಗಿದ್ದಾರೆಂದು ತಾತ್ಪರ್ಯ.

**ವನಿನಃ**—ಈ ಪದಕ್ಕೆ ಎರಡು ಅಥವಾ ಮೂರು ವಿಧವಾದ ಅರ್ಥವು ಸಾಧ್ಯವೆಂದು ತೋರಿಸಿದ್ದಾರೆ. ಮೊದಲನೆಯದಾಗಿ, **ವನಿನಃ—ಉದಕವಂತಃ ಉದಕೋಪಲಕ್ಷಿತ ಹವಿಷ್ಮತೋ ಯಜ್ಞಸ್ಯ** ಎಂದೂ ಎರಡ ನೆಯದಾಗಿ **ವನಸಂಬಂಧಿವೃಕ್ಷಸಮೂಹಸ್ಯ** ಎಂದೂ ಅರ್ಥಮಾಡಿದ್ದಾರೆ.

**ವನ** ಶಬ್ದವನ್ನು ರಶ್ಮಿ (ಕಿರಣ) ನಾಮಗಳಲ್ಲಿಯೂ (ನಿ. ೨-೧೫) ; **ಉದಕ** ನಾಮಗಳಲ್ಲಿಯೂ (ನಿ. ೨-೨೩) ಪಠಿಸಿದೆ. ಈ ಅರ್ಥಗಳ ಜೊತೆಗೆ ಇನ್ನೂ ಇತರ ಅನೇಕ ಅರ್ಥಗಳಲ್ಲಿಯೂ ಈ ಪದವನ್ನು ಋಕ್ಸಂಹಿತೆಯಲ್ಲಿ ಪ್ರಯೋಗಿಸಿದೆ. **ವನ — ಸಂಭಕ್ತೌ** ಎಂಬ ಅತ್ಯುತ್ಕಟವಾದ ಇಚ್ಛೆ, ಆಕಾಂಕ್ಷೆ ಇತ್ಯಾದ್ಯರ್ಥಗಳನ್ನು ಕೊಡುವ **ವನ್** ಧಾತುವಿನಿಂದಾಗಲಿ, ಅಥವಾ **ವನು— ಯಾಚನೇ**; ಯಾಚಿಸು, ಪ್ರಾರ್ಥಿಸು, ಎಂಬರ್ಥವನ್ನು ಕೊಡುವ **ವನ್** ಧಾತುವಿನಿಂದಾಗಲಿ, **ವನಾನಿ, ವನಿನಃ ವನಾಮಹೇ, ವನತೆಂ** ಇತ್ಯಾದಿ ನಾಮಪದಗಳೂ ಕ್ರಿಯಾಪದಗಳೂ ನಿಷ್ಪನ್ನವಾಗಿ ಪ್ರಯೋಗಿಸಲ್ಪಟ್ಟಿರುವುದರಿಂದ ಈ ಅರ್ಥ ವ್ಯತ್ಯಾಸಗಳನ್ನು ತಿಳಿಯಲು ಕೆಲವು ಉದಾಹರಣೆಗಳನ್ನು ನೋಡಬಹುದು. ನಾಮಪದಗಳ ಪ್ರಯೋಗವಿರುವಾಗ **ಪೂಜ್ಯ, ಉದಕ, ವನವೃಕ್ಷ ಪುಷ್ಪಫಲ** ಇತ್ಯಾದ್ಯರ್ಥಗಳೂ, ಕ್ರಿಯಾಪದದ ಪ್ರಯೋಗಗಳಿರುವಾಗ **ಕೊಲ್ಲು, ಕೊಡು, ಭಕ್ತಿಯಿಂದ ಸೇವಿಸು** ಇತ್ಯಾದ್ಯರ್ಥಗಳೂ ಆಗುವ ಸನ್ನಿವೇಶಗಳನ್ನು ಉದಾಹರಣೆಗಳೊಂದಿಗೆ ಇದೇ ಭಾಗದಲ್ಲಿ ಹಿಂದೆ ಋ. ಸಂ. ೧-೧೭೧-೩ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿಸ್ತಾರವಾಗಿ ತಿಳಿಸಿದೆ, ಪ್ರಕೃತವಾದ ಋಕ್ಕಿನಲ್ಲಿ ಉದಕೋಪಲಕ್ಷಿತವಾದ ಯಜ್ಞದ ಎಂದಾಗಲಿ ಅಥವಾ ವೃಕ್ಷಸಮೂಹದ ಎಂದಾಗಲಿ ಅರ್ಥವಾಗುತ್ತದೆ.

**ಹ್ವಾರಃ— ಹ್ವಾರ** ಪದಕ್ಕೆ ಚೋರನೆಂದರ್ಥಮಾಡಿದೆ. ಈ ಪದಕ್ಕೆ **ತಸ್ಕರ, ವಂಚಕ** ಎಂಬರ್ಥವು ಪರಂಪರೆಯಾಗಿ ಬಂದುದು. ಈ ಪದಕ್ಕೆ ಕುಟಿಲ, ವಕ್ರ ಎಂಬುದೇ ಮೂಲಾರ್ಥವು.

**ಕ್ರತ್ವಾ ಹಿ ದ್ರೋಣೇ ಅಜ್ಯಸೇಽಗ್ನೇ ವಾಜೀ ನ ಕೃತ್ವ್ಯಃ ।**
**ಪರಿಜ್ಮೇವ ಸ್ವಧಾ ಗಯೋಽತ್ಯೋ ನ ಹ್ವಾರ್ಯಃ ಶಿಶುಃ ॥**

(ಋ. ಸಂ. ೬-೨-೮)

ಎಂಬಲ್ಲಿ **ಹ್ವಾರ್ಯಃ** ಎಂಬ ಪದವು ಅಶ್ವದ ಗುಣವನ್ನು ತೋರಿಸುತ್ತದೆ. ಇಲ್ಲಿ ಅಗ್ನಿಗೆ ವಿಶೇಷಣವಾಗಿದೆ. ಅಶ್ವಕ್ಕೂ ಅಗ್ನಿಗೂ ಇರುವ ಸಾಧಾರಣಧರ್ಮವು ಈ ಪದದಿಂದ ಸೂಚಿತವಾಗಿದೆ. ಅಶ್ವವು ಯಾವ ರೀತಿ ಕುಟಿಲಗತಿಯುಳ್ಳದ್ದೋ ಅದೇ ರೀತಿ ಅಗ್ನಿಯ ಜ್ವಾಲೆಯೂ ಸಹ ಕುಟಿಲಗತಿಯಿಂದ ಪ್ರಸರಿಸುತ್ತದೆಂದರ್ಥ. ಹೀಗೆಯೇ,

**ಉತ ಸ್ಮ ದುರ್ಗೃಭೀಯಸೇ ಪುತ್ರೋ ನ ಹ್ವಾರ್ಯಾಣಾಂ ।**
**ಪುರೂ ಯೋ ದಗ್ಧಾಸಿ ವನಾಗ್ನೇ ಪಶುರ್ನ ಯವಸೇ ॥**

(ಋ. ಸಂ. ೫-೯-೪)

ಎಂಬ ಋಕ್ಕಿನಲ್ಲಿ **ಹ್ವಾರ್ಯಾಣಾಂ** ಎಂಬ ಪದವು **ಕುಟಿಲಂ ಗಚ್ಛತಾಂ ಸರ್ಪಾಣಾಂ ।** ಕುಟಿಲವಾಗಿ ಸರಿಯುವ ಸರ್ಪಗಳ ವಕ್ರವಾದ ಗತಿಯನ್ನೂ ತಿಳಿಸುತ್ತದೆ. ಹೀಗೆ ಮೂಲಾರ್ಥವಿರುವಾಗ ಇದೇ ಗತಿಯುಳ್ಳ ತಸ್ಕರಾದಿಗಳ ಪರ್ಯಾಯಪದವಾಗಿಯೂ ಈ ಪದವು ಪ್ರಯೋಗಿಸಲ್ಪಟ್ಟಿದೆ. ನೇರವಾದ ಎಂದರೆ ಸತ್ಯವಾದ ಭಾವವೂ, ವ್ಯವಹಾರವೂ ಇಲ್ಲದ ವಂಚಕನೆಂದರ್ಥ. ತಸ್ಕರನಿಗೂ ಈ ಗುಣವಿರುವುದರಿಂದ **ಹ್ವಾರಃ** ಎಂದರೆ ತಸ್ಕರನೆಂದೂ ಅರ್ಥವಾಗುತ್ತದೆ. ಮತ್ತು,

**ವಿ ಯದಸ್ಥಾದ್ಯಜತೋ ವಾತಚೋದಿತೋ ಹ್ವಾರೋ ನ ವಕ್ವಾ ಜರಣಾ ಅನಾಕೃತಃ ।**
**ತಸ್ಯ ಪತ್ಮನ್ದಕ್ಷುಷಃ ಕೃಷ್ಣ ಜಂಹಸಃ ಶುಚಿಜನ್ಮನೋ ರಜ ಆ ವ್ಯಧ್ವನಃ ॥**

(ಋ. ಸಂ. ೧-೧೪೧-೭)

ಇತ್ಯಾದಿ ಋಕ್ಕುಗಳಲ್ಲಿ ಹರಟೀಮಲ್ಲನೆಂದರ್ಥ. ಹರಟೀಮಲ್ಲನು ಮಿತಿಮೀರಿ ಹರಟುವುದರಿಂದ ಅದು ನೇರವಾದ ಮತ್ತು ನಿರ್ದಿಷ್ಟವಾದ ಗುರಿಯನ್ನು ಹೊಂದಿರುವುದಿಲ್ಲವಾದುದರಿಂದ ಅದರಲ್ಲೂ ಕುಟಿಲಗತಿಯಿದೆ. ಆದುದರಿಂದ **ವಕ್ವನಿಗೆ ಹ್ವಾರಃ** ಎಂಬ ವಿಶೇಷಣವಿದೆ. ಪ್ರಕೃತವಾದ ಋಕ್ಕಿನಲ್ಲಿ (ತಸ್ಕರ) ಚೋರನೆಂದರ್ಥಮಾಡಿದ್ದಾರೆ. ಆದರೆ ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಸಾಧಾರಣವಾಗಿ ತಸ್ಕರನಿಗೆ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟರೆ ಅವನ ವಂಚಕತ್ವವನ್ನು ತೋರಿಸುವುದಾಗಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಯಜ್ಞಕರ್ತನಿಗೂ ಹ್ವಾರನಿಗೂ ಇರತಕ್ಕ ಸಾಧಾರಣ ಗುಣವನ್ನು ತೋರಿಸುವುದಾಗಿದೆ. ಎಂದರೆ ತಸ್ಕರನು ಯಾವ ರೀತಿ ಜಾಗರೂಕತೆಯಿಂದ ತನ್ನ ಚೌರ್ಯಕರ್ಮವನ್ನು ನೆರವೇರಿಸುತ್ತಾನೆಯೋ ಅದರಂತೆ ಯಜ್ಞಕರ್ತನೂ ನೆರವೇರಿಸುತ್ತಾನೆಂದರ್ಥ. ಇಬ್ಬರಿಗೂ ಇರುವ ಕಾರ್ಯಶ್ರದ್ಧೆ ಮತ್ತು ಜಾಗರೂಕತೆಯು ಇಲ್ಲಿ ಸಮಾನಧರ್ಮವಾಗಿದೆ.

**ಉಸ್ರಿಯಾಯಾಂ—ಅಘ್ನ್ಯಾ, ಉಸ್ರಾ, ಉಸ್ರಿಯಾ** ಇತ್ಯಾದಿ ಗೋನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೩-೮) **ಉಸ್ರಿಯೇತಿ ಗೋನಾಮ । ಉಸ್ರಾವಿಣಃ ಅಸ್ಯಾಂ ಭೋಗಾಃ ।** ಸುಖಸಾಧನವಾದ ಕ್ಷೀರವು ಹರಿಯುವುದರಿಂದ **ಉಸ್ರಿಯಾಃ** ಎಂಬ ಹೆಸರು ಬಂದಿದೆಯೆಂದು ನಿರುಕ್ತಕಾರರು,

**ಉತ ವಾಂ ವಿಕ್ಷು ಮದ್ಯಾಸ್ವಂಧೋ ಗಾವ ಆಪಶ್ಚ ಪೀಪಯಂತ ದೇವೀಃ ।**
**ಉತೋ ನೋ ಅಸ್ಯ ಪೂರ್ವ್ಯಃ ಪತಿರ್ದನ್ವೀತಂ ಪಾಪಂ ಪಯಸ ಉಸ್ರಿಯಾಯಾಃ ॥**

(ಋ. ಸಂ. ೧-೧೫೩-೪)

ಎಂಬ ಋಕ್ಕನ್ನುದಾಹರಿಸಿ ಮೇಲ್ಕಂಡಂತೆ ವಿವರಿಸಿದ್ದಾರೆ. (ನಿ. ೪-೧೯)

ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಅಪಕ್ವವಾಗಿದ್ದ ಗೋವಿನ ಕೆಚ್ಚಲಿನಲ್ಲಿ ಕ್ಷೀರವನ್ನು ಸ್ಥಾಪಿಸಿದರು ಎಂಬ ಸನ್ನಿವೇಶವನ್ನು ಸೂಚಿಸಿದ್ದಾರೆ. ಈ ಸನ್ನಿವೇಶವು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಸೂಚಿತವಾಗಿದೆ. ಇದರ ಕಥೆಯು ಕೆಲವೆಡೆಗಳಲ್ಲಿ ಈ ರೀತಿ ಹೇಳಲ್ಪಟ್ಟಿದೆ.

**ಶಯುರ್ನಾಮ ರಾಜರ್ಷಿಃ । ಸೋಽಶ್ವಿನೌ ಪರಿಚರ್ಯಯಾ ತುಷ್ಟಾವುವಾಚ । ಮಮ ಗೌರಧೇನುರ್ನಿವೃತ್ತಪ್ರಸವಾ ವೃದ್ಧಾ ಚ । ತಾಂ ಮೇ ಧೇನುಂ ಕುರುತಮಿತಿ । ತಾಮಸ್ಮೈ ಅಶ್ವಿನೌ ಧೇನುಂ ಚಕ್ರತುರಿತ್ಯತ್ರೇತಿಹಾಸಮಾಚಕ್ಷತೇ ॥**

ಶಯುವೆಂಬ ರಾಜರ್ಷಿಯು ಅಶ್ವಿನೀ ದೇವತೆಗಳನ್ನು ಪೂಜಿಸಿದಾಗ ಆ ಪೂಜೆಯಿಂದ ಅವರು ತುಷ್ಟರಾದರು. ಆಗ ರಾಜರ್ಷಿಯು ಅವರನ್ನು ಕುರಿತು ನನ್ನ ಗೋವು ಬಂಜೆಯಾಗಿದೆ. ಅದು ಕರುವನ್ನು ಹಾಕುವಂತೆಯೂ ಹಾಲನ್ನು ಕೊಡುವಂತೆಯೂ ಮಾಡಿ ಅದನ್ನು ಧೇನುವನ್ನಾಗಿ ಪರಿವರ್ತಿಸಿ ಎಂದು ಪ್ರಾರ್ಥಿಸಿಕೊಂಡನು. ಮುದಿಯಾದ ಆ ಗೋವನ್ನು ಅವರು ಅವನ ಪ್ರಾರ್ಥನೆಯ ಮೇಲೆ ಧೇನುವಾಗಿ ಆಗುವಂತೆ ಅನುಗ್ರಹಿಸಿದರು ಎಂಬ ಸನ್ನಿವೇಶವನ್ನು ಅನೇಕ ಋಕ್ಕುಗಳು ಸೂಚಿಸಿವೆ. ಉದಾಹರಣೆಗೆ—

**ಅಧೇನುಂ ದಸ್ರಾ ಸ್ತರ್ಯಂ೧ ವಿಷಕ್ತಾಮಪಿನ್ವತಂ ಶಯವೇ ಅಶ್ವಿನಾ ಗಾಂ ।**

(ಋ. ಸಂ. ೧-೧೧೭-೨೦)

**ಯುವಂ ಧೇನುಂ ಶಯವೇ ನಾಧಿತಾಯಾಪಿನ್ವತಮಶ್ವಿನಾ ಪೂರ್ವ್ಯಾಯ ।**

(ಋ. ಸಂ. ೧-೧೧೮-೮)

**ದಶಸ್ಯಂತಾ ಶಯವೇ ಪಿಪ್ಯಥುರ್ಗಾಮಿತಿ ಚ್ಯವಾನಾ ಸುಮತಿಂ ಭುರಣ್ಯೂ ।**

(ಋ. ಸಂ. ೬-೬೨-೭)

**ತಾ ವರ್ತಿರ್ಯಾತಂ ಜಯುಷಾ ವಿ ಪರ್ವತಮಪಿನ್ವತಂ ಶಯವೇ ಧೇನುಮಶ್ವಿನಾ ।**

(ಋ ಸಂ. ೧೦-೩೯-೧೩)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ಶಯುವಿನ ಬಂಜೆಯಾದ ಗೋವನ್ನು ಧೇನುವನ್ನಾಗಿ ಪರಿವರ್ತಿಸಿದ ಸನ್ನಿವೇಶವು ಹೇಳಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲೂ ಸಹ ಅದೇ ವಿಷಯವನ್ನು ತಿಳಿಸಿದೆ. ಆದರೆ **ಶಯು** ವೆಂಬ ಹೆಸರನ್ನು ಇಲ್ಲಿ ತಿಳಿಸಿಲ್ಲ. ಕೆಲವೆಡೆಗಳಲ್ಲಿ ಮುದಿಯಾದ ಧೇನುವನ್ನು ಕರುಹಾಕುವಂತೆ ಮಾಡಿ ಹಾಲನ್ನು ತುಂಬಿದ ರೆಂದೂ, ಇನ್ನು ಕೆಲವೆಡೆಗಳಲ್ಲಿ ಬಂಜೆಯಾಗಿದ್ದ ಗೋವನ್ನು ಧೇನುರೂಪದಲ್ಲಿ ಪರಿವರ್ತಿಸಿ ಹಾಲನ್ನು ತುಂಬಿದರೆಂದೂ ಕಥೆಯಿದೆ.

**ಆಮಾಯಾಂ—ಅಪರಿಪಕ್ವಾಯಾಂ ।** ಪರಿಪಕ್ವವಾಗಿಲ್ಲದಿರತಕ್ಕ ಎಂದರ್ಥ. ಇಲ್ಲಿ ಗೋವಿನ ಕೆಚ್ಚಲಿಗೆ ವಿಶೇಷಣವಾಗಿದೆ. ಇನ್ನೂ ಹಾಲನ್ನು ತುಂಬಿಕೊಳ್ಳದಿರುವ ಕೆಚ್ಚಲುಳ್ಳ ಅಥವಾ ಬಂಜೆಯಾದ ಹಸುವಿನ ವಿಷಯದಲ್ಲಿ ಈ ಪದವನ್ನು ಪ್ರಯೋಗಿಸಿದೆ. ಇಂತಹ ಅಪರಿಪಕ್ವವಾದ ಕೆಚ್ಚಲನ್ನು ಅಶ್ವಿನೀದೇವತೆಗಳು ಹಾಲಿನಿಂದ ತುಂಬಿದರು ಎಂಬಂತೆಯೇ ಇತರ ದೇವತೆಗಳ ವಿಷಯದಲ್ಲಿಯೂ ಸಹ ಈ ಕೌಶಲವು ವರ್ಣಿಸಲ್ಪಟ್ಟಿದೆ. ಉದಾಹರಣೆಗೆ—

**ಇಮೌ ದೇವೌ ಜಾಯಮಾನೌ ಜುಷಂತೇಮೌ ತಮಾಂಸಿ ಗೂಹತಾಮಜುಷ್ಟಾ ।**
**ಆಭ್ಯಾಮಿಂದ್ರಃ ಪಕ್ವಮಾಮಾಸ್ವಂತಃ ಸೋಮಾಪೂಷಭ್ಯಾಂ ಜನದುಸ್ರಿಯಾಸು ॥**

(ಋ. ಸಂ. ೨-೪೦-೨)

ಎಂಬಲ್ಲಿ ಸೋಮ ಮತ್ತು ಪೂಷದೇವತೆಗಳಿಬ್ಬರೂ ಸಹ ತರುಣಿಯಾದ ಗೋವಿನ ಕೆಚ್ಚಲನ್ನು ಹಾಲಿನಿಂದ ತುಂಬಿ ಅದನ್ನು ಧೇನುರೂಪಕ್ಕೆ ಪರಿವರ್ತಿಸಿದರೆಂದಿದೆ. **ಆಮ** ಶಬ್ದಕ್ಕೆ ಸಾಧಾರಣವಾಗಿ ಅಪಕ್ವವೆಂದರ್ಥ. ಯಾವ ಸಂದರ್ಭ ದಲ್ಲಾದರೂ ಇದು ಉಪಯೋಗಿಸಬಹುದಾದ ವಿಶೇಷಣವಾದರೂ ಸಹ ಋಕ್ಸಂಹಿತೆಯಲ್ಲಿ ಈ ಪದವನ್ನು ಗೋವಿನ ಕೆಚ್ಚಲನ್ನು ವರ್ಣಿಸುವಾಗ ಮಾತ್ರ ವಿಶೇಷಣವನ್ನು ಪಯೋಗಿಸಿ ಹಾಲಿನಿಂದ ಪಕ್ವವಾಗದಿರುವ ಎಂದರೆ ಹಾಲಿಲ್ಲದ ಕೆಚ್ಚಲು ಎಂಬರ್ಥವನ್ನು ಸೂಚಿಸಿದೆ. ಉದಾ— (ಉ. ಋ. ಸಂ. ೩-೩೦-೧೪; ೪-೩-೯; ೨-೩೫-೬; ೨-೪೦-೨; ೬-೭೭-೪; ೮-೭೮-೭ ಇತ್ಯಾದಿ)

॥ ವ್ಯಾಕರಣಪ್ರಕ್ರಿಯಾ ॥

**ಉಸ್ರಿಯಾಯಾಮ್**—ವಸ ನಿವಾಸೇ. ಧಾತು. ವಸಂತಿ ಇತಿ ಉಸ್ರಿಯಾಃ. "ಯನ್ನ ಪದಾರ್ಥವಿಶೇಷ ಸಮುತ್ಥಂ ಪ್ರತ್ಯಯತಃ ಪ್ರಕೃತೇಶ್ಚ ತದೂಹ್ಯಮ್" ಎಂಬ ವಚನದಿಂದ ವಸ ಧಾತುವಿಗೆ ಕರ್ತರಿಯಲ್ಲಿ ರಿಯಕ್ ಪ್ರತ್ಯಯ ಬಂದಿದೆ ಎಂದು ಕಾರ್ಯದಿಂದ ಊಹಿಸಬೇಕು. ಕಿತ್ತಾದುದರಿಂದ ಧಾತುವಿಗೆ ಸಂಪ್ರಸಾರಣ ಬರುತ್ತದೆ. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅಧತ್ತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಅಂತರ್ಭಾವಿತ ಣ್ಯರ್ಥಕವಾಗಿದೆ. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪೂರ್ವ್ಯಮ್**—ಪೂರ್ವೇ ಭವಮ್. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಹ್ವಾರಃ**—ಹ್ವೃ ಕೌಟಿಲ್ಯೇ. ಧಾತು. ಇದಕ್ಕೆ ಣ್ಯಂತದ ಮೇಲೆ ಅಚ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ಋಕಾರಕ್ಕೆ ವೃದ್ಧಿ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಯಜತೇ**—**ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೩ ॥

॥ ಸಂಹಿತಾಪಾಠಃ ॥

**ಯುವಂ ಹ ಘರ್ಮಂ ಮಧುಮಂತಮತ್ರಯೇಽಪೋ ನ ಕ್ಷೋದೋಽವೃಣೀತ-ಮೇಷೇ ।**

**ತದ್ವಾಂ ನರಾವಶ್ವಿನಾ ಪಶ್ವಇಷ್ಟೀ ರಥ್ಯೇವ ಚಕ್ರಾ ಪ್ರತಿ ಯಂತಿ ಮಧ್ವಃ ॥ ೪ ॥**

॥ ಪದಪಾಠಃ ॥

ಯುವಂ । ಹ । ಘರ್ಮಂ । ಮಧುಽಮಂತಂ । ಅತ್ರಯೇ । ಅಪಃ । ನ । ಕ್ಷೋದಃ । ಅವೃಣೀತಂ । ಏಷೇ ।

ತತ್ । ವಾಂ । ನರೌ । ಅಶ್ವಿನಾ । ಪಶ್ವಃಽಇಷ್ಟಿಃ । ರಥ್ಯಾಽಇವ । ಚಕ್ರಾ । ಪ್ರತಿ । ಯಂತಿ । ಮಧ್ವಃ ॥ ೪ ॥

॥ ಸಾಯಣಭಾಷ್ಯಂ ॥

ಅತ್ರೇತಿಹಾಸಮಾಹುಃ। ಪ್ರವರ್ಗ್ಯೇಣ ಪ್ರಚರಂತಮತ್ರಿಂ ರಾಕ್ಷಸಾಸ್ತಪ್ತೇ ಘರ್ಮೇಽಪಾತಯನ್। ಸ ಚ ತಪ್ಯಮಾನೋಽಶ್ವಿನೌ ತುಷ್ಟಾವ । ತೌ ಚ ಸ್ತುತ್ಯಾ ಹೃಷ್ಟಮನಸಾವರಕ್ಷತಾಮಿತಿ । ಅಪರೇಽಗ್ನೌ ಕ್ಷಿಪ್ತಮಪಾಲಯತಾಮಿತ್ಯಾಹುರಿತಿ । ಹೇ ಅಶ್ವಿನೌ ಯುವಂ ಯುವಾಂ ಮಧುಮಂತಂ ಪಯೋಘೃತರೂಪಾಭ್ಯಾಂ ಮಧುಭ್ಯಾಂ ತದ್ವಂತಂ ಘರ್ಮಂ ದೀಪ್ತಂ ಪ್ರವರ್ಗ್ಯಮೇಷೇ ಸೌಖ್ಯಮಿಚ್ಛತೇಽತ್ರಯೇ

ಏತನ್ನಾಮ್ನೇ ಮಹರ್ಷಯೇ ಕ್ಷೋದಃ ಕ್ಷೋದಾಂಸಿ ಕ್ಷೋದ್ಯಮಾನಾನ್ಯಪೋ ನೋದಕಾನೀವಾವೃಣೀತಂ। ಅವಾರಯತಂ। ಔಷ್ಣ್ಯಂ ಶೈತ್ಯಸುಖಂ ಕೃತವಂತೌ। ತಪ್ತಘರ್ಮಸಕಾಶಾದ್ಭಕ್ಷಿತವಾನಿತ್ಯರ್ಥಃ। ಯದ್ವಾ। ಅತ್ರಯೇ ಕ್ಷೋದಃ। ಉದಕೇನಾನ್ಯೈತತ್। ತತ್ಸ್ಥಂ ಶೈತ್ಯಂ ಲಕ್ಷ್ಯತೇ। ಅಪಃ ಕ್ಷೋದೋ ನ। ಅಪ ಇತಿ ಷಷ್ಠ್ಯರ್ಥೇ ದ್ವಿತೀಯಾ। ಉದಕಾನಾಂ ಶೈತ್ಯಂ ಯಥಾ ಭವತಿ ತದ್ವತ್। ಪಕ್ಷಾಂತರೇ ತು ಘರ್ಮಂ ದೀಪ್ತಮಗ್ನಿಂ ಮಧುಮಂತಂ ಕೃತ್ವಾವೃಣೀತಂ। ಸುಖಯತಮಿತ್ಯರ್ಥಃ। ತಥಾ ಚ ಮಂತ್ರಾಂತರಂ। ತಪ್ತಂ ಘರ್ಮ್ಯಮೋಮ್ಯಾವಂತಮತ್ರಯೇ। ಋ. ೧-೧೧೨-೭। ಇತಿ। ತತ್ತಸ್ಮಾತ್ ಯಸ್ಮಾದೇವಂ ತಸ್ಮಾತ್ ಹೇ ನರೌ ನೇತಾರೌ ನರಾಕಾರೌ ವಾಶ್ವಿನಾಶ್ವಿನೌ ವಾಂ ಯುವಾಭ್ಯಾಂ ಪಶ್ವಇಷ್ಟಿಃ। ಪಶುರಿತ್ಯಗ್ನೇರ್ನಾಮ। ಅಗ್ನಿಃ ಪಶುರಾಸೀದಿತ್ಯಾದಿಶ್ರುತೇಃ। ತೈ. ಸಂ. ೫-೭-೨೬। ಯದ್ವಾ। ಪಶುಪ್ರಿಯತ್ವಾತ್ಪಶುರಿತ್ಯುಚ್ಯತೇ। ತಸ್ಯಾಗ್ನೇರಿಷ್ಟಿರ್ಭವತಿ। ಅಗ್ನೌ ಯಾಗಃ ಸರ್ವೋ ಯುಷ್ಮದರ್ಥಂ ಪ್ರವರ್ತತ ಇತ್ಯರ್ಥಃ। ಯದ್ವಾ। ಪಶುಸಾಧ್ಯೋ ಯಾಗೋ ಯುವಾಭ್ಯಾಂ ಪ್ರವರ್ತತ ಇತಿ ಶೇಷಃ। ಆಶ್ವಿನಂ ಧೂಮ್ರಲಲಾಮಮಾಲಭೇತ ಯೋ ದುರ್ಬ್ರಾಹ್ಮಣಃ ಸೋಮಂ ಪಿಪಾಸೇತ್। ತೈ. ಸಂ. ೨-೧-೧೦-೧। ಇತ್ಯಾದಿನಾಪ್ಯಶ್ವಿಭ್ಯಾಂ ಪಶುರ್ವಿಹಿತಃ। ತಥಾ ಮಧ್ವೋ ಮಧುಸದೃಶಾಃ ಸೋಮರಸಾ ಅಪಿ ಯುವಾಭ್ಯಾಂ ಪ್ರತಿ ಯಂತಿ। ಅಭಿಗಚ್ಛಂತಿ। ತತ್ರ ದೃಷ್ಟಾಂತಃ। ರಥ್ಯೇವ ಚಕ್ರಾ ರಥಸಂಬಂಧೀನಿ ಚಕ್ರಾ ಚಕ್ರಾಣೀವ। ತಾನಿ ಯಥಾ ಪ್ರವಣದೇಶಮಭಿಗಚ್ಛಂತಿ ತದ್ವತ್ ॥

॥ ಪ್ರತಿಪದಾರ್ಥ ॥

**(ಹೇ) ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ। **ಯುವಂ**—ನೀವಿಬ್ಬರೂ। **ಮಧುಮಂತಂ**—ಪಯೋಘೃತರೂಪವಾದ ಮಧು ವಿಶಿಷ್ಟವಾದ। **ಘರ್ಮಂ**—ದೀಪ್ತವಾದ ಅಗ್ನಿಯನ್ನು। **ಏಷೇ**—(ಅಗ್ನಿಯಲ್ಲಿ ಪ್ರಕ್ಷಿಪ್ತನಾಗಿ ಸೌಖ್ಯವನ್ನು) ಅಪೇಕ್ಷಿಸುವ। **ಅತ್ರಯೇ**—ಅತ್ರಿ ಎಂಬುವನಿಗೆ। **ಕ್ಷೋದಃ**—ಕ್ಷುಬ್ಧವಾದ। **ಅಪಃ ನ**—ಉದಕವು (ತಣ್ಣಗಿರುವಂತೆ)। **ಅವೃಣೀತಂ ಹ**—(ಅಗ್ನಿಯತಾಪವನ್ನು) ನಿವಾರಿಸಿ(ತಣ್ಣಗಿರುವಂತೆ) ಮಾಡಿದಿರಷ್ಟೇ। **ತತ್**—ಆದುದರಿಂದ। **ನರೌ**—ನೇತೃಗಳಾದ ಅಥವಾ ನರಾಕಾರರಾದ। **(ಹೇ) ಅಶ್ವಿನೌ**—ಎಲೈ ಅಶ್ವಿನಿದೇವತೆಗಳೇ। **ವಾಂ**—ನಿಮ್ಮಿಬ್ಬರಿಗೋಸ್ಕರ। **ಪಶ್ವಇಷ್ಟಿಃ**—ಅಗ್ನಿಯಲ್ಲಿ ಯಾಗವು ಅಥವಾ ಪಶುಯಾಗವು (ಪ್ರವೃತ್ತವಾಗಿದೆ)। **(ತಥಾ**—ಹಾಗೆಯೇ)। **ಮಧ್ವಃ**—ಮಧುಸದೃಶವಾದ (ಸೋಮರಸಗಳೂ)। **(ವಾಂ**—ನಿಮ್ಮಿಬ್ಬರನ್ನು)। **ರಥ್ಯಾ**—ರಥಸಂಬಂಧವಾದ। **ಚಕ್ರಾ ಇವ**—ಚಕ್ರಗಳು (ಅಭಿಮತಪ್ರದೇಶವನ್ನು ಸೇರುವಂತೆ)। **ಪ್ರತಿ ಯಂತಿ**—ಉದ್ದೇಶಿಸಿ ಹೊರಡುತ್ತವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಗ್ನಿಯಲ್ಲಿ ಪ್ರಕ್ಷಿಪ್ತನಾಗಿ ಬಿಡುಗಡೆಯನ್ನಪೇಕ್ಷಿಸುತ್ತಿದ್ದ ಅತ್ರಿಗೆ, ಪಯೋಘೃತರೂಪಮಧುಯುಕ್ತನಾಗಿ ಪ್ರದೀಪ್ತನಾಗಿದ್ದ ಅಗ್ನಿಯನ್ನು ಪ್ರಕ್ಷುಬ್ಧವಾದ ಉದಕದಂತೆ ತಣ್ಣಗಿರುವಹಾಗೆ ಮಾಡಿದರೆಂಬುದು ಪ್ರಸಿದ್ಧವಾಗಿದೆ; ಆದುದರಿಂದಲೇ, ಯಜ್ಞನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ನಿಮಗೋಸ್ಕರ ಈ ಪಶುಯಾಗವು ಪ್ರವೃತ್ತವಾಗಿರುವುದು ಮತ್ತು ಮಧುಸದೃಶವಾದ ಈ ಸೋಮರಸವು ಅರ್ಪಿತವಾಗಿರುವುದು.

## English Translation.

You rendered the heat as soothing as sweet butter to Atri ; wishing (for relief), and invested it with coolness, like water : therefore, for you, Ashwins, leaders (of rites), the fire-offering (is made) ; to you the Soma juices run like chariot wheels (down a declivity).

॥ ವಿಶೇಷವಿಷಯಗಳು ॥

ಪ್ರಕೃತ್ಯವಾದ ಋಕ್ಕನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕಾದರೆ **ಅಗ್ನಿ, ಅತ್ರಿ, ಅಶ್ವಿನೀ** ದೇವತೆಗಳು ಇವರುಗಳ ಸ್ವರೂಪವನ್ನು ಪರಸ್ಪರ ಸಂಬಂಧವನ್ನೂ ತಿಳಿದು, ಘರ್ಮಾತ್ಮಕವಾದ ಪ್ರವರ್ಗ್ಯದಲ್ಲಿ ಇವರ ಸ್ಥಾನವೇನು ಎಂಬದನ್ನು ಅರಿಯಬೇಕು.

**ಮಧುಮಂತಂ ಘರ್ಮಂ ಅತ್ರಯೇ................ಅವೃಣೀತಂ ಹ**—ಎಂಬ ವಾಕ್ಯಕ್ಕೆ ಎರಡು ವಿಧವಾದ ಅನ್ವಯವುಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಈ ಅನ್ವಯಗಳು **ಅತ್ರಿ ಘರ್ಮ** ಈ ಪದಗಳಿಗೆ ಹೇಳತಕ್ಕ ಅರ್ಥಕ್ಕನುಗುಣವಾಗಿರುತ್ತವೆ.

೧. ಮೊದಲನೆಯದಾಗಿ **ಅತ್ರಿ** ಎಂಬ ಮಹರ್ಷಿಗೆ ಅಶ್ವಿನೀದೇವತೆಗಳು ಸಹಾಯಮಾಡಿದ ಅಂಶವನ್ನು ತಿಳಿಸಿದೆಯೆಂದು ಸಾಯಣರು ಈ ಕಥಾ ಸಂದರ್ಭವನ್ನು ಸೂಚಿಸಿದ್ದಾರೆ.

**ಅತ್ರೇತಿಹಾಸಮಾಹುಃ ।ಪ್ರವರ್ಗ್ಯೇಣ ಪ್ರಚರಂತಮತ್ರಿಂ ರಾಕ್ಷಸಾಸ್ತಪ್ತೇ ಘರ್ಮೇಽಪಾತಯನ್ ।**
**ಸ ಚ ತಪ್ಯಮಾನೋಽಶ್ವಿನೌ ತುಷ್ಟಾವ । ತೌ ಚ ಸ್ತುತ್ಯಾ ಹೃಷ್ಟಮನಸಾವರಕ್ಷತಾಮಿತಿ ॥**

ಪ್ರವರ್ಗ್ಯಕಾಲದಲ್ಲಿ ಪೂಜಾನಿರತನಾಗಿದ್ದ **ಅತ್ರಿ**ಯನ್ನು ರಾಕ್ಷಸರು ಪ್ರದೀಪ್ತವಾಗಿದ್ದ ಅಗ್ನಿಯಲ್ಲಿ ತಳ್ಳಿದರು. ಆಗ ಅತ್ರಿಯು ಅಶ್ವಿನೀ ದೇವತೆಗಳಲ್ಲಿ ಮೊರೆಯಿಟ್ಟು ರಕ್ಷಿಸಬೇಕೆಂದು ಅವರಲ್ಲಿ ಪ್ರಾರ್ಥಿಸಿದನು. ಅವರು ತುಷ್ಟರಾಗಿ ಇವನನ್ನು ರಕ್ಷಿಸಿದರು ಎಂದಿದೆ.

೨. ಎರಡನೆಯದಾಗಿ ಪ್ರಕೃತವಾದ ಋಕ್ಕಿನಲ್ಲಿ **ಮಧಮಂತಂ ಘರ್ಮಂ ಅತ್ರಯೇ ಅವೃಣೀತಂ** ಎಂದಿರುವಂತೆ ಋ. ಸಂ. ೧-೧೧೨-೭ ನೇ ಋಕ್ಕಿನಲ್ಲಿ **ತಪ್ತಂ ಘರ್ಮಮೋಮ್ಯಾವಂತಮತ್ರಯೇ** ಎಂದಿದೆ. ಆ ಸಂದರ್ಭದಲ್ಲಿ ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಅರ್ಥಮಾಡಿರುವಂತೆಯೇ ತಾತ್ಪರ್ಯವನ್ನು ವಿವರಿಸಿದ್ದಾರೆ. ಆದರೆ ಇಲ್ಲಿ ಯಾಸ್ಕಪಕ್ಷವನ್ನೂ ಉದಾಹರಿಸಿ :"**ಯಾಸ್ಕಪಕ್ಷೇ ತು ಅತ್ರಯೇ ಹವಿಷಾಮತ್ತ್ರೇಽಗ್ನಯೇ ಹವಿರುತ್ಪತ್ತ್ಯರ್ಥಂ ಸೂರ್ಯಕಿರಣಸಂತಪ್ತಂ ಘರ್ಮಂ ನೈದಾಘಂ ಅಹಃ ಓಮ್ಯಾವಂತಂ ತೃಪ್ತಿಹೇತು-ವೃಷ್ಟ್ಯುದಕೋಪೇತಂ ಕೃತವಂತೌ ಇತಿ ಯೋಜ್ಯಂ ।**" ಯಾಸ್ಕಮತದಲ್ಲಿ **ಅತ್ರಿ**ಶಬ್ದಕ್ಕೆ ಹವಿಸ್ಸನ್ನು ಭಕ್ಷಿಸತಕ್ಕ **ಅಗ್ನಿ**ಯೆಂದೂ, ಇಂತಹ ಅಗ್ನಿಗೆ ಸೂರ್ಯಕಿರಣಸಂಪತ್ತವಾದುದೂ, ನಿದಾಘಕಾಲಿಕವಾದುದೂ ಆದ ಅಹಸ್ಸನ್ನು ತೃಪ್ತಿಕರವಾದ ವೃಷ್ಟ್ಯುದಕದಿಂದ ಕೂಡಿದುದನ್ನಾಗಿ ಮಾಡಿದರು ಎಂದರ್ಥವಾಗುತ್ತದೆಂದೂ ವಿವರಿಸಿದ್ದಾರೆ. ಪ್ರಕೃತವಾದ ಋಕ್ಕನ್ನು ವಿವರಿಸುವಾಗಲೂ ಸಹ ಸಾಯಣರು ೧-೧೧೨-೭ ನೇ ಋಕ್ಕನ್ನೇ ಉದಾಹರಿಸಿ—ಪಕ್ಷಾಂತರೇ ತು ಘರ್ಮಂ ದೀಪ್ತಮಗ್ನಿಂ ಮಧುಮಂತಂ ಕೃತ್ವಾ ಅವೃಣೀತಂ............ತಥಾ ಚ ಮಂತ್ರಾಂತರಂ— "ತಪ್ತಂ ಘರ್ಮ-

ಮೋನ್ಯಾನಂತಮುತ್ರಯೇ........" ಎಂದು ವಿವರಿಸಿದ್ದಾರೆ. ಆದುದರಿಂದ ಅತ್ರಿ ಶಬ್ದಕ್ಕೆ ಅತ್ರಿಋಷಿಯ ಪರವಾದ ಅರ್ಥವೊಂದು ಮತ್ತು ಅಗ್ನಿಪರವಾದ ಅರ್ಥವೊಂದು ಎಂದು ಎರಡರ್ಥವನ್ನೂ ಹೇಳಬಹುದಾಗಿ ತೋರುತ್ತದೆ. ಅಥವಾ ಅತ್ರಿಋಷಿಯು ಅಗ್ನಿದೇವನ ಅಂಶವೇ ಆದುದರಿಂದ ಇಬ್ಬರಿಗೂ ತಾದಾತ್ಮ್ಯವನ್ನೂ ಸಹ ಹೇಳಬಹುದು ಅತ್ರಿಯು ಅಗ್ನಿಪುತ್ರನೆಂದು ಕೆಲವೆಡೆಗಳಲ್ಲಿಯೂ, ಅಗ್ನಿರೂಪನೇ ಎಂದೂ ಇನ್ನೂ ಕೆಲವೆಡೆಗಳಲ್ಲಿಯೂ ತಿಳಿಸಿದೆ. ಅತ್ರಿಋಷಿಯ ಉತ್ಪತ್ತಿಯ ಕಥೆಯನ್ನು ಬೃಹದ್ದೇವತಾವಾಕ್ಯಗಳಲ್ಲಿ ಈ ರೀತಿ ತಿಳಿಸಿದೆ.

**ತ್ರಿಸಾಂವತ್ಸರಿಕಂ ಸತ್ರಂ ಪ್ರಜಾಕಾಮಃ ಪ್ರಜಾಪತಿಃ ।**
**ಆಹರತ್ಸಹಿತಃ ಸಾಧ್ಯೈರ್ವಿಶ್ವೇದೇವೈಃ ಸಹೇತಿ ಚ ॥**
**ತತ್ರ ವಾಗ್ದೀಕ್ಷಣೀಯಾಯಾಂ ಆಜಗಾಮ ಶರೀರಿಣೀ ।**
**ತಾಂ ದೃಷ್ಟ್ವಾ ಯುಗಪತ್ತತ್ರ ಕಸ್ಯಾಥ ವರುಣಸ್ಯ ಚ ॥**
**ಶುಕ್ರಂ ಚಸ್ಕಂದ ತದ್ವಾಯುರಗ್ನೌ ಪ್ರಾಸ್ಯದ್ಯದೃಚ್ಛಯಾ ।**
**ತತೋಽರ್ಚಿಭ್ಯೋ ಭೃಗುರ್ಜಜ್ಞೇ ಅಂಗಾರೇಷ್ವಂಗಿರಾ ಋಷಿಃ ॥**
**ಪ್ರಜಾಪತಿಂ ಸುತೌ ದೃಷ್ಟ್ವಾ ದೃಷ್ಟ್ವಾ ವಾಗಭ್ಯಭಾಷತ ।**
**ಆಭ್ಯಾಮೃಷಿಸ್ತೃತೀಯೋಽಪಿ ಭವೇದತ್ರೈವ ಮೇ ಸುತಃ ॥**
**ಪ್ರಜಾಪತಿಸ್ತಥೇತ್ಯುಕ್ತಃ ಪ್ರತ್ಯಭಾಷತ ಭಾರತೀಂ ।**
**ಋಷಿರತ್ರಿಸ್ತತೋ ಜಜ್ಞೇ ಸೂರ್ಯಾನಲಸಮದ್ಯುತಿಃ ॥**

(ಬೃ. ದೇ. ೫-೯೭ರಿಂದ ೧೦೧)

ಪ್ರಜಾಪತಿಯು ಪ್ರಜಾಕಾಮನಾಗಿ, ಸಾಧ್ಯರೊಡನೆಯೂ ವಿಶ್ವೇದೇವತೆಗಳೊಡನೆಯೂ ಕೂಡಿಕೊಂಡು ತ್ರಿಸಂವತ್ಸರಾತ್ಮಕವಾದ ಸತ್ರವನ್ನು ಆಚರಿಸಿದನೆಂಬುದು ಪ್ರಸಿದ್ಧವಾಗಿದೆ. ಆ ಕಾಲದಲ್ಲಿ ವಾಗ್ದೇವಿಯು ಸಶರೀರಳಾಗಿ ಆ ಸತ್ರಕ್ಕೆ ಬಂದಳು. ಅವಳನ್ನು ನೋಡಿದೊಡನೆಯೇ ಪ್ರಜಾಪತಿಯ ಮತ್ತು ವರುಣನ ರೇತಸ್ಸ್ಖಲನವಾಯಿತು, ವಾಯುವು ಅದನ್ನು ಅಗ್ನಿಯಲ್ಲಿ ಸೇರಿಸಿದನು. ಆಗ ಆ ಅಗ್ನಿಯ ಜ್ವಾಲೆಗಳಿಂದ ಭೃಗುವೂ, ಅಂಗಾರದಿಂದ ಅಂಗೀರಸ್ಸೂ ಹುಟ್ಟಿದರು. ಆಗ ವಾಗ್ದೇವಿಯು ಈ ಇಬ್ಬರು ಪುತ್ರರ ಜೊತೆಯಲ್ಲಿ ಇನ್ನೊಬ್ಬ ಪುತ್ರನೂ ಉತ್ಪನ್ನರಾಗಲಿ ಎಂದು ಕೇಳಿಕೊಂಡಳು. ಪ್ರಜಾಪತಿಯು ಇನ್ನೊಬ್ಬ ಪುತ್ರನೂ ಉತ್ಪನ್ನನಾಗಲಿ ಎಂದು ಅನುಗ್ರಹಿಸಿದಾಗ ಅಗ್ನಿಯಲ್ಲಿ ಪ್ರಕ್ಷಿಪ್ತವಾಗಿದ್ದ ಆ ರೇತಸ್ಸಿನಿಂದ ಸೂರ್ಯಾಗ್ನಿಗಳ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ಅತ್ರಿಯು ಉತ್ಪನ್ನನಾದನು ಎಂಬ ಕಥೆಯಿದೆ. ಅಲ್ಲದೇ, ಯಾಸ್ಕರು ಅತ್ರಿ ಪದಕ್ಕೆ ಅಗ್ನಿಪರವಾದ ಅರ್ಥವನ್ನು ಹೇಳುವಾಗ **ಹವಿಷಾಮತ್ರೇ** ಎಂದರೆ ಹವಿಸ್ಸನ್ನು ಭಕ್ಷಿಸುವುದರಿಂದ ಅಗ್ನಿಗೆ ಅತ್ರಿಯೆಂಬ ಹೆಸರು ಎಂಬ ವಿಷಯವನ್ನು ತಿಳಿಸಿದ್ದಾರೆ. ಅಗ್ನಿಯು ಕೇವಲ ಹವಿಸ್ಸನ್ನು ಭಕ್ಷಿಸುವವನು ಮಾತ್ರವಲ್ಲ, ಸಕಲವನ್ನೂ ಭಕ್ಷಿಸುವವನು ಎಂದೂ ಸಹ ಋಕ್ಸಂಹಿತಾವಾಕ್ಯದಿಂದಲೇ ವರ್ಣಿತವಾಗಿದೆ. ಉದಾಹರಣೆಗೆ—

**ಯತ್ತೇ ಕೃಷ್ಣಃ ಶಕುನ ಆತುತೋದ ಪಿಪೀಲಃ ಸರ್ಪ ಉತ ವಾ ಶ್ವಾಪದಃ ।**
**ಅಗ್ನಿಷ್ಟದ್ವಿಶ್ವಾದಗದಂ ಕೃಣೋತು ಸೋಮಶ್ಚ ಯೋ ಬ್ರಾಹ್ಮಣಾಁ ಆವಿವೇಶ ॥**

(ಋ. ಸಂ. ೧೦-೧೬-೬)

ಎಂಬ ಋಕ್ಕಿನಲ್ಲಿ ಅಗ್ನಿಯನ್ನು **ವಿಶ್ವಾತ್** ಎಂದರೆ ಸರ್ವಸ್ಯ **ಅತ್ತಾ** ಎಂದು ಸ್ತುತಿಸಿದೆ. ಮತ್ತು,

**ಯುವಾನಂ ವಿಶ್ಪತಿಂ ಕವಿಂ ವಿಶ್ವಾದಂ ಪುರುವೇಪಸಂ । ಅಗ್ನಿಂ ಶುಂಭಾಮಿ ಮನ್ಮಭಿಃ ॥**
(ಋ. ಸಂ. ೮-೪೪-೨೬)

ಎಂಬಲ್ಲಿಯೂ ಸಹ ಇದೇ ವಿಶೇಷಣದಿಂದ ಅಗ್ನಿಯನ್ನು ಸ್ತುತಿಸಿದೆ. ಈ ಆಧಾರಗಳಿಂದ **ಅತ್ರಿ**ಯೆಂದರೆ ಸನ್ನಿವೇಶಕ್ಕನುಗುಣವಾಗಿ ಕೆಲವೆಡೆಗಳಲ್ಲಿ ಅಗ್ನಿಯೆಂದೂ ಅರ್ಥಮಾಡಬಹುದು.

ಈ ವಿಶೇಷಣಗಳೇ ಅಲ್ಲದೇ **ಅಗ್ನಿಗೂ, ಅತ್ರಿಗೂ** ತಾದಾತ್ಮ್ಯವನ್ನು ಹೇಳತಕ್ಕ ಅನೇಕಸಂದರ್ಭಗಳು ಋಕ್ಸಂಹಿತೆಯಲ್ಲಿ ಸೂಚಿತವಾಗಿವೆ. ಉದಾಹರಣೆಗೆ—

**ಋಷಿಂ ನರಾವಂಹಸಃ ಪಾಂಚಜನ್ಯಮೃಬೀಸಾದತ್ರಿಂ ಮುಂಚಥೋ ಗಣೇನ ।**
**ಮಿನಂತಾ ದಸ್ಯೋರಶಿವಸ್ಯ ಮಾಯಾ ಅನುಪೂರ್ವಂ ವೃಷಣಾ ಚೋದಯಂತಾ ॥**
(ಋ. ಸಂ. ೧-೧೧೭-೩)

ಎಂಬಲ್ಲಿ (ಅಶ್ವಿನೀದೇವತಾಪರವಾದ ಋಕ್ಕಿನಲ್ಲಿ) **ಅತ್ರಿಗೆ ಪಾಂಚಜನ್ಯ** ವೆಂಬ ವಿಶೇಷಣವಿದೆ. ಇದರಂತೆ,

**ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ । ತಮೀಮಹೇ ಮಹಾಗಯಂ ॥**
(ಋ. ಸಂ. ೯-೬೬-೨೦)

ಎಂಬಿವೇ ಮುಂತಾದ ಋಕ್ಕುಗಳಲ್ಲಿ **ಪಾಂಚಜನ್ಯ** ಪದವು **ಅಗ್ನಿಗೆ** ವಿಶೇಷಣವಾಗಿದೆ. **ಪಾಂಚಜನ್ಯ** ಪದಕ್ಕೆ ಯಾವ ಅರ್ಥವನ್ನು ಹೇಳಿದರೂ ಸರಿ. ಅದು **ಅಗ್ನಿ** ಮತ್ತು **ಅತ್ರಿ** ಇಬ್ಬರಿಗೂ ವಿಶೇಷಣವಾಗಿರುವುದು ಒಂದು ವಿಶೇಷ. ಅವರವರ ನಿಕಟನವಾದ ಸಂಬಂಧನನ್ನು ಸೂಚಿಸುವ ವಿಶೇಷಣವೆಂದರೆ ತಪ್ಪಾಗಲಾರದು. ಮತ್ತು ಪ್ರಕೃತವಾದ ಋಕ್ಕಿನಲ್ಲಿ ಘರ್ಮಸ್ಥನಾದ ಅತ್ರಿಯನ್ನು ಅಶ್ವಿನೀದೇವತೆಗಳು ರಕ್ಷಿಸಿದರು ಎಂದಿರುವಂತೆಯೇ,

**ಅಗ್ನಿರ್ಹ ತ್ಯಂ ಜರತಃ ಕರ್ಣಮಾವಾಗ್ನಿರದ್ಭ್ಯೋ ನಿರದಹಜ್ಜರೂಥಂ ।**
**ಅಗ್ನಿರತ್ರಿಂ ಘರ್ಮ ಉರುಷ್ಯದಂತರಗ್ನಿರ್ನೃಮೇಧಂ ಪ್ರಜಯಾಸೃಜತ್ಸಂ ॥**
(ಋ ಸಂ ೧೦-೮೦-೩)

ಎಂಬಲ್ಲಿ ಘರ್ಮಸ್ಥನಾದ ಅತ್ರಿಯನ್ನು ಅಗ್ನಿಯು ರಕ್ಷಿಸಿದನು ಎಂದಿದೆ. **ಅತ್ರಿಯ** ಅಸಾಧಾರಣವಾದ ದೈವೀ ಗುಣಗಳು ಋಕ್ಸಂಹಿತೆಯ ೫ ನೇ ಮಂಡಲದ ೪೦ ನೇ ಸೂಕ್ತದಲ್ಲಿ ಅತಿಶಯವಾಗಿ ವರ್ಣಿತವಾಗಿದೆ. ಆ ಸೂಕ್ತದಲ್ಲಿ ಕೆಲವು ಮಂತ್ರಗಳನ್ನು ಮಾತ್ರ ಪರಿಶೀಲಿಸಿದರೆ, ಇಲ್ಲಿ ಪ್ರಾರ್ಥಿತವಾಗಿರುವ ದೇವತೆಗಳು **ಸೂರ್ಯ, ಇಂದ್ರ** ಮತ್ತು **ಅತ್ರಿ**

**ಯತ್ತ್ವಾ ಸೂರ್ಯ ಸ್ವರ್ಭಾನುಸ್ತಮಸಾವಿಧ್ಯದಾಸುರಃ ।**
**ಅಕ್ಷೇತ್ರವಿದ್ಯಥಾ ಮುಗ್ಧೋ ಭುವನಾನ್ಯದೀಧಯುಃ ।**
**ಸ್ವರ್ಭಾನೋರಧ ಯದಿಂದ್ರ ಮಾಯಾ ಅವೋ ದಿವೋ ವರ್ತಮಾನಾ ಅವಾಹನ್ ।**
**ಗೂಳ್ಹಂ ಸೂರ್ಯಂ ತಮಸಾಪವ್ರತೇನ ತುರೀಯೇಣ ಬ್ರಹ್ಮಣಾವಿಂದದತ್ರಿಃ ॥**
(ಋ. ಸಂ. ೫–೪೦–೫ ರಿಂದ ೬)

ಎಂಬಲ್ಲಿ ಸ್ವರ್ಭಾನುವು ಸೂರ್ಯನನ್ನು ಕತ್ತಲಿನಿಂದ ಮುಚ್ಚಿದೊಡನೆಯೇ ಸಕಲಪ್ರಾಣಿಗಳೂ ಭ್ರಾಂತವಾದುವು. ಆಗ ಇಂದ್ರನು ಅಸುರನನ್ನು ಕೆಳಕ್ಕೆ ಕೆಡುಹಿದನು. ಅತ್ರಿಯು ತನ್ನ ದಿವ್ಯಚಕ್ಷುಸ್ಸಿನಿಂದ ಕತ್ತಲಿನಿಂದ ಆವೃತವಾದ ಸೂರ್ಯನಿರುವೆಡೆಯನ್ನು ತಿಳಿದನು ಎಂದಿದೆ. ಮತ್ತು,

**ಗ್ರಾವ್ಣೋ ಬ್ರಹ್ಮಾ ಯುಯುಜಾನಃ ಸಪರ್ಯನ್ ಕೀರಿಣಾ ದೇವಾನ್ನಮಸೋಪಶಿಕ್ಷನ್ ।**
**ಅತ್ರಿಃ ಸೂರ್ಯಸ್ಯ ದಿವಿ ಚಕ್ಷುರಾಧಾತ್ಸ್ವರ್ಭಾನೋರಪ ಮಾಯಾ ಅಘುಕ್ಷತ್ ॥**
**ಯಂ ವೈ ಸೂರ್ಯಂ ಸ್ವರ್ಭಾನುಸ್ತಮಸಾವಿಧ್ಯದಾಸುರಃ ।**
**ಅತ್ರಯಸ್ತಮನ್ವವಿಂದನ್ನಹ್ಯ ೧ ನ್ಯೇ ಅಶಕ್ನುವನ್ ॥**

(ಋ. ಸಂ. ೫-೪೦.೮ ರಿಂದ ೯)

ಎಂಬಲ್ಲಿ ಯಾಗನಿರತನಾದ ಅತ್ರಿಯು ತನ್ನ ದಿವ್ಯಶಕ್ತಿಯಿಂದಲೂ, ದೈವಶಕ್ತಿಯಿಂದಲೂ ಆದಿತ್ಯನ ಚಕ್ಷುಸ್ಸನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನು. ಮತ್ತು ಸ್ವರ್ಭಾನುವಿನ ಶಕ್ತಿಯನ್ನು ನಾಶಮಾಡಿದನು ಎಂದಿದೆ. ಇದೇ ಸೂಕ್ತದಲ್ಲಿ ಸೂರ್ಯನು ಅತ್ರಿಗೆ ತನ್ನ ಕೃತಜ್ಞತೆಯನ್ನು ತೋರಿಸುತ್ತಾ,

**ಮಾ ಮಾಮಿಮಂ ತವ ಸಂತಮತ್ರ ಇರಸ್ಯಾ ದ್ರುಗ್ಧೋ ಭಿಯಸಾ ನಿ ಗಾರೀತ್ ।**
**ತ್ವಂ ಮಿತ್ರೋ ಅಸಿ ಸತ್ಯರಾಧಾಸ್ತೌ ಮೇಹಾವತಂ ವರುಣಶ್ಚ ರಾಜಾ ॥**

(ಋ. ಸಂ. ೫-೪೦-೭)

ಎಂಬ ಋಕ್ಕಿನಲ್ಲಿ ಸೂರ್ಯನು ಅತ್ರಿಯ ಸಹಾಯವನ್ನಪೇಕ್ಷಿಸುತ್ತಾನೆ. ಮತ್ತು "ನಾನು ನಿನ್ನವನು; ನಿನಗೆ ಸೇರಿದವನು. ನನ್ನನ್ನು ಅಸುರರಿಗೆ ಬಿಟ್ಟುಕೊಡಬೇಡ" ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ಈ ಮಂತ್ರದಲ್ಲಿರುವ ವರ್ಣನೆಯೂ ಮತ್ತು ಪ್ರಾರ್ಥನೆಯೂ ಅಗ್ನಿಯನ್ನುದ್ದೇಶಿಸಿದ ಪ್ರಾರ್ಥನೆಯಂತಿದೆ. ಈ ಸನ್ನಿವೇಶಗಳಲ್ಲದೆ, ಅತ್ರಿಮಂಡಲವೆಂದು ಪ್ರಸಿದ್ಧವಾಗಿರುವ ಐದನೆಯ ಮಂಡಲದಲ್ಲಿ ಕೆಲವು ಸನ್ನಿವೇಶಗಳನ್ನು ಪರಿಶೀಲಿಸಿದರೆ ಆಗಲೂ ಸಹ ಅಗ್ನಿಗೂ ಅತ್ರಿಗೂ ಇರತಕ್ಕ ನಿಕಟವಾದ ಸಂಬಂಧವು ತೋರುತ್ತದೆ. ಉದಾಹರಣೆಗೆ—ಐದನೆಯ ಮಂಡಲದ ಎರಡನೇ ಸೂಕ್ತದ ಕರ್ತೃವು ಅತ್ರಿಗೋತ್ರೋದ್ಭವನಾದ **ಕುಮಾರನೆಂಬ** ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಆದರೆ,

**ಕುಮಾರಂ ಮಾತಾ ಯುವತಿಃ ಸಮುಬ್ಧಂ ಗುಹಾ ಬಿಭರ್ತಿ ನ ದದಾತಿ ಪಿತ್ರೇ ।**
**ಅನೀಕಮಸ್ಯ ನ ಮಿನಜ್ಜನಾಸಃ ಪುರಃ ಪಶ್ಯಂತಿ ನಿಹಿತಮರತೌ ॥**

(ಋ. ಸಂ. ೫-೨-೧)

ಎಂಬಲ್ಲಿ **ಕುಮಾರಂ** ಎಂಬುದು **ಅಗ್ನಿಗೆ** ವಿಶೇಷಣವಾಗಿದೆಯೆಂಬುದನ್ನು ಸಾಯಣವ್ಯಾಖ್ಯಾನದಲ್ಲಿ ತಿಳಿಸಿದೆ. ಮತ್ತು, ಹೀಗೆಯೇ **ವಸುಶ್ರುತ, ಈಶ, ಗಯ** ಇತ್ಯಾದ್ಯಾತ್ರೇಯರ ವಿಷಯದಲ್ಲೂ ಸಹ ಆಗ್ನೇಯವಾದ ಅಂಶವನ್ನು ನೋಡಬಹುದು. **ಅದ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆಯೆಂದು ತಿಳಿಸುತ್ತಾ, ಉಪನಿಷತ್ತುಗಳಲ್ಲೂ ಸಹ **ಅತ್ರಿಯ** ವಿಷಯವನ್ನು ಈ ರೀತಿ ಸ್ತುತಿಸಿದೆ.

**ವಾಗೇವಾತ್ರಿರ್ವಾಚಾ ಹ್ಯನ್ನಮದ್ಯತೇಽತ್ತಿರ್ಹ ವೈ ನಾಮೈತದತ್ರಿರಿತಿ ಸರ್ವಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಂ ವೇದ ॥**　(ಬೃ. ಉ. ೨-೨-೪)

ಇತ್ಯಾದಿ ವಾಕ್ಯಗಳಿಂದ ಪರಬ್ರಹ್ಮಾತ್ಮಕವಾದ **ಅತ್ರಿ** ಶಬ್ದದ ವರ್ಣನೆಯಿದೆ. ಇದೇ ಅರ್ಥದಲ್ಲಿ ಋಕ್ಸಂಹಿತೆಯಲ್ಲಿ ಸಹ **ಅತ್ರಿ** ಶಬ್ದವು ಅನೇಕ ಕಡೆಗಳಲ್ಲಿ ಅಗ್ನಿಗೆ ವಿಶೇಷಣಪದವಾಗಿ ಪ್ರಯೋಗಿಸಲ್ಪಟ್ಟಿದೆ.

ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳು ತಪ್ತವಾದ ಅಗ್ನಿಕುಂಡದಲ್ಲಿ ಬಿದ್ದಿದ್ದ ಅತ್ರಿಋಷಿಯನ್ನು ರಕ್ಷಿಸಿದರು ಎಂಬುದು ಮೊದಲನೆಯ ಅರ್ಥ. ಎರಡನೆಯದಾಗಿ, ಘರ್ಮಸ್ಥನಾದ ಅಗ್ನಿಗೆ ಶೈತ್ಯೋಪಚಾರವನ್ನು ಮಾಡಿದರು

ಎಂದರ್ಥವಾಗುತ್ತದೆ. ಆದರೆ ಇಲ್ಲಿ ಘರ್ಮವೆಂದರೇನು? ಅಲ್ಲಿ ಅಗ್ನಿಗೆ ಉಪಚಾರವೇನು ಎಂಬುದನ್ನು ಅರಿಯ ಬೇಕು. ಸಾಯಣರು **ಘರ್ಮ** ಪದಕ್ಕೆ **ಪ್ರವರ್ಗ್ಯ** ವೆಂದರ್ಥಮಾಡಿದ್ದಾರೆ. **ಘರ್ಮ**ವೂ **ಪ್ರವರ್ಗ್ಯ**ವೂ ತಾದಾತ್ಮ್ಯ ಬೋಧಕವಾದ ಪದಗಳೇ, ಎರಡಕ್ಕೂ ಒಂದೇ ಅರ್ಥವೇ, ಇದಕ್ಕೆ ಶ್ರುತಿವಾಕ್ಯಗಳ ಆಧಾರವೇನು ? **ಘರ್ಮ**ದ ಅಥವಾ **ಪ್ರವರ್ಗ್ಯ**ದ ಸ್ವರೂಪವೇನು ಎಂಬುದನ್ನು ಈಗ ಪರಿಶೀಲಿಸಬೇಕು. ಅಲ್ಲದೆ ಅಶ್ವಿನೀದೇವತೆಗಳು ಪ್ರವರ್ಗ್ಯಕ್ಕೆ ಯಾವ ವಿಧವಾದ ನೇತೃತ್ವವನ್ನು ವಹಿಸುವರು ಎಂಬುದನ್ನು ತಿಳಿಯಬೇಕು. ಮುಂದೆ ಋ. ಸಂ. ೧-೧೮೦-೯ ನೇ ಋಕ್ಕಿನಲ್ಲಿ ಉದಾಹೃತವಾಗುವ ತೈತ್ತಿರೀಯಾರಣ್ಯಕದ ವಾಕ್ಯಗಳಲ್ಲಿ ಪ್ರವರ್ಗ್ಯಕ್ಕೂ ಅಶ್ವಿನೀದೇವತೆಗಳಿಗೂ ಇರುವ ಸಂಬಂಧವನ್ನು ವಿಶದವಾಗಿ ತಿಳಿಸಿದೆ. ಪ್ರಕೃತದಲ್ಲಿ ಆ ಅಂಶವನ್ನು ಸೂಕ್ಷ್ಮವಾಗಿ ತಿಳಿಸಲಾಗುವುದು.

> **ತಾಭ್ಯಾಮೇತಮಾಶ್ವಿನಮಗೃಹ್ಣನ್ । ತಾವೇತದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ । ಯತ್ಪ್ರವರ್ಗ್ಯಃ । ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಾಃ । ಅವಾಶಿಷೋಽರುಂಧತ । ಅಭಿ ಸುವರ್ಗಂ ಲೋಕಮಜಯನ್ ।**

(ತೈ. ಆ. ೫-೧-೭)

ದೇವತೆಗಳು ದೇವವೈದ್ಯರಾದ ಅಶ್ವಿನೀದೇವತೆಗಳನ್ನು ಸಮೀಪಿಸಿ " ನೀವು ಭಿಷಕ್ಕುಗಳಾಗಿದ್ದೀರಿ. ಯಜ್ಞಶಿರಸ್ಸಾದ ಪ್ರವರ್ಗ್ಯವನ್ನು ಪುನಃ ಸವನತ್ರಯಾತ್ಮಕವಾದ ಯಜ್ಞದೇಹದೊಡನೆ ಸೇರಿಸಿರಿ " ಎಂದು ಪ್ರಾರ್ಥಿಸಿದಾಗ ಅವರು ತಮಗೂ ಯಜ್ಞಫಲದ ಭಾಗಾರ್ಹತ್ವವನ್ನು ಸಂಪಾದಿಸಿಕೊಂಡು ದೇವತೆಗಳ ಪ್ರಾರ್ಥನೆಯನ್ನು ನೆರವೇರಿಸಿದರು, ಆದುದರಿಂದ,

> **ಯತ್ಪ್ರವರ್ಗ್ಯಂ ಪ್ರವೃಣಕ್ತಿ । ಯಜ್ಞಸ್ಯೈವ ತಚ್ಛಿರಃ ಪ್ರತಿದಧಾತಿ । ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಃ । ಅವಾಶಿಷೋ ರುಂಧೇ । ಅಭಿ ಸುವರ್ಗಂ ಲೋಕಂ ಜಯತಿ । ತಸ್ಮಾದೇಷ ಆಶ್ವಿನಪ್ರವಯಾ ಇವ । ಯತ್ಪ್ರವರ್ಗ್ಯಃ ॥**

(ತೈ. ಆ. ೫-೧-೭)

ಹೀಗೆ ದೇವತೆಗಳೂ ಸಹ ಪ್ರಧಾನವೆಂದು ಪೂಜಿಸಿದ ಪ್ರವರ್ಗ್ಯಾಖ್ಯವಾದ ಕರ್ಮಾಚರಣೆಯಿಂದ ಯಜಮಾನನು ತನ್ನ ಅಭೀಷ್ಟವನ್ನು ಸಾಧಿಸುವನು ಮತ್ತು ಸ್ವರ್ಗಲೋಕವನ್ನು ಪಡೆಯುವನು ಎಂದು ಇದರ ಮಹತ್ತ್ವವನ್ನು ಪ್ರಶಂಸಿಸಿದೆ. ಆಶ್ವಿನಮಂತ್ರಗಳೂ, ಅಶ್ವಿನೀದೇವತೆಗಳ ಪ್ರಾಶಸ್ತ್ಯವೂ ಈ ಕರ್ಮಕಾಲದಲ್ಲಿ ಪ್ರಧಾನವಾಗಿರುತ್ತದೆಯಾದುದರಿಂದ ಇದಕ್ಕೆ " **ಆಶ್ವಿನಪ್ರವಯಾಃ** " ಎಂಬ ಪರ್ಯಾಯನಾಮವೂ ಇರುತ್ತದೆ. ಅನಂತರ **ಘರ್ಮ ಪ್ರವರ್ಗ್ಯ** ಈ ಪದಗಳ ಅರ್ಥವೇನು ಎಂಬುದನ್ನು ತಿಳಿಯಬೇಕು. ತೈತ್ತಿರೀಯಾರಣ್ಯಕದಲ್ಲಿ ೪ ನೇ ಪ್ರಪಾಠಕದಲ್ಲಿ ಇದರ ಅನುಷ್ಠಾನ ಕ್ರಮವನ್ನು ತಿಳಿಸಿದೆ. ಈ ಸಂದರ್ಭದಲ್ಲಿ ವ್ಯಾಖ್ಯಾನಮಾಡುತ್ತಾ ಸಾಯಣರು **ಪ್ರವರ್ಗ್ಯ, ಘರ್ಮ** ಎಂಬ ಶಬ್ದಗಳಿಗೆ ವಿವರಣೆಯನ್ನು ಹೇಳತಕ್ಕ ಐದನೇ ಪ್ರಪಾಠಕದ ವಾಕ್ಯಗಳನ್ನುದಾಹರಿಸಿ ಈ ಪದಗಳ ಅರ್ಥಗಳನ್ನು ವಿವರಿಸಿರುತ್ತಾರೆ.

> **ಸ ಧನುಃ ಪ್ರತಿಷ್ಕಭ್ಯಾತಿಷ್ಠತ್ । ತಾ ಉಪದೀಕಾ ಅಬ್ರುವನ್ವರಂ ವೃಣಾಮಹೈ । ಅಥ ವ ಇಮಗ್ಂ ರಂಧಯಾಮ । ಯತ್ರ ಕ್ವ ಚ ಖನಾಮ । ತದಪೋಽಭಿತೃಣದಾಮೇತಿ । ತಸ್ಮಾದುಪದೀಕಾ ಯತ್ರ ಕ್ವ ಚ ಖನಂತಿ । ತದಪೋಽಭಿತೃಂದಂತಿ । ವಾರೇ ವೃತಗ್ಂ ಹ್ಯಾಸಾಂ । ತಸ್ಯ**

**ಜ್ಯಾಮುಪ್ಯಾದನ್ । ತಸ್ಯ ಧನುರ್ವಿಪ್ರವಮಾಣಗ್ಂ ಶಿರ ಉದವರ್ತಯತ್ । ತೇದ್ಯಾವಾ-ಪೃಥಿವೀ ಅನುಪ್ರಾವರ್ತತ । ಯತ್ಪ್ರಾವರ್ತತ । ತತ್ಪ್ರವರ್ಗ್ಯಸ್ಯ ಪ್ರವರ್ಗ್ಯತ್ವಂ । ಯದ್ಘ್ರಾಂ ಳ ಇತ್ಯಪತತ್ । ತದ್ಘರ್ಮಸ್ಯ ಘರ್ಮತ್ವಂ ।**

(ತೈ. ಆ. ೫-೧-೪-೫-೬)

ಎಂಬ ವಿವರಣೆಯಲ್ಲಿ ಒಂದು ಕಥಾಸಂದರ್ಭವು ಸೂಚಿತವಾಗಿ ಅನಂತರ **ಘರ್ಮಾದಿ** ಹೆಸರುಗಳು ಪ್ರಸಿದ್ಧವಾದ ವಿಷಯವು ತಿಳಿಸಲ್ಪಟ್ಟಿದೆ. ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವಂತೆ ಈ ಕಥಾಸಂದರ್ಭವು ಈ ರೀತಿಯಿದೆ. ಇಂದ್ರಾದಿಗಳು ಕುರುಕ್ಷೇತ್ರಾಖ್ಯವಾದ ದೇವಯಜನಪ್ರದೇಶದಲ್ಲಿ ಸತ್ರವನ್ನು ನೆರವೇರಿಸಿದರು ಆಗ ಅವರಲ್ಲಿ ಶ್ರೇಷ್ಠ ನಾರು ಎಂಬುದನ್ನು ನಿಷ್ಕರ್ಷಿಸಬೇಕಾದ ಪ್ರಮೇಯವೊದಗಿದಾಗ ಯಾರು ತಪಸ್ಸಿನಿಂದಲೂ, ಶ್ರದ್ಧೆಯಿಂದಲೂ, ಯಜ್ಞಾಚರಣೆಯಿಂದಲೂ, ಯಜ್ಞಾಂತವನ್ನು ಪ್ರಥಮತಃ ಪಡೆಯುವರೋ ಅವರೇ ಶ್ರೇಷ್ಠರೆಂದು ಪರಿಗಣಿತರಾಗ ಬೇಕೆಂದು ತೀರ್ಮಾನಿಸಿದಾಗ ವಿಷ್ಣುವು ಆ ಸ್ಪರ್ಧೆಯಲ್ಲಿ ಗೆದ್ದನು. ಆಗ ವಿಷ್ಣುವು ಶ್ರೇಷ್ಠನೆಂದು ಪರಿಗಣಿತನಾದನು. ಇಂತಹ ಜಯದಿಂದ ಸಹಜವಾಗಿ ಪ್ರಾಪ್ತವಾಗುವ ಅಭಿಮಾನವೂ ಸಹ ವಿಷ್ಣುವನ್ನಾಕ್ರಮಿಸಿತು. ಸ್ವಾಭಿಮಾನಪೂರಿತ ನಾಗಿ ವಿಷ್ಣುವು ತನ್ನ ಧನುಸ್ಸನ್ನು ಹಿಡಿದುಕೊಂಡು ಅದಕ್ಕೆ ಹೆದೆಯನ್ನು ಏರಿಸಿ, ಬಾಣತ್ರಯವನ್ನು ಕೈಯಲ್ಲಿ ಹಿಡಿದು ಕೊಂಡು ತನ್ನ ಬಿಲ್ಲಿನ ತುದಿಯಲ್ಲಿ ತಲೆಯನ್ನಿರಿಸಿಕೊಂಡಿದ್ದಾಗ ದೇವತೆಗಳಲ್ಲಿ ಯಾರೂ ಸಹ ಇವನನ್ನು ಎದುರಿಸಲಾ ಗದೆ, ಎಲ್ಲರೂ ಇವನ ಸುತ್ತಲೂ ಕುಳಿತುಕೊಂಡರು. ಆಗ ಇವನ ಅಭಿಮಾನವನ್ನು ಹೋಗಲಾಡಿಸುವುದಕ್ಕಾಗಿ ವಮ್ರಿ ರೂಪವಾದ ಕ್ರಿಮಿಗಳನ್ನು ದೇವತೆಗಳು ಸಮಾಪಿಸಿ, ಅವನ ಧನುಸ್ಸಿನ ಹೆದೆಯನ್ನು ಕತ್ತರಿಸಬೇಕೆಂದು ಕೇಳಿದಾಗ ಅವು ವಿಷ್ಣುವಿನ ಧನುಸ್ಸಿನ ಹೆದೆಯನ್ನು ಕತ್ತರಿಸಿದವು (ಇಂದ್ರನೇ ವಮ್ರಿರೂಪದಲ್ಲಿ ಕತ್ತರಿಸಿದನು. "ತಸ್ಯೇಂದ್ರೋ ವಮ್ರಿರೂಪೇಣ ! ಧನುರ್ಜ್ಯಾಮಭಿನತ್ಸ್ವಯಂ" ಎಂದೂ ಸಹ ಪಾಠಾಂತರವುಂಟು). ಆಗ ಧನುಸ್ಸಿನ ತುದಿಯು ಮೇಲಕ್ಕೆ ಚಿಮ್ಮಿ ವಿಷ್ಣುನ ಶಿರಸ್ಸು ಕತ್ತರಿಸಲ್ಪಟ್ಟಿತು.

ಧನುಸ್ಸಿನ ಹೆದೆಯು ಕತ್ತರಿಸಲ್ಪಟ್ಟಾಗ "ಘೃಣ್ಣಿತಿ ಪತಾತ" ಅದು **ಘೃಣ್** ಎಂದು ಶಬ್ದಮಾಡಿಕೊಂಡು ಬಿದ್ದಿತಾದುದರಿಂದ ಅದಕ್ಕೆ **ಘರ್ಮ** ವೆಂಬ ಹೆಸರು ಪ್ರಸಿದ್ಧವಾಯಿತು. ಸಂಕುಚಿತವಾದ ಧನುಸ್ಸು, ಹೆದೆಯು ಕತ್ತರಿಸಲ್ಪಟ್ಟ ಒಡನೆಯೇ ವಿಸ್ತೃತವಾಗಿ ಹರಡಿರುವುದರಿಂದ ಅದಕ್ಕೆ ಪ್ರವರ್ಗ್ಯವೆಂಬ ಹೆಸರು ಪ್ರಸಿದ್ಧವಾಯಿತು.

**ಮಖಸ್ಯ ಶಿರೋಽಸೀತ್ಯಾಹ । ಯಜ್ಞೋ ವೈ ಮಖಃ ।**

(ತೈ. ಆ. ೫-೩-೨)

ಎಂಬ ವಾಕ್ಯಗಳಲ್ಲಿ ಪ್ರವರ್ಗ್ಯವನ್ನು ಯಜ್ಞಗಳಿಗೆಲ್ಲಾ ಶಿರೋರೂಪವಾದುದು ಎಂದು ಪ್ರಶಂಸಿಸಿರುವ ಭಾಗವನ್ನು ದಾಹರಿಸಿ ಇದರ ಪ್ರಾಧಾನ್ಯವನ್ನು ಹೇಳಿದೆ. ಅನಂತರ,

**ಬ್ರಹ್ಮನ್ ಪ್ರವರ್ಗ್ಯೇಣ ಪ್ರಚರಿಷ್ಯಾಮಃ । ಹೋತರ್ಘರ್ಮಮಭಿಷ್ಟುಹಿ ।**

(ತೈ. ಆ. ೪-೪-೧)

**ಬ್ರಹ್ಮನ್ ಪ್ರಚರಿಷ್ಯಾಮಃ । ಹೋತರ್ಘರ್ಮಮಭಿಷ್ಟುಹಿ ।**

(ತೈ. ಆ. ೪-೫-೧)

ಇತ್ಯಾದಿ ಮಂತ್ರಗಳಿಂದ ಪ್ರವರ್ಗ್ಯದ ಸ್ಥಾಪನವು ನೆರವೇರಿಸಲ್ಪಡುತ್ತದೆ. ಪ್ರವರ್ಗ್ಯದ ಸ್ವರೂಪವನ್ನೂ ಅದರ ಮಹತ್ತ್ವವನ್ನೂ ಸಹ ಮುಂದೆ ಉಚಿತವಾದ ಸಂದರ್ಭದಲ್ಲಿ ತಿಳಿಸಲಾಗುತ್ತದೆ ಪ್ರಕೃತವಾದ ಋಕ್ಕಿನಲ್ಲಿ **ಘರ್ಮ**

ಶಬ್ದಕ್ಕೆ **ಪ್ರವರ್ಗ್ಯ**ವೆಂದರ್ಥಮಾಡಿರುವುದರಿಂದ ಅವೆರಡೂ ಒಂದೇ ಕರ್ಮಕ್ಕೆ ಸೇರಿದವು ಎಂಬುದನ್ನು ತಿಳಿಸಲು ಮಾತ್ರ ಪ್ರಯತ್ನಿಸಿದೆ.

**ಪಶ್ವ ಇಷ್ಟಿಃ**—ಇದಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಿದೆ. ಮೊದಲನೆಯದಾಗಿ, **ಪಶುರಿತ್ಯಗ್ನೇರ್ನಾಮ ।** ಅಗ್ನಿಯೂ ಪಶುವಾಗಿದ್ದುದರಿಂದ ಅಗ್ನ್ಯಾತ್ಮಕವಾದ ಯಾಗವು ಪಶುಯಾಗವೆಂದು ಕರೆಯಲ್ಪಟ್ಟಿತು ಎಂಬುದಾಗಿ ತೈತ್ತಿರೀಯ ಸಂಹಿತಾವಾಕ್ಯವನ್ನೂ ಉದಾಹರಿಸಿದ್ದಾರೆ.

**ಅಗ್ನಿಃ ಪಶುರಾಸೀತ್ತೇನಾಯಜಂತ ಸ ಏತಂ ಲೋಕಮಜಯದ್ಯಸ್ಮಿನ್ನಗ್ನಿಃ ॥**
(ತೈ. ಸಂ. ೫-೭-೨೬)

ಅಗ್ನಿಯು ಯಜ್ಞಪಶುವಾಗಿದ್ದು ಅವನನ್ನು ಆಹುತಿಯಾಗಿ ಅರ್ಪಿಸಿದಮೇಲೆ ಈಗ ಅಗ್ನಿಯು ಪ್ರಭುತ್ವವನ್ನು ಮಾಡುತ್ತಿರುವ ಲೋಕವನ್ನು ಅವನು ಪಡೆದನು ಇತ್ಯಾದಿಯಾಗಿ ವರ್ಣಿತವಾಗಿದೆ. ಈ ಆಧಾರದ ಮೇಲೆ **ಪಶ್ವ ಇಷ್ಟಿಃ** ಎನ್ನುವಾಗ ಪಶ್ವಾತ್ಮಕವಾದ ಅಗ್ನಿಯಾಗವೆಂದರ್ಥಮಾಡಬಹುದು. ಅಥವಾ **ಪಶುಪ್ರಿಯತ್ವಾತ್ಪಶುರಿತ್ಯುಚ್ಯತೇ । ತಸ್ಯಾಗ್ನೇಃ ಇಷ್ಟಿರ್ಭವತಿ । ಅಗ್ನೌ ಯಾಗಃ ಸರ್ವೋ ಯುಷ್ಮದರ್ಥಂ ಪ್ರವರ್ತತೇ ।** ಅಗ್ನಿಯು ಪಶುಪ್ರಿಯನಾದುದರಿಂದ ಅಗ್ನಿಗೂ ಪಶುವೆಂಬ ಹೆಸರೇ ಪ್ರಸಿದ್ಧವಾಗಿದೆ. ಇಲ್ಲಿ ಅಗ್ನಿಯಲ್ಲಿ ಅರ್ಪಿಸಿದ ಆಹುತಿಯೆಂದರೆ ಅದರಲ್ಲಿ ನಿಮಗೂ ಭಾಗವಿರುವುದರಿಂದಲೂ, ಅದು ನಿಮ್ಮನ್ನುದ್ದೇಶಿಸಿ ಅರ್ಪಿಸಿದ ಆಹುತಿಯಾಗಿರುವುದರಿಂದಲೂ ಪ್ರಕೃತವಾದ ಸ್ತುತಿಯೆಂದು ತಿಳಿಸಿದೆ. ಇದೇ ಅರ್ಥವನ್ನು,

**ಆಶ್ವಿನಂ ಧೂಮ್ರಲಲಾಮಮಾ ಲಭೇತ ಯೋ ದುರ್ಬ್ರಾಹ್ಮಣಃ ಸೋಮಂ ಪಿಪಾಸೇತ್ ।**
(ತೈ. ಸಂ. ೨-೧-೧೦-೧)

ಇತ್ಯಾದಿ ವಾಕ್ಯಗಳು ಸಮರ್ಥಿಸುವುವು ಎಂದು ಸಾಯಣರು ವ್ಯಾಖ್ಯಾನಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಘರ್ಮಮ್—ಘರ್ಮಃ** (ಉ. ಸೂ. ೧-೧೪೬) ಎಂಬುದರಿಂದ, ಘೃ ಕ್ಷರಣದೀಪ್ತ್ಯೋಃ ಈ ಧಾತುವಿಗೆ ಮತ್ ಪ್ರತ್ಯಯವೂ ಗುಣವೂ ನಿಪಾತಿತವಾಗಿದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಪಃ**—ಷಷ್ಠ್ಯರ್ಥದಲ್ಲಿ ದ್ವಿತೀಯಾ ಬಂದಿದೆ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅವೃಣೀತಮ್**—ವೃಙ್ ಸಂಭಕ್ತೌ. ಧಾತು. ಕ್ರ್ಯಾದಿ. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಏಷೇ**—ಇಷು ಇಚ್ಛಾಯಾಂ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವಿಚ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧೆಗೆ ಗುಣ. ಚತುರ್ಥೀ ಏಕವಚನಾಂತ ರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಥ್ಯಾ—ರಥಾದ್ಯತ್** (ಪಾ. ಸೂ. ೪-೩-೧೨೧) ಎಂಬುದರಿಂದ ಸಂಬಂಧಾರ್ಥದಲ್ಲಿ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕ ಬಹುವಚನದಲ್ಲಿ

**ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಮುಂದಿರುವ ಚಕ್ರಾ ಎಂಬಲ್ಲಿಯೂ ಹೀಗೆಯೇ ಶಿಗೆ ಲುಕ್ ಬಂದಿದೆ.

**ಯಂತಿ**— ಇಣ್ ಗತೌ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಮಧ್ವಃ**— ಪ್ರಥಮಾ ಬಹುವಚನಾಂತರೂಪ. **ಜಸಾದಿಷು ಛಂದಸಿ ವಾವಚನಂ** ಎಂಬ ವಚನದಿಂದ ಗುಣಾದಿಗಳು ಬರುವುದಿಲ್ಲ. ‖ ೪ ‖



‖ ಸಂಹಿತಾಪಾಠಃ ‖

ಆ ವಾಂ ದಾನಾಯ ವವೃತೀಯ ದಸ್ರಾ ಗೋರೋಹೇಣ ತೌಗ್ರ್ಯೋ ನ ಜಿವ್ರಿಃ ।
ಅಪಃ ಕ್ಷೋಣೀ ಸಚತೇ ಮಾಹಿನಾ ವಾಂ ಜೂರ್ಣೋ ವಾಮಕ್ಷುರಂಹಸೋ ಯಜತ್ರಾ ‖ ೫ ‖

‖ ಪದಪಾಠಃ ‖

ಆ । ವಾಂ । ದಾನಾಯ । ವವೃತೀಯ । ದಸ್ರಾ । ಗೋಃ । ಓಹೇನ । ತೌಗ್ರ್ಯಃ । ನ । ಜಿವ್ರಿಃ ।
ಅಪಃ । ಕ್ಷೋಣೀ ಇತಿ । ಸಚತೇ । ಮಾಹಿನಾ । ವಾಂ । ಜೂರ್ಣಃ । ವಾಂ । ಅಕ್ಷುಃ । ಅಂಹಸಃ । ಯಜತ್ರಾ ‖

‖ ಸಾಯಣಭಾಷ್ಯಂ ‖

ಹೇ ದಸ್ರಾ ಶತ್ರೂಣಾಮುಪಕ್ಷಪಯಿತಾರಾವಶ್ವಿನೌ ವಾಂ ಯುವಯೋರ್ದಾನಾಯಾಸ್ಮದಭಿಮತಾಯ ಯುವಾಭ್ಯಾಂ ವಾಹಯಿತುಮಾ ವವೃತೀಯ । ಆವರ್ತಯಾಮಿ ಯಾಗದೇಶಂ ‖ ವೃತೇರಂತರ್ಭಾವಿತಣ್ಯರ್ಥಸ್ಯೇದಂ ‖ ಕೇನ ಸಾಧನೇನೇತಿ ತದುಚ್ಯತೇ । ಗೋಃ ಸ್ತುತಿರೂಪಾಯಾ ವಾಚ ಓಹೇನ ವಹನೇನ ಸಾಧನೇನ । ಯದ್ವಾ । ಆವರ್ತನಕಾಲ ಉಚ್ಯತೇ । ಗೋರ್ಗಂತ್ರ್ಯಾ ಉಷಸೋ ವಹನೇನ । ಜಿವ್ರಿರ್ಜೀರ್ಣೋ ಜಯಶೀಲೋ ವಾ ತೌಗ್ರ್ಯೋ ನ ತುಗ್ರಾಖ್ಯಸ್ಯ ರಾಜ್ಞಃ ಪುತ್ರೋ ಭುಜ್ಯುರಿವ । ಸ ಯಥಾ ಶತ್ರುಭಿಃ ಸಂತಾಡ್ಯ ಸಮುದ್ರೇ ಪಾತಿತೋ ಯುವಾಂ ಪರಿತೋಷ್ಯ ಸ್ವೋದ್ಧಾರಾಯ ಸ್ವಸಮೀಪಮಾನಯತ ತದ್ವದಿತ್ಯರ್ಥಃ । ಇಯಮಾಖ್ಯಾಯಿಕಾ ತುಗ್ರೋ ಹ । ಋ. ೧-೧೧೬-೩ । ಭುಜ್ಯುಮಂಹಸಃ ಪಿಪೃಥಃ । ಋ. ೧೦-೬೫-೧೨ । ನಾಸತ್ಯಾ ಭುಜ್ಯುಂ । ಋ. ೧-೧೧೬-೪ । ಇತ್ಯಾದಿಷು ಪ್ರಸಿದ್ಧಾ ಚ । ಕಿಮಾಶ್ಚರ್ಯಮಹಮಾವರ್ತಯಾಮೀತಿ । ಕಿಂತ್ವಪಃ ಕ್ಷೋಣೀ । ಅಪ ಇತ್ಯಂತರಿಕ್ಷ-

ನಾಮ । ಕ್ಷೋಣೀತಿ ಪೃಥಿವೀನಾಮ । ದ್ಯಾವಾಪೃಥಿವ್ಯಾವಪಿ ವಾಂ.ಯುವಯೋರ್ಮಹಿನಾ ಮಾಹಾತ್ಮ್ಯೇನ ಯುವಯೋಃ ಪ್ರಸಾದೇನ ಸರ್ವೋಪಕಾರಿಣ್ಯಾವಿತಿ ಖ್ಯಾತಿಂ ಸರ್ವಪ್ರದೇಶವ್ಯಾಪಿತ್ವಂ ವಾ ಸಚತೇ । ಸೇವತೇ ಪ್ರತ್ಯೇಕಂ । ಯದ್ವಾ । ವಾಂ ಮಾಹಿನಾ ಯಜಮಾನೋ ದ್ಯಾವಾಪೃಥಿವ್ಯೌ ಸಚತೇ । ಕಿಂಚ ಹೇ ಯಜತ್ರಾ ಯಷ್ಟವ್ಯೌ ಪ್ರಸಾದಾದಯಮೃಷಿರ್ಜೂರ್ಣೋ ಜರಯಾ ಜೀರ್ಣಾಂಗ ಸನ್ನಂಹಸಃ ಪಾಪಾಜ್ಜರಾಲಕ್ಷಣಾತ್ಪ್ರಮುಚ್ಯಾಕ್ಷುಃಚಿರಕಾಲವ್ಯಾಪ್ತೋ ದೀರ್ಘಜೀವೀ ಭೂಯಾತ್ । ಯದ್ವಾ । ಹೇ ಯಜತ್ರಾ ವಾಂ ಪ್ರಸಾದಾಜ್ಜೂರ್ಣೋ ಜೀರ್ಣೋ ಯಜಮಾನೋಽಂಹಸೋ ದುರಿತಸ್ಯ ಹಂತ್ರೀರಪ ಉಕ್ತಲಕ್ಷಣಾನಿ ಸೋಮರಸರೂಪಾಣ್ಯುದಕಾನಿ ಕ್ಷೋಣೀ ಕ್ಷೋಣ್ಯಾಂ ॥ ಸಪ್ತಮ್ಯರ್ಥೇ ಪ್ರಗೃಹ್ಯಂ ॥ ಭೂಮ್ಯಾಂ ಚಿರಕಾಲಮಕ್ಷುರ್ವ್ಯಾಪ್ತಃ ಸನ್ ಮಾಹಿನಾ ಮಾಹಾತ್ಮ್ಯೇನ ಸಚತೇ । ದ್ವಿತೀಯೋ ವಾಮಿತ್ಯಯಮಾದರಾರ್ಥಃ ॥

॥ ಪ್ರತಿಪದಾರ್ಥ ॥

**(ಹೇ) ದಸ್ರಾ**—ಶತ್ರುನಾಶಕರಾದ ಎಲೈ ಅಶ್ವಿನೀ ದೇವತೆಗಳೇ । **ವಾಂ**—ನಿಮ್ಮಿಬ್ಬರನ್ನು । **ದಾನಾಯ**—(ಅಸ್ಮದಭಿಮತವನ್ನು) ದಾನಮಾಡುವುದಕ್ಕೋಸ್ಕರ । **ಗೋಃ**—ಸ್ತುತಿರೂಪವಾದ ವಾಕ್ಕಿನ । **ಓಹೇನ**—ಸಾಧನದಿಂದ । [ಅಥವಾ **ಗೋಃ**—ಗೋಸಂಬಂಧವಾದ ಉಷಸ್ಸಿನ । **ಓಹೇನ**—ಸಾಧನದಿಂದ (ಕಾಲದಲ್ಲಿ) ।] **ಜಿವ್ರಿಃ**—ಜೀರ್ಣನಾದ (ಜಯಶಾಲಿಯಾದ)। **ತೌಗ್ರ್ಯಃ ನ**—ತುಗ್ರನೆಂಬುವನ ಮಗನಾದ ಭುಜ್ಯು ಎಂಬುವನು (ತನ್ನ ಉದ್ಧಾರಕ್ಕೋಸ್ಕರ ನಿಮ್ಮನ್ನು ತನ್ನ ಸಮೀಪಕ್ಕೆ ಕರೆಯಿಸಿಕೊಂಡಂತೆ) । **ಆ ವವೃತೀಯ**—ಯಾಗಶಾಲೆಗೆ ಕರೆತರಲು ಇಚ್ಛಿಸುತ್ತೇನೆ । **(ಹೇ) ಯಜತ್ರಾ**—ಯಾಗಾರ್ಹರಾದ (ಪೂಜ್ಯರಾದ) ಎಲೈ ದಸ್ರರೇ । **ವಾಂ**—ನಿಮ್ಮಿಬ್ಬರ (ಪ್ರಸಾದದಿಂದ) । **ಜೂರ್ಣಃ**—ಜೀರ್ಣನಾದ ಯಜಮಾನನು । **ಅಂಹಸಃ**—ದುರಿತಪರಿಹಾರಕಗಳಾದ । **ಅಪಃ**—ಸೋಮರಸರೂಪ ಉದಕಗಳನ್ನು । **ಕ್ಷೋಣೀ**—ಭೂಮಿಯಲ್ಲಿ । **ಅಕ್ಷುಃ**—(ಚಿರಕಾಲ) ವ್ಯಾಪ್ತನಾಗಿ (ಪಡೆದು) । **ಮಾಹಿನಾ**—ಮಾಹಾತ್ಮ್ಯೆಯಿಂದ । **ವಾಂ**—ನಿಮ್ಮಿಬ್ಬರನ್ನು । **ಸಚತೇ**—ಸೇವಿಸುತ್ತಾನೆ । **ಅಪಃ**—ಅಂತರಿಕ್ಷವೂ (ಮತ್ತು) । **ಕ್ಷೋಣೀ**—ಭೂಮಿಯೂ । **ವಾಂ**—ನಿಮ್ಮಿಬ್ಬರ । **ಮಾಹಿನಾ**—ಮಾಹಾತ್ಮ್ಯೆಯಿಂದ (ಲೋಕೋಪಕಾರಿಣಿಗಳೆಂದು (ಪ್ರಸಿದ್ಧಿ ಪಡೆದು) । **ಸಚತೇ**—(ನಿಮ್ಮಿಬ್ಬರನ್ನೂ) ಸೇವಿಸುತ್ತವೆ । [ಅಥವಾ **ವಾಂ**—ನಿಮ್ಮಿಬ್ಬರ । **ಮಾಹಿನಾ**—ಮಹಿಮೆಯಿಂದ । **ಅಪಃ ಕ್ಷೋಣೀ**—ಭೂಮ್ಯಂತರಿಕ್ಷಗಳನ್ನು । **ಸಚತೇ**—(ಯಜಮಾನನು) ಸೇವಿಸುತ್ತಾನೆ ।] **(ಕಿಂಚ**—ಮತ್ತು) । **ಯಜತ್ರಾ**—ಯಷ್ಟವ್ಯರಾದ ಎಲೈ ನಾಸತ್ಯರೇ । **ಜೂರ್ಣಃ**—ಜೀರ್ಣಾಂಗನಾದ ಈ ಋಷಿಯು । **ವಾಂ**—ನಿಮ್ಮಿಬ್ಬರ ಪ್ರಸಾದದಿಂದ । **ಅಂಹಸಃ**—(ಜರಾಲಕ್ಷಣ) ಪಾಪದಿಂದ (ಮೋಚಿತನಾಗಿ) । **ಅಕ್ಷುಃ**—ಚಿರಕಾಲ ವ್ಯಾಪ್ತನಾಗುತ್ತಾನೆ (ದೀರ್ಘಜೀವಿಯಾಗುತ್ತಾನೆ.)]

॥ ಭಾವಾರ್ಥ ॥

ಎಲೈ ದಸ್ರರೇ, ಹಿಂದೆ ಜೀರ್ಣಾಂಗನಾದ ತುಗ್ರಪುತ್ರ, ಭುಜ್ಯುವು ತನ್ನ ಉದ್ಧಾರಕ್ಕೋಸ್ಕರ ನಿಮ್ಮಿಬ್ಬರನ್ನು ಬರಮಾಡಿಕೊಂಡಂತೆ, ನಾನೂ ಉಷಃಕಾಲದಲ್ಲಿ ಸ್ತುತಿಸಿ, ನನ್ನ ಇಷ್ಟಾರ್ಥಸಿದ್ಧಿಗೋಸ್ಕರ, ನನ್ನ ಯಾಗಶಾಲೆಗೆ ಬರಮಾಡಿಕೊಳ್ಳಲಿಚ್ಛಿಸುತ್ತೇನೆ; ಈ ಯಜಮಾನನು ನಿಮ್ಮಿಬ್ಬರ ಮಹಿಮೆಯಿಂದಲೇ ದ್ಯಾವಾಭೂಮಿಗಳನ್ನು ಸೇವಿ

ಸಲು ಸಮರ್ಥನಾಗುತ್ತಾನೆ ; ಯಷ್ಟವ್ಯರಾದ ಎಲೈ ಅಶ್ವಿನೀ ದೇವತೆಗಳೇ, ಜೀರ್ಣಾಂಗನಾದ ಈ ಋಷಿಯೂ ನಿಮ್ಮ ಪ್ರಸಾದದಿಂದ ಜರೆಯಿಂದ ವಿಮೋಚಿತನಾಗಿ ದೀರ್ಘಾಯುಷ್ಮಂತನಾಗುತ್ತಾನೆ.

## English Translation

Dasras, may I bring you, by the vehicle of my prayers, (hither), to bestow (upon me your aid), like the infirm son of Tugra: heaven and earth combine (to worship you) through your greatness: may this, your aged (worshipper), adorable (Ashwins), enjoy long life, (exempt) from sin.

### ॥ ವಿಶೇಷವಿಷಯಗಳು ॥

**ದಸ್ರಾ—ದಸು ಉಪಕ್ಷಯೇ । ಶತ್ರೂಣಾಂ ಉಪಕ್ಷಪಯಿತಾರೌ । ಯದ್ವಾ । ದೇವವೈದ್ಯತ್ವೇನ ರೋಗಾಣಾಂ ಉಪಕ್ಷಪಯಿತಾರೌ ।** ಶತ್ರುನಾಶಕರು ಅಥವಾ ದೇವವೈದ್ಯರಾದ್ದರಿಂದ ರೋಗನಾಶಕರು ಎಂದರ್ಥ. **ದಸ್ರಾ** ಎನ್ನುವುದಕ್ಕೆ **ದರ್ಶನೀಯೌ** ಎಂದರೆ ಸುಂದರವಾದ ರೂಪವುಳ್ಳವರು ಎಂದೂ ಆಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಶತ್ರುನಾಶಕರೆಂದರ್ಥಮಾಡಿದೆ. ಸರಣ್ಯುಪುತ್ರರಾದ ಅಶ್ವಿನಿಗಳಲ್ಲಿ ಒಬ್ಬನಿಗೆ **ದಸ್ರ** ಇನ್ನೊಬ್ಬನಿಗೆ **ನಾಸತ್ಯ** ಎಂಬ ಹೆಸರಿದ್ದರೂ ಸಹ ಸಾಧಾರಣವಾಗಿ **ದಸ್ರಾ** ಎಂದಿಬ್ಬರನ್ನೂ ಸೇರಿಸಿ ಹೇಳುವುದು ವಾಡಿಕೆಯಾಗಿದೆ. ಅಶ್ವಿನೀ ದೇವತೆಗಳ ಉತ್ಪತ್ತಿ ಮತ್ತು ಸ್ವರೂಪಗಳ ವಿಷಯವನ್ನು ಮುಂದೆ ಇದೇ ಭಾಗದಲ್ಲಿ ಋ. ಸಂ. ೧-೧೮೧-೪ ನೇ ಋಕ್ಕಿನ ವಿಶೇಷವಿಷಗಳಲ್ಲಿ ವಿಶದವಾಗಿ ತಿಳಿಸಲಾಗುತ್ತದೆ.

**ಗೋಃ ಓಹೇನ** ಎಂಬ ಪದಗಳಲ್ಲಿ **ಗೋಃ** ಎಂಬುದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ **ಗೋಃ ಸ್ತುತಿರೂಪಾಯ ವಾಚಃ ಓಹೇನ ವಹನೇನ ಸಾಧನೇನ।** ಸ್ತುತಿರೂಪವಾದ ವಾಕ್ಕಿನ ಮೂಲಕ ಎಂದೂ ಎರಡನೆಯದಾಗಿ **ಗೋಃ ಗಂತ್ರ್ಯಾಃ ಉಷಸಃ ವಹನೇನ** ಸಂಚಲನಾತ್ಮಕವಾದ ಉಷಸ್ಸಿನ ವಹನದಿಂದ ಎಂದೂ ಅರ್ಥಮಾಡಿದೆ.

ನಿರುಕ್ತಕಾರರು **ಗೋ** ಶಬ್ದವನ್ನು **ಪೃಥಿವೀ** ನಾಮಗಳಲ್ಲಿ ಸೇರಿಸಿ (ನಿ ೨-೫) ಅನಂತರ ಈ ಶಬ್ದದ ನಿರ್ವಚನವನ್ನು ಈ ರೀತಿ ತಿಳಿಸಿದ್ದಾರೆ. ಅದರಂತೆ,

> **ಗೌರಿತಿ ಪೃಥಿವ್ಯಾ ನಾಮಧೇಯಂ। ಯದ್ದೂರಂಗತಾ ಭವತಿ । ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ।**
> **ಗಾತೇರ್ವೌಕಾರೋ ನಾಮಕರಣಃ ।**
>
> (ನಿ ೨-೫)

ಅತ್ಯಂತವಿಸ್ತೃತವಾಗಿ ಹರಡಿರುವುದರಿಂದಲೂ (ದೂರಂಗತಾ ಭವತಿ); ಅಥವಾ ಭೂತಗಳು ಇದರ ಮೇಲೆ ಸಂಚರಿಸುವುದರಿಂದಲೂ (ಭೂತಾನಿ ಗಚ್ಛಂತಿ); **ಗೌಃ** । ಎಂಬ ಪದವು ಪೃಥ್ವಿಯ ಪರ್ಯಾಯನಾಮವಾಗಿದೆ. **ಗಾ** ಧಾತುವಿಗೆ **ಔ** ಎಂಬ ಪ್ರತ್ಯಯವನ್ನು ಸೇರಿಸಿದರೂ ಸಹ ಈ ಪದದ ನಿಷ್ಪತ್ತಿಯು ಸಾಧ್ಯವಾಗುತ್ತದೆ ಎಂಬುದಾಗಿ ನಿರುಕ್ತಕಾರರು ಈ ಶಬ್ದವನ್ನು ವಿವರಿಸಿ ಅನಂತರ,

**ಅಥಾಪಿ ಪಶುನಾಪಿ ಭವತ್ಯೇತಸ್ಮಾದೇವ**

ಈ ಕಾರಣದಿಂದಲೇ, ಎಂದರೆ ಮೇಲೆ ಹೇಳಿದ ಅರ್ಥವನ್ನು ಕೊಡತಕ್ಕ **ಗಮ್** ಅಥವಾ **ಗಾ** ಧಾತುವಿನಿಂದ ನಿಷ್ಪನ್ನ ವಾಗಿರುವುದರಿಂದಲೇ ಪಶುವಿಗೂ ಈ ಹೆಸರು ಪ್ರಸಿದ್ಧವಾಗಿದೆ ಎಂದು ಹೇಳಿ **ಆದಿತ್ಯೋಽಪಿ ಗೌರುಚ್ಯತೇ; ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ । ಆದಿತ್ಯ, ರಶ್ಮಿ** ಇತ್ಯಾದ್ಯರ್ಥಗಳಲ್ಲಿಯೂ ಸಹ **ಗೋ** ಶಬ್ದದ ಪ್ರಯೋಗವಿದೆಯೆಂದು ತಿಳಿಸಿದ್ದಾರೆ. ಮತ್ತು ಋ. ಸಂ. ೧-೧೬೪-೨೮ ನೇ ಋಕ್ಕಿನಲ್ಲಿರುವ ಪದಕ್ಕೆ ನಿರುಕ್ತಕಾರರು ವಿವರಣೆಯನ್ನು ಹೇಳುತ್ತಾ **ಗೌಃ** ಎಂದ ಪದಕ್ಕೆ **ಮಾಧ್ಯಮಿಕಾ ವಾಕ್** ಎಂದರ್ಥಮಾಡಿದ್ದಾರೆ. (ನಿ. ೧೧-೪೨) ಪ್ರಕೃತವಾದ ಋಕ್ಕಿನಲ್ಲಿ ಸ್ತುತಿರೂಪವಾದ ವಾಕ್ಕೆಂದರ್ಥಮಾಡುವುದೇ ಉಚಿತವಾಗಿರುತ್ತದೆ ಹಿಂದೆ,

**ಇಮಂ ರಥಮಧಿ ಯೇ ಸಪ್ತ ತಸ್ಥುಃ ಸಪ್ತಚಕ್ರಂ ಸಪ್ತ ವಹಂತ್ಯಶ್ವಾಃ ।**
**ಸಪ್ತ ಸ್ವಸಾರೋ ಅಭಿ ಸಂ ನವಂತೇ ಯತ್ರ ಗವಾಂ ನಿಹಿತಾ ಸಪ್ತ ನಾಮ ॥**

(ಋ. ಸಂ. ೧-೧೬೪-೩)

ಎಂಬ ಋಕ್ಕಿನಲ್ಲಿ **ಗವಾಂ ಸ್ತುತಿರೂಪಾಣಾಂ ವಾಚಾಂ** ಎಂದರ್ಥಮಾಡಿರುವಂತೆಯೇ ಇಲ್ಲಿಯೂ ಸಹ **ಸ್ತುತಿ ರೂಪಾಯಾಃ ವಾಚಃ** ಎಂಬುದೇ ಅನುಗುಣವಾಗಿರುತ್ತದೆ.

**ಓಹೇನ—ವಹ್** ಧಾತುವಿನಿಂದ ನಿಷ್ಪನ್ನವಾಗಿರುವ ಈ ಪದವು ವಹಿಸುವ ಸಾಧನ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. **ಓಹಸಾ । ಓಹಬ್ರಹ್ಮಾಣಃ** ಇತ್ಯಾದಿ ಪ್ರಯೋಗಗಳು ಅನೇಕವಾಗಿವೆ. ಅವನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುತ್ತದೆ.

**ಜಿವ್ರಿಃ**—ಈ ಪದಕ್ಕೆ **ಜೀರ್ಣ** ಅಥವಾ **ಜಯಶೀಲ** ಎಂಬೆರಡು ಅರ್ಥಗಳೂ ಸಾಧ್ಯವೆಂದು ಸಾಯಣರು ಭಾಷ್ಯದಲ್ಲಿ ತಿಳಿಸಿದ್ದಾರೆ. ಆದರೆ, ನಿರುಕ್ತದಲ್ಲಿ ಉದಾಹರಿಸಿರುವ (ನಿ. ೩-೨೧)

**ಆ ತ್ವಾ ರಂಭಂ ನ ಜಿವ್ರಯೋ ರರಂಭಾ ಶವಸಸ್ಪತೇ । ಉಶ್ಮಸಿ ತ್ವಾ ಸಧಸ್ಥ ಆ ॥**
(ಋ. ಸಂ. ೮-೪೫-೨೦)

**ವಿನಾ ಪತ್ಯಾ ತನ್ವಂ೧ ಸಂ ಸೃಜಸ್ವಾಧಾ ಜಿವ್ರೀ ವಿದಥಮಾ ವದಾಥಃ ।**

(ಋ. ಸಂ. ೧೦-೮೫-೨೭)

ಇತ್ಯಾದಿ ಋಕ್ಕುಗಳಿಗೆಲ್ಲಾ ಯಾಸ್ಕರು **ಜೀರ್ಣ, ವೃದ್ಧ** ಎಂದೇ ಅರ್ಥಮಾಡಿದ್ದಾರೆ. ಆದರೆ ಇಲ್ಲಿ ಪುನಃ ವಾರ್ಧಕ್ಯ ವೆಂಬರ್ಥವನ್ನು ತೋರಿಸುವ **ಜೂರ್ಣ** ಶಬ್ದವೂ ಪ್ರಯೋಗಿಸಲ್ಪಟ್ಟಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಜಿವ್ರಿ** ಶಬ್ದಕ್ಕೆ ಜಯಶಾಲಿಯೆಂದರ್ಥಮಾಡಿದರೂ ಮಾಡಬಹುದು.

**ಜೂರ್ಣಃ—ಜರಯಾ ಜೀರ್ಣಾಂಗಃ ।** ಮುಪ್ಪಿನಿಂದ ಸವೆದುಹೋದ ದೇಹವುಳ್ಳವನೆಂದರ್ಥ. ಇತರ ಕಡೆಗಳಲ್ಲಿ ಸಾಯಣರು **ಜೂರ್ಣ** ಶಬ್ದಕ್ಕೆ ಬೇರೆ ಅರ್ಥವನ್ನೂ ಮಾಡಿದ್ದಾರೆ ನಿರುಕ್ತಕಾರರು **ಜೂರ್ಣಿ** ಶಬ್ದವನ್ನು ಕ್ರೋಧನಾಮಗಳಲ್ಲಿಯೂ (ನಿ ೩-೯), **ಕ್ಷಿಪ್ರ** ನಾಮಗಳಲ್ಲಿಯೂ (ನಿ. ೩-೯) ಪಠಿಸಿದ್ದಾರೆ ಮತ್ತು ಈ ನಿರ್ವಚನ ವನ್ನು ತಿಳಿಸುತ್ತಾ

**ಜೂರ್ಣಿರ್ಜವತೇರ್ವಾ ದ್ರವತೇರ್ವಾ ದೂನೋತೇರ್ವಾ ।** (ನಿ. ೬-೪)

**ವೇಗ** ಎಂಬರ್ಥವನ್ನು ಕೊಡುವ **ಜೂ** ಧಾತುವಿನಿಂದಾಗಲಿ ಅಥವಾ **ಓಡು** ಎಂಬರ್ಥವನ್ನು ಕೊಡುವ **ದ್ರು** ಧಾತುವಿನಿಂದಾಗಲಿ, ಅಥವಾ **ಹಿಂಸಿಸು** ಎಂಬರ್ಥವುಳ್ಳ **ದು** ಧಾತುವಿನಿಂದಾಗಲಿ ನಿಷ್ಪನ್ನವಾಗಿರಬಹುದೆಂದು **ಈ** ಪದದ ರೂಪನಿಷ್ಪತ್ತಿಯನ್ನು ತಿಳಿಸಿದ್ದಾರೆ. ಮತ್ತು ಇದರ ಪ್ರಯೋಗವನ್ನು ತೋರಿಸಲು,

**ಹತೇವಸನ್ನ ವಕ್ಷತಿ ಕ್ಷಿಪ್ತಾ ಜೂರ್ಣಿರ್ನ ವಕ್ಷತಿ ।** (ಋ. ಸಂ. ೧-೧೨೯-೮)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಕ್ಷೇಪಣಸಂಬಂಧಾತ್ ಜೂರ್ಣಿಃ ಶಕ್ತಿಃ** ವೇಗವುಳ್ಳದ್ದಾದುದರಿಂದ ಶಕ್ತಿಯೆಂದರ್ಥವೆಂದು ತಿಳಿಸಿದ್ದಾರೆ ಆದರೆ ಪ್ರಕೃತವಾದ ಋಕ್ಕಿನಲ್ಲಿ ಆ ಅರ್ಥವನ್ನು ಹೇಳುವುದಕ್ಕೆ ಅವಕಾಶವಿಲ್ಲ. **ಜಿವ್ರಿಃ** ಎನ್ನುವುದಕ್ಕೆ ಜಯಶೀಲನೆಂದೂ, **ಜೂರ್ಣಃ** ಎನ್ನುವುದಕ್ಕೆ ವಯೋವೃದ್ಧನೆಂದೂ ಹೇಳಬೇಕಾಗುತ್ತದೆ.

**ಜಿವ್ರಿಃ** ಎನ್ನುವುದು **ತೌಗ್ರ್ಯಃ** ಎಂಬ ಪದಕ್ಕೆ ವಿಶೇಷಣವಾಗಿದೆ. ಇಲ್ಲಿ ಯಜ್ಞಕರ್ತನು ತನ್ನನ್ನು **ತೌಗ್ರ್ಯ**ನಿಗೆ ಹೋಲಿಸಿಕೊಂಡು ಯಾವರೀತಿ ಅವನು ಅಶ್ವಿನೀದೇವತೆಗಳ ಅನುಗ್ರಹದಿಂದ ಉದ್ಧೃತನಾದನೋ ಅದೇ ರೀತಿ ತಾನೂ ಸಹ ಅವರ ಅನುಗ್ರಹಕ್ಕೆ ಭಾಗಿಯಾಗುತ್ತೇನೆಂದು ಹೇಳಿಕೊಂಡಿದ್ದಾನೆ.

**ತೌಗ್ರ್ಯಃ ನ ತುಗ್ರಾಖ್ಯಸ್ಯ ರಾಜ್ಞಃ ಪುತ್ರೋ ಭುಜ್ಯುರಿವ ಸ ಯಥಾ ಶತ್ರುಭಿಃ ಸಂತಾಡ್ಯ ಸಮುದ್ರೇ ಪಾತಿತೋ ಯುವಾಂ ಪರಿತೋಷ್ಯ ಸ್ವೋದ್ಧಾರಾಯ ಸ್ವಸಮೀಪಮಾನಯತ ತದ್ವದಿತ್ಯರ್ಥಃ ।** ತುಗ್ರಪುತ್ರನಾದ ಭುಜ್ಯುವು ಶತ್ರುಗಳಿಂದ ಹಿಂಸಿತನಾಗಿ ಸಮುದ್ರಕ್ಕೆ ಎಸೆಯಲ್ಪಟ್ಟಾಗ ನಿಮ್ಮನ್ನು ಸ್ತುತಿಸಿ ತೃಪ್ತಿಪಡಿಸಿ ತನ್ನಸಹಾಯಕ್ಕೆ ಕರೆದುಕೊಂಡಂತೆ ಎಂದು ಹಿಂದಿನಕಥೆಯ ಸಂದರ್ಭವನ್ನು ಸೂಚಿಸಿದ್ದಾರೆ.

**ತೌಗ್ರ್ಯ**ನೆಂಬ ದೊರೆಯನ್ನು ಒಂದುಸಲ ಶತ್ರುಗಳು ಸೋಲಿಸಿ ಅವನ ಕೈಕಾಲುಗಳನ್ನು ಕಟ್ಟಿ ಸಮುದ್ರಮಧ್ಯದಲ್ಲಿ ಎಸೆದುಬಿಟ್ಟರು. ಅವನು ಸಮುದ್ರವನ್ನು ದಾಟಲಾರದೆ ಸಹಾಯಕ್ಕಾಗಿ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಒಡನೆಯೇ ಅವರು ತಮ್ಮ ರಥಕ್ಕೆ ಅಶ್ವಗಳನ್ನು ಕಟ್ಟಿ ಸಮುದ್ರದಲ್ಲಿಳಿಸಿ ಅವನನ್ನು ದಡಕ್ಕೆ ಸೇರಿಸಿದರು ಎಂದು ಸಾಯಣರು ಪೂರ್ವಕಥೆಯನ್ನುದಾಹರಿಸಿದ್ದಾರೆ ಈ ತುಗ್ರಪುತ್ರನೇ **ಭುಜ್ಯು** ವೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ ಮತ್ತು ಅನೇಕ ಕಡೆಗಳಲ್ಲಿ ಇವನ ಕಥೆಯು ವರ್ಣಿತವಾಗಿದೆ.

ಸಮುದ್ರದಲ್ಲಿ ಮುಳುಗಿದ್ದ ಇದೇ ತುಗ್ರಪುತ್ರನನ್ನು ಅಶ್ವಿನೀದೇವತೆಗಳು ರಕ್ಷಿಸಿದುದನ್ನು ದೀರ್ಘತಮನಸ್ಸಿನ ಪುತ್ರನಾದ ಕಕ್ಷೀವಂತನು ಋ. ಸಂ.೧-೧೧೬- ಮತ್ತು ೧-೧೧೭ ನೇ ಸೂಕ್ತಗಳಲ್ಲಿಯೂ, ಅಗಸ್ತ್ಯ ಮೈತ್ರಾವರುಣಿಯು ೧-೧೮೨ ನೇ ಸೂಕ್ತದಲ್ಲಿಯೂ, ಕಣ್ವಗೋತ್ರದ ಬ್ರಹ್ಮಾತಿಥಿಯು ೮-೫ ನೇ ಸೂಕ್ತದಲ್ಲಿಯೂ ; ಕಕ್ಷೀವಂತನ ಪುತ್ರಿಯಾದ ಘೋಷೆಯು ೧೦-೪೦ ರಲ್ಲೂ ವರ್ಣಿಸಿದ್ದಾರೆ. ೧-೧೮೨ನೇ ಸೂಕ್ತದಲ್ಲಿ ಇವರು ದೋಣಿಗಳನ್ನು ಕಳುಹಿಸಿದುದೂ ತುಗ್ರಪುತ್ರನು ಆಶಾಪೂರಿತನಾಗಿ ಆ ದೋಣಿಗಳನ್ನು ಅಪ್ಪಿಕೊಂಡು ಅವರ ಅನುಗ್ರಹದಿಂದ ರಕ್ಷಿತನಾದುದೂ ಸಹ ಕೆಳಗೆ ಕಂಡಂತೆ ವರ್ಣಿತವಾಗಿದೆ.

**ಯುವಮೇತಂ ಚಕ್ರಥುಃ ಸಿಂಧುಷು ಪ್ಲವಮಾತ್ಮನ್ವಂತಂ ಪಕ್ಷಿಣಂ ತೌಗ್ರ್ಯಾಯ ಕಂ ।**
**ಯೇನ ದೇವತ್ರಾ ಮನಸಾ ನಿರೂಹಥುಃ ಸುಪಪ್ತನೀ ಪೇತಥುಃ ಕ್ಷೋದಸೋ ಮಹಃ॥**
**ಅವವಿದ್ಧಂ ತೌಗ್ರ್ಯಮಪ್ಸ್ವಂನ್ತರನಾರಂಭಣೇ ತಮಸಿ ಪ್ರವಿದ್ಧಂ ।**
**ಚತಸ್ರೋ ನಾವೋ ಜಠಲಸ್ಯ ಜುಷ್ಟಾ ಉದಶ್ವಿಭ್ಯಾಮಿಷಿತಾಃ ಪಾರಯಂತಿ ।**

**ಕಃ ಸಿದ್ವೃಕ್ಷೋ ನಿಷ್ಠಿತೋ ಮಧ್ಯೇ ಅರ್ಣಸೋ ಯಂ ತೌಗ್ರ್ಯೋ ನಾಧಿತಃ ಪರ್ಯಷಸ್ವಜತ್ ||**
**ಪರ್ಣಾ ಮೃಗಸ್ಯ ಪತರೋರಿವಾರಭ ಉದಶ್ವಿನಾ ಊಹಥುಃ ಶ್ರೋಮತಾಯ ಕಂ ||**
(ಋ. ಸಂ. ೧-೧೮೨-೫ರಿಂದ ೭)

ಎಲೈ ಅಶ್ವಿನೀ ದೇವತೆಗಳೇ, ತುಗ್ರಪುತ್ರನಾದ ಭುಜ್ಯುವಿಗಾಗಿ ನೀವು ಸಚೇತನವಾದುದೂ ರೆಕ್ಕೆಗಳಿಂದ ಕೂಡಿದುದೂ ಆದ ಈ ದೋಣಿಯನ್ನು ನಿರ್ಮಿಸಿದಿರಿ. ಅಗಾಧವಾದುದೂ, ಅಂಧಕಾರವಾದುದೂ, ಆದ ಸಮುದ್ರದಲ್ಲಿ ಬಿದ್ದು ಮುಳುಗುತ್ತಿದ್ದ ತುಗ್ರಪುತ್ರನಿಗಾಗಿ ನಾಲ್ಕುದೋಣಿಗಳನ್ನು ಕಳುಹಿದಿರಿ. ಹಾರುವ ಪಕ್ಷಿಗಳಿಗೆ ಅಂತರಿಕ್ಷದಲ್ಲಿ ಅವಲಂಬನವಾಗಿರುವ ರೆಕ್ಕೆಗಳಂತೆ ಸಮುದ್ರದಲ್ಲಿ ಮುಳುಗುತ್ತಿದ್ದ ಭುಜ್ಯುವಿಗೆ ಅವಲಂಬನವಾದುದೂ ಮತ್ತು ರಕ್ಷಕವಾದುದೂ ಆದ ದೋಣಿಯ ಅವಯವಗಳನ್ನು ಯಾವ ವೃಕ್ಷದಿಂದ ನಿರ್ಮಿಸಿದಿರಿ ಎಂದು ಶ್ಲಾಘಿಸಿದೆ. ಅದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸೂಚಿಸಿದೆ.

**ಅಂಹಸಃ—ಅಂಹತಿಶ್ಚಾಂ ಹಂಶ್ಚಾಂಹುಶ್ಚ ಹಂತೇಃ |** (ನಿ. ೪-೨೫) ಹಿಂಸಿಸು ಎಂಬರ್ಥವನ್ನು ಕೊಡುವ **ಹನ್** ಧಾತುವಿನಿಂದ **ಅಂಹಸ್** ಎಂಬ ಶಬ್ದವು ನಿಷ್ಪನ್ನವಾಗಿದ್ದರೂ ಸಹ ಈ ಪದಕ್ಕೆ ಸಾಧಾರಣವಾಗಿ **ಹಿಂಸೆ** ಎಂಬರ್ಥಕ್ಕಿಂತಲೂ **ಪಾಪವು** ಎಂಬರ್ಥವೇ ಹೆಚ್ಚು ಬಳಕೆಯಲ್ಲಿದೆ. ಪ್ರಕೃತವಾದ ಋಕ್ಕಿನಲ್ಲಿ ದುರಿತವೆಂದರ್ಥ.

ಈ ಮಂತ್ರದ ಉತ್ತರಾರ್ಧಕ್ಕೆ ಮೂರು ವಿಧವಾದ ಅನ್ವಯವು ಸಾಧ್ಯವೆಂದು ತಿಳಿಸಿದ್ದಾರೆ. ಮೊದಲನೆಯದಾಗಿ, **(೧) ಜೂರ್ಣಃ ಮಾಹಿನಾ ಅಂಹಸಃ ಅಪಃ ಕ್ಷೋಣೀ ಅಕ್ಷುಃ ವಾಂ ಸಚೇತೇ**—ವೃದ್ಧನಾದ ಯಜಮಾನನು ನಿಮ್ಮನುಗ್ರಹದಿಂದ ಪಾಪದಿಂದ ನಿವೃತ್ತನಾಗಿ ಸೋಮವನ್ನು ಶಾಶ್ವತವಾಗಿ ಪಡೆದು ನಿಮ್ಮನ್ನು ಪೃಥ್ವಿಯಲ್ಲಿ ಸೇವಿಸುತ್ತಾನೆ ಎಂದೂ, ಎರಡನೆಯದಾಗಿ, **(೨) ವಾಂ ಮಹಿನಾ ಅಪಃ ಕ್ಷೋಣೀ ಸಚೇತೇ |** ನಿಮ್ಮ ಮಾಹಾತ್ಮ್ಯೆಯಿಂದ ದ್ಯಾವಾಪೃಥಿವಿಗಳೆರಡೂ ಸಹ ಲೋಕರಕ್ಷಕವಾಗಿವೆಯೆಂದು ಪ್ರಸಿದ್ಧಿಯನ್ನು ಪಡೆದಿವೆಯೆಂದೂ. ಮೂರನೆಯದಾಗಿ, **(೩) ವಾಂ ಮಹಿನಾ ಜೂರ್ಣಃ ಅಪಃ ಕ್ಷೋಣೀ ಸಚೇತೇ |** ನಿಮ್ಮ ಮಹಿಮೆಯಿಂದ ಯಜಮಾನನು ದ್ಯಾವಾಪೃಥಿವಿಗಳನ್ನು ಸೇವಿಸುತ್ತಾನೆ ಎಂದೂ ಸಹ ಅರ್ಥವಾಗಬಹುದೆಂದು ಸಾಯಣಭಾಷ್ಯವು ತಿಳಿಸುತ್ತದೆ.

**ಅಪಃ**—ಅಂತರಿಕ್ಷನಾಮಗಳಲ್ಲಿ ಪಠಿತವಾಗಿದೆ. (ನಿ. ೩–೮) **ಕ್ಷೋಣೀತಿ ಪೃಥಿವೀನಾಮ |** ಕ್ಷೋಣಿಯು ಪೃಥ್ವೀನಾಮಗಳಲ್ಲಿ ಪಠಿತವಾಗಿದೆ. (ನಿ. ೧–೭).

॥ ವ್ಯಾಕರಣಪ್ರಕ್ರಿಯಾ ॥

**ದಾನಾಯ**—ಡುದಾಞ್ ದಾನೇ. ಧಾತು. ಯುಚ್ ಪ್ರತ್ಯಯ. **ಯುವೋರನಾಕೌ** (ಪಾ ಸೂ ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವವೃತೀಯ**—ವೃತು ವರ್ತನೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತ ಣ್ಯರ್ಥಕವಾಗಿದೆ. ಲಿಟ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಇಟೋऽತ್** (ಪಾ. ಸೂ. ೩-೪-೧೦೬) ಎಂಬುದರಿಂದ ಅದಕ್ಕೆ ಅಕಾರಾದೇಶ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಸೀಯುಟಾಗಮ. **ಬಹುಲಂ ಛಂದಸಿ** ಎಂಬುದರಿಂದ ಶ್ಲು ವಿಕರಣ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. **ಲಿಙಃ ಸಲೋಪೋನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸಕಾರಕ್ಕೆ ಲೋಪ. ವವೃತೀಯ ಎಂದು ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

**ದಸ್ರಾ**—**ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಜಿವ್ರಿಃ**—ಜ್ಯಾಷ್ ವಯೋಹಾನೌ. ಧಾತು. **ಜೀರ್ಯತೇಃ ಕ್ರಿನ್ ರಶ್ಚ ವಃ** (ಉ. ಸೂ. ೫-೭೨೭) ಎಂಬುದರಿಂದ ಕ್ರಿನ್ ಪ್ರತ್ಯಯ. ಧಾತುವಿನ ರೇಫಕ್ಕೆ ವಕಾರಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜೂರ್ಣಃ**—ಜ್ವರ ಸಂತಾಪೇ. ಧಾತು. ಕ್ತ ಪ್ರತ್ಯಯ. **ಜ್ವರತ್ವರ ಸ್ರಿವ್ಯವಿ**—(ಪಾ. ಸೂ. ೬-೪-೨೦) ಎಂಬುದರಿಂದ ಧಾತು ವಕಾರ ಉಪಧೆಗಳಿಗೆ ಊಠಾದೇಶ. **ರದಾಭ್ಯಾಂ ನಿಷ್ಠಾತಃ**—(ಪಾ. ಸೂ. ೮-೨-೪೨) ಎಂಬುದರಿಂದ ನಿಷ್ಠಾ ತಕಾರಕ್ಕೆ ನತ್ವ. **ರಷಾಭ್ಯಾಂ ಣೋನಃ ಸಮಾನಪದೇ** ಎಂಬುದರಿಂದ ಣತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಜತ್ರಾ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಅಮಿನಕ್ಷಿ ಯಜಿ ಬಂಧಿ**—(ಉ. ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ. **ಸುಪಾಂ ಸುಲುಕ್**—ಎಂಬುದರಿಂದ ಸಂಬೋಧನಾ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಕ್ಷೋಣೀ**—ಎರಡನೆಯ ಅರ್ಥದಲ್ಲಿ ಸಪ್ತಮೀ ಏಕವಚನಾಂತರೂಪ. **ಸುಪಾಂ ಸುಲುಕ್**—ಸೂತ್ರದಿಂದ ಪೂರ್ವಸವರ್ಣದೀರ್ಘ. **ಈದೂತೌ ಚ ಸಪ್ತಮ್ಯರ್ಥೇ** (ಪಾ. ಸೂ. ೧-೧-೧೯) ಎಂಬುದರಿಂದ ಪ್ರಗೃಹ್ಯಸಂಜ್ಞಾ ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

**ನಿ ಯದ್ಯುವೇಥೇ ನಿಯುತಃ ಸುದಾನೂ ಉಪ ಸ್ವಧಾಭಿಃ ಸೃಜಥಃ ಪುರಂಧಿಂ ।**

**ಪ್ರೇಷದ್ವೇಷದ್ವಾತೋ ನ ಸೂರಿರಾ ಮಹೇ ದದೇ ಸುವ್ರತೋ ನ ವಾಜಂ ॥ ೬ ॥**

॥ ಪದಪಾಠಃ ॥

**ನಿ । ಯತ್ । ಯುವೇಥೇ ಇತಿ । ನಿಽಯುತಃ । ಸುದಾನೂ ಇತಿ ಸುಽದಾನೂ । ಉಪ । ಸ್ವಧಾಭಿಃ ।**
**ಸೃಜಥಃ । ಪುರಂಽಧಿಂ ।**

**ಪ್ರೇಷತ್ । ವೇಷತ್ । ವಾತಃ । ನ । ಸೂರಿಃ । ಆ । ಮಹೇ । ದದೇ । ಸುಽವ್ರತಃ । ನ । ವಾಜಂ ॥ ೬ ॥**

॥ ಸಾಯಣಭಾಷ್ಯಂ ॥

ಹೇ ಸುದಾನೂ ಶೋಭನದಾನಾವಶ್ವಿನೌ ಯದ್ಯದಾ ನಿಯುತೋಽಶ್ವಾನ್ನಿ ಯುವೇಥೇ ನಿಯುಂಜಾಥೇ ನಿಯೋಜಯಥಃ ತಾಭಿರಸ್ಮದ್ಯಜ್ಞಗಮನಾಯ ಸಂಯುಕ್ತೌ ಭವಥಃ ತದಾ ಸ್ವಧಾಭಿರನ್ನೈಸ್ತತ್ಕಾರಣೈರುದಕೈರ್ವಾ ಪುರಂಧಿಂ ಬಹೂನಾಂ ಧಾತ್ರೀಂ ಪೃಥಿವೀಮುಪ ಸೃಜಥಃ। ಏವಂ ಚ ಸತಿ ಸೂರಿಃ ಸ್ತೋತಾಯಂ ಯಜಮಾನೋ ವಾತೋ ನ ವಾಯುರಿವ ತದ್ವತ್ ಕ್ಷಿಪ್ರಂ ಯುವಾಂ ಪ್ರೇಷತ್। ತರ್ಪಯತು। ವೇಷತ್। ವ್ಯಾಪ್ನೋತು। ಕಾಮಯತಾಂ ವಾ॥ ಪ್ರೀಣಾತೇರ್ವೇಶ್ಚ ಲೇಟಿ ರೂಪೇ॥ ಅನಂತರಂ ಸುವ್ರತೋ ನಾತಿಪ್ರಶಸ್ತೋಽಷ್ಟಾದಿಕರ್ಮವಾನಿವ ವಾಜಮನ್ನಂ ಮಹೇ ಮಹತ್ತ್ವಾಯಾಯಂ ಯಜಮಾನ ಆ ದದೇ।ಆದತ್ತೇ। ಸ್ವೀಕರೋತಿ॥ ಆಜೋ ದೋಽನಾಸ್ಯವಿವರಣೇ। ಪಾ. ೧-೩-೨೦। ಇತ್ಯಾತ್ಮನೇಪದಂ। ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ। ಯದ್ವಾ। ಛಾಂದಸೇ ಲಿಟಿ ರೂಪಂ॥ ಸ್ವೀಕೃತ್ಯ ಸ್ವಮಹತ್ತ್ವಾಯ ಯುವಾಮೇವ ತರ್ಪಯತ್ವಿತ್ಯರ್ಥಃ॥

॥ ಪ್ರತಿಪದಾರ್ಥ ॥

(ಹೇ) **ಸುದಾನೂ**—ಎಲೈ ಶೋಭನದಾನರಾದ ಅಶ್ವಿನೀದೇವತೆಗಳೇ। **ಯತ್**—ಯಾವಾಗ। **ನಿಯುತಃ**—ನಿಯುನ್ನಾಮಕವಾದ ನಿಮ್ಮ ಅಶ್ವಗಳನ್ನು। **ನಿ ಯುವೇಥೇ**—(ರಥಕ್ಕೆ) ಯೋಜನೆಮಾಡುತ್ತೀರೋ (**ತತ್**—ಆಗ)। **ಸ್ವಧಾಭಿಃ**—ಅನ್ನಗಳಿಂದ ಅಥವಾ ಅನ್ನಕಾರಣವಾದ ಉದಕಗಳಿಂದ। **ಪುರಂಧಿಂ**—ಬಹುಜನಗಳಿಗೆ ಧಾತ್ರಿಯಾದ ಈ ಭೂಮಿಯನ್ನು। **ಉಪ ಸೃಜಥಃ**—ಪೂರ್ಣಮಾಡುತ್ತೀರಿ। (**ಏವಂ ಸತಿ**—ಹೀಗಿರಲು)। **ಸೂರಿಃ**—ಸ್ತೋತೃವು (ಯಜಮಾನನು)। **ವಾತಃ ನ**—ವಾಯುವಿನಂತೆ (ಕ್ಷಿಪ್ರವಾಗಿ)। **ಪ್ರೇಷತ್**—(ನಿಮ್ಮಿಬ್ಬರನ್ನೂ) ತೃಪ್ತಿಪಡಿಸಲಿ (ಮತ್ತು)। **ವೇಷತ್**—ಪ್ರಾಪ್ತನಾಗಲಿ ಅಥವಾ ಅಪೇಕ್ಷಿಸಲಿ (ಅನಂತರ)। **ಸುವ್ರತಃ ನ**—ಸತ್ಕರ್ಮನಿಷ್ಠನಾದ ಪುರುಷನಂತೆ। **ವಾಜಂ**—ಅನ್ನವನ್ನು। **ಮಹೇ**—(ತನ್ನ) ಮಹತ್ತ್ವಕ್ಕೋಸ್ಕರ। **ಆ ದದೇ**—(ಈ ಯಜಮಾನನು) ಸ್ವೀಕರಿಸಲಿ (ಅಥವಾ ಸ್ವೀಕರಿಸಿ ನಿಮ್ಮಿಬ್ಬರನ್ನೇ ತೃಪ್ತಿಪಡಿಸಲಿ.)

॥ ಭಾವಾರ್ಥ

ಶೋಭನದಾನರಾದ ಎಲೈ ಅಶ್ವಿನೀದೇವತೆಗಳೇ, ಯಾವಾಗ ಮನೋದ್ದೇಶದಿಂದ ನಿಮ್ಮ ನಿಯುನ್ನಾಮಕಾಶ್ವಗಳನ್ನು ರಥಕ್ಕೆ ಹೂಡಿದಾಗ, ಅನ್ನಕ್ಕೆ ಕಾರಣವಾದ ಉದಕವನ್ನು ಭೂಮಿಯಮೇಲೆ ಸುರಿಸುತ್ತೀರಿ; ಯಜಮಾನನೂ ವಾಯುವೇಗದಿಂದ ನಿಮ್ಮನ್ನು ತೃಪ್ತಿಪಡಿಸಲು ಉದ್ಯುಕ್ತನಾಗುತ್ತಾನೆ; ಸತ್ಕರ್ಮಿಯಾದ ಪುರುಷನಂತೆ ನಿಮ್ಮನುಗ್ರಹದಿಂದ ಪ್ರಾಪ್ತವಾದ ಅನ್ನವನ್ನು ಸ್ವೀಕರಿಸಿ, ನಿಮ್ಮನ್ನೇ ತೃಪ್ತಿಪಡಿಸಿ, ಮಹತ್ತ್ವವನ್ನು ಪಡೆಯುತ್ತಾನೆ.

## English Translation.

Bountiful givers, when you yoke your horses you replenish the earth with viands: may this your worshipper be (swift) as the wind to propitate and please you, that through your great (favour), he may, like a pious man obtain food.

॥ ವಿಶೇಷವಿಷಯಗಳು ॥

**ಸುದಾನೂ—ಶೋಭನದಾನೌ** । ಶ್ರೇಷ್ಠವಾದ ದಾನಿಗಳಾದ ಎಂದು ಅಶ್ವಿನೀದೇವತೆಗಳ ಗುಣವನ್ನು ತೋರಿಸುವ ವಿಶೇಷಣವಾಗಿದೆ. ಇದರ ವಿಶೇಷಾರ್ಥಗಳನ್ನು ಹಿಂದೆ ತಿಳಿಸಿದೆ.

**ನಿಯುತಃ**—ಈ ಪದಕ್ಕೆ **ಅಶ್ವಾನ್** ಎಂದರ್ಥ. **ನಿಯುತೋ ವಾಯೋಃ, ರಾಸಭಾವಶ್ವಿನೋಃ** (ನಿ. ೨-೨೮) ಎಂಬ ವಾಕ್ಯಗಳಿಂದ **ನಿಯುತ್ತು**ಗಳು ವಾಯುವಿನ ವಾಹನಗಳೆಂದೂ, ರಾಸಭಗಳು ಅಶ್ವಿನೀದೇವತೆಗಳ ವಾಹನಗಳೆಂದೂ ಪ್ರಸಿದ್ಧವಾಗಿದೆ. ಇಲ್ಲಿ **ನಿಯುತಃ** ಎಂಬ ಪದವು ಅಶ್ವಿನೀದೇವತೆಗಳ ಅಶ್ವಗಳನ್ನು ತಿಳಿಸ ತಕ್ಕದ್ದಾಗಿದೆ. **ನಿಯುತ್ವಾನ್** ಎಂಬ ವಿಶೇಷಣವೂ ಸಹ ವಾಯುಪರವಾಗಿಯೇ ಆಗಿರಬೇಕೆಂಬ ನಿಯಮವಿಲ್ಲ. ಉದಾಹರಣೆಗೆ—

**ಪ್ರ ವಾವೃಜೇ ಸುಪ್ರಯಾ ಬರ್ಹಿರೇಷಾಮಾ ವಿಶ್ಪತೀವ ಬೀರಿಟ ಇಯಾತೇ ।**
**ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿಯುತ್ವಾನ್ ॥**
(ಋ. ಸಂ. ೭-೩೯-೨)

ಇಂಬಲ್ಲಿ **ನಿಯುತ್ವಾನ್** ಎಂಬುದು **ಪೂಷ**ನಿಗೆ ವಿಶೇಷಣವಾಗಿದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ **ನಿಯುತ್ವಾನ್ ನಿಯುತಃ ಅಸ್ಯಾಶ್ವಾಃ । ನಿಯುತೋ ನಿಯಮನಾದ್ವಾ ।. ನಿಯೋಜನಾದ್ವಾ** ನಿಯಮಿತವಾಗಿರುವುದರಿಂದಾಗಲಿ ಅಥವಾ ಬಂಧಿತವಾಗಿರುವುದರಿಂದಾಲಿ ಅಶ್ವಕ್ಕೆ ಈ ಹೆಸರು ಎಂದು ತಿಳಿಸುತ್ತಾರೆ. (ನಿ. ೫-೨೮) ಇದೇ ನಿರ್ವಚನವನ್ನು ಪ್ರಕೃತವಾದ ಋಕ್ಕಿನಲ್ಲಿರುವ **ನಿಯುತಃ** ಎಂಬ ಪದಕ್ಕೂ ಹೇಳಬೇಕು. ಆಗ ಅಶ್ವಸಾಮಾನ್ಯಕ್ಕೂ ಉಪಯೋಗಿಸಲ್ಪಡಬಹುದಾದ ಈ ಪದವು ಅಶ್ವಿನೀದೇವತೆಗಳ ಅಶ್ವಕ್ಕೂ ವಿಶೇಷಣವಾಗಿದೆ.

ನಿಯಮನವೆಂಬರ್ಥದಲ್ಲಿಯೇ ತತ್ಕಾರಣನಾದ ಈಶ್ವರನಿಗೂ **ನಿಯುತ್ವಾನ್** ಎಂಬ ಹೆಸರು ಪ್ರಸಿದ್ಧವಾಗಿದೆ. ನಿಯುತ್ವಾನ್ ಎಂಬುದು ಈಶ್ವರನಾಮಗಳಲ್ಲಿ ಪಠಿತವಾಗಿದೆ. (ನಿ.೩-೧೧)

**ಸ್ವಧಾಭಿಃ**—ಈ ಪದಕ್ಕೆ **ಅನ್ನೈಃ ತತ್ಕಾರಣೈರುದಕೈರ್ವಾ** ಎಂದರ್ಥಮಾಡಿದೆ. ಕೆಲವೆಡೆಗಳಲ್ಲಿ ಇದೇ ಪದಕ್ಕೆ **ಆತ್ಮೀಯೇನ ತೇಜಸಾ ಅನ್ನೇನ** ವಾ ಎಂದರ್ಥಮಾಡಿದ್ದಾರೆ. ನಿರುಕ್ತಕಾರರು ಈ ಪದವನ್ನು **ಉದಕ** ನಾಮಗಳಲ್ಲಿಯೂ (ನಿ. ೨-೨೩) ಮತ್ತು **ಅನ್ನ**ನಾಮಗಳಲ್ಲಿಯೂ (ನಿ ೩-೯) ಸೇರಿಸಿದ್ದಾರೆ. ಈ ಅರ್ಥಗಳಲ್ಲದೇ ಅನೇಕ ಸಂದರ್ಭಗಳಲ್ಲಿ ಈ ಪದಕ್ಕೆ **ಸ್ವಮಹಿಮೆ; ಸ್ವತೇಜಸ್ಸು, ಸ್ವಾಶ್ರಯ** ಎಂದೂ ಅರ್ಥವಾಗುತ್ತದೆ. ಈ ಪದದ ವಿಶೇಷಾರ್ಥಗಳನ್ನು ಇದೇ ಭಾಗದಲ್ಲಿ ಋ. ಸಂ. ೧-೧೭೬-೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಈ ಪದಕ್ಕೆ ಸಾಧಾರಣವಾದ **ಅನ್ನ ಉದಕ** ಇತ್ಯಾದ್ಯರ್ಥಗಳಲ್ಲದೆ ಈಶ್ವರನ ಶಕ್ತಿಪರ್ಯಾಯವಾಗಿಯೂ ಈ ಪದದ ಪ್ರಯೋಗ ವಿರುವುದು ಒಂದು ವಿಶೇಷ. ಉದಾಹರಣೆಗೆ

**ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।**
**ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥**
(ಋ ಸಂ. ೧೦-೧೨೯-೨)

ಎಂಬಲ್ಲಿ **ಸ್ವಸ್ಮಿನ್ ಧೀಯತೇ ಧ್ರಿಯತೇ ಆಶ್ರಿತ್ಯ ವರ್ತತೇ ಇತಿ ಸ್ವಧಾ** । ಸ್ವಾಶ್ರಯಾವಲಂಬಿಯಾಗಿರುವುದರಿಂದ **ಸ್ವಧಾ** ಎಂದರೆ **ಈಶ್ವರ**ನ (ಪರಬ್ರಹ್ಮನ) ವಿಚಿತ್ರಶಕ್ತಿಯಾದ **ಮಾಯೆ**ಗೆ ವಿಶೇಷಣವಾಗಿದೆಯೆಂದು ಸಾಯಣರು

ವಿವರಿಸಿದ್ದಾರೆ. ಇದರಂತೆಯೇ, **ವಿಷ್ಣು, ಉಷಸ್ಸು** ಇತ್ಯಾದಿಗಳ ಅಲೌಕಿಕವಾದ ಶಕ್ತಿಯನ್ನೂ ವರ್ಣಿಸುವ ಪದವಾಗಿದೆ

**ಪುರಂಧಿಂ—ಬಹೂನಾಂ ಧಾತ್ರೀಂ ಪೃಥಿವೀಂ** । ಅನೇಕರಿಗೆ ಧಾತ್ರಿಯಾದ ಪೃಥಿವಿಯನ್ನು ಎಂದು **ಪುರಂಧಿ** ಶಬ್ದಕ್ಕೆ **ಪೃಥ್ವಿ**ಯೆಂದರ್ಥಮಾಡಿದೆ. ಈ ಪದವು **ಪ್ರಭೂತ, ಪೌಷ್ಕಳ್ಯ, ಸಮೃದ್ಧಿ** ಎಂಬರ್ಥವನ್ನೇ ಎಲ್ಲಾ ಕಡೆಯೂ ಸೂಚಿಸಿದರೂ ಸಹ ಇದರ ಪ್ರಯೋಗವು ಅನೇಕ ಸಂದರ್ಭಗಳಲ್ಲಿರುವುದರಿಂದ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ವಿವರಿಸಬೇಕಾಗಿರುತ್ತದೆಯೆಂದು ನಿರುಕ್ತಕಾರರ ವಾಕ್ಯದಿಂದಲೇ ತಿಳಿಯುತ್ತದೆ. ಹೇಗೆಂದರೆ,

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾಁ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**

(ಋ. ಸಂ. ೭-೩೯-೪)

ಎಂಬ ಋಕ್ಕಿನಲ್ಲಿರುವ **ಪುರಂಧಿಂ** ಎಂಬ ಪದದ ಅರ್ಥವನ್ನು ವಿವರಿಸುವಾಗ, ಅಲ್ಲಿ

**ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ । ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ।**

(ನಿ. ೬-೧೩)

ಸಮೃದ್ಧವಾದ **ಧೀ** (ಬುದ್ಧಿ) ಯುಳ್ಳವನು ಎಂದು ಪುರಂಧಿಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆಯಾದರೆ, ಉದಾಹೃತವಾಗಿರುವ ಈ ಋಕ್ಕಿನಲ್ಲಿ **ಭಗ** ಶಬ್ದವು ಈ ಪದಕ್ಕೆ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ. **ಧೀ** ಶಬ್ದವು **ಕರ್ಮ**ನಾಮಗಳಲ್ಲೂ ಪಠಿತವಾಗಿರುವುದರಿಂದ **ಪುರಂಧಿ**ಯೆಂದರೆ ನಾನಾ ವಿಧವಾದ ಕರ್ಮವುಳ್ಳವನು ಎಂದಾಗಲಿ, ಅಥವಾ ಶತ್ರು ಪಟ್ಟಣಗಳನ್ನು ಸೀಳುವವನು ಎಂದಾಗಲಿ ಅರ್ಥವಾಗುವುದರಿಂದ **ಇಂದ್ರ**ನಿಗೆ ವಿಶೇಷಣವೆಂದು ಇನ್ನು ಕೆಲವರ ಮತ. ಅಥವಾ **ಇಮಾಮೂ ನು ಕವಿತಮಸ್ಯ ಮಾಯಾಂ** (ಋ. ಸಂ. ೫-೮೫-೬) ಇತ್ಯಾದಿ ವಾಕ್ಯಗಳಲ್ಲಿ ವರುಣನ ಶ್ರೇಷ್ಠವಾದ ಪ್ರಜ್ಞೆಯನ್ನು ಸ್ತುತಿಸಿರುವಂತೆ ನಿರುಕ್ತಕಾರರು ಉದಾಹರಿಸಿರುವ ಈ ಋಕ್ಕಿನಲ್ಲಿಯೂ ಅವನ ಪ್ರಜ್ಞೆಯನ್ನು ವರ್ಣಿಸುತ್ತಾ **ವರುಣ**ನಿಗೆ ಪರ್ಯಾಯ ಪದವಾಗಿರಬಹುದೆಂದು ಇನ್ನು ಕೆಲವರ ಮತ ಎಂದು ಈ ರೀತಿ ಅಭಿಪ್ರಾಯ ಭೇಧಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳು ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನನು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸಿದ್ದಾರೆ.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾ ದರಾತೀರ್ಮದೇ ಸೋಮಸ್ಯ ಮೂರಾ ಅಮೂರಾಃ ॥**

(ಋ. ಸಂ. ೪-೨೬-೭)

ಎಂಬ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು (ನಿ ೧೧-೨) **ಪುರಂಧಿಃ ಬಹುಧನಸ್ಯ ದಾತಾ ।** ಅತ್ಯಧಿಕವಾಗಿ ಧನವನ್ನು ದಾನಮಾಡತಕ್ಕವನೆಂದೂ, ಸಾಯಣರು **ಬಹುಕರ್ಮಾ** ಎಂದೂ ಅರ್ಥಮಾಡಿದ್ದಾರೆ. ಈ ಪದವು ಇಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. ಉದಾರಿಯೆಂಬುದರಲ್ಲಿ ತಾತ್ಪರ್ಯ.

**ನೃಧೂತೋ ಅದ್ರಿಷುತೋ ಬರ್ಹಿಷಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದುರ್ಋತ್ವಿಯಃ ।**

**ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ ಇಂದ್ರ ತೇ ॥**

(ಋ. ಸಂ. ೯-೭೨-೪)

ಎಂಬ ಋಕ್ಕಿನಲ್ಲಿ **ಬಹುಕರ್ಮವಾನ್ ಮನುಷ್ಯಃ** ದೇವತೆಗಳ ತೃಪ್ತ್ಯರ್ಥವಾಗಿ ನಾನಾವಿಧವಾದ ಕರ್ಮಗಳುಳ್ಳ ಎಂದರೆ ಕರ್ಮಗಳನ್ನು ಮಾಡುವ ಮಾನವನ ಎಂದರ್ಥಮಾಡಿದೆ ಮತ್ತು,

**ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್ ।**

**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

(ಋ. ಸಂ. ೧೦-೬೫-೧೩)

ಎಂಬ ಋಕ್ಕಿನಲ್ಲಿ ನಿರುಕ್ತಕಾರರು ಈ ಪದಕ್ಕೆ (ನಿ. ೧೨-೩೦). **ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ**-ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ **ವಚಾಂಸಿ**-ವಚನಗಳನ್ನು ಎಂದರ್ಥಮಾಡಿದ್ದಾರೆ. ಸಾಯಣರು **ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ ।** ಬಹುವಿಧವಾದ ಪ್ರಜ್ಞೆಯಿಂದ ಕೂಡಿದ **ಸರಸ್ವತಿಗೆ** ವಿಶೇಷಣವೆಂದು ತಿಳಿಸಿದ್ದಾರೆ. ಆದರೆ ದುರ್ಗಾಚಾರ್ಯರು ಮಾಡಿರುವ (ನಿ. ೧೨-೩೦) **ಬಹುಧಾತ್ರ್ಯಾ; ಮಾಧ್ಯಮಿಕಯಾ ವಾಚಾ** ಎಂಬ ವಿವರಣೆಯಿಂದ **ಪುರಂಧಿ** ಶಬ್ದವು **ಸರಸ್ವತೀ** ಸದೃಶವಾದ ಒಂದು ದೇವತಾವಿಶೇಷವನ್ನು ಸೂಚಿಸುವುದೆಂದು ತಿಳಿಯುತ್ತದೆ. ಇದರಂತೆಯೇ,

**ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।**

**ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥**

(ಋ. ಸಂ. ೭-೩೫-೨)

ಇತ್ಯಾದಿ ಋಕ್ಕುಗಳಲ್ಲಿ **ಪುರಂಧಿಯೇ** ಪ್ರತ್ಯೇಕವಾದ ದೇವತೆಯೆಂದೂ ತಿಳಿದುಬರುತ್ತದೆ. ಸಾಯಣರೂ ಸಹ ಈ ಋಕ್ಕಿನಲ್ಲಿರುವ **ಭಗಾದಿ** ಪದಗಳಿಗೆ ಇದನ್ನು ವಿಶೇಷಣವನ್ನಾಗಿ ಮಾಡಿಲ್ಲ. ಮತ್ತು,

**ದೇವೋ ಭಗಃ ಸವಿತಾ ರಾಯೋ ಅಂಶ ಇಂದ್ರೋ ವೃತ್ರಸ್ಯ ಸಂಜಿತೋ ಧನಾನಾಂ ।**

**ಋಭುಕ್ಷಾ ವಾಜ ಉತ ವಾ ಪುರಂಧಿರವಂತು ನೋ ಅಮೃತಾಸಸ್ತುರಾಸಃ ॥**

(ಋ. ಸಂ. ೫-೪೨-೫)

ಎಂಬಲ್ಲಿ ಈ ಪದವು **ವಿಭ್ವನಿಗೆ** ಪರ್ಯಾಯಪದವಾಗಿದೆ.

**ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ವಿಶ್ವವಾರೇ ।**

(ಋ ಸಂ. ೩-೬೧-೧)

ಇತ್ಯಾದಿ ಕಡೆಗಳಲ್ಲಿ **ಉಷಸ್ಸಿಗೆ** ವಿಶೇಷಣವಾಗಿದೆ. ಬಹುಸ್ತೋತ್ರವತಿಯೆಂದರ್ಥ, ಹೀಗೆಯೇ ಅನೇಕ ಕಡೆಗಳಲ್ಲಿ ಈ ಪದವು ಪತ್ನಿಯ ಪರವಾಗಿಯೂ ಸ್ತ್ರೀಸಾಮಾನ್ಯದ ಪರವಾಗಿಯೂ ಉಪಯೋಗಿಸಲ್ಪಟ್ಟು ಬಂಜೆಯರಲ್ಲದೆ ಸಂತಾನವನ್ನು ಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರು ಎಂಬರ್ಥವನ್ನು ಕೊಡುತ್ತದೆ.

**ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।**
**ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥**

(ಋ. ಸಂ. ೧೦-೮೦-೧)

ಇತ್ಯಾದಿ ಋಕ್ಕುಗಳಲ್ಲಿ (ಋ. ಸಂ. ೧-೧೧೬-೧೩; ೧-೧೧೭-೧೯) ಪ್ರಸವಸಮರ್ಥಳಾದ ಪತ್ನಿಯೆಂದೂ,

**ಪ್ರ ಬೋಧಯಾ ಪುರಂಧಿಂ ಜಾರ ಆ ಸಸತೀಮಿವ ।**
**ಪ್ರ ಚಕ್ಷಯ ರೋದಸೀ ವಾಸಯೋಷಸಃ ಶ್ರವಸೇ ವಾಸಯೋಷಸಃ ॥**

(ಋ. ಸಂ. ೧-೧೩೪-೩)

ಇತ್ಯಾದಿ ಋಕ್ಕುಗಳಲ್ಲಿ ಭೋಗಯೋಗ್ಯಳಾದ ಸ್ತ್ರೀಯೆಂದೂ ಅರ್ಥವಾಗುತ್ತದೆ. ಹೀಗೆ ನಾನಾ ವಿಧವಾದ ಗುಣಗಳನ್ನು ವರ್ಣಿಸುವಾಗ **ಪುರಂಧಿ** ಶಬ್ದವು ಆಯಾ ಗುಣಗಳ ಆಧಿಕ್ಯವನ್ನೂ ಸತ್ವಸಮೃದ್ಧಿಯನ್ನೂ ಸೂಚಿಸುತ್ತದೆ ಪ್ರಕೃತವಾದ ಋಕ್ಕಿನಲ್ಲಿ ಸಂಪತ್ಸಮೃದ್ಧಿಯನ್ನೂ ಕೂಡಿದುದೂ, ಲೋಕಪೋಷಕವಾದುದೂ ಆದ ಪೃಥ್ವಿಯ ಗುಣವನ್ನು ವರ್ಣಿಸುವ ವಿಶೇಷಣಪದವಾಗಿದೆಯೆಂದು ಸಾಯಣಭಾಷ್ಯವು ತಿಳಿಸಿದೆ.

**ಸೂರಿಃ—ಸ್ತೋತಾ ಅಯಂ ಯಜಮಾನಃ ।** ಸ್ತುತಿಕರ್ತನಾದ ಯಜಮಾನನೆಂದು ಯಜ್ಞಕರ್ತನ ಸ್ತುತಿಕರ್ತೃತ್ವವನ್ನು ತಿಳಿಸುತ್ತದೆ. **ರೇಭಃ, ಜರಿತಾ, ಕಾರುಃ** ಇತ್ಯಾದಿ ೧೩ ಸ್ತೋತೃನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ಸೂರಯಃ** ಎಂದರೆ ಸ್ತುತಿಕಾರರು, ಸ್ತೋತ್ರವನ್ನು ಮಾಡತಕ್ಕ ಭಕ್ತರು ಎಂದರ್ಥ. ಪ್ರಾಜ್ಞರ ವಿವೇಕಿಗಳು ಮೇಧಾವಿಗಳು ಎಂದರ್ಥವನ್ನು ಕೊಡತಕ್ಕ ಸಂದರ್ಭಗಳಲ್ಲಿ **ಸೂರಿ** ಶಬ್ದವನ್ನು ಅನೇಕಕಡೆ ಉಪಯೋಗಿಸಿದೆ. ದೇವತೆಗಳ ತತ್ತ್ವಸ್ವರೂಪಗಳನ್ನೂ, ವಿಶ್ವದ ರಹಸ್ಯ ತತ್ತ್ವಗಳನ್ನೂ ಗ್ರಹಿಸುವ ಅಲೌಕಿಕವಾದ ಚಾಕ್ಷುಷವೂ ಮಾನಸಿಕವೂ ಆದ ದರ್ಶನಶಕ್ತಿಯನ್ನು ಪಡೆದಿರುವ ಋಷಿಗಳ ಪರವಾಗಿ ಉಪಯೋಗಿಸಿದಾಗ ಈ ವಿಶೇಷಣವು ಒಂದು ವಿಶೇಷಾರ್ಥವನ್ನು ಕೊಡುತ್ತದೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ॥**

(ಋ. ಸಂ. ೧-೨೨-೨೦)

ಇತ್ಯಾದಿ ಸನ್ನಿವೇಶಗಳಲ್ಲಿ ಕೇವಲ ಸ್ತೋತ್ರಮಾಡತಕ್ಕವರೆಂದು ಮಾತ್ರವಾಗದೆ ಋಷಿಗಳ ಅಸಾಧಾರಣವಾದ ದರ್ಶನ ಶಕ್ತಿಯನ್ನೂ ಸುಚಿಸುತ್ತದೆ. ಮತ್ತು ಈ ಪದವು ಋಷಿಗಳ ಪರವಾಗಿ ಮಾತ್ರವಲ್ಲದೆ ಇಂದ್ರಾದಿ ದೇವತೆಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ--

**ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ।**

(ಋ. ಸಂ. ೧-೬೧-೩)

ಇತ್ಯಾದಿ ಋಕ್ಕುಗಳಲ್ಲಿ **ವಿಪಶ್ಚಿತಮಿಂದ್ರಂ** ಎಂದು ಇಂದ್ರಾದಿ ದೇವತೆಗಳ ಪ್ರಾಜ್ಞತ್ವವನ್ನೂ ತಿಳಿಸುತ್ತದೆ. ಇದಲ್ಲದೆ **ಪ್ರಭು, ಪ್ರೇರಕ, ಸನ್ಮಾರ್ಗಪ್ರವರ್ತಕ** ಎಂಬ ಅರ್ಥಗಳನ್ನು ಸೂಚಿಸುವಾಗಲೂ ಸಹ **ಸೂರಿ** ಶಬ್ದದ ಪ್ರಯೋಗ ವಿದೆ. ಉದಾಹರಣೆಗೆ—

**ಜನೋ ಯಃ ಪಜ್ರೇಭ್ಯೋ ವಾಜಿನೀವಾನಶ್ವಾವತೋ ರಥಿನೋ ಮಹ್ಯಂ ಸೂರಿಃ ।**

(ಋ. ಸಂ. ೧-೧೨೨-೮)

**ಅಸದ್ಯಥಾ ಜರಿತ್ರ ಉತ ಸೂರಿರಿಂದ್ರೋ ರಾಯೋ ವಿಶ್ವವಾರಸ್ಯ ದಾತಾ ।**

(ಋ. ಸಂ. ೬-೨೩-೧೦)

**ಮುಹ್ಯಂತ್ವನ್ಯೇ ಅಭಿತೋ ಜನಾಸ ಇಹಾಸ್ಮಾಕಂ ಮಘವಾ ಸೂರಿರಸ್ತು ।**

(ಋ. ಸಂ. ೧೦-೮೧-೬)

ಎಂಬಿವೇ ಮುಂತಾದ ಸನ್ನಿವೇಶಗಳಲ್ಲಿ ಪ್ರಭುಗಳೂ, ಸನ್ಮಾರ್ಗಪ್ರವರ್ತಕರೂ ಆದ ದೇವತೆಗಳನ್ನು ಕುರಿತು ಈ ವಿಶೇಷಣವು ಇಂದ್ರಾದಿಗಳ ಗುಣವನ್ನು ವರ್ಣಿಸುತ್ತದೆ.

**ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ ವಯಃ ।**

(ಋ. ಸಂ. ೧-೧೪೧-೮)

ಇತ್ಯಾದಿ ಕಡೆಗಳಗಲ್ಲಿ ಬಹಳ ಅಪರೂಪವಾಗಿ **ಮಾರ್ಗ**ವೆಂಬರ್ಥವನ್ನೂ ಕೊಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಸ್ತುತಿಕರ್ತನೆಂಬರ್ಥದಲ್ಲಿ ಈ ಪದದ ಪ್ರಯೋಗವಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯುವೇಥೇ**—ಯು ಮಿಶ್ರಣಾ ಮಿಶ್ರಣಯೋಃ ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ಟಿತ ಆತ್ಮನೇ ಪದಾನಾಂ ಟೇರೇ** (ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. ವ್ಯತ್ಯಯದಿಂದ ಶ ವಿಕರಣ. **ಆತೋ ಙಿತಃ** (ಪಾ. ಸೂ. ೭-೨-೮೧) ಎಂಬುದರಿಂದ ಆಕಾರಕ್ಕೆ ಇಯಾದೇಶ. **ಲೋಪೋರ್ವ್ಯೋ**—ಎಂಬುದರಿಂದ ಯಕಾರಲೋಪ. ಗುಣ. **ಅಚಿಶ್ನು ಧಾತು ಭ್ರುವಾಂ**—(ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಸೃಜಥಃ**—ಸೃಜ ವಿಸರ್ಗೇ. ಧಾತು. ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪ್ರೇಷತ್**—ಪ್ರೀಞ್ ತರ್ಪಣೇ. ಕಾಂತೌ ಚ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ ಲೋಪಃ**—ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಆದೇಶ ಪ್ರತ್ಯಯಯೋಃ** ಎಂಬುದರಿಂದ ಸಿಪಿಗೆ ಷತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಗಳು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವೇಷತ್**—ವೀ ಗತ್ಯಾದಿಷು. ಧಾತು. ಲೇಟ್ ಪ್ರಥಮಪುರುಷ ಏಕವಚನಾಂತರೂಪ. ಹಿಂದಿನಂತೆ ಕಾರ್ಯಗಳು ಬರುತ್ತವೆ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ದದೇ**—ಡುದಾಞ್ ದಾನೇ ಧಾತು. ಆಙ್ ಉಪಸರ್ಗಸಂಬಂಧವಿರುವುದರಿಂದ **ಆಙೋದೋನಾಸ್ಯವಿಹರಣೇ**—(ಪಾ. ಸೂ. ೧-೩-೨೦) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಪ್ರಥಮಪುರುಷ ಏಕವಚನದಲ್ಲಿ

ತ ಪ್ರತ್ಯಯ. ಟಿಗೆ ಏತ್ವ. ಶ್ಲು ವಿಕರಣ. ದ್ವಿತ್ವಾದಿ. **ಲೋಪಶ್ಚ ಆತ್ಮನೇಪದೇಷು** ಎಂಬುದರಿಂದ ತಕಾರ ಲೋಪ. ಅಥವಾ ಛಾಂದಸವಾಗಿ ಲಿಟ್. ತಿಙಂತನಿಘಾತಸ್ವರಬರುತ್ತದೆ.

**ಸುವ್ರತಃ**— ಶೋಭನಂ ವ್ರತಂ ಯಸ್ಯ ಸಃ. **ನಞ್ ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

**ವಯಂ ಚಿದ್ಧಿ ವಾಂ ಜರಿತಾರಃ ಸತ್ಯಾ ವಿಪನ್ಯಾಮಹೇ ವಿ ಪಣಿರ್ಹಿತಾವಾನ್ ।**
**ಅಧಾ ಚಿದ್ಧಿ ಷ್ಮಾಶ್ವಿನಾವನಿಂದ್ಯಾ ಪಾಥೋ ಹಿ ಷ್ಮಾ ವೃಷಣಾವಂತಿದೇವಂ ॥ ೭ ॥**

॥ ಪದಪಾಠಃ ॥

**ವಯಂ । ಚಿತ್ । ಹಿ । ವಾಂ । ಜರಿತಾರಃ । ಸತ್ಯಾಃ । ವಿಪನ್ಯಾಮಹೇ । ವಿ । ಪಣಿಃ । ಹಿತಽವಾನ್ ।**
**ಅಧ । ಚಿತ್ । ಹಿ । ಸ್ಮ । ಅಶ್ವಿನೌ । ಅನಿಂದ್ಯಾ । ಪಾಥಃ । ಹಿ । ಸ್ಮ । ವೃಷಣೌ । ಅಂತಿಽದೇವಂ ॥ ೭ ॥**

॥ ಸಾಯಣಭಾಷ್ಯಂ ॥

**ವಯಂ ಚಿದ್ಧಿ ವಯಮಪಿ ಜರಿತಾರಸ್ತವ ಸ್ತೋತಾರಃ ಸತ್ಯಾಃ ಸತ್ಯಫಲಾಃ ಸಂತೋ ವಿಪನ್ಯಾಮಹೇ । ವಿವಿಧಂ ಸ್ತುಮಃ । ಪಣಿಃ ಪಣಾಧಾರೋ ದ್ರೋಣಕಲಶೋ ವಿ ಹಿತವಾನ್ ಸ್ಥಾಪಿತರಸವಾನಾಸೀತ್ । ಯದ್ವಾ । ಪಣಿರ್ವಣಿಗ್ಲುಬ್ಧಕೋಽಯಮಷ್ಟಾ ಹಿತವಾನ್ನಿಯತಧನೋ ಧನಾಢ್ಯೋಽಪ್ಯಯಮಷ್ಟಾ ವಿ । ವಿಯುಜ್ಯತಾಂ ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ॥ ಅಧಾಪಿ ಚ ಚಿದ್ಧಿ ಷ್ಮ । ಏತೇ ತ್ರಯಃ ಪೂರಣಾಃ । ಹೇ ಅಶ್ವಿನಾವನಿಂದ್ಯಾ । ಪ್ರಶಸ್ಯನಾವ್ಯೈತತ್ । ಹೇ ಪ್ರಶಸ್ತೌ ವೃಷಣೌ ಹೇ ಕಾಮಾನಾಂ ವರ್ಷಿತಾರೌ ಯುವಾಮಂತಿದೇವಂ ದೇವಾನಾಮಂತಿಕೇ ಪಾಥಃ । ಸೋಮಂ ಪಿಬಥಃ । ಯದ್ವಾ । ಅಂತಿಕೇ ವರ್ತಮಾನಂ ದೇವಾನ್ಪ್ರಾಪ್ನುವಾನಂ ಸೋಮಮಿತಿ ಯೋಜ್ಯಂ ॥**

॥ ಪ್ರತಿಪದಾರ್ಥ ॥

**(ಹೇ) ಅಶ್ವಿನೌ**— ಎಲೈ ಅಶ್ವಿನೀದೇವತೆಗಳೇ । **ಜರಿತಾರಃ**— ನಿಮ್ಮ ಸ್ತೋತೃಗಳಾದ । **ವಯಂ ಚಿತ್ ಹಿ**— ನಾವೂಕೂಡ । **ಸತ್ಯಾಃ**— ಸತ್ಯಫಲರಾಗಿ । **ವಾಂ**— ನಿಮ್ಮಿಬ್ಬರನ್ನು । **ವಿಪನ್ಯಾಮಹೇ**— ವಿವಿಧ ರೀತಿಯಲ್ಲಿ ಸ್ತುತಿಸುತ್ತೇವೆ । **ಪಣಿಃ**— ದ್ರೋಣಕಲಶವು । **ವಿ ಹಿತವಾನ್**—(ಸೋಮರಸಯುಕ್ತವಾಗಿ) ಸ್ಥಾಪಿತವಾಗಿದೆ । [ಅಥವಾ **ಪಣಿಃ**—(ಲುಬ್ಧನಾದ) ವರ್ತಕನು । **ಹಿತವಾನ್**— ನಿಯತಧನನಾದರೂ । **ವಿ (ಯುಜ್ಯತಾಂ)**— ವಿಸರ್ಜಿಸಲ್ಪಡಲಿ ।] **(ಚಿತ್ । ಹಿ ಷ್ಮ**— ಮೂರೂ ವಾಕ್ಯಪೂರಕಗಳು) । **ಅಧ**— ಮತ್ತೂ । **ಅನಿಂದ್ಯಾ**— ಅನಿಂದ್ಯರಾದ

(ಸ್ತುತ್ಯರಾದ) । (ಹೇ **ಅಶ್ವಿನೌ**— ಎಲೈ ಅಶ್ವಿನೀದೇವತೆಗಳೇ) । **ವೃಷಣೌ**—ಕಾಮವರ್ಷಕರಾದ ನೀವಿಬ್ಬರೂ । **ಅಂತಿದೇವಂ**—(ಇತರ) ದೇವತೆಗಳ ಸಮೀಪದಲ್ಲಿ । **ಪಾಥಃ**—ಸೋಮಪಾನಮಾಡಿ । [ಅಥವಾ **ಅಂತಿದೇವಂ**—ದೇವತೆಗಳನ್ನು ಪ್ರಾಪ್ತವಾಗುವ ಸೋಮರಸವನ್ನು । **ಪಾಥಃ ಸ್ಮ ಹಿ**— ಪಾನಮಾಡುತ್ತೀರಷ್ಟೆ.]

॥ ಭಾವಾರ್ಥ ॥

ಎಲೈ ನಿರ್ದುಷ್ಟರಾದ ಅಶ್ವಿನೀದೇವತೆಗಳೇ, ನಿಮ್ಮ ಸ್ತೋತೃಗಳಾದ ನಾವೂ ನಿಮ್ಮಿಬ್ಬರನ್ನು ವಿವಿಧವಾಗಿ ಸ್ತುತಿಸುತ್ತೇವೆ; ನಿಮಗೋಸ್ಕರ ದ್ರೋಣಕಲಶದಲ್ಲಿ ಸೋಮರಸವು ಸ್ಥಾಪಿತವಾಗಿದೆ; ಕಾಮವರ್ಷಕರಾದ ನೀವೂ ಇತರ ದೇವತೆಗಳ ಸಮೀಪದಲ್ಲಿ ಕುಳಿತು ಸೋಮಪಾನಮಾಡಿ.

English Translation·

Your sincere adorers, we verily praise you in various ways, The pitcher has been placed (ready for the Soma juice). Irreproachable Ashwins, showcrer (of benefits), drink freely of the juice in the presence of the gods.

॥ ವಿಶೇಷವಿಷಯಗಳು ॥

**ಜರಿತಾರಃ**—ಜರಿತೃ ಶಬ್ದವನ್ನು ಸ್ತೋತೃನಾಮಗಳಲ್ಲಿ ಪಠಿಸಿದೆ. (ನಿ. ೩-೧೯) ನಿರುಕ್ತಕಾರರು **"ನೂನಂ ಸಾ ತೇ ಪ್ರತಿ ವರಂ ಜರಿತ್ರೇ"** ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಜರಿತೃ**ವೆಂದರೆ **ಗರಿತೃ**ವೆಂದರ್ಥಮಾಡಿದ್ದಾರೆ. **ಜರಿತಾ ಗರಿತಾ** (ನಿ. ೧-೭) ಸ್ತುತಿಯು ಗಾನಾತ್ಮಕವಾದುದರಿಂದ ಸ್ತುತಿಕರ್ತನೇ ಗಾಯಕನೂ ಆಗಿರುತ್ತಾನೆಂದು ಈ ತಾದಾತ್ಮ್ಯದ ಅಭಿಪ್ರಾಯವು. ಇದಲ್ಲದೆ **ಜರಿತೃ**ವೆಂಬ ಅಂಕಿತನಾಮವೂ ಪ್ರಸಿದ್ಧವಾಗಿದೆ· ಉದಾಹರಣೆಗೆ

**ಅಯಮಗ್ನೇ ಜರಿತಾ ತ್ವೇ ಅಭೂದಪಿ ಸಹಸಃ ಸೂನೋ ನಹ್ಯ೧ನ್ಯದಸ್ತ್ಯಾಪ್ಯಂ ।**
**ಭದ್ರಂ ಹಿ ಶರ್ಮ ತ್ರಿವರೂಥಮಸ್ತಿ ತ ಆರೇ ಹಿಂಸಾನಾಮಪ ದಿದ್ಯುಮಾ ಕೃಧಿ ॥**

(ಋ· ಸಂ. ೧೦-೧೪೨-೧)

ಎಂಬ ಋಕ್ಕು ಮತ್ತು ಅದರ ಮುಂದಿನ ಋಕ್ಕು ಇವೆರಡು ಮಂತ್ರಗಳಿಗೂ **ಜರಿತೃ**ವೆಂಬ ಋಷಿಯು ಕರ್ತೃವಾಗಿದ್ದಾನೆ. ಸ್ತುತಿಕರ್ತನೇ ಜರಿತೃವಾದುದರಿಂದ ಉದಾಹೃತವಾಗಿರುವ ಋಕ್ಕಿನಲ್ಲಿರುವ **ಜರಿತೃ** ಶಬ್ದಕ್ಕೆ **ಗರಿತೃ**ವೆಂದಾಗಬಹುದು. ಅಥವಾ ಅದು ಋಷಿಯ ಹೆಸರಾಗಿರಬಹುದು. ಸ್ತುತಿಕರ್ತೃವಿಗೆ ಪರ್ಯಾಯವಾಗಿ ಈ ಪದವು ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ· ಇಂತಹ ಶ್ರೇಷ್ಠವಾದ ಸ್ತುತಿಕರ್ತನ ಪ್ರಾರ್ಥನೆಯೆಲ್ಲವೂ ಸತ್ಯಾತ್ಮಕವಾದ ಫಲವನ್ನೇ ಕೊಡುವುದೆಂಬ ಶ್ರದ್ಧೆಯಿರುವುದರಿಂದ **ಸತ್ಯಾಃ** ಎಂಬ ವಿಶೇಷಣದ ಪ್ರಯೋಗವಿದೆ.

**ಸತ್ಯಾಃ—ಸತ್ಯಫಲಾಃ ಸಂತಃ** ಎಂದು ಇದರ ಅರ್ಥವನ್ನು ವಿವರಿಸಿದೆ. **ಸತ್ಯ** ಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಶ್ರೇಷ್ಠವಾದುದೂ ನೈತಿಕವಾದುದೂ ಆದ ಅರ್ಹತೆಯನ್ನೂ ಶಕ್ತಿಯನ್ನೂ ತೋರಿಸುವ ಅರ್ಥವನ್ನು ಮುಂದಿಟ್ಟುಕೊಂಡೇ ಉಪಯೋಗಿಸಲ್ಪಟ್ಟಿದೆ. ಇಂತಹ ಉತ್ತಮವಾದ ಅರ್ಹತೆಯುಳ್ಳವರು ಆಚರಿಸುವ ಕ್ರಿಯೆಗಳೂ ಸತ್ಯರೂಪವಾಗಿಯೇ ಇರುವುವು. ಈ ಅರ್ಥವನ್ನೇ ವ್ಯಕ್ತಪಡಿಸಿ ನಿರುಕ್ತಕಾರರೂ ಸಹ ಸತ್ಯಶಬ್ದದ ನಿರ್ವಚನವನ್ನು ಈ ರೀತಿ ಹೇಳಿದ್ದಾರೆ.

**ಸತ್ಯಂ ಕಸ್ಮಾತ್ ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ ।**

(ನಿ. ೩-೧೩)

ಸಜ್ಜನರಲ್ಲಿ ಹರಡಿರುತ್ತದೆ. ಅಥವಾ ಸಜ್ಜನರಲ್ಲಿ ಉತ್ಪನ್ನವಾಗುತ್ತದೆ. ಆದುದರಿಂದ ಸತ್ಯವೆಂದು ಕರೆಯಲ್ಪಟ್ಟಿದೆಯೆಂಬುದು ನಿರುಕ್ತಕಾರರ ವಿವರಣೆಯಾಗಿದೆ. ಈ ನಿರ್ವಚನದ ಪ್ರಕಾರ ಸತ್ಯಾತ್ಮಕವಾದ ಫಲವೂ ಸಹ ಸಜ್ಜನರಿಗೇ ಲಭಿಸಬೇಕಾಗಿರುವುದರಿಂದ ಸದ್ಗುಣಿಗಳ ಸತ್ಯಕರ್ಮಕ್ಕೆ ತಕ್ಕ ಸದಾತ್ಮಕವಾದ ಫಲ ಎಂಬಭಿಪ್ರಾಯವು ಈ ಋಕ್ಕಿನ ವರ್ಣನೆಯಿಂದ ಸೂಚಿತವಾಗಿದೆ. ಸತ್ಯಮಾರ್ಗಾವಲಂಬಿಯಾದ ದೈವಭಕ್ತನಿಗೂ ಅಸತ್ಯಮಾರ್ಗಾವಲಂಬಿಯಾದ ದೈವನಿಂದಕನಿಗೂ ಇಲ್ಲಿ ವ್ಯತ್ಯಾಸವನ್ನು ತೋರಿಸಿ ದೈವನಿಂದಕನ ಶಕ್ತಿಯು ಪ್ರಾರಂಭದಲ್ಲಿ ಎಷ್ಟೇ ಅಧಿಕವಾಗಿದ್ದರೂ ಸಹ ಕೊನೆಯಲ್ಲಿ ತಾನಾಗಿಯೇ ಕ್ಷೀಣಿಸುತ್ತದೆಯೆಂದೂ, ದೈವಭಕ್ತನ ಸಾಮರ್ಥ್ಯಗಳು ವೃದ್ಧಿಯನ್ನು ಹೊಂದುವುದೆಂದೂ ಆ ವೃದ್ಧಿಯು ಅವನ ಸತ್ಯಜೀವನದ ಫಲವೆಂದೂ ತಿಳಿಸಿದೆ. ಹೀಗೆ ಇಲ್ಲಿ **ಸತ್ಯ** ಶಬ್ದವು ಕರ್ಮಪರವಾಗಿಯೂ ಉಪಯೋಗಿಸಲ್ಪಟ್ಟಿರುವುದರಿಂದ ಈ ಎರಡು ಸನ್ನಿವೇಶಗಳಲ್ಲೂ ಸಹ ಈ ಭಾವವು ಯಾವ ವಿಶ್ವತತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸಬೇಕಾಗಿದೆ.

**ತೇ ದೇವಾ ಉತ್ಸೃಜ್ಯಾನೃತಂ । ಸತ್ಯಮನ್ವಾಲೇಭಿರೇ ।**

(ಶ. ಬ್ರಾ. ೯-೫-೧-೧೩)

**ತದ್ಯತ್ತತ್ಸತ್ಯಂ । ತ್ರಯೀ ಸಾ ವಿದ್ಯಾ ತೇ ದೇವಾ ಅಬ್ರುವನ್ ಯಜ್ಞಂ ಕೃತ್ವೇದಂ ಸತ್ಯಂ ತನವಾಮಹಾ ಇತಿ ॥**

(ಶ. ಬ್ರಾ. ೯-೫-೧-೧೮)

ದೇವತೆಗಳು ಅಸತ್ಯವನ್ನು ತ್ಯಜಿಸಿ ಸತ್ಯವನ್ನೇ ದೃಢವಾಗಿ ಅವಲಂಬಿಸಿದರು. **ತ್ರಯೀ** ಎಂದು ಕರೆಸಿಕೊಳ್ಳುವ ಮೂರು **ವೇದಗಳೇ** ಈ ಸತ್ಯಸ್ವರೂಪಗಳಾಗಿವೆಯಾದ್ದರಿಂದ ವೇದೋಕ್ತವಾದ ಕರ್ಮಗಳನ್ನಾಚರಿಸಿ **ಸತ್ಯವನ್ನು** ಹರಡೋಣ ಎಂದು ದೇವತೆಗಳು ಆಶಿಸಿದರು. ಇತ್ಯಾದಿಯಾಗಿ ಸತ್ಯಕ್ಕೂ ಆಚರಣೆಗೂ ಇರತಕ್ಕ ತಾತ್ತ್ವಿಕವಾದ ಸಂಬಂಧವನ್ನು ತೋರಿಸುವುದಲ್ಲದೆ ಇಂತಹ ಶುದ್ಧವಾದ ಕರ್ಮಾಚರಣೆಗಳಿಂದ ಪೂರ್ಣವಾದದ್ದೂ ಸಕಲ ಸಂಪದ್ಯುಕ್ತವಾದ್ದೂ ಆದ ಶ್ರೇಯಸ್ಸನ್ನೂ ಪಡೆಯಬಹುದೆಂದೂ ಆಶಿಸಿದೆ.

**ನಾಭಿರ್ಋತಸ್ಯ ಸಪ್ರಥಾ ಇತಿ । ಸತ್ಯಂ ವಾ ಋತಂ ವಾ ಋತಂ ಸತ್ಯಸ್ಯ ನಾಭಿಃ ಸಪ್ರಥಾ ಇತ್ಯೇವೈತದಾಹ ಸ ನೋ ವಿಶ್ವಾಯುಃ ಸಪ್ರಥಾ ಇತಿ ಸ ನಃ ಸರ್ವಾಯುಃ ಇತ್ಯೇವೈತದಾಹ ।**

(ಶ. ಬ್ರಾ. ೧೪-೩-೧-೧೮)

ಇತ್ಯಾದಿ ವಿವರಣೆಗಳಿಂದ ವಿಶ್ವನಿಯಮಕ್ಕೂ ಸತ್ಯಕ್ಕೂ ಇರುವ ತಾದಾತ್ಮ್ಯವನ್ನು ತೋರಿಸಿ ಇಂತಹ ಸತ್ಯವನ್ನು ಅನುಸರಿಸುವುದರಿಂದಲೂ ಸತ್ಯಕರ್ಮಗಳನ್ನು ಆಚರಿಸುವುದರಿಂದಲೂ ಪೂರ್ಣಾಯಸ್ಸು ಫಲರೂಪವಾಗಿ ದೊರಕುವುದೆಂದೂ ಸತ್ಫಲಕ್ಕೂ ಸತ್ಕರ್ಮಕ್ಕೂ ಇರುವ ಕಾರ್ಯಕಾರಣ ಸಂಬಂಧವನ್ನು ತಿಳಿಸಿದೆ.

ಸತ್ಯಾತ್ಮಕವಾದ ಕರ್ಮಾಚರಣೆಗೂ ಸಹ ವಿಶ್ವನಿಯಮವನ್ನೂ ಅದಕ್ಕೆ ಕಾರಣವಾದ ದೇವತೆಗಳ ಸ್ವರೂಪವನ್ನು ತಿಳಿಯಬೇಕಾದುದು ಅತ್ಯವಶ್ಯಕವಾದುದರಿಂದ ಆ ಜ್ಞಾನವೂ ಸಹ ಸತ್ಯದಿಂದಲೇ ಸಾಧ್ಯವೆಂಬುದನ್ನು ಸಹ ಅನೇಕ ಸನ್ನಿವೇಶಗಳಲ್ಲಿ ವಿಶದವಾಗಿ ತಿಳಿಸಿದೆ.

**ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।**
**ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ ॥**

(ಋ. ಸಂ. ೩-೩೯-೫)

**ತೆ ಇದ್ದೇವಾನಾಂ ಸಧಮಾದ ಆಸನ್ನೃತಾವಾನಃ ಕವಯಃ ಪೂರ್ವ್ಯಾಸಃ ।**
**ಗೂಳ್ಹಂ ಜ್ಯೋತಿಃ ಪಿತರೋ ಅನ್ವವಿಂದನ್ತ್ಸತ್ಯಮಂತ್ರಾ ಅಜನಯನ್ನುಷಾಸಂ ॥**

(ಋ. ಸಂ. ೭-೭೬-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಋಷಿಗಳೆಲ್ಲರೂ ಸಹ ಸತ್ಯಾತ್ಮಕರಾದ ದೇವತೆಗಳ ಸ್ವರೂಪವನ್ನು ತಿಳಿದು ಕರ್ಮಗಳನ್ನಾಚರಿಸಿದುದರ ಫಲವಾಗಿ ಸಂಪತ್ತನ್ನು ಪಡೆದರೆಂಬ ಹಿಂದಿನ ಸಂದರ್ಭಗಳನ್ನು ಸೂಚಿಸುವ ವಾಕ್ಯಗಳು ಬಹಳವಾಗಿವೆ. ಮತ್ತು ಸತ್ಯದಿಂದಲೇ ನಮಗೆ ಶುಭವಾಗಲಿ ಎಂಬ ಪ್ರಾರ್ಥನೆಯೂ ಜೊತೆಯಲ್ಲಿಯೇ ಇದೆ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತಮಾಶುಷಾಣಾಃ ।**
**ಶುಚೀದಯನ್ದೀಧಿತಿಮುಕ್ಥಶಾಸಃ ಕ್ಷಾಮಾ ಭಿಂದಂತೋ ಅರುಣೀರಪವ್ರನ್ ॥**

(ಋ. ಸಂ. ೪-೨-೧೬)

ನಮ್ಮ ಪಿತೃಗಳು ಸತ್ಯಾತ್ಮಕವಾದ ಯಜ್ಞಾಚರಣೆಯಿಂದ ಯಾವ ಒಳ್ಳೆಯ ಫಲಗಳನ್ನು ಪಡೆದರೋ ಅದೇ ರೀತಿ ಈಗಲೂ ಸಹ ನಮ್ಮ ಕರ್ಮಗಳೆಲ್ಲವೂ **ತತ್ಸತ್ಯಮಸ್ತು** ಸತ್ಯವಾದ ಫಲಗಳನ್ನು ಕೊಡುವುದಾಗಲಿ ಇತ್ಯಾದಿ ಪ್ರಾರ್ಥನೆಗಳಲ್ಲಿ **ಸತ್ಯಧರ್ಮ**ರಾದ ಅಗ್ನ್ಯಾದಿ ದೇವತೆಗಳ ಸತ್ಯಸ್ವರೂಪವೂ ವರ್ಣಿತವಾಗಿದೆ.

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**
(ಋ. ಸಂ. ೧-೬೭-೩)

**ಕವಿಮಗ್ನಿಮುಪಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವಚಾತನಂ ।**
(ಋ. ಸಂ. ೧-೧೨-೭)

**ದೇವೋ ನ ಯಃ ಸವಿತಾ ಸತ್ಯಮನ್ಮಾ ಕ್ರತ್ವಾ ನಿಪಾತಿ ವೃಜನಾನಿ ವಿಶ್ವಾ ।**
**ಪುರುಪ್ರಶಸ್ತೋ ಅಮತಿರ್ನ ಸತ್ಯ ಆತ್ಮೇವ ಶೇವೋ ದಿಧಿಷಾಯ್ಯೋ ಭೂತ್ ॥**
(ಋ. ಸಂ. ೧-೭೩-೨)

ಮುಂತಾದ ಅನೇಕ ಕಡೆಗಳಲ್ಲಿ ಅಗ್ನ್ಯಾದಿದೇವತೆಗಳೂ **ಸತ್ಯ**ದಿಂದಲೇ ಪೃಥಿವ್ಯಾದಿಲೋಕಗಳನ್ನೂ ಧರಿಸಿದುದನ್ನೂ, ಲೋಕರಕ್ಷಣೆಯನ್ನು ನಿರ್ವಹಿಸಿದುದನ್ನೂ ಮಾನವರೂ ಸಹ ಅದೇ ಸತ್ಯಮಾರ್ಗವನ್ನನುಸರಿಸಬೇಕೆಂಬುದನ್ನೂ ತಿಳಿಸಿದೆ. ಬ್ರಾಹ್ಮಣ ಮತ್ತು ಉಪನಿಷದಾದಿಗಳಲ್ಲಿ ತಿಳಿಸಿರುವ **ಸತ್ಯ** ಶಬ್ದದ ನಿರ್ವಚನವನ್ನೂ ಮತ್ತು ಯಾವ ರೀತಿ ವಿಶ್ವಾತ್ಮವೇ ಸತ್ಯಾತ್ಮಕವಾಗಿ ಅಸತ್ಯಾತ್ಮಕವಾದ ಅನೃತವನ್ನೂ ಆವರಿಸಿದೆಯೆಂದು ಸತ್ಯಸ್ವರೂಪವರ್ಣನವನ್ನೂ ಸಹ ಮುಂದಿನ ಭಾಗದಲ್ಲಿ ಋ. ಸಂ. ೧-೧೮೫-೧೧ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಲಾಗುತ್ತದೆ.

**ವಿಪನ್ಯಾಮಹೇ**—ಈ ಪದಕ್ಕೆ Monier Williams ಎಂಬ ಪಂಡಿತನು ತನ್ನ English-Sanskrit Dictionary ಯಲ್ಲಿ To pride one's self or to boast ಎಂದರ್ಥಮಾಡಿ ಪ್ರಕೃತವಾದ ೧-೧೮೦-೭ ನೇ ಋಕ್ಕನ್ನು ಉದಾಹರಿಸಿದ್ದಾನೆ. **ವಿಪನ್ಯು** ಶಬ್ದವು **ವಿಪ್ರಃ, ವಿಗ್ರಃ** ಇತ್ಯಾದಿ ಮೇಧಾವಿ ನಾಮಗಳಲ್ಲಿ

ಪಠಿತವಾಗಿದೆ. (ನಿ. ೩-೧೯) ಮೇಧಾವಿಗಳೂ, ಭಕ್ತಿಯುತರೂ ಆದ ಸ್ತೋತೃಗಳು ಎಂಬರ್ಥದಲ್ಲಿಯೇ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿದೆ. **ತದ್ವಿಪ್ರಾಸೋ ವಿಪನ್ಯವಃ** (ಋ. ಸಂ ೧-೨೩-೨೧); **ಅವಸಾ ವಿಪನ್ಯವಃ** (ಋ. ಸಂ. ೧-೧೦೨-೫); **ವಿಪನ್ಯವೋ ದೀಧ್ಯತೋ ಮನೀಷಾ** (ಋ. ಸಂ. ೨-೨೦-೧) ಇತ್ಯಾದಿ ಋಕ್ಕುಗಳಲ್ಲೆಲ್ಲಾ ಅರ್ಥವಾಗುವಂತೆ **ವಿಶೇಷೇಣ ಸ್ತೋತಾರಃ ।** ಅತಿಶಯವಾಗಿ ಸ್ತುತಿಮಾಡುವವರೆಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸುವುದಾಗಿ ಯಜ್ಞಕರ್ತನು ಹೇಳಿಕೊಂಡಿದ್ದಾರೆ. Dictionary ಯ ಅರ್ಥವನ್ನು ಅನುಸರಿಸುವುದಾದರೆ, ಇಲ್ಲಿ ಯಜ್ಞಕರ್ತನು ತನ್ನ ಭಕ್ತ್ಯತಿಶಯವನ್ನೂ, ಸ್ತುತಿಯ ವೈಶಿಷ್ಟ್ಯವನ್ನೂ ತಿಳಿಸಲು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ ಎಂದರ್ಥಮಾಡಬಹುದು.

**ಪಣಿಃ—ಪಣಿ** ಶಬ್ದಕ್ಕೆ **ವ್ಯಯಾಸಹಿಷ್ಣವೋ ವಣಿಜಃ** । ಖರ್ಚುಮಾಡಲು ಹಿಂಜರಿಯತಕ್ಕ ವೈಶ್ಯರು (ವ್ಯಾಪಾರಿಗಳು) ಎಂದು ಸಾಯಣರು ಅನೇಕ ಕಡೆಗಳಲ್ಲಿ ಅರ್ಥವನ್ನು ಹೇಳಿದ್ದಾರೆ. ಮತ್ತು **ಪಣಿರ್ವಣಿಗ್ಭವತೀತಿ ಯಾಸ್ಕಃ** ಎಂದು ಯಾಸ್ಕರ ಮತವನ್ನೂ ಉದಾಹರಿಸಿದ್ದಾರೆ. ನಿರುಕ್ತಕಾರರು ಈ ಪದದ ಅರ್ಥವನ್ನು ವಿವರಿಸುವಾಗ,

**ಇಂದ್ರೋ ವಿಶ್ವಾನ್ಬೇಕನಾಁ ಅಹರ್ದೃಶ ಉತ ಕ್ರತ್ವಾ ಪಣೀಁರಭಿ ।**

(ಋ. ಸಂ. ೮-೬೬-೧೦)

ಎಂಬ ಋಕ್ಕನ್ನುದಾಹರಿಸಿ ಅಲ್ಲಿರುವ **ಪಣಿ** ಶಬ್ದಕ್ಕೆ **ವಣಿಜಃ,** ವ್ಯಾಪಾರವನ್ನು ಮಾಡುವವರು ಎಂಬರ್ಥವನ್ನು ಹೇಳಿದ್ದಾರೆ. (ನಿ. ೬-೨೬) ಮತ್ತು **ಪಣಿಃ ಪಣನಾತ್ ವಣಿಕ್ ಪಣ್ಯಂ ನೇನೇಕ್ತಿ ।** ವ್ಯಾಪಾರವನ್ನು ಮಾಡುವುದರಿಂದ ವೈಶ್ಯನಿಗೆ ಪಣಿಯೆಂದು ಹೆಸರು. ಮತ್ತು ಆ ವ್ಯಾಪಾರಿಯು ಯಾವಾಗಲೂ ತನ್ನ ಪದಾರ್ಥವನ್ನು ವ್ಯಾಪಾರಕ್ಕೆ ಯೋಗ್ಯವಾಗಿರಲೆಂದು ಶುದ್ಧವಾಗಿಟ್ಟಿರುತ್ತಾನೆಂದು ವಿವರಿಸಿದೆ. (ನಿ. ೨-೧೭) ಇದಲ್ಲದೇ ಇನ್ನು ಕೆಲವೆಡೆಗಳಲ್ಲಿ ಸಾಯಣರು ಈ ಪದಕ್ಕೆ **ಪಣಯ ಇತಿ ಲುಬ್ಧಕಾಃ ಅಬುಧ್ಯಮಾನಾ ಯಾಗಾದೀನಕುರ್ವಾಣಾ ಅದಾನಶೀಲಾ ಅಸ್ಮಚ್ಛತ್ರವಃ ।** ಲೋಭಿಗಳೂ ಯಾಗಾದಿಕರ್ಮಗಳನ್ನು ನೆರವೇರಿಸದವರೂ, ದಾನಾದಿಕರ್ಮರಹಿತರೂ ಆದ ಶತ್ರುಗಳೆಂದೂ ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಈ ಪದಕ್ಕೆ ಎರಡು ವಿಧವಾದ ಅರ್ಥವು ಸಾಧ್ಯವೆಂದು ತಿಳಿಸಿದೆ. ಮೊದಲನೆಯದಾಗಿ, **ಪಣಾಧಾರೋ ದ್ರೋಣಕಲಶಃ ।** ಸೋಮರಸವನ್ನಿಡತಕ್ಕ ದ್ರೋಣಕಲಶವೆಂದೂ ಅಥವಾ ಎರಡನೆಯದಾಗಿ, **ಪಣಿರ್ವಣಿಗ್ಲುಬ್ಧೋಽಯಷ್ಟಾ ಹಿತವಾನ್ನಿಯತಧನೋ ಧನಾಢ್ಯೋಽಪ್ಯಯಷ್ಟಾ**- ಐಶ್ವರ್ಯವಂತನಾದರೂ ಸಹ ಯಜ್ಞಮಾಡದಿರತಕ್ಕ ಲುಬ್ಧನು ಎಂದೂ ಅರ್ಥಮಾಡಿದ್ದಾರೆ **ಪಣಿ** ಶಬ್ದವು ದ್ರೋಣಕಲಶಪರ್ಯಾಯವಾಗಿ ಉಪಯೋಗಿಸಿರುವುದು ಅಪರೂಪ. ಕರ್ಮರಹಿತ, ಅಥವಾ ಅಸುರ ಇತ್ಯಾದ್ಯರ್ಥಗಳಲ್ಲೇ ಇದರ ಪ್ರಯೋಗವು ಅಧಿಕವಾಗಿದೆ. ಪಣಿಯೆಂಬುದೊಂದೂ ಅಸುರರ ಗುಂಪಿರಬಹುದೆಂಬ ವಿಷಯವನ್ನು ಋಗ್ವೇದಸಂಹಿತೆಯ ಎರಡನೇ ಭಾಗದಲ್ಲಿ ತಿಳಿಸಿದೆ.

ಸಾಯಣರು **ಪಣಿ** ಎಂಬ ಅಸುರರ ವಿಷಯದಲ್ಲಿ ಒಂದು ಉಪಾಖ್ಯಾನವನ್ನು ಹೇಳಿದ್ದಾರೆ. **ಪಣಿ**ಯೆಂಬ ಹೆಸರಿನ ಅಸುರರು ದೇವಲೋಕದಲ್ಲಿದ್ದ ಗೋವುಗಳನ್ನು ಅಪಹರಿಸಿ ಅವುಗಳನ್ನು ಒಂದು ಪರ್ವತದ ಗುಹೆಯಲ್ಲಿಟ್ಟಿದ್ದರು. ಇದನ್ನು ಹುಡುಕುವುದಕ್ಕಾಗಿ ಇಂದ್ರನು ಸರಮಾ ಎಂಬ ದೇವಶುನಿ (ದೇವಲೋಕದ ಹೆಣ್ಣುನಾಯಿ) ಯನ್ನು ಕಳುಹಿಸಿದನು. ಆ ಶುನಿಯು ಪಣಿಗಳ ಬಳಿಗೆ ಹೋಗಿ ಅವರನ್ನು ಆಕರ್ಷಕವಾದ ಮಾತುಗಳಿಂದ ವಶಮಾಡಿಕೊಂಡು ಗೋವುಗಳನ್ನು ಹಿಂದಕ್ಕೆ ತರಲು ಸಹಾಯಮಾಡಿದ ಈ ಸಂದರ್ಭದಲ್ಲಿ **ಪಣಿಗಳಿಗೂ, ಸರಮೆಗೂ** ನಡೆದ ಸಂಭಾ

ಷಣೆಯು ಸರಮೆಯ ಬುದ್ಧಿಕೌಶಲವನ್ನು ತೋರಿಸುತ್ತದೆ. ಮತ್ತು ಈ ಸಂಭಾಷಣೆಯಿಂದ **ಪಣಿಗಳ** ಸ್ವಭಾವವೂ ಕೊಂಚಮಟ್ಟಿಗೆ ತಿಳಿಯುವುದರಿಂದ ಅದನ್ನು ಇಲ್ಲಿ ಸಂಕ್ಷೇಪಮಾಡಿ ಉದಾಹರಿಸಲಾಗಿದೆ. (ಋ. ಸಂ. ೧೦-೧೦೮) ಇಲ್ಲಿ ಮೊದಲು ಪಣಿಗಳು ಸರಮೆಯನ್ನು ಪ್ರಶ್ನಿಸುತ್ತಾ,

**ಕಿಮಿಚ್ಛಂತೀ ಸರಮಾ ಪ್ರೇದಮಾನಡ್ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।**
**ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ॥**

ಎಲೈ ಸರಮೆಯೇ, ನೀನು ಇಷ್ಟು ಶ್ರಮಸಾಧ್ಯವಾದ ಮಾರ್ಗವನ್ನು ದಾಟಿ ಇಷ್ಟು ದೂರ ಬಂದ ಉದ್ದಿಶ್ಯವೇನು ? **ರಸಾ** ನದಿಯ ಪ್ರವಾಹವನ್ನು ದಾಟಲು ನಿನಗೆ ಹೇಗೆ ಸಾಧ್ಯವಾಯಿತು ಎಂದು ಕೇಳಲು ಅದಕ್ಕೆ ಸರಮೆಯು ಜಾಣತನ ದಿಂದ ಉತ್ತರವನ್ನು ಕೊಡುತ್ತಾ,

**ಇಂದ್ರಸ್ಯ ದೂತೀರಿಷಿತಾ ಚರಾಮಿ ಮಹ ಇಚ್ಛಂತೀ ಪಣಯೋ ನಿಧೀನ್ವಃ ।**
**ಅತಿಷ್ಕದೋ ಭಿಯಸಾ ತನ್ನ ಆವತ್ತಥಾ ರಸಾಯಾ ಅತರಂ ಪಯಾಂಸಿ ॥**

ಎಲೈ ಪಣಿಗಳೇ, ನಿಮ್ಮ ನಿಧಿಗೆ ಅಪೇಕ್ಷಿತಳಾಗಿ ನಾನು ಇಂದ್ರದೂತಿಯಾಗಿ ಇಲ್ಲಿಗೆ ಬಂದಿದ್ದೇನೆ. ಆದುದ ರಿಂದಲೇ ನನಗೆ **ರಸಾ** ನದಿಯ ಪ್ರವಾಹದಲ್ಲಿ ದಾಟಲು ಶಕ್ಯವಾಯಿತು ಎಂದಳು. ಆಗ,

**ಕೀದೃಙ್ಙಿಂದ್ರಃ ಸರಮೇ ಕಾ ದೃಶೀಕಾ ಯಸ್ಯೇದಂ ದೂತೀರಸರಃ ಪರಾಕಾತ್ ।**
**ಆ ಚ ಗಚ್ಛಾನ್ಮಿತ್ರಮೇನಾ ದಧಾಮಾಥಾ ಗವಾಂ ಗೋಪತಿರ್ನೋ ಭವಾತಿ ॥**

ಎಲೈ ಸರಮೆಯೇ, ಆ ಇಂದ್ರನು ಯಾರು, ಹೇಗಿದ್ದಾನೆ. ಅವನೇ ಇಲ್ಲಿಗೆ ಬರಲಿ—ಬಂದು ನಮ್ಮ ಗೋವು ಗಳನ್ನು ಕಾಯತಕ್ಕ ಗೊಲ್ಲನಾಗಿರಲಿ ಎಂದು ಉತ್ತರಕೊಟ್ಟರು, ಅದಕ್ಕೆ,

**ನಾಹಂ ತಂ ವೇದ ದಭ್ಯಂ ದಭತ್ಸ ಯಸ್ಯೇದಂ ದೂತೀರಸರಂ ಪರಾಕಾತ್ ।**
**ನ ತಂ ಗೂಹಂತಿ ಸ್ರವತೋ ಗಭೀರಾ ಹತಾ ಇಂದ್ರೇಣ ಪಣಯಃ ಶಯಧ್ವೇ ॥**

ಎಲೈ ಪಣಿಗಳೇ, ಇಂದ್ರನನ್ನು ಜಯಿಸಲು ನಿಮ್ಮಲ್ಲಿ ಯಾರೂ ಶಕ್ತರಾಗಿಲ್ಲ. ಎಂತಹ ಅಗಾಧವಾದ ಪ್ರವಾಹವಿದ್ದರೂ ಅವನು ದಾಟಬಲ್ಲನು. ಎಲೈ ಪಣಿಗಳೇ, ನೀವು ಅವನಿಂದ ಖಂಡಿತ ಹತರಾಗುತ್ತೀರಿ ಎಂದಳು. ಅದಕ್ಕೆ ಅವರು,

**ಇಮಾ ಗಾವಃ ಸರಮೇ ಯಾ ಐಚ್ಛಃ ಪರಿ ದಿವೋ ಅಂತಾನ್ತ್ಸುಭಗೇ ಪತಂತೀ ।**
**ಕಸ್ತ ಏನಾ ಅವ ಸೃಜಾದಯುಧ್ವ್ಯುತಾಸ್ಮಾಕಮಾಯುಧಾ ಸಂತಿ ತಿಗ್ಮಾ ॥**

ಎಲೈ ಸರಮೆಯೇ, ಇದೋ ಗೋವುಗಳು ಇಲ್ಲಿವೆ, ಅವು ಅಂತರಿಕ್ಷಪ್ರದೇಶಗಳಲ್ಲೆಲ್ಲಾ ಸಂಚರಿಸುತ್ತಿವೆ. ಇಂತಹ ಉತ್ತಮವಾದ ಗೋವುಗಳನ್ನು ಹೋರಾಟವಿಲ್ಲದೇ ಯಾರುತಾನೇ ಕೊಡಬಲ್ಲರು ? ನಮ್ಮ ಆಯುಧವು ಅತಿ ತೀಕ್ಷ್ಣವಾದವು. ನಮ್ಮಿಂದ ಈ ಗೋವುಗಳನ್ನು ಯಾರೂ ಕಸಿದುಕೊಳ್ಳಲಾರರು ಎಂದರು. ಆಗ,

**ಅಸೇನ್ಯಾ ವಃ ಪಣಯೋ ವಚಾಂಸ್ಯನಿಷವ್ಯಾಸ್ತನ್ವಃ ಸಂತು ಪಾಪೀಃ ।**
**ಅಧೃಷ್ಟೋ ವ ಏತವಾ ಅಸ್ತು ಪಂಥಾ ಬೃಹಸ್ಪತಿರ್ವ ಉಭಯಾ ನ ಮೃಳಾತ್ ॥**

ಎಲೈ ಪಣಿಗಳೇ, ನಿಮ್ಮ ಸೈನ್ಯವು ಎಷ್ಟೇ ಬಲಶಾಲಿಯಾಗಿದ್ದರೂ ಸಹ ಇಂದ್ರಪ್ರೇರಿತನಾದ ಬೃಹಸ್ಪತಿಯು ನಿಮ್ಮನ್ನು ಉಳಿಸುವುದಿಲ್ಲ ಎಂದು ಗದರಿಸಿದಳು. ಆಗ ಅವರು—

**ಅಯಂ ನಿಧಿಃ ಸರಮೇ ಅದ್ರಿಬುಧ್ನೋ ಗೋಭಿರಶ್ವೇಭಿರ್ವಸುಭಿರ್ನ್ಯೃಷ್ಟಃ ।**
**ರಕ್ಷಂತಿ ತಂ ಪಣಯೋ ಯೇ ಸುಗೋಪಾ ರೇಕು ಪದಮಲಕಮಾ ಜಗಂಥ ॥**

ಎಲೈ ಸರಮೆಯೇ, ನಾವು ಸಾಹಸದಿಂದ ನಮ್ಮ ನಿಧಿಯನ್ನು ರಕ್ಷಿಸುವೆವು. ನೀನು ಇಲ್ಲಿ ಬಂದಿರುವ ಕೆಲಸವು ಸಾರ್ಥಕವಾಗಲಾರದು ಎಂಬ ಅಹಂಕಾರದ ಮಾತುಗಳನ್ನಾಡಿದರು. ಅನಂತರ ಸರಮೆಯು ತನ್ನ ಬುದ್ಧಿಕೌಶಲವನ್ನು ತೋರಿ ಅವುಗಳನ್ನು ಅಪಹರಿಸಲು ಇಂದ್ರನಿಗೆ ಸಹಾಯಮಾಡಿದಳೆಂದು ತಿಳಿಸಿದೆ. ಪ್ರಕೃತದಲ್ಲಿ **ಪಣಿ** ಯೆಂಬ ಅಸುರರ ಸ್ವರೂಪವನ್ನು ತಿಳಿಸಲು ಮತ್ತು ದೇವತೆಗಳಿಗೂ ಯಜ್ಞಕರ್ತರಿಗೂ ಅವರು ಯಾವ ರೀತಿ ತೊಂದರೆಯನ್ನು ಕೊಡುತ್ತಿದ್ದರು ಎಂಬಂಶವನ್ನು ತಿಳಿಸಲು ಸೂಕ್ಷ್ಮವಾಗಿ ಆ ಕಥಾಭಾಗವನ್ನು ತಿಳಿಸಲಾಗಿದೆ.

ಪ್ರಕೃತವಾದ ಋಕ್ಕಿನಲ್ಲಿ **ಪಣಿ** ಯೆಂಬ ಪದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿರುವುದನ್ನು ಮೇಲೆ ತಿಳಿಸಿದೆ.

**ವೃಷಣೌ—ವೃಷು—ಸೇಚನೇ; ವೃಷ—ಶಕ್ತಿ ಬಂಧನೇ** ಎಂಬೆರಡು ಧಾತುಗಳಲ್ಲಿ ಸುರಿಸು, ಚಿಮುಕಿಸು ಎಂಬರ್ಥವನ್ನು ಕೊಡುವ **ವೃಷ** ಧಾತುವಿನಿಂದಾಗಲಿ, ಅಥವಾ ಶಕ್ತಿ ಮತ್ತು ಸಾಮರ್ಥ್ಯ ಎಂಬರ್ಥವನ್ನು ಕೊಡುವ ಎರಡನೆಯ ಧಾತುವಿನಿಂದಾಗಲಿ, ವೃಷನ್, ವೃಷಣಾ, ವೃಷ್ಣ್ಯೇಭಿಃ, ಇತ್ಯಾದಿ ಪದಗಳು ನಿಷ್ಪನ್ನವಾಗುವುವು ಎಂಬ ವಿಷಯವನ್ನೂ, ಮತ್ತು ಈ ಪದಗಳಿಗೆ ಆಯಾ ಸಂದರ್ಭಕ್ಕನುಗುಣವಾಗಿ ಅರ್ಥವನ್ನು ಹೇಳಬೇಕೆಂಬಂಶವನ್ನೂ ಸಹ ಹಿಂದೆ ವಿಸ್ತೃತವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನು ಕಾಮವರ್ಷಕರೆಂದು ಪ್ರಶಂಸಿಸಲು ಈ ವಿಶೇಷಣವನ್ನು ಪಯೋಗಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಿಪನ್ಯಾಮಹೇ**—ಪನ ಸ್ತುತೌ. ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ ಟಿಗೆ ಏತ್ವ. ವ್ಯತ್ಯಯದಿಂದ ಶ್ಯನ್ ವಿಕರಣ. **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

**ಹಿತವಾನ್—ದಧಾತೇರ್ಹಿಃ** ಎಂಬುದರಿಂದ ಧಾಞ್ ಧಾತುವಿಗೆ ಕ್ತ ಪ್ರತ್ಯಯ ಪರವಾದಾಗ ಹಿ ಆದೇಶ. ಕ್ತಾಂತದ ಮೇಲೆ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. ಮತುಪ್ ಅನುದಾತ್ತವಾಗುವುದರಿಂದ ಕ್ತ ಪ್ರತ್ಯಯಸ್ವರ ಉಳಿಯುತ್ತದೆ.

**ಅಧ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದದಲ್ಲಿ **ದೀರ್ಘ** ಬರುತ್ತದೆ.

**ಅನಿಂದ್ಯಾ**—ಣಿದಿ ಕುತ್ಸಾಯಾಂ ಧಾತು. ಯತ್ ಪ್ರತ್ಯಯ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ನಞ್ ತತ್ಪುರುಷ ಸಮಾಸ. ಸಂಬೋಧನಾ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಪಾಥಃ**—ಪಾ ಪಾನೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಆದುದರಿಂದ ಧಾತುವಿಗೆ ಪಿಬಾದೇಶ ಬರುವುದಿಲ್ಲ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರ ಉಳಿಯುತ್ತದೆ.

ವಿ—ಇದು ಉಪಸರ್ಗ. **ಉಪಸರ್ಗಾಃ ಕ್ರಿಯಾಯೋಗೇ** ಎಂಬುದರಿಂದ ಇಲ್ಲಿ ಯೋಗ್ಯಕ್ರಿಯಾ ಅಧ್ಯಾಹಾರದಿಂದ ಅನ್ವಯವಾಗುತ್ತದೆ. ॥ ೭ ॥



॥ ಸಂಹಿತಾಪಾಠಃ ॥

**ಯುವಾಂ ಚಿದ್ಧಿ ಷ್ಮಾಶ್ವಿನಾವನು ದ್ಯೂನ್ವಿರುದ್ರಸ್ಯ ಪ್ರಸ್ರವಣಸ್ಯ ಸಾತೌ ।**
**ಅಗಸ್ತ್ಯೋ ನರಾಂ ನೃಷು ಪ್ರಶಸ್ತಃ ಕಾರಾಧುನೀವ ಚಿತಯತ್ಸಹಸ್ರೈಃ ॥ ೮ ॥**

॥ ಪದಪಾಠಃ ॥

**ಯುವಾಂ । ಚಿತ್ । ಹಿ । ಸ್ಮ । ಅಶ್ವಿನಾ । ಅನು । ದ್ಯೂನ್ । ವಿऽರುದ್ರಸ್ಯ । ಪ್ರऽಸ್ರವಣಸ್ಯ । ಸಾತೌ ।**
**ಅಗಸ್ತ್ಯಃ । ನರಾಂ । ನೃಷು । ಪ್ರऽಶಸ್ತಃ । ಕಾರಾಧುನೀऽಇವ । ಚಿತಯತ್ । ಸಹಸ್ರೈಃ ॥ ೮ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವಾಂ । ಚಿದ್ಧಿ ಷ್ಮೇತಿ ತ್ರಯಃ ಪೂರಣಾಃ । ಅನು ದ್ಯೂನ್ ಪ್ರತಿದಿನಂ ವಿರುದ್ರಸ್ಯ ವಿಶಿಷ್ಟೋಷ್ಣರೂಪದುಃಖದ್ರಾವಣಸ್ಯ ವಿವಿಧರೋರೂಯಮಾಣವತೋ ವಾ ಪ್ರಸ್ರವಣಸ್ಯ ವೃಷ್ಟ್ಯುದಕಸಂಸ್ರಾವಯಸ್ಯ ಸಾತೌ ಲಾಭೇ ನಿಮಿತ್ತಭೂತೇ ಸತ್ಯಗಸ್ತ್ಯ ಏತನ್ನಾಮಾ ಮಹರ್ಷಿರ್ನರಾಂ ನೇತೄಣಾಂ ಕರ್ಮನಿರ್ವಾಹಕಾನಾಂ ಮನುಷ್ಯಾಣಾಂ ನೃಷು ಯೇಷು ತಾದೃಶಾ ಮನುಷ್ಯಾಃ ಸಂತಿ ತೇಷು ಪ್ರಶಸ್ತಃ ಪ್ರಶಸ್ಯತರೋಽಯಂ ಸಹಸ್ರೈರಪರಿಮಿತೈಃ ಸ್ತೋತ್ರೈಶ್ಚಿತಯತ್ । ಚೇತಯತಿ । ಸ್ತುತ್ವಾ ಪ್ರಬೋಧಯತಿ । ತತ್ರ ದೃಷ್ಟಾಂತಃ । ಕಾರಾಧುನೀವ । ಕಾರಾ ಶಬ್ದಃ । ತಸ್ಯ ಧೂನಯಿತೋತ್ಪಾದಯಿತಾ ಶಂಖಾದಿಃ ಸ ಇವ ।ಯದ್ವಾ । ಏತದಸ್ಯಗಸ್ತ್ಯವಿಶೇಷಣಂ । ಕಾರಃ ಶಬ್ದಯಿತಾ ಹೋತ್ರಾದಿಃ । ತಸ್ಯ ಧುನಿಃ ಕಂಪಯಿತಾ ಪ್ರೇರಕ ಇವ । ಇವೇತಿ ಸಂಪ್ರತ್ಯರ್ಥೇ । ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗ ಇತಿ ನಿರುಕ್ತಂ । ೭-೩೧ ॥**

॥ ಪ್ರತಿಪದಾರ್ಥ ॥

**(ಹೇ) ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ನರಾಂ**—ಯಾಗ ನಿರ್ವಾಹಕರಾದ । **ನೃಷು**—ಮನುಷ್ಯರಲ್ಲಿ । **ಪ್ರಶಸ್ತಃ**—ಅತ್ಯಂತ ಪ್ರಶಂಸಾರ್ಹನಾದ (ಶ್ರೇಷ್ಠನಾದ) । (**ಕಾರಾಧುನೀ ಇವ**—ಸ್ತುತಿ ಲಕ್ಷಣಶಬ್ದಕಾರಕರಾದ ಹೋತ್ರಾದಿಗಳ ಪ್ರೇರಕನಾದ) । **ಅಗಸ್ತ್ಯಃ**—ಅಗಸ್ತ್ಯನೆಂಬ ಮಹರ್ಷಿಯು । **ವಿರುದ್ರಸ್ಯ**—ವಿಶಿಷ್ಟೋಷ್ಣರೂಪ

ದುಃಖ ಪರಿಹಾರಕವಾದ | **ಪ್ರಸ್ರವಣಸ್ಯ**—ವೃಷ್ಟ್ಯುದಕದ | **ಸಾತೌ**—ಲಾಭನಿಮಿತ್ತವಾಗಿ | **ಅನು ದ್ಯೂನ್**—ಪ್ರತಿದಿನವೂ | **ಸಹಸ್ರೈಃ**—ಅಪರಿಮಿತ ಸ್ತೋತ್ರಗಳಿಂದ | **ಕಾರಾಧುನೀ ಇವ**—ಶಬ್ದೋತ್ಪಾದಕವಾದ ಶಂಖಾದಿ ವಾದ್ಯದಂತೆ | **ಯುವಾಂ**—ನಿಮ್ಮಿಬ್ಬರನ್ನು | **ಚಿತಯತ್**—(ಸ್ತುತಿಯಿಂದ) ಎಚ್ಚರಗೊಳಿಸುತ್ತಾನೆ (ಸ್ತುತಿಸುತ್ತಾನೆ) (**ಚಿತ್ ಹಿ ಸ್ಮ**—ವಾಕ್ಯ ಪೂರಕಗಳು.)

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಯಾಗನಿರ್ವಾಹಕರಲ್ಲಿ ಶ್ರೇಷ್ಠನಾದ ಅಗಸ್ತ್ಯನೆಂಬ ಮಹರ್ಷಿಯು, ಉಷ್ಣರೂಪ ದುಃಖನಾಶಕವಾದ ವೃಷ್ಟ್ಯುದಕವನ್ನು ಪಡೆಯುವುದೋಸ್ಕರ ಪ್ರತಿದಿನವೂ ಅಪರಿಮಿತ ಸ್ತೋತ್ರಗಳಿಂದ, ಶಂಖಾದಿ ಶಬ್ದವಾದ್ಯಗಳಂತೆ, ನಿಮ್ಮನ್ನು ಎಚ್ಚರಗೊಳಿಸುತ್ತಾನೆ. (ಸ್ತುತಿಸಿ, ಮಳೆಗರೆಯುವಂತೆ ಮಾಡುತ್ತಾನೆ)

English Translation.

Ashwins, Agastya, eminent amongst the leaders of men, arouses you daily with numerous (invocations), like an instrument of sound, for the sake of obtaining a manifold (flow) of a torrent (of rain).

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಅಗಸ್ತ್ಯನು ಅಶ್ವಿನೀ ದೇವತೆಗಳನ್ನುದ್ದೇಶಿಸಿ ಮಾಡತಕ್ಕ ಪ್ರಾರ್ಥನೆಯಾಗಿದೆ. ಇಲ್ಲಿ ಋಷಿಯು ತನ್ನ ಸ್ತುತಿಯನ್ನು ಶಂಖದ ಶಬ್ದಕ್ಕೆ ಹೋಲಿಸುತ್ತಾನೆ. ಆದುದರಿಂದ **ಕಾರಾಧುನೀವ** ಎಂಬ ಉಪಮಾನವನ್ನು ತೋರಿಸಿ ತನ್ನ ಸ್ತುತಿಯ ವೈಶಿಷ್ಟ್ಯವನ್ನು ಪ್ರಶಂಸಿಸಿದ್ದಾನೆ.

**ಕಾರಾಧುನೀವ—ಕಾರಾ ಶಬ್ದಃ | ತಸ್ಯ ಧೂನಯಿತಾ ಉತ್ಪಾದಯಿತಾ ಶಂಖಾದಿಃ | ಸ ಏವ | ಯದ್ವಾ | ಏತದಪ್ಯಗಸ್ತ್ಯವಿಶೇಷಣಂ | ಕಾರಃ ಶಬ್ದಯಿತಾ ಹೋತ್ರಾದಿಃ | ತಸ್ಯ ಧುನಿಃ ಕಂಪಯಿತಾ ಪ್ರೇರಕಃ ಇವ | ಇವೇತಿ ಸಂಪ್ರತ್ಯರ್ಥೇ | " ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗಃ "** (ನಿ. ೭-೩೧) ಎಂದು ಸಾಯರು **ಕಾರಾಧುನೀ** ಇವ ಎಂಬ ಪದಗಳ ಅರ್ಥವನ್ನು ಹೇಳಿದ್ದಾರೆ. ಈ ವಿವರಣೆಯ ಪ್ರಕಾರ **ಕಾರಾಧುನೀ** ಎಂಬಪದಕ್ಕೆ ಎರಡರ್ಥವು ಸಾಧ್ಯವಾಗುತ್ತದೆ. ಮೊದಲನೆಯದಾಗಿ ಶಂಖವೆಂದೂ ಎರಡನೆಯದಾಗಿ ಸ್ತುತಿರೂಪವಾದ ಶಬ್ದಕರ್ತನಾದ ಹೋತೃವೆಂದು ಅರ್ಥವಾಗುತ್ತದೆ. ಹಿಂದೆ,

**ಈಳೇ ದ್ಯಾವಾಪೃಥಿವೀ ಪೂರ್ವಚಿತ್ತಯೇಽಗ್ನಿಂ ಘರ್ಮಂ ಸುರುಚಂ ಯಾಮನ್ನಿಷ್ಟಯೇ |**
**ಯಾಭಿರ್ಭರೇ ಕಾರಮಂಶಾಯ ಜಿನ್ವಥಸ್ತಾಭಿರೂ ಷು ಊತಿಭಿರಶ್ವಿನಾ ಗತಂ ||**

(ಋ. ಸಂ. ೧-೧೧೨-೧)

ಎಂಬ ಋಕ್ಕಿನಲ್ಲಿ **ಕಾರ** ಶಬ್ದದ ಅರ್ಥವನ್ನು ತಿಳಿಸುವಾಗ ಸಾಯಣರು **ಕಾರಶಬ್ದಃ ಶಂಖವಾಚೀತ್ಯಭಿಯುಕ್ತಾಃ ಸಂಗಿರಂತೇ | ಕಾರಂ ಶಬ್ದಕಾರಿಣಂ ಶಂಖಂ |** ಎಂದರ್ಥ ಮಾಡಿದ್ದಾರೆ. ಈ ಅರ್ಥವನ್ನೇ ಸಮರ್ಥಿಸಲು ಸ್ಕಂದಸ್ವಾಮಿಗಳು ಪ್ರಕೃತವಾದ (ಋ. ಸಂ. ೧-೧೮೦-೮) ಋಕ್ಕನ್ನೇ ಉದಾಹರಿಸಿ. ಎರಡು ಕಡೆಗಳಲ್ಲಿಯೂ ಶಂಖವೆಂದೇ

ಅರ್ಥವೆಂಬುದಾಗಿ ತಿಳಿಸಿದ್ದಾರೆ ಆದರೆ **ಕಾರಂ** ಎಂಬ ಪದವು ಇರುವೆಡೆಗಳಲ್ಲೆಲ್ಲಾ **ಶಂಖ** ವಾಚಿಯಾಗುವುದಿಲ್ಲ. ಈ ಪದವು **ಕೃ** ಧಾತುವಿನಿಂದ ನಿಷ್ಪನ್ನವಾಗಿ ಶಬ್ದವನ್ನುಂಟುಮಾಡತಕ್ಕ ಸಾಧನವೆಂದು ಮಾತ್ರ ಅರ್ಥವಾಗಹುಬುದು. ಕೆಲವೆಡೆಗಳಲ್ಲಿ **ಶಂಖ**ವಾಚಿಯಾಗಬಹುದು. ಉಳಿದೆಡೆಗಳಲ್ಲಿ ಬೇರೆ ಅರ್ಥವನ್ನು ಕೊಡಬಹುದು. ಉದಾಹರಣೆಗೆ—

**ಚಕರ್ಥ ಕಾರಮೇಭ್ಯಃ ಪೃತನಾಸು ಪ್ರವಂತವೇ ।**

(ಋ ಸಂ. ೧-೧೩೧-೫)

ಎಂಬ ಋಕ್ಕಿನಲ್ಲಿ ಈ ಪದಕ್ಕೆ ಕೇವಲ **ಸಿಂಹನಾದಲಕ್ಷಣಂ ಶಬ್ದಂ** ಸಿಂಹನಾದ ರೂಪವಾದ ಶಬ್ದವೆಂದರ್ಥ ಮಾಡಿದೆ. ಹೀಗೆ ನಿಯತವಾಗಿ **ಶಂಖ**ವಾಚಿಯಲ್ಲವೆಂದು ತೋರಿಸುವುದಕ್ಕೆ ಸ್ಕಂದಸ್ವಾಮಿಗಳೂ ಸಹ, **ಅಥವಾ ಕ್ರಿಯತ ಇತಿ ಕಾರಶಬ್ದಃ ಇಹೋಚ್ಯತೇ ।** **ಕಾರ** ಶಬ್ದವು ಇಲ್ಲಿ ಕೇವಲ ಮಾಡುವುದು ಎಂದರ್ಥವನ್ನು ಮಾತ್ರ ಕೊಡುತ್ತದೆ. **ಸಾಮರ್ಥ್ಯಾತ್ ಶಂಖಃ ।** ಎಂಬರ್ಥವನ್ನೂ ತಿಳಿಸಿದ್ದಾರೆ.

**ಪಶ್ಯಯಂತ್ರಾಸೋ ಅಭಿ ಕಾರಮರ್ಚನ್ವಿದಂತ ಜ್ಯೋತಿಶ್ಚಕೃಪಂತ ಧೀಭಿಃ ।**

(ಋ. ಸಂ. ೪-೧-೧೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಕೇವಲ ಕರ್ತಾರಂ ಎಂದೇ ಅರ್ಥವು. ಆದುದರಿಂದಲೇ ಸಾಯಣರು ಪ್ರಕೃತವಾದ ಋಕ್ಕಿನಲ್ಲಿಯೂ ಎರಡು ವಿಧವಾಗಿ ವಿವರಿಸಿದ್ದಾರೆ. ಮೊದಲು **ಶಂಖ**ದಂತೆ ಎ ದೂ, ಎರಡನೆಯದಾಗಿ ಶಬ್ದಪ್ರೇರಕ ನಾದ ಹೋತೃವೆಂದೂ ಅರ್ಥಮಾಡಿದೆ. ಇಲ್ಲಿ **ಇವ** ಶಬ್ದಕ್ಕೆ ಎರಡನೆಯ ವಿವರಣೆಯಪ್ರಕಾರ ಏನರ್ಥ ಎಂಬ ಪ್ರಶ್ನೆಯು ಸಾಧ್ಯವೆಂದೂಹಿಸಿ ತಾವೇ ಅದಕ್ಕೂ ಸಮಾಧಾನವನ್ನು ಹೇಳಿದ್ದಾರೆ. **''ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗಃ''** (ನಿ. ೭-೩೧) ಎಂಬ ನಿರುಕ್ತಕಾರರ ವಚನದಂತೆ **ಸಂಪ್ರತಿ** ಎಂದರ್ಥವೆಂದು ತಿಳಿಸಿದ್ದಾರೆ. ಪ್ರಕೃತದಲ್ಲಿ ಎಂದರ್ಥ.

**ವಿರುದ್ರಸ್ಯ**—ಈ ಪದವು **ಪ್ರಸ್ರವಣಸ್ಯ** ಎಂಬುದಕ್ಕೆ ವಿಶೇಷಣವಾಗಿದೆ. ಪ್ರಸ್ರವಣವೆಂದರೆ ವೃಷ್ಟ್ಯುದಕದ ಸಂಘಾತ ಅಥವಾ ಪೂರ್ಣವಾದ ಪ್ರವಾಹವೆಂದರ್ಥ. ಈ ಪೂರ್ಣಪ್ರವಾಹವು ಉಷ್ಣರೂಪವಾದ ದುಃಖವನ್ನು ನಾಶ ಮಾಡುವುದರಿಂದಾಗಲಿ ಅಥವಾ ವಿಧವಿಧವಾಗಿ ಶಬ್ದಮಾಡಿಕೊಂಡು ಪ್ರವಹಿಸುವುದರಿಂದಾಗಲಿ ಇದಕ್ಕೆ **ವಿರುದ್ರಸ್ಯ** ಎಂಬ ವಿಶೇಷಣವಿದೆ. ಈ ಪದಕ್ಕೆ ಸಾಯಣರು **ವಿಶಿಷ್ಟೋಷ್ಣರೂಪದುಃಖದ್ರಾವಣಸ್ಯ, ವಿವಿಧರೋರೂಯಮಾಣದ್ರವಣವತೋ ವಾ** ಎಂದು ವಿವರಣೆಯನ್ನು ಹೇಳಿದ್ದಾರೆ. **ರುತ್** ಶಬ್ದಕ್ಕೆ ದುಃಖರ್ಥವೆಂದರ್ಥಮಾಡಿದರೆ ಆಗ ವಿಶಿಷ್ಟವಾದ ದುಃಖವನ್ನು ನಾಶಮಾಡತಕ್ಕ ಪ್ರಸ್ರವಣವೆಂದೂ ಅಥವಾ ಶಬ್ದವೆಂದರ್ಥಮಾಡಿದರೆ ವಿಧವಿಧವಾದ ಗರ್ಜನೆಯಿಂದ ಕೂಡಿರುವುದೆಂದೂ ಅರ್ಥವಾಗುತ್ತದೆ. **ರುದ್ರ** ಶಬ್ದಕ್ಕೆ ನಿರುಕ್ತಕಾರರ ನಿರ್ವಚನವು ಈ ರೀತಿಯಿದೆ.

**ರುದ್ರೋ ರೌತೀತಿ ಸತಃ; ರೋರೂಯಮಾಣೋ ದ್ರವತೀತಿ ವಾ, ರೋದಯತೇರ್ವಾ, ''ಯದರುದತ್ತದ್ರುದ್ರಸ್ಯ ರುದ್ರತ್ವಂ'' ಇತಿ ಕಾಠಕಮ್ । ''ಯದರೋದೀತ್ತದ್ರುದ್ರಸ್ಯ ರುದ್ರತ್ವಂ'' ಇತಿ ಹಾರಿದ್ರವಿಕಂ ।**

(ನಿ. ೧೦-೫)

ರುದ್ರನೆಂದರೆ, **ರೌತಿ-ಸ್ತನಯಿತ್ನುಃಶಬ್ದಂ ಕರೋತಿ ।** ಮೇಘ ಗುಡುಗಿನಂತೆ ಶಬ್ದಮಾಡುವವನು ಅಥವಾ **ರೋರೂಯಮಾಣೋ ದ್ರವತಿ** । ಗರ್ಜನೆಯನ್ನು ಮಾಡುತ್ತಾ ವೇಗವಾಗಿ ಸಂಚರಿಸುವವನು ಅಥವಾ **ರೋದಯತೇಃ ।** ಶತ್ರುಗಳನ್ನು ಅಳಿಸುವಂತೆ ಮಾಡುವವನು ಇತ್ಯಾದ್ಯರ್ಥಗಳಾಗುತ್ತವೆ. ಈ ವಿವರಣೆಯ ಆಧಾರದ ಮೇಲೆ ಪ್ರಕೃತವಾದ ಋಕ್ಕಿನಲ್ಲಿ **ವಿರುದ್ರ** ಶಬ್ದಕ್ಕೆ ಅರ್ಥವನ್ನು ಹೇಳಿದೆ. ಉಳಿದ ವಿವರಣೆಯು ನಮಗೆ ಈಗ ಪ್ರಕೃತವಲ್ಲ. ಮೊದಲಿನ ನಿರ್ವಚನದ ಪ್ರಕಾರ ದುಃಖನಾಶವೆಂದರ್ಥ. ಆದುದರಿಂದ ಪ್ರಸ್ರವಣವು ವಿರುದ್ರವಾಗಿದೆ. ಎರಡನೆಯ ನಿರ್ವಚನದ ಪ್ರಕಾರ ಗರ್ಜನಾತ್ಮಕವಾದುದೆಂದರ್ಥ. ಆದುದರಿಂದಲೂ ಪ್ರಸ್ರವಣವು ವಿರುದ್ರವಾಗಿದೆ. ಹೀಗೆ ಪ್ರಕೃತದಲ್ಲಿ ಎರಡು ಅರ್ಥಗಳೂ ಸಹಜವಾಗಿವೆ.

**ನರಾಂ ನೃಷು ಪ್ರಶಸ್ತಃ ।** ಯಾಗ ನಿರ್ವಾಹಕರಾದ ನರರಲ್ಲೆಲ್ಲಾ ಅತ್ಯಂತ ಪ್ರಶಸ್ಯನಾದ ಪುರುಷನೆಂದು ಅಗಸ್ತ್ಯನು ತನ್ನನ್ನೇ ಪ್ರಶಂಸಿಸಿಕೊಂಡಿದ್ದಾನೆ. ಇದು ಆತ್ಮ ಪ್ರಶಂಸೆಯಾದರೂ ಸಹ ತನ್ನ ನಿಜವಾದ ಮಹತ್ತ್ವವನ್ನು ಇಲ್ಲಿ ಋಷಿಯು ಹೇಳಿದ್ದಾನೆಯೇ ಹೊರತು ಇದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ.

**ಅಗಸ್ತ್ಯಃ ಖನಮಾನಃ ಖನಿತ್ರೈಃ ಪ್ರಜಾಮಪತ್ಯಂ ಬಲಮಿಚ್ಛಮಾನಃ ।**
**ಉಭೌ ವರ್ಣಾವೃಷಿರುಗ್ರಃ ಪುಪೋಷ ಸತ್ಯಾ ದೇವೇಷ್ವಾಶಿಷೋ ಜಗಾಮ ॥**

(ಋ. ಸಂ. ೧-೧೭೯-೬)

ಎಂಬ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ಅಗಸ್ತ್ಯನು ಯಾವ ರೀತಿ ಧರ್ಮ ಮತ್ತು ಕಾಮ ಎಂಬ ಪುರುಷಾರ್ಥ ದ್ವಯವನ್ನೂ ಸಹ ತನ್ನ ಮಹಚ್ಛಕ್ತಿಯಿಂದ ಒಟ್ಟಿಗೆ ಸಾಧಿಸಿದನು. ಅವನ ಅಸಾಧಾರಣವಾದ ಮಹಿಮೆಯೇನು ಎಂಬ ವಿಷಯವನ್ನು ವಿಶದವಾಗಿ ತಿಳಿಸಿದೆ. ಆದುದರಿಂದ ಈ ಪ್ರಶಂಸೆಯಲ್ಲಿ ಯಾವ ವಿಧವಾದ ಉತ್ಪ್ರೇಕ್ಷೆಯೂ ಇಲ್ಲವೆಂದು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ವಿರುದ್ರಸ್ಯ**—ವಿವಿಧಾಃ ರುದ್ರಾಃ ಯಸ್ಮಿನ್. ತಸ್ಯ. **ಬಹುವ್ರೀಹೌ**—(ಪಾ ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪ್ರಸ್ರವಣಸ್ಯ**—ಸ್ರು ಗತೌ. ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯ ನಿಮಿತ್ತವಾಗಿ ಧಾತು ಉಕಾರಕ್ಕೆ ಗುಣ, ಅವಾದೇಶ. **ಲಿತಿ** (ಪಾ. ಸೂ. ೬-೩-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸಾತೌ— ಊತಿಯೂತಿಜೂತಿಸಾತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗಿ ನಿಪಾತಿತವಾಗಿದೆ.

**ನರಾಮ್**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪ್ರಶಸ್ತಃ**—ಶಂಸು ಸ್ತುತೌ. ಧಾತು. ಕ್ತ ಪ್ರತ್ಯಯ. **ಅನಿದಿತಾಂಹಲ**—ಎಂಬುದರಿಂದ ಉಪಧಾನಕಾರ ಲೋಪ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ.

**ಚಿತಯತ್**—ಚಿತೀ ಸಂಜ್ಞಾನೇ. ಧಾತು. ಣಿಜಂತದ ಮೇಲೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ ಅಡಾಗಮ. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ವಚನದಿಂದ ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ, ಅಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

## ಪ್ರ ಯದ್ವಹೇಥೇ ಮಹಿನಾ ರಥಸ್ಯ ಪ್ರ ಸ್ಯಂದ್ರಾ ಯಾಥೋ ಮನುಷೋನ ಹೋತಾ।
## ಧತ್ತಂ ಸೂರಿಭ್ಯ ಉತ ವಾ ಸ್ವಶ್ವ್ಯಂ ನಾಸತ್ಯಾ ರಯಿಷಾಚಃ ಸ್ಯಾಮ ॥ ೯ ॥

॥ ಪದಪಾಠಃ ॥

**ಪ್ರ । ಯತ್ । ವಹೇಥೇ ಇತಿ । ಮಹಿನಾ । ರಥಸ್ಯ । ಪ್ರ । ಸ್ಯಂದ್ರಾ । ಯಾಥಃ । ಮನುಷಃ । ನ । ಹೋತಾ ಧತ್ತಂ । ಸೂರಿಽಭ್ಯಃ । ಉತ । ವಾ । ಸುಽಅಶ್ವ್ಯಂ । ನಾಸತ್ಯಾ । ರಯಿಽಸಾಚಃ । ಸ್ಯಾಮ ॥ ೯ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವಾಂ ರಥಸ್ಯ ಗಮನಸಾಧನಸ್ಯ ಮಹಿನಾ ಮಹತ್ತ್ವೇನ ಯದ್ಯಸ್ಮಾತ್ಪ್ರ ವಹೇಥೇ ಧಾರಯಥೋ ಯಜ್ಞಂ । ಯದ್ವಾ । ರಥಸ್ಯ ಸ್ವರ್ಗಗಮನಸಾಧನಸ್ಯ ಯಾಗಸ್ಯ ಧುರಂ ವಹತಃ । ತಥಾ ಹೇ ಸ್ಯಂದ್ರಾ ಸ್ಯಂದನಶೀಲೌ ಯುವಾಂ ಯಾಥಃ । ಗಚ್ಛಥಃ । ಸ್ವಸ್ಥಾನಂ ಯಜ್ಞಾರಂಭೆ ಆಗಚ್ಛಥಃ ಯಜ್ಞಸಮಾಪ್ತೌ ಪುನರ್ಗಚ್ಛಥಶ್ಚ । ತತ್ರ ದೃಷ್ಟಾಂತಃ । ಮನುಷೋ ಹೋತಾ ಮನುಷ್ಯಸ್ಯ ಯಜಮಾನಸ್ಯ ಹೋತಾ ಯಥಾ ಯಜ್ಞಪ್ರಾರಂಭೆ ಆಗಚ್ಛತಿ ಕರ್ಮಣಿ ನಿರ್ವೃತ್ತೇ ಪುನರಪಗಚ್ಛತಿ ತದ್ವತ್ । ಆಗಮನಸಮಯೇ ಸೂರಿಭ್ಯಃ ಸ್ತೋತೃಭ್ಯೋ ಧತ್ತಂ । ಧಾರಯತಂ ಫಲಂ । ಉತ ವಾ ಸ್ವಶ್ವ್ಯಂ ಶೋಭನಾಶ್ವಸಮೂಹಂ ಧತ್ತಂ । ನಾಸತ್ಯಾ । ಸತ್ಸು ಭವೌ ಸತ್ಯೌ । ನ ಅಸತ್ಯೌ ನಾಸತ್ಯೌ । ಹೇ ತಾದೃಶೌ ತ್ವದನುಗ್ರಹಾದ್ರಯಿಸಾಚೋ ಧನಸಮವಾಯಿನಃ ಸ್ಯಾಮ । ಭವೇಮ ॥**

॥ ಪ್ರತಿಪದಾರ್ಥ ॥

**(ಹೇ) ನಾಸತ್ಯಾ**—ಎಲೈ ನಾಸತ್ಯರೇ(ಸತ್ಕರ್ಮಗಳಲ್ಲಿ ಸರ್ವದಾ ಇರುವವರೇ) । **ಯತ್**—ಯಾವಕಾರಣ । (**ಯುವಾಂ**—ನೀವಿಬ್ಬರು) । **ರಥಸ್ಯ**—(ಗಮನಸಾಧನವಾದ ನಿಮ್ಮ) ರಥದ । **ಮಹಿನಾ**—ಮಾಹಾತ್ಮ್ಯೆಯಿಂದ

**ಪ್ರ ವಹೇಥೇ**-ಯಜ್ಞಧಾರಕರಾಗುತ್ತೀರೋ | [**ಅಥವಾ ಮಹಿನಾ**-ಸ್ವಮಹಾತ್ಮ್ಯೆಯಿಂದ | **ರಥಸ್ಯ**-ಸ್ವರ್ಗಗಮನ ಸಾಧನವಾದ ಯಜ್ಞದ | **ಪ್ರ(ವಹೇಥೇ)**—ನೇತೃತ್ವವನ್ನು ವಹಿಸುತ್ತೀರೋ |] **(ಹೇ)ಸ್ಯಂದ್ರಾ**—ಜಾರಿಕೊಂಡು ಹೋಗುವ್ಯಸ್ವಭಾವವುಳ್ಳ ಅಶ್ವಿನೀದೇವತೆಗಳೇ | **ಮನುಷಃ ಹೋತಾ ನ**– ಯಜಮಾನನ ಹೋತೃವು(ಯಾಗಾರಂಭ ದಲ್ಲಿ ಬಂದು ಯಾಗಾನಂತರ ಹೊರಟುಹೋಗುವಂತೆ) | **ಯಾಥಃ**—(ಯಾಗಾನಂತರ ಸ್ವಸ್ಥಾನಕ್ಕೆ) ಹೊರಟುಹೋಗು ತ್ತೀರೋ | **ಸೂರಿಭ್ಯಃ**—(ಯಾಗಕ್ಕೆ ಬಂದಾಗ) ಸ್ತೋತೃಗಳಿಗೆ | **ಧತ್ತಂ**—ಫಲವನ್ನು ಧರಿಸುತ್ತೀರೋ (ಅನುಗ್ರಹಿ ಸುತ್ತಿರೋ) | **ಉತ ಸ್ವಶ್ವ್ಯಂ ವಾ** —ಅಥವಾ ಉತ್ತಮಾಶ್ವಗಳನ್ನು | (**ಧತ್ತಂ**—ಅನುಗ್ರಹಿಸುತ್ತೀರೋ) | (**ತತ್**– ಆದುದರಿಂದ) | **ರಯಿಸಾಚಃ**—ಧನವಿಶಿಷ್ಟರಾಗಿ | **ಸ್ಯಾಮ**—(ನಿಮ್ಮನುಗ್ರಹದಿಂದ) ಆಗೋಣ.

॥ ಭಾವಾರ್ಥ ॥

ಎಲೈ ಸ್ಯಂದನಶೀಲರಾದ ನಾಸತ್ಯರೇ, ನಿಮ್ಮ ರಥದ ಮಾಹಾತ್ಮ್ಯೆಯಿಂದ ಯಜ್ಞಕ್ಕೆ ಬಂದು, ಯಾಗವನ್ನು ನಿರ್ವಹಿಸಿ, ಹೋತೃನಾಮಕ ಋತ್ವಿಜನಂತೆ, ಯಾಗಾನಂತರ ಸ್ವಸ್ಥಾನಕ್ಕೆ ಹೊರಟುಹೋಗುತ್ತೀರಿ; ಯಜ್ಞಕ್ಕೆ ಬಂದಾಗ ಸ್ತೋತೃಗಳಿಗೆ ಉತ್ತಮಾಶ್ವಾದಿಧನವನ್ನು ಅನುಗ್ರಹಿಸುತ್ತೀರಿ; ಇಂತಹ ನೀವು ನಮಗೂ ಧನಾದಿಗಳನ್ನು ಅನುಗ್ರಹಿಸಿ.

## English Translation.

When, by the virtue of your chariot, you come (to the sacrifice), and when, like the ministering priest, (after discharging his function), you depart, gliding away, you give to the devout (worshippers a reward), though it be store of good horses: may we be enriched, Nasatyas, (by your favour,

॥ ವಿಶೇಷವಿಷಯಗಳು ॥

**ರಥಸ್ಯ— ರಥ** ಶಬ್ದಕ್ಕೆ ಇಲ್ಲಿ ಅಶ್ವಿನೀದೇವತೆಗಳ ಸಂಚಾರಕ್ಕಾಗಿರತಕ್ಕ ರಥವೆಂದರ್ಥವಾಗಬಹುದು. ಅಥವಾ, ಈ ಪದವು ಸ್ವರ್ಗಗಮನಸಾಧನವಾದ ಯಜ್ಞಪರ್ಯಾಯಪದವಾಗಿರಬಹುದೆಂದು ಸಾಯಣರು ವಿವರಿಸಿ ದ್ದಾರೆ. **ರಥಃ ರಂಹತೇರ್ಗತಿಕರ್ಮಣಃ** ಇತ್ಯಾದಿಯಾದ ನಿರುಕ್ತಕಾರರ ನಿರ್ವಚನವನ್ನು ಹೇಳಿ ಹಿಂದೆ ಈ ಪದದ ವಿಶೇಷಾರ್ಥಗಳನ್ನು ತಿಳಿಸಿದೆ. **ರಥಂ ರಂಹಣಮಾದಿತ್ಯಂ ರಂಹಣಶ್ಚಾಸೌ ಮುಹೂರ್ತಮಪ್ಯನವಸ್ಥಾಯಿ ತ್ವಾತ್** | ಒಂದು ಕ್ಷಣವೂ ವಿಶ್ರಾಂತಿಯಿಲ್ಲದೆ ಸಂಚರಿಸುತ್ತಿರುವುದರಿಂದ ಆದಿತ್ಯನಿಗೆ ಈ ಹೆಸರು, ಎಂಬ ವಿವರಣೆ ಯನ್ನು ಹಿಂದೆ ತಿಳಿಸಿದೆ. ಗತ್ಯರ್ಥಕವಾದ **ರಂಹ್** ಧಾತುವಿನಿಂದ ನಿಷ್ಪನ್ನವಾಗಿ ಈ ಪದವು ಪ್ರಕೃತವಾದ ಋಕ್ಕಿನಲ್ಲಿ ಗಮನಸಾಧನವಾದ ಯಜ್ಞಪರ್ಯಾಯವಾಗಿಯೂ ಪ್ರಯೋಗಿಸಲ್ಪಟ್ಟಿರಬಹುದು.

**ರಥಸ್ಯ ಮಹಿನಾ ಪ್ರ ವಹೇಥೇ**—ಎನ್ನುವಾಗ ಎರಡು ವಿಧವಾದ ಅನ್ವಯವು ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಮೊದಲನೆಯದಾಗಿ,

೧. ಗಮನಸಾಧನವಾದ ನಿಮ್ಮ ರಥದ ಮಾಹಾತ್ಮ್ಯೆಯಿಂದ ಯಜ್ಞಧಾರಕರಾಗುತ್ತೀರಿ ಎಂದೂ, ಎರಡನೆ ಯದಾಗಿ,

೨. ಸ್ವಮಾಹಾತ್ಮ್ಯದಿಂದ ಸ್ವರ್ಗಗಮನಸಾಧನವಾದ ಯಜ್ಞದ ನೇತೃತ್ವವನ್ನು ವಹಿಸುತ್ತೀರಿ ಎಂದೂ ಸಹ ಈ ವಾಕ್ಯಕ್ಕೆ ಅರ್ಥವನ್ನು ವಿವರಿಸಿ ಹೇಳಿದೆ. ಈ ಎರಡು ವಿಧವಾದ ಅನ್ವಯಕ್ಕೂ ಶ್ರುತಿವಾಕ್ಯದ ಪ್ರಮಾಣವಿದೆ ಯೆಂಬುದನ್ನು ನೋಡಬಹುದು. ಮೊದಲನೆಯ ಅನ್ವಯದಪ್ರಕಾರ ಯಜ್ಞನಿರ್ವಹಣೆಗೂ ನೇತೃತ್ವಕ್ಕೂ ಅಶ್ವಿನೀ ದೇವತೆಗಳ ಸಹಾಯವು ಅತ್ಯವಶ್ಯವಾದುದು ಎಂಬಂಶವು ಕೆಳಗಿನ ಋಕ್ಸಂಹಿತಾವಾಕ್ಯಗಳಿಂದ ತಿಳಿಯುತ್ತದೆ.

**ಜುಷ್ಟೋ ಹಿ ದೂತೋ ಅಸಿ ಹವ್ಯವಾಹನೋಽಗ್ನೇ ರಥೀರಧ್ವರಾಣಾಂ ।**
**ಸಜೂರಶ್ವಿಭ್ಯಾಮುಷಸಾ ಸುವೀರ್ಯಮಸ್ಮೇ ಧೇಹಿ ಶ್ರವೋ ಬೃಹತ್ ॥**

(ಋ. ಸಂ. ೧-೪೪-೨)

**ಸವಿತಾರಮುಷಸಮಶ್ವಿನಾ ಭಗಮಗ್ನಿಂ ವ್ಯುಷ್ಟಿಷು ಕ್ಷಪಃ ।**
**ಕಣ್ವಾಸಸ್ತ್ವಾ ಸುತಸೋಮಾಸ ಇಂಧತೇ ಹವ್ಯವಾಹಂ ಸ್ವಧ್ವರ ॥**

(ಋ. ಸಂ. ೧-೪೪-೮)

ಎಂಬ ಈ ಎರಡು ಋಕ್ಕುಗಳಲ್ಲಿ ಹವ್ಯವಾಹನನೂ, ದೇವದೂತನೂ, ಯಜ್ಞನೇತೃವೂ ಆದ ಅಗ್ನಿಯನ್ನು ಉಷರ್ಬುಧರಾದ ಸಕಲ ದೇವತೆಗಳೊಡನೆಯೂ ಬಂದು ಯಜ್ಞವನ್ನು ನಿರ್ವಹಿಸಬೇಕಾಗಿ ಕೋರಿದೆ. ಪ್ರಾತಃಕಾಲದಲ್ಲೂಸಹ ಅಶ್ವಿನೀದೇವತೆಗಳೊಡನೆಯೇ ಅಗ್ನಿಯು ಯಜ್ಞನೇತೃತ್ವವನ್ನು ವಹಿಸುವನು ಎಂಬವರ್ಣನೆಯಿಂದ ಯಜ್ಞನೇತೃತ್ವದಲ್ಲಿ ಅಶ್ವಿನೀದೇವತೆಗಳ ಮುಖ್ಯವಾದ ಪಾತ್ರವು ತಿಳಿಯುತ್ತದೆ. ಅಥವಾ ಎರಡನೆಯ ಅನ್ವಯದ ಪ್ರಕಾರ ಯಜ್ಞಮುಖವೇ ಅಶ್ವಿನೀದೇವತೆಗಳಿಂದ ರಕ್ಷಿತವಾಗಿ ಯಜ್ಞವು ಪೂರ್ಣವಾಗಿ ನೆರವೇರಬೇಕಾದರೆ ಅಶ್ವಿನಿಗಳ ಸಹಾಯವಿಲ್ಲದೇ ಸಾಧ್ಯವೇ ಆಗಲಿಲ್ಲ ಎಂಬಂಶವನ್ನು ಸೂಚಿಸಿ ಅವರ ಯಜ್ಞನಿರ್ವಹಣಕಾರ್ಯವನ್ನು ಪ್ರಶಂಸಿಸಿದೆ. ಯಜ್ಞಮುಖವು ಅಶ್ವಿನೀ ದೇವತೆಗಳಿಂದ ರಕ್ಷಿತವಾದುದು ಹೇಗೆ? ಯಾವರೀತಿಯಲ್ಲಿ ಅವರು ಯಜ್ಞವನ್ನು ಪೂರ್ಣವಾಗುವಂತೆ ಮಾಡಿದರು, ಅವರು ಈ ಯಜ್ಞನಿರ್ವಹಣದಲ್ಲಿ ವಹಿಸಿದ ಮುಖ್ಯಪಾತ್ರವೇನು ಎಂಬ ವಿಷಯವನ್ನು ವಿವರಿಸುವ ಕಥಾಸಂದರ್ಭವು ಶತಪಥಬ್ರಾಹ್ಮಣದಲ್ಲಿ ಹೇಳಲ್ಪಟ್ಟಿದೆ ಅದರಲ್ಲಿ ಯಜ್ಞಾತ್ಮನಾದ ವಿಷ್ಣುವಿನ ಶಿರಶ್ಛೇದನವಾದುದನ್ನೂ, ಅದನ್ನು ಅಶ್ವಿನೀದೇವತೆಗಳು ಸರಿಪಡಿಸಿದುದರಿಂದ ಅವರೇ ಯಜ್ಞನೇತೃತ್ವವನ್ನು ವಹಿಸಿ, ಯಜ್ಞನಿರ್ವಹಣಕಾರ್ಯದಲ್ಲಿ ಮುಖ್ಯಪಾತ್ರವನ್ನು ವಹಿಸಿದಂತಾಯಿತೆಂದೂ ಆ ಕಥಾಸಂದರ್ಭವನ್ನು ಈ ರೀತಿ ತಿಳಿಸಿದೆ.

**ದೇವಾ ಹ ವೈ ಸತ್ರಂ ನಿಷೇದುಃ । ಅಗ್ನಿರಿಂದ್ರಃ ಸೋಮೋ ಮಖೋ ವಿಷ್ಣುರ್ವಿಶ್ವೇದೇವಾ ಅನ್ಯತ್ರೈವಾಶ್ವಿಭ್ಯಾಂ । ತೇಷಾಂ ಕುರುಕ್ಷೇತ್ರಂ ದೇವಯಜನಮಾಸ । ತಸ್ಮಾದಾಹುಃ ಕುರುಕ್ಷೇತ್ರಂ ದೇವಾನಾಂ ದೇವಯಜನಮಿತಿ ತಸ್ಮಾದ್ಯತ್ರ ಕ್ವ ಚ ಕುರುಕ್ಷೇತ್ರಸ್ಯ ನಿಗಚ್ಛತಿ ತದೇವ ಮನ್ಯತ ಇದಂ ದೇವಯಜನಮಿತಿ ತದ್ಧಿ ದೇವಾನಾಂ ದೇವಯಜನಂ । ತ ಆಸತ । ಶ್ರಿಯಂ ಗಚ್ಛೇಮ ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ ತಥೋ ಏವೇಮೇ ಸತ್ತ್ರಮಾಸತೇ ಶ್ರಿಯಂ ಗಚ್ಛೇಮ ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ । ತೇ ಹೋಚುಃ । ಯೋ ನಃ ಶ್ರಮೇಣ ತಪಸಾ ಶ್ರದ್ಧಯಾ ಯಜ್ಞೇನಾಹುತಿಭಿರ್ಯಜ್ಞಸ್ಯೋದೃಚಂ ಪೂರ್ವೋಽವಗಚ್ಛಾತ್ಸ ನಃ ಶ್ರೇಷ್ಠೋಽಸತ್ತದು ನಃ ಸರ್ವೇಷಾಗ್ಂ ಸಹೇತಿ ತಥೇತಿ । ತದ್ವಿಷ್ಣುಃ ಪ್ರಥಮಃ ಪ್ರಾಪ । ಸ ದೇವಾನಾಗ್ ಶ್ರೇಷ್ಠೋಽಭವತ್ತಸ್ಮಾದಾಹುರ್ವಿಷ್ಣುರ್ದೇವಾನಾಗ್ ಶ್ರೇಷ್ಠ**

**ಇತಿ । ಸ ಯಃ ಸ ವಿಷ್ಣುರ್ಯಜ್ಞಃ ಸ ಸ ಯಃ ಸ ಯಜ್ಞೋಽಸೌ ಸ ಆದಿತ್ಯಸ್ತದ್ಧೇದಂ ಯಶೋ ವಿಷ್ಣುರ್ನ ಶಶಾಕ ಸಂಯಂತುಂ ತದಿದಮಪ್ಯೇತರ್ಹಿ ನೈವ ಸರ್ವ ಇವ ಯಶಃ ಶಕ್ನೋತಿ ಸಂಯಂತುಂ । ಸ ತಿಸೃಧನ್ವಮಾದಾಯಾಪಚಕ್ರಾಮ । ಸ ಧನುರಾತ್ನ್ಯಾ ಶಿರ ಉಪಸ್ತಭ್ಯ ತಸ್ಥೌ ತಂ ದೇವಾ ಅನಭಿಧೃಷ್ಣುವಂತಃ ಸಮಂತಂ ಪರಿಣ್ಯವಿಶಂತೆ । ತಾಹ ವಮ್ರ್ಯ ಊಚುಃ । ಇಮಾ ವೈ ವಮ್ರ್ಯೋ ಯದುಪದೀಕಾ ಯೋಽಸ್ಯ ಜ್ಯಾಮಪ್ಯದ್ಯಾತ್ಕಿಮ-ಸ್ಮೈ ಪ್ರಯಚ್ಛೇತೇತ್ಯನ್ನಾದಮಸ್ಮೈ ಪ್ರಯಚ್ಛೇಮಾಪಿ ಧನ್ವನ್ನಪೋಽಧಿಗಚ್ಛೇತ್ತಥಾಸ್ಮೈ ಸರ್ವಮನ್ನಾದ್ಯಂ ಪ್ರಯಚ್ಛೇಮೇತಿ ತಥೇತಿ । ತಸ್ಯೋಪರರಾಸತ್ಯೆ । ಜ್ಯಾಮಪಿಜಕ್ಷು-ಸ್ತಸ್ಯಾಂ ಛಿನ್ನಾಯಾಂ ಧನುರಾತ್ನ್ಯೌ ವಿಸ್ಫುರಂತ್ಯೌ ವಿಷ್ಣೋಃ ಶಿರಃ ಪ್ರಚಿಚ್ಛಿದತುಃ ॥**

(ಶ. ಬ್ರಾ. ೧೪-೧-೧-೧ ರಿಂದ ೯)

ಹಿಂದೆ **ಅಶ್ವಿನಿ** ದೇವತೆಗಳನ್ನು ಮಾತ್ರ ಬಿಟ್ಟು ಉಳಿದ **ಇಂದ್ರ, ವಿಷ್ಣು, ಸೋಮ** ಇತ್ಯಾದಿ ದೇವತೆಗಳೆಲ್ಲರೂ ಸೇರಿ ದೇವಯಜನಪ್ರದೇಶವಾದ ಕುರುಕ್ಷೇತ್ರದಲ್ಲಿ ಒಂದು ಸತ್ರವನ್ನಾರಂಭಿಸಿದರು. ಅನಂತರ ಅವರು ಯಶಸ್ವಿಗಳೂ ಅನ್ನವಂತರೂ ಆಗಬೇಕೆಂದಾಶಿಸಿದರು. ಆಗ ತಮ್ಮಲ್ಲಿ ಯಾರು ಶ್ರಮದಿಂದಲೂ ಶ್ರದ್ಧೆಯಿಂದಲೂ ಆಹುತಿಗಳಿಂದಲೂ ಮೊದಲು ಯಜ್ಞವನ್ನು ಸಾಂಗವಾಗಿ ಪೂರ್ಣಮಾಡುವರೋ ಅವರೇ ಅತ್ಯಂತ ಶ್ರೇಷ್ಠರೆಂದು ಪರಿಗಣಿತರಾಗುವರು ಎಂದು ತೀರ್ಮಾನಿಸಿದಾಗ **ವಿಷ್ಣುವು** ಮೊದಲು ಆ ಶ್ರೇಷ್ಠವಾದ ಪದವಿಯನ್ನು ಪಡೆದನು. ಇಂತಹ ಉತ್ತಮವಾದ ಪದವಿಯನ್ನು ಪಡೆದ ವಿಷ್ಣುವೇ ಯಜ್ಞಾತ್ಮನಾದನು. ಆಗ ಅವನ ಶ್ಲಾಘಾಭಿಮಾನವು ತಡೆಯಲಾರದಾಯಿತು. ತನ್ನ ಮೂರು ಬಾಣಗಳೊಂದಿಗೆ ಕೂಡಿದ ಧನಸ್ಸನ್ನು ತೆಗೆದುಕೊಂಡು ಹೊರಟಾಗ ದೇವತೆಗಳಾರೂ ಅವನನ್ನು ಪ್ರತಿಭಟಿಸಲು ಧೈರ್ಯವಿಲ್ಲದೇ ಸ್ತಬ್ಧರಾಗಿ ಕುಳಿತರು. ಆಗ ವಮ್ರಿಯೆಂಬ ಜಾತಿಗೆ ಸೇರಿದ ಇರುವೆಗಳು ಬಂದು ಆ ಧನುಸ್ಸಿನ ಹೆದೆಯನ್ನು ಹಿಡಿದೆಳೆದು ಬಗ್ಗಿಸಿದರೆ ಅದಕ್ಕೆ ಪ್ರತಿಫಲವಾಗಿ ಏನನ್ನು ಕೊಡುವೆ ಯೆಂದು ದೇವತೆಗಳನ್ನು ಕೇಳಿದವು. ಅಂತಹ ಸಾಮರ್ಥ್ಯವಿರುವವನು ಪೂರ್ಣವಾದ ಅನ್ನಸಂಪತ್ತನ್ನನುಭವಿಸುವನು. ಮತ್ತು ಮರಳುಗಾಡಿನಲ್ಲೂ ಜಲಸಮೃದ್ಧಿಯನ್ನು ಹೊಂದುವನು ಎಂಬ ಭರವಸೆಯನ್ನು ಕೊಟ್ಟರು. ಆಗ ಅವು ಅದರ ಹೆದೆಯನ್ನು ಕಡಿದು ಹಾಕಿದವು ಒಡನೆಯೇ ಬಗ್ಗಿದ್ದ ಧನುಸ್ಸಿನ ಮೇಲೆ ತಲೆಯನ್ನಿಟ್ಟಿದ್ದ ವಿಷ್ಣುವಿನ ಶಿರಸ್ಸನ್ನು ಕತ್ತರಿಸಿಕೊಂಡುಹೋಯಿತು. ಯಜ್ಞಾತ್ಮಕನಾದ ವಿಷ್ಣುವಿನ ಶಿರಶ್ಛೇದನವಾದಾಗ ಯಜ್ಞಕ್ಕೆ ಶೂನ್ಯವಾಯಿತೆಂದು ತಿಳಿದ ದೇವತೆಗಳು ಚಿಂತಿಸುತ್ತಿದ್ದಾಗ ಅಶ್ವಿನೀದೇವತೆಗಳು ಭಿನ್ನವಾದ ವಿಷ್ಣುವಿನ ಶಿರಸ್ಸನ್ನು ಸರಿಪಡಿಸಿದರು. ಆದುದರಿಂದ ಯಜ್ಞನಿರ್ವಹಣಕ್ಕೆ ಅಶ್ವಿನೀದೇವತೆಗಳಿಲ್ಲದೇ ಸಾಧ್ಯವೇ ಆಗಲಿಲ್ಲ ಎಂಬಂಶವನ್ನು ತಿಳಿಸಿದೆ. ಇದೇ ವಿಷಯವನ್ನು ತೈತ್ತಿರೀಯಾರಣ್ಯಕದಲ್ಲಿ ಈ ರೀತಿ ಹೇಳಿದೆ.

**ದೇವಾ ವೈ ಸತ್ರಮಾಸತ । ಋದ್ಧಿಪರಿಮಿತಂ ಯಶಸ್ಕಾಮಾಃ । ತೇಽಬ್ರುವನ್ । ಯನ್ನಃ ಪ್ರಥಮಂ ಯಶ ಋಚ್ಛಾತ್ । ಸರ್ವೇಷಾಂ ನಸ್ತತ್ಸಹಾಸದಿತಿ । ........ । ತೇಷಾಂ ಮಖಂ ವೈಷ್ಣವಂ ಯಶ ಆರ್ಛತ್ । ...........ತಸ್ಯ ಸಿಷ್ಮಿಯಾಣಸ್ಯ ತೇಜೋಽಪಾಕ್ರಾಮತ್ ।....... ವಾರೇವೃತಗ್ಂ ಹ್ಯಾಸಾಂ । ತಸ್ಯ ಜ್ಯಾಮಪ್ಯಾದನ್ । ತಸ್ಯ ಧನುರ್ವಿಪ್ರವಮಾಣಗ್ಂ ಶಿರ ಉದವರ್ತಯತ್ । ತದ್ದ್ಯಾವಾಪೃಥಿವೀ ಅನು ಪ್ರಾವರ್ತತ । ಯತ್ಪ್ರಾವರ್ತತ। ತತ್**

**ಪ್ರವರ್ಗ್ಯಸ್ಯ ಪ್ರವರ್ಗ್ಯತ್ವಂ। ಯದ್ ಘ್ರಾಣ್ ಇತ್ಯಪತತ್। ತದ್ಧರ್ಮಸ್ಯ ಘರ್ಮತ್ವಂ। ಮಹತೋ ವೀರ್ಯಮಪಪ್ತದಿತಿ। ತನ್ಮಹಾವೀರಸ್ಯ ವೀರತ್ವಂ। ಯದಸ್ಯಾಃ ಸಮಭರನ್ತ ಮ್ರಾಜಃ ಸಂಮ್ರಾಟ್ತ್ವಂ। ತಗ್ಂಸ್ತೃತಂ ದೇವತಾಸ್ತ್ರೇಧಾ ವ್ಯಗೃಹ್ಣತ। ಅಗ್ನಿಃಪ್ರಾತಸ್ಸವನಂ। ಇಂದ್ರೋ ಮಾಧ್ಯಂದಿನಗ್ಂ ಸವನಂ। ವಿಶ್ವೇದೇವಾಸ್ತೃತೀಯಸವನಂ। ತೇನಾಪಶೀರ್ಷ್ಣಾ ಯಜ್ಞೇನ ಯಜಮಾನಾಃ। ನಾಶಿಷೋಽವಾರುಂಧತ। ನ ಸುವರ್ಗಂ ಲೋಕಮಭ್ಯಜಯನ್। ತೇ ದೇವಾ ಅಶ್ವಿನಾವಬ್ರುವನ್। ಭಿಷಜೌ ವೈ ಸ್ಥಃ। ಇದಂ ಯಜ್ಞಸ್ಯಶಿರಃ ಪ್ರತಿಧತ್ತಮಿತಿ। ತಾವಬ್ರೂತಾಂ ವರಂ ವೃಣಾವಹೈ। ಗ್ರಹ ಏವ ನಾವತ್ರಾಪಿ ಗೃಹ್ಯತಾಮಿತಿ। ತಾಭ್ಯಾಮೇತಮಾಶ್ವಿನಮಗೃಹ್ಣನ್। ತಾವೇತದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ। ಯತ್ಪ್ರವರ್ಗ್ಯಃ। ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಾಃ। ಅವಾಶಿಷೋಽರುಂಧತ। ....ಅಭಿ ಸುವರ್ಗಂ ಲೋಕಂ ಜಯತಿ। ತಸ್ಮಾದೇಷ ಅಶ್ವಿನಪ್ರವಯಾ ಇವ। ಯತ್ಪ್ರವರ್ಗ್ಯಃ॥**

(ತೈ. ಆ ೫-೧-೧ ರಿಂದ ೭)

ಶತಪಥಬ್ರಾಹ್ಮಣದಿಂದ ಮೇಲೆ ಉದಾಹರಿಸಿದ ಕಥೆಯಂತೆ ಯಜ್ಞಾತ್ಮನಾದ ವಿಷ್ಣುವಿನ ಶಿರಚ್ಛೇದನವಾದ ನಂತರ ಉರುಳಿದ ಯಜ್ಞದೇಹವನ್ನು ಮೂರು ಭಾಗಗಳನ್ನಾಗಿ ಮಾಡಿದರು. ಆಗ ಅಗ್ನಿಯು ಪ್ರಾತಃ ಸವನವನ್ನೂ, ಇಂದ್ರನು ಮಧ್ಯಂದಿನ ಸವನವನ್ನೂ, ವಿಶ್ವೇದೇವತೆಗಳು ತೃತೀಯ ಸವನವನ್ನೂ ಹಂಚಿಕೊಂಡರು. ಆದರೆ ತಲೆಯೇ ಇಲ್ಲದ ಯಜ್ಞದಿಂದ ಅವರಿಗೆ ಶ್ರೇಯಸ್ಸಾಗಲಿ ಅಥವಾ ಸ್ವರ್ಗವಾಗಲಿ ಲಭಿಸಲಿಲ್ಲ. ಆಗ ಅವರು ಅಶ್ವಿನೀ ದೇವತೆಗಳನ್ನು ಕುರಿತು "ನೀವು ದೇವವೈದ್ಯರಾಗಿದೀರಿ" ಈ ಭಿನ್ನವಾಗಿರುವ ಯಜ್ಞಶಿರಸ್ಸನ್ನು ಪುನಃ ಒಂದಾಗಿ ಸೇರಿಸಿರಿ. ಯಜ್ಞನಿರ್ವಹಣಕ್ಕೆ ಮುಖ್ಯಕಾರಣರಾಗಿ" ಎಂದು ಪ್ರಾರ್ಥಿಸಿದಾಗ ಅವರು "ಇಲ್ಲಿಯೂ ಸಹ ನನಗೆ ಸೋಮಾಹುತಿಯು ಲಭಿಸುವಂತಾದರೆ ನಾವು ಶಿರಸ್ಸನ್ನು ದೇಹದೊಂದಿಗೆಸೇರಿಸುವೆವು"-ಎಂದು ಹೇಳಿದರು. ದೇವತೆಗಳು ಅದಕ್ಕೆ ಸಮ್ಮತಿಸಲು ಯಜ್ಞದ ಶಿರಃ ಪ್ರದೇಶವನ್ನು ಸೇರಿಸಿ ಅವರ ಯಜ್ಞಕ್ಕೆ ಕಾರಣರೂ ಮತ್ತು ಯಜ್ಞಭಾಗಾರ್ಹರೂ ಆದರು ಎಂದಿದೆ. ಈ ರೀತಿಯಾಗಿ ಯಜ್ಞಕ್ಕೆ ವಿಘ್ನವು ಪ್ರಾಪ್ತವಾದಾಗಲೆಲ್ಲ ಅಶ್ವಿನೀ ದೇವತೆಗಳು ಮುಂದೆ ಬಂದು ಯಜ್ಞನಿರ್ವಹಣೆಗೆ ಅನುಕೂಲರಾದರು ಎಂಬ ಅಂಶವು ಪ್ರಕೃತವಾದ ಋಕ್ಕಿನಲ್ಲಿ ಸೂಚಿಸಲ್ಪಟ್ಟಿದೆಯೆಂದು ಹೇಳಬಹುದು. ಆದುದರಿಂದಲೇ **ಮಹಿನಾ ರಥಸ್ಯ ಪ್ರ (ವಹಥೇ)** ಎಂಬ ಪ್ರಶಂಸೆಯಿದೆ. ಅದಕ್ಕೋಸ್ಕರವೇ ಅವರಿಗೆ ಯಜ್ಞಭಾಗಾರ್ಹವು.

**ಮಧೋಃ ಪಿಬತಮಶ್ವಿನೇತ್ಯಶ್ವಿನಾವೇವೈತದಾಹಾಶ್ವಿನೌ ಹ್ಯೇತದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ ತಾವೇವೈತತ್ಪ್ರೀಣಾತ್ಯವರಗ್ಂಸ್ವಾಹಾಕಾರಂ ಕರೋತಿ"**

(ಶ. ಬ್ರಾ. ೧೪-೨-೨-೧೬)

ಇತ್ಯಾದಿ ಶ್ರುತಿವಾಕ್ಯಗಳಲ್ಲೂ ಮತ್ತು ತೈ. ಸಂ. ೬-೪-೯ ರಲ್ಲೂ ಸಹ ಇದೇ ವಿಷಯವನ್ನು ತಿಳಿಸಿ ಅಶ್ವಿನಿದೇವತೆಗಳ ಮಹತ್ವವನ್ನು ಪ್ರಶಂಸಿಸಿದೆ.

**ಸ್ಯಂದ್ರಾ—ಸ್ಯಂದ್ರ** ಪದವು **ಗತಿ** ಕರ್ಮನಾಮಗಳಲ್ಲೂ ಮತ್ತು **ಬಲ** ನಾಮಗಳಲ್ಲೂ ಪಠಿಸಲ್ಪಟ್ಟಿದೆ. (ನಿ. ೩-೯) ಅಶ್ವಿನೀದೇವತೆಗಳ ಸಂಚಾರದ ಸೌಂದರ್ಯವನ್ನು ವರ್ಣಿಸುವ ಪದವಾಗಿದೆ. ಇವರ ಆಗಮನವನ್ನೂ ಅದರ ಸೊಬಗನ್ನೂ ವರ್ಣಿಸುವ ಮಂತ್ರಗಳನೇಕವಿವೆ. ಉದಾಹರಣೆಗೆ—

**ಆ ತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಮೃಭವಶ್ಚಕ್ರುರಶ್ವಿನಾ ।**
**ಯಸ್ಯ ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ ವಿವಸ್ವತಃ ॥**

(ಋ. ಸಂ. ೧೦-೩೯-೧೨)

ಇತ್ಯಾದಿ ಋಕ್ಕುಗಳಲ್ಲಿ ಋಭುಗಳು ಅಶ್ವಿನೀದೇವತೆಗಳಿಗಾಗಿ ಮಾತ್ರ ಸೃಷ್ಟಿಮಾಡಿರುವ ರಥದಲ್ಲಿ ಇವರು ಕುಳಿತು ಸಂಚಾರಕ್ಕೆ ಸಿದ್ಧರಾದೊಡನೆಯೇ ವಿಶ್ವ ಸೌಂದರ್ಯವನ್ನು ಬೀರುವ ಉಷೋದೇವಿಯೂ ಅಹೋರಾತ್ರಿಗಳೂ ಉದಯಿಸುತ್ತವೆ. ಆ ಸೌಂದರ್ಯೋದಯಕ್ಕೆ ಹೇತುಗಳಾದ ಅಶ್ವಿನೀದೇವತೆಗಳು ಮನೋವೇಗಕ್ಕಿಂತಲೂ ಅತಿಶಯವಾದ ವೇಗದಿಂದ ಯಜ್ಞಾಭಿಮುಖವಾಗಿ ಬರುತ್ತಾರೆ ಎಂದಿರತಕ್ಕ ವರ್ಣನೆಯಲ್ಲಿ ಸ್ಯಂದ್ರಾ ಎಂಬ ಪದದ ಎರಡು ವಿಧವಾದ ಗುಣಗಳೂ ಸೂಚಿತವಾಗಿದೆ.

**ಸೂರಿಭ್ಯಃ**—ಅತೀಂದ್ರಿಯಗ್ರಾಹಕವಾದ ದರ್ಶನಶಕ್ತಿಯನ್ನು ಪಡೆದಿರತಕ್ಕ ಋಷಿಗಳು, ಕವಿಗಳು, ಮೇಧಾವಿಗಳು ಎಂದು ಈ ಪದಕ್ಕೆ ಅರ್ಥವಾಗುತ್ತದೆ. ಈ ಪದಕ್ಕಿರತಕ್ಕ ವಿಶೇಷಾರ್ಥಗಳನ್ನೂ ಇದರ ವಿಶೇಷ ಪ್ರಯೋಗಗಳನ್ನೂ ಇದೇ ಸೂಕ್ತದ ೬ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಹಿಂದೆ ತಿಳಿಸಿದೆ.

**ನಾಸತ್ಯಾ**—ಅಶ್ವಿನೀ ದೇವತೆಗಳಿಗೆ ದಸ್ರಾ, ನಾಸತ್ಯಾ ಎಂಬ ಪರ್ಯಾಯಪದಗಳಿರುವುದರಿಂದ ಈ ಪದಗಳು ಇವರ ಯಾವ ದೈವೀಗುಣವನ್ನು ತೋರಿಸುವುದೆಂಬುದನ್ನೂ ಹಿಂದೆ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ವಹೇಥೇ**—ವಹ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸ್ಯಂದ್ರಾ**—ಸ್ಯಂದೂ ಪ್ರಸ್ರವಣೇ ಧಾತು. ಬಹುಲಗ್ರಹಣ ಸಾಮರ್ಥ್ಯದಿಂದ ಔಣಾದಿಕ ರನ್ ಪ್ರತ್ಯಯ. ಸಂಬೋಧನಾದ್ವಿವಚನದಲ್ಲಿ **ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ. ಆಮಂತ್ರಿತ ನಿಘಾತ ಸ್ವರ ಬರುತ್ತದೆ.

**ಯಾಥಃ**—ಯಾ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಧತ್ತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಸ್ವಶ್ವ್ಯಮ್**—ಶೋಭನಾನಾಂ ಅಶ್ವಾನಾಂ ಸಮೂಹಃ ಸ್ವಶ್ವ್ಯಮ್. ಸಮೂಹಾರ್ಥದಲ್ಲಿ ಯತ್ ಪ್ರತ್ಯಯ. **ಯತೋಽನಾವಃ** (ಪಾ ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಾಸತ್ಯಾ**—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಂಬೋಧನಾ ದ್ವಿವಚನಕ್ಕೆ ಆಕಾರಾದೇಶ. ಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಯಿಸಾಚಃ**— ಷಚ ಸಮವಾಯೇ. ಧಾತು. ಣಿಜಂತದ ಮೇಲೆ ವಿಚ್ ಪ್ರತ್ಯಯ. **ಅತಉಪಧಾಯಾಃ** ಎಂಬುದರಿಂದ ಧಾತೂಪಧೆ ಆಕಾರಕ್ಕೆ ವೃದ್ಧಿ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತ ರೂಪ. ॥ ೯ ॥

॥ ಸಂಹಿತಾಪಾಠಃ ॥

ತಂ ವಾಂ ರಥಂ ವಯಮದ್ಯಾ ಹುವೇಮ ಸ್ತೋಮೈರಶ್ವಿನಾ ಸುವಿತಾಯ ನವ್ಯಂ ।
ಅರಿಷ್ಟನೇಮಿಂ ಪರಿ ದ್ಯಾಮಿಯಾನಂ ವಿದ್ಯಾಮೇಷಂ ವೃಜನಂ ಜೀರದಾನುಂ ॥

॥ ಪದಪಾಠಃ ॥

ತಂ । ವಾಂ । ರಥಂ । ವಯಂ । ಅದ್ಯ । ಹುವೇಮ । ಸ್ತೋಮೈಃ । ಅಶ್ವಿನಾ । ಸುವಿತಾಯ । ನವ್ಯಂ ।
ಅರಿಷ್ಟಽನೇಮಿಂ । ಪರಿ । ದ್ಯಾಂ । ಇಯಾನಂ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥ ೧೦ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನಾ ಹೇ ಅಶ್ವಿನೌ ವಾಂ ಯುವಯೋಃ ಸಂಬಂಧಿನಂ ಶೀಘ್ರಗಮನೇನ ಸ್ತುತ್ಯಂ ರಥಂ ವಯಮಗಸ್ತ್ಯಾ ಅದ್ಯಾಸ್ಮಿನ್ನಸ್ಮಿನ್ನಹನಿ ಹುವೇಮ । ಆಹ್ವಯೇಮ । ಕೇನ ಸಾಧನೇನೇತಿ ಉಚ್ಯತೇ । ಸ್ತೋಮೈಃ ಸ್ತೋತ್ರೈಃ । ಕಿಮರ್ಥಂ । ಸುವಿತಾಯ ಸುಷ್ಠು ಪ್ರಾಪ್ತಯೇ । ಕೀದೃಶಂ । ನವ್ಯಂ ಸ್ತುತ್ಯಂ ನೂತನಂ ವಾ ತಥಾರಿಷ್ಟನೇಮಿಮಹಿಂಸಿತಚಕ್ರವಲಯಂ ದ್ಯಾಂ ಪರೀಯಾನಂ ದ್ಯುಲೋಕಸ್ಯ ಪರಿತೋ ಗಚ್ಛಂತಂ । ವಿದ್ಯಾಮೇತ್ಯಾದಿ ಗತಂ ॥**

॥ ಪ್ರತಿಪದಾರ್ಥ ॥

**(ಹೇ) ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ನವ್ಯಂ**—ನೂತನವೂ ಅಥವಾ ಸ್ತುತ್ಯವೂ । **ಅರಿಷ್ಟನೇಮಿಂ**—ಅಹಿಂಸಿತವಾದ ರಥಚಕ್ರದ ನೇಮಿಯುಳ್ಳದ್ದೂ (ಅಪ್ರತಿಹತಗತಿಯುಳ್ಳದ್ದೂ) । **ದ್ಯಾಂ ಪರಿ**—ದ್ಯುಲೋಕದ ಸುತ್ತಲೂ । **ಇಯಾನಂ**—ಗಮಿಸುವುದೂ ಆದ । **ವಾಂ**—ನಿಮ್ಮ । **ತಂ**—ಪ್ರಸಿದ್ಧವಾದ ಆ । **ರಥಂ**—ರಥವನ್ನು । **ಸುವಿತಾಯ**—ಸತ್ಪದಾರ್ಥಗಳ ಪ್ರಾಪ್ತಿಗೋಸ್ಕರ । **ಸ್ತೋಮೈಃ**—ಸ್ತೋತ್ರಗಳಿಂದ । **ಅದ್ಯ**—ಈ ದಿವಸ । **ವಯಂ**—ನಾವು । **ಹುವೇಮ**—ಕರೆಯುತ್ತೇವೆ । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ನಿಮ್ಮನುಗ್ರಹದಿಂದ ನಾವು) ಪಡೆಯೋಣ.

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ, ನೂತನವೂ, ಅಪ್ರತಿಹತವಾಗಿಯೂ, ದ್ಯುಲೋಕದ ಸುತ್ತಲೂ ಹೋಗುವುದೂ ಆದ ನಿಮ್ಮ ಪ್ರಸಿದ್ಧವಾದ ರಥವನ್ನು ಸತ್ಫಲಪ್ರಾಪ್ತಿಗೋಸ್ಕರ ಸ್ತುತಿಪೂರ್ವಕವಾಗಿ ಈ ದಿನ ಅಹ್ವಾನಿಸುತ್ತೇವೆ. ನಮಗೆ ಆಹಾರ, ಬಲ ಮತ್ತು ದೀರ್ಘಾಯುಷ್ಯಗಳನ್ನು ಅನುಗ್ರಹಿಸಿ.

## English Translation.

We invoke to-day, Ashwins, with hymns, for the sake of good things, your praiseworthy chariot of undamaged wheels, and traversing the sky, that we may obtain (from it) food, strength, and long iife.

॥ ವಿಶೇಷವಿಷಯಗಳು ॥

**ಸುವಿತಾಯ—ಸುಷ್ಠುಪ್ರಾಪ್ತಯೇ—** ಶ್ರೇಷ್ಠವಾದ ಪ್ರಾಪ್ತಿಗೋಸ್ಕರ ಎಂದರ್ಥ ಮಾಡಿದೆ. ಈ ಪದಕ್ಕೆ ಕೆಲವೆಡೆಗಳಲ್ಲಿ **ಸುಷ್ಠು ಗಂತವ್ಯಾಯ ಯಜ್ಞಾಯ** ಎಂದೂ ಇನ್ನೂ ಕೆಲವೆಡೆಗಳಲ್ಲಿ ಸು-ಗಮನಾಯ ಎಂದೂ ಅರ್ಥಮಾಡಿದೆ. ಎಲ್ಲಕ್ಕೂ ಉದ್ದಿಶ್ಯವು ಒಂದೇ ಆಗುತ್ತದೆ.

**ನವ್ಯಂ, ಅರಿಷ್ಟನೇಮಿಂ—** ಎಂಬ ಪದಗಳು ಅಶ್ವಿನೀದೇವತೆಗಳ ರಥಕ್ಕೆ ವಿಶೇಷಣವಾದ ಪದಗಳಾಗಿವೆ. ರಥದ ವೈಶಿಷ್ಟ್ಯವನ್ನು ತಿಳಿಸುತ್ತವೆ. ಈ ರಥದ ಮಾಹಾತ್ಮ್ಯವನ್ನೂ ಮುಂದಿನ ಸೂಕ್ತಗಳಲ್ಲಿ ತಿಳಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಆದ್ಯ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಹುವೇಮ—** ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಿಙ್ ಉತ್ತಮಪುರುಷ ಬಹುವಚನಾಂತರೂಪ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ ಬಂದಿದೆ. ತಿಙಂತ ನಿಘಾತಸ್ವರ ಬರುತ್ತದೆ.

**ಸುವಿತಾಯ—** ಇಣ್ ಗತೌ. ಧಾತು. ಕರ್ಮಣಿಯಲ್ಲಿ ನಿಷ್ಠಾ ಪ್ರತ್ಯಯ. **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮ್** ಎಂಬ ವಚನದಿಂದ ಸು ಎಂಬಲ್ಲಿರುವ ಉಕಾರಕ್ಕೆ ಉವಙಾದೇಶ. **ಸೂಪಮಾನಾತ್ ಕ್ತಃ** (ಪಾ. ಸೂ. ೬-೨-೧೪೫) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಅರಿಷ್ಟನೇಮಿಮ್—** ಬಹುವ್ರೀಹಿ ಸಮಾಸ. **ಬಹುವ್ರೀಹೌ ಪ್ರ—** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಇಯಾನಮ್—** ಈಙ್ ಗತೌ. ಧಾತು. **ಛಂದಸಿ ಲಿಟ್** (ಪಾ. ಸೂ. ೩-೨-೧೦೫) ಎಂಬುದರಿಂದ ಲಿಟ್ ಬಂದಾಗ ಅದಕ್ಕೆ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚಾದೇಶ. **ಅಚಿಶ್ನುಧಾತು—** (ಪಾ. ಸೂ. ೬-೪-೭೭) ಎಂಬುದರಿಂದ ಇಯಙಾದೇಶ. **ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮ್** ಎಂಬ ವಚನದಿಂದ ದ್ವಿತ್ವಾದಿಗಳು ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೧೦ ॥

ಇಲ್ಲಿಗೆ ನೂರ ಎಂಭತ್ತನೇ ಸೂಕ್ತ ಮುಗಿದುದು.



# ನೂರ ಎಂಭತ್ತೊಂದನೆಯ ಸೂಕ್ತವು

**ಕದು ಪ್ರೇಷ್ಠಾವಿತಿ ನವರ್ಚಂ ದ್ವಿತೀಯಂ ಸೂಕ್ತಮಾಗಸ್ತ್ಯಂ ತ್ರೈಷ್ಟುಭಮಾಶ್ವಿನಂ । ಕದು ನವೇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗಃ ಪೂರ್ವಸೂಕ್ತ ಏವೋಕ್ತಃ ॥**

ಅನುವಾದವು— **ಕದು ಪ್ರೇಷ್ಠೌ** ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಅಶ್ವಿನೀದೇವತೆಗಳೇ ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಕದು ನವ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದಿನ ಸೂಕ್ತದ ಅನುವಾದದಲ್ಲಿಯೇ ಹೇಳಿದೆ.

## ಸೂಕ್ತ—೧೮೧

ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೧ ॥

ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೨೫, ೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ – ೯ ॥

॥ ಋಷಿಃ—ಆಗಸ್ತ್ಯಃ ॥

॥ ದೇವತಾ—ಅಶ್ವಿನೌ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕದು ಪ್ರೇಷ್ಠಾವಿಷಾಂ ರಯೀಣಾಮಧ್ವರ್ಯಂತಾ ಯದುನ್ನಿನೀಥೋ ಅಪಾಂ ।
ಅಯಂ ವಾಂ ಯಜ್ಞೋ ಅಕೃತ ಪ್ರಶಸ್ತಿಂ ವಸುಧಿತೀ ಅವಿತಾರಾ ಜನಾನಾಂ ॥

॥ ಪದಪಾಠಃ ॥

ಕತ್ । ಊಂ ಇತಿ । ಪ್ರೇಷ್ಠೌ । ಇಷಾಂ । ರಯೀಣಾಂ । ಅಧ್ವರ್ಯಂತಾ । ಯತ್ । ಉತ್ೃನಿನೀಥಃ । ಅಪಾಂ ।

ಅಯಂ । ವಾಂ । ಯಜ್ಞಃ । ಅಕೃತ । ಪ್ರಶಸ್ತಿಂ । ವಸುಧಿತೀ ಇತಿ ವಸುೃಧಿತೀ । ಅವಿತಾರಾ । ಜನಾನಾಂ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಪ್ರೇಷ್ಠೌ ಪ್ರಿಯತಮೌ ವಾಂ ಯುವಾಂ ಕದು ಕದಾ ಭವಿಷ್ಯತಿ ಇಷಾಮಿಷ್ಯಮಾಣಾನಾಮನ್ನಾನಾಂ ರಯೀಣಾಂ ಧನಾನಾಂ ॥ ಕರ್ಮಣಿ ಷಷ್ಠ್ಯೌ ॥ ಅನ್ನಾನಿ ಧನಾನಿ ಚೋನ್ನಿನೀಥಃ

**ಊರ್ಧ್ವಂ ಪ್ರಾಪಯಥಃ ಅಧ್ವರ್ಯಂತಾಧ್ವರಂ ಪಾರಯಿತುಮಿಚ್ಛಂತೌ ಯುವಾಮಪಾಂ ವೃಷ್ಟ್ಯುದಕಾನಾಂ ವೃಷ್ಟ್ಯುದಕಾನಿ ಚೋನ್ನಿನೀಥಃ ಉತ್ಕೃಷ್ಟಮಧಃ ಪ್ರಾಪಯಥ ಇತಿ ಯತ್ತತ್ಕದಾ । ಕಸ್ಮಾದೇವಮುಚ್ಯತ ಇತಿ ಉಚ್ಯತೇ । ಅಯಂ ಯಜ್ಞೋಽಸ್ಮಾಭಿರನುಷ್ಠೀಯಮಾನೋ ವಾಂ ಯುವಯೋರೇವ ಪ್ರಶಸ್ತಿಂ ಪ್ರಶಂಸಾಂ ಸ್ತುತಿಮಕೃತ । ಕರೋತಿ । ಯಜ್ಞೇ ಶಂಸನೀಯಾನಿ ಶಸ್ತ್ರಾಣಿ ಯುವಾಮೇವ ಪ್ರಶಂಸಂತೀತ್ಯರ್ಥಃ । ಯಸ್ಮಾದೇವಂ ತಸ್ಮಾತ್ ಹೇ ವಸುಧಿತೀ ವಸುನೋ ಧನಸ್ಯ ಧಾತಾರೌ ವಸ್ತ್ರವ್ಯಕರ್ಮಾಣೌ ತಥಾ ಹೇ ಜನಾನಾಮವಿತಾರಾವುಕ್ತಲಕ್ಷಣೌ ಯುವಾಂ ಕದಾನ್ನಾನಾಂ ಧನಾನಾಂ ಚ ದಾತಾರೌ ಭವಥ ಇತಿ ॥**

॥ ಪ್ರತಿಪದಾರ್ಥ ॥

**(ಹೇ) ಪ್ರೇಷ್ಠೌ**—ಪ್ರಿಯತಮರಾದ ಎಲೈ ಅಶ್ವಿನೀದೇವತೆಗಳೇ । **ಅಯಂ**—(ನಮ್ಮಿಂದ ಅನುಷ್ಠೀಯಮಾನವಾದ) ಈ । **ಯಜ್ಞಃ**—ಯಜ್ಞವು । **ವಾಂ**—ನಿಮ್ಮಿಬ್ಬರ । **ಪ್ರಶಸ್ತಿಂ**—ಸ್ತುತಿಯನ್ನು । **ಅಕೃತ**—ಮಾಡುತ್ತದೆ । (ಆದುದರಿಂದ) **ವಸುಧಿತೀ**—ಧನಾಧಾರಕರೂ । **ಜನಾನಾಂ**—ಜನಗಳ । **ಅವಿತಾರಾ**—ರಕ್ಷಕರೂ ಆದ ಎಲೈ ಅಶ್ವಿನೀದೇವತೆಗಳೇ । **ಇಷಾಂ**—ನಮ್ಮಿಂದ ಅಪೇಕ್ಷಣೀಯಗಳಾದ ಅನ್ನಗಳನ್ನು । (ಮತ್ತು) **ರಯೀಣಾಂ**—ಧನಗಳನ್ನು । **ಉತ್ ನಿನೀಥಃ**—ಮೇಲಕ್ಕೆ ವಹಿಸುತ್ತೀರಿ । **(ತಥಾ**—ಹಾಗೆಯೇ) । **ಅಧ್ವರ್ಯಂತಾ**—ಯಾಗವನ್ನು ನಿರ್ವಹಿಸಬೇಕೆಂಬ ಇಚ್ಛೆಯುಳ್ಳ ನೀವಿಬ್ಬರೂ । **ಅಪಾಂ**—ವೃಷ್ಟ್ಯುದಕಗಳನ್ನು । **(ಉತ್ ನಿನೀಥಃ**—ಉತ್ಕೃಷ್ಟವಾಗಿ ಸುರಿಸುತ್ತೀರಿ) । **(ಇತಿ) ಯತ್**—ಎಂಬುದು ಯಾವುದೋ । **ತತ್**—ಅದು । **ಕತ್ ಉ**—ಯಾವಾಗ ಉಂಟಾಗುತ್ತದೆ ?

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅತ್ಯಂತ ಪ್ರೀತಿಪಾತ್ರರೂ, ಧನಾಧಾರರೂ ಮತ್ತು ಜನಗಳಿಗೆಲ್ಲ ರಕ್ಷಕರೂ, ಯಾಗನಿರ್ವಹಣೇಚ್ಛುಗಳೂ ಆದ ನೀವಿಬ್ಬರು ನಮಗೆ ಇಷ್ಟವಾದ ಅನ್ನ, ಧನ ಮತ್ತು ವೃಷ್ಟ್ಯುದಕಗಳನ್ನು ಕೊಟ್ಟು ನಮ್ಮನ್ನನುಗ್ರಹಿಸುವುದು ಯಾವಾಗ ?

English Translation.

When, beloved (Ashwins), do you bear aloft (the materials) of food and riches, that, desirous of the sacrifice, you may send down the rain : this sacrifice offers you adoration, givers of riches, protectors of men.

॥ ವಿಶೇಷವಿಷಯಗಳು ॥

**ಅಧ್ವರ್ಯಂತಾ—ಅಧ್ವರ ಇತಿ ಯಜ್ಞನಾಮ । ಧ್ವರತಿಃ ಹಿಂಸಾಕರ್ಮಾ । ತತ್ಪ್ರತಿಷೇಧಃ ।** (ನಿ. ೧-೮). ಕೊಲ್ಲು ಎಂಬರ್ಥವನ್ನು ಕೊಡುವ **ಧ್ವೃ** ಧಾತುವಿನ ನಿಷೇಧಾರ್ಥವನ್ನು **ಅಧ್ವರ** ಶಬ್ದವು ಸೂಚಿಸುತ್ತದೆ. ಅಹಿಂಸಾತ್ಮಕವಾದ ಯಜ್ಞವೆಂದರ್ಥ. **ಏತಾದೃಶಂ ಅಧ್ವರಂ ಪಾರಯಿತುಮಿಚ್ಛಂತಾಂ ಯುವಾಂ ।** ಇಂತಹ ಅಹಿಂಸಾತ್ಮಕವಾದ ಯಜ್ಞವು ಅವಿಚ್ಛಿನ್ನವಾಗಿ ನೆರವೇರಲು ಸಹಾಯಮಾಡಲಪೇಕ್ಷೆಯುಳ್ಳ ನೀವು ಎಂದು ಈ ಪದವು ಅಶ್ವಿನೀದೇವತೆಗಳಿಗೆ ವಿಶೇಷಣವಾಗಿದ್ದು ಯಜ್ಞನಿರ್ವಹಣದಲ್ಲಿ ಅವರ ಪ್ರಾಧಾನ್ಯವನ್ನು ತಿಳಿಸುತ್ತದೆ. ಯಜ್ಞಾತ್ಮಕನಾದ ವಿಷ್ಣುವಿನ ಶಿರಶ್ಛೇದನವಾದಾಗ ಅಶ್ವಿನೀದೇವತೆಗಳು ಸರಿಪಡಿಸಿ ಯಜ್ಞವು ಪೂರ್ಣವಾಗುವಂತೆ ಮಾಡಿದರೆಂದು

ಹಿಂದೆ ತಿಳಿಸಿದೆ. ಅಲ್ಲದೆ, ಪ್ರಾತಃಸವನಕಾಲದಲ್ಲೇ ಉಷೋ ದೇವತೆಯೊಡನೆ ಅವಿರ್ಭೂತರಾಗಿ ಯಜ್ಞಾಚರಣೆಗೆ ಸಹಾಯಕರಾಗುವ ವಿಷಯವನ್ನು ಹಿಂದೆ ತಿಳಿಸಿದೆ. ಈ ಎಲ್ಲಾ ಕಾರಣಗಳಿಂದ ಇವರಿಗೆ **ಅಧ್ವರ್ಯಂತಾ** ಎಂಬ ವಿಶೇಷಣವು ಉಚಿತವಾಗಿದೆ.

ಈ ವಿಶೇಷಣವು ಅಶ್ವಿನೀದೇವತೆಗಳ ಪರವಾಗಿ ಮಾತ್ರ, ಅದರಲ್ಲೂ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ. **ಅಗ್ನಿಯೇ** ಯಜ್ಞಾಧ್ಯಕ್ಷನಾಗಿ ಸಕಲ ಯಜ್ಞಗಳ ನಿರ್ವಹಣೆಗೂ ಸಹ ಪ್ರಧಾನಭೂತನಾಗಿದ್ದರೂ ಸಹ ಅವನ ಪರವಾಗಿಯೂ ಈ ವಿಶೇಷಣವಿಲ್ಲ. ಆದುದರಿಂದ ಯಜ್ಞಕಾರ್ಯದಲ್ಲಿಯೂ, ನಿರ್ವಹಣದಲ್ಲಿಯೂ ಅಶ್ವಿನೀದೇವತೆಗಳ ಪ್ರಧಾನಪಾತ್ರವು ಈ ವಿಶೇಷಣದಿಂದ ತಿಳಿಸಲ್ಪಟ್ಟಿದೆ. ಇವರ ಇದೇ ಗುಣವನ್ನು ಪ್ರಶಂಸಿಸುತ್ತಾ ಐತರೇಯಬ್ರಾಹ್ಮಣದಲ್ಲಿ ಈ ರೀತಿ ನಿರ್ದೇಶಿಸಿದೆ.

**ಯಜ್ಞೋ ವೈ ದೇವೇಭ್ಯ ಉದಕ್ರಾಮನ್ನ ವೋಽಹಮನ್ನಂ ಭವಿಷ್ಯಾಮೀತಿ ನೇತಿ ದೇವಾ ಅಬ್ರುವನ್ನನ್ನಮೇವ ನೋ ಭವಿಷ್ಯಸೀತಿ ತಂ ದೇವಾ ವಿಮೇಥಿರೇ ಸಹೈಭ್ಯೋ ವಿಹೃತೋ ನ ಪ್ರಬಭೂವ ತೇ ಹೋಚುರ್ದೇವಾ ನ ವೈ ನ ಇತ್ಥಂ ವಿಹೃತೋಽಲಂ ಭವಿಷ್ಯತಿ ಹಂತೇಮಂ ಯಜ್ಞಂ ಸಂಭರಾಮೇತಿ ತಥೇತಿ ತಂ ಸಂಜಭ್ರುಃ । ತಂ ಸಂಭೃತ್ಯೋಚುರಶ್ವಿನಾವಿಮಂ ಭಿಷಜ್ಯತಮಿತ್ಯಶ್ವಿನೌ ವೈ ದೇವಾನಾಂ ಭಿಷಜಾವಶ್ವಿನಾವಧ್ವರ್ಯೂ ತಸ್ಮಾದಧ್ವರ್ಯೂ ಘರ್ಮಂ ಸಂಭರತಃ ॥**

(ಐ. ಬ್ರಾ. ೪-೧)

ಒಂದುಸಲ ಯಜ್ಞವು ದೇವತೆಗಳಿಗೆ "ನಾನು ನಿಮ್ಮ ಅನ್ನವಾಗಿರುವುದಿಲ್ಲ" ಎಂದು ತಿಳಿಸಿ ಹೊರಟುಹೋಯಿತು. ಆಗ ದೇವತೆಗಳು "ನೀನು ನಮ್ಮನ್ನವೇ ಆಗಿರಬೇಕೆಂದು'' ನಿರ್ಬಂಧಿಸಿ ಅದನ್ನು ಮಥನಮಾಡಿದರು. ಆಗ ವಿವಕ್ತವಾಗಿ ಮಾಡಿ ಅದನ್ನು ಸೇವಿಸಿದುದರಿಂದ ಅದು ಸಾಲದೇ ಹೋಯಿತು. ಆಗ ಅದನ್ನು ಒಟ್ಟಿಗೆ ಸೇರಿಸಿ ಅಶ್ವಿನೀ ದೇವತೆಗಳನ್ನು ಸಮೀಪಿಸಿ ಅದನ್ನು ಸರಿಪಡಿಸಿ ಪುನಃ ಪೂರ್ಣವಾಗುವಂತೆ ಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಅವರೇ ದೇವವೈದ್ಯರು ಮತ್ತು ಹಿಂಸಿತವಾದ ಯಜ್ಞವನ್ನು ಪೂರ್ಣಗೊಳಿಸಿದುದರಿಂದ ಅವರೇ **ಅಧ್ವರ್ಯುಗಳು** ಎಂದು ಸ್ತುತಿಸಿದೆ.

**ವಸುಧಿತೀ**—ಧಾರಣಾರ್ಥಕವಾದ **ಧಿ** ಧಾತುವಿನಿಂದ **ಧಿತಿ** ಶಬ್ದವು ನಿಷ್ಪನ್ನವಾಗಿ **ನೇಮಧಿತಿ, ಮಿತ್ರಧಿತಿ, ವನಧಿತಿ** ಇತ್ಯಾದಿ ಪ್ರಯೋಗಗಳಿರುತ್ತವೆ. ಮಿತ್ರರನ್ನು ಧರಿಸಿರುವವನು, ಧನವನ್ನು ಧಾರಣಮಾಡಿರುವವನು ಎಂಬ ಅರ್ಥವನ್ನು ಕೊಡುತ್ತದೆ. ಕೆಲವೆಡೆಗಳಲ್ಲಿ, ಎಂದರೆ,

**ಇಂದ್ರೋ ಅಸ್ಮೇ ಸುಮನಾ ಅಸ್ತು ವಿಶ್ವಹಾ ರಾಜಾ ಸೋಮಃ ಸುವಿತಸ್ಯಾಧ್ಯೇತು ನಃ ।**
**ಯಥಾಯಥಾ ಮಿತ್ರಧಿತಾನಿ ಸಂದಧುರಾ ಸರ್ವತಾತಿಮದಿತಿಂ ವೃಣೀಮಹೇ ।**

(ಋ. ಸಂ. ೧೦-೧೦೦-೪)

ಇತ್ಯಾದಿ ಕೆಲವು ಕಡೆಗಳಲ್ಲಿ **ಮಿತ್ರಧಿತಾನಿ** ಎನ್ನುವುದಕ್ಕೆ **ಮಿತ್ರನಿಹಿತಾನಿ** ಎಂದರ್ಥಮಾಡಿದೆ. ತಾತ್ಪರ್ಯವು ಮಾತ್ರ ಮೇಲೆ ಹೇಳಿದಂತೆಯೇ ಆಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ವಸುನಃ ಧನಸ್ಯ ಧಾತಾರೌ ವಸ್ತವ್ಯ ಕರ್ಮಾಣೌ ।** ಎಂದು ವಿವರಿಸಿದೆ. ವಸುವೆಂದರೆ ಧನವಾಗಬಹುದು ಅಥವಾ ವಾಸಸ್ಥಾನವಾಗಬಹುದು. ಧನ ಧಾರಣಮಾಡಿರುವವರು ಅಥವಾ ವಾಸಗೃಹವನ್ನು ದಾನಮಾಡತಕ್ಕವರು ಎಂಬರ್ಥವನ್ನು ಕೊಡುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರೇಷ್ಠೌ**—ಅತಿಶಯೇನ ಪ್ರಿಯೌ ಪ್ರೇಷ್ಠೌ. **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ಇಷ್ಠನ್ ಪ್ರತ್ಯಯ ಬಂದಾಗ **ಪ್ರಿಯಸ್ಥಿರ ಸ್ಫಿರ**—(ಪಾ. ಸೂ. ೬-೪-೧೫೭) ಎಂಬುದರಿಂದ ಪ್ರಾದೇಶ. **ಪ್ರಕೃತ್ಯೈಕಾಚ್** ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಗುಣ. ಪ್ರತ್ಯಯ ನಿಮಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇಷಾಮ್—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ

**ಅಧ್ವರ್ಯಂತಾ**—ಅಧ್ವರಂ ಆತ್ಮನಃ ಇಚ್ಛಂತೌ. **ಸುಪ ಆತ್ಮನಃ ಕ್ಯಚ್** (ಪಾ ಸೂ. ೩-೧-೮) ಎಂಬುದರಿಂದ ಅಧ್ವರ ಎಂಬುದರ ಮೇಲೆ ಕ್ಯಚ್ ಪ್ರತ್ಯಯ. **ಕವ್ಯಧ್ವರ ಪೃತನಸ್ಯರ್ಚಿ ಲೋಪಃ** (ಪಾ. ಸೂ. ೭-೪-೩೯) ಎಂಬುದರಿಂದ ಕ್ಯಚ್ ಪರವಾದಾಗ ಪೂರ್ವದ ಅಂತ್ಯಕ್ಕೆ ಲೋಪ. ಕ್ಯಚಿನ ಮೇಲೆ ಲಟ್ ಬಂದಾದ ಅದಕ್ಕೆ ಶತ್ರಾದೇಶ. ದ್ವಿವಚನ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ. ಲ ಸಾರ್ವಧಾತುಕ ಅನುದಾತ್ತವಾದುದರಿಂದ ಕ್ಯಚ್ ಸ್ವರ ಉಳಿಯುತ್ತದೆ.

**ಉನ್ನಿನೀಥಃ**—ಣೀಞ್ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಿಚೋದಾತ್ತವತಿ** ಎಂಬುದರಿಂದ ಗತಿಗೆ (ಉತ್) ಅನುದಾತ್ತಸ್ವರ ಬರುತ್ತದೆ.

**ಅಕೃತ**—ಡುಕೃಞ್ ಕರಣೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. **ಬಹುಲಂ ಛಂದಸಿ** ಎಂಬುದರಿಂದ ವಿಕರಕ್ಕೆ ಲುಕ್. ಅಂಗಕ್ಕೆ ಅಡಾಗಮ. ತಿಙಂತ ನಿಘಾತಸ್ವರ ಬರುತ್ತದೆ.

**ಪ್ರಶಸ್ತಿಮ್**—ಶಂಸು ಸ್ತುತೌ. ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಲೋಪ. **ತಾದೌಚ ನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಪ್ರ) ಉದಾತ್ತಸ್ವರ ಬರುತ್ತದೆ.

**ವಸುಧಿತೀ**—ಡುಧಾಞ್ ಧಾರಣಪೋಷಣಯೋಃ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಬಹುಲ ಗ್ರಹಣದಿಂದ ಕರ್ತರಿಯಲ್ಲಿ ಕ್ತಿನ್ ಪ್ರತ್ಯಯ. **ಸುಧಿತವಸುಧಿತ**—(ಪಾ. ಸೂ. ೭-೪-೧೫) ಎಂಬಲ್ಲಿ **ಕ್ತಿನ್ಯಪಿದೃಶ್ಯತೇ** ಎಂಬ ವಚನವಿರುವುದರಿಂದ ಧಾತುವಿಗೆ ಇತ್ವ ಬರುತ್ತದೆ. ದ್ವಿವಚನಾಂತರೂಪ.

**ಅವಿತಾರಾ—ಸುಪಾಂ ಸುಲುಕ್**—ಸೂತ್ರದಿಂದ ಪ್ರಥಮಾ ದ್ವಿವಚನಕ್ಕೆ ಆಕಾರಾದೇಶ. ॥ ೧ ॥

॥ ಸಂಹಿತಾಪಾಠಃ ॥

**ಆ ವಾಮಶ್ವಾಸಃ ಶುಚಯಃ ಪಯಸ್ಪಾ ವಾತರಂಹಸೋ ದಿವ್ಯಾಸೋ ಅತ್ಯಾಃ ।**
**ಮನೋಜುವೋ ವೃಷಣೋ ವೀತಪೃಷ್ಠಾ ಏಹ ಸ್ವರಾಜೋ ಅಶ್ವಿನಾ ವಹಂತು ॥**

॥ ಪದಪಾಠಃ ॥

**ಆ । ವಾಂ । ಅಶ್ವಾಸಃ । ಶುಚಯಃ । ಪಯಃಽಪಾಃ । ವಾತಽರಂಹಸಃ । ದಿವ್ಯಾಸಃ । ಅತ್ಯಾಃ ।**
**ಮನಃಽಜುವಃ । ವೃಷಣಃ । ವೀತಽಪೃಷ್ಠಾಃ । ಆ । ಇಹ । ಸ್ವಽರಾಜಃ । ಅಶ್ವಿನಾ । ವಹಂತು ॥ ೨ ॥**

॥ ಸಾಯಣಭಾಷ್ಯಂ ॥

**ಅಶ್ವಿನೌ ಶೋಭನಾಶ್ವಯುಕ್ತೌ ವಾಂ ಯುವಾಮಶ್ವಾಸೋ ಯುಷ್ಮದೀಯಾ ಇಹಾಸ್ಮಿನ್ಯಜ್ಞ ಆ ವಹಂತು। ಪ್ರಾಪಯಂತು । ಅವಶಿಷ್ಟಾನ್ಯಶ್ವವಿಶೇಷಣಾನಿ । ಕೀದೃಶಾಸ್ತೇ । ಶುಚಯಃ ಶುದ್ಧಾ ದೀಪ್ತಾ ವಾ ಪಯಸ್ಪಾ ವೃಷ್ಟ್ಯುದಕಸ್ಯ ಪಾತಾರಃ ವಾತರಂಹಸೋ ವಾಯುವೇಗಾಃ ದಿವ್ಯಾ ದಿವಿ ಭವಾಃ ಅತ್ಯಾ ಅತನಶೀಲಾಃ ಮನೋಜುವೋ ಮನೋಜವಾಃ ವೃಷಣೋ ವರ್ಷಕಾಃ । ಯುವಾನ ಇತ್ಯರ್ಥಃ । ವೀತಪೃಷ್ಠಾಃ ಕಾಂತಪೃಷ್ಠಾಃ। ವಪುಷ್ಮಂತ ಇತ್ಯರ್ಥಃ । ಸ್ವರಾಜಃ ಸ್ವಯಮೇವ ರಾಜಮಾನಾಃ। ಈದೃಶಾ ಭವಂತು ॥**

॥ ಪ್ರತಿಪದಾರ್ಥ ॥

**ಹೇ ಅಶ್ವಿನೌ**—ಎಲೈ ಶೋಭನಾಶ್ವಯುಕ್ತರಾದ ಅಶ್ವಿನೀ ದೇವತೆಗಳೇ । **ಶುಚಯಃ**—ಶುದ್ಧವೂ (ದೀಪ್ತವೂ) । **ಪಯಸ್ಪಾಃ**—ವೃಷ್ಟ್ಯುದಕಗಳೂ । **ವಾತರಂಹಸಃ**—ವಾಯುವೇಗವುಳ್ಳವುಗಳೂ । **ದಿವ್ಯಾಸಃ**—ಸ್ವರ್ಗಲೋಕದಲ್ಲಿರತಕ್ಕವುಗಳೂ। **ಅತ್ಯಾಃ**–ಚುರುಕಾಗಿರತಕ್ಕವೂ। **ಮನೋಜುವಃ**—ಮನೋವೇಗವುಳ್ಳವುಗಳೂ । **ವೃಷಣಃ**—ಕಾಮವರ್ಷಕಗಳೂ (ಯೌವನೋಪೇತವಾದವೂ) । **ವೀತಪೃಷ್ಠಾಃ**—ಮನೋಹರಕಾಯವುಳ್ಳವುಗಳೂ । **ಸ್ವರಾಜಃ**—ನೈಸರ್ಗಿಕ ಕಾಂತಿಯುಳ್ಳವುಗಳೂ ಆದ । **ಅಶ್ವಾಸಃ**—ನಿಮ್ಮ ಅಶ್ವಗಳು । **ವಾಂ**—ನಿಮ್ಮಿಬ್ಬರನ್ನು । **ಇಹ**—ಈ ಯಜ್ಞಕ್ಕೆ । **ಆ ವಹಂತು**—ವಹಿಸಿ ಕರೆತರಲಿ.

॥ ಭಾವಾರ್ಥ ॥

ಶೋಭನಾಶ್ವವಿಶಿಷ್ಟರಾದ ಎಲೈ ಅಶ್ವಿನೀ ದೇವತೆಗಳೇ, ಶುದ್ಧವೂ, ವೃಷ್ಟ್ಯುದಕರಕ್ಷಕಗಳೂ, ವಾಯುವಿಗೆ ಸಮವಾದ ವೇಗವುಳ್ಳವೂ, ಸ್ವರ್ಗಲೋಕದಲ್ಲಿ ಜನಿಸಿದವೂ, ಚುರುಕಾಗಿರತಕ್ಕವುಗಳೂ, ಮನೋವೇಗವುಳ್ಳವುಗಳೂ, ಇಷ್ಟಾರ್ಥಪ್ರದಗಳೂ, ಮನೋಹರಕಾಯವುಳ್ಳವುಗಳೂ, ಸ್ವಭಾವಸಿದ್ಧವಾದ ದೇಹಕಾಂತಿಯುಳ್ಳವುಗಳೂ ಆದ ನಿಮ್ಮ ಅಶ್ವಗಳು ನಿಮ್ಮಿಬ್ಬರನ್ನು ನಮ್ಮ ಯಾಗಶಾಲೆಗೆ ಕರತರಲಿ.

## English Translation.

Ashwins, may your horses, pure, rain-drinking, swift as the wind, heaven-born, quick-moving, fleet as thought, vigorous, well-packed, and self-irradiating, bring you hither.

॥ ವಿಶೇಷವಿಷಯಗಳು ॥

ಈ ಮಂತ್ರದಲ್ಲಿ **ಶುಚಯಃ, ವಾತರಂಹಸಃ** ಇತ್ಯಾದಿ ಪದಗಳು **ಅಶ್ವಾಸಃ** ಎಂಬ ಪದಕ್ಕೆ ವಿಶೇಷಣಗಳಾಗಿವೆ. ಅಶ್ವಿನೀದೇವತೆಗಳ **ಅಶ್ವಗಳಾವುವು** ಎಂಬ ವಿಷಯದಲ್ಲಿ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದಕ್ಕಾಗುವುದಿಲ್ಲ. **ರಾಸಭಾವಶ್ವಿನೋಃ** ಎಂದು ನಿರುಕ್ತದಲ್ಲಿ (ನಿ. ೨-೨೮) ಹೇಳಿದೆ. ದಿವ್ಯತೇಜಸ್ಸೆಂದು ಹೇಳುವ ಮತವೂ ಉಂಟು. ಅದನ್ನು ಮುಂದೆ ಚರ್ಚಿಸಿ ಉದಾಹರಣೆಗಳೊಂದಿಗೆ ಮತಭೇದಗಳನ್ನೂ ತಿಳಿಸಲಾಗುತ್ತದೆ.

**ಶುಚಯಃ—ಶುದ್ಧಾಃ, ದೀಪ್ತಾ ವಾ ।** ಪರಿಶುದ್ಧವಾದವು ಎಂದಾಗಲಿ ಅಥವಾ ಪ್ರಕಾಶಮಾನವಾದವು ಎಂದಾಗಲೀ ಅರ್ಥವಾಗುತ್ತದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ,

**ಶೋಚತೇರ್ಜ್ವಲತಿಕರ್ಮಣಃ । ಅಯಮಪೀತರಃ ಶುಚಿರೇತಸ್ಮಾದೇವ । ನಿಷ್ಷಿಕ್ತಮಸ್ಮಾತ್**
**ಪಾಪಕಮಿತಿ ನೈರುಕ್ತಾಃ ॥** (ನಿ. ೬-೧)

ಪ್ರಕಾಶಿಸು ಎಂಬರ್ಥವನ್ನು ಕೊಡುವ **ಶುಚ್** ಧಾತುವಿನಿಂದ **ಶುಚಿ** ಎಂಬ ನಾಮಪದವಾಗಿದೆ. ಈ ಪದಕ್ಕೆ ಕಾಂತಿ, ಪ್ರಕಾಶ ಎಂದರ್ಥವಾಗುತ್ತದೆ. ಪವಿತ್ರ, ಶುದ್ಧಿ ಎಂಬರ್ಥವನ್ನು ಕೊಡುವ **ಶುಚಿ** ಎಂಬ ಪದವೂ ಸಹ ಈ ಧಾತುವಿನಿಂದಲೇ ನಿಷ್ಪನ್ನವಾಗಿದೆ. ಪಾಪವು ಇವನಿಂದ ದೂಡಲ್ಪಟ್ಟಿದೆ ಎಂಬ ನಿರುಕ್ತಿಕಾರರ ವಚನವೂ ಪ್ರಸಿದ್ಧವಾಗಿದೆ. ಈ ಆಧಾರಗಳ ಮೇಲೆ ಇಲ್ಲಿ ಶುಚಿ ಎಂದರೆ ಶುದ್ಧಿಯೆಂದರ್ಥಮಾಡಬೇಕು. ಅಥವಾ ಪ್ರಕಾಶಮಾನವಾದ ಅಶ್ವಗಳೆಂದೂ ಅರ್ಥಮಾಡಬಹುದು.

**ಅತ್ಯಾಃ—ಅತನಶೀಲಾಃ ।** ಸತತವಾದ ಸಂಚಾರಸ್ವಭಾವವುಳ್ಳವು ಎಂದರ್ಥ. ಈ ಪದವು ಕೇವಲ ಅಶ್ವಕ್ಕೆ ಮಾತ್ರ ವಿಶೇಷಣವಾಗಿರಬೇಕಾಗಿಲ್ಲ. ಉದಾಹರಣೆಗೆ—

**ಆ ಯಃ ಪುರಂ ನಾರ್ಮಿಣೀಮದೀದೇದತ್ಯಃ ಕವಿರ್ನಭನ್ಯೋ೩ ನಾರ್ವಾ ।**
**ಸೂರೋ ನ ರುರುಕ್ವಾಞ್ಛತಾತ್ಮಾ ॥** (ಋ. ಸಂ. ೧-೧೪೯-೩)

ಎಂಬಲ್ಲಿ ಅಗ್ನಿಗೆ ವಿಶೇಷಣವಾಗಿದ್ದು ಅವನ ಸ್ವತಂತ್ರವಾದ ಸಂಚಾರಕ್ರಮವನ್ನು ವರ್ಣಿಸಿದೆ. ಮತ್ತು

**ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ ।**
**ಮೃಗಾಣಾಂ ನ ಹೇತಯೋ ಯಂತಿ ಚೇಮಾ ಬೃಹಸ್ಪತೇರಹಿಮಾಯಾ೯ ಅಭಿ ದ್ಯೂನ್ ॥**
(ಋ. ಸಂ. ೧-೧೯೦-೪)

ಎಂಬಲ್ಲಿ **ಅತನಶೀಲಃ ಆದಿತ್ಯಃ** ಎಂದೂ ಅರ್ಥವಾಗುವಂತೆ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀ ದೇವತೆಗಳ ಅಶ್ವಗಳಿಗೆ ವಿಶೇಷಣವಾಗಿದೆ.

**ಶುಚಯಃ, ದಿವ್ಯಾಸಃ, ವೀತಪೃಷ್ಠಾಃ, ಸ್ವರಾಜಃ** ಇತ್ಯಾದಿ ವಿಶೇಷಣಗಳು ವರುಣಾಶ್ವಕ್ಕೆ ಪ್ರಸಿದ್ಧವಾದ ಗುಣಗಳನ್ನು ವರ್ಣಿಸುತ್ತವೆ. ಅಲ್ಲದೇ **ರಾಸಭಾವಶ್ವಿನೋಃ, ಅಜಾಃ ಪೂಷ್ಣಃ** ಎಂಬ ನಿರುಕ್ತವಾಕ್ಯಗಳ ಪ್ರಕಾರ (ನಿ. ೨-೩೮) ಅಶ್ವಿನೀದೇವತೆಗಳ ವಾಹನಗಳಿಗೆ **ರಾಸಭ**ಗಳೆಂದು ಪ್ರಸಿದ್ಧವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಅಶ್ವಕ್ಕೂ ಸಹ **ರಾಸಭ, ಅಜ** ಎಂಬ ನಾಮಾಂತರವುಂಟು ಮತ್ತು ಈ ಹೆಸರುಗಳು ಬರಲು ಕಾರಣವೂ ಇದೆ. ಅದು ಹೇಗೆಂದರೆ, ಪ್ರಜಾಪತಿಯಿಂದ ಸೃಷ್ಟನಾದುದೂ, ವಿಶ್ವವ್ಯಾಪಿಯಾದುದೂ ಆದ ಅಶ್ವಕ್ಕೆ **ರಾಸಭ, ಅಜ** ಎಂಬ ಹೆಸರು ಹೇಗೆ ಬಂದಿತೆಂಬುದನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಿದೆ.

> **ಅಥ ಯದಶ್ರು ಸಂಕ್ಷರಿತಮಾಸೀತ್ಸೋಽಶ್ರುರಭವದಶ್ರುರ್ಹ ವೈ ತಮಶ್ವ ಇತ್ಯಾಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾ ಅಥ ಯದರಸದಿವ ಸ ರಾಸಭೋಽಭವದಥ ಯಃ ಕಪಾಲೇ ರಸೋ ಲಿಪ್ತ ಆಸಿತ್ಸೋಽಜೋಽಭವದಥ ಯತ್ಕಪಾಲಮಾಸೀತ್ಸಾ ಪೃಥಿವ್ಯಭವತ್॥**
>
> (ಶ. ಬ್ರಾ. ೬-೧-೧-೧೧)

ಬ್ರಹ್ಮಾಂಡದ ಸುತ್ತಲೂ ವ್ಯಾಪಿಸಿದ್ದ ಅಶ್ರುವನ್ನೇ ಪರೋಕ್ಷಕಾಮರಾದ ದೇವತೆಗಳು **ಅಶ್ವ**ವೆಂದು ಕರೆದರು. ಅಂಡವು ಭಿನ್ನವಾಗುವ ಕಾಲದಲ್ಲಿ ಆದ ಶಬ್ದವು **ರಾಸಭ**ವೆಂದು ಪ್ರಸಿದ್ಧವಾಯಿತು. ಅಂಡದ ಕಪಾಲದಲ್ಲಿ ಲಿಪ್ತವಾಗಿದ್ದ ರಸವು **ಅಜ**ವಾಯಿತು ಎಂಬ ವರ್ಣನೆಯಲ್ಲಿ ವಿಶ್ವವ್ಯಾಪಕವಾದ ಅಪ್ಪಿನಿಂದ ಪ್ರಜಾಪತಿಯು ಅಶ್ವವನ್ನು ಸೃಷ್ಟಿಸಿದ ವಿವರಣೆಯಿದೆ.

ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಅಶ್ವಕ್ಕೆ ಹೇಳಿರುವ ನಾನಾವಿಧವಾದ ದಿವ್ಯಗುಣಗಳು ಈ ಪ್ರಜಾಪತಿಯಿಂದ ಸೃಷ್ಟವಾದ ಅಶ್ವಕ್ಕೂ ಅನೇಕಕಡೆಗಳಲ್ಲಿ ಹೇಳಲ್ಪಟ್ಟಿದೆ. ಅಷ್ಟೇ ಅಲ್ಲದೆ, ಪ್ರಜಾಪತಿಗೂ ಮತ್ತು ಅಶ್ವಕ್ಕೂ ಸಂಬಂಧವನ್ನೂ ಹೇಳಿರುವಂತೆ ವರುಣನಿಗೂ ಅಶ್ವಕ್ಕೂ ಸಹ ನಿಕಟವಾದ ಸಂಬಂಧವನ್ನು ಅನೇಕ ಕಡೆಗಳಲ್ಲಿ ಹೇಳಿದೆ. ಉದಾಹರಣೆಗೆ—

> **ವಾರುಣೋ ವಾ ಅಶ್ವಃ । ತಂ ದೇವತಯಾ ವ್ಯರ್ಧಯತಿ । ಯತ್ಪ್ರಾಜಾಪತ್ಯಂ ಕರೋತಿ । .... ವಾರುಣೋ ವಾ ಅಶ್ವಃ ॥**
>
> (ತೈ. ಬ್ರಾ. ೩-೯-೧೬-೧)

ಎಂಬ ವಾಕ್ಯಕ್ಕೆ ಸಾಯಣರು, **ಅಶ್ವಸ್ಯಾಬ್ಯೋನಿತ್ವಾದ್ವರುಣಸ್ಯ ಚಾಪಾಂ ಪತಿತ್ವಾದಯಮಶ್ವೋ ವಾರುಣಃ ।** ಅಶ್ವವು ವಿಶ್ವವ್ಯಾಪಕವಾದ ಅಪ್ಪಿನಿಂದ ಜನಿಸುದುದರಿಂದಲೂ, ವರುಣನು ಅಪ್ಪಿಗೆ ಒಡೆಯನಾದುದರಿಂದಲೂ, ಈ ಅಶ್ವವು ವರುಣನ ಸಂಬಂಧಿಯಾದುದು ಎಂದಿದೆ. ಈ ವಾರುಣಾಶ್ವದ ರಹಸ್ಯಾರ್ಥವೇನು ಎಂಬ ವಿಷಯವನ್ನು ವಿಮರ್ಶಿಸುತ್ತಾ ಶತಪಥಬ್ರಾಹ್ಮಣವನ್ನು ಆಂಗ್ಲಭಾಷೆಗೆ ಪರಿವರ್ತಿಸಿರುವ Eggeling ಎಂಬ ಪಂಡಿತನು ಈ ರೀತಿ ಹೇಳಿದ್ದಾನೆ.

> Varuna's horse is none other than the fiery races who pursues his diurnal course across the all-encompassing arch of heaven, the the sphere of Varuna, the all-ruler. It is in the form of the horse that the Snn is thus lauded in the hymn.
>
> (S. B. E. Vol. XLIV. P. XIX-XX)

ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾದ ವರುಣನ ಈ ಅಶ್ವವು ಯಾವುದೆಂದರೆ, ತನ್ನ ದೈನಂದಿನದ ಪರಿಭ್ರಮಣವನ್ನು ಹೊಂದುತ್ತಿರುವ ಸೂರ್ಯನಲ್ಲದೇ ಬೇರೆಯಲ್ಲ, ಎಂದು ತಿಳಿಸಿದ್ದಾನೆ. **ಶುಚಯಃ ಸ್ವರಾಜಃ** ಎಂಬ ವಿಶೇಷಣ ಗಳಿಂದ ಆದಿತ್ಯಪ್ರಭಾರೂಪವಾದ ಅಶ್ವಗಳೇ ವರ್ಣಿತವಾಗಿದೆಯೆಂದು ಹೇಳಬಹುದು. ಅಶ್ವಿನೀ ದೇವತೆಗಳಲ್ಲಿ ಒಬ್ಬನು **ಸೂರ್ಯ**ರೂಪನೆಂದು ಮುಂದಿನ ಋಕ್ಕಿನಲ್ಲಿ ಎಂದರೆ ೧-೧೮೧-೪ ನೇ ಋಕ್ಕಿನಲ್ಲಿ ವರ್ಣಿತವಾಗಿರುವುದರಿಂದ ಪ್ರಕೃತ ವಾದ ಋಕ್ಕಿನ ವರ್ಣನೆಯು ಆದಿತ್ಯಪ್ರಭಾರೂಪವಾದ ಅಶ್ವದ ವರ್ಣನೆಯಂತಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಾಸಃ ದಿವ್ಯಾಸಃ**—ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಸಯೆಸ್ಪಾಃ**—ಪಾ. ಪಾನೇ, ಧಾತು. **ಆತೋಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವಿಚ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. **ಪಾತೌ ಚ ಬಹುಲಂ** (ಪಾ. ಸೂ. ೮-೩-೫೨) ಎಂಬುದರಿಂದ ಸತ್ವ. ಪ್ರಥಮಾ ಬಹುವಚನಾಂತರೂಪ.

**ವಾತರಂಹಸಃ ವೀತಪೃಷ್ಠಾ**—ಬಹುವ್ರೀಹಿ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸ್ವರಾಜಃ**—ಸ್ವಯಮೇವ ರಾಜಂತೇ ಇತಿ ಸ್ವರಾಜಃ ರಾಜೃ ದೀಪ್ತೌ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

**ವಹಂತು**—ವಹ ಪ್ರಾಪಣೇ. ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ ತಿಙಂತ ನಿಘಾತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

**ಆ ವಾಂ ರಥೋಽವನಿರ್ನ ಪ್ರವತ್ವಾನ್ತ್ಸೃಪ್ರವಂಧುರಃ ಸುವಿತಾಯ ಗಮ್ಯಾಃ ।**
**ವೃಷ್ಣಃ ಸ್ಥಾತಾರಾ ಮನಸೋ ಜವೀಯಾನಹಂಪೂರ್ವೋ ಯಜತೋ ಧಿಷ್ಣ್ಯಾ ಯಃ ॥ ೩ ॥**

॥ ಪದಪಾಠಃ ॥

**ಆ । ವಾಂ । ರಥಃ । ಅವನಿಃ । ನ । ಪ್ರವತ್ವಾನ್ । ಸೃಪ್ರಽವಂಧುರಃ । ಸುವಿತಾಯ । ಗಮ್ಯಾಃ ।**
**ವೃಷ್ಣಃ । ಸ್ಥಾತಾರಾ । ಮನಸಃ । ಜವೀಯಾನ್ । ಅಹಂಽಪೂರ್ವಃ । ಯಜತಃ । ಧಿಷ್ಣ್ಯಾ । ಯಃ ॥**

॥ ಸಾಯಣಭಾಷ್ಯಂ ॥

ಪೂರ್ವಮಂತ್ರೇ ಽಶ್ವವ್ಯಾಜೇನಾಶ್ವಿನೋರಾಗಮನಮುಕ್ತಂ । ಅನೇನ ರಥವ್ಯಾಜೇನೋಚ್ಯತೇ । ಹೇ ಧಿಷ್ಣ್ಯೌ ಉನ್ನತಸ್ಥಾನಾರ್ಹೌ ಸ್ಥಾತಾರಾ ಸ್ವರಥಾಧಿಷ್ಠಾನೌ ವಾಂ ಯುವಯೋರ್ಯೋ ರಥೋಽಸ್ತಿ ಸ ಸುವಿತಾಯ ಶೋಭನಫಲಾಯಾ ಗಮ್ಯಾಃ । ಅಸ್ಮದ್ಯಜ್ಞಮಾಗಚ್ಛತು ॥ ಪುರುಷವ್ಯತ್ಯಯಃ ॥ ಕೀದೃಶೋ ರಥ ಇತಿ ಸ ವಿಶೇಷ್ಯತೇ । ಅವನಿರ್ನ ಪ್ರವತ್ವಾನ್ ಭೂಮಿರಿವಾತ್ಯಂತವಿಸ್ತಾರವಾನ್ ಸ್ಪೃಪ್ರವಂಧುರೋ ವಿಸ್ತೀರ್ಣಪುರೋಭಾಗಃ ವೃಷ್ಣೋ ವರ್ಷಕಸ್ಯಾಶ್ವಸ್ಯ ಮನಸೋಽಪಿ ಜವೀಯಾನ್ । ಮನೋವೇಗವಾನಿತ್ಯರ್ಥಃ । ಅಹಂಪೂರ್ವೋಽಹಂಕಾರಪೂರ್ವೋ ಮನಸ್ವೀ ವಾಕ್ಯುದಾರಃ ಯಜತೋ ಯಷ್ಟವ್ಯಃ । ಈದೃಶೋ ರಥ ಆಗಚ್ಛತು ॥

॥ ಪ್ರತಿಪದಾರ್ಥ ॥

**ಧಿಷ್ಣ್ಯೌ**—ಉನ್ನತಸ್ಥಾನಾರ್ಹರೂ । **ಸ್ಥಾತಾರಾ**—ಸ್ವರಥಾಧಿಷ್ಠಾನರೂ ಆದ ಎಲೈ ಅಶ್ವಿನೀದೇವತೆಗಳೇ । **ಅವನಿಃ ನ**—ಭೂಮಿಯು (ವಿಸ್ತಾರವಾಗಿರುವಂತೆ) । **ಪ್ರವತ್ವಾನ್**—ಅತ್ಯಂತ ವಿಸ್ತಾರವಾದುದೂ । **ಸ್ಪೃಪ್ರವಂಧುರಃ**—ವಿಸ್ತೀರ್ಣವಾದ ಮುಂಭಾಗವುಳ್ಳದ್ದೂ । **ವೃಷ್ಣಃ**—ಕಾಮವರ್ಷಕವಾದ ಅಶ್ವದ । (ಮತ್ತು, **ಮನಸಃ**—ಮನಸ್ಸಿನ (ವೇಗಕ್ಕಿಂತಲೂ) । **ಜವೀಯಾನ್**—(ಹೆಚ್ಚು) ವೇಗಶಾಲಿಯೂ । **ಅಹಂಪೂರ್ವಃ**—ಮನಸ್ವಿಯೂ (ಅತ್ಯುದಾರವೂ) । **ಯಜತಃ**—ಪೂಜಾರ್ಹವೂ ಆದ । **ವಾಂ**—ನಿಮ್ಮಿಬ್ಬರ । **ಯಃ ರಥಃ**—ಯಾವ ರಥವಿದೆಯೋ। (**ಸಃ**—ಆ ರಥವು) । **ಸುವಿತಾಯ** -(ನಮ್ಮ) ಶೋಭನಫಲಪ್ರಾಪ್ತಿಗೋಸ್ಕರ । **ಆ ಗಮ್ಯಾಃ**—ನಮ್ಮ ಯಾಗಕ್ಕೆ ಆಗಮಿಸಲಿ.

॥ ಭಾವಾರ್ಥ ॥

ಉತ್ತಮರೂ, ಸ್ಥಿರಚಿತ್ತರೂ (ಸ್ವರಥಾಧಿಷ್ಠಾನರೂ) ಆದ ಎಲೈ ಅಶ್ವಿನೀದೇವತೆಗಳೇ, ಭೂಮಿಯಂತೆ ಅತ್ಯಂತ ವಿಸ್ತಾರವೂ, ವಿಶಾಲವಾದ ಪುರೋಭಾಗವುಳ್ಳದ್ದೂ, ಅಶ್ವ ಮತ್ತು ಮನೋವೇಗಗಳಿಗಿಂತ ಹೆಚ್ಚುವೇಗವುಳ್ಳದ್ದೂ, ಮನಸ್ವಿಯೂ, ಪೂಜಾರ್ಹವೂ ಆದ ನಿಮ್ಮ ರಥವು ನಮಗೆ ಶುಭಫಲದಾನಮಾಡುವುದಕ್ಕೋಸ್ಕರ, ನಮ್ಮ ಯಾಗ ಶಾಲೆಗೆ, (ನಿಮ್ಮೊಡನೆ) ಆಗಮಿಸಲಿ.

English Translation.

Ashwins, excellent and steady, may your chariot, vast as the earth, broad-fronted, rapid as the rain, (fleet) as thought, emulative and adorable, come hither for (our) good.

॥ ವಿಶೇಷವಿಷಯಗಳು ॥

**ಧಿಷ್ಣ್ಯೌ**—ಈ ಪದಕ್ಕೆ ಸಾಯಣರು **ಉನ್ನತಸ್ಥಾನಾರ್ಹೌ** । ಉನ್ನತವಾದ ಸ್ಥಾನಕ್ಕೆ ಅರ್ಹರಾದವರು ಎಂದರ್ಥಮಾಡಿದ್ದಾರೆ. ಪೂಜಾರ್ಹರೆಂದರ್ಥ. ಅಗ್ನೀಧ್ರಾದ್ಯಾದಿಸ್ಥಾನಗಳಿಗೂ ಈ ಪರ್ಯಾಯಪದವಿರುವುದರಿಂದ ಇಲ್ಲಿ ಅಂತಹ ಸ್ಥಾನಕ್ಕೆ ಅರ್ಹರೆಂದೂ ಅರ್ಥವಾಗಬಹುದು. **ಧಿಷಣಾ, ಧಿಷ್ಣ್ಯ** ಎಂಬ ಎರಡು ಪದಗಳಿಗೂ ಸಾಧಾರಣ ವಾಗಿ ಒಂದೇ ಅರ್ಥವಾಗುತ್ತದೆ. (ಈ ಎರಡು ಪದಗಳಿಗೂ ಅರ್ಥವ್ಯತ್ಯಾಸವಾಗುವುದು ಬಹಳ ಅಪರೂಪ)

**ಧಿಷಣಾ** ಎಂಬ ಪದವನ್ನು ನಿರುಕ್ತಕಾರರು **ವಾಜ್** ನಾಮಗಳಲ್ಲೂ (ನಿ. ೨-೨೩) ಮತ್ತು **ದ್ಯಾವಾಪೃಥಿವೀ** ನಾಮಗಳಲ್ಲೂ (ನಿ. ೩-೩೧) ಸೇರಿಸಿದ್ದಾರೆ.

**ಮೇದ್ಯಂತು ತೇ ವಹ್ನಯೋ ಯೇಭಿರೀಯಸೇಽರಿಷಣ್ಯನ್ವೀಳಯಸ್ವಾ ವನಸ್ಪತೇ ।**
**ಆಯೂಯಾ ಧೃಷ್ಣೋ ಅಭಿಗೂರ್ಯಾ ತ್ವಂ ನೇಷ್ಟ್ರಾತ್ಸೋಮಂ ದ್ರವಿಣೋದಃ ಪಿಬ ಋತುಭಿಃ ॥**

(ಋ. ಸಂ. ೨-೩೭-೩)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ ಧಿಷ್ಣ್ಯಾ ಧಿಷ್ಣ್ಯೇ **ಧಿಷಣ್ಯೇ ಧಿಷಣಾಭವಃ। ಧಿಷಣಾ ವಾಕ್ ಧಿಷೇರ್ದ-ಧಾತ್ಯರ್ಥೇ । ಧೀಸಾದಿನೀತಿ ವಾ । ಧೀ ಸಾನಿನೀತಿ ವಾ।** ಅರ್ಥವನ್ನು "ಹಿಡಿದಿರು" ಎಂಬರ್ಥವನ್ನು ಕೊಡುವ **ಧಿಷ್** ಧಾತುವಿನಿಂದ ನಿಷ್ಪನ್ನವಾಗಿ **ವಾಕ್** ಎಂದರ್ಥವಾಗಿದೆ. ಅಥವಾ ಬುದ್ಧಿಯನ್ನು ಪ್ರಸರಿಸು ಅಥವಾ ಸಂಪಾದಿಸು ಎಂಬ ತಾತ್ಪರ್ಯವನ್ನು ಕೊಡುತ್ತದೆ. ಆದ್ದರಿಂದ **ಧಿಷಣಾ** ಎಂಬ ಪದಕ್ಕೆ **ವಾಕ್** ಎಂದರ್ಥ, ಎಂಬ ನಿರ್ವಚನವನ್ನು ತೋರಿಸಿರುತ್ತಾರೆ. ಆದರೆ ಈ ಪದಕ್ಕೆ ಇತರ ಅರ್ಥಗಳೂ ಸಾಧ್ಯವಾಗುತ್ತದೆ.

**ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ।**

(ಋ. ಸಂ. ೧-೯೬-೧)

**ಇಮಾಂ ತೇ ಧಿಯಂ ಪ್ರ ಭರೇ ಮಹೋ ಮಹೀಮಸ್ಯ ಸ್ತೋತ್ರೇ ಧಿಷಣಾ ಯತ್ತ ಆನಜೇ ।**

(ಋ. ಸಂ. ೧-೧೦೨-೧)

ಇತ್ಯಾದಿ ಋಕ್ಕುಗಳಲ್ಲಿ **ವಾಕ್ಕು** ಅಥವಾ **ಬುದ್ಧಿ** ಎಂದರ್ಥವಾಗುತ್ತದೆ. **ವಾಕ್** ಎನ್ನುವುದಕ್ಕೆ ಸ್ತುತಿರೂಪವಾದ **ವಾಕ್** ಎಂದು ಅರ್ಥಮಾಡಿದರೆ **ಧಿಷ್ಣ್ಯಾ** ಎಂಬ ಪದಕ್ಕೆ **ಸ್ತುತ್ಯರ್ಹರು**, ಪೂಜಾರ್ಹರು ಎಂದಾಗಿ ಈ ಅರ್ಥದಲ್ಲಿ ಇದೇ ಪದವು ಅನೇಕ ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ.

**ತನ್ನೋ ವಾತೋ ಮಯೋಭು ವಾತು ಭೇಷಜಂ ತನ್ಮಾತಾ ಪೃಥಿವೀ ತತ್ಪಿತಾ ದ್ಯೌಃ ।**
**ತದ್ಗ್ರಾವಾಣಃ ಸೋಮಸುತೋ ಮಯೋಭುವಸ್ತದಶ್ವಿನಾ ಶೃಣುತಂ ಧಿಷ್ಣ್ಯಾ ಯುವಂ ॥**

(ಋ. ಸಂ. ೧-೮೯-೪)

ಎಂಬಲ್ಲಿ **ಧಿಷ್ಣ್ಯಾ** ಎಂಬ ಪದವು ಅಶ್ವಿನೀ ದೇವತೆಗಳಿಗೇ ವಿಶೇಷಣವಾಗಿದೆ. ಇದಕ್ಕೆ ಸಾಯಣರು **ಧಿಷಣಾ ಬುದ್ಧಿಃ, ತದಾಹಾರ್ವಶ್ವಿನೌ** ಎಂದರೆ ಧ್ಯಾನಾರ್ಹರು ಎಂದರ್ಥಮಾಡಿದ್ದಾರೆ. ಇದರಂತೆಯೇ,

**ಯುವಂ ಶ್ರೀಭಿರ್ದರ್ಶತಾಭಿರಾಭಿಃ ಶುಭೇ ಪುಷ್ಟಿಮೂಹಥುಃ ಸೂರ್ಯಾಯಾಃ ।**
**ಪ್ರ ವಾಂ ವಯೋ ವಪುಷೇಽನು ಪಪ್ತನ್ನಕ್ಷದ್ವಾಣೀ ಸುಷ್ಟುತಾ ಧಿಷ್ಣ್ಯಾ ವಾಂ ॥**

(ಋ. ಸಂ. ೬-೬೩-೬)

ಇತ್ಯಾದಿ ಸನ್ನಿವೇಶಗಳಲ್ಲೂ ಸಹ (ಋ. ಸಂ. ೮-೫-೧೪ ; ೮-೨೬-೧೨) ಈ ವಿಶೇಷಣವು ಅಶ್ವಿನೀ ದೇವತೆಗಳ ಪರವಾಗಿಯೇಉಪಯೋಗಿಸಲ್ಪಟ್ಟು ಅಲ್ಲೆಲ್ಲಾ **ಸ್ತುತ್ಯರ್ಹೌ, ಪೂಜಾರ್ಹೌ** ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

**ಕದ್ಧಿಷ್ಣ್ಯಾಸು ವೃಧಸಾನೋ ಅಗ್ನೇ ಕದ್ವಾತಾಯ ಪ್ರತವಸೇ ಶುಭಂಯೇ ।**
**ಪರಿಜ್ಮನೇ ನಾಸತ್ಯಾಯ ಕ್ಷೇ ಬ್ರವಃ ಕದಗ್ನೇ ರುದ್ರಾಯ ನೃಘ್ನೇ ॥**

(ಋ. ಸಂ. ೪-೩-೬)

ಇತ್ಯಾದಿ ಋಕ್ಕುಗಳಲ್ಲಿ **ಧಿಷ್ಣ್ಯ** ಪದಕ್ಕೆ ಸ್ಥಾನವೆಂದರ್ಥವಾಗಿ ಉದಾಹೃತವಾಗಿರುವ ಈ ಸ್ಥಳದಲ್ಲಿ ಆಗ್ನೀಧ್ರೀಯಾದಿ ಸ್ಥಾನೇಷು ಎಂದರ್ಥವಾಗಿದೆ. (ಋ. ಸಂ. ೧೦-೧೧೪-೯) ಪೂಜಾರ್ಹವಾಗಿರುವ ಎಂಬ ಸಾಮಾನ್ಯಾರ್ಥವಿದ್ದರೂ ಸಹ ಕೆಲವೆಡೆಗಳಲ್ಲಿ ಈ ಪದವನ್ನು ದ್ಯಾವಾಪೃಥಿವೀ ನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೨೧)

**ಮಹಸ್ಕರಥೋ ವರಿವೋ ಯಥಾ ನೋಽಸ್ಮೇ ಕ್ಷಯಾಯ ಧಿಷಣೇ ಅನೇಹಃ ।**

(ಋ. ಸಂ ೬-೫೦-೩)

**ಸಮೀಚೀನೇ ಧಿಷಣೇ ವಿ ಷ್ಕಭಾಯತಿ ವೃಷ್ಣಃ ಪೀತ್ವಾ ಮದ ಉಕ್ಥಾನಿ ಶಂಸತಿ ॥**

(ಋ. ಸಂ. ೧೦-೪೪-೮)

ಇತ್ಯಾದಿ ಋಕ್ಕುಗಳಲ್ಲಿ ದ್ಯಾವಾಪೃಥಿವಿಯೆಂದೇ ಅರ್ಥ. ಕೆಲವು ಸನ್ನಿವೇಶಗಳಲ್ಲಿ ಸೋಮರಸವನ್ನು ತುಂಬುವ ಚೀಲವೆಂದೂ ಈ ಪದಕ್ಕೆ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಸಾಯಣರು ಮೇಲ್ಕಂಡರ್ಥಗಳಲ್ಲಿ ಯಾವುದೂ ಇಲ್ಲದೇ ಈ ಪದಕ್ಕೆ ಬೇರೆ ವಿಧವಾದ ನಿಷ್ಪತ್ತಿಯನ್ನು ತೋರಿಸಿ ಅಪರೂಪವಾದ ಅರ್ಥವನ್ನು ತಿಳಿಸಿದ್ದಾರೆ. ಉದಾಹರಣೆಗೆ—

**ಅಗ್ನೇ ದಿವೋ ಅರ್ಣಮಚ್ಛಾ ಜಿಗಾಸ್ಯಚ್ಛಾ ದೇವಾಁ ಊಚಿಷೇ ಧಿಷ್ಣ್ಯಾ ಯೇ ।**

**ಯಾ ರೋಚನೇ ಪರಸ್ತಾತ್ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪಃ ॥**

(ಋ. ಸಂ. ೩-೨೨-೩)

ಎಂಬಲ್ಲಿ **ಧಿಯಂ ಬುದ್ಧ್ಯಾಸಹಿತಂ ದೇಹಂ ಉಷ್ಣಂತ್ಯಭಿಷ್ಣೀಕುರ್ವಂತಿ ಇತಿ ಧಿಷ್ಣ್ಯಾಃ** ಬುದ್ಧಿಯುಕ್ತವಾದ ದೇಹದಲ್ಲಿ ಅಭಿಮಾನವನ್ನು ತೋರಿಸುವುದರಿಂದ **ಧಿಷ್ಣ್ಯ**ವೆಂಬ ಹೆಸರು. ಉದಾಹೃತವಾದ ಈ ಋಕ್ಕಿನಲ್ಲಿ ದೇವತೆಗಳಿಗೆ ವಿಶೇಷಣವಾಗಿದೆ. ಈ ರೀತಿ ಅನೇಕವಾದ ಅರ್ಥಗಳಲ್ಲಿ ಈ ಪದದ ಪ್ರಯೋಗವಿರುವಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಪೂಜ್ಯಸ್ಥಾನವನ್ನಾಕ್ರಮಿಸಿರುವ **ಅಶ್ವಿನೀ** ದೇವತೆಗಳೆಂದರ್ಥ.

**ಅವನಿಃ—ಅವನಿ** ಶಬ್ದಕ್ಕೆ ಇಲ್ಲಿ ಪೃಥ್ವಿಯೆಂದರ್ಥಮಾಡಿದೆ. ನಿರುಕ್ತಕಾರರು ಈ ಪದವನ್ನು **ಅಂಗುಲಿ** ನಾಮಗಳಲ್ಲೂ, **ನದೀ** ನಾಮಗಳಲ್ಲೂ (ನಿ. ೨-೨೪) ಮತ್ತು **ಪೃಥ್ವೀ** ನಾಮಗಳಲ್ಲೂ ಸೇರಿಸಿದ್ದಾರೆ. (ನಿ. ೨-೫) ಇದಲ್ಲದೇ **ರಕ್ಷಣಾರ್ಥಕವಾದ ಅವ** ಧಾತುವಿನಿಂದ ನಿಷ್ಪನ್ನವಾಗಿ **ಅವನಿಃ** ಎಂಬ ಪದವು ಇಂದ್ರಾದಿಗಳಿಗೆ ವಿಶೇಷಣವಾಗಿ ರಕ್ಷಕರೆಂದೂ ಅರ್ಥವಾಗುತ್ತದೆ. ನಿರುಕ್ತಕಾರರೂ ಸಹ **ಅವನಿ** ಶಬ್ದಕ್ಕೆ ಅಂಗುಳಿಯೆಂಬರ್ಥವು ಹೇಗೆ ಸಾಧ್ಯವಾಯಿತೆಂಬುದನ್ನು ತಿಳಿಸುತ್ತಾ,

**ಅವನಯೋಽಂಗುಲಯೋ ಭವಂತ್ಯವಂತಿ ಕರ್ಮಾಣಿ ।**　　(ನಿ ೩-೯)

ಯಜ್ಞಾದಿಕರ್ಮಗಳನ್ನು ರಕ್ಷಿಸುವುದರಿಂದ ಅಂಗುಲಿಗಳಿಗೆ **ಅವನಿ**ಯೆಂದು ಹೆಸರು ಎಂದು ಈ ಪದದ ಅರ್ಥವನ್ನು ವಿವರಿಸಿದ್ದಾರೆ. ಇದಲ್ಲದೇ,

**ಯಃ ಪುಷ್ಪಿಣೀಶ್ಚ ಪ್ರಸ್ವಶ್ಚ ಧರ್ಮಣಾಧಿ ದಾನೇ ವ್ಯ೧ ವನೀರಧಾರಯಃ ।**

**ಯಶ್ಚಾಸಮಾ ಅಜನೋ ದಿದ್ಯುತೋ ದಿವ ಉರುರೂರ್ವಾಁ ಅಭಿತಃ ಸಾಸ್ಯುಕ್ಥ್ಯಃ ॥**

(ಋ. ಸಂ. ೨-೧೩-೭)

ಎಂಬಲ್ಲಿ **ಅವಿತ್ರೀಃ ಓಷಧೀಃ ।** ಪ್ರಾಣರಕ್ಷಕವಾದ ಓಷಧಿಗಳೆಂದರ್ಥವಾಗುತ್ತದೆ. ಮತ್ತು,

**ತುಭ್ಯೇದಮಗ್ನೇ ಮಧುಮತ್ತಮಂ ವಚಸ್ತುಭ್ಯಂ ಮನೀಷಾ ಇಯಮಸ್ತು ಶಂ ಹೃದೇ ।**

**ತ್ವಾಂ ಗಿರಃ ಸಿಂಧುಮಿವಾವನೀರ್ಮಹೀರಾ ಪೃಣಂತಿ ಶವಸಾ ವರ್ಧಯಂತಿ ಚ ॥**

(ಋ. ಸಂ. ೫-೧೧-೫)

ಎಂಬ ಋಕ್ಕಿನಲ್ಲಿ ಸಮುದ್ರಕ್ಕೆ ಸೇರತಕ್ಕ ನದಿಗಳ ಪರ್ಯಾಯಪದವಾದ **ಅವನಿ** ಯೆಂಬ ಪದವು ಪ್ರಯೋಗಿಸಲ್ಪಟ್ಟಿದೆ. ಹೀಗೆ ರಕ್ಷಣಾರ್ಥಕದಲ್ಲಿಯೂ, ವಿಸ್ತೃತವಾದ ಸ್ವರೂಪವೆಂಬರ್ಥದಲ್ಲಿಯೂ ಈ ಪದವು ನದೀ, ಪೃಥ್ವೀ ಇತ್ಯಾದಿಗಳಿಗೆ ವಿಶೇಷಣವಾಗಿರುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ವಿಸ್ತೃತವಾದ ಪೃಥ್ವಿಯೆಂದರ್ಥ.

**ಅಹಂಪೂರ್ವಃ**—ಎಂಬ ಪದಕ್ಕೆ ಆತ್ಮಾಭಿಮಾನವುಳ್ಳದ್ದು ಅಥವಾ ಉದಾರಮತಿಯುಳ್ಳದ್ದು ಎಂದರ್ಥ ಮಾಡಿದ್ದಾರೆ. ಸಾಧಾರಣವಾಗಿ **ಅಹಮಹಮಿಕಾ** ಎಂಬರ್ಥದಲ್ಲಿಯೇ ಇದರ ಪ್ರಯೋಗವು ಅಧಿಕವಾಗಿದೆ. ವೇಗದ ಅತಿಶಯವನ್ನು ತೋರಿಸಲು ಈ ವಿಶೇಷಣವು ಪ್ರಯೋಗಿಸಲ್ಪಟ್ಟಿದೆ.

**ಸುವಿತಾಯ**—ಈ ಪದಕ್ಕೆ ಸಂದರ್ಭಾನುಸಾರವಾಗಿ ಅರ್ಥಮಾಡಿದೆ. ಕೆಲವೆಡೆಗಳಲ್ಲಿ **ಸುಗಮನಾಯ,** ಶ್ರೇಷ್ಠವಾದ ಗಮನಕ್ಕಾಗಿ ಎಂದೂ, ಇನ್ನು ಕೆಲವೆಡೆಗಳಲ್ಲಿ ಶ್ರೇಷ್ಠವಾದ ಫಲಕ್ಕಾಗಿ ಎಂದೂ ಮತ್ತು ಫಲದಾಯಕ ವಾದ ಕರ್ಮಕ್ಕಾಗಿ ಎಂದೂ ಅರ್ಥವಾಗುತ್ತದೆ.

**ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ ।**
**ಇಯಂ ವೋ ಅಸ್ಮತ್ಪ್ರತಿಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ॥**

(ಋ. ಸಂ. ೫-೫೭-೧)

ಇತ್ಯಾದಿ ಸ್ಥಳಗಳಲ್ಲಿ **ಸುವಿತಾಯ** ಎಂಬ ಪದಕ್ಕೆ **ಸುಗುಣಾಯ ಕರ್ಮಣೇ** ಉತ್ತಮವಾದ ಕರ್ಮಕ್ಕಾಗಿ ಎಂಬ ಅರ್ಥದಲ್ಲಿ ಪ್ರಯೋಗವಿದೆ.

**ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।**

(ಋ. ಸಂ. ೧೦-೮೬-೨೧)

ಎಂಬಲ್ಲಿ **ಸುಪ್ರಸೂತಾನಿ** ಅಥವಾ ಸುಪ್ರವೃತ್ತಾನಿ ಎಂಬರ್ಥವನ್ನು ಹೇಳಿದೆ. ಇನ್ನೂ ಕೆಲವು ಅರ್ಥಗಳಲ್ಲೂ ಈ ಪದದ ಪ್ರಯೋಗವಿರುವುದನ್ನು ಹಿಂದೆ ಋ. ಸಂ. ೧-೧೯೦-೧೦ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ಸೃಪ್ರವಂಧುರಃ**-**ಸೃಪ್ರ**ಶಬ್ದಕ್ಕೆ ಸಾಧಾರಣವಾಗಿ ಸರ್ಪಣಶೀಲವೆಂದು ಅರ್ಥವಾಗುತ್ತದೆ. ಉದಾಹರಣೆಗೆ—
**ನಪಾತಾ ಶವಸೋ ಮಹಃ ಸೂನೂ ದಕ್ಷಸ್ಯ ಸುಕ್ರತೂ । ಸೃಪ್ರದಾನೂ ಇಷೋ ವಾಸ್ತ್ವಧಿ ಕ್ಷಿತಃ ॥**

(ಋ. ಸಂ. ೮–೨೫–೫)

ಇತ್ಯಾದಿ ಸ್ಥಳಗಳಲ್ಲಿ ಯಾವಾಗಲೂ ಪ್ರವಹಿಸುತ್ತಿರುವ ಎಂದರೆ ವಿಚ್ಛಿತ್ತಿಯಿಲ್ಲದ ದಾನವುಳ್ಳವರೆಂದರ್ಥವಾಗುತ್ತದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ವಂಧುರ** ವೆಂದರೆ ಸಾರಥಿಯು ಮುಂದುಗಡೆ ಕುಳಿತುಕೊಳ್ಳುವ ಆಸನವೆಂದರ್ಥದಲ್ಲಿ ಪ್ರಯುಕ್ತವಾಗಿದೆ. ಇಲ್ಲಿ ಪ್ರವಹಿಸತಕ್ಕ ಎಂಬರ್ಥಕ್ಕವಕಾಶವಿಲ್ಲ. ಅತ್ಯಂತ ವಿಸ್ತೃತವಾದ ಆಸನವೆಂದರ್ಥಮಾಡ ಬಹುದು. ಸಾಯಣರೂ ಇದೇ ರೀತಿ ಅರ್ಥಮಾಡಿದ್ದಾರೆ. (ಋ. ಸಂ. ೧-೩೪) ನೇ ಸೂಕ್ತದಲ್ಲಿ (ಭಾಗ 4) **ತ್ರಿವಂಧುರಾಂ, ತ್ರಿಚಕ್ರಃ** ಎಂಬ ಪದಗಳ ವಿವರಣೆಯನ್ನು ತಿಳಿಸಲಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅವನೀಃ**—ಅವ ರಕ್ಷಣೇ. ಧಾತು. **ಅರ್ತಿಸೃಧೃಧಮ್ಯ**—(ಉ. ಸೂ. ೨-೨೫೯) ಎಂಬುದರಿಂದ ಅನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರವತ್ವಾನ್**—ವನ ಷಣ ಸಂಭಕ್ತೌ. ಧಾತು. ಪ್ರ ಪೂರ್ವವಾಗಿರುವಾಗ ಕ್ವಿಪ್ ಪ್ರತ್ಯಯ. **ಗಮಾದೀನಾಮಿತಿ ವಕ್ತವ್ಯಮ್** (ಪಾ. ಸೂ. ೬-೪-೪೦-೧) ಎಂಬುದರಿಂದ ಧಾತುವಿನ ಅನುನಾಸಿಕ ನಕಾರಕ್ಕೆ ಲೋಪ. **ಹ್ರಸ್ವಸ್ಯ ಪಿತಿಕೃತಿತುಕ್** ಎಂಬುದರಿಂದ ತುಕಾಗಮ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರವತ್ ಅಸ್ಯ ಅಸ್ತಿ ಇತಿ ಪ್ರವತ್ವಾನ್. **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಪ್ರಥಮಾ ಏಕವಚನಾಂತರೂಪ.

**ಗವ್ಯಾಃ**—ಗಮ್ಲೃ ಗತೌ. ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಿಙ್ ಪ್ರಥಮಪುರುಷ ಏಕವಚನಕ್ಕೆ ಮಧ್ಯಮಪುರುಷ ಏಕವಚನ ಪ್ರತ್ಯಯ ಬಂದಿದೆ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಆದುದರಿಂದ ಛಾದೇಶ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಥಾತಾರಾ**—ಷ್ಠಾ ಗತಿನಿವೃತ್ತೌ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಸಂಬೋಧನಾ ದ್ವಿವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಯಜತಃ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಭೃಮೃದೃಶಿಯಜಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಧಿಷ್ಣ್ಯಾ**—ಞಿಧೃಷಾ ಪ್ರಾಗಲ್ಭ್ಯೇ ಧಾತು. **ಸಾನಸಿ ವರ್ಣಸಿ ಪರ್ಣಸಿ**—(ಉ. ಸೂ. ೪-೫೪೭) ಎಂಬುದರಿಂದ ಣ್ಯ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಔಕಾರ ವಿಭಕ್ತಿಗೆ ಆಕಾರಾದೇಶ. ಆಮಂತ್ರಿತ ನಿಘಾತ ಸ್ವರ ಬರುತ್ತದೆ. ॥ ೩ ॥

॥ ಸಂಹಿತಾಪಾಠಃ ॥

**ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ ।**

**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥**

॥ ಪದಪಾಠಃ ॥

**ಇಹऽಇಹ । ಜಾತಾ । ಸಂ । ಅವಾವಶೀತಾಂ । ಅರೇಪಸಾ । ತನ್ವಾ । ನಾಮಽಭಿಃ । ಸ್ವೈಃ ।**

**ಜಿಷ್ಣುಃ । ವಾಂ । ಅನ್ಯಃ । ಸುಽಮಖಸ್ಯ । ಸೂರಿಃ । ದಿವಃ । ಅನ್ಯಃ । ಸುಽಭಗಃ । ಪುತ್ರಃ । ಊಹೇ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವಾಂ ಸಮವಾವಶೀತಾಂ । ಸಹ ಸಮ್ಯಗ್ವಾ ಪುನಃಪುನಃ ಸ್ತೂಯೇಥೇ ಕಾಮಯೇಥಾಂ ವಾ ಯಜ್ಞಂ ॥ ಪುರುಷವ್ಯತ್ಯಯಃ ॥ ಕೀದೃಶೌ ಯುವಾಂ । ಇಹೇಹ ಜಾತಾ । ಉಭಾಭ್ಯಾಮಿಹಶಬ್ದಾಭ್ಯಾಂ ಮಧ್ಯಮೋತ್ತಮಸ್ಥಾನೇ ಉಚ್ಯೇತೇ । ತಯೋಃ ಸಂಭೂತೌ । ಚಂದ್ರಸೂರ್ಯೇಣೇತಿ ಯಾವತ್ । ಸೂರ್ಯಾಚಂದ್ರಮಸಾವಿತ್ಯೇಕೇ । ನಿ ೧೨.೧. । ಇತಿ ನಿರುಕ್ತಂ । ಅರೇಪಸಾಪಾಪೌ। ಆಥರ್ವಣಸ್ಯ ಗುರೋಃ ಶಿರಶ್ಛೇದನಾದಿನಾ ಪಾಪಲೇಪರಹಿತಾವಿತಿ ಭಾವಃ । ಆಥರ್ವಣಾಯಾಶ್ವಿನಾ ದಧೀಚೇಽಶ್ವ್ಯಂ ಶಿರಃ ಪ್ರತ್ಯೈರಯತಂ । ಋ. ೧.೧೧೭-೨೨ । ಇತ್ಯಾದಿ ಮಂತ್ರವರ್ಣಾತ್ । ಕೇನ ಹೇತುನೇತಿ ಉಚ್ಯತೇ । ತನ್ವಾ ಶರೀರೇಣ ಶರೀರಸೌಂದರ್ಯೇಣ ನಿಮಿತ್ತೇನ ಸ್ವೈರ್ನಾಮಭಿಃ ಸ್ವೀಯೈರ್ಮಾಹಾತ್ಮ್ಯವಿಶಿಷ್ಟೈರಶ್ವಿನೌ ನಾಸತ್ಯಾವಿತ್ಯಾದಿಭಿರಪಿ । ರಮಣೀಯಶರೀರವತ್ತ್ವಾನ್ಮಹಿಮೋಪೇತನಾಮವತ್ತ್ವಾಚ್ಚ ಹೇತೋಃ ಸಂಸ್ತೂಯೇಥೇ ಇತ್ಯರ್ಥಃ। ಯದ್ವಾ। ಅರೇಪಸಾ ತನ್ವೇತಿ ಯೋಜ್ಯಂ। ಉಕ್ತಪ್ರಕಾರೇಣ ಗುರುಶಿರಶ್ಛೇದಾದಪ್ಯಪಾಪೇನ ಶೀರ್ಷೇಣ ತಾದೃಙ್ಮಹತ್ತ್ವಖ್ಯಾಪನೇನೇತಿ ಯಾವತ್ । ಕಿಂಚ ವಾಂ ಯುವಯೋರನ್ಯ ಏಕೋ ಮಧ್ಯಮಸ್ಯಾಂತರಿಕ್ಷಸ್ಯ ಪುತ್ರಸ್ಥಾನೀಯಃ ಸೋಮೋ ಜಿಷ್ಣುರ್ಜಯಶೀಲಃ ಸುಮಖಸ್ಯ ಶೋಭನಯಜ್ಞಸ್ಯ ಸೂರಿಃ ಪ್ರೇರಯಿತಾ ಸನ್ನೂಹೇ । ವಹತಿ । ವಿಶ್ವಂ ಜಗದ್ಧಾರಯತಿ । ಚಂದ್ರಾತ್ಮನಸ್ತಸ್ಯೋದಯೇ ಸತಿ ಹ್ಯೋಷಧಿವನಸ್ಪತ್ಯಾದಯೋ ವರ್ಧಂತೇ । ಅನ್ಯೋಽಪರ ಉತ್ತಮಸ್ಥಾನೋ ದಿವೋ ದ್ಯುಲೋಕಸ್ಯ ಪುತ್ರಃ ಪುತ್ರಸ್ಥಾನೀಯ ಆದಿತ್ಯಃ ಸುಭಗಃ ಶೋಭನರಶ್ಮಿರೂಪಧನ ಊಹೇ । ವಹತಿ । ಕೃತ್ಸ್ನಮೇವಂ ಪೃಥಗ್ಜಗನ್ನಿರ್ವಾಹಕೌ ಮಹಾನುಭಾವೌ ಯುವಾಂ ಸಹ ಸ್ತೂಯೇಥೇ । ಅತ್ರ ನಿರುಕ್ತಂ । ಇಹೇಹ ಜಾತೌ ಸಂಸ್ತೂಯೇಥೇ ಪಾಪೇನಾಲಿಪ್ಯಮಾನಯಾ ತನ್ವಾ ನಾಮಭಿಶ್ಚ ಸ್ವೈರ್ಜಿಷ್ಣುರ್ವಾಮನ್ಯಃ ಸುಮಹತೋ ಬಲಸ್ಯೇರಯಿತಾ ಮಧ್ಯಮೋ ದಿವೋಽನ್ಯಃ ಸುಭಗಃ ಪುತ್ರ ಊಹ್ಯತ ಆದಿತ್ಯಃ । ನಿ. ೧೨-೩ । ಇತಿ ॥**

॥ ಪ್ರತಿಪದಾರ್ಥ ॥

**ಇಹ**– ಇಲ್ಲಿ (ಮಧ್ಯಮಸ್ಥಾನವಾದ ಅಂತರಿಕ್ಷಲೋಕದಲ್ಲಿ ಚಂದ್ರರೂಪನಾಗಿ ಮತ್ತು) । **ಇಹ**—ಇಲ್ಲಿ (ಉತ್ತಮಸ್ಥಾನವಾದ ಸ್ವರ್ಗಲೋಕದಲ್ಲಿ ಸೂರ್ಯರೂಪನಾಗಿ) । **ಜಾತಾ**—ಜನಿಸಿದವರೂ । **ತನ್ವಾ**—ಶರೀರ ಸೌಂದರ್ಯದಿಂದ । (ಮತ್ತು) **ಸ್ವೈಃ ನಾಮಭಿಃ**—ಸ್ವಕೀಯ ನಾಸತ್ಯಾದಿ ನಾಮಗಳಿಂದ । **ಅರೇಪಸಾ**—ದೋಷ ರಹಿತರೂ ಆದ । (**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ಯುವಾಂ**—ನೀವಿಬ್ಬರೂ) । **ಸಂ ಅವಾವಶೀತಾಂ**—ಚೆನ್ನಾಗಿ ಅಥವಾ ಒಟ್ಟಾಗಿಯೇ ಪುನಃ ಪುನಃ ಸ್ತುತರಾಗುತ್ತೀರಿ ಅಥವಾ ಯಜ್ಞೇಚ್ಛುಗಳಾಗುತ್ತೀರಿ । (**ಕಿಂಚ**—ಮತ್ತು) । **ವಾಂ**—ನಿಮ್ಮಿಬ್ಬರಲ್ಲಿ । **ಅನ್ಯಃ**—(ಮಧ್ಯಮಸ್ಥಾನೀಯನಾದ, ಚಂದ್ರರೂಪನಾದ) ಒಬ್ಬನು । **ಜಿಷ್ಣುಃ**—ಜಯಶೀಲನೂ । **ಸುಮಖಸ್ಯ**—ಶುಭವಾದ ಯಜ್ಞದ । **ಸೂರಿಃ**—ಪ್ರೇರಕನೂ (ಆಗಿ) । **ಊಹೇ**—(ಜಗತ್ತನ್ನು) ವಹಿಸುತ್ತಾನೆ । (ಮತ್ತು) **ದಿವಃ ಪುತ್ರಃ**—ಉತ್ತಮಸ್ಥಾನವಾದ ದ್ಯುಲೋಕದ ಪುತ್ರಸ್ಥಾನೀಯನಾದ । **ಅನ್ಯಃ**—ಆದಿತ್ಯರೂಪನಾದ ಮತ್ತೊಬ್ಬನು । **ಸುಭಗಃ**—ಶುಭಕರವಾದ ರಶ್ಮಿರೂಪಧನವಿಶಿಷ್ಟನಾಗಿ । (**ಊಹೇ**—(ಲೋಕವನ್ನು) ವಹಿಸುತ್ತಾನೆ.

॥ ಭಾವಾರ್ಥ ॥

ಮಧ್ಯಮಲೋಕವಾದ ಅಂತರಿಕ್ಷ ಮತ್ತು ಉತ್ತಮಲೋಕವಾದ ಸ್ವರ್ಗಲೋಕ, ಇವುಗಳಲ್ಲಿ ಜನಿಸಿದವರೂ, ನಿರ್ದುಷ್ಟವಾದ ಶರೀರವುಳ್ಳವರೂ, ನಾಸತ್ಯದಸ್ರಾದಿ ನಿರ್ದುಷ್ಟನಾಮವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಮಿಳಿತರಾಗಿಯೇ ಪುನಃ ಪುನಃ ಸ್ತುತರಾಗುತ್ತೀರಿ (ಯಜ್ಞಗಮನೇಚ್ಛುಗಳಾಗುತ್ತೀರಿ); ಮಧ್ಯಲೋಕದವನೂ, ಜಯಶೀಲನೂ, ಓಷಧ್ಯಾದ್ಯಭಿವೃದ್ಧಿದ್ವಾರಾ ಯಜ್ಞಪ್ರೇರಕನೂ ಆದ ಚಂದ್ರರೂಪನಾಗಿ ಒಬ್ಬನೂ, ಉತ್ತಮಲೋಕವಾದ ದ್ಯುಲೋಕಕ್ಕೆ ಪುತ್ರಸ್ಥಾನೀಯನೂ, ರಶ್ಮಿದ್ವಾರಾ ಜಗದಭಿವೃದ್ಧಿಕಾರಕನೂ ಆದ ಸೂರ್ಯರೂಪನಾಗಿ ಮತ್ತೊಬ್ಬನೂ, ಈ ರೀತಿ ನೀವಿಬ್ಬರೂ ಈ ಪ್ರಪಂಚವನ್ನು ರಕ್ಷಿಸುತ್ತೀರಿ.

## English Translation.

Born here (in the middle region) and here (in the upper region), you are glorified together, as faultless in your forms and (perfect in your own many excellences): one (of you), the victorious son (of the firmament), the devout (promoter) of sacred sacrifices, the other, tee auspicious son of heaven, (each) upholds (the world).

॥ ವಿಶೇಷವಿಷಯಗಳು ॥

**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ।** ಎಂಬ ವಾಕ್ಯದಲ್ಲಿ ಅಶ್ವಿನೀ ದೇವತೆಗಳ ವೈಯಕ್ತಿಕವಾದ ಸ್ವರೂಪ ಮತ್ತು ಕಾರ್ಯನಿರ್ವಹಣೆಯನ್ನು ತೋರಿಸಿದೆ. ಅವರ ವೈಯಕ್ತಿಕವಾದ ಸ್ವರೂಪವನ್ನು ನಿಷ್ಕೃಷ್ಟವಾಗಿ ಹೀಗೆಯೇ ಎಂದು ವಿವರಿಸಲು ಸುಲಭಸಾಧ್ಯವಲ್ಲ. ಆದರೂ ಶ್ರುತಿವಾಕ್ಯಗಳ ಆಧಾರದ ಮೇಲೂ, ವೈದಿಕಸಂಪ್ರದಾಯವನ್ನನುಸರಿಸುವ ಪಂಡಿತರ ಅಭಿಪ್ರಾಯದ ಮೇಲೂ ಮತ್ತು ಆಂಗ್ಲವಿಮರ್ಶಕರ ಮತವನ್ನುದಾಹರಿಸಿಯೂ ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿರುವ ಭಾವವನ್ನು ಯಥಾಶಕ್ತಿ ವಿಮರ್ಶಿಸಲಾಗುತ್ತದೆ.

"ನಾಸತ್ಯಾದಿನಿರ್ದುಷ್ಟವಾದ ನಾಮವುಳ್ಳ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಮಿಳಿತರಾಗಿಯೇ ಪುನಃ ಪುನಃ ಸ್ತುತರಾಗುತ್ತೀರಿ. ಮಧ್ಯಲೋಕದವನೂ, ಜಯಶೀಲನೂ, ಓಷಧ್ಯಾದ್ಯಭಿವೃದ್ಧಿದ್ವಾರಾ ಯಜ್ಞಪ್ರೇರಕನೂ ಆದ ಚಂದ್ರರೂಪನಾಗಿ ಒಬ್ಬನೂ, ಉತ್ತಮ ಲೋಕವಾದ ದ್ಯುಲೋಕಕ್ಕೆ ಪುತ್ರಸ್ಥಾನೀಯನೂ, ರಶ್ಮಿದ್ವಾರಾ ಜಗದಭಿವೃದ್ಧಿಕಾರಕನೂ ಆದ ಸೂರ್ಯರೂಪನಾಗಿ ಮತ್ತೊಬ್ಬನೂ ಈ ಪ್ರಪಂಚವನ್ನು ರಕ್ಷಿಸುತ್ತೀರಿ" ಎಂದು ಅವರ ವೈಯಕ್ತಿಕವಾದ ಸ್ವರೂಪವನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ. ಪ್ರಕೃತವಾದ ಋಕ್ಕಿಗೆ ನಿರುಕ್ತದಲ್ಲಿ ಈ ರೀತಿ ವಿವರಣೆಯಿದೆ.

**ಇಹ ಚೇಹ ಚ ಜಾತೌ ಸಂಸ್ತೂಯೇತೇ ರಾಪೇನಾಲಿಪ್ಯಮಾನಯಾ ತನ್ವಾ ನಾಮಭಿಶ್ಚ ಸ್ವೈರ್ಜಿಷ್ಣುರ್ವಾಮನ್ಯಃ ಸುಮಹತೋ ಬಲಸ್ಯೇರಯಿತಾ ಮಧ್ಯಮೋ ದಿವೋ ಅನ್ಯಃ ಸುಭಗಃ ಪುತ್ರ ಊಹ್ಯತ ಆದಿತ್ಯಃ ॥** (ನಿ. ೧೨-೩)

Born here and there, they two are praised together with reference to a body unstained by sin and to their own names. One of you two is the Victor, the furtherer of very great strength, i.e, belongs to the middle region ; the other is considered the blessed son of heaven, i.e, the Sun. ಈ ವಾಕ್ಯಗಳ ಅರ್ಥವು ಮೇಲೆ ಹೇಳಿರುವುದೇ ಆಗಿದೆ. ಹೀಗೆ ಸೂರ್ಯರೂಪನಾಗಿ ಒಬ್ಬನೂ ಮತ್ತು ಚಂದ್ರರೂಪನಾಗಿ ಇನ್ನೊಬ್ಬನೂ ಲೋಕರಕ್ಷಕರಾಗಿದ್ದಾರೆ ಎಂಬುದೇ ಈ ಋಕ್ಕಿನ ತಾತ್ಪರ್ಯವು. ಆದರೆ ಕೆಲವೆಡೆಗಳಲ್ಲಿ ಬೇರೆ ವಿಧವಾಗಿಯೂ ಸಹ ಸ್ತುತರಾಗಿದ್ದಾರೆ. ಆದ್ದರಿಂದಲೇ ನಿರುಕ್ತಕಾರರೂ ಸಹ ಈ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಕೊಡದೆ, ಮತಾಂತರಗಳನ್ನು ತಿಳಿಸಿದ್ದಾರೆ. ಅದು ಈ ಪ್ರಕಾರವಾಗಿದೆ.

**ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ॥** (ನಿ. ೧೨-೧)

ಈ ದೇವತೆಗಳಲ್ಲಿ ಒಬ್ಬನು ಉದಕದಿಂದಲೂ ಇನ್ನೊಬ್ಬನು ಪ್ರಕಾಶದಿಂದಲೂ ಸರ್ವತ್ರ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀ ದೇವತೆಗಳೆಂದು ಹೆಸರು, ಎಂದು ಒಂದು ಮತ. ಅಶ್ವಗಳಿಂದ ಯುಕ್ತರಾದುದರಿಂದ ಇವರಿಗೆ ಅಶ್ವಿನೀ ದೇವತೆಗಳೆಂದು ಹೆಸರು ಎಂದು ಔರ್ಣವಾಭರ ಮತ. ಕೆಲವರ ಅಭಿಪ್ರಾಯದಂತೆ ಇವರು ದ್ಯಾವಾಪೃಥಿವಿಗಳು. ಮತ್ತೆ ಕೆಲವರು ಇವರನ್ನೇ ಅಹೋರಾತ್ರಗಳೆಂದು ಹೇಳುವರು. ಮತ್ತೆ ಕೆಲವರ ಅಭಿಪ್ರಾಯದಂತೆ ಇವರೇ ಸೂರ್ಯಾಚಂದ್ರಮಸ್ಸುಗಳಾಗಿರುವರು. ಐತಿಹಾಸಿಕಕಾರರ ಮತದಂತೆ ಪುಣ್ಯಕರ್ತರಾದ ಇಬ್ಬರು ರಾಜರುಗಳು ಈ ಪದವಿಯನ್ನು ಪಡೆದಿರುವರು ಎಂದಾಗುತ್ತದೆ. ಹೀಗೆ ಮತಭೇದಗಳನ್ನು ತಿಳಿಸಿ ಋಕ್ಸಂಹಿತೆಯಿಂದ ಪ್ರಕೃತವಾದ ಋಕ್ಕನ್ನೂ (೧-೧೮೧-೪) ಮತ್ತು ಅನಿರ್ದಿಷ್ಟವಾದ ಇನ್ನೊಂದು ಮಂತ್ರವನ್ನೂ ಉದಾಹರಿಸಿ ಈ ವಿಷಯದಲ್ಲಿರುವ ವಿಪ್ರತಿಪತ್ತಿಯನ್ನು ತಿಳಿಸಿರುವರು. ಮೊದಲನೆಯದಾಗಿ,

**ವಸಾತಿಷು ಸ್ಮ ಚರಥೋಽಸಿತೌ ಪೇಶ್ವಾವಿವ ।**
**ಕದೇದಮಶ್ವಿನಾ ಯುವಮಭಿ ದೇವಾ ಅಗಚ್ಛತಂ ॥**

ಎಂಬ ಮಂತ್ರದಲ್ಲಿ ಹೇಳಿರುವಂತೆ, ಇವರಲ್ಲಿ ಒಬ್ಬನು ವಸಾತಿಪುತ್ರನು ಎಂದರೆ ಎಂದರೆ, ರಾತ್ರಿಪುತ್ರನು; ಇನ್ನೊಬ್ಬನು ಉಷಃಪುತ್ರನು ಎಂದಾಗುತ್ತದೆ ಎಂದು ಹೇಳಿ ಅನಂತರ ಪ್ರಕೃತವಾದ ಋಕ್ಕನ್ನುದಾಹರಿಸಿ ಮೇಲೆ ತಿಳಿಸಿರುವಂತೆ ವಿವರಿಸುತ್ತಾರೆ. Mecdonell ಎಂಬ ಪಂಡಿತನು ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸುತ್ತಾ ಈ ರೀತಿ ಹೇಳಿದ್ದಾನೆ.

> "Though they (ಅಶ್ವಿನೌ) hold a distinct position among the Deities of of light and their appellation is Indian, their connection with any definite Phenomena of light is so obscure that their original nature is to Puzzle to the Vedic interpreters from the earliest times."

[Vedic Mythology. P. 49]

ವೈದಿಕ ಮತ್ತು ಆಧುನಿಕ ಆಂಗ್ಲ ಪಂಡಿತರುಗಳ ಅಭಿಪ್ರಾಯಗಳನ್ನು ಕ್ರೋಡೀಕರಿಸಿದರೆ ಈ ಅಭಿಪ್ರಾಯಗಳು ಕಂಡು ಬರುತ್ತವೆ--

| Seholars | | Their opinions |
|---|---|---|
| Yaska .... | .... | Twilight before Dawn, half dark and half light. |
| Aurnavabha.... | .... | Light rays. |
| Oldenberg .... | .... | Morning or evening star. |
| Macdonell .... | .... | Twilight or Morning stars. |
| Bloomfield .... | .... | Morning or evening stars. |
| Hopekins .... | .... | Transition from darkness to light. |
| Bergaine .... | .... | Fire of heaven and of the altar. |
| ಐತಿಹಾಸಿಕಾಃ .... | .... | Two pious kings. |
| E. N. Ghosh .... | .... | Two stars of Asvini. (Aries) |
| Weber .... | .... | Twin constellation of Gemini. |
| Shama Shastry | .... | The Sun and the Moon. |
| Max Muller .... | .... | Personification of Morning and evening. |

Dr. ಶ್ಯಾಮಶಾಸ್ತ್ರಿಗಳು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು Mythic Society journal ನಲ್ಲಿ (Vol. XX. No. 2. P. 80—88) ವಿಶದವಾಗಿ ತಿಳಿಸಿದ್ದಾರೆ. ಮತ್ತು ಇವರು ಸೂರ್ಯಾಚಂದ್ರಮಸ್ಸುಗಳೇ ಅಲ್ಲದೇ ಬೇರೆ ಯಾರೂ ಅಲ್ಲವೆಂಬ ವಿಷಯವನ್ನೂ ಸಮರ್ಥಿಸಿದ್ದಾರೆ. ಋಕ್ಸಂಹಿತಾವಾಕ್ಯಗಳಲ್ಲಿರುವ ವಿವರಣೆಗಳಿಂದ ಅಶ್ವಿನೀದೇವತೆಗಳ ಸ್ವರೂಪವನ್ನು ನಿಷ್ಕರ್ಷಿಸುವುದಾದರೆ, ಕೆಳಗೆ ಉದಾಹರಿಸಿರುವ ಆಧಾರಗಳನ್ನು ವಿಮರ್ಶಿಸಬಹುದು.

**ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।**
**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥**
**ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
**ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥**

(ಋ. ಸಂ. ೧೦-೧೭-೧ ರಿಂದ ೨)

ತ್ವಷ್ಟೃವು ತನ್ನ ಮಗಳ ವಿವಾಹದ ಕಾಲದಲ್ಲಿ ಸಕಲ ಪ್ರಪಂಚವೂ ಒಟ್ಟಿಗೆ ಸೇರಿ ಕಲೆಯಲಿ ಎಂದುದ್ದೇಶಿಸಿದನು. ಯಮನ ಮಾತೆಯೂ ವಿವಸ್ವಂತನ ಪತ್ನಿಯೂ ಆದ ಅವಳು ವಿವಾಹವಾದನಂತರವೇ ಅದೃಶ್ಯಳಾದಳು. ಎಂದರೆ, ಅವರುಗಳಮರ್ತ್ಯಳಾದ ಅವಳನ್ನು ಮರ್ತ್ಯರ ದೃಷ್ಟಿಗೆ ಗೋಚರವಾಗದಂತೆ ಮರೆಸಿ ಇಟ್ಟರು. ಆಗ ಅವರು ಅವಳನ್ನು ಸವರ್ಣಳನ್ನಾಗಿ ಮಾಡಿ ವಿವಸ್ವಂತನಿಗೆ ಕೊಟ್ಟರು. ಅನಂತರ ಅವಳು ಅಶ್ವಿನೀದೇವತೆಗಳನ್ನು ಹಡೆದಳು. **ಸರಣ್ಯು**ವೆಂಬ ಹೆಸರಿನಿಂದ ಪ್ರಸಿದ್ಧಳಾದ ಅವಳು ಅಶ್ವಿನೀದೇವತೆಗಳನ್ನು ತನ್ನ ಪುತ್ರರನ್ನಾಗಿ ಬಿಟ್ಟುಹೋದಳು ಎಂದು ಮೇಲ್ಕಂಡ ಋಕ್ಕುಗಳ ಅಭಿಪ್ರಾಯವಾಗಿದೆ. ಮತ್ತು,

**ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।**
**ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ ತಪುಷೋ ಬುಧ್ನ ಏತಾ ॥**

(ಋ. ಸಂ. ೩-೩೯-೩)

ಯಮಳರ (ಎಂದರ ಅಶ್ವಿನೀದೇವತೆಗಳ) ಮಾತೆಯು ಯಮಳರನ್ನು ಹಡೆದಳು. ಆ ಯಮಳರಿಬ್ಬರೂ ಸಹ ಸಶರೀರಿಗಳಾಗಿ ತಮಸ್ಸನ್ನು ನಾಶಮಾಡಿದರು ಎಂದು ಹೇಳಿದೆ. Max Muller ಎಂಬ ಪಂಡಿತನು ಈ ಋಕ್ಕನ್ನುದಹರಿಸಿ ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ರೀತಿ ಹೇಳಿದ್ದಾನೆ.

"We might have guessed from the text itself, even without the help of the Commentator, that 'the mother of the twins' here spoken of is Dawn: but it may be stated that the commentator, too, adopts this view."

(Science of Language. Vol. II. P. 530).

ಎಂದರೆ, ಸಾಯಣರು ತಮ್ಮ ಭಾಷ್ಯದಲ್ಲಿ **ಯಮಸೂಃ** ಎಂಬ ಪದಕ್ಕೆ **ಉಷೋಽಭಿಮಾನಿನೀ ದೇವತಾ ( ಅತ್ರ ಉಷಃಕಾಲೇ ಅಸೂತ)** ಎಂದು ಅಶ್ವಿನೀ ದೇವತೆಗಳ ಮಾತೆಯು ಉಷೋದೇವತೆಯೆಂದು ಹೇಳಿರುವುದು ಸರ್ವಸಮ್ಮತವಾಗಿದೆಯೆಂದು ಈ ಪಂಡಿತನು ಹೇಳಿದ್ದಾನೆ. ಅಲ್ಲದೇ ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟುದೂ ಅವರಿಂದ ಅಶ್ವಿನೀದೇವತೆಗಳು ಉತ್ಪನ್ನರಾದುದೂ ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದೆ—

**ಅಭವನ್ಮಿಥುನಂ ತ್ವಷ್ಟುಃ ಸರಣ್ಯುಸ್ತ್ರಿಶಿರಾಃ ಸಹ ।**
**ಸ ವೈ ಸರಣ್ಯೂಂ ಪ್ರಾಯಚ್ಛತ್ ಸ್ವಯಮೇವ ವಿವಸ್ವತೇ ॥**
**ತತಃ ಸರಣ್ವ್ಯಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥**
**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।**
**ನಿಕ್ಷಿಪ್ಯ ಮಿಥುನಂ ತಸ್ಯಾಂ ಅಶ್ವಾ ಭೂತ್ವಾಪಚಕ್ರಮೇ ॥**
**ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।**
**ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥**
**ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।**
**ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ॥**
**ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।**
**ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥**
**ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।**
**ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥**
**ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।**

**ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ||**
**ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೇ ದ್ವೃಚೇ |**
**ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟೇತಿ ಸಹ ಮನ್ಯತೇ ||**

(ಬೃ. ದೇ. ೬-೧೬೨ರಿಂದ ೭-೭)

ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟನು. ಅವಳು ಯಮ ಮತ್ತು ಯಮೀ ಎಂಬಿಬ್ಬರು ಯಮಳರನ್ನು ಹಡೆದಳು. ಸರಣ್ಯುವು ತನ್ನಂತೆಯೇ ಬೇರೊಂದು ಸ್ತ್ರೀರೂಪವನ್ನು ಸೃಷ್ಟಿಸಿ ತನ್ನ ಪತಿಗೆ ತಿಳಿಯದಂತೆ ತನ್ನಿಬ್ಬರು ಮಕ್ಕಳ ರಕ್ಷಣೆಯನ್ನೂ ಅವಳಿಗೆ ವಹಿಸಿ ತಾನು ಒಂದು ಹೆಣ್ಣು ಅಶ್ವದ ರೂಪವನ್ನು ತಾಳಿದಳು. ಈ ರಹಸ್ಯವನ್ನು ತಿಳಿಯದೇ ವಿವಸ್ವಂತನು ಸರಣ್ಯುವಿನಿಂದ ಸೃಷ್ಟಳಾದ ಆ ಸ್ತ್ರೀಯಲ್ಲಿ ರಮಿಸಿ ಮನುವನ್ನು ಉತ್ಪನ್ನ ವಾಗುವಂತೆ ಮಾಡಿದನು. ಒಡನೆಯೇ ಅವಳು ಸರಣ್ಯುವಲ್ಲವೆಂದು ತಿಳಿದು ನಿಜವಾದ ಸರಣ್ಯುವನ್ನು ಹುಡುಕಿಕೊಂಡು ಹೊರಟನು. ಮತ್ತು ತಾನೂ ಪುರುಷಾಶ್ವದ ರೂಪವನ್ನು ಪಡೆದನು. ಆ ರೂಪವನ್ನು ನೋಡಿ ಅವಳೂ ಮೋಹ ಗೊಂಡು ಅವನ ಸಂಭೋಗಕ್ಕಾಶಿಸಿದಳು. ಆಗ ಅವನ ರೇತಸ್ಸಿನ ಪ್ರಭಾವದಿಂದ **ನಾಸತ್ಯ** ಮತ್ತು **ದಸ್ರ** ಎಂಬಿಬ್ಬರು ಪುತ್ರರು ಜನಿಸಿದರು. ಅವರೇ ಅಶ್ವಿನೀದೇವತೆಗಳು, ಎಂಬ ಕಥೆಯು ವರ್ಣಿತವಾಗಿದೆ. ಇದೇ ಕಥೆಯು ಹರಿವಂಶ ದಲ್ಲಿಯೂ ಇದೇ ರೀತಿ ಹೇಳಲ್ಪಟ್ಟಿದೆ. ಅದು ಪೌರಾಣಿಕ ಸಂಪ್ರದಾಯವನ್ನನುಸರಿಸಿರುವುದರಿಂದಲೂ, ಪ್ರಕೃತವಾದ ವಿವರಣೆಗಳಲ್ಲೆಲ್ಲಾ ನಾವು ಕೇವಲ ವೈದಿಕವಾಕ್ಯಗಳ ಆಧಾರದ ಮೇಲೆಯೇ ವಿಮರ್ಶೆಯನ್ನು ಮಾಡುತ್ತಿರುವುದ ರಿಂದಲೂ ಹರಿವಂಶದ ವಿವರಣೆಯು ಈಗ ಅಪ್ರಕೃತವಾಗಿದೆ. ಮೇಲೆ ವಿವರಿಸಿರುವಂತೆ, ಅಶ್ವಿನೀದೇವತೆಗಳ ಉತ್ಪತ್ತಿ ಕ್ರಮವನ್ನು ಈ ರೀತಿ ತೋರಿಸಬಹುದು.




ಮತ್ತು {
೧. ತ್ರಿಶಿರಾ ಮತ್ತು ಸರಣ್ಯುವೂ
೨. ಯಮ ಮತ್ತು ಯಮಿಯೂ
೩. ನಾಸತ್ಯ ಮತ್ತು ದಸ್ರನೂ ಸಹ
} ಯಮಳರು.

ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವಂತೆ ಈ ಇಬ್ಬರೂ ಎರಡು ತೇಜೋರೂಪಗಳು ಎಂದಿರುವ ವಿಷಯವನ್ನು ಬೇರೆ ಕಡೆ ಬೇರೊಂದು ರೂಪದಲ್ಲಿ ವರ್ಣಿತವಾಗಿದೆ.

**ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ ।**
**ಅಥಾ ಪಿತೄನ್ಸುವಿದತ್ರಾಁ ಉಪೇಹಿ ಯಮೇನ ಯೇ ಸಧಮಾದಂ ಮದಂತಿ ॥**

(ಋ. ಸಂ. ೧೦-೧೪-೧೦)

ಎಂಬಲ್ಲಿ ವರ್ಣಿತವಾಗಿರುವ ಶ್ವದ್ವಯದ ವಿಷಯದಲ್ಲಿ Max Muller ಎಂಬ ಪಂಡಿತನು ಈ ರೀತಿ ಅಭಿಪ್ರಾಯ ಪಟ್ಟಿದ್ದಾನೆ. ಅದೇನೆಂದರೆ,

" Those two dogs represent Time, in double aspect as morning and evening. Representing Time in all forms of its double aspect—as morning and evening, day and night, bright and dark fortnights, bright and dark halves of the year—the two dogs probably identical with the two Aswins."

(Seience of Languge, Vol. II.)

ಯಮನನ್ನು ಹಿಂಬಾಲಿಸತಕ್ಕ ಈ ಶ್ವದ್ವಯವು ಕಾಲದ ಅವಯವಗಳಾಗಿರಬಹುದೆಂದು ಹೇಳಬಹುದು. ಎಂದರೆ, ಅಹೋರಾತ್ರ ರೂಪದಲ್ಲಾಗಲಿ, ಪ್ರಾತಃಕಾಲ ಅಥವಾ ಸಾಯಂಕಾಲ ರೂಪದಲ್ಲಾಗಲಿ, ಅಥವಾ ಶುಕ್ಲ ಕೃಷ್ಣಪಕ್ಷಗಳ ರೂಪಗಳಲ್ಲಾಗಲಿ ಅಥವಾ ಉತ್ತರಾಯಣ ಮತ್ತು ದಕ್ಷಿಣಾಯನ ರೂಪಗಳಲ್ಲಾಗಲಿ ಆಗಿದ್ದಿರಬಹುದು. ಇವೇ ಅಶ್ವಿನೀ ದೇವತೆಗಳನ್ನು ಪ್ರತಿಬಿಂಬಿಸತಕ್ಕ ಪ್ರಕೃತಿ ವಿಭಾಗಗಳೆಂದೂ ಹೇಳಬಹುದು ಎಂದಿದ್ದಾನೆ. ಆದುದರಿಂದಲೇ,

**ಧಿಯಂಜಿನ್ವಾ ಧಿಷ್ಣ್ಯಾ ವಿಶ್ಪಲಾವಸೂ ದಿವೋ ನಪಾತಾ ಸುಕೃತೇ ಶುಚಿವ್ರತಾ ।**

(ಋ. ಸಂ. ೧-೧೮೨-೧)

ಎಂಬಲ್ಲಿ ಅಶ್ವಿನೀದೇವತೆಗಳನ್ನು **ದಿವಃ ನಪಾತಾ** ಎಂದು ಸಂಬೋಧಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ವರ್ಣಿತ ವಾಗಿರುವುದನ್ನು ಸಾಯಣರು **ಸೋಮ** ಮತ್ತು **ಸೂರ್ಯ** ಎಂದರ್ಥಮಾಡಿದ್ದಾರೆ. ಇವರ ಆವಿರ್ಭಾವದ ಕಾಲವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

**ಅರೇಪಸಾ**—ಎಂಬ ಪದಕ್ಕೆ ನಿರುಕ್ತಕಾರರು **ಪಾಪೇನ ಅಲಿಪ್ಯಮಾನಯಾ ತನ್ವಾ ।** ದೋಷದಿಂದ ಲಿಪ್ತವಾಗದ ದೇಹದೊಡನೆ ಎಂದರ್ಥಮಾಡಿದ್ದಾರೆ. **ರೇಪಸ್** ಎಂದರೆ ದೋಷ ಅಥವಾ ಪಾಪವೆಂದರ್ಥ. ಅದರಿಂದ ಲಿಪ್ತವಾಗದೇ ಇರುವುದೆಂದು ತಾತ್ಪರ್ಯ.

**ಅವಾವಶೀತಾಂ**—ಅಪೇಕ್ಷಿಸು ಅಥವಾ ಪ್ರಕಟಿಸು ಎಂಬರ್ಥದ್ವಯವುಳ್ಳ **ವಶ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. **ಪುನಃ ಪುನಃ ಸ್ತೂಯೇಥೇ ವಾ ಕಾಮಯೇಥಾಂ** ಪುನಃ ಪುನಃ ಸ್ತುತರಾಗುತ್ತೀರಿ ಅಥವಾ ಪುನಃ ಪುನಃ ಯಜ್ಞೇಚ್ಛುಗಳಾಗುತ್ತೀರಿ ಎಂಬರ್ಥವನ್ನು ಸಾಯಣರು ಹೇಳಿದ್ದಾರೆ. ಈ ಎರಡರ್ಥಗಳಲ್ಲಿಯೂ ಸಹ ಈ ಪದದ ಪ್ರಯೋಗವನ್ನು ಬೇರೆ ಬೇರೆ ಕಡೆಗಳಲ್ಲಿ ನೋಡಬಹುದು. ಉದಾಹರಣೆಗೆ,

**ಅಚ್ಛಾ ಕೋಶಂ ಮಧುಶ್ಚುತಮಸೃಗ್ರಂ ವಾರೇ ಅವ್ಯಯೇ । ಅವಾವಶಂತ ಧೀತಯಃ ॥**

(ಋ ಸಂ. ೯-೬೬-೧೧)

ಎಂಬಲ್ಲಿ ಅಂಗುಲಿಗಳು ಪುನಃ ಅಪೇಕ್ಷಿಸಿದವು ಎಂದೂ,

**ಅಭಿ ತ್ರಿಪೃಷ್ಠಂ ವೃಷಣಂ ವಯೋಧಾಮಾಂಗೂಷಾಣಾಮವಾವಶಂತ ವಾಣೀಃ ।**
**ವನಾ ವಸಾನೋ ವರುಣೋ ನ ಸಿಂಧೂನ್ವಿ ರತ್ನಧಾ ದಯತೇ ವಾರ್ಯಾಣಿ ॥**

(ಋ. ಸಂ. ೯-೯೦-೨)

ಎಂಬಲ್ಲಿ ವಾಕ್ಕುಗಳು ಶಬ್ದಮಾಡಿದವು ಎಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಸ್ತುತಿರೂಪವಾದ ಶಬ್ದದಿಂದ ತೃಪ್ತರಾದರು ಎಂದಾಗಲಿ ಅಥವಾ ಯಜ್ಞೇಚ್ಛುಗಳಾದರು ಎಂದಾಗಲಿ ತಾತ್ಪರ್ಯವನ್ನು ಹೇಳಬಹುದೆಂದು ತಿಳಿಸಿದೆ.

**ಸುಭಗಃ—ಮಘಂ, ರೇಕ್ಣಃ** ಇತ್ಯಾದಿ **ಧನ**ನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೩-೯), ಶ್ರೇಷ್ಠವಾದ ಧನವೆಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಸೂರ್ಯರೂಪದಲ್ಲಿರುವ ದೇವತೆಯ ಧನವೆಂದು ಹೇಳಿರುವುದರಿಂದ ಇಲ್ಲಿ **ರಶ್ಮಿ**ರೂಪವಾದ ಧನವೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಇಹೇಹ—ನಿತ್ಯವೀಪ್ಸಯೋಃ** ಎಂಬುದರಿಂದ ದ್ವಿರ್ವಚನ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಪರಭಾಗವು ಸರ್ವಾನುದಾತ್ತವಾಗುತ್ತದೆ.

**ಜಾತಾ—**ಜನೀ ಪ್ರಾದುರ್ಭಾವೇ. ಧಾತು. ಕ್ತ ಪ್ರತ್ಯಯ ಪರವಾದಾಗ **ಜನಸನ ಖನಾಂ ಸನ್‌ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಆತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿವಚನಕ್ಕೆ ಆಕಾರಾದೇಶ.

**ಅವಾವಶೀತಾಮ್—**ವಶ ಕಾಂತೌ. ಧಾತು. **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಪೌನಃಪುನ್ಯಾರ್ಥದಲ್ಲಿ ಯಙ್. **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಙ್ ಮಧ್ಯಮಪುರುಷ ದ್ವಿವಚನಕ್ಕೆ ಪ್ರಥಮಪುರುಷ ದ್ವಿವಚನ ಪ್ರತ್ಯಯ ಬರುತ್ತದೆ. ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರೇಪಸಾ—**ನ ವಿದ್ಯತೇ ರೇಪಃ ಯಯೋಸ್ತೌ. **ನಞ್‌ಸುಭ್ಯಾಮ್** (ಪಾ ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿಚನಕ್ಕೆ ಆಕಾರಾದೇಶ.

**ತನ್ವಾ—**ಉದಾತ್ತ ಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತ ಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಜಿಷ್ಣುಃ—**ಜಿ ಜಯೇ. ಧಾತು. **ಗ್ಲಾಜಿ ಸ್ಥಶ್ಚ ಕ್ಸ್ನುಃ** (ಪಾ. ಸೂ. ೩-೨-೧೩೯) ಎಂಬುದರಿಂದ ಕ್ಸ್ನು ಪ್ರತ್ಯಯ. ಗಿತ್ತಾದುದರಿಂದ ಗುಣ ಬರುವುದಿಲ್ಲ. **ಆದೇಶ ಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ನಕಾರಕ್ಕೆ ಣತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಸುಭಗಃ—**ಬ್ರಹುವ್ರೀಹಿಸಮಾಸ. ಸುಸ್ವರದಿಂದ ಅಂತೋದಾತ್ತಕ್ಕೆ ಬಾಧಕವಾಗಿ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಊಹೇ**—ವಹ ಪ್ರಾಪಣೇ. ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಕ್ಕೆ ಏಶಾದೇಶ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. ಲಿಣ್ನಿಮಿತ್ತವಾಗಿ ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

**ಪ್ರ ವಾಂ ನಿಚೇರುಃ ಕಕುಹೋ ವಶಾಁ ಅನು ಪಿಶಂಗರೂಪಃ ಸದನಾನಿ ಗಮ್ಯಾಃ ।**
**ಹರೀ ಅನ್ಯಸ್ಯ ಪೀಪಯಂತ ವಾಜೈರ್ಮಥ್ನಾ ರಜಾಂಸ್ಯಶ್ವಿನಾ ವಿ ಘೋಷೈಃ ॥ ೫ ॥**

॥ ಪದಪಾಠಃ ॥

**ಪ್ರ । ವಾಂ । ನಿऽಚೇರುಃ । ಕಕುಹಃ । ವಶಾನ್ । । ಅನು । ಪಿಶಂಗऽರೂಪಃ । ಸದನಾನಿ । ಗಮ್ಯಾಃ ।**
**ಹರೀ ಇತಿ । ಅನ್ಯಸ್ಯ । ಪೀಪಯಂತ । ವಾಜೈಃ । ಮಥ್ನಾ । ರಜಾಂಸಿ । ಅಶ್ವಿನಾ । ವಿ । ಘೋಷೈಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನಾಶ್ವಿನೌ ವಾಂ ಯುವಯೋರ್ಮಧ್ಯೇಽನ್ಯಸ್ಯೈಕಸ್ಯ ಕಕುಹಃ ಶ್ರೇಷ್ಠಃ ಪಿಶಂಗ-ರೂಪೋ ಹಿರಣ್ಯರೂಪಃ ಪೀತವರ್ಣೋ ವಾ ಬಹುಭಿರಕ್ಷಾದ್ಯವಯವೈರ್ನಿರೂಪ್ಯಮಾಣೋ ವಾ ರಥೋ ವಶಾನನು ಕಾಮಾನನುಲಕ್ಷ್ಯ ಯಥಾಕಾಮಂ । ಅಸ್ಮದ್ಯಜ್ಞಾಗಮನೇಚ್ಛಯೇತ್ಯರ್ಥಃ । ಯದ್ವಾ । ವಶಾನ್ ಸ್ವಾಧೀನಾಃ ಕಕುಹೋ ದಿಶೋ ದಿಗಂತರಾಲಾನುಕ್ರಮೇಣ ನೀಚೈರುಚ್ಚೈಶ್ಚರನ್ ಸ್ವಸ್ಥಾನಾ-ದ್ದೇವಯಜನಮುಖಂ ಗಚ್ಛನ್ । ಸದನಾನ್ಯಸ್ಮದ್ಯಾಗಗೃಹಾಣಿ ಪ್ರ ಗಮ್ಯಾಃ । ಪ್ರಕರ್ಷೇಣ ಗಚ್ಛತು ॥ ಪುರುಷವ್ಯತ್ಯಯಃ ॥ ಅತ್ರ ಯದ್ಯಪ್ಯನ್ಯಸ್ಯೇತಿ ನೋಕ್ತಂ ತಥಾಪ್ಯುತ್ತರವಾಕ್ಯೇ ತಥೋಕ್ತತ್ವಾದತ್ರಾಪಿ ಲಭ್ಯತೇ । ಅನ್ಯಸ್ಯ ಯುವಯೋರನ್ಯತಮಸ್ಯ ಹರೀ ಅಶ್ವೌ ರಜಾಂಸಿ ಲೋಕಾಃ । ಅತ್ರ ಲೋಕಶಬ್ದೋ ಜನವಾಚಕಃ । ತೇ ಯಜಮಾನರೂಪಾ ಜನಾ ಇತ್ಯರ್ಥಃ । ತೇ ಚ ಮಥ್ನಾ ಪ್ರಮಥನೇನಾಲೋಡನೇನ ನಿಷ್ಪಾದಿತೈರ್ವಾಜೈರನ್ನೈರಾಮಿಕ್ಷಾದಿರೂಪೈರ್ಘೋಷೈಃ ಸ್ತುತಿಭಿಶ್ಚಾಹ್ವಾನಾದಿಶಬ್ದವಿಶಿಷ್ಟೈರ್ವಾ ಪೀಪ-ಯಂತ । ಆಪ್ಯಾಯಯಂತಿ ॥**

॥ ಪ್ರತಿಪದಾರ್ಥ ॥

**(ಹೇ) ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರಲ್ಲಿ (ಒಬ್ಬನದಾದ) । (**ಕಕುಹಃ**—ಶ್ರೇಷ್ಠವಾದುದೂ) । **ಪಿಶಂಗರೂಪಃ**—ಹಿರಣ್ಯರೂಪವೂ (ಪೀತವರ್ಣವೂ)। **ವಶಾನ್ ಅನು**—ಕಾಮಗಳನ್ನು (ಇಚ್ಛೆಗಳನ್ನು) ಅನುಸರಿಸಿ (ಮನಸ್ಸು ಬಂದಲ್ಲಿ) । **ನಿ ಚೇರುಃ**—ಸಂಚರಿಸುವುದೂ । [ಅಥವಾ **ವಶಾನ್**—ಸ್ವಾಧೀನವಾದ ।

**ಕಕುಹಃ ಅನು**—ದಿಕ್ಕು ವಿದಿಕ್ಕುಗಳನ್ನನುಸರಿಸಿ | **ನಿಚೇರುಃ**—ಮೇಲೆ ಕೆಳಗೆ ಎಲ್ಲಾ ಕಡೆಯೂ ಸಂಚರಿಸುವುದೂ] (ಆದ ರಥವು) | **ಸದನಾನಿ**—ನಮ್ಮ ಯಾಗಗೃಹಗಳಿಗೆ | **ಪ್ರ ಗಮ್ಯಾಃ**—ವಿಶೇಷವಾಗಿ ಆಗಮಿಸಲಿ | **ಅನ್ಯಸ್ಯ**—ಮತ್ತೊಬ್ಬನ | **ಹರೀ**—ಅಶ್ವಗಳನ್ನು | **ರಜಾಂಸಿ**—ಯಜಮಾನರೂಪರಾದ ಜನಗಳು | **ಮಥ್ನಾ**—ಮಥನದಿಂದ (ನಿಷ್ಪಾದಿತವಾದ) | **ವಾಜೈಃ**—ಆಮಿಕ್ಷಾದಿ ರೂಪವಾದ ಅನ್ನಗಳಿಂದ (ಮತ್ತು) | **ಘೋಷೈಃ**—ಸ್ತುತಿಗಳಿಂದ | **ವಿ ಪೀಪಯಂತೆ**—ತೃಪ್ತಿ ಪಡಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮಿಬ್ಬರಲ್ಲಿ ಒಬ್ಬನಿಗೆ ಸೇರಿದುದೂ, ಪೀತವರ್ಣವೂ, ದಿಕ್ಕುವಿದಿಕ್ಕುಗಳಲ್ಲಿ ಸಂಚರಿಸುವುದೂ ಆದ ರಥವು ನಮ್ಮ ಯಾಗಗೃಹಗಳಿಗೆ ಆಗಮಿಸಲಿ, ಇನ್ನೊಬ್ಬನ ಅಶ್ವಗಳನ್ನು, ಯಾಗಕರ್ತೃಗಳು ಮಥಿಸಿ ಸಿದ್ಧಪಡಿಸಿದ ಆಮಿಕ್ಷಾದ್ಯನ್ನಗಳಿಂದ ಮತ್ತು ಸ್ತೋತ್ರಗಳಿಂದ ತೃಪ್ತಿಪಡಿಸುತ್ತಾರೆ.

English Translation.

Ashwins, may the golden-coloured (car of one of you) traversing at will, the quarters of space, come to our dwellings; may mankind encourage the horses of the other by food, by friction, and by shouts.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನು ಸೂರ್ಯಾಚಂದ್ರಮಸ್ಸುಗಳೆಂದು ವರ್ಣಿಸಿ ಈ ಋಕ್ಕಿನಲ್ಲಿ ಅವರ ರಥದ ಸಂಚಾರಕ್ರಮವನ್ನೂ ಅದರ ಆಕರ್ಷಕವಾದ ವರ್ಣವನ್ನೂ ವರ್ಣಿಸಿದೆ.

**ಅಶ್ವಿನಾ ಪರಿ ವಾಮಿಷಃ ಪುರೂಚೀರೀಯುರ್ಗೀರ್ಭಿರ್ಯತಮಾನಾ ಅಮೃಧ್ರಾಃ |**
**ರಥೋ ಹ ವಾಮೃತಜಾ ಅದ್ರಿಜೂತಃ ಪರಿ ದ್ಯಾವಾಪೃಥಿವೀ ಯಾತಿ ಸದ್ಯಃ ||**

(ಋ. ಸಂ. ೩-೫೮-೮)

**ಯೂಯಂ ಹಿ ದೇವೀರೃತಯುಗ್ಭಿರಶ್ವೈಃ ಪರಿಪ್ರಯಾಥ ಭುವನಾನಿ ಸದ್ಯಃ |**
**ಪ್ರಬೋಧಯಂತೀರುಷಸಃ ಸಸಂತಂ ದ್ವಿಪಾಚ್ಚತುಷ್ಪಾಚ್ಚರಥಾಯ ಜೀವಂ ||**

(ಋ. ಸಂ. ೪-೫೧-೫)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಅವರ ರಥವು ಸಕಲ ದಿಕ್ಕುಗಳಲ್ಲಿಯೂ ಸಹ ಅಪ್ರತಿಹತವಾದ ಸಂಚಾರವುಳ್ಳದ್ದಾಗಿರುತ್ತದೆ ಮತ್ತು ಸ್ವೇಚ್ಛೆಯಾಗಿಯೂ ಸ್ವತಂತ್ರವಾಗಿಯೂ ದ್ಯಾವಾಪೃಥಿವಿಗಳ ಸುತ್ತಲೂ ಸಂಚರಿಸುತ್ತದೆ. ಎಂಬ ವಿಷಯವನ್ನು "**ಪ್ರ ವಾಂ ನಿಚೇರುಃ ಕಕುಹೋವಶಾँ ಅನು**" ಎಂಬ ವಾಕ್ಯದಿಂದ ತಿಳಿಸಿದೆ.

**ಕಕುಹಃ** ಎಂಬ ಪದವು **ಮಹನ್ನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಆದುದರಿಂದ **ರಥ**ಕ್ಕೆ ವಿಶೇಷಣವಾಗಿದ್ದು ಅತ್ಯಂತ ಪ್ರಶಸ್ತ್ಯವಾದ ರಥವೆಂದರ್ಥವಾಗಬಹುದು. ಅಥವಾ **ಕಕುಹಃ ಅನು** ದಶದಿಕ್ಕುಗಳಲ್ಲಿಯೂ (ಸ್ವತಂತ್ರವಾಗಿ ಸಂಚರಿಸಬಲ್ಲದು) ಎಂದರ್ಥಮಾಡಬಹುದು. **ಕಕುಭ, ಕಕುಹ** ಎಂಬೆರಡು ಪದಗಳೂ ಒಂದೇ ಧಾತುವಿನಿಂದ ನಿಷ್ಪನ್ನವಾದುವು ಎಂದು ನಿರುಕ್ತಕಾರರು ತಿಳಿಸಿದ್ದಾರೆ. ಈ ರಥದ ಸಂಚಾರಕಾಲದಲ್ಲಿ ಅದರ ಆಕರ್ಷಕವಾದ ವರ್ಣವನ್ನು ತಿಳಿಸಲು **ಪಿಶಂಗರೂಪಃ** ಎಂಬ ವಿಶೇಷಣವನ್ನು ಸೇರಿಸಿದೆ.

**ಪಿಶಂಗರೂಪಃ** ಎಂಬ ಪದಕ್ಕೆ ಸಾಯಣರು **ಹಿರಣ್ಯರೂಪಃ, ಪೀತವರ್ಣೋ ವಾ ಬಹುಭಿರಕ್ಷಾದ್ಯವಯವೈರ್ನಿರೂಪ್ಯಮಾಣೋ ವಾ ರಥಃ।** ಹೊಂಬಣ್ಣವುಳ್ಳ ಅಥವಾ ಶ್ವೇತಚ್ಛಾಯೆಯಿಂದ ಕೂಡಿದ ಹೊಂಬಣ್ಣವುಳ್ಳ ಅಥವಾ ಅನೇಕ ಇರಚಿಗಳಿಂದ ನಿರೂಪಿತವಾಗಿರುವ ರಥವೆಂದರ್ಥಮಾಡಿದ್ದಾರೆ. ಅಶ್ವಿನೀದೇವತೆಗಳ ಆವಿರ್ಭಾವ ಮತ್ತು ಸಂಚಾರಕಾಲಗಳನ್ನು ತಿಳಿದರೆ ಆಗ ಈ ವರ್ಣದ ಸ್ವರೂಪವು ತಿಳಿಯುತ್ತದೆ.

**ಕೃಷ್ಣಾ ಯದ್ಗೋಷ್ವರುಣೀಷು ಸೀದದ್ದಿವೋ ನಪಾತಾಶ್ವಿನಾ ಹುವೇ ವಾಂ ।**

(ಋ. ಸಂ. ೧೦-೬೧-೪)

**ಆ ತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಮೃಭವಶ್ಚಕ್ರುರಶ್ವಿನಾ ।**
**ಯಸ್ಯ ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ ವಿವಸ್ವತಃ ॥**

(ಋ. ಸಂ. ೧೦-೩೯-೧೨)

ಇತ್ಯಾದಿ ಋಕ್ಕುಗಳಲ್ಲಿ ಸೂರ್ಯೋದಯಾತ್ಪ್ರಾಕ್ ಉಷೋದೇವಿಯು ತನ್ನ ಪ್ರಭೆಯೊಡನೆ ಪ್ರಾಣಿಗಳಿಗೆಲ್ಲಾ ಹರ್ಷವನ್ನುಂಟುಮಾಡುತ್ತಲೂ ಕತ್ತಲನ್ನು ಚದುರಿಸುತ್ತಲೂ ಉದಯಿಸುತ್ತಿರುವಾಗ ಅಶ್ವಿನೀದೇವತೆಗಳೂ ಸಹ ಯಜ್ಞಭೂಮಿಗೆ ಹೋಗಲು ತಮ್ಮ ರಥವನ್ನು ಸಿದ್ಧಪಡಿಸುತ್ತಾರೆಂದು ತಿಳಿಸಿದೆ ಮತ್ತು ಅವರ ಆಗಮನಕ್ಕಾಗಿ ಪ್ರಾರ್ಥಿಸಿದೆ. ಈ ಕಾಲದಲ್ಲಿ ಉಷಸ್ಸಿನ ಉದಯವೂ, ಅಗ್ನಿಯ ಪ್ರಜ್ವಲನವೂ ಮತ್ತು ಅರುಣನ ಉದಯವೂ ಎಲ್ಲವೂ ಸೇರಿ ಅಶ್ವಿನೀದೇವತೆಗಳ ರಥವನ್ನು **ಪಿಶಂಗ**ರೂಪವುಳ್ಳದ್ದನ್ನಾಗಿ ಮಾಡುತ್ತವೆ. ಇದೇ ಸನ್ನಿವೇಶವನ್ನು ವರ್ಣಿಸುವಾಗ Max Mullar ಎಂಬ ಪಂಡಿತನು ಈ ರೀತಿ ಹೇಳಿದ್ದಾನೆ.

> " Thus the appearance of the Aswins, the kindling of the sacrificial fire, the break of dawn are synchronous with the first appearanee of the Sun's rays or more correctly the appearance of the light on the earth reflected from an immense number of meteors circulating around the Sun in or near the ecliptic and extending out somewhat beyond the orbit of the earth. Such meteors are more numerous precisely opposite to the sun and they cause the corralative and complementary phenomena of the reflection both thus giving rise to the laborate celestial Phenomena. connected by the Vedic Deities, the Asvinau. (ಅಶ್ವಿನೌ)
>
> (Science of Language. Vol. II.)

ಹೀಗೆ ವರ್ಣಿತವಾಗಿರುವ ಅಶ್ವಿನೀದೇವತೆಗಳ ರಥಕ್ಕೆ ಪಿಶಂಗರೂಪವನ್ನು ಕೊಡತಕ್ಕ ಸಕಲ ಪ್ರಭೆಗಳ ಮೇಳನವನ್ನೂ ಕೆಳಗೆ ಉದಾಹರಿಸುವ ಋಕ್ಕಿನಲ್ಲಿ ಈ ರೀತಿ ವರ್ಣಿಸಿದೆ.

**ಅಬೋಧ್ಯಗ್ನಿರ್ಜ್ಮ ಉದೇತಿ ಸೂರ್ಯೋ ವ್ಯುಷಾಶ್ಚಂದ್ರಾ ಮಹ್ಯಾವೋ ಅರ್ಚಿಷಾ ।**
**ಆಯುಕ್ಷಾತಾಮಶ್ವಿನಾ ಯಾತವೇ ರಥಂ ಪ್ರಾಸಾವಿದ್ದೇವಃ ಸವಿತಾ ಜಗತ್ಪೃಥಕ್ ॥**

(ಋ. ಸಂ. ೧-೧೫೭-೧)

ಈ ವಿಧವಾದ ಪ್ರಭೆಯೊಡನೆ ಸೇರಿ ಹೊಂಬಣ್ಣವನ್ನು ಪ್ರಕಾಶಪಡಿಸಿ ಜಗತ್ತನ್ನೇ ಆಕರ್ಷಿಸುವ ರಥದಲ್ಲಿ ಕುಳಿತು ಯಜ್ಞಗೃಹಕ್ಕೆ ಆಗಮಿಸಬೇಕೆಂದು ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿದೆ.

**ಸದನಾನಿ**—ಈ ಪದಕ್ಕೆ ಅಂತರಿಕ್ಷವೆಂಬರ್ಥವೂ ಉಂಟು. ಪ್ರಕೃತದಲ್ಲಿ ಯಜ್ಞಗೃಹವೆಂದೇ ತಾತ್ಪರ್ಯ.

**ರಜಾಂಸಿ**—ಈ ಪದಕ್ಕೆ ಇರತಕ್ಕ ವಿಶೇಷಾರ್ಥಗಳನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಲೋಕವೆಂದರ್ಥಮಾಡಿ ಅನಂತರ ಸಕಲಲೋಕದ ಪ್ರಜೆಗಳು ಎಂದರೆ ಯಜಮಾನರೂಪರಾದ ಪ್ರಜೆಗಳೆಂದು ತಿಳಿಸಿದೆ. **ರಜಾಂಸಿ ಲೋಕಾಃ । ಅತ್ರ ಲೋಕಶಬ್ದೋ ಜನವಾಚಕಃ । ತೇ ಯಜಮಾನರೂಪಾ ಜನಾ ಇತ್ಯರ್ಥಃ ॥** ಎಂದು ಸಾಯಣರು ಈ ಪದದ ತಾತ್ಪರ್ಯವನ್ನು ವಿವರಿಸಿದ್ದಾರೆ.

**ಪೀಪಯಂತ**—**ಓಪ್ಯಾಯಿ ವೃದ್ಧೌ** ಎಂಬ ವೃದ್ಧ್ಯರ್ಥದ ಪ್ಯೈ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಪದಕ್ಕೆ ವೃದ್ಧಿ, ಹರ್ಷ ಎಂಬ ಎರಡು ಅರ್ಥಗಳಲ್ಲಿಯೂ ಪ್ರಯೋಗವಿದೆ.

**ಪೀಪಾಯ ಸ ಶ್ರವಸಾ ಮರ್ತ್ಯೇಷು ಯೋ ಅಗ್ನಯೇ ದದಾಶ ವಿಪ್ರ ಉಕ್ಥೈಃ ।**
(ಋ. ಸಂ. ೬-೧೦-೩)

**ಉತ ವಾಂ ವಿಕ್ಷು ಮದ್ಯಾಸ್ವಂಧೋ ಗಾವ ಆಪಶ್ಚ ಪೀಪಯಂತ ದೇವೀಃ ॥**
(ಋ. ಸಂ. ೧-೧೫೩-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಎರಡರ್ಥವೂ ಸೂಚಿತವಾಗಿವೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಶ್ವಿನೀ ದೇವತೆಗಳನ್ನುದ್ದೇಶಿಸಿದ ಸ್ತುತಿಯೂ ಅನ್ನವೂ ಪುಷ್ಕಳವಾಗಿದ್ದು ಅವರಿಗೆ ಪೂರ್ಣವಾದ ಹರ್ಷವನ್ನು ಉಂಟುಮಾಡುತ್ತವೆಯೆಂದರ್ಥ.

**ಘೋಷೈಃ**—**ಘೋಷ** ಶಬ್ದವು **ವಾಙ್ನಾಮ**ಗಳಲ್ಲಿ ಪಠಿತವಾಗಿದೆ. (ನಿ. ೧-೧೧) ಈ ಪದಕ್ಕೆ ಸಾಧಾರಣವಾಗಿ ಶಬ್ದವೆಂದರ್ಥವಾದರೂ ಸಹ ಆ ಶಬ್ದದಲ್ಲೂ ಒಂದು ವಿಶಿಷ್ಟವಾದ ಶಕ್ತಿಯನ್ನು ತೋರಿಸುವ ಅರ್ಥದಲ್ಲಿ ಈ ಪದದ ಪ್ರಯೋಗವಿದೆ. ಸಂಹಿತೆಗಳಲ್ಲೂ ಬ್ರಾಹ್ಮಣಾದಿಗಳಲ್ಲೂ **ಘೋಷ** ಶಬ್ದಕ್ಕೆ ಅಲೌಕಿಕವಾದ ಶಕ್ತಿಯನ್ನೊಳಗೊಂಡ ಶಬ್ದವೆಂದೇ ಅರ್ಥವಾಗುತ್ತದೆ. **ವಿ ರೋದಸೀ ಅತಪದ್ಘೋಷ ಏಷಾಂ** (ಋ. ಸಂ. ೩-೩೧-೧೦); **ಅಯಾಮಿ ಘೋಷ ಇಂದ್ರ** (ಋ. ಸಂ. ೭-೨೩-೨) ಇತ್ಯಾದಿ ಸಂಹಿತಾವಾಕ್ಯಗಳಲ್ಲೂ, ಮತ್ತು,

**ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ।**
(ಐ. ಆ. ೧-೨-೨)

**ಮಯಿ ಸ್ತೋಭೋ, ಮಯಿ ಸ್ತೋಮೋ, ಮಯಿ ಶ್ಲೋಕೋ ಮಯಿ ಘೋಷೋ ಮಯಿ ಯಶಃ ।**
(ಐ. ಆ. ೫-೧-೫)

**ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ ತಸ್ಯೈಷ ಘೋಷೋ ಭವತಿ ।**
(ಶ. ಬ್ರಾ. ೧೪-೮-೧೦-೧)

**ಸರ್ವೇ ಸ್ವರಾ ಘೋಷವಂತೋ ಬಲವಂತೋ ವಕ್ತವ್ಯಾಃ ।**
(ಛಾ. ಉ. ೨-೨೨-೫)

ಇತ್ಯಾದಿ ಕಡೆಗಳಲ್ಲೂ ಅಲೌಕಿಕವಾದ ಮತ್ತು ಶಕ್ತಿಯುತವಾದ ಶಬ್ದವೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ಸ್ತುತಿರೂಪವಾದ ಶಬ್ದವೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಕಕುಹಃ**—ಕಕುಪ್‌ಶಬ್ದ. ಛಾಂದಸವಾಗಿ ಪಕಾರಕ್ಕೆ ಹಕಾರಾದೇಶ ಬಂದಿದೆ. ದ್ವಿತೀಯಾ ಬಹುವಚನಾಂತರೂಪ.

**ಪಿಶಂಗರೂಪಃ**—**ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಗಮ್ಯಾಃ**—ಗಮ್ಲೃ ಗತೌ. ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಿಙ್ ಪ್ರಥಮಪುರುಷ ಏಕವಚನಕ್ಕೆ ಮಧ್ಯಮಪುರುಷ ಏಕವಚನ ಪ್ರತ್ಯಯ ಬಂದಿದೆ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಲಿಙಿಗೆ ಯಾಸುಟಾಗಮ. ತಿಙಂತ ನಿಘಾತಸ್ವರ ಬರುತ್ತದೆ.

**ಪೀಪಯಂತ**—ಓಪ್ಯಾಯೀ ವೃದ್ಧೌ. ಧಾತು. ಛಾಂದಸವಾಗಿ ಧಾತುವಿಗೆ ಪೀ ಭಾವ. ಚ್ಲಿಗೆ ಚಙಾದೇಶ ಬಂದಾಗ ದ್ವಿತ್ವಾದಿ. **ಬಹುಲಂ ಛಂದಸ್ಯಮಾಙ್**—ಎಂಬುದರಿಂದ ಅಡಾಗಮ ಬರುವುದಿಲ್ಲ. ವ್ಯತ್ಯಯದಿಂದ ಣಿಚ್ ಸ್ವರ ಉಳಿಯುತ್ತದೆ.

**ಅಶ್ವಿನಾ**—**ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. ಆಮಂತ್ರಿತ ನಿಘಾತ ಸ್ವರ ಬರುತ್ತದೆ.

**ಘೋಷೈಃ**—ಘುಷಿರ್ ವಿಶಬ್ದನೇ. ಧಾತು. ಘಞ್ ಪ್ರತ್ಯಯ. **ಪುಗಂತ ಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

**ಪ್ರ ವಾಂ ಶರದ್ವಾನ್ವೃಷಭೋ ನ ನಿಷ್ಷಾಟ್ ಪೂರ್ವೀರಿಷಶ್ಚರತಿ ಮಧ್ವ ಇಷ್ಣನ್ ।**
**ಏವೈರನ್ಯಸ್ಯ ಪೀಪಯಂತ ವಾಜೈರ್ವೇಷಂತೀರೂರ್ಧ್ವಾ ನದ್ಯೋ ನ ಆಗುಃ ॥ ೬ ॥**

॥ ಪದಪಾಠಃ ॥

**ಪ್ರ । ವಾಂ । ಶರತ್ಽವಾನ್ । ವೃಷಭಃ । ನ । ನಿಷ್ಷಾಟ್ । ಪೂರ್ವೀಃ । ಇಷಃ । ಚರತಿ । ಮಧ್ವಃ । ಇಷ್ಣನ್ ।**
**ಏವೈಃ । ಅನ್ಯಸ್ಯ । ಪೀಪಯಂತ । ವಾಜೈಃ । ವೇಷಂತೀಃ । ಊರ್ಧ್ವಾಃ । ನದ್ಯಃ । ನಃ । ಆ । ಅಗುಃ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವಯೋರನ್ಯತಮೋ ಮಧ್ಯಮಸ್ಥಾನಃ ಶರದ್ವಾಞ್ಛರಣವಾನ್ ಮೇಘವೃಷ್ಟಪರ್ಣಾದೀನಾಂ ವಿಶರಣವಾನ್ । ಅಥವಾ ಬಹುಸಂವತ್ಸರಃ ಪೂರ್ವತನೋ ನಿತ್ಯ ಇತ್ಯರ್ಥಃ । ವೃಷಭೋ**

**ನ । ವರ್ಷಿತೈವೇಂದ್ರಃ । ಸ ಇವ ಶತ್ರೂಣಾಂ ನಿಷ್ಪಾಣಿಃಸಾರಯಿತಾ ಸನ್ ಪೂರ್ವೀರ್ಬಹ್ವೀಃ ಪುರಾತನೀರ್ವೇಷೋಽನ್ನಾನಿ ಸಸ್ಯಾದೀನ್ಯುದ್ದಿಶ್ಯ ಪ್ರ ಚರತಿ । ಪ್ರಕರ್ಷೇಣ ಗಚ್ಛತಿ । ಮಧ್ಯಮಸ್ಥಾನಶ್ಚಂದ್ರ ಇತಿ ಪಕ್ಷೇ ಶರದ್ವಾಞ್ಛರತ್ಕಾಲವಾನ್ । ತಸ್ಮಿನ್ನೃತೌ ಹಿ ಚಂದ್ರಃ ಸಂನದ್ಧೋ ಭವತಿ । ತೇನ ಚ ತೃಣಗುಲ್ಮೌಷಧ್ಯಾದೀನಿ ವರ್ಧಂತೇ । ಸ ಕಿಮರ್ಥಮೇವಂ ಕರೋತೀತಿ ಉಚ್ಯತೇ । ಮಧ್ವ ಇಷ್ಣನ್ ಮಧುನೋ ಮಧುಸದೃಶಸ್ಯ ಹವಿಷಃ ॥ ಕರ್ಮಣಿ ಷಷ್ಠೀ ॥ ಹವಿರಿಚ್ಛನ್ । ತದರ್ಥಮೇವಂ ಕರೋತಿ । ತಥಾನ್ಯಸ್ಯೋತ್ತಮಾದಿತ್ಯಸ್ಯೈನ್ಯೈಃ ಕಾಮ್ಯೈರ್ಗಮನೈರ್ವಾ ನಿಮಿತ್ತಭೂತೈಃ ಪೀಪಯಂತ । ಆಪ್ಯಾಯಯಂತಿ ಹವಿರ್ಭಿರ್ಯಜಮಾನಾಃ । ತುಷ್ಟೇನ ತೇನ ಪ್ರೇರಿತಾ ವೇಷಂತೀರ್ವ್ಯಾಪಯಂತೀರೂಧ್ವಾ ಉನ್ನತಾ ಉತ್ತೀರಾ ನದ್ಯೋ ನ ನದನಶೀಲಾ ಯಥಾ ನೋಽಸ್ಮದರ್ಥಮಾಗುಃ ಆಗಚ್ಛಂತಿ ॥**

॥ ಪ್ರತಿಪದಾರ್ಥ ॥

**(ಹೇ ಅಶ್ವಿನೌ**— ಎಲೈ ಅಶ್ವಿನೀದೇವತೆಗಳೇ **।) ಶರದ್ವಾನ್**— ಮೇಘ, ವೃಕ್ಷ, ಪರ್ಣಾದಿಗಳನ್ನು ಚದುರಿಸುವವನೂ, ಅಥವಾ ಶರತ್ಕಾಲವಿಶಿಷ್ಟನೂ । **ವೃಷಭಃ ನ**— ಕಾಮವರ್ಷಕನಾದ ಇಂದ್ರನಂತೆ । **ನಿಷ್ಪಾಟ್**— ಶತ್ರುನಿರಸನಮಾಡುವವನೂ । **ವಾಂ**— ನಿಮ್ಮಿಬ್ಬರಲ್ಲಿ (ಒಬ್ಬನೂ ಆದ ಚಂದ್ರನು) **ಪೂರ್ವೀಃ**— ಅನೇಕ ವಿಧವಾದ ಅಥವಾ ಪುರಾತನವಾದ । **ಇಷಃ**— ಸಸ್ಯರೂಪವಾದ ಅನ್ನಗಳನ್ನೂ ಉದ್ದೇಶಿಸಿ । **ಮಧ್ವಃ**— ಮಧುಸದೃಶವಾದ ಹವಿಸ್ಸನ್ನು । **ಇಷ್ಣನ್**— ಇಚ್ಛಿಸುವವನಾಗಿ । **ಪ್ರ ಚರತಿ**— ಹೆಚ್ಚಾಗಿ ಸಂಚರಿಸುತ್ತಾನೆ । (**ತಥಾ**— ಹಾಗೆಯೇ) **ಅನ್ಯಸ್ಯ**— ಉತ್ತಮಲೋಕದ ಆದಿತ್ಯನ । **ಏನ್ಯೈಃ**— ಇಚ್ಛೆಗಳಿಂದ ಅಥವಾ ಗಮನಗಳಿಂದ (ಅವುಗಳ ಉದ್ದೇಶದಿಂದ)। **ವಾಜೈಃ ಪೀಪಯಂತ**— ಹವಿರಾದಿಗಳಿಂದ (ಅವನನ್ನು) ತೃಪ್ತಿಪಡಿಸುತ್ತಾರೆ (ತೃಪ್ತನಾದ ಅವನಿಂದ ಪ್ರೇರಿತನಾಗಿ) । **ವೇಷಂತೀಃ**— ವ್ಯಾಪಕಗಳಾದ (ಸತ್ಫಲಗಳು) । **ಊಧ್ವಾಃ**— ದಡವನ್ನು ಮೀರಿ ಹರಿಯುತ್ತಿರುವ । **ನದ್ಯಃ (ನ)**— ನದಿಗಳಂತೆ । **ನಃ**— ನಮಗೋಸ್ಕರ । **ಆ ಗುಃ**— ಬರುತ್ತವೆ.

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ, ಮೇಘಾದಿಗಳನ್ನು ಚದುರಿಸುವವನೂ (ಶರತ್ಕಾಲೀನನೂ), ಇಂದ್ರನಂತೆ ಶತ್ರು ನಿರಸನಮಾಡುವವನೂ, ನಿಮ್ಮಿಬ್ಬರಲ್ಲಿ ಒಬ್ಬನೂ ಆದ ಮಧ್ಯಮಲೋಕದ ಚಂದ್ರನು ಹವಿರಾದ್ಯಪೇಕ್ಷಿಯಾಗಿ, ಪ್ರಭೂತಾನ್ನವನ್ನೂ ಅನುಗ್ರಹಿಸುತ್ತಾ ಸಂಚರಿಸುತ್ತಾನೆ, ಯಾಗಕರ್ತೃಗಳು ಮತ್ತೊಬ್ಬನನ್ನು ಹವಿರಾದಿಗಳಿಂದ ತೃಪ್ತಿಪಡಿಸುವುದರಿಂದ ಅವನಿಂದ ನದಿಯ ನೀರು ದಡವನ್ನು ಮೀರಿ ಹರಿಯುವಂತೆ ಸತ್ಫಲಗಳು ಪ್ರಾಪ್ಯವಾಗುತ್ತವೆ.

## English Translation.

(One of you), the disperser (of the clouds), like Indra, the annihilator (of his foes), desirous of the oblation, proceeds, (bestowing) abundant food. (Devout worshippers) cherish with (sacrificial) viands, (the faculties) of the other, for the sake of favours, wich flow upon us like swelling rivers.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳಲ್ಲಿ ಒಬ್ಬ ದೇವತೆಗೆ **ಶರದ್ವಾನ್** ಎಂಬ ವಿಶೇಷಣವಿದೆ. ಈ ವಿಶೇಷಣಕ್ಕೆ ಸಾಯಣರು ಎರಡು ವಿಧವಾಗಿ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ, **ಶರದ್ವಾನ್ ಶರಣವಾನ್ ಮೋಘವೃಕ್ಷಪರ್ಣಾದೀನಾಂ ವಿಶರಣವಾನ್** ಎಂದರೆ ಕಾಲಕ್ಕೆ ತಕ್ಕಂತೆ ವೃಕ್ಷ ಮತ್ತು ಪರ್ಣಾದಿಗಳನ್ನು ಪೂರ್ಣಮಾಡಿ ಚದುರಿಸುವವನು ಎಂದರ್ಥವಾಗುತ್ತದೆ. ಈ ಅರ್ಥವನ್ನು ವಿವರಿಸುತ್ತಾ ನಿರುಕ್ತಕಾರರು ಈ ಪದಕ್ಕೆ ಈ ರೀತಿ ನಿರ್ವಚನವನ್ನು ಹೇಳಿದ್ದಾರೆ.

**ಶರಚ್ಛ್ರೃತಾ ಅಸ್ಯಾಮೋಷಧಯೋ ಭವಂತಿ । ಶೀರ್ಣಾ ಆಪ ಇತಿ ವಾ ।**

(ನಿ. ೪-೨೫)

ಈ ಕಾಲದಲ್ಲಿ ಓಷಧಿಗಳು ಪಕ್ವವಾಗುವುವು ಅಥವಾ ನದೀಪ್ರವಾಹಗಳು ಇಳಿದಿರುವುವು ಆದುದರಿಂದ ಶರತ್ಕಾಲವೆಂದು ಹೆಸರು. ಚಂದ್ರನು ಈ ಎರಡು ಕಾರ್ಯಗಳಿಗೂ ಪ್ರೇರಕನಾದುದರಿಂದ ಇಲ್ಲಿ **ಶರದ್ವಾನ್** ಎಂಬ ವಿಶೇಷಣವು ಅಶ್ವಿನೀ ದೇವತೆಗಳಲ್ಲಿ ಚಂದ್ರರೂಪನಾದ ದೇವತೆಯ ಪರವಾಗಿ ಉಪಯೋಗಿಸಲ್ಪಟ್ಟಿದೆ. ಅಥವಾ ಎರಡನೆಯ ಅರ್ಥದಂತೆ **ಬಹುಸಂವತ್ಸರಃ ಪೂರ್ವತನೋ ನಿತ್ಯಃ ।** ಅನೇಕ ಸಂವತ್ಸರಗಳುಳ್ಳವನು ಎಂದರೆ, ನಿತ್ಯನಾಗಿರುವವನು ಎಂದಾಗುತ್ತದೆ. ಈ ಅರ್ಥವನ್ನು ಹೇಳುವುದಕ್ಕೆ ಋಕ್ಸಂಹಿತಾವಾಕ್ಯಗಳನ್ನೇ ಆಧಾರವಾಗಿ ತೆಗೆದುಕೊಳ್ಳಬಹುದು. ಉದಾಹರಣೆಗೆ—

**ತಚ್ಚಕ್ಷುರ್ದೇವಹಿತಂ ಶುಕ್ರಮುಚ್ಚರತ್ ।**
**ಪಶ್ಯೇಮ ಶರದಃ ಶತಂ ಜೀವೇಮ ಶರದಃ ಶತಂ ॥**

(ಋ. ಸಂ. ೭-೬೬-೧೬)

**ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ ।**

(ಋ. ಸಂ. ೧೦-೮೫-೩೯)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಶರದ್** ಎಂಬುದಕ್ಕೆ ಶರದಾತ್ಮಕವಾದ ವತ್ಸರವೆಂದರ್ಥ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಬಹುಸಂವತ್ಸರರೂಪವಾದ ಕಾಲವುಳ್ಳವನು ಎಂದರ್ಥಮಾಡಿದ್ದಾರೆ. ಎಂದರೆ, ನಿತ್ಯನು ಎಂದು ತಾತ್ಪರ್ಯವು.

**ನಿಷ್ಷಾಟ್**—(ಶತ್ರೂಣಾಂ ನಿಃಸಾರಯಿತಾ) ಶತ್ರುಗಳನ್ನು ಸದೆಬಡಿದು ಓಡಿಸುವವನು ಎಂದರ್ಥ. ನಿರುಕ್ತಕಾರರೂ ಸಹ ಈ ಪದದ ಪ್ರಯೋಗವಿರುವ,

**ಅಭೀ೩ ದಮೇಕಮೇಕೋ ಅಸ್ಮಿ ನಿಷ್ಷಾಳಭೀ ದ್ವಾ ಕಿಮು ತ್ರಯಃ ಕರಂತಿ ।**
**ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ ॥**

(ಋ. ಸಂ. ೧೦-೪೮-೭)

ಎಂಬ ಋಕ್ಕನ್ನುದಾಹರಿಸಿ **ನಿಷ್ಷಹಮಾಣಃ ಶತ್ರೂನಭಿಭವಾಮಿ ।** ಶತ್ರುಗಳನ್ನು ಮರ್ದನಮಾಡುತ್ತಾ ಅವರನ್ನು ಸೋಲಿಸುತ್ತೇನೆ ಎಂಬರ್ಥವೆಂದು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶತ್ರುನಿರಸನ ಮಾಡ ತಕ್ಕವನೆಂದರ್ಥ.

**ವಿನ್ಯೈಃ— ಕಾನ್ಯೈರಯನ್ಯೈರವನ್ಯೈರ್ವಾ,** (ನಿ. ೧೨-೨೧) ಸ್ವತಂತ್ರವಾದುದೂ, ತಡೆಯಿಲ್ಲದುದೂ ಆದ ಸಂಚಾರವನ್ನು ತೋರಿಸುತ್ತಾ ಈ ಪದವು ಸಾಧಾರಣವಾಗಿ ಯಾವಾಗಲೂ ಸಂಚಾರ ಸ್ವಭಾವವುಳ್ಳವರೂ, ಇಂದ್ರನಿಗೆ ಮಿತ್ರಭೂತರೂ ಆದ ಮರುತ್ತುಗಳಿಗೆ ವಿಶೇಷಣವಾಗಿರುವುದು. ಆದರೆ ಪ್ರಕೃತವಾದ ಋಕ್ಕಿನಲ್ಲಿ ಆದಿತ್ಯರೂಪನಾದ (ಅಶ್ವಿನೀದೇವತೆಗಳಲ್ಲಿ ಒಬ್ಬನಾದ) ದೇವತೆಯ ಅಶ್ವಗಳಿಗೆ ವಿಶೇಷಣವಾಗಿದೆ.

**ಪೀಪಯಂತ—** **ಪ್ಯೈ** ಧಾತುವಿನಿಂದ ಈ ಪದವು ನಿಷ್ಪನ್ನವಾಗಿ ವೃದ್ಧಿಪಡಿಸು ಅಥವಾ ವ್ಯಕ್ತಪಡಿಸು ಎಂಬೆರಡು ಅರ್ಥಗಳನ್ನೂ ಕೊಡುವುದೆಂಬುದನ್ನು ಉದಾಹರಣೆಗಳೊಡನೆ ವಿವರಿಸಿ ಹಿಂದಿನ ಋಕ್ಕಿನಲ್ಲಿ ಇದರ ವಿಶೇಷಾರ್ಥಗಳನ್ನು ಹೇಳಿದೆ.

**ವೇಷಂತೀಃ—** ವ್ಯಾಪ್ತ್ಯರ್ಥಕವಾದ **ವಿಷ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಸಾಧಾರಣವಾಗಿ ಈ ಪ್ರಯೋಗವಿರುವೆಡೆಗಳಲ್ಲೆಲ್ಲಾ ಎರಡರ್ಥವು ಮಾತ್ರ ಪ್ರಧಾನವಾಗಿದೆ.

**ಅವ ಸ್ಮ ಯಸ್ಯ ವೇಷಣೇ ಸ್ವೇದಂ ಪಥಿಷು ಜುಹ್ವತಿ ।**
**ಅಭೀಮಹ ಸ್ವಜೇನ್ಯಂ ಭೂಮಾ ಪೃಷ್ಠೇವ ರುರುಹುಃ ॥**
(ಋ. ಸಂ. ೫-೭-೫)

**ಇತ್ಯಾದಿ** ಸ್ಥಳಗಳಲ್ಲಿ **ಪರಿಚರ್ಯೆ** ಕರ್ಮ ಎಂದರೆ ಪೂಜಾದಿ ಕಾರ್ಯಗಳೆಂದರ್ಥವೂ, ಪ್ರಕೃತವಾದ ಋಕ್ಕಿನಲ್ಲಿ ವ್ಯಾಪಿಸು ಎಂಬರ್ಥವೂ ಆಗುತ್ತದೆ. ಆದರೆ,

**ನಿ ಯದ್ಯುವೇಥೇ ನಿಯುತಃ ಸುದಾನೂ ಉಪ ಸ್ವಧಾಭಿಃ ಸೃಜಥಃ ಪುರಂಧಿಂ ।**
**ಪ್ರೇಷದ್ವೇಷದ್ವಾತೋ ನ ಸೂರಿರಾ ಮಹೇ ದದೇ ಸುವ್ರತೋ ನ ವಾಜಂ ॥**
(ಋ. ಸಂ. ೧-೧೮೦-೬)

ಎಂಬಲ್ಲಿ **ವಿಷ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳಿದರೆ ಆಗ ವ್ಯಾಪಿಸುವುದು ಎಂಬರ್ಥವೂ, **ಇಷ್** ಧಾತುವಿನಿಂದ ನಿಷ್ಪನ್ನವಾಗಿದ್ದರೆ ಇಚ್ಛಿಸು ಎಂಬರ್ಥವೂ ಆಗುತ್ತದೆಂದು ಸಾಯಣರು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಸರ್ವತ್ರ ವ್ಯಾಪಿಸುವುದು ಎಂಬುದೇ ಅರ್ಥ. ಸತ್ಫಲಗಳು ಯಜ್ಞಕರ್ತನಲ್ಲಿಗೆ ಪುಷ್ಕಲವಾಗಿ ಬಂದು ಸೇರುವುದು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಶರದ್ವಾನ್—** ಶರದಃ ಅಸ್ಯ ಸಂತಿ ಇತಿ ಶರದ್ವಾನ್. ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ—** ಎಂಬುದರಿಂದ ಮಕಾರಕ್ಕೆ ವತ್ವ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ನಿಷ್ಷಾಟ್—** ಷಹ ಮರ್ಷಣೇ. ಧಾತು. **ಛಂದಸಿ ಸಹಃ** (ಪಾ. ಸೂ. ೩-೨-೬೩) ಎಂಬುದರಿಂದ ಣ್ವಿ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಧಾತುವಿನ ಉಪಧೆಗೆ ವೃದ್ಧಿ. **ಸಹೇಃ ಸಾಡಃ ಸಃ** (ಪಾ. ಸೂ. ೮-೩-೫೬) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಧ್ವಃ— ಜಸಾದಿಷು ಛಂದಸಿವಾ ವಚನಂ** ಎಂಬ ವಚನದಿಂದ ಗುಣಾದಿಗಳು ಬರುವುದಿಲ್ಲ. ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಇಷ್ಣನ್**—ಇಷು ಇಚ್ಛಾಯಾಂ ಧಾತು. ಕ್ರ್ಯಾದಿ. ಲಟಿಗೆ ಶತ್ರಾದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಪ್ರತ್ಯಯಕ್ಕೆ ಙಿತ್ವಾತಿ ದೇಶವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಷಕಾರ ನಿಮಿತ್ತವಿರುವುದರಿಂದ **ರಷಾಭ್ಯಾಂ ಣೋಣಃ ಸಮಾನಪದೇ** ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಏನ್ಯೈಃ**—ಇಣ್ ಗತೌ. ಧಾತು. **ಇಣ್‌ಶೀಭ್ಯಾಂ ವನ್** (ಉ. ಸೂ. ೧-೧೫೦) ಎಂಬುದರಿಂದ ವನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾ**—ಎಂಬುದರಿಂದ ಧಾತುವಿಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ವೇಷಂತೀಃ**—ವೀ ಗತ್ಯಾದಿಷು. ಧಾತು. ಲಟಿಗೆ ಶತ್ರಾದೇಶ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣ ಸ್ವಾರಸ್ಯದಿಂದ ಸಿಪ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ನುಮಾಗಮ. **ಸುಪಾಂ ಸುಲುಕ್**—ಎಂಬುದರಿಂದ ಜಸ್ ಪರವಾದಾಗ ಪೂರ್ವಸವರ್ಣದೀರ್ಘ.

**ಆಗುಃ**—ಇಣ್ ಗತೌ. ಧಾತು. ಛಾಂದಸವಾಗಿ ಲುಙ್. **ಇಣೋ ಗಾ ಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಗಾದೇಶ. ಚ್ಲಿಗೆ ಸಿಚ್ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. **ಆತಃ** ಎಂಬುದರಿಂದ ಝಿಗೆ, ಜುಸಾದೇಶ. ಪರರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಅಸರ್ಜಿ ವಾಂ ಸ್ಥವಿರಾ ವೇಧಸಾ ಗೀರ್ಬಾಳ್ಹೇ ಅಶ್ವಿನಾ ತ್ರೇಧಾ ಕ್ಷರಂತೀ ।
ಉಪಸ್ತುತಾವವತಂ ನಾಧಮಾನಂ ಯಾಮನ್ನಯಾಮಞ್ಛೃಣುತಂ ಹವಂ ಮೇ ॥

॥ ಪದಪಾಠಃ ॥

ಅಸರ್ಜಿ । ವಾಂ । ಸ್ಥವಿರಾ । ವೇಧಸಾ । ಗೀಃ । ಬಾಳ್ಹೇ । ಅಶ್ವಿನಾ । ತ್ರೇಧಾ । ಕ್ಷರಂತೀ ।
ಉಪಽಸ್ತುತೌ । ಅವತಂ । ನಾಧಮಾನಂ । ಯಾಮನ್ । ಅಯಾಮನ್ । ಶೃಣುತಂ । ಹವಂ । ಮೇ ॥ ೭ ॥

॥ ಸಾಯಣಭಾಷ್ಯಂ ॥

ಹೇ ವೇಧಸಾ ವಿಧಾತಾರಾವಶ್ವಿನೌ ವಾಂ ಯುವಯೋರ್ಬಾಳ್ಹೇ ದೃಢೇ ಸ್ಥೈರ್ಯೇ ನಿಮಿತ್ತ-ಭೂತೇ ಸತಿ ಗೀಃ ಸ್ತುತಿರೂಪಾ ವಾಗಸರ್ಜಿ । ಸೃಜ್ಯತೇ । ಕೀದೃಶೀ ಸಾ । ಸ್ಥವಿರಾತ್ಯಂತಂ ಸ್ಥಿರಾ ನಿತ್ಯಾ

ವೇದಮಯೀ ತ್ರೇಧಾ ಮಂತ್ರಾದಿಭೇದೇನ ತ್ರಿಪ್ರಕಾರಾ ಕ್ಷರಂತೀ ಯುವಾಂ ಗಚ್ಛಂತೀ। ಈದೃಶೀ ಸ್ತುತಿಃ ಕೃತೇತ್ಯರ್ಥಃ। ತಥೋಪಸ್ತುತೌ ಸಂತೌ ನಾಧಮಾನಮಭಿಮತಫಲಂ ಯಾಚಮಾನಮವತಂ। ರಕ್ಷತಂ ತರ್ಪಯತಂ ವಾ। ಕಿಂಚ ಯಾಮನ್ಗಮನೇಽಯಾಮನ್ನಗಮನೇ ಚ ಹವಮಾಹ್ವಾನಂ ಶೃಣುತಂ॥

॥ ಪ್ರತಿಪದಾರ್ಥ ॥

**ಹೇ ವೇಧಸಾ**—ವಿಧಾತೃ (ಸ್ರಷ್ಟೃ) ಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರ। **ಬಾಳ್ಹೇ**—ಸ್ಥಿರವಾದ (ದೃಢವಾದ) ಅನುಗ್ರಹದ ಉದ್ದೇಶದಿಂದ। **ಸ್ಥವಿರಾ** — ಅತ್ಯಂತಸ್ಥಿರವೂ (ನಿತ್ಯವೂ ಅಥವಾ ವೇದಮಯವೂ) । **ತ್ರೇಧಾ**—ಮಾತ್ರಾದಿ ಭೇದದಿಂದ ತ್ರಿವಿಧವೂ । **ಕ್ಷರಂತೀ**—ನಿಮ್ಮನ್ನುದ್ದೇಶಿಸಿ ಗಮಿಸುವುದೂ ಆದ । **ಗೀಃ**—ಸ್ತುತಿಯು । **ಅಸರ್ಜಿ**—(ನಮ್ಮಿಂದ) ಸೃಷ್ಟವಾಗಿದೆ । **ಉಪಸ್ತುತೌ**—(ಹಾಗೆ) ಸ್ತುತರಾದವರಾಗಿ । **ನಾಧಮಾನಂ**—ಅಭಿಮತಫಲವನ್ನು ಯಾಚಿಸುತ್ತಿರುವನನ್ನನ್ನು । **ಅವತಂ**—ರಕ್ಷಿಸಿ ಅಥವಾ (ಫಲದಾನದಿಂದ) ತೃಪ್ತಿಪಡಿಸಿ । (**ಕಿಂಚ**—ಮತ್ತು) । **ಯಾಮನ್**—ಗಮನಕಾಲದಲ್ಲಿಯೂ । **ಅಯಾಮನ್**—ಸಂಚರಿಸದೇ ಇರುವ ಕಾಲದಲ್ಲಿಯೂ । **ಮೇ**—ನನ್ನ । **ಹವಂ**—ಸ್ತುತಿಪೂರ್ವಕ ಆಹ್ವಾನವನ್ನು । **ಶ್ರುಣುತಂ**—ಕೇಳಿ.

॥ ಭಾವಾರ್ಥ ॥

ಎಲೈ ಸೃಷ್ಟಿಕರ್ತೃಗಳಾದ ಅಶ್ವಿನೀದೇವತೆಗಳೇ, ವೇದಮಯವೂ, ಮಂತ್ರಾದಿರೂಪವಾಗಿ ತ್ರಿವಿಧವೂ, ನಿಮ್ಮನ್ನೇ ಸೇರುವುದೂ, ದೃಢವಾದ (ಸ್ಥಿರವಾದ) ನಿಮ್ಮನುಗ್ರಹದ ಉದ್ದೇಶದಿಂದ ಪ್ರಯುಕ್ತವೂ ಆದ ಈ ನಮ್ಮ ಸ್ತುತಿಯಿಂದ ತೃಪ್ತರಾಗಿ, ಯಾಚಕನಾದ ನನಗೆ ಅಭಿಮತದಾನಮಾಡಿ, ನನ್ನನ್ನು ರಕ್ಷಣೆಮಾಡಿ; ಮತ್ತ ಸಂಚಾರ ವಿಶ್ರಾಂತಿಗಳೆರಡರಲ್ಲೂ ನಮ್ಮ ಸ್ತುತಿಪೂರ್ವಕ ಆಹ್ವಾನವನ್ನು ಮನ್ನಿಸಿ.

## English Translation.

Ashwins, creators, the perpetual threefold hymn, addressed to you, has been uttered, (to seeure) your steady (favour): thus glorified, protect him who solicits (your bounty), and, whether moving or resting, hear his invocation.

॥ ವಿಶೇಷವಿಷಯಗಳು ॥

**ವೇಧಸಾ—ವಿಧಾತಾರೌ ಅಶ್ವಿನೌ** ಎಂದು ಅಶ್ವಿನೀದೇವತೆಗಳನ್ನು ಈ ಋಕ್ಕಿನಲ್ಲಿ ಸೃಷ್ಟಿಕರ್ತರೆಂದು ಹೇಳಿದೆ. **ವೇಧಸ್** ಶಬ್ದವು ನಿರುಕ್ತದಲ್ಲಿ **ಮೇಧಾವಿನಾಮಗಳಲ್ಲಿ** ಪಠಿತವಾಗಿದೆ. (ನಿ. ೩-೧೫). ಮೇಧಾವಿಯಾದ ಯಜಮಾನನಿಗೆ ಈ ಪದವು ಅನೇಕ ಕಡೆಗಳಲ್ಲಿ ವಿಶೇಷಣವಾಗಿರುತ್ತದೆ. ಒಂದೊಂದು ಕಡೆಗಳಲ್ಲಿ ಉತ್ಪಾದಕನು ಎಂಬರ್ಥವಿದ್ದರೂ ಸಹ ಯಜ್ಞಫಲಕ್ಕೆ ಉತ್ಪಾದಕನು ಎಂದಾಗಬಹುದೇ ಹೊರತು ಜಗತ್ಸೃಷ್ಟಿಕರ್ತನಪರವಾಗಿ ಈ ಪದದ ಪ್ರಯೋಗವು ಇರುವಂತೆ ಕಾಣುವುದಿಲ್ಲ. ಆದರೆ,

**ಯಃ ಪೂರ್ವ್ಯಾಯ ವೇಧಸೇ ನವೀಯಸೇ ಸುಮಜ್ಜಾನಯೇ ವಿಷ್ಣವೇ ದದಾಶತಿ ।**
**ಯೋ ಜಾತಮಸ್ಯ ಮಹತೋ ಮಹಿ ಬ್ರವತ್ಸೇದು ಶ್ರವೋಭಿರ್ಯುಜ್ಯಂ ಚಿದಭ್ಯಸತ್ ॥**

(ಋ. ಸಂ. ೧-೧೫೬-೨)

ಎಂಬಲ್ಲಿ ಮಾತ್ರ ಜಗತ್ಸೃಷ್ಟಿಕರ್ತನ ಸ್ವರೂಪವನ್ನು ವರ್ಣಿಸಿರುವುದರಿಂದ **ವೇಧಸೇ** ಎಂಬ ಪದಕ್ಕೆ **ವಿವಿಧ ಜಗತ್ಕರ್ತ್ರೇ** ಎಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಪರವಾಗಿರುವಾಗಲೂ ಸಹ **ವಿಧಾತಾರೌ ಅಶ್ವಿನೌ** ಎಂದರ್ಥಮಾಡಿದೆ ಅಶ್ವಿನೀ ದೇವತೆಗಳಿಗೂ ಜಗತ್ಸೃಷ್ಟಿಗೂ ಏನು ಸಂಬಂಧವುಂಟು ಎಂದರೆ ಅದಕ್ಕೆ ಶ್ರುತಿವಾಕ್ಯದ ಆಧಾರದ ಮೇಲೆ ಜಗತ್ಸೃಷ್ಟಿಗೂ ಅವರಿಗೂ ಸಾಕ್ಷಾತ್ಸಂಬಂಧವುಂಟೆಂದು ಹೇಳಬಹುದು. ಹೇಗೆಂದರೆ,

……………**ಏತದ್ವೈ ಪ್ರಜಾಪತಿರೇತಸ್ಮಿನ್ನಾತ್ಮನಃ ಪ್ರತಿಹಿತೇऽಕಾಮಯತ ಪ್ರಜಾಃ ಸೃಜೇಯ ಪ್ರಜಾಯೆಯೇತಿ ಸ ಋತುಭಿರದ್ಭಿಃ ಪ್ರಾಣೈಃ ಸಂವತ್ಸರೇಣಾಶ್ವಿಭ್ಯಾಗ್ಂಸಯುಗ್ಭೂತ್ವೈತಾಃ ಪ್ರಜಾಃ ಪ್ರಾಜನಯತ್ತಥೈವೈತದ್ಯಜಮಾನ ಏತಾಭಿರ್ದೇವತಾಭಿಃ ಸಯುಗ್ಭೂತ್ವೈತಾಃ ಪ್ರಜಾಃ ಪ್ರಜನಯತಿ ।** ……………**ಅಗ್ನಿರ್ವೈಶ್ವಾನರಃ ಸಂವತ್ಸರೇಣ ವೈ ಸಯುಗ್ಭೂತ್ವಾ ಪ್ರಾಜನಯದಶ್ವಿನಾಧ್ವರ್ಯೂ ಸಾದಯತಾಮಿಹ ತ್ವೇತ್ಯಶ್ವಿಭ್ಯಾಂ ವೈ ಸಯುಗ್ಭೂತ್ವಾ ಪ್ರಾಜನಯತ್ ॥**

(ಶ. ಬ್ರಾ. ೮-೨-೨-೭ ರಿಂದ ೮)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಬೇಕೆಂದಿಷ್ಟವುಳ್ಳವನಾಗಿ ಋತುಗಳೊಂದಿಗೂ, ಪ್ರಾಣಗಳೊಂದಿಗೂ, ಸಂವತ್ಸರದೊಂದಿಗೂ ಮತ್ತು ಅಶ್ವಿನೀದೇವತೆಗಳೊಂದಿಗೂ ಸಂಯುಕ್ತನಾಗಿ ಜಗತ್ತನ್ನು ಸೃಷ್ಟಿಮಾಡಿದನು ಎಂದಿದೆ. ಈ ರೀತಿ ಜಗತ್ಸೃಷ್ಟಿಗೂ ಇವರಿಗೂ ಸಾಕ್ಷಾತ್ಸಂಬಂಧವಿದೆಯೆಂದು ಹೇಳಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿರುವ **ವೇಧಸಾ** ಎಂಬ ಪದಕ್ಕೆ **ವಿಧಾತಾರೌ** ಎಂದರೆ ಸೃಷ್ಟಿಕರ್ತರಾದ ಎಂಬರ್ಥವನ್ನು ಹೇಳಬಹುದು.

**ಬಾಳ್ಹೇ—**ಈ ಪದಕ್ಕೆ ದೃಢ, ಸ್ಥಿರ ಎಂಬರ್ಥವಾಗುತ್ತದೆ.

**ಸ ವ್ರಾಧತೋ ನಹುಷೋ ದಂಸುಜೂತಃ ಶರ್ಧಸ್ತರೋ ನರಾಂ ಗೂರ್ತಶ್ರವಾಃ ।**
**ವಿಸೃಷ್ಟರಾತಿರ್ಯಾತಿ ಬಾಳ್ಹಸೃತ್ವಾ ವಿಶ್ವಾಸು ಪೃತ್ಸು ಸದಮಿಚ್ಛೂರಃ ॥**

(ಋ. ಸಂ. ೧-೧೨೨-೧೦)

ಎಂಬಲ್ಲಿ ಧೃಢವಾದ ಅಥವಾ ಸ್ಥಿರವಾದ ಎಂಬರ್ಥವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸ್ಥಿರವಾದ ಸ್ತುತಿವಾಕ್ಯವೆಂದರ್ಥ.

**ತ್ರೇಧಾ ಗೀಃ** ಎನ್ನುವಾಗ **ಮಂತ್ರಾದಿ ಭೇದೇನ ತ್ರಿಪ್ರಕಾರಾ** ಎಂದು ವಿವರಿಸಿದೆ. ಮತ್ತು **ಸ್ಥವಿರಾ** ಎಂಬ ವಿಶೇಷಣವೂ ಇದೆ. ಇಲ್ಲಿ **ಋಕ್, ಯಜುಸ್** ಮತ್ತು **ಸಾಮ** ಎಂದು ಮೂರು ವಿಧವಾಗಬಹುದು; ಅಥವಾ **ಶಸ್ತ್ರ, ಸ್ತೋಮ, ಸ್ತೋತ್ರ** ವಿಶೇಷಣವಿರುವುದರಿಂದಲೂ ಮತ್ತು ಸಾಯಣರು ಈ ಪದಕ್ಕೆ **ಅತ್ಯಂತಂ ಸ್ಥಿರಾ ನಿತ್ಯಾ ವೇದಮಯೀ** ಎಂದು ತಾತ್ಪರ್ಯವನ್ನು ವಿವರಿಸಿರುವುದರಿಂದಲೂ ಸಹ ಇಲ್ಲಿ **ಋಕ್, ಯಜುಸ್** ಮತ್ತು **ಸಾಮ**

ಎಂಬ ವಿಭಾಗಗಳನ್ನೇ ನಿರ್ದೇಶಿಸಬಹುದು. ಮತ್ತು **ಉದ್ಗೀಥ** ಎನ್ನುವ ಪದಕ್ಕೆ ಉಪನಿಷತ್ತಿನಲ್ಲಿ ವಿವರಣೆಯನ್ನು ಹೇಳುವಾಗಲೂ ಸಹ

**"ವಾಗ್ಗೀರ್ವಾಗೃಚೋ ಹ ಗಿರ ಇತ್ಯಾಚಕ್ಷತೇ** (ಛಾ ೧-೩-೬) **ಇತ್ಯಾದಿ** ವಾಕ್ಯಗಳಿಂದ ಈ ವಿಭಾಗವನ್ನು ತಿಳಿಸಿದೆ. ಶಸ್ತ್ರಾದಿ ವಿಭಾಗತ್ರಯವನ್ನೂ, ಋಗಾದಿ ಮಂತ್ರತ್ರಯದ ವಿಭಾಗವನ್ನು ತಿಳಿಸಿದೆ. ಶಸ್ತ್ರಾದಿ ವಿಭಾಗತ್ರಯವನ್ನೂ, ಋಗಾದಿ ಮಂತ್ರತ್ರಯದ ವಿಭಾಗವನ್ನೂ ಮುಂದೆ ವಿವರಿಸಲಾಗುತ್ತದೆ.

**ಯಾಮನ್, ಅಯಾಮನ್,** ಎಂಬ ಪದಗಳಿಗೆ **ಗಮನೇ, ಅಗಮನೇ ಚ** ಎಂದರ್ಥಮಾಡಿದ್ದಾರೆ. **ಯಾಮನ್** ಎಂಬ ಪದವು ಅನೇಕ ಕಡೆಗಳಲ್ಲಿ ಪ್ರಯುಕ್ತವಾಗಿದೆ ಮತ್ತು ಒಂದೇ ಅರ್ಥದಲ್ಲಲ್ಲ. ಈ ಶಬ್ದಕ್ಕೆ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಬೇಕಾಗುತ್ತದೆ. ಹಿಂದೆ ಅನೇಕ ಕಡೆಗಳಲ್ಲಿ ಸ್ಕಂದಸ್ವಾಮಿಗಳು ಈ ಪದಕ್ಕೆ ಅರ್ಥವನ್ನು ವಿವರಿಸುವಾಗ **"ಯಾಂತ್ಯಸ್ಮಿನ್ ದೇವತಾ ದ್ವಿಜಾತಯಶ್ಚ ಇತಿ ಯಾಮೋ ಯಜ್ಞಃ ।** ದೇವತೆಗಳೂ, ದ್ವಿಜಾತಿಮಾನವರೂ ಇಲ್ಲಿ ಬಂದು ಸೇರುತ್ತಾರಾದ್ದರಿಂದ ಯಾಮ ಶಬ್ದಕ್ಕೆ ಯಜ್ಞವೆಂದರ್ಥವೆಂದು ತಿಳಿಸಿದ್ದಾರೆ. **ಯಾ—ಪ್ರಾಪಣೇ** ಎಂಬ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಪ್ರತಿಯೊಂದು ಸಂದರ್ಭದಲ್ಲೂ ಭಾಷ್ಯಕಾರರ ಪ್ರವೃತ್ತಿಗನುಗುಣವಾಗಿ ಅರ್ಥಭೇದವಿರುತ್ತದೆ. ಉದಾಹರಣೆಗೆ,

**ಅಜೋಹವೀನ್ನಾಸತ್ಯಾ ಕರಾ ವಾಂ ಮಹೇ ಯಾಮನ್ಪುರುಭುಜಾ ಪುರಂಧಿಃ ।**

(ಋ. ಸಂ. ೧-೧೧೬-೧೩)

ಎಂಬ ಋಕ್ಕಿನಲ್ಲಿರುವ **ಯಾಮನ್** ಶಬ್ದಕ್ಕೆ ಸಾಯಣರು **ಯಾತಿ ಗಚ್ಛತೀತಿ ಯಾಮ ಸ್ತೋತ್ರಂ** ಎಂದೂ, ಸ್ಕಂದಸ್ವಾಮಿಗಳು **ಯಾಂತಿ ಯೋದ್ಧಾರೋ ಯಸ್ಮಿನ್ ಸ ಯಾಮಃ ಸಂಗ್ರಾಮ ಇಹಾಭಿಪ್ರೇತಃ ।** ಇಲ್ಲಿ ಯುದ್ಧವೆಂದಭಿಪ್ರಾಯವೆಂದೂ ಮತ್ತು,

**ಇಂದ್ರಂ ನಮಸ್ಯನ್ನುಪಮೇಭಿರರ್ಕೈರ್ಯಃ ಸ್ತೋತೃಭ್ಯೋ ಹವ್ಯೋ ಅಸ್ತಿ ಯಾಮನ್ ।**

(ಋ. ಸಂ. ೧-೩೩-೨)

ಎಂಬ ಋಕ್ಕಿನಲ್ಲಿರುವ **ಯಾಮನ್** ಶಬ್ದಕ್ಕೆ ಸಾಯಣರು **ಸಂಗ್ರಾಮ**ವೆಂದೂ, ಸ್ಕಂದಸ್ವಾಮಿಗಳು ಯಜ್ಞವೆಂದೂ ಅರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಯಾಮನ್; ಅಯಾಮನ್** ಎಂಬ ಪದಗಳಿಗೆ ಗಮನಾಗಮನವೆಂಬರ್ಥವಾಗಲಿ, ಅಥವಾ ಯಜ್ಞಕಾಲ ಅಥವಾ ಅಯಜ್ಞಕಾಲವೆಂದಾಗಲಿ ಅಥವಾ ಯುದ್ಧಕಾಲ ಮತ್ತು ಯುದ್ಧವಿಲ್ಲದಿರುವ ಕಾಲ ಎಂದಾಗಲಿ ಅರ್ಥವಾಗಬಹುದು. ಈ ಎಲ್ಲಾ ಕಾಲಗಳಲ್ಲೂ ಸಹ ನಮ್ಮ ಸ್ತುತಿಯನ್ನು ಕೇಳಿ ತೃಪ್ತಿಪಡಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅಸರ್ಜಿ**—ಸೃಜ ವಿಸರ್ಗೇ ಧಾತು. ಛಾಂದಸವಾಗಿ ಕರ್ಮಣಿಯಲ್ಲಿ ಲುಙ್. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದ ತ ಪ್ರತ್ಯಯಕ್ಕೆ ಲೋಪ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸ್ಥವಿರಾ**—ಷ್ಠಾ ಗತಿನಿವೃತ್ತೌ. ಧಾತು. **ಅಜಿರಶಿಶಿರ**—(ಉ. ಸೂ. ೧-೫೩) ಎಂಬುದರಿಂದ ಕಿರಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದ ರಿಂದ ಟಾಪ್.

**ವೇಧಸಾ**— **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ತ್ರೇಧಾ—ವಿಧಾರ್ಚ್ಚ** (ಪಾ. ಸೂ. ೫-೩-೪೬) ಎಂಬುದರಿಂದ ಪ್ರಕಾರಾರ್ಥದಲ್ಲಿ ತ್ರಿ ಶಬ್ದಕ್ಕೆ ಏಧಾಚ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಇಕಾರಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋ ದಾತ್ತಸ್ವರ ಬರುತ್ತದೆ.

**ಕ್ಷರಂತೀ**—ಕ್ಷರ ಸಂಚಲನೇ. ಧಾತು. ಲಟಿಗೆ ಶತ್ರಾದೇಶ. **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದ ರಿಂದ ಸ್ತ್ರೀತ್ವದಲ್ಲಿ ಙೀಪ್. ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಉಪಸ್ತುತೌ**—ಷ್ಟುಞ್ ಸ್ತುತೌ. ಧಾತು. **ಸ್ತ್ರಿಯಾಂಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ತಾದೌಚ ನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಉಪ) ಪ್ರಕೃತಿಸ್ವರ ಬರುತ್ತದೆ.

**ನಾಧಮಾನಮ್**— ನಾಧೃ ಯಾಚ್ಞಾಯಾಂ ಧಾತು. ಲಟಿಗೆ ಶಾನಚಾದೇಶ. ಶಪ್ ವಿಕರಣ. **ಆನೇಮುಕ್** ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್**—ಎಂಬುದರಿಂದ ಲ ಸಾರ್ವಧಾತುಕವು ಅನುದಾತ್ತವಾಗುವುದ ರಿಂದ ಧಾತುಸ್ವರ ಉಳಿಯುತ್ತದೆ.

**ಯಾಮನ್**—ಯಾ ಪ್ರಾಪಣೇ ಧಾತು. ಮನಿನ್ ಪ್ರತ್ಯಯ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್. **ಅಯಾಮನ್** ಎಂಬಲ್ಲಿಯೂ ಹೀಗೆಯೇ ಲುಕ್ ಬಂದಿದೆ. ನಞ್ ಪ್ರಕೃತಿ ಸ್ವರ ವಿಶೇಷ.

**ಶೃಣುತಮ್**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೭ ॥

॥ ಸಂಹಿತಾಪಾಠಃ ॥

**ಉತ ಸ್ಯಾ ವಾಂ ರುಶತೋ ವಪ್ಸಸೋ ಗೀಸ್ತ್ರಿಬರ್ಹಿಷಿ ಸದಸಿ ಪಿನ್ವತೇ ನೃನ್ ।**

**ವೃಷಾ ವಾಂ ಮೇಘೋ ವೃಷಣಾ ಪೀಪಾಯ ಗೋರ್ನ ಸೇಕೇ ಮನುಷೋ ದಶಸ್ಯನ್ ॥ ೮ ॥**

॥ ಪದಪಾಠಃ ॥

ಉತ । ಸ್ಯಾ । ವಾಂ । ರುಶತಃ । ವಪ್ಸಸಃ । ಗೀಃ । ತ್ರಿಽಬರ್ಹಿಷಿ । ಸದಸಿ । ಪಿನ್ವತೇ । ನೄನ್ ।

ವೃಷಾ । ವಾಂ । ಮೇಘಃ । ವೃಷಣಾ । ಪೀಪಾಯ । ಗೋಃ । ನ । ಸೇಕೇ । ಮನುಷಃ । ದಶಸ್ಯನ್ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ರುಶತೋ ದೀಪ್ತಸ್ಯ ವಪ್ಸಸೋ ರೂಪಸ್ಯೈವ ವಪುಷೋ ವಾ ಖ್ಯಾಪಯಿತ್ರೀ ಗೀಃ ಸ್ತುತಿವಾಕ್ ತ್ರಿಬರ್ಹಿಷಿ ತ್ರಿಧಾತ್ವಾಸ್ತೀರ್ಣಬರ್ಹಿಷ್ಕೇ ಸದಸಿ ಯಾಗಸದನೇ ನೄನ್ ಕರ್ಮನೇತೄನಸ್ಮಾನ್ಪಿನ್ವತೇ । ಆಪ್ಯಾಯಯತಿ ಆಪ್ಯಾಯಯತು ವೋಚಿತಪ್ರದಾನಾದಿನಾ । ಕೇನ ಪ್ರಕಾರೇಣ ಉಚ್ಯತೇ । ಹೇ ವೃಷಣಾ ವರ್ಷಿತಾರೌ ಕಾಮಾನಾಂ ವಾಂ ಯುವಯೋಃ ಸ್ವಭೂತೋ ಮೇಘಃ ಸೇಕ್ತಾ ಜಲದಃ ಪ್ರದಾನವಿಶೇಷೋ ವಾ ವೃಷಾ ವರ್ಷಕಃ ಸನ್ ಮನುಷೋ ಮನುಷ್ಯಾನ್ ಪ್ರತಿ ದಶಸ್ಯನ್ ಪ್ರಯಚ್ಛನ್ ಪೀಪಾಯ । ಆಪ್ಯಾಯಯತಿ । ಆಪ್ಯಾಯನೇ ದೃಷ್ಟಾಂತಃ । ಗೋರ್ನಸೇಕ ಉದಕಸೇಕ ಇವ ಶಾಂತನಾತ್ಸೇಕ ಉದಕಸ್ಯೇವ । ತದ್ಯಥಾಪ್ಯಾಯಯತಿ ತದ್ವದಿತ್ಯರ್ಥಃ । ಯದ್ವಾ । ನೇತಿ ಸಂಪ್ರತ್ಯರ್ಥೇ । ಗೋರುದಕಸ್ಯ ಸೇಕೇ ನಿಮಿತ್ತಭೂತೇ ಸತಿ ಪೀಪಾಯೇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ । **ವಾಂ**—ನಿಮ್ಮಿಬ್ಬರ । **ರುಶತಃ**-ದೀಪ್ತವಾದ । **ವಪ್ಸಸಃ**—ರೂಪದ (ದೇಹದ ಪ್ರಸಿದ್ಧಿಯನ್ನುಂಟುಮಾಡುವ) । **ಗೀಃ**—ಸ್ತುತಿರೂಪವಾದ ಮಾತು । **ತ್ರಿಬರ್ಹಿಷಿ**—ಮೂರು ಪದರ ಆಸ್ತೀರ್ಣವಾದ ಬರ್ಹಿಸ್ಸುಳ್ಳ । **ಸದಸಿ**—ಯಾಗಸದನದಲ್ಲಿ । **ನೄನ್**—ಕರ್ಮನೇತೃಗಳಾದ ನಮ್ಮನ್ನು । **ಪಿನ್ವತೇ**—ಉಚಿತದಾನಾದಿಗಳಿಂದ ತೃಪ್ತಿಗೊಳಿಸುತ್ತದೆ ಅಥವಾ ತೃಪ್ತಿಗೊಳಿಸಲಿ । **ಉತ**—ಮತ್ತು । **ಹೇ ವೃಷಣಾ**—ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರಿಗೆ ಸ್ವಭೂತವೂ । **ವೃಷಾ**—ವರ್ಷಕವೂ ಆದ । **ಮೇಘಃ**—ಮೇಘವು । **ಮನುಷಃ**—ಮನುಷ್ಯರನ್ನು ಉದ್ದೇಶಿಸಿ । **ದಶಸ್ಯನ್**—ವೃಷ್ಟಿ ಪ್ರದಾನಮಾಡುತ್ತಾ । **ಗೋಃ ಸೇಕೇ ನ**—ಉದಕಸೇಚನದಿಂದ ಸಂತೋಷವುಂಟಾಗುವಂತೆ । [ಅಥವಾ **ಗೋಃ ಸೇಕೇ**—ಉದಕಸೇಚನವು ನಿಮಿತ್ತವಾಗಿರಲು । **ನ**—ಈಗ । **ಮನುಷಃ**—ಮನುಷ್ಯರನ್ನುದ್ದೇಶಿಸಿ । **ದಶಸ್ಯನ್**—ವೃಷ್ಟಿಪ್ರದಾನಮಾಡುತ್ತಾ । **ಪೀಪಾಯ**—ಸಂತೋಷಪಡಿಸುತ್ತದೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ದೀಪ್ತವಾದ ನಿಮ್ಮ ದೇಹವನ್ನು ಸ್ತುತಿಸುವ ನಮ್ಮ ಈ ಸ್ತುತಿರೂಪವಾದ ಮಾತು ತ್ರಿವಿಧವಾಗಿ ಆಸ್ತೀರ್ಣವಾದ ಬರ್ಹಿರ್ಯುಕ್ತವಾದ ಈ ಯಾಗಶಾಲೆಯಲ್ಲಿ ಯಾಗಾನುಷ್ಠಾನ ಮಾಡುತ್ತಿರುವ ನಮಗೆ ಸಂತೋಷವುಂಟುಮಾಡುತ್ತದೆ. ಮತ್ತು ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ, ವೃಷ್ಟಿಕಾರಣವಾದ ಮತ್ತು ನಿಮ್ಮ ಸ್ವಕೀಯವಾದ ಮನುಷ್ಯರಿಗೆ ಉದಕವು ಅವಶ್ಯಕವಾದಾಗ ಮಳೆಗರೆದು ಅವರನ್ನು ಸಂತೋಷಪಡಿಸುತ್ತದೆ.

## English Translation.

May the praise of your resplendent forms, (uttered) in the hall of sacrifice, thrice strewn with sacred grass, bring prosperity to the conductors (of the sacrifice). Showerers (of benefits), may the raining-cloud, proceeding to man, nourish him like a sprinkling of water.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ರುಶತಃ, ವಪ್ಸಸಃ** ಎಂಬ ಎರಡು ಪದಗಳೂ ಸಹ ಗೀಃ ಎಂಬುದಕ್ಕೆ ವಿಶೇಷಣಗಳಾಗಿವೆ. ಮತ್ತು ಸ್ತುತಿರೂಪವಾದ ವಾಕ್ಕಿನ ವಿಶೇಷ ಗುಣಗಳನ್ನು ಸೂಚಿಸುತ್ತವೆ.

**ರುಶತಃ—ರುಶದಿತಿ ವರ್ಣನಾಮ। ರೋಚತೇರ್ಜ್ವಲತಿಕರ್ಮಣಃ।** (ನಿ. ೨-೨೦) ಪ್ರಕಾಶಿಸು ಎಂಬರ್ಥವನ್ನು ಕೊಡುವ **ರುಚ್** ಎಂಬ ಧಾತುವಿನಿಂದ **ರುಶತ್** ಎಂದರೆ ಶುಭ್ರವರ್ಣವೆಂಬ ಅರ್ಥವನ್ನು ಕೊಡುವ ಪದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ವಿವರಿಸುತ್ತಾರೆ.

**ವಪ್ಸಸಃ**—ಈ ಪದದ ಪ್ರಯೋಗವಿರುವುದು ಬಹಳ ಅಪರೂಪ. ಪ್ರಾಯಶಃ ಋಕ್ಸಂಹಿತೆಯಲ್ಲೆಲ್ಲಾ ಇದೊಂದೇಕಡೆಯಲ್ಲಿದೆಯೆಂದರೂ ತಪ್ಪಾಗಲಾರದು. ಸಾಯಣರು ಈ ಪದಕ್ಕೆ ಸುಂದರರೂಪವುಳ್ಳ ದೇಹವೆಂದರ್ಥ ಮಾಡಿದ್ದಾರೆ. ಅಂದರೆ, ಪ್ರಕೃತವಾದ ಋಕ್ಕಿನಲ್ಲಿ ಯಾವ ರೀತಿ ಸುಂದರವಾದ ದೇಹವು ತನ್ನ ಸೌಂದರ್ಯವನ್ನು ಪ್ರಕಾಶಪಡಿಸುತ್ತದೆಯೋ, ಅದರಂತೆಯೇ ಸ್ತುತಿಯೂ ಸಹ ತನ್ನ ಸುಂದರವಾದ ರಚನಾಕೌಶಲ್ಯವನ್ನು ಪ್ರಕಾಶಪಡಿಸುತ್ತದೆಯೆಂದರ್ಥ.

**ತ್ರಿಬರ್ಹಿಷಿ**—ಈ ಪದಕ್ಕೆ **ತ್ರಿಧಾ ಸ್ತೀರ್ಣಬರ್ಹಿಷ್ಕೇ** ಎಂದರ್ಥಮಾಡಿದ್ದಾರೆ. **ತ್ರಿಧಾತುವೆಂದರೇನು ?** ಇಲ್ಲಿ ಆ ಅರ್ಥ ಬರಲು ಕಾರಣವೇನು ಎಂಬ ವಿಷಯವನ್ನು ಋ. ಸಂ. ೧-೧೮೩-೧ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಲಾಗುತ್ತದೆ.

**ವಾಂ ವೃಷಾ ನೋಘಃ ದಶಸ್ಯನ್**—ಎಂಬ ವಾಕ್ಯದಿಂದ ವೃಷ್ಟಿವರ್ಷಣಕ್ಕೂ, ಅಶ್ವಿನೀದೇವತೆಗಳ ಅನುಗ್ರಹಕ್ಕೂ ಕಾರ್ಯಕಾರಣಭಾವವನ್ನು ಸೂಚಿಸಿದೆ. ಮರುತ್ತುಗಳನ್ನು ಪ್ರಾರ್ಥಿಸುವಂತೆಯೇ ಅಶ್ವಿನೀದೇವತೆಗಳನ್ನೂ ಸಹ ಅನೇಕಕಡೆಗಳಲ್ಲಿ ವೃಷ್ಟಿಪ್ರದಾನಕ್ಕಾಗಿ ಪ್ರಾರ್ಥಿಸಿದೆ. ಅದರೆ ಈ ಪ್ರಾರ್ಥನೆಗಳಲ್ಲಿಯೂ ಮತ್ತು ಈ ಸಂದರ್ಭಗಳಲ್ಲಿ ಉಪಯೋಗಿಸುವ ವಿಶೇಷಣಪದಗಳಲ್ಲಿಯೂ ಇರತಕ್ಕ ವಿಶೇಷಾರ್ಥಗಳನ್ನೂ ಗಮನಿಸಬೇಕು. ಉದಾಹರಣೆಗೆ—

**ಆ ನ ಊರ್ಜಂ ವಹತಮಶ್ವಿನಾ ಯುವಂ ಮಧುಮತ್ಯಾ ನಃ ಕಶಯಾ ಮಿಮಿಕ್ಷತಂ ।**
**ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ।**
(ಋ. ಸಂ. ೧-೧೫೭-೪)

ಎಂಬಲ್ಲಿ "ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಸಹ ವೃಷ್ಟಿಯನ್ನು ಸುರಿಸುವುದರಿಂದ ಮಧುರವಾದ ಶಬ್ದದಿಂದ ಕೂಡಿದ ಕಶೆಯಿಂದ ನಮ್ಮನ್ನು ಚೈತನ್ಯಯುಕ್ತರನ್ನಾಗಿ ಮಾಡಿರಿ ಎಂಬ ಪ್ರಾರ್ಥನೆಯಿದೆ. ಇದರಂತೆಯೇ,

**ಸನೂನೇ ಅಹನ್ತ್ರಿರವದ್ಯಗೋಹನಾ ತ್ರಿರದ್ಯ ಯಜ್ಞಂ ಮಧುನಾ ಮಿಮಿಕ್ಷತಂ ।**
(ಋ. ಸಂ. ೧-೩೪-೩)

**ತ್ರಿಷಧಸ್ಥೇ ಬರ್ಹಿಷಿ ವಿಶ್ವವೇದಸಾ ಮಧ್ವಾ ಯಜ್ಞಂ ಮಿಮಿಕ್ಷತಂ ॥**
(ಋ. ಸಂ. ೧-೪೭-೪)

ಇತ್ಯಾದಿ ಋಕ್ಕುಗಳಲ್ಲೂ ಸಹ ಮಧುರಸದಿಂದ ತ್ರಿಕಾಲಗಳಲ್ಲೂ ಸಹ ಯಜ್ಞಭೂಮಿಯನ್ನು ತೃಪ್ತಿಪಡಿಸಿ ಎಂದು ಪ್ರಾರ್ಥಿಸಿದೆ. ಇದೇ ಅಭಿಪ್ರಾಯವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸೂಚಿಸಿದ್ದರೂ ಸಹ ಪ್ರತಿಯೊಂದು ಸಂದರ್ಭಗಳಲ್ಲೂ ಸಹ **ಮಧುಮತೀ, ಮಾಧ್ವೀ** ಇತ್ಯಾದಿ ವಿಶೇಷಣಗಳನ್ನು ಸಹ ಪ್ರಯೋಗಿಸಿದೆ. ಆದುದರಿಂದ ಇವರಿಗೆ ಸಂಬಂಧಪಟ್ಟ ವೃಷ್ಟಿವರ್ಷಣದಲ್ಲಿ ಒಂದು ವಿಶೇಷವಾದ ತಾತ್ಪರ್ಯವನ್ನು ಹೇಳಬೇಕಾಗುತ್ತದೆ. ಆ ವಿಷಯವನ್ನು ಋ. ಸಂ. ೧–೧೮೨–೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ಮುಂದೆ (ಇದೇ ಭಾಗದಲ್ಲಿ) ವಿಶದವಾಗಿ ತಿಳಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ರುಶತಃ**—ರುಶ ಹಿಂಸಾಯಾಂ ಧಾತು. ತುದಾದಿ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ದೀಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟಿಗೆ ಶತ್ರಾದೇಶ. **ತಾಸ್ಯನುದಾತ್ತೇತ್**—ಸೂತ್ರದಿಂದ ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಷಷ್ಠೀ ಏಕವಚನಾಂತರೂಪ.

**ಪಿನ್ವತೇ**—ಪಿವಿ ಸೇಚನೇ. ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿಯಾಗುತ್ತದೆ. **ಇದಿತೋನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೃಷಣಾ**—ವೃಷು ಸೇಚನೇ. ಧಾತು **ಕನಿನ್ಯುವೃಷಿ**—ಎಂಬುದರಿಂದ ಕನಿನ್ ಪ್ರತ್ಯಯ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. **ವಾ ಷಪೂರ್ವಸ್ಯ ನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಉಪಧಾದೀರ್ಘ. ಬರುವುದಿಲ್ಲ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಪೀಪಾಯ**—ಓಪ್ಯಾಯೀ ವೃದ್ಧೌ. ಧಾತು. **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ **ಲಿಡ್ಯಙೋಶ್ಚ** (ಪಾ. ಸೂ. ೬-೧-೨೯) ಎಂಬುದರಿಂದ ಲಿಟ್ ಪರವಾದಾಗ ಧಾತುವಿಗೆ ಪೀ ಭಾವ. ದ್ವಿತ್ವಾದಿ. ಣಲ್ ನಿಮಿತ್ತವಾಗಿ ಈಕಾರಕ್ಕೆ ವೃದ್ಧಿ. ಆಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೇಕೇ**—ಷಿಚಿರ್ ಕ್ಷರಣೇ. ಧಾತು. ಘಞ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧ ಗುಣ. **ಚಜೋಃ ಕುಘಿಣ್ಣ್ಯತೋಃ** (ಪಾ. ಸೂ. ೭-೩-೫೨) ಎಂಬುದರಿಂದ ಚಕಾರಕ್ಕೆ ಕುತ್ವ. ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಶಸ್ಯನ್**—ದಶಸ್ ದಾನೇ. ಕಂಡ್ವಾದಿ ಧಾತು. **ಕಂಡ್ವಾದಿಭ್ಯೋಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಯಗಂತದ ಮೇಲೆ ಲಟಿಗೆ ಶತ್ರಾದೇಶ. ಯಕ್ ಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ. ॥ ೮ ॥



॥ ಸಂಹಿತಾಪಾಠಃ ॥

ಯುವಾಂ ಪೂಷೇವಾಶ್ವಿನಾ ಪುರಂಧಿರಗ್ನಿಮುಷಾಂ ನ ಜರತೇ ಹವಿಷ್ಮಾನ್ ।
ಹುವೇ ಯದ್ವಾಂ ವರಿವಸ್ಯಾ ಗೃಣಾನೋ ವಿದ್ಯಾಮೇಷಂ ವೃಜನಂ ಜೀರದಾನುಂ ॥

॥ ಪದಪಾಠಃ ॥

ಯುವಾಂ । ಪೂಷಾಽಇವ । ಅಶ್ವಿನಾ । ಪುರಂಽಧಿಃ । ಅಗ್ನಿಂ । ಉಷಾಂ । ನ । ಜರತೇ । ಹವಿಷ್ಮಾನ್ ।
ಹುವೇ । ಯತ್ । ವಾಂ । ವರಿವಸ್ಯಾ । ಗೃಣಾನಃ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಪುರಂಧಿರ್ಬಹುಪ್ರಜ್ಞಃ ಪೂಷೇವ ಪೋಷಕ ಇವ ಹವಿಷ್ಮಾನ್ ಹವಿರ್ಯುಕ್ತೋ ಜರತೇ । ಸ್ತೌತಿ । ಯದ್ವಾ । ಪುರಂಧಿರ್ಬಹೂನಾಂ ಧಾರಯಿತ್ರೀ ಪೂಷೇವ ಪೃಥಿವೀವ ॥ ದ್ವಿತೀಯಾರ್ಥೇ ಪ್ರಥಮಾ ॥ ತಾಂ ಯಥಾ ಸ್ತೌತಿ ತದ್ವತ್। ಕಿಮುವ । ಅಗ್ನಿಮುಷಾಂ ನ । ಅಗ್ನಿಮುಷಸಂ ಚ ಯಥಾ ತಥಾ ಯುವಾಮಪಿ । ಪ್ರಾತರನುವಾಕಾಶ್ವಿನಶಸ್ತ್ರಯೋರಾಶ್ವಿನಕ್ರತುವದಾಗ್ನೇಯೋಷಸ್ಯಯೋರಪಿ ಸದ್ಭಾವಾದಿತಿ ಭಾವಃ । ಕದೇತಿ ಆಹ । ಯದ್ಯದಾ ವರಿವಸ್ಯಾ ವರಿವಸ್ಯಯಾ ಪರಿಚರ್ಯಯಾ ಯುಕ್ತೋ ಗೃಣಾನಃ ಸ್ತೋತಾ ಸ್ತೌತಿ ತದಾ ಯಜಮಾನೋಽಪಿ ಜರತ ಇತ್ಯರ್ಥಃ । ವಿದ್ಯಾಮೇತ್ಯಾದಿ ಗತಂ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ವರಿವಸ್ಯಾ**—ಪರಿಚರ್ಯಾಯುಕ್ತವಾದ । **ಗೃಣಾನಃ**—ಸ್ತೋತೃವಾದ (ನಾನು) । **ಹುವೇ**—(ಸ್ತುತಿಪೂರ್ವಕವಾಗಿ) ಆಹ್ವಾನಿಸುತ್ತೇನೆಯೋ । (**ತತ್**—ಆಗ) । (ಹೇ) **ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ಪುರಂಧಿಃ**—ಬಹುಪ್ರಜ್ಞನೂ । **ಪೂಷಾ ಇವ**—ಪೋಷಕನಂತೆ । **ಹವಿಷ್ಮಾನ್**—ಹವಿರಾದಿಯುಕ್ತನೂ ಆದ ಯಜಮಾನನು । [ಅಥವಾ **ಪುರಂಧಿಃ**—ಬಹುಜನರಿಗೆ ಧಾತ್ರಿಯಾದ । **ಪೂಷಾ ಇವ**—ಭೂಮಿಯನ್ನು ಹೇಗೆ ಸ್ತುತಿಸುತ್ತಾನೋ ಹಾಗೆ]। **ಅಗ್ನಿಂ ಉಷಾಂ ನ**—ಅಗ್ನಿ ಮತ್ತು ಉಷೋದೇವಿಯರನ್ನು (ಪ್ರಾತಃಕಾಲದಲ್ಲಿ ಸ್ತುತಿಸುವಂತೆ)। **ಜರತೇ**—ಸ್ತುತಿಸುತ್ತಾನೆ । (**ವಯಂ**—ನಾವೂ) । **ಇಷಂ**—ಅನ್ನವನ್ನೂ । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ನಿಮ್ಮನುಗ್ರಹದಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ ಭಕ್ತಿಯುಕ್ತನಾಗಿ, ನಾನು ನಿಮ್ಮನ್ನು ಸ್ತುತಿಸಿ ಪರಿಚರಿಸುತ್ತೇನೆ ; ಅದೇ ಕಾಲದಲ್ಲಿ ಬಹುಪ್ರಜ್ಞನೂ, ಹವಿರಾದಿಯುಕ್ತನೂ ಆದ ಯಜಮಾನನು ಬಹುಜನರಿಗೆ ಧಾತ್ರಿಯಾದ ಭೂಮಿಯನ್ನು ಸುತ್ತಿ

ಸುವಂತೆ, ನಿಮ್ಮಿಬ್ಬರನ್ನೂ, ಅಗ್ನಿ ಮತ್ತು ಉಷೋದೇವಿಯರುಗಳನ್ನು ಸ್ತುತಿಸುತ್ತಾನೆ. ಅನಂತರ ನಾವು ಆಹಾರ, ಬಲ ಮತ್ತು ದೀರ್ಘಾಯುಷ್ಯಗಳನ್ನು ಪಡೆಯುವಂತಾಗಲಿ

English Translation.

The wise offerer of oblations, like Pushan, praises you, Ashwins, as (he would praise) Agni and Ushas, (at the season) at which I invoke you, praising with devotion. that we may thence obtain food, strength, and long life.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಎರಡು ವಿಧವಾದ ತಾತ್ಪರ್ಯವನ್ನು ಹೇಳುವುದು ಸಾಧ್ಯವೆಂದು ಸಾಯಣರು ತಿಳಿಸಿದ್ದಾರೆ. ಮೊದಲನೆಯದಾಗಿ; **ಪುರಂಧಿಃ ಪೂಷಾ ಇವ** ಎಂಬ ಪದಗಳು ಹವಿಷ್ಮಂತನಾದ ಯಜ್ಞಕರ್ತನಿಗೆ ವಿಶೇಷಣ ಗಳಾಗಿವೆ. ಇಲ್ಲಿ **ಪುರಂಧಿಃ** ಎಂಬುದಕ್ಕೆ ಬಹುಪ್ರಜ್ಞೆಯುಳ್ಳವನೆಂದೂ **ಪೂಷ**ನೆಂದರೆ ಪೋಷಕನೆಂದೂ ಅರ್ಥಮಾಡಿದೆ. ಎಂದರೆ ಬಹುಪ್ರಜ್ಞನೂ, ಹವಿಷ್ಮಂತನೂ ಆದ ಯಜಮಾನನು ಪೋಷಕನಂತೆ ನಿಮ್ಮ ವೃದ್ಧಿಗಾಗಿ ಹವಿಸ್ಸನ್ನರ್ಪಿಸುತ್ತಾ ಸ್ತುತಿಸುತ್ತಾನೆ ಎಂದಾಗುತ್ತದೆ. ಎರಡನೆಯದಾಗಿ **ಪುರಂಧಿಃ** ಎಂಬುದು **ಪೂಷಾ** ಎನ್ನುವುದಕ್ಕೆ ವಿಶೇಷಣವಾದರೆ, ಆಗ **ಪುರಂಧಿಯೆಂದರೆ** ಬಹುಧಾತ್ರಿಯೆಂದೂ, **ಪೂಷಾ** ಎಂದರೆ ಸರ್ವಪೋಷಕವಾದ ಪೃಥ್ವಿಯೆಂದೂ ಅರ್ಥ ವಾಗುತ್ತದೆ.

**ಪುರಂಧಿ** ಶಬ್ದಕ್ಕೆ **ಪ್ರಭೂತ, ಪೌಷ್ಕಳ್ಯ** ಮತ್ತು **ಸಮೃದ್ಧ** ಎಂಬರ್ಥಗಳಲ್ಲಿ ಪ್ರಯೋಗವಿರುತ್ತದೆ. ಇದು ಯಜಮಾನನಿಗೆ ವಿಶೇಷಣವಾದರೆ ನಾನಾ ಕರ್ಮಗಳುಳ್ಳವನೆಂದಾಗಲಿ ಅಥವಾ ಬಹುವಿಧವಾದ ಪ್ರಜ್ಞೆಯುಳ್ಳವ ನೆಂದಾಗಲಿ ಅರ್ಥವಾಗುತ್ತದೆ. ಅಥವಾ ಪುರಂಧಿಯೆಂಬ ಪ್ರತ್ಯೇಕವಾದ ದೇವತೆಯೇ ಆಗಬಹುದು. ಈ ಪದದ ವಿಶೇಷಾರ್ಥಗಳನ್ನೆಲ್ಲಾ ಋ. ಸಂ. ೧-೧೮೦-೬ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ. ಮತ್ತು, **ಪೂಷಾ** ಎಂಬ ಪದಕ್ಕೂ ಸಹ ಪೋಷಕನೆಂದರ್ಥವಾಗಿ ಅದು ರಶ್ಮಿದ್ವಾರಾ ಜಗತ್ತನ್ನು ಪೋಷಿಸತಕ್ಕ ಅಗ್ನಿಪರವಾಗಿಯಾಗಲಿ ಅಥವಾ ಆದಿತ್ಯನ ಪರವಾಗಿಯಾಗಲಿ ಅಥವಾ ಅನ್ನಾದಿಗಳಿಂದ ಜಗತ್ತನ್ನು ಪೋಷಿಸತಕ್ಕ ಪೃಥ್ವಿಯ ಪರವಾಗಿಯಾಗಲಿ ಈ ಪದದ ಪ್ರಯೋಗವಿರಬಹುದೆಂಬುದನ್ನೂ ಸಹ ಅನೇಕ ಸನ್ನಿವೇಶಗಳಲ್ಲಿ ತಿಳಿಯಬಹುದು. ಈ ಪದವು ಅನೇಕ ಸಂದರ್ಭಗಳಲ್ಲಿ ಅಶ್ವಿನೀದೇವತೆಗಳ ಪರವಾಗಿಯೇ ಪ್ರಯುಕ್ತವಾಗಿದೆ. ಹೀಗೆ ಸಂದರ್ಭಾನುಸಾರವಾಗಿ ಈ ಪದಕ್ಕೆ ಅರ್ಥವನ್ನು ಹೇಳಬೇಕಾಗಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಅರ್ಥಾಂತರವನ್ನು ಹೇಳಿದ್ದಾರೆ. ಈ ಪದದ ನಿರ್ವಚನದಿಂದಲೇ ದ್ವಾದಶಾದಿತ್ಯರಲ್ಲಿ ಒಬ್ಬನಾದ **ಪೂಷ** ದೇವನ ಗುಣವೂ ವರ್ಣಿತವಾಗಿದೆ.

**ಪೂಷಾ—ಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ ।**

(ನಿ. ೧೨-೧೬)

ರಶ್ಮಿಗಳಿಂದ ಪೋಷಿಸುವವನಾದುದರಿಂದ **ಪೂಷಾ** ಎಂದು ಹೆಸರು ಎಂದು ನಿರುಕ್ತಕಾರರ ನಿರ್ವಚನವಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ,

**ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ।**

(ಶ. ಬ್ರಾ. ೧೪-೪-೨-೨೫)

ಈ ದೇವತೆಯು ಎಲ್ಲವನ್ನೂ ಪೋಷಿಸುವವನಾದುದರಿಂದ ಪೂಷನೆಂದು ಕರೆಯಲ್ಪಟ್ಟಿದ್ದಾನೆ ಎಂದು ಹೇಳಿದೆ. ಈ ವಿಧವಾದ ಅರ್ಥವು ಆದಿತ್ಯಪರವಾಗಿಯೂ ಆಗಬಹುದು ಅಥವಾ ಹವ್ಯವಾಹನನಾಗಿ ದೇವಮಾನವಾದಿ ಸಕಲರ ಪೋಷಣೆಗೂ ಕಾರಣನಾದುದರಿಂದ ಅಗ್ನಿ ಪರವಾಗಿಯೂ ಆಗಿರಬಹುದು. ಇದೇ ನಿರ್ವಚನವನ್ನು ಹೇಳುತ್ತಾ,

**ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।**
**ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥**

(ಬೃ. ದೇ. ೨-೬೩)

ಕತ್ತಲನ್ನು ನಾಶಮಾಡುತ್ತಾ ಪೃಥ್ವಿಯು ವೃದ್ಧಿಯನ್ನು ಹೊಂದುವಂತೆ, ಅದನ್ನು ಪೋಷಿಸುವುದರಿಂದ ಪೂಷನ್ ಎಂದು ಹೆಸರು ಎಂಬ ಬೃಹದ್ದೇವತಾವಾಕ್ಯವೂ ಸಹ ಇದೇ ಅಭಿಪ್ರಾಯವನ್ನು ಸೂಚಿಸುತ್ತದೆ. ಹೀಗೆ ಜಗತ್ಪೋಷಕತ್ವವೇ ಮುಖ್ಯವಾದ ಅರ್ಥವಾದುದರಿಂದಲೂ ಪ್ರಕೃತವಾದ ಋಕ್ಕಿನಲ್ಲಿ ಹವಿಷ್ಮಂತನು ಹವಿಸ್ಸಿನ ಮೂಲಕ ಯಜ್ಞವನ್ನು ವೃದ್ಧಿಪಡಿಸಿ, ಜಗತ್ಪೋಷಣೆಗೆ ಸಹಾಯವನ್ನು ಮಾಡುತ್ತಾನೆ ಎಂದಭಿಪ್ರಾಯವಿರುವುದರಿಂದಲೂ ಇಲ್ಲಿ ಯಜಮಾನನೆಂದರ್ಥಮಾಡಬಹುದು. ಅಥವಾ ಪೃಥ್ವಿಯ ಪರವಾಗಿಯೂ ಅರ್ಥಮಾಡಬಹುದು.

**ಅಗ್ನಿಂ ಉಷಾಂ ನ**—ಆಶ್ವಿನಶಸ್ತ್ರದಲ್ಲಿ **ಅಗ್ನಿ** ಮತ್ತು **ಉಷಸ್ಸು** ಈ ದೇವತೆಗಳಿಗೂ ಮುಖ್ಯಸ್ಥಾನವಿದ್ದು ಅಲ್ಲಿ ನೆರವೇರತಕ್ಕ ಸ್ತುತ್ಯಾದಿಗಳು **ಅಗ್ನಿ** ಮತ್ತು **ಉಷಸ್ಸನ್ನೂ** ಉದ್ದೇಶಿಸಿರುವುದು ಎಂಬ ವಿಷಯವನ್ನು ಮುಂದೆ ಆಶ್ವಿನಶಸ್ತ್ರದ ವಿಷಯವನ್ನು ತಿಳಿಸುವಾಗ ವಿವರಿಸಲಾಗುತ್ತದೆ.

**ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ತಸ್ಮಾದೇತದಾಶ್ವಿನ-ಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾ ವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ॥**

(ಐ. ಬ್ರಾ. ೧೭-೩)

ಈ ಸಂದರ್ಭದಲ್ಲಿ ಅಗ್ನಿಯನ್ನೂ, ಇಂದ್ರನನ್ನೂ, ಉಷಸ್ಸನ್ನೂ ಉದ್ದೇಶಿಸಿ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಇವಕ್ಕೆಲ್ಲಾ ಆಶ್ವಿನಶಸ್ತ್ರವೆಂಬ ಹೆಸರು ಹೇಗೆ ಬಂದಿತು ಎಂಬ ಆಕ್ಷೇಪಣೆಯು ಬಂದರೆ ಆಗ ಇದು ಮುಖ್ಯವಾಗಿ ಅಶ್ವಿನೀ ದೇವತೆಗಳ ಜಯವನ್ನು ಕುರಿತು ಪಠಿತವಾಗಿರುವುದರಿಂದ ಈ ಮಂತ್ರಗಳಿಗೆ ಈ ಹೆಸರು ಎಂಬುದೇ ಸಮಾಧಾನವು ಎಂದು ಅಶ್ವಿನೀದೇವತೆಗಳ ಮಾಹಾತ್ಮ್ಯವನ್ನೂ ಈ ಸಂದರ್ಭದಲ್ಲಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಅಗ್ನಿಂ, ಉಷಾಂ ನ ಜರತೇ** ಎಂಬ ವಾಕ್ಯದಿಂದಲೂ ಸಹ ಅದೇ ಅಂಶವನ್ನು ಸೂಚಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪೂಷಾ ಇವ**—ಪೂಷ ವೃದ್ಧೌ. ಧಾತು. **ಶ್ವನ್ನುಕ್ಷನ್ ಪೂಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಛಾಂದಸವಾಗಿ ದ್ವಿತೀಯಾರ್ಥದಲ್ಲಿ ಪ್ರಥಮಾ ಬಂದಿದೆ.

**ಪುರಂಧಿಃ—ಪೃಷೋದರಾದೀನಿ ಯಥೋಪದಿಷ್ಟಮ್** (ಪಾ. ಸೂ. ೬-೩-೧೦೯) ಎಂಬುದರಿಂದ ಅಭಿಮತ ರೂಪವೂ ಸಿದ್ಧವಾಗುತ್ತದೆ.

**ಜರತೇ—ಜರತೇ ಹ್ವಯತಿ**—(ನಿರು. ೩-೧೪-೮) ಎಂಬುದಾಗಿ ಅರ್ಚನಾರ್ಥಕ ಧಾತುಗಳ ಮಧ್ಯೆ ಪಠಿತವಾಗಿದೆ. ಸ್ತುತಿಯೂ ಅರ್ಚನವಾಗುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಪಠಿತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವರಿವಸ್ಯಾ—ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ಎಂಬುದರಿಂದ ಕ್ಯಚ್ ಬಂದಾಗ **ಅಪ್ರತ್ಯಯಾತ್** (ಪಾ. ಸೂ ೩-೩-೧೦೨) ಎಂಬುದರಿಂದ ಅದರ ಮೇಲೆ ಅ ಪ್ರತ್ಯಯ. ಸ್ತ್ರೀತ್ವದಲ್ಲಿ ಅದಂತ ನಿಬಂಧನವಾಗಿ ಟಾಪ್. ಕ್ಯಚ್ ಸ್ವರ ಉಳಿಯುತ್ತದೆ. **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಟಾಪ್ ಉದಾತ್ತವಾಗುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ತೃತೀಯಾ ವಿಭಕ್ತಿ ಪರವಾದಾಗ ಪೂರ್ವಸವರ್ಣ ದೀರ್ಘ. ॥ ೯ ॥

ಇಲ್ಲಿಗೆ ನೂರ ಎಂಭತ್ತೊಂದನೇ ಸೂಕ್ತ ಮುಗಿದುದು.



# ನೂರ ಎಂಭತ್ತೆರಡನೆಯ ಸೂಕ್ತವು

**ಅಭೂದಿದಮಿತ್ಯಷ್ಟರ್ಚಂ ತೃತೀಯಂ ಸೂಕ್ತಮಾಶ್ವಿನಂ ಜಾಗತಂ । ಅವವಿದ್ಧಮಿತಿ ಷಷ್ಠೀ ತದ್ವಾಂ ನರಾ ನಾಸತ್ಯಾವಿತ್ಯಷ್ಟಮೀ ಚೋಭೇ ತ್ರಿಷ್ಟುಭೌ । ಅಭೂದಿದಮಷ್ಟೌ ಷಷ್ಠ್ಯಂತೇ ತ್ರಿಷ್ಟುಭಾವಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸ್ಯಸ್ಯ ವಿನಿಯೋಗಃ । ತಥಾ ಚ ಸೂತ್ರಿತಂ । ಅಭೂದಿದಂ ಯೋ ವಾಂ ಪರಿಜ್ಮೇತಿ ತ್ರೀಣಿ । ಆ. ೪-೧೫ । ಇತಿ ॥**

ಅನುವಾದವು—**ಅಭೂದಿದಂ** ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಅಶ್ವಿನೀದೇವತೆಗಳೇ ದೇವತೆಯು ; ಜಗತೀ ಛಂದಸ್ಸು. ಆದರೆ **ಅವವಿದ್ಧಂ** ಎಂಬ ಆರನೆಯ ಋಕ್ಕು ಮತ್ತು **ತದ್ವಾಂ ನರಾ ನಾಸತ್ಯಾ** ಎಂಬ ಎಂಟನೇ ಋಕ್ಕು ತ್ರಿಷ್ಟು ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಭೂದಿದಮಷ್ಟೌ ಷಷ್ಠ್ಯಂತ್ಯೇ ತ್ರಿಷ್ಟುಭೌ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಸಂಬಂಧವಾದ ಜಗತೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಭೂದಿದಂ ಯೋ ವಾಂ ಪರಿಜ್ಮೇತಿ ತ್ರೀಣಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೫).

## ಸೂಕ್ತ—೧೮೨

ಮಂಡಲ—೧ ॥ ಅನುವಾಕ—೨೪ ॥ ಸೂಕ್ತ—೧೮೨ ॥

ಅಷ್ಟಕ—೨ ॥ ಅಧ್ಯಾಯ—೪ ॥ ವರ್ಗ—೨೭, ೨೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೮ ॥

॥ ಋಷಿಃ—ಅಗಸ್ತ್ಯಃ ॥

॥ ದೇವತಾ—ಅಶ್ವಿನೌ ॥

॥ ಛಂದಃ—೧–೫, ೭. ಜಗತೀ । ೬–೮. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಭೂದಿದಂ ವಯುನಮೋ ಷು ಭೂಷತಾ ರಥೋ ವೃಷಣ್ವಾನ್ಮದತಾ ಮನೀಷಿಣಃ ।
ಧಿಯಂಜಿನ್ವಾ ಧಿಷ್ಣ್ಯಾ ವಿಶ್ಪಲಾವಸೂ ದಿವೋ ನಪಾತಾ ಸುಕೃತೇ ಶುಚಿವ್ರತಾ ॥

॥ ಪದಪಾಠಃ ॥

ಅಭೂತ್ । ಇದಂ । ವಯುನಂ । ಓ ಇತಿ । ಸು । ಭೂಷತ । ರಥಃ । ವೃಷಣ್ಽವಾನ್ । ಮದತ । ಮನೀಷಿಣಃ ।

ಧಿಯಂಽಜಿನ್ವಾ । ಧಿಷ್ಣ್ಯಾ । ವಿಶ್ಪಲಾವಸೂ ಇತಿ । ದಿವಃ । ನಪಾತಾ । ಸುಽಕೃತೇ । ಶುಚಿಽವ್ರತಾ ॥

॥ ಸಾಯಣಭಾಷ್ಯಂ ॥

ಹೇ ಮನೀಷಿಣೋ ಮನಸ್ವಿನೋ ಮೇಧಾವಿನ ಋತ್ವಿಜಃ ಅಸ್ಮಾಕಮಿದಂ ವಯುನಂ ಪ್ರಜ್ಞಾನಮಭೂತ್ । ಉತ್ಪನ್ನಂ । ಕೀದೃಶಂ ತದಿತಿ ಉಚ್ಯತೇ । ವೃಷಣ್ವಾನಭಿಮತವರ್ಷಣವಾನ್ರಥೋಽಶ್ವಿನೋಃ ಸಂಬಂಧೀ ಗಮನಸಾಧನೋ ರಥ ಆಗತ ಇತಿ ಶೇಷಃ । ತತ್ಸ್ಥಾವಶ್ವಿನಾವೋ ಷು ಭೂಷತ । ಓ ಇತಿ ನಿಪಾತದ್ವಯಸಮುದಾಯಾತ್ಮಕ ಏಕೋ ನಿಪಾತಃ । ಸುಷ್ಠ್ವಭೂಷತ । ಅಭಿಮುಖಾ ಭವತ ಸ್ತೋತುಂ । ತಾದೃಶೌ ಮಹಾನುಭಾವಾವಶ್ವಿನೌ ಮದತ ॥ ಅಂತರ್ಭಾವಿತಣ್ಯರ್ಥೋಽಯಂ ॥ ಮದಯತ । ಸಂಭಾವಯತ । ಅಶ್ವಿನೌ ವಿಶೇಷ್ಯೇತೇ । ಸುಕೃತೇ ಸುಷ್ಠು ಕೃತವತೇ ಮಹ್ಯಂ ಧಿಯಂಜಿನ್ವಾ ಕರ್ಮಣೋ ಬುದ್ಧೇರ್ವಾ ಪ್ರೀಣಯಿತಾರೌ ಧಿಷ್ಣ್ಯಾ ಧಿಷಣಾರ್ಹೌ ಸ್ತುತ್ಯೌ ವಿಶ್ಪಲಾವಸೂ ವಿಶಾಂ ಪ್ರಜಾನಾಮಸ್ಮಾಕಂ ಪಾಲಯಿತೃಧನೌ ವಿಶ್ಪಲಾಖ್ಯಾಯಾಶ್ಛಿನ್ನಜಂಘಾಯಾ ಹಿರಣ್ಮಯಜಂಘಾಪ್ರದಾನೇನ ತಥಾಭೂತೌ । ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ । ಋ. ೧-೧೧೬-೧೫ । ಇತ್ಯಾದಿನಿಗಮಃ । ದಿವ ಆದಿತ್ಯಸ್ಯ ನಪಾತಾ ನಪ್ತಾರೌ ನಪಾತಯಿತಾರೌ ವಾ ಶುಚಿವ್ರತಾ ದೀಪ್ತಕರ್ಮಾಣೌ । ಈದೃಶಾವಶ್ವಿನೌ ಮದತ ॥

॥ ಪ್ರತಿಪದಾರ್ಥ ॥

**(ಹೇ) ಮನೀಷಿಣಃ**—ಮೇಧಾವಿಗಳಾದ (ಮನಸ್ವಿಗಳಾದ) ಎಲೈ ಋತ್ವಿಜರೇ । **ವೃಷಣ್ವಾನ್**—ಅಭಿಮತ ವರ್ಷಕವಾದ । **ರಥಃ**—(ಅಶ್ವಿನೀದೇವತೆಗಳ) ರಥವು । **(ಆಗತಃ**—ಬಂದಿದೆಯೆಂಬ) । **ಇದಂ**—ಈ । **ವಯುನಂ**—ತಿಳಿವಳಿಕೆಯು । **ಅಭೂತ್**—(ನಮಗೆ) ಉಂಟಾಗಿದೆ। **ಓ ಷು ಭೂಷತ**—(ಆ ರಥಸ್ಥರಾದ ಅಶ್ವಿನೀದೇವತೆಗಳನ್ನು) ಚೆನ್ನಾಗಿ ಅಲಂಕರಿಸಿ (ಸ್ತುತಿಸಿ) । **ಸುಕೃತೇ**—ಚೆನ್ನಾಗಿ ಕರ್ಮವನ್ನಾಚರಿಸಿರುವ (ನನಗೆ) । **ಧಿಯಂಜಿನ್ವಾ**—ಕರ್ಮ (ಜ್ಞಾನ) ಪ್ರೇರಕರೂ । **ಧಿಷ್ಣ್ಯಾ**—ಜ್ಞಾನ (ಸ್ತುತಿ) ಅರ್ಹರೂ । **ವಿಶ್ಪಲಾವಸೂ**—ಪ್ರಜೆಗಳಿಗೆ ಪಾಲಕವಾದ ಧನವಿಶಿಷ್ಟರೂ (ಅಥವಾ ಛಿನ್ನಜಂಘಳಾದ ವಿಶ್ಪಲೆ ಎಂಬವಳಿಗೆ ಸುವರ್ಣಮಯ ಜಂಘಾಪ್ರದಾನ ಮಾಡಿದವರೂ) । **ದಿವಃ**—ಆದಿತ್ಯನ । **ನಪಾತಾ**—ಮೊಮ್ಮಕ್ಕಳೂ । **ಶುಚಿವ್ರತಾ**—ದೀಪ್ತಕರ್ಮರೂ (ಶುದ್ಧವಾದ ಕರ್ಮವನ್ನೇ ಮಾಡಿದವರೂ ಆದ ಅಶ್ವಿನೀದೇವತೆಗಳನ್ನು) । **ಮದತ**—(ಪೂಜಾದಿಗಳಿಂದ) ತುಷ್ಟಿಪಡಿಸಿ.

॥ ಭಾವಾರ್ಥ ॥

ಎಲೈ ಜ್ಞಾನಿಗಳಾದ ಋತ್ವಿಜರೇ, ಅಭಿಮತಸಾಧಕವಾದ ಅಶ್ವಿನೀದೇವತೆಗಳ ರಥವು ಆಗಮಿಸಿದೆಯೆಂಬುದು ನಮಗೆ ತಿಳಿದು ಬಂದಿದೆ; ಆದುದರಿಂದ ಆ ರಥಸ್ಥರಾದ ಆ ದೇವತೆಗಳನ್ನು ಪೂಜಿಸಲು ಸಿದ್ಧರಾಗಿ; ಕರ್ಮಾನುಷ್ಠಾತೃವಾದ ನನಗೆ ಪ್ರೇರಕರೂ, ಸ್ತುತ್ಯರೂ, ಪ್ರಜೆಗಳನ್ನು ಪಾಲಿಸುವ ಧನವಿಶಿಷ್ಟರೂ, ಆದಿತ್ಯನ ಮೊಮ್ಮಕ್ಕಳೂ ಶುದ್ಧ ಕರ್ಮಗಳನ್ನೇ ಸದಾ ಆಚರಿಸುವವರೂ ಆದ ಅವರನ್ನು ಪೂಜಾದಿಗಳಿಂದ ಸಂತೋಷಪಡಿಸಿ.

## English Translation.

The information, sage (priests), has been received : be ready with your praises, for the (benefit) showering car (of the Ashwins has arrived) : propitiate (the divinities) for they show favour to the doer of good works : they are entitled to praise, rich in benevolence to mankind, the grandsons of heaven, and observers of holy rites.

॥ ವಿಶೇಷವಿಷಯಗಳು ॥

**ವಯುನಂ—ವಯುನ** ಶಬ್ದವು ಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) **ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ** (ನಿ. ೫-೧೫) ಹೆಣೆದು ಹಾಕು ಎಂಬರ್ಥವನ್ನು ಕೊಡುವ **ವೀ** ಧಾತುವಿನಿಂದ ನಿಷ್ಪನ್ನವಾಗಿ ಅಪೇಕ್ಷೆ ಅಥವಾ ಪ್ರಜ್ಞೆ ಎಂಬರ್ಥವನ್ನು ಕೊಡುತ್ತದೆ. ನಿರುಕ್ತಕಾರರು,

**ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ ।**
**ಕದಾ ತೇ ಮರ್ತಾ ಅಮೃತಸ್ಯ ಧಾಮೇಯಕ್ಷಂತೋ ನ ಮಿನಂತಿ ಸ್ವಧಾವಃ ॥**

(ಋ. ಸಂ. ೬-೨೧-೩)

ಎಂಬ ಋಕ್ಕನ್ನುದಾಹರಿಸಿ, **ಸ ತಮೋಽಪ್ರಜ್ಞಾನಂ ತತನ್ವತ್ಸೂತಂ ಸೂರ್ಯೇಣ ಪ್ರಜ್ಞಾನವಚ್ಚಕಾರ** (. ನಿ. ೫-೧೫) ಕತ್ತಲಿನ ರೂಪದಲ್ಲಿದ್ದು ಗೋಚರಾತೀತವಾದುದನ್ನೂ ಪ್ರಜ್ಞಾವಿಷಯವನ್ನಾಗಿ ಮಾಡಿದನು ಎಂಬರ್ಥವನ್ನು ಕೊಡುವುದೆಂದು ವಿವರಿಸಿದ್ದಾರೆ.

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥**
(ಋ. ಸಂ. ೧-೧೮೯-೧)

ಎಂಬಲ್ಲಿ ಶಂಕರಾಚಾರ್ಯರು **ವಯುನಾನಿ** ಎಂಬುದಕ್ಕೆ **ಕರ್ಮಾಣಿ, ಪ್ರಜ್ಞಾನಾನಿ ವಾ** ಎಂದರ್ಥಮಾಡಿದ್ದಾರೆ. ಹೀಗೆ ಎರಡರ್ಥವೂ ಈ ಪದಕ್ಕೆ ಸಾಧ್ಯವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಮರೆಯಾಗಿದ್ದ ಅಶ್ವಿನೀದೇವತೆಗಳ ರಥವು ಈಗ ನಮ್ಮ ಪ್ರಜ್ಞಾವಿಷಯವಾಗಿದೆಯೆಂದು ತಿಳಿಸಿದೆ.

**ಧಿಯಂಜಿನ್ವಾ—ಕರ್ಮಣಃ ಬುದ್ಧೇರ್ವಾ ಪ್ರೀಣಯಿತಾರೌ ।** ಕರ್ಮಕ್ಕೆ ಪ್ರೇರಕರು ಅಥವಾ ಬುದ್ಧಿಯ ಪ್ರೇರಕರು ಎಂದರ್ಥವನ್ನು ಮಾಡಿದೆ. **ಧೀ** ಶಬ್ದಕ್ಕೆ ಬುದ್ಧಿ ಮತ್ತು ಕರ್ಮ ಎಂಬೆರಡು ಅರ್ಥಗಳಲ್ಲಿಯೂ ಪ್ರಯೋಗವಿದೆ.

**ಯಜ್ಞಂ ವಷ್ಟ್ವಾ ಧಿಯೋವಸುರಿತಿ ವಾಗ್ವೈ ಧಿಯೋವಸುಃ ।**
(ಐ. ಆ. ೧-೧-೪)

ಎಂಬ ವಾಕ್ಯದಿಂದ ಐತರೇಯಾರಣ್ಯಕದಲ್ಲಿ **ಧೀ** ಶಬ್ದಕ್ಕೆ ಸ್ತುತಿಯೆಂದರ್ಥಮಾಡಿದೆ. **ಧೀ** ಎಂಬ ಪದವನ್ನು ನಿರುಕ್ತದಲ್ಲಿ **ಕರ್ಮ** ನಾಮಗಳಲ್ಲಿಯೂ (ನಿ. ೩-೧) ಮತ್ತು **ಪ್ರಜ್ಞಾ** ನಾಮಗಳಲ್ಲಿಯೂ ಪಠಿಸಿದೆ. (ನಿ. ೩-೧೩) ಮತ್ತು

**ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿ ರಾಜತಿ ।**
(ಋ. ಸಂ.೧-೩-೧೨)

ಎಂಬ ಋಕ್ಕಿನಲ್ಲಿರುವ ಪದಕ್ಕೆ **ಸರ್ವಾಣಿ ಪ್ರಜ್ಞಾನಾನಿ** (ನಿ. ೧೧-೨೭) ಎಂದು ವಿವರಿಸಿ ನಮ್ಮ ಸಕಲವಾದುದೂ ಪ್ರಜ್ಞಾಯುತವಾದುದೂ ಆದ ಧ್ಯಾನವೆಂದರ್ಥಮಾಡಿದ್ದಾರೆ. ಮತ್ತು,

**ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಂ ।**
**ಸ ನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ ಪ್ರ ಪೂಷಾ ॥**
(ಋ. ಸಂ. ೬-೪೯-೮)

ಇತ್ಯಾದಿ ಸ್ಥಳಗಳಲ್ಲಿ **ಧೀ** ಶಬ್ದಕ್ಕೆ ಯಜ್ಞಯಾಗಾದಿ ಕರ್ಮಗಳೆಂದರ್ಥಮಾಡಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಕರ್ಮದ ಅಥವಾ ಬುದ್ಧಿಯ ಪ್ರೀಣಯಿತೃಗಳೆಂದರ್ಥವನ್ನು ಹೇಳಬಹುದು.

**ಜಿನ್ವತಿ** ಶಬ್ದವು **ಗತಿಕರ್ಮ** ನಾಮಗಳಲ್ಲಿ ಪಠಿತವಾಗಿದ್ದರೂ ಸಹ (ನಿ. ೨-೧೪) ಸಾಧಾರಣವಾಗಿ ಈ ಪದವು ಕೆಲಸದಲ್ಲಿರುವ ಪ್ರೀತ್ಯತಿಶಯವನ್ನು ತೋರಿಸುತ್ತದೆ. **ಜಿನ್ವತಿಃ ಪ್ರೀತಿಕರ್ಮಾ** (ನಿ. ೬-೨೨) ಎಂದು ನಿರುಕ್ತಕಾರರು ಈ ಪದದಿಂದ ಸೂಚಿತವಾಗುವ ಪ್ರೀತ್ಯತಿಶಯವನ್ನು ತೋರಿಸಲು,

**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥** (ಋ. ಸಂ. ೧-೧೬೪-೫೧)

ಎಂಬ ಋಕ್ಕನ್ನುದಾಹರಿಸಿ ಈ ಪದದ ತಾತ್ಪರ್ಯವನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಯಾಗಾದಿಕರ್ಮ ಪ್ರೇರಕರೆಂದಾಗಬಹುದು. ಅಥವಾ ಯಾಗಾದಿಕರ್ಮಗಳಿಂದ ತೃಪ್ತಿಯನ್ನು ಹೊಂದುವವರು ಎಂದಾಗಬಹುದು. ಅಶ್ವಿನೀದೇವತೆಗಳಿಗೆ ಈ ಪದವು ವಿಶೇಷಣವಾಗಿದೆ.

**ಧಿಷ್ಣ್ಯಾ**—ಧ್ಯಾನಾರ್ಹರು ಅಥವಾ ಸ್ತುತ್ಯರ್ಹರು. ಈ ಪದದ ವಿಶೇಷಾರ್ಥಗಳನ್ನು ಹಿಂದೆ ತಿಳಿಸಿದೆ.

**ವಿಶ್ಪಲಾವಸೂ**—ಈ ಪದಕ್ಕೂ ಸಹ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ, **ವಿಶಾಂ ಪ್ರಜಾನಾಂ ಅಸ್ಮಾಕಂ ಪಾಲಯಿತ್ರೃಧನೌ ।** ಪ್ರಜಾರೂಪರಾದ ನಮ್ಮನ್ನು ಪಾಲನಮಾಡತಕ್ಕವರು ಎಂದೂ ಎರಡನೆಯದಾಗಿ, **ವಿಶ್ಪಲಾಖ್ಯಾಶ್ಛಿನ್ನಜಂಘಾಯಾ ಹಿರಣ್ಮಯಜಂಘಾಪ್ರದಾನೇನ ತಥಾಭೂತೌ ।** ಕಾಲುಮುರಿದ ವಿಶ್ಪಲೆಗೆ ಹಿರಣ್ಯರೂಪವಾದ ಕಾಲನ್ನು ಒದಗಿಸಿಕೊಟ್ಟವರು ಎಂದೂ ವಿವರಿಸಿದೆ, ವಿಶ್ಪಲೆಯ ಕಥೆಯು ಹಿಂದೆಯೂ ಸೂಚಿತವಾಗಿದೆ. ಅದರ ಸಾರಾಂಶವು ಈ ರೀತಿಯಿದೆ.

> **ಅಗಸ್ತ್ಯಪುರೋಹಿತಃ ಖೇಲೋ ನಾಮ ರಾಜಾ ಬಭೂವ । ತಸ್ಯ ಸೇನಾಯಾಂ ಯೋಧ್ರೀ ವಿಶ್ಪಲಾ ನಾಮ ಸ್ತ್ರೀ । ತಸ್ಯಾ ಅನ್ನಾರ್ಥಂ ಧನಾರ್ಥಂ ಚ ಯುಧ್ಯಮಾನಾಯಾಃ ಶತ್ರವೋ ಜಂಘಾಂ ಚಿಚ್ಛಿದುಃ । ತಸ್ಯಾಶ್ಛಿನ್ನಾಂ ಜಂಘಾಂ ಜ್ಞಾತ್ವಾ ಪುರೋಹಿತೋಽಗಸ್ತ್ಯೋಽಶ್ವಿನಾ ತುಷ್ಟಾವ । ತೌ ವಿಶ್ಪಲಾಂ ಪ್ರತಿ ಜಗ್ಮತುಃ । ಆಗತ್ಯ ಚ ಸದ್ಯೋಲೋಹಮಯೀಂ ಜಂಘಾಂ ವಿಶ್ಪಲಾಯಾಶ್ಚಕ್ರತುಃ । ತದೇವೇಹಾಪ್ಯುಚ್ಯತೇ ।**
> (ಸಾ. ಭಾ. ಋ. ಸಂ. ೧-೧೧೬-೧೫)

ಅಗಸ್ತ್ಯಪುರೋಹಿತನಾದ ಖೇಲನೆಂಬ ದೊರೆಯ ಸೈನ್ಯದಲ್ಲಿ ವಿಶ್ಪಲೆಯೆಂಬ ಒಬ್ಬ ಸ್ತ್ರೀಯೋಧ್ರಿಯಿದ್ದಳು. ಅನ್ನಕ್ಕಾಗಿಯೂ ಧನಕ್ಕಾಗಿಯೂ ಯುದ್ಧಮಾಡುತ್ತಿದ್ದ ಅವಳ ಮೊಣಕಾಲನ್ನು ಶತ್ರುಗಳು ಮುರಿದರು. ಅದನ್ನು ತಿಳಿದು ರಾಜಪುರೋಹಿತನಾದ ಅಗಸ್ತ್ಯನು ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಅವರು ಒಡನೆಯೇ ಒಂದು ಉಕ್ಕಿನ ಜಂಘವನ್ನು ಮಾಡಿಕೊಟ್ಟು ವಿಶ್ಪಲೆಯನ್ನು ನಡೆಯುವಂತೆ ಮಾಡಿದರು. (ಪ್ರಕೃತವಾದ ಋಕ್ಕಿನಲ್ಲಿ ಹಿರಣ್ಮಯ ಜಂಘಾಪ್ರದಾನೇನ ಎಂದು ಸಾಯಣರು ಹೇಳಿದ್ದಾರೆ) ಎಂಬುದು ಪೂರ್ವಕಥೆ. ಇದೇ ಕಥೆಯು ಕಕ್ಷೀವತ್ಕೃತವಾದ ಸೂಕ್ತದಲ್ಲಿಯೂ ಹೇಳಲ್ಪಟ್ಟಿದೆಯೆಂದು ಸಾಯಣರು,

> **ಚರಿತ್ರಂ ಹಿ ವೇರಿವಾಚ್ಛೇದಿ ಪರ್ಣಮಾಜಾ ಖೇಲಸ್ಯ ಪರಿತಕ್ಮ್ಯಾಯಾಂ ।**
> **ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ ಧನೇ ಹಿತೇ ಸರ್ತವೇ ಪ್ರತ್ಯಧತ್ತಂ ।**
> (ಋ. ಸಂ. ೧-೧೧೬-೧೫)

ಎಂಬ ಋಕ್ಕನ್ನು ದಾಹರಿಸಿ ತೋರಿಸಿದ್ದಾರೆ.

**ದಿವಃ ನಪಾತಾ —ನಪಾತ್** ಎಂಬ ಪದಕ್ಕೆ ಪುತ್ರನೆಂದೂ ಮತ್ತು ಪೌತ್ರನೆಂದೂ ಅರ್ಥವಾಗುತ್ತದೆ. ನಿರುಕ್ತಕಾರರು **"ನಪಾದಿತ್ಯನಂತರಾಯಾಃ ಪ್ರಜಾಯಾಃ ನಾಮಧೇಯಂ"** ಸಾಕ್ಷಾತ್ಪುತ್ರನಲ್ಲವೆಂದೂ, ಪೌತ್ರಾದಿಗಳೆಂದೂ ಈ ಪದಕ್ಕೆ ಅರ್ಥವೆಂದು ತಿಳಿಸಿದ್ದಾರೆ. (ನಿ. ೮-೫). ಪ್ರಕೃತದಲ್ಲಿ **ದಿವಃ ನಪಾತಾ** ಎನ್ನುವುದಕ್ಕೆ ಸಾಯಣರು **ಆದಿತ್ಯಸ್ಯ ನಪಾತಯಿತಾರೌ** ಎಂದರ್ಥಮಾಡಿದ್ದಾರೆ. ಅಶ್ವಿನೀದೇವತೆಗಳ ಉತ್ಪತ್ತಿಸ್ವರೂಪದ ವಿಷಯದಲ್ಲಿ ಹಿಂದೆ ಋ. ಸಂ. ೧-೧೮೧-೪ ನೇ ಋಕ್ಕಿನಲ್ಲಿ ವಿಶದವಾಗಿ ತಿಳಿಸಿದೆ. ಇವರಿಗೆ **ದಿವಃ ನಪಾತಾ** ಎಂಬ ವಿಶೇಷಣವು ಅನೇಕ ಕಡೆಗಳಲ್ಲಿ ಬರುತ್ತದೆ. ಸಾಯಣರು ಎಲ್ಲಾ ಕಡೆಗಳಲ್ಲಿಯೂ ಒಂದೇ ಅರ್ಥವನ್ನು ಹೇಳಿಲ್ಲ. ಋ. ಸಂ. ೧-೧೮೪-೧ನೇ ಋಕ್ಕಿನಲ್ಲಿ **ದ್ಯುಲೋಕಸ್ಯ ನಪ್ತ್ರ್ಯಸ್ಥಾನೀಯೌ** ಎಂದೂ,

**ಕೃಷ್ಣಾ ಯದ್ಗೋಷ್ವರುಣೀಷು ಸೀದದ್ದಿವೋ ನಪಾತಾಶ್ವಿನಾ ಹುವೇ ವಾಂ ।**
**ವೀತಂ ಮೇ ಯಜ್ಞಮಾ ಗತಂ ಮೇ ಅನ್ನಂ ವವನ್ವಾಂಸಾ ನೇಷಮಸ್ಮೃತಧ್ರೂ ॥**
(ಋ. ಸಂ. ೧೦-೬೧-೪)

ಎಂಬಲ್ಲಿ **ದೀಪ್ಯಮಾನಸ್ಯ ಸ್ವರ್ಗಸ್ಯ ಪ್ರತಾಪಾತ್ಮಕಸ್ಯ ಯಾಗಸ್ಯ ವಾ ನ ಪಾತಯಿತಾರೌ** ಎಂದು ವಿವರಿಸಿದ್ದಾರೆ. ಅಶ್ವಿನೀದೇವತೆಗಳ ಸ್ವರೂಪವು ನಾನಾವಿಧದಲ್ಲಿ ವರ್ಣಿತವಾಗಿರುವುದರಿಂದ ಈ ಎಲ್ಲಾ ಅರ್ಥಗಳೂ ಸಮಂಜಸವಾಗಿವೆ.

**ಶುಚಿವ್ರತಾ—ಶುಚಿ** ಶಬ್ದಕ್ಕೆ ಶುದ್ಧಿಯೆಂದೂ ಪ್ರಕಾಶಮಾನವಾದುದೆಂದೂ ಅರ್ಥವಾಗುತ್ತದೆ. ಇಲ್ಲಿ ಅತ್ಯತಿಶಯವಾದುದೂ ಪ್ರಕಾಶವಾದುದೂ ಆದ ವ್ರತ(ಕರ್ಮ ಅಥವಾ ಸಾಹಸಕಾರ್ಯ)ವುಳ್ಳವರೆಂದರ್ಥ—

॥ ವ್ಯಾಕರಣಪ್ರಕ್ರಿಯಾ ॥

**ಅಭೂತ್**—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ವಯುನಮ್**—ಅಜ ಗತಿಕ್ಷೇಪಣಯೋಃ ಧಾತು. **ಅಜಿಯಮಿಶೀ**—(ಉ. ಸೂ. ೨-೩೪೧) ಎಂಬುದರಿಂದ ಉನನ್ ಪ್ರತ್ಯಯ. **ಅಜೇರ್ವ್ಯಘಞಪೋಃ** (ಪಾ. ಸೂ. ೨-೪-೫೬) ಎಂಬುದರಿಂದ ಧಾತುವಿಗೆ ವೀ ಭಾವ. ಗುಣ, ಅಯಾದೇಶ. ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಭೂಷತಾ**—ಭೂಷ ಅಲಂಕಾರೇ. ಧಾತು ಭ್ವಾದಿ ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವೃಷಣ್ವಾನ್**—ವೃಷನ್ ಶಬ್ದದ ಮೇಲೆ ಮತುಪ್ ಪ್ರತ್ಯಯ. **ಅನೋನುಟ್** (ಪಾ. ಸೂ. ೮-೨-೧೬) ಎಂಬುದರಿಂದ ಅದಕ್ಕೆ ನುಡಾಗಮ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪ್ ಉದಾತ್ತವಾಗುತ್ತದೆ.

**ಮದತ**—ಮದ ತೃಪ್ತಿಯೋಗೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮನೀಷಿಣಃ**—ಮನೀಷಾ ಏಷಾಮಸ್ತಿ ಇತಿ ಮನೀಷಿಣಃ. **ಅತ ಇನಿಠನೌ** ಎಂಬುದರಿಂದ ಇನಿ ಪ್ರತ್ಯಯ. ಸಂಬೋಧನಾ ಬಹುವಚನಾಂತರೂಪ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಧಿಯಂಜಿನ್ವಾ**—ಜಿವಿ ಪ್ರೀಣನೇ. ಧಾತು. **ಕೃತ್ಯಲ್ಯುಟೋ ಬಹುಲಂ** ಎಂಬಲ್ಲಿ ಬಹುಲಗ್ರಹಣ ಸ್ವಾರಸ್ಯದಿಂದ ಖಚ್ ಪ್ರತ್ಯಯ. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ. **ಇಚ ಏಕಾಚೋ ಮ್ ಪ್ರತ್ಯಯವಚ್ಚ** (ಪಾ. ಸೂ. ೬-೩-೬೮) ಎಂಬುದರಿಂದ ಪೂರ್ವಕ್ಕೆ ಅಮಾಗಮ. ಕೃದುತ್ತರಪದ ಪ್ರಕೃತಿ ಸ್ವರದಿಂದ ಅಂತೋದಾತ್ತವಾಗುತ್ತದೆ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ (ಔ) ಆಕಾರಾದೇಶ. ಧಿಷ್ಣ್ಯಾ ಎಂಬಲ್ಲಿಯೂ ಹೀಗೆ ಆಕಾರಾದೇಶ.

**ನಪಾತಾ**—ನ ಪಾತಯಿತಾರೌ **ನಭ್ರಾಣ್ ನಪಾತ್**—ಎಂಬುದರಿಂದ ನ ಲೋಪಾಭಾವವು ಸಮಾಸದಲ್ಲಿ ನಿಪಾತಿತವಾಗಿದೆ. ಹಿಂದಿನಂತೆ ದ್ವಿವಚನಕ್ಕೆ ಆಕಾರಾದೇಶ. ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುಕೃತೇ**—ಶೋಭನಂ ಕರೋತಿ ಇತಿ ಸುಕೃತ್. ತಸ್ಮೈ. ಕೃಞ್ ಧಾತುವಿಗೆ ಕ್ವಿಪ್ ಬಂದಾಗ ಧಾತುವಿಗೆ ತುಕಾಗಮ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಶುಚಿವ್ರತಾ**—ಶುಚಿ ವ್ರತಂ ಯಯೋಸ್ತೌ. ಬಹುವ್ರೀಹೌ ಪ್ರಕೃತ್ಯಾ—(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ದ್ವಿವಚನಕ್ಕೆ ಆಕಾರಾದೇಶ. ॥ ೧ ॥



॥ ಸಂಹಿತಾಪಾಠಃ ॥

ಇಂದ್ರತಮಾ ಹಿ ಧಿಷ್ಣ್ಯಾ ಮರುತ್ತಮಾ ದಸ್ರಾ ದಂಸಿಷ್ಠಾ ರಥ್ಯಾ ರಥೀತಮಾ ।
ಪೂರ್ಣಂ ರಥಂ ವಹೇಥೇ ಮಧ್ವ ಆಚಿತಂ ತೇನ ದಾಶ್ವಾಂಸಮುಪ ಯಾಥೋ ಅಶ್ವಿನಾ ॥ ೨ ॥

॥ ಪದಪಾಠಃ ॥

ಇಂದ್ರಽತಮಾ । ಹಿ । ಧಿಷ್ಣ್ಯಾ । ಮರುತ್ಽತಮಾ । ದಸ್ರಾ । ದಂಸಿಷ್ಠಾ । ರಥ್ಯಾ । ರಥಿಽತಮಾ ।
ಪೂರ್ಣಂ । ರಥಂ । ವಹೇಥೇ ಇತಿ । ಮಧ್ವಃ । ಆಽಚಿತಂ । ತೇನ । ದಾಶ್ವಾಂಸಂ । ಉಪ । ಯಾಥಃ । ಅಶ್ವಿನಾ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಮಿಂದ್ರತಮಾ ಈಶ್ವರತಮೌ ಖಲು । ಏವಂ ಪ್ರತಿವಿಶೇಷಣಂ ಹಿಃ ಸಂಬಂಧ್ಯಃ । ತಥಾ ಧಿಷ್ಣ್ಯಾ ಸ್ತುತ್ಯರ್ಹೌ ಮರುತ್ತಮಾ ಮರುದ್ವದ್ವೇಗಗಾಮಿನೌ ಮಿತರಾಗಿಣೌ ಮಿತರಾವಿಣೌ ವಾ ದಸ್ರೋಪಕ್ಷಪಯಿತಾರೌ ಶತ್ರೂಣಾಂ ದಂಸಿಷ್ಠಾತಿಶಯೇನ ಕರ್ಮಾಣೌ ರಥ್ಯಾ ರಥಾರ್ಹೌ ರಥವಂತೌ ರಥಿತಮಾ ।ರಥಿನೋ ನೇತಾರಃ । ತೇಷಾಂ ಶ್ರೇಷ್ಠೌ । ರಥೀರಧ್ವರಾಣಾಂ । ಋ. ೮-೧೧-೨ । ಇತಿ ನೇತೃಪರತಯಾ ವ್ಯಾಖ್ಯಾತತ್ವಾತ್ । ಈದೃಶೌ ಯುವಾಂ ಮಧ್ವೋ ಮಧುಸದೃಶಸ್ಯೋದಕಸ್ಯಾಮೃತಸ್ಯ ವಾ ಪೂರ್ಣಂ ಪೂರಿತಮಾಚಿತಂ ಸರ್ವತಃ ಸಂನದ್ಧಂ ರಥಂ ವಹೇಥೇ । ನಯೇಥಃ । ತೇನೋಕ್ತಗುಣವಿಶಿಷ್ಟೇನ ರಥೇನ ಹೇ ಅಶ್ವಿನಾಶ್ವಿನೌ ಉಕ್ತಗುಣವಿಶಿಷ್ಟೌ ಸಂತಾವುಪ ಯಾಥಃ । ಯಜ್ಞಮಭಿಪ್ರಾಪ್ನುಥಃ॥

॥ ಪ್ರತಿಪದಾರ್ಥ ॥

(**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । (ನೀವಿಬ್ಬರೂ) **ಇಂದ್ರತಮಾ**—ಅತ್ಯಂತ ವೈಭವಶಾಲಿಗಳೂ । **ಧಿಷ್ಣ್ಯಾ**—ಸ್ತುತ್ಯರ್ಹರೂ । **ಮರುತ್ತಮಾ**—ಮರುದ್ದೇವತೆಗಳಿಗಿಂತ ವೇಗಶಾಲಿಗಳೂ (ಮಿತವಾದ ರಾಗಶಿಷ್ಟರೂ ಅಥವಾ ಮಿತವಾದ ಶಬ್ದವಿಶಿಷ್ಟರೂ) । **ದಸ್ರಾ**—ಶತ್ರುನಾಶಕರೂ । **ದಂಸಿಷ್ಠಾ**—ಅತಿಶಯ ಕರ್ಮ

ಮಾಡುವವರೂ । **ರಥ್ಯಾ**—ರಥಾರ್ಹರೂ । (ಮತ್ತು) **ರಥೀತಮಾ**—ಅತ್ಯುತ್ತಮ ರಥಿಕರೂ (ರಥಿಕರ ನಾಯಕರೂ) । **ಹಿ**—ಅಹುದಷ್ಟೇ । (ಇಂತಹ ನೀವಿಬ್ಬರೂ) **ಮಧ್ವಃ**—ಮಧುಸದೃಶವಾದ (ಉದಕದಿಂದ ಅಥವಾ ಅಮೃತದಿಂದ) । **ಪೂರ್ಣಂ**—ಪೂರಿತವಾದ । (ಮತ್ತು) **ಆಚಿತಂ**—ಸರ್ವವಿಧದಲ್ಲಿಯೂ ಸನ್ನದ್ಧವಾದ । **ರಥಂ**—ರಥವನ್ನು । **ವಹೇಥೇ**—ತರುತ್ತೀರಿ । **ತೇನ**—ಅಂತಹ ರಥದಿಂದ । **(ಹೇ) ಅಶ್ವಿನಾ**—ಎಲೈ (ಉಕ್ತಗುಣವಿಶಿಷ್ಟರಾದ) ಅಶ್ವಿನೀದೇವತೆಗಳೇ । **ದಾಶ್ವಾಂಸಂ**—ಹವಿಸ್ಸನ್ನು ಅರ್ಪಿಸುವ ಯಜಮಾನನನ್ನು । **ಉಪ ಯಾಥಃ**—ಸಮೀಪಿಸುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ನಿಜವಾಗಿಯೂ ಮಹಾ ವೈಭವಶಾಲಿಗಳು, ಸ್ತುತ್ಯರ್ಹರು, ವಾಯುವೇಗಕ್ಕಿಂತಲೂ ಹೆಚ್ಚು ವೇಗವುಳ್ಳದರು, ಶತ್ರುನಾಶಕರು, ವಿಶೇಷವಾಗಿ ಸತ್ಕರ್ಮಗಳನ್ನಾಚರಿಸುವವರು, ರಥದಲ್ಲಿಯೇ ಸಂಚರಿಸುವವರು ಮತ್ತು ಅತ್ಯುತ್ತಮ ರಥಿಕರು; ಅಮೃತದಿಂದ ಪೂರ್ಣವಾದ ಮತ್ತು ಸರ್ವವಿಧದಲ್ಲಿಯೂ ಸನ್ನದ್ಧವಾದ ನಿಮ್ಮ ರಥದಲ್ಲಿ ಕುಳಿತು, ಹೋಮನಿಷ್ಪಾದಕನಹತ್ತಿರಕ್ಕೆ ಆಗಮಿಸಿ.

## English Translation.

Dasras, in truth most imperial, adorable, swifter than the winds, and eminent in good works, riders in a car, and most distinguished charioteers, bring hither your car, full heaped up with ambrosia, and with it come, Ashwins, to the donor (of the offering).

॥ ವಿಶೇಷವಿಷಯಗಳು ॥

**ಇಂದ್ರತಮಾ**—ಎನ್ನುವ ಪದಕ್ಕೆ **ಈಶ್ವರತಮೌ ಖಲು** ಎಂದರ್ಥಮಾಡಿದ್ದಾರೆ. **ಇಂದ್ರ** ಶಬ್ದದ ನಿರ್ವಚನಗಳನ್ನೂ ಅವಕ್ಕಿರತಕ್ಕ ಅರ್ಥಗಳನ್ನೂ ಹಿಂದೆ ನಿರುಕ್ತಕಾರರ ವಾಕ್ಯಗಳಿಂದ ಉದಾಹರಿಸಿ ತಿಳಿಸಿದೆ. ಆದರೂ ಸಹ ಪ್ರಕೃತವಾದ ಋಕ್ಕಿನಲ್ಲಿ **ಅಶ್ವಿನೀ** ದೇವತೆಗಳಿಗೆ ಈ ವಿಶೇಷಣವಿರುವುದರಿಂದ ನಿರುಕ್ತಕಾರರು ಹೇಳಿರತಕ್ಕ ಕೆಲವು ನಿರ್ವಚನಗಳ ತಾತ್ಪರ್ಯವು ಇವರ ಮಹದ್ಗುಣಗಳನ್ನು ಯಾವ ರೀತಿ ವರ್ಣಿಸುತ್ತದೆಂದು ತಿಳಿಯಬೇಕು. (ನಿ. ೧೦-೮)

**ಇಂದ್ರ ಇರಾಂ ದೃಣಾತೀತಿ ವಾ ।** ವಿಭಾಗಮಾಡು ಎಂಬರ್ಥವನ್ನು ಕೊಡುವ **ದೃ** ಧಾತುವಿನಿಂದ ನಿಷ್ಪನ್ನವಾಗಿ **ಇರಾಂ ಅನ್ನಂ ವ್ರೀಹ್ಯಾದಿ ದೃಣಾತಿ ವಿದಾರಯತಿ । ವರ್ಷಕ್ಲೇದಿತಮಂಕುರಂ ಭೀಜಂ ಭಿನತ್ತಿ ।** ವ್ರೀಹ್ಯಾದಿರೂಪವಾದ ಅನ್ನವನ್ನು ವಿಭಾಗಮಾಡುವುದರಿಂದ ಎಂದರೆ, ಮಳೆಯಿಂದ ತೋಯಲ್ಪಟ್ಟ ಬೀಜಾದ್ಯಂಕುರಗಳನ್ನು ಬಿಡಿಸಿ ವೃಕ್ಷವಾಗುವಂತೆ ಮಾಡುವುದರಿಂದ **ಇಂದ್ರನೆಂಬ** ಹೆಸರು ಪ್ರಸಿದ್ಧವಾಗಿದೆ. ಮತ್ತು,

**ಇರಾಂ ದದಾತೀತಿ ವಾ ।** ಕೊಡು ಎಂಬರ್ಥವುಳ್ಳ **ದಾ** ಧಾತುವಿನಿಂದ ನಿಷ್ಪನ್ನವಾಗಿ **ವರ್ಷದ್ವಾರೇಣಾಸೌ ಇರಾಂ ದದಾತಿ ।** ವೃಷ್ಟ್ಯುತ್ಪಾದನದ ಮೂಲಕವಾಗಿ ಅನ್ನವನ್ನು ಕೊಡುತ್ತಾನಾದ್ದರಿಂದ ಈ ಹೆಸರು ಎಂಬ ಎರಡು ವಿಧವಾದ ನಿರ್ವಚನಗಳ ಅರ್ಥಗಳನ್ನು ಪರಿಶೀಲಿಸಿ, ಅದು ಅಶ್ವಿನೀದೇವತೆಗಳಿಗೆ ಅನ್ವಯಿಸುವುದೇ ಎಂಬುದನ್ನು ನೋಡಿದರೆ,

**ವೃಷಾ ವಾಂ ಮೇಘೋ ವೃಷಣಾ ಪೀಪಾಯ ಗೋರ್ನ ಸೇಕೇ ಮನುಷೋ ದಶಸ್ಯನ್ ।**

(ಋ. ಸಂ. ೧-೧೮೧-೮)

ಇತ್ಯಾದಿ ಋಕ್ಕುಗಳಲ್ಲಿರುವ ವರ್ಣನೆಗಳಿಂದ ಮೇಲೆ ಹೇಳಿರತಕ್ಕ ಗುಣವು ಇವರಲ್ಲಿ ಪೂರ್ಣವಾಗಿದೆಯೆಂಬುದು ಪ್ರಸಿದ್ಧ ವಾಗಿದೆ. ಇದೇ ರೀತಿಯಲ್ಲಿಯೇ,

**ಇಂದವೇ ದ್ರವತೀತಿ ವಾ ।** ಓಡು ಎಂಬರ್ಥವನ್ನು ಕೊಡುವ **ದ್ರು** ಧಾತುವಿನಿಂದ ನಿಷ್ಪನ್ನವಾಗಿ ಸೋಮ ರಸಕ್ಕಾಗಿ ಆತುರದಿಂದ ಓಡಿಬರುವವನು ಆದ್ದರಿಂದ ಈ ಹೆಸರು ಎಂದರೆ,

**ಹಂಸಾವಿವ ಪತಥೋ ಅಧ್ವಗಾವಿವ ಸೋಮಂ ಸುತಂ ಮಹಿಷೇವಾವ ಗಚ್ಛಥಃ ।**
**ಸಜೋಷಸಾ ಉಷಸಾ ಸೂರ್ಯೇಣ ಚ ತ್ರಿರ್ವರ್ತಿರ್ಯಾತಮಶ್ವಿನಾ ॥**
**ಶ್ಯೇನಾವಿವ ಪತಥೋ ಹವ್ಯದಾತಯೇ ಸೋಮಂ ಸುತಂ ಮಹಿಷೇವಾವ ಗಚ್ಛಥಃ ।**
**ಸಜೋಷಸಾ ಉಷಸಾ ಸೂರ್ಯೇಣ ಚ ತ್ರಿರ್ವರ್ತಿರ್ಯಾತಮಶ್ವಿನಾ ॥**

(ಋ. ಸಂ. ೮-೩೫-೮ ರಿಂದ ೯)

ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ಇಂದ್ರನಂತೆಯೇ ಸೋಮಪಾನಕ್ಕಾಗಿ ಧಾವಿಸಿ ಬರುವ ವರ್ಣನೆಯು ಮೇಲಿನ ನಿರ್ವಚನಕ್ಕನುಗುಣವಾಗಿದೆ. ಆದುದರಿಂದಲೂ ಇವರಿಗೆ **ಇಂದ್ರತಮಾ** ಎಂಬ ವಿಶೇಷಣವು ಹೊಂದಿ ಕೊಳ್ಳುವುದು. ಮತ್ತು,

**ಇಂದೌ ರಮತೆ ಇತಿ ವಾ ।** ಸಂತೋಷಪಡು ಎಂಬರ್ಥವನ್ನು ಕೊಡುವ **ರಮ್** ಧಾತುವಿನಿಂದ ನಿಷ್ಪನ್ನವಾಗಿ ಸೋಮರಸದ ಪಾನದಿಂದ ತೃಪ್ತನಾಗುವವನು ಆದುದರಿಂದ ಈ ಹೆಸರೆಂದರೆ ಅದಕ್ಕೂ ಮೇಲಿನ ಉದಾಹರಣೆಯೇ ಆಧಾರವಾಗಿರುತ್ತದೆ. ಅಥವಾ,

**ಇಂಧೇ ಭೂತಾನೀತಿ ವಾ**—ಪ್ರಕಾಶಿಸು ಎಂಬರ್ಥವನ್ನು ಕೊಡುವ **ಇಂಧ್** ಧಾತುವಿನಿಂದ ನಿಷ್ಪನ್ನ ವಾಗಿ ಭೂತಗಳನ್ನು ಪ್ರಕಾಶಿಸುವಂತೆ ಮಾಡುವವನು ಎಂಬುದರಿಂದಾಗಲಿ ಇಂದ್ರನೆಂಬ ಹೆಸರು ಪ್ರಸಿದ್ಧವಾಗಿದೆ ಎಂಬತಕ್ಕ ನಿರ್ವಚನದಿಂದ ಈ ವಿಶೇಷಣವು ಎಂದರೆ,

**ವಿ ಚೇದುಚ್ಛಂತ್ಯಶ್ವಿನಾ ಉಷಾಸಃ ಪ್ರ ವಾಂ ಬ್ರಹ್ಮಾಣಿ ಕಾರವೋ ಭರಂತೇ ।**
**ಊರ್ಧ್ವಂ ಭಾನುಂ ಸವಿತಾ ದೇವೋ ಅಶ್ರೇದ್ಬೃಹದಗ್ನಯಃ ಸಮಿಧಾ ಜರಂತೇ ॥**

(ಋ. ಸಂ. ೭-೭೨-೪)

ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನೀದೇವತೆಗಳ ಉದಯವಾದೊಡನೆಯೇ ತಮಸ್ಸಿನ ನಾಶವಾಗುವುದೆಂದೂ, ಲೋಕಕ್ಕೆ ಆದಿತ್ಯರಶ್ಮಿಗಳ ಪ್ರಕಾಶವು ದೊರಕುವುದೆಂದೂ ವರ್ಣಿಸಿ ಇವರನ್ನೇ ಲೋಕಪ್ರಕಾಶಕರು ಎಂದು ಸ್ತುತಿಸಿದೆ. ಆದುದ ರಿಂದ ಈ ವಿಶೇಷಣವು ಇವರಿಗೆ ಯುಕ್ತವಾಗಿದೆ.

**ಇದಂ ಕರಣಾದಿತ್ಯಾಗ್ರಯಣಃ**—ವಿಶ್ವಸೃಷ್ಟಿಯಲ್ಲಿ ಎಲ್ಲವನ್ನೂ ಇವನೇ ಮಾಡಿದನು (ಇದಮಸೌ ಸರ್ವ ಮಕರೋತ್) ಎಂಬುದರಿಂದ ಇಂದ್ರ ಶಬ್ದವಿದೆಯೆಂದು ಒಂದು ಮತವಾದರೆ, "ಅಸರ್ಜಿ ವಾಂ ಸ್ಥವಿರಾ ವೇಧಸಾ...."

(೧-೧೮೧-೭) ಎಂಬ ಋಕ್ಕಿನ ವಿಶೇಷವಿಷಯಗಳಲ್ಲಿ ಅಶ್ವಿನೀದೇವತೆಗಳು ಜಗತ್ಸೃಷ್ಟಿಗೆ ಹೇಗೆ ಕಾರಣರು ಎಂಬ ಅಂಶವನ್ನು ತಿಳಿಸಿದೆ. ಅದೇ ಮಹತ್ತ್ವವು ಈ ವಿಶೇಷಣದಿಂದ ಪ್ರಶಂಸಿಸಲ್ಪಡಬಹುದು.

**ಇಂದತೇರೈಶ್ವರ್ಯಕರ್ಮಣಃ**—ವಿಶ್ವಕ್ಕೆಲ್ಲಾ ಪ್ರಭುವಾಗಿರುವುದರಿಂದಲೂ ಸಹ ಈ ಹೆಸರಿರಬಹುದೆಂಬ ನಿರ್ವಚನವನ್ನು ಹೇಳಿದರೆ; ಅಶ್ವಿನೀದೇವತೆಗಳು ಸೂರ್ಯಾಚಂದ್ರಮಸ್ಸುಗಳ ರೂಪದಲ್ಲಿಯೂ, ಅಹೋರಾತ್ರಗಳ ರೂಪದಲ್ಲಿಯೂ, ಜಗತ್ಕರ್ತೃಗಳಾದ ದ್ಯಾವಾಪೃಥಿವೀರೂಪದಲ್ಲಿಯೂ, ವಿಶ್ವವ್ಯಾಪಿಗಳಾಗಿಯೂ, ಸಕಲ ವ್ಯವಹಾರಗಳಿಗೂ ಅಧ್ಯಕ್ಷರಾಗಿಯೂ ಇರುವುದರಿಂದ ಅವರ ಮಹತ್ತ್ವವನ್ನು ಪ್ರಶಂಸಿಸುವಾಗ ಈ ಅರ್ಥವೂ ಹೊಂದಿಕೊಳ್ಳುತ್ತದೆ. ಹೀಗೆ ಸಕಲ ವಿಧವಾದ ಮಹದ್ಗುಣಗಳೂ ಅಶ್ವಿನೀದೇವತೆಗಳಲ್ಲಿರುವಾಗ ಇಂದ್ರತಮಾ ಎಂಬ ವಿಶೇಷಣವು ಅತ್ಯುಚಿತವಾಗಿದೆ. ಇದರಂತೆಯೇ,

**ಅಭೂದುಷಾ ಇಂದ್ರತಮಾ ಮಘೋನ್ಯಜೀಜನತ್ಸುವಿತಾಯ ಶ್ರವಾಂಸಿ ।**
**ವಿ ದಿವೋ ದೇವೀ ದುಹಿತಾ ದಧಾತ್ಯಂಗಿರಸ್ತಮಾ ಸುಕೃತೇ ವಸೂನಿ ॥**

(ಋ. ಸಂ. ೭-೭೯-೩)

ಎಂಬಲ್ಲಿ **ಉಷಸ್ಸಿಗೂ ಇಂದ್ರತಮಾ** ಎಂಬ ವಿಶೇಷವಿದ್ದು ಅವಳ ಮಾಹಾತ್ಮ್ಯವನ್ನು ಈ ವಿಶೇಷಣದಿಂದ ವರ್ಣಿಸಿದೆ.

**ಮರುತ್ತಮಾ—ಮರುದ್ವೇಗಗಾಮಿನೌ ಮಿತರಾಗಿಣೌ ಮಿತರಾವಿಣೌ ವಾ ।** ಮರುತ್ತುಗಳಂತೆ ವೇಗವಾಗಿ ಗಮನವುಳ್ಳವರಾದ್ದರಿಂದಾಗಲಿ ಅಥವಾ ಮಿತವಾದ ರಾಗವಿಶಿಷ್ಟರಾದುದರಿಂದಾಗಲಿ ಅಥವಾ ನಿಯಮಿತವಾದ ತೇಜಸ್ಸಾಗಲಿ ಶಬ್ದವಾಗಲಿ ಇರುವುದರಿಂದಾಗಲಿ ಈ ವಿಶೇಷಣವಿದೆಯೆಂದು ಸಾಯಣರು ವಿವರಿಸಿದ್ದಾರೆ. ಈ ಎಲ್ಲಾ ಗುಣಗಳೂ ಅಶ್ವಿನೀದೇವತೆಗಳಲ್ಲಿ ವರ್ಣಿತವಾಗಿದೆ.

**ದಂಸಿಷ್ಠಾ—ಅತಿಶಯಕರ್ಮಾಣೌ । ದಂಸ** ಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿದೆ. ಅತಿಶಯವಾದ ಕರ್ಮವುಳ್ಳವರೆಂದರ್ಥ.

**ರಥೀತಮಾ (ರಥಿನಃ)** ಎಂಬ ಪದಕ್ಕೆ**ನೇತಾರಃ** ಎಂದರ್ಥಮಾಡಿದೆ. ಈ ಅರ್ಥವು ಈ ಪದಕ್ಕೆ ಹೇಗೆ ಸಾಧ್ಯ ಎಂಬ ಪ್ರಶ್ನೆಯು ಬಂದರೆ ಅಗ ಇದಕ್ಕೆ ಆಧಾರವಾಗಿ,

**ತ್ವಮಸಿ ಪ್ರಶಸ್ಯೋ ವಿದಥೇಷು ಸಹಂತ್ಯ । ಅಗ್ನೇ ರಥೀರಧ್ವರಾಣಾಂ ।**

(ಋ. ಸಂ. ೮.೧೧-೨)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ರಥೀಃ** ಎನ್ನುವ ಪದಕ್ಕೆ ಹೇಗೆ **ನೇತಾ** ಎಂದರ್ಥವಾಗುತ್ತದೆಯೋ ಅದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥವೆಂದು ತಿಳಿಸಿದೆ.

**ಮಧ್ವಃ—ಮಧು ಸದೃಶಸ್ಯ ಉದಕಸ್ಯ ವಾ (ಪೂರಿತಂ ರಥಂ)** ಮಧುಸದೃಶವಾದ ಉದಕದಿಂದ ಅಥವಾ ಅಮೃತದಿಂದ ಪೂರಿತವಾದ ರಥವನ್ನು ಎಂದು ಅಶ್ವಿನೀದೇವತೆಗಳ ರಥದ ವೈಶಿಷ್ಟ್ಯವನ್ನು ಸ್ತುತಿಸಿದೆ. ಸಾಧಾರಣವಾಗಿ ಅಶ್ವಿನೀದೇವತೆಗಳ ರಥಕ್ಕೆ **ಮಧುಮಾನ್; ಮಧುವಾಹನಃ** ಇತ್ಯಾದಿ ವಿಶೇಷಣಗಳು ಸಹಜವಾಗಿಯೇ ಇರುತ್ತದೆ. ಅವರ ರಥಕ್ಕೇ ಅಲ್ಲದೇ ಅವರಿಗೆ **ಮಧುವಾಹಕ**ರೆಂದೂ ಪ್ರಸಿದ್ಧಿಯಿದೆ.

**ಇದಂ ವೈ ತನ್ಮಧು ದಧಙ್ಙಾಥರ್ವಣೋಽಶ್ವಿಭ್ಯಾಮುವಾಚ । ತದೇತದೃಷಿಃ ಪಶ್ಯನ್ನವೋಚತ್ ।**

(ಬೃ. ಉ. ೨-೫-೧೬)

ಎಂಬುದಾಗಿ ಅಥರ್ವಪುತ್ರನಾದ ದಧೀಚಿಯು ಅಶ್ವಿನೀ ದೇವತೆಗಳಿಗೆ **ಮಧು** ವಿದ್ಯೆಯನ್ನುಪದೇಶಿಸಿದ ಕಥೆಯು ಪ್ರಸಿದ್ಧವಾಗಿದೆ. ಆಧ್ಯಾತ್ಮಿಕವಾದ ವಿದ್ಯೆಗೆ ತಳಹದಿಯಾದ ಈ ಮಧುವಿದ್ಯೆಗೆ ಅಶ್ವಿನೀದೇವತೆಗಳೇ ಉಪದೇಶಕ ರಾದುದರಿಂದ ಇವರು ತಮ್ಮ ರಥದಲ್ಲಿ ಈ ವಿದ್ಯೆಯನ್ನು ತುಂಬಿಕೊಂಡು ಬರುವರೆಂದು ಆಲಂಕಾರಿಕವಾದ ವರ್ಣನೆ ಯಿದೆ. ಇದೇ ಅಂಶವನ್ನು,

**ತ್ರಯಃ ಪವಯೋ ಮಧುವಾಹನೇ ರಥೇ ಸೋಮಸ್ಯ ವೇನಾಮನು ವಿಶ್ವ ಇದ್ವಿದುಃ ।**

(ಋ. ಸಂ. ೧-೩೪-೨)

**ಅಧಿ ವಾಂ ಸ್ಥಾಮ ವಂಧುರೇ ರಥೇ ದಸ್ರಾ ಹಿರಣ್ಯಯೇ ।**
**ಪಥೇವ ಯಂ ತಾವನುಶಾಸತಾ ರಜೋಽಂಜಸಾ ಶಾಸತಾ ರಜಃ ॥**

(ಋ. ಸಂ. ೧-೧೩೯-೪)

ಇತ್ಯಾದ್ಯನೇಕ ಋಕ್ಕುಗಳಲ್ಲಿ **ಮಧುವಾಹನೇ ರಥೇ ; ಹಿರಣ್ಯಯೇ ರಥೇ** ಎಂಬ ವಿಶೇಷಣಗಳಿಂದ ತಿಳಿಸಿದೆ. **ಹಿರಣ್ಯಯೇ ರಥೇ** ಎಂದರೂ ಸಹ **ಮಧುಪೂರ್ಣೇ ರಥೇ ।** ಮಧುವಿನಿಂದ ತುಂಬಿದ ರಥದಲ್ಲಿ ಎಂದೇ ಅರ್ಥವಾಗುತ್ತದೆಯೆಂದು ಹಿಂದೆ ತಿಳಿಸಿದೆ. ಆದುದರಿಂದ **ಮಧ್ವಃ** ಎಂಬ ವಿಶೇಷಣಕ್ಕೆ ಇಲ್ಲಿ ವಿಶೇಷಾರ್ಥವನ್ನು ಹೇಳಬೇಕು. ಅಶ್ವಿನೀ ದೇವತೆಗಳಿಗೆ ಈ ಮಧುವಿದ್ಯೆಯು ಹೇಗೆ ಪ್ರಾಪ್ತವಾಯಿತು ಎಂಬುದನ್ನು,—

**ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ ॥**

(೧-೧೧೬-೧೨)

ಎಂಬ ಋಕ್ಕನ್ನು ವಿವರಿಸುವಾಗ ಸಾಯಣರು ಕಥಾ ಸಂದರ್ಭದೊಡನೆ ತಿಳಿಸಿದ್ದಾರೆ. ಅದರ ಸಾರಾಂಶವನ್ನು ಹಿಂದೆ ತಿಳಿಸಿದೆ. ಇಲ್ಲಿ ಅದನ್ನು ಪುನರುಕ್ತಿಯನ್ನಾಗಿ ಮಾಡದೆ ಇದೇ ಕಥೆಯು ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರು ವುದನ್ನೂ ಮತ್ತು ಇದೇ ಮಧುವಿದ್ಯೆಯ ಸ್ವರೂಪವು ಉಪನಿಷಾದಿಗಳಲ್ಲಿ ವರ್ಣಿತವಾಗಿರುವುದನ್ನೂ ಇಲ್ಲಿ ತಿಳಿಸ ಲಾಗುತ್ತದೆ. ಈ ಸಂದರ್ಭವು ಶತಪಥ ಬ್ರಾಹ್ಮಣದಲ್ಲಿ (ಶ. ಬ್ರಾ. ೧೪-೧-೮-೧೮ ರಿಂದ ೨೫) ಈ ರೀತಿಯಿದೆ.

**ದಧ್ಯಙ್ ಹ ವಾ ಆಥರ್ವಣಃ । ಏತಂ ಶುಕ್ರಮೇತಂ ಯಜ್ಞಂ ವಿದಾಂಚಕಾರ । ಯಥಾ ಯಥೈತದ್ಯಜ್ಞಸ್ಯ ಶಿರಃ ಪ್ರತಿಧೀಯತೇ ಯಥೈಷ ಕೃತ್ಸ್ನೋ ಯಜ್ಞೋ ಭವತಿ । ಸಹೇಂದ್ರೇಣೋಕ್ತ ಆಸ । ಏತಂ ಚೇದನ್ಯಸ್ಮಾ ಅನುಬ್ರೂಯಾಸ್ತತ ಏವ ತೇ ಶಿರಶ್ಛಿಂದ್ಯಾಮಿತಿ ।**

ಅಥರ್ವಪುತ್ರನಾದ ದಧೀಚಿಯು ಶುದ್ಧವಾದ ಈ ಯಜ್ಞತತ್ತ್ವವನ್ನು ತಿಳಿದನು. ಈ ಯಜ್ಞಶಿರವು ಪುನಃ ಸ್ಥಾಪಿತವಾದುದು ಹೇಗೆ, ಯಜ್ಞವು ಪೂರ್ಣವಾದುದು ಹೇಗೆ ಎಂದರೆ, ಇಂದ್ರನು ದಧೀಚಿಯನ್ನು ಕುರಿತು ಈ ತತ್ತ್ವ ವನ್ನು ನೀನು ಯಾರಿಗಾದರೂ ಹೇಳಿದರೆ ನಿನ್ನ ತಲೆಯನ್ನು ಕತ್ತರಿಸುವೆನು ಎಂದನು.

**ತದು ಹಾಶ್ವಿನೋರನುಶ್ರುತಮಾಸ । ದಧ್ಯಙ್ಙ ಹ ವಾ ಆಥರ್ವಣ ಏತಂ ಶುಕ್ರಮೇತಂ ಯಜ್ಞಂ ವೇದ ಯಥಾಯಥೈತದ್ಯಜ್ಞಸ್ಯ ಶಿರಃ ಪ್ರತಿಧೀಯತೇ ಯಥೈಷ ಕೃತ್ಸ್ನೋ ಯಜ್ಞೋ ಭವತಿ ।**

ಆಗ ಅಶ್ವಿನೀದೇವತೆಗಳು ಈ ಇಂದ್ರಶಾಸನವನ್ನು ಕೇಳಿದರೂ ಸಹ ದಧೀಚಿಯಿಂದ ಜ್ಞಾತವಾದ ಯಜ್ಞತತ್ವವನ್ನು ತಾವೂ ಪಡೆಯಬೇಕೆಂದಿಚ್ಛಿಸಿದರು

**ತೌ ಹೇತ್ಯೋಚತುಃ । ಉಪ ತ್ವಾಯಾವೇತಿ ಕಿಮನುವಕ್ಷ್ಯಮಾಣಾವಿತ್ಯೇತಂ ಶುಕ್ರಮೇತಂ ಯಜ್ಞಂ ಯಥಾ............ಕೃತ್ಸ್ನೋ ಯಜ್ಞೋ ಭವತೀತಿ ।**

ಆಗ ಅವರು ದದೀಚಿಯಲ್ಲಿಗೆ ಹೋಗಿ ತಾವು ಅವನ ಶಿಷ್ಯರಾಗಿ ತಾವೂ ಆ ತತ್ವವನ್ನು ತಿಳಿಯಬೇಕೆಂದೂ ತಮಗೂ ಉಪದೇಶ ಮಾಡಬೇಕೆಂದೂ ಕೇಳಿಕೊಂಡರು.

**ಸ ಹೋವಾಚ । ಇಂದ್ರೇಣ ವಾ ಉಕ್ತೋಽಸ್ಮ್ಯೇತಂ ಚೇದನ್ಯಸ್ಮಾ ಅನುಬ್ರೂಯಾಸ್ತತ ಏವ ತೇ ಶಿರಶ್ಛಿಂದ್ಯಾಮಿತಿ ತಸ್ಮಾದ್ವೈ ಬಿಭೇಮಿ ಯದ್ವೈ ಮೇ ಸ ಶಿರೋ ನ ಛಿಂದ್ಯಾನ್ನ ವಾಮು-ಪನೇಷ್ಯ ಇತಿ ।**

ಅವನು ಅವರ ಪ್ರಾರ್ಥನೆಗೆ ಉತ್ತರವಾಗಿ ತನಗೆ ಇಂದ್ರನು ಕೊಟ್ಟಿರುವ ಶಾಸನವನ್ನು ತಿಳಿಸಿ ಅವರನ್ನು ಶಿಷ್ಯರನ್ನಾಗಿ ಪರಿಗ್ರಹಿಸಲು ಸಾಧ್ಯವಿಲ್ಲವೆಂದನು.

**ತೌ ಹೋಚತುಃ । ಆವಾಂ ತ್ವಾ ತಸ್ಮಾತ್ತ್ರಾಯಸ್ಯಾವಹ ಇತಿ ಕಥಂ ಮಾ ತ್ರಾಸ್ಯೇಥೇ ಇತಿ ಯದಾ ನಾ ಉಪನೇಷ್ಯಸೇಽಥ ತೇ ಶಿರಶ್ಛಿತ್ತ್ವಾನ್ಯತ್ರಾಪನಿಧಾಸ್ಯಾವೋಽಥಾಶ್ವಸ್ಯ ಶಿರ ಆಹೃತ್ಯ ತತ್ತೇ ಪ್ರತಿಧಾಸ್ಯಾವಸ್ತೇನ ನಾವನುವಕ್ಷ್ಯಸಿ ಸ ಯದಾ ನಾವನುವಕ್ಷ್ಯಸ್ಯಥ ತೇ ತದಿಂದ್ರಃ ಶಿರಶ್ಛೇತ್ಸ್ಯತ್ಯಥ ತೇ ಸ್ವಂ ಶಿರ ಆಹೃತ್ಯ ತತ್ತೇ ಪ್ರತಿಧಾಸ್ಯಾವ ಇತಿ ತಥೇತಿ ।**

ಅವರು ಅದಕ್ಕೆ ಪ್ರತ್ಯುತ್ತರವಾಗಿ ನಾವು ನಿನ್ನನ್ನು ರಕ್ಷಿಸುವೆವು ಎಂದರು. ಹೇಗೆಂದು ಅವನು ಕೇಳಲಾಗಿ ನಿನ್ನ ತಲೆಯನ್ನು ತೆಗೆದು ಬೇರೆ ಜಾಗದಲ್ಲಿ ಅಶ್ವಶಿರವನ್ನಿಡುವೆವು. ನಿನ್ನ ಉಪದೇಶವಾದನಂತರ ಇಂದ್ರನು ಆ ಕೃತಕವಾದ ಶಿರಸ್ಸನ್ನು ಕತ್ತರಿಸುವನು. ಆಮೇಲೆ ಪುನಃ ನಿನ್ನ ಪ್ರಾಕೃತಿಕವಾದ ಶಿರಸ್ಸನ್ನು ತಂದಿಡುವೆವು ಎಂದು ಹೇಳಿದೊಡನೆ ಹಾಗೆಯೇ ಆಗಲೆಂದು ದಧೀಚಿಯು ಒಪ್ಪಿಕೊಂಡನು.

**ತೌ ಹೋಪನಿನ್ಯೇ । ತೌ ಯದೋಪನಿನ್ಯೇಽಥಾಸ್ಯ ಶಿರಶ್ಛಿತ್ತ್ವಾನ್ಯತ್ರಾಪನಿದಧತುರಥಾಶ್ವಸ್ಯ ಶಿರ ಆಹೃತ್ಯ ತದ್ಧಾಸ್ಯ ಪ್ರತಿದಧತುಸ್ತೇನ ಹಾಭ್ಯಾಮನೂವಾಚ ಸ ಯದಾಭ್ಯಾಮನೂವಾಚಾಥಾಸ್ಯ ತದಿಂದ್ರಃ ಶಿರಶ್ಚಿಚ್ಛೇದಾಥಸ್ಯ ಸ್ವಂ ಶಿರ ಆಹೃತ್ಯ ತದ್ಧಾಸ್ಯ ಪ್ರತಿದಧತುಃ ।**

ಕೂಡಲೇ ಅವರಿಬ್ಬರಿಗೂ ಶಿಷ್ಯವೃತ್ತಿಯನ್ನು ವಹಿಸಿ ಉಪದೇಶವನ್ನು ಗ್ರಹಿಸಿದನಂತರ ಇಂದ್ರನು ಬಂದು ಆ ಅಶ್ವಶಿರವನ್ನು ಕತ್ತರಿಸಿದನು. ಆ ಒಡನೆಯೇ ಅಶ್ವಿನೀದೇವತೆಗಳು ದಧೀಚಿಯ ಪ್ರಾಕೃತವಾದ ಶಿರವನ್ನು ಪುನಃ ಸ್ಥಾಪಿಸಿದರು.

**ತಸ್ಮಾದೇತದೃಷೀಣಾಮಭ್ಯನೂಕ್ತಂ। ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚೇತ್ಯಾಯತಂ ತದುವಾಚೇತಿ ಹ್ಯೈವೈತದುಕ್ತಂ ।**

(ಶ. ಬ್ರಾ. ೧೪-೧-೧-೧೮ ರಿಂದ ೨೫)

ಆದುದರಿಂದಲೇ ಅಥರ್ವಪುತ್ರನಾದ ದಧೀಚಿಯು ಅಶ್ವಶಿರದ ದ್ವಾರಾ ಈ ಮಧುವಿದ್ಯೆಯನ್ನು ಪದೇಶಿಸಿದನೆಂದು ಪ್ರಸಿದ್ಧವಾಗಿದೆ. ಈ ಕಥೆಯು ಬೃಹದ್ದೇವತೆಯಲ್ಲಿಯೂ ಸಹ,

**ಪ್ರಾದಾದ್ವ್ರಹ್ಮಾಪಿ ಸುಪ್ರೀತಃ ಸುತಾಯ ತದಥರ್ವಣಃ ।**
**ಸ ಚಾಭವದೃಷಿಸ್ತೇನ ಬ್ರಹ್ಮಣಾ ದೀಪ್ತಿಮತ್ತರಃ ॥**
**ತಮೃಷಿಂ ನಿಷಿಷೇಧೇಂದ್ರೋ ನೈವಂ ಪ್ರೋಚಃ ಕ್ವಚಿನ್ಮಧು ।**
**ನ ಹಿ ಪ್ರೋಕ್ತೇ ಮಧುನ್ಯಸ್ಮಿನ್ ಜೀವಂತಂ ತ್ವೋತ್ಸೃಜಾಮ್ಯಹಂ ॥**
**ತಮೃಷಿಂ ತ್ವಶ್ವಿನೌ ದೇವೌ ವಿವಿಕ್ತೇ ಮಧ್ವಯಾಚತಾಂ ।**
**ಸ ಚ ತಾಭ್ಯಾಂ ತದಾಚಷ್ಟೇ ಯದುವಾಚ ಶಚೀಪತಿಃ ॥**
**ತಮಬ್ರೂತಾಂ ತು ನಾಸತ್ಯಾವಾಶ್ವ್ಯೇನ ಶಿರಸಾ ಭವಾನ್ ।**
**ಮಧ್ವಾಶು ಗ್ರಾಹಯತ್ವಾವಾಂ ನೇಂದ್ರಸ್ತ್ವಾ ವಧೀಷ್ಯತಿ ॥**
**ಆಶ್ವ್ಯೇನ ಶಿರಸಾ ತೌ ತು ದಧ್ಯಙ್ಙಾಹ ಯದಶ್ವಿನೌ ।**
**ತದಸ್ಯೇಂದ್ರೋಽಹರತ್ಸ್ವಂ ತನ್ನ್ಯಧತ್ತಾಮನುಸ್ಯ ಯಚ್ಛಿರಃ ॥**
**ದಧೀಚಶ್ಚ ಶಿರಶ್ಚಾಶ್ವ್ಯಂ ಕೃತ್ತಂ ವಜ್ರೇಣ ವಜ್ರಿಣಾ ।**
**ಪಪಾತ ಸರಸೋ ಮಧ್ಯೇ ಪರ್ವತೇ ಶರ್ಯಣಾವತಿ ॥**
**ತದಧ್ಯುಸ್ತು ಸಮುತ್ಥಾಯ ಭೂತೇಭ್ಯೋ ವಿವಿಧಾನ್ವರಾನ್ ।**
**ಪ್ರಾದಾಯ ಯುಗಪರ್ಯಂತಂ ತಾಸ್ವೇವಾಪ್ಸು ನಿಮಜ್ಜತಿ ॥**

(ಬೃ. ದೇ. ೩-೧೮ ರಿಂದ ೨೪)

ಎಂಬ ವಾಕ್ಯಗಳಲ್ಲಿ ಇದೇ ಕಥೆಯನ್ನು ಹೇಳಿದೆ ಕಥೆಯ ವಿವರಣೆಯಲ್ಲಿ ಏನೂ ವ್ಯತ್ಯಾಸವಿಲ್ಲ. ಆದರೆ ಕೊನೆಯಲ್ಲಿ ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಆ ಅಶ್ವಶಿರವು **ಶರ್ಯಣಾವತ್ತೆಂಬ** ಪರ್ವತದಲ್ಲಿರುವ ಸರೋವರದಲ್ಲಿ ಬಿದ್ದುದೂ, ಅದು ಪದೇ ಪದೇ ಮೇಲಕ್ಕೆದ್ದು ಸಕಲ ಪ್ರಾಣಿಗಳಿಗೂ ತಕ್ಕ ವರಗಳನ್ನು ಪ್ರಭೂತವಾಗಿ ಕೊಡುತ್ತಾ, ಯುಗಪರ್ಯಂತವಾಗಿ ಅಲ್ಲೇ ಮುಳುಗಿರುವುದೆಂದು ಹೇಳಿರುವ ವಿಷಯವು ಮಾತ್ರ ಇಲ್ಲಿ ಹೆಚ್ಚಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರತಮಾ—ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ಪ್ರಥಮಾ ದ್ವಿವಚನಕ್ಕೆ ಆಕಾರಾದೇಶ. ಮರುತ್ತಮಾ ಎಂಬಲ್ಲಿಯೂ ಹೀಗೆಯೇ ಕಾರ್ಯಗಳು ಬರುತ್ತವೆ.

**ದಂಸಿಷ್ಠಾ**—ಪೂರ್ವೋಕ್ತ ಸೂತ್ರದಿಂದ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. **ಟೇಃ** (ಪಾ. ಸೂ. ೬-೪-೧೫೩) ಎಂಬುದರಿಂದ ಪೂರ್ವದ ಟಿಗೆ (ಅಸ್) ಲೋಪ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಹಿಂದಿನಂತೆ ದ್ವಿವಚಕ್ಕೆ ಆಕಾರಾದೇಶ.

**ರಥ್ಯಾ**—ರಥಮರ್ಹತ ಇತಿ ರಥ್ಯಾ. **ರಥಾದ್ಯತ್** (ಪಾ. ಸೂ. ೪-೩-೧೨೧) ಎಂಬುದರಿಂದ ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಲೋಪ. **ತಿತ್‌ಸ್ವರಿತಮ್** (ಪಾ. ಸೂ. ೬–೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ದ್ವಿವಚನಕ್ಕೆ ಆಕಾರಾದೇಶ.

**ರಥೀತಮಾ** – ಹಿಂದಿನಂತೆ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುಧರಿಂದ ಸಂಹಿತಾದಲ್ಲಿ ಪೂರ್ವಪದಕ್ಕೆ ದೀರ್ಘ ಬರುತ್ತದೆ. ವಿಭಕ್ತಿಗೆ ಆಕಾರಾದೇಶ.

**ಪೂರ್ಣಮ್**—ಪೄ ಪಾಲನಪೂರಣಯೋಃ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧-೧೦೨) ಎಂಬುದರಿಂದ ಉತ್ವ. **ಉರಣ್ರಪರಃ** ಎಂಬುದರಿಂದ ರ ಪರವಾಗಿ ಬಂದಾಗ **ಹಲಿ ಚ** ಸೂತ್ರದಿಂದ ದೀರ್ಘ. **ರದಾಭ್ಯಾಂ ನಿಷ್ಠಾತೋ**—(ಪಾ. ಸೂ. ೮-೨-೪೨) ಎಂಬುದರಿಂದ ರೇಫದ ಪರದಲ್ಲಿ ಕ್ತ ಪ್ರತ್ಯಯ ಇರುವುದರಿಂದ ನತ್ವ. **ರಷಾಭ್ಯಾಂ ಣೋ**—ಎಂಬುದರಿಂದ ಣತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ವಹೇಥೇ**—ವಹ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಆಚಿತಮ್**—ಚಿಞ್ ಚಯನೇ. ಧಾತು. ನಿಷ್ಠಾ ಕ್ತ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಆಙ್) ನಿಘಾತಸ್ವರ ಬರುತ್ತದೆ.

**ದಾಶ್ವಾಂಸಮ್**—ದಾಶೃ ದಾನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀ**—(ಪಾ. ಸೂ. ೬–೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ. ಪ್ರತ್ಯಯಸ್ವರ ಬರುತ್ತದೆ.

**ಯಾಥಃ**—ಯಾ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

**ಕಿಮತ್ರ ದಸ್ರಾ ಕೃಣುಥಃ ಕಿಮಾಸಾಥೇ ಜನೋ ಯಃ ಕಶ್ಚಿದಹವಿರ್ಮಹೀಯತೇ ।**

**ಅತಿ ಕ್ರಮಿಷ್ಟಂ ಜುರತಂ ಪಣೇರಸುಂ ಜ್ಯೋತಿರ್ವಿಪ್ರಾಯ ಕೃಣುತಂ ವಚಸ್ಯವೇ ॥**

॥ ಪದಪಾಠಃ ॥

**ಕಿಂ । ಅತ್ರ । ದಸ್ರಾ । ಕೃಣುಥಃ । ಕಿಂ । ಆಸಾಥೇ ಇತಿ । ಜನಃ । ಯಃ । ಕಃ । ಚಿತ್ । ಅಹವಿಃ । ಮಹೀಯತೇ ।**

**ಅತಿ । ಕ್ರಮಿಷ್ಟಂ । ಜುರತಂ । ಪಣೇಃ । ಅಸುಂ । ಜ್ಯೋತಿಃ । ವಿಪ್ರಾಯ । ಕೃಣುತಂ । ವಚಸ್ಯವೇ ॥**

॥ ಸಾಯಣಭಾಷ್ಯಂ ॥

**ಹೇ ದಸ್ರೌಉಪಕ್ಷಪಯಿತಾರೌ ಯುವಾಮತ್ರಾಸ್ಮಿನ್ಮನುಷ್ಯೇ ಕಿಂ ಕೃಣುಥಃ। ಕುರುಥಃ। ಹವಿಷೋಽಭಾವಾದಿತಿಭಾವಃ। ತತ್ರೈವ ಕಿಮಾಸಾಥೇ। ಕಿಂ ತಿಷ್ಠಥಃ। ಅತ್ರೇತ್ಯುಕ್ತಂ ಕುತ್ರೇತ್ಯಾಹ। ಯಃ ಕಶ್ಚಿಜ್ಜನೋ ಜನ್ಮವಾನಹವಿರ್ಯಜ್ಞಾರ್ಹಹವೀರಹಿತೋ ಮಹೀಯತೇ ಪೂಜ್ಯತೇ ಸ್ವಯಂ ನ ಯುಷ್ಮಾನ್ ಪೂಜಯತಿ। ತಂ ಜನಮತಿ ಕ್ರಮಿಷ್ಟಂ। ಪರಾಭೂಯ ತಿಷ್ಠತಂ। ನ ಕೇವಲಮತಿಕ್ರಮಮಾತ್ರಂ ಕಿಂತು ಪಣೇರ್ವಣಿಗ್ರೂಪಸ್ಯ ಲುಬ್ಧಕಸ್ಯಾಯುಷ್ಮತಸ್ತಸ್ಯಾಸುಂ ಪ್ರಾಣಂ ಜುರತಂ। ಅಹಿಂಸಿಷ್ಟಂ। ಅನೀನಶತಂ। ವಿಪ್ರಾಯ ಮೇಧಾವಿನೇ ವಚಸ್ಯವೇ ವಚಸಃ ಸ್ತೋತ್ರರೂಪಸ್ಯ ಯುವಾಭ್ಯಾಮಿಚ್ಛತೇ ಮಹ್ಯಂ ಜ್ಯೋತಿಃ ಕೃಣುತಂ। ಯುಷ್ಮದ್ವಿಷಯಜ್ಞಾನಂ ಕುರುತಂ॥**

॥ ಪ್ರತಿಪದಾರ್ಥ ॥

**ಹೇ ದಸ್ರಾ**—ಶತ್ರುನಾಶಕರಾದ ಎಲೈ ಅಶ್ವಿನೀ ದೇವತೆಗಳೇ। **ಯಃ ಕಃ ಚಿತ್ ಜನಃ**— ಯಾವನಾದರೊಬ್ಬ ಮನುಷ್ಯನು। **ಅಹವಿಃ**—ಯಜ್ಞಾರ್ಹಹವಿರಾದಿ ರಹಿತನಾಗಿ। **ಮಹೀಯತೇ**— (ನಿಮ್ಮನ್ನು ಪೂಜಿಸದೇ ಸ್ವಯಂ) ಪೂಜಿತನಾಗುತ್ತಾನೋ। **ಅತ್ರ**—ಅಂತಹಮನುಷ್ಯನ ವಿಷಯದಲ್ಲಿ। **ಕಿಂ ಕೃಣುಥಃ**—ಏನು ಮಾಡುತ್ತೀರಿ। **ಕಿಂ ಆಸಾಥೇ**—(ಅಲ್ಲೇ) ಯಾಕೆ ಇರುತ್ತೀರಿ। **ಅತಿ ಕ್ರಮಿಷ್ಟಂ**-(ಅಂತಹ ಮನುಷ್ಯನನ್ನು) ಅತಿಕ್ರಮಿಸಿರಿ। **ಪಣೇಃ**—(ಲುಬ್ಧನಾಗಿ) ವರ್ತಕಪ್ರಾಯನಾದ (ಅವನ)। **ಅಸುಂ**—ಪ್ರಾಣವನ್ನು। **ಜುರತಂ**—ಹಿಂಸಿಸಿ (ನಾಶಮಾಡಿ)। **ವಿಪ್ರಾಯ**—ಮೇಧಾವಿಯಾದ (ಮತ್ತು)। **ವಚಸ್ಯವೇ**—ಸ್ತುತಿರೂಪವಾದ ಮಾತನ್ನು ನಿಮಗಾಗಿ ಅಪೇಕ್ಷಿಸುವ (ನನಗೆ)। **ಜ್ಯೋತಿಃ**—(ನಿಮ್ಮನ್ನು ಪೂಜಿಸಬೇಕೆಂಬ ಜ್ಞಾನರೂಪ) ಜ್ಯೋತಿಯನ್ನು। **ಕೃಣುತಂ**—ಉಂಟುಮಾಡಿ.

॥ ಭಾವಾರ್ಥ ॥

ಎಲೈ ಶತ್ರುನಾಶಕರಾದ ಅಶ್ವಿನೀದೇವತೆಗಳೇ, ಯಜ್ಞಾರ್ಹಹವಿರಾದಿರಹಿತನಾಗಿ ನಿಮ್ಮನ್ನು ಪೂಜಿಸದೇ ಸ್ವಯಂ ಪೂಜಿತನಾಗುವ ಮನುಷ್ಯನ ಹತ್ತಿರ ನಿಮಗೇನುಕೆಲಸ ? ಅಂಥವನನ್ನೇನು ಮಾಡುತ್ತೀರಿ ? ಎಲೈ ಅಶ್ವಿನೀದೇವತೆಗಳೇ ಅಂಥವನನ್ನು ಪರಾಭವಗೊಳಿಸಿ ; ಲುಬ್ಧನಾದ ಅವನನ್ನೂ ನಾಶಮಾಡಿ ; ಮೇಧಾವಿಯೂ, ನಿಮ್ಮನ್ನು ಸ್ತುತಿಸಬೇಕೆಂಬ ಇಚ್ಛೆಯುಳ್ಳವನೂ ಆದ ನನಗೆ ನಿಮ್ಮನ್ನು ಪೂಜಿಸಬೇಕೆಂಬ ಜ್ಞಾನವನ್ನು ಅನುಗ್ರಹಿಸಿ.

## English Translation.

What make you here, Ashwins : why do you tarry, (where) any man who makes no oblation is respected : humble him ; take away the life of the niggard ; grant light to the pious man striving to speak your praise,

॥ ವಿಶೇಷವಿಷಯಗಳು ॥

**ದಸ್ರಾ**—ಎಂಬ ಪದಕ್ಕೆ ಆಕರ್ಷಕವಾದ ರೂಪವುಳ್ಳವರು ಎಂದು ಒಂದರ್ಥವೂ, ಉಪಕ್ಷಯಕಾರಕರು ಎಂದು ಇನ್ನೊಂದರ್ಥವೂ ಆಗುವ ಅರ್ಥವನ್ನು ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ಉಪಕ್ಷಯಕಾರರರೆಂದರ್ಥಮಾಡಿದೆ.

ಆ ಅರ್ಥವನ್ನೇ ಹೇಳುವುದಕ್ಕೆ ಕಾರಣವೂ ಇದೆ. ಅಕಿಂಚನನಾದ ಯಜಮಾನನು ಪೂರ್ಣವಾಗಿ ಹವಿರಾದಿಗಳನ್ನು ಕೊಡಲು ಯೋಗ್ಯತೆಯಿಲ್ಲದೆ ತನ್ನ ಭಯವನ್ನು ವ್ಯಕ್ತಪಡಿಸುತ್ತಿದ್ದಾನೆ. ಮತ್ತು ಕೇವಲ ದಾರಿದ್ರ್ಯದಿಂದ "ಹವಿಷಃ ಅಭಾವಾತ್" ತನಗೆ ಅವರನ್ನುದ್ದೇಶಿಸಿ ಹವಿಸ್ಸನ್ನರ್ಪಿಸಲು ಆಗಲಿಲ್ಲವೆಂದೂ, ಆದರೂ ಸಹ ತನ್ನ ಭಕ್ತಿಯೂ, ಶ್ರದ್ಧೆಯೂ ಅಪಾರವಾಗಿದೆಯೆಂದೂ, ಆದುದರಿಂದ ತನಗೆ ತೊಂದರೆಯನ್ನುಂಟುಮಾಡಕೂಡದೆಂದೂ ಪ್ರಾರ್ಥಿಸಿ, ಪೂರ್ಣವಾದ ಐಶ್ವರ್ಯವಿದ್ದರೂ ಸಹ ಶ್ರದ್ಧಾಭಕ್ತಿರಹಿತನಾಗಿ ಹವಿಸ್ಸನ್ನರ್ಪಿಸದೇ ಇರತಕ್ಕ **ಪಣಿ** ಗಳನ್ನು ಪೂರ್ಣವಾಗಿ ನಾಶಮಾಡಿರೆಂದು ಪ್ರಾರ್ಥಿಸುತ್ತಾನೆ.

**ಪಣಿ** ಶಬ್ದಕ್ಕೆ ನಿರುಕ್ತಕಾರರ ನಿರ್ವಚನವನ್ನು ತಿಳಿಸಿ ಅದಕ್ಕೆ ಸಾಯಣರು ವಿವರಿಸಿರುವ ಅರ್ಥವನ್ನು ಹಿಂದೆ ಋ. ಸಂ. ೧-೧೮೦-೭ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. **ಲುಬ್ಧಕಾಃ, ಅಬುಧ್ಯಮಾನಾಃ, ಯಾಗಾದೀನಕುರ್ವಾಣಾಃ, ಅದಾನಶೀಲಾಃ, ಅಸ್ಮಚ್ಛತ್ರವಃ** ಇತ್ಯಾದಿಯಾಗೆಲ್ಲಾ ಸಾಯಣರು **ಪಣಿಗಳ** ಸ್ವರೂಪವನ್ನು ತಿಳಿಸಿದ್ದಾರೆ.

ಈ ರೀತಿ ಯಜ್ಞಕರ್ತರ ಹಿಂಸಕರಾದುದರಿಂದಲೇ, ಅವರನ್ನು ನಾಶಮಾಡಿರೆಂದು ಅಲ್ಲಿ ಅಶ್ವಿನೀದೇವತೆಗಳನ್ನು ಯಜ್ಞಕರ್ತನು ಪ್ರಾರ್ಥಿಸುತ್ತಾನೆ.

**ಜುರತಂ**—ಈ ಪದಕ್ಕೆ ಹಿಂಸಿಸಿ ಅಥವಾ ನಾಶಮಾಡಿರಿ ಎಂದರ್ಥ. ಸಾಧಾರಣವಾಗಿ ಈ ಪದವನ್ನು ಹಿಂಸಕರಾದ ಶತ್ರುಪರವಾಗಿಯೇ ಉಪಯೋಗಿಸುವುದುಂಟು. ಉದಾಹರಣೆಗೆ—

**ಚಿತ್ರಂ ತದ್ವೋ ಮರುತೋ ಯಾಮ ಚೇಕಿತೇ ಪೃಶ್ನ್ಯಾ ಯದೂಧರಪ್ಯಾಪಯೋ ದುಹುಃ ।**
**ಯದ್ವಾ ನಿದೇ ನವಮಾನಸ್ಯ ರುದ್ರಿಯಾಸ್ತ್ರಿತಂ ಜರಾಯ ಜುರತಾಮದಾಭ್ಯಾಃ ॥**
(ಋ ಸಂ. ೨-೩೪-೧೦)

ಇತ್ಯಾದಿ ಋಕ್ಕುಗಳಲ್ಲಿ **ಜುರತಾಂ ಹಿಂಸಕಾನಾಂ ಶತ್ರೂಣಾಂ** ಎಂದೇ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಶತ್ರುಗಳನ್ನು ಹಿಂಸಿಸಿ ಎಂದು ಪ್ರಾರ್ಥಿಸಿದೆ.

**ಜ್ಯೋತಿಃ**—ಈ ಪದಕ್ಕೆ ಕೇವಲ ಭೌತಿಕವಾದ ಪ್ರಭೆ ಅಥವಾ ಪ್ರಕಾಶವೆಂದರ್ಥವಲ್ಲ. **ಯುಷ್ಮದ್ಯಜನವಿಷಯಜ್ಞಾನಂ ।** ನಿಮ್ಮನ್ನುದ್ದೇಶಿಸಿ ಯಾಗಮಾಡಬೇಕಾದ ಜ್ಞಾನರೂಪವಾದ ಜ್ಯೋತಿಯೆಂದರ್ಥಮಾಡಿದೆ.

॥ ವ್ಯಾಕರಣಪ್ರಕ್ರಿಯಾ ॥

**ಕೃಣುಥಃ**—ಕೃವಿ ಹಿಂಸಾಕರಣಯೋಶ್ಚ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತಪ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆಸಾಥೇ**—ಆಸ ಉಪವೇಶನೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಹವಿಃ**—ನ ವಿದ್ಯತೇ ಹವಿಃ ಯಸ್ಯ ಸಃ ವ್ಯತ್ಯಯದಿಂದ ನಞ್ ನಿಮಿತ್ತಸ್ವರ ಬರುವುದಿಲ್ಲ. **ಬಹುವ್ರೀಹೌ**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ಹವಿಃ ಶಬ್ದವು ಲುಪ್ತಮತ್ವರ್ಥಕ ಪ್ರತ್ಯಯಾಂತವಾದುದರಿಂದ ತತ್ಪುರುಷ ಸಮಾಸದಲ್ಲಿ **ತತ್ಪುರುಷೇ**—ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಮಹೀಯತೇ**—ಮಹ ಪೂಜಾಯಾಮ್. ಧಾತು. ಕರ್ಮಣಿಯಲ್ಲಿ ಯಕ್. ಲಡಂತರೂಪ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ಚೇತ್ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಕ್ ಸ್ವರ ಉಳಿಯುತ್ತದೆ.

**ಕ್ರಮಿಷ್ಟಮ್**—ಕ್ರಮು ಪಾದವಿಕ್ಷೇಪೇ. ಧಾತು. **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ದ್ವಿವಚನಕ್ಕೆ ತಮಾದೇಶ. ಸಿಟಿಗೆ ಇಡಾಗಮ. **ಹ್ಮ್ಯಂತಕ್ಷಣಶ್ವಸ**—(ಪಾ. ಸೂ. ೭-೨-೫) ಎಂಬುದರಿಂದ ವೃದ್ಧಿನಿಷೇಧ **ಬಹುಲಂ ಛಂದಸ್ಯಮಾ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಜುರತಮ್**—ಜ್ಯಾ ವಯೋಹಾನೌ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ ತಮಾದೇಶ. ವ್ಯತ್ಯಯದಿಂದ ಶ ವಿಕರಣ. **ಬಹುಲಂ ಛಂದಸಿ** (ಪಾ. ಸೂ. ೭-೧-೧೦೩) ಎಂಬುದರಿಂದ ಉತ್ವ. ರ ಪರವಾಗಿ ಬರುತ್ತದೆ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣ ಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ವಚಸ್ಯವೇ**—ವಚಃ ಆತ್ಮನಃ ಇಚ್ಛತಿ ವಚಸ್ಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋಲೋಪಃ** ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೩ ॥



॥ ಸಂಹಿತಾಪಾಠಃ ॥

## ಜಂಭಯತಮಭಿತೋ ರಾಯತಃ ಶುನೋ ಹತಂ ಮೃಧೋ ವಿದಥುಸ್ತಾನ್ಯಶ್ವಿನಾ ।
## ವಾಚಂವಾಚಂ ಜರಿತೂ ರತ್ನಿನೀಂ ಕೃತಮುಭಾ ಶಂಸಂ ನಾಸತ್ಯಾವತಂ ಮಮ ॥

॥ ಪದಪಾಠಃ ॥

**ಜಂಭಯತಂ । ಅಭಿತಃ । ರಾಯತಃ । ಶುನಃ । ಹತಂ । ಮೃಧಃ । ವಿದಥುಃ । ತಾನಿ । ಅಶ್ವಿನಾ ।**
**ವಾಚಂಽವಾಚಂ । ಜರಿತುಃ । ರತ್ನಿನೀಂ । ಕೃತಂ । ಉಭಾ । ಶಂಸಂ । ನಾಸತ್ಯಾ । ಅವತಂ । ಮಮ ।**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ರಾಯತೋ ನಿಂದಿತಂ ಶಬ್ದಯತೋಽಸ್ಮಾನ್ಹಂತುಮಾಗಚ್ಛತೋ ವಾ ಶುನಃ ಶ್ವಸದೃಶಾನಭಿತೋ ಜಂಭಯತಂ । ನಾಶಯತಂ । ತಥಾ ಮೃಧಸ್ತೇಷಾಂ ಸಂಗ್ರಾಮಾನ್ ಸಂಗ್ರಾಮಂ ಕುರ್ವತೋ ವಾ ಹತಂ । ಮಾರಯತಂ । ತಾನಿ ಹನನೋಪಾಯಾನ್ವಿದಥುಃ । ಜಾನೀಥಃ । ಕಿಂಚ**

**ಜರಿತುರ್ಯುಷ್ಮಾನ್ ಸ್ತೋತುರ್ವಾಚಂ ವಾಚಂ ತಾಂ ತಾಂ ಸ್ತುತಿಲಕ್ಷಣಾಂ ವಾಚಂ ರತ್ನಿನೀಂ ಕೃತಂ । ಸರ್ವಾಮಪಿ ಸ್ತುತಿಂ ರಮಣೀಯಫಲವತೀಂ ಕುರುತಂ । ಹೇ ನಾಸತ್ಯಾ ಸತ್ಯಭೂತೌ ಯುವಾಮು-ಭೋಭೌ ಮಮ ಮದೀಯಾಂ ಶಂಸಂ ಸ್ತುತಿಮವತಂ । ರಕ್ಷತಂ ॥**

॥ ಪ್ರತಿಪದಾರ್ಥ ॥

**(ಹೇ) ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ರಾಯತಃ**—ನಿಂದಾರೂಪ ಶಬ್ದಮಾಡುವ (ಬೊಗಳುತ್ತಿರುವ) ಅಥವಾ ನಮ್ಮನ್ನು ವಧಿಸಲು ಬರುತ್ತಿರುವ । **ಶುನಃ**—ನಾಯಿಗಳಿಗೆ ಸಮನಾದ ಮನುಷ್ಯರನ್ನು । **ಅಭಿತಃ ಜಂಭಯತಂ**—ಸಂಪೂರ್ಣವಾಗಿ ನಾಶಮಾಡಿ । **ಮೃಧಃ**—(ನಮ್ಮ ಮೇಲೆ) ಯುದ್ಧಮಾಡುವವರನ್ನು । **ಹತಂ**—ವಧಮಾಡಿ । **ತಾನಿ**—ಅವರನ್ನು ವಧಿಸುವ ಉಪಾಯಗಳನ್ನು ಅಥವಾ ಅವರು ಉಪಯೋಗಿಸುವ ವಧೋಪಾಯಗಳನ್ನು । **ವಿದಥುಃ**—ನೀವು ತಿಳಿದಿದ್ದೀರಿ । **ಕಿಂಚ**—ಮತ್ತು । **ಜರಿತುಃ**—ನಿಮ್ಮನ್ನು ಸ್ತುತಿಸುವವರ । **ವಾಚಂವಾಚಂ**—ಸ್ತುತಿಲಕ್ಷಣವಾದ ಪ್ರತಿಯೊಂದು ಮಾತನ್ನು । **ರತ್ನಿನೀಂ**—ರಮಣೀಯಫಲಯುಕ್ತವನ್ನಾಗಿ । **ಕೃತಂ**—ಮಾಡಿ । **ಹೇ ನಾಸತ್ಯಾ**—ಸತ್ಯಭೂತರಾದ ಎಲೈ ಅಶ್ವಿನೀ ದೇವತೆಗಳೇ । **ಉಭಾ**—ನೀವಿಬ್ಬರೂ । **ಮಮ**—ನನ್ನ । **ಶಂಸಂ**—ಸ್ತುತಿಯನ್ನು । **ಅವತಂ**—ರಕ್ಷಿಸಿ (ಅಂಗೀಕರಿಸಿ.)

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೆ, ನಿಮ್ಮನ್ನು ನಿಂದಿಸುವವರನ್ನು ಅಥವಾ ನಮ್ಮನ್ನು ವಧಿಸಲು ಬರುತ್ತಿರುವವರನ್ನು ನಾಶಮಾಡಿ; ನಮ್ಮ ಮೇಲೆ ಯುದ್ಧಕ್ಕೆ ಬರುವವರನ್ನು ನಾಶಮಾಡಿ; ನಿಮಗೆ ಅವರನ್ನು ವಧಿಸುವ ಉಪಾಯಗಳು ತಿಳಿದಿವೆ; ನಿಮ್ಮನ್ನು ಸ್ತುತಿಸುವ ನನ್ನ ಸ್ತುತಿಯಿಂದ ತೃಪ್ತರಾಗಿ, ಸ್ತುತಿರೂಪವಾದ ಪ್ರತಿಯೊಂದು ಮಾತೂ ಉತ್ತಮ ಫಲವಿಶಿಷ್ಟವಾಗುವಂತೆ ಮಾಡಿ.

## English Translation.

Annihilate, Ashwins, the dogs who bark at us : slay them warring (against us) : you know their (means of harm) : render every word of him who praises you affluent in precious (rewards) : accept, Nasatyas, both of you, my praise.

॥ ವಿಶೇಷವಿಷಯಗಳು ॥

**ರಾಯತಃ—ನಿಂದಿತಂ ಶಬ್ದಯತಃ ಅಸ್ಮಾನ್ ಹಂತುಮಾಗಚ್ಛತೋ ವಾ**-ನಮ್ಮನ್ನು ದೂಷಿಸುತ್ತಿರುವ ಅಥವಾ ನಮ್ಮನ್ನು ಹಿಂಸಿಸಲು ಬರುತ್ತಿರುವ ಶತ್ರುಗಳನ್ನು ಎಂದರ್ಥ.

**ಮೃಧಃ—ತೇಷಾಂ ಸಂಗ್ರಾಮಾನ್ ಸಂಗ್ರಾಮಂ ಕುರ್ವತೋ ವಾ ।** ಈ ಪದಕ್ಕೆ ಯುದ್ಧವೆಂದಾಗಲಿ ಅಥವಾ ಯುದ್ಧವನ್ನು ಮಾಡತಕ್ಕ ಶತ್ರುಗಳೆಂದಾಗಲಿ ಅರ್ಥವಾಗುತ್ತದೆ. ನಿರುಕ್ತಕಾರರು ಈ ಪದವನ್ನು **ಸಂಗ್ರಾಮ** ನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. (ನಿ. ೩-೯) ಯುದ್ಧವೆಂದರ್ಥ. ಕೆಲವೆಡೆಗಳಲ್ಲಿ ಸಂಗ್ರಾಮಕ್ಕೆ ಕಾರಣನಾದ ಶತ್ರುವೆಂದೂ ಅರ್ಥವಾಗುತ್ತದೆ.

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।**
(ಋ ಸಂ. ೧೦-೧೫೨-೪)

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಸಂಗ್ರಾಮಕಾರಿಣಃ ಶತ್ರೂನ್** ಎಂಬರ್ಥವಿದೆಯೆಂದು ತೋರಿಸಿದ್ದಾರೆ. (ನಿ ೭-೨) ಪ್ರಕೃತವಾದ ಋಕ್ಕಿನಲ್ಲಿ ಎರಡರ್ಥವೂ ಹೊಂದಿಕೊಳ್ಳುತ್ತದೆ.

**ಜಂಭಯತಂ--ನಾಶಯತಂ** (ಶತ್ರುಗಳನ್ನು) ನಾಶಮಾಡಿರಿ ಎಂದು ಈ ಪದಕ್ಕೆ ಅರ್ಥಮಾಡಿದೆ. **ಜಂಭ** ಶಬ್ದಕ್ಕೆ ದಂತವೆಂದು ಅರ್ಥ. ಅದರಲ್ಲೂ ಕೋರೆ ದಾಡೆಗಳೆಂದೇ ರೂಢಿಯಲ್ಲಿದೆ. **ಜಂಭ** ಶಬ್ದ ಪ್ರಯೋಗವಿರುವಾಗಲೂ ಸಹ ಇದೇ ತಾತ್ಪರ್ಯವಿದೆ. ಉದಾಹರಣೆಗೆ--

**ನ ಯೋ ವರಾಯ ಮರುತಾಮಿವ ಸ್ವನಃ ಸೇನೇವ ಸೃಷ್ಟಾ ದಿವ್ಯಾ ಯಥಾಶನಿಃ ।**
**ಅಗ್ನಿರ್ಜಂಭೈಸ್ತಿಗಿತೈರತ್ತಿ ಭರ್ವತಿ ಯೋಧೋ ನ ಶತ್ರೂನ್ತ್ಸ ವನಾ ನ್ಯೃಂಜತೇ ॥**
(ಋ. ಸಂ. ೧-೧೪೩-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿ ಜ್ವಾಲೆಗೆ ಪರ್ಯಾಯಪದವಾಗಿ **ಜಂಭೈಃ** ಎಂಬ ಪದದ ಪ್ರಯೋಗವಿದೆ. **ಜಂಭೈರ್ದಂತೈರ್ದಂತಸ್ಥಾನೀಯಾಭಿಃ ಜ್ವಾಲಾಭಿಃ ಅತ್ತಿ** ಎಂದು ಕ್ರೂರವಾದ ಕೋರೆದಾಡೆಗಳಿಗೆ ಅಗ್ನಿಜ್ವಾಲೆಯನ್ನು ಹೋಲಿಸಿದೆ. ಇದರಂತೆಯೇ ಋ. ಸಂ. ೧-೧೪೮-೪ ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಇದೇರೀತಿಯಾದ ವರ್ಣನೆಯಿದೆ.

**ಅಸೌ ಯ ಏಷಿ ವೀರಕೋ ಗೃಹಂಗೃಹಂ ವಿಚಾಕಶತ್ ।**
**ಇಮಂ ಜಂಭಸುತಂ ಪಿಬ ಧಾನಾವಂತಂ ಕರಂಭಿಣಮಪೂಪವಂತಮುಕ್ಥಿನಂ ॥**
(ಋ. ಸಂ. ೮-೯೧-೨)

ಎಂಬಲ್ಲಿ **ಜಂಭಸುತಂ** ಎಂದರೆ ಮಮ **ದಂತೈರಭಿಷುತಂ** ನನ್ನ ದಾಡೆಗಳಿಂದ ಕಚ್ಚಿ ಹಿಂಡಿದುದು ಎಂದರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಜಂಭಯತಂ** ಎಂಬ ಕ್ರಿಯಾಪದಕ್ಕೆ ಯಾವರೀತಿ ವನಮೃಗಾದಿಗಳು ತಮ್ಮ ದಾಡೆಗಳಿಂದ ಇತರ ಪ್ರಾಣಿಗಳನ್ನು ಅಗಿದು ನಾಶಮಾಡುತ್ತವೆಯೋ ಅದರಂತೆ ನೀವು ಶತ್ರುಮರ್ದನವನ್ನು ಮಾಡಿ ಎಂದರ್ಥ.

**ಶುನಃ—ಶ್ವ ಸದೃಶಾನ್** ಎಂಬ ಉಪಮಾನದಿಂದ **ಪಣಿಯೇ** ಮುಂತಾದ ಜನರನ್ನು ಎಷ್ಟು ತಿರಸ್ಕಾರದಿಂದಲೂ ದ್ವೇಷಬುದ್ಧಿಯಿಂದಲೂ ಕಾಣುತ್ತಿದ್ದರೆಂದು ತಿಳಿಯುತ್ತದೆ.

**ರತ್ನಿನೀಂ—ರಮಣೀಯಫಲವತೀಂ ।** (ನಮ್ಮ ಸ್ತುತಿಗಳನ್ನು) ರಮಣೀಯವಾದ ಫಲವನ್ನು ಕೊಡತಕ್ಕದ್ದನ್ನಾಗಿ ಮಾಡಿರಿ ಎಂದು ಪ್ರಾರ್ಥಿಸಿದೆ. **ರತ್ನ** ಶಬ್ದಕ್ಕೆ ರಮಣೀಯವೆಂಬ ಅರ್ಥವನ್ನು ಅನೇಕ ಕಡೆಗಳಲ್ಲಿ ಹೇಳಿದೆ. ನಿರುಕ್ತಕಾರರೂ ಸಹ, **ಹೋತಾರಂ ರತ್ನಧಾತಮಂ** ಎಂಬ ವಾಕ್ಯದಲ್ಲಿ **ರತ್ನ** ಶಬ್ದಕ್ಕೆ ಇದೇ ಅರ್ಥವನ್ನೇ ಹೇಳಿದ್ದಾರೆ. (ನಿ. ೭-೧೫) ಅಮೌಲ್ಯವಾದ ವಸ್ತುವನ್ನು ವರ್ಣಿಸುವಾಗ ಅದರ ಶ್ರೇಷ್ಠತೆಯನ್ನು ಸೌಂದರ್ಯವನ್ನೂ ವರ್ಣಿಸುವಾಗೆಲ್ಲಾ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ಯಸ್ತೇ ಸ್ತನಃ ಶಶಯೋ ಯೋ ಮಯೋಭೂರ್ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ ।**
**ಯೋ ರತ್ನಧಾ ವಸುವಿದ್ಯಃ ಸುದತ್ರಃ ಸರಸ್ವತಿ ತಮಿಹ ಧಾತವೇ ಕಃ ॥**
(ಋ. ಸಂ. ೧-೧೬೪-೪೯)

ಎಂಬಲ್ಲಿ ಆನಂದರೂಪವಾದ ರಸವನ್ನು ನಿರ್ದೇಶಿಸಿದೆ. ಅದಕ್ಕೆ **ರತ್ನಧಾ** ಎಂಬ ವಿಶೇಷಣವಿರುವುದರಿಂದ **ಬಹುವಿಧ-ರಮಣೀಯರಸಾನಾಂ ಧಾರಯಿತಾ** ಎಂದರ್ಥಮಾಡಿದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶ್ರೇಷ್ಠವಾದುದೂ ರಮಣೀಯವಾದೂ ಆದ ಫಲವನ್ನು ನಿರ್ದೇಶಿಸಿದೆ

॥ ವ್ಯಾಕರಣಪ್ರಕ್ರಿಯಾ ॥

**ಜಂಭಯತಮ್**—ಜಭಿ ನಾಶನೇ. ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಇದಿತ್ತಾದುದರಿಂದ ನುಮಾಗಮ. ಲೋಟ್ ಮಧ್ಯಮಪುರುಷ ದ್ವಿವಚನಾಂತ ರೂಪ. ಪಾದಾದಿಯಲ್ಲಿರುವುರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ ಸ್ವರ ಉಳಿಯುತ್ತದೆ.

**ರಾಯತಃ**—ರೈ ಶಬ್ದೇ. ಧಾತು. ಭ್ವಾದಿ. ಲಟಿಗೆ ಶತ್ರಾದೇಶ. ಶಪ್ ವಿಕರಣ. ಆಯಾದೇಶ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಹತಮ್**—ಹನ ಹಿಂಸಾಗತ್ಯೋಃ ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಅನುದಾತ್ತೋಪದೇಶ ವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿದಥುಃ**—ವಿದ ಜ್ಞಾನೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಕ್ಕೆ **ವಿದೋಲಟೋ ವಾ** (ಪಾ. ಸೂ. ೩-೪-೮೩) ಎಂಬುದರಿಂದ ಅಥುಸಾದೇಶ. ಪ್ರತ್ಯಯಕ್ಕೆ ಜಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ವ್ಯತ್ಯಯದಿಂದ ಪ್ರತ್ಯಯಾದ್ಯುದಾತ್ತಸ್ವರ ಬರುತ್ತದೆ.

**ವಾಚಂವಾಚಮ್—ನಿತ್ಯವೀಪ್ಸಯೋಃ** ಎಂಬುದರಿಂದ: ದ್ವಿರ್ವಚನ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಪರದ ಆಮ್ರೇಡಿತವು ಸರ್ವಾನುದಾತ್ತವಾಗುತ್ತದೆ.

**ಕೃತಮ್**—ಡುಕೃಞ್ ಕರಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಕ್ಕೆ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯವು ಜಿತ್ತಾದುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಲುಭಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

**ಅವತಮ್**—ಅವ ರಕ್ಷಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಯುವಮೇತಂ ಚಕ್ರಥುಃ ಸಿಂಧುಷು ಪ್ಲವಮಾತ್ಮನ್ವಂತಂ ಪಕ್ಷಿಣಂ ತೌಗ್ರ್ಯಾಯ
ಕಂ ।
ಯೇನ ದೇವತ್ರಾ ಮನಸಾ ನಿರೂಹಥುಃ ಸುಪಪ್ತನೀ ಪೇತಥುಃ ಕ್ಷೋದಸೋ
ಮಹಃ ॥ ೫ ॥

॥ ಪದಪಾಠಃ ॥

ಯುವಂ । ಏತಂ । ಚಕ್ರಥುಃ । ಸಿಂಧುಷು । ಪ್ಲವಂ । ಆತ್ಮನ್ಽವಂತಂ । ಪಕ್ಷಿಣಂ । ತೌಗ್ರ್ಯಾಯ । ಕಂ ।
ಯೇನ । ದೇವಽತ್ರಾ । ಮನಸಾ । ನಿಃಽಊಹಥುಃ । ಸುಽಪಪ್ತನಿ । ಪೇತಥುಃ । ಕ್ಷೋದಸಃ । ಮಹಃ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ಸಿಂಧುಷು ಸಮುದ್ರೋದಕೇಷ್ವೇತಂ ಪ್ಲವಂ ಪ್ರಸಿದ್ಧಂ ಪ್ಲುತಿಸಾಧನಂ ಪ್ಲವಂ ನಾವಮಾತ್ಮನ್ವಂತಂ ದಾರ್ಢ್ಯವಂತಂ ಪಕ್ಷಿಣಂ ಪಕ್ಷವದ್ಗತಿಸಾಧನರಥವಂತಂ ತೌಗ್ರ್ಯಾಯ ತುಗ್ರನಾಮ್ನೋ ರಾಜ್ಞಃ ಪುತ್ರಾಯ ಭುಜ್ಯುನಾಮ್ನೇ ರಾಜ್ಞೇ ಕಂ ಸುಖಕರಂ ಚಕ್ರಥುಃ । ತೌಗ್ರ್ಯೋ ಭುಜ್ಯೂ ರಾಜಾ ಸಮುದ್ರವರ್ತೀ ಸಸೇನಃ ಪರಚಕ್ರಂ ಪ್ರಮಥಿತುಂ ಪ್ರಸ್ಥಿತಃ । ತಂ ಪ್ರತೀಪಬಲಾನ್ಯಾಗತ್ಯಾಪಾತಯನ್ । ಸ ಚ ಪ್ರಸಾದಫಲಕರಾಶ್ವಿನೌ ಸ್ತುತ್ವಾ ಸ್ವಾತ್ಮಾನಂ ರರಕ್ಷೇತ್ಯಯಮಿತಿಹಾಸೋ ಬಹುಧಾ ಪೂರ್ವಂ ಪ್ರಪಂಚಿತಃ । ಯದ್ವಾ । ಕಮಿತಿ ಪೂರಣಃ । ತಸ್ಯ ಜಲಸಂಚಾರಿರಥಸ್ಯ ಸಹಾಯಭೂತಾನ್ಬಹೂನ್ರಥಾದೀನಕುರುತಮಿತ್ಯರ್ಥಃ । ಅಯಮರ್ಥಸ್ತು ತಮೂಹಥುರ್ನೌಭಿಃ । ಋ. ೧-೧೧೬-೩ । ಚತಸ್ರೋ ನಾವಃ । ಋ. ೧-೧೮೨-೬ । ತ್ರಿಭೀ ರಥೈಃ । ಋ. ೧-೧೧೬-೪ । ಇತ್ಯಾದಿಮಂತ್ರಾಂತರೇಷು ಪ್ರಸಿದ್ಧಃ । ಯೇನ ಯುಷ್ಮದ್ದತ್ತೇನ ಪ್ಲವೇನ ದೇವತ್ರಾ ದೇವೇಷು ಮಧ್ಯೇ ಮನಸಾನುಗ್ರಹಯುಕ್ತಯಾ ಬುದ್ಧ್ಯಾ । ಯೇನ ಮನಸೇತಿ ವಾ ಯೋಜ್ಯಂ । ನಿರೂಹಥುಃ ನಿರ್ಗಮನಂ ಕುರುಥಃ । ತಥಾ ಸುಪಪ್ತನಿ ಶೋಭನಪತನಂ ಯಥಾ ಭವತಿ ಸುಪತನೌ ವಾ ಯುವಾಂ ಮಹೋ ಮಹತಃ ಕ್ಷೋದಸಃ । ಉದಕನಾಮೈತತ್ । ಉದಕಾತ್ಪೇತಥುಃ । ತದಧಃ ಪತಥ ಉತ್ತರೀತುಂ ॥

॥ ಪ್ರತಿಪದಾರ್ಥ ॥

(ಹೇ) **ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ । **ಯೇನ**—ಯಾವ ಪ್ಲವದಿಂದ । **ದೇವತ್ರಾ**—ದೇವತೆಗಳಲ್ಲೆಲ್ಲಾ (ನೀವಿಬ್ಬರೂ ಮಾತ್ರ) । **ಮನಸಾ**—ಅನುಗ್ರಹ ಬುದ್ಧಿಯಿಂದ । **ನಿರೂಹಥುಃ**—(ಭುಜ್ಯುವನ್ನು ದಡಕ್ಕೆ) ವಹಿಸಿದರೋ । **ಏತಂ**—ಅಂತಹ ಪ್ರಸಿದ್ಧವಾದ । **ಆತ್ಮನ್ವಂತಂ**—ದಾರ್ಢ್ಯವಿಶಿಷ್ಟವೂ । **ಪಕ್ಷಿಣಂ**—ರೆಕ್ಕೆಗಳಂತೆ ಗತಿಸಾಧಕವಾದ ರಥವಿಶಿಷ್ಟವೂ ಆದ । **ಪ್ಲವಂ**—ನಾವೆಯನ್ನು । **ಸಿಂಧುಷು**—ಸಮುದ್ರೋದಕಗಳಲ್ಲಿ । **ತೌಗ್ರ್ಯಾಯ**-

ತುಗ್ರನೆಂಬುವನ ಮಗನಾದ ಭುಜ್ಯು ಎಂಬುವನಿಗೆ । **ಕಂ**—ಸುಖಕರವಾಗುವಂತೆ । **ಯುವಂ** - ನೀವಿಬ್ಬರೂ । **ಚಕ್ರಥುಃ**—ಮಾಡಿದಿರಿ । (**ತಥಾ**—ಹಾಗೆಯೇ) । **ಸುಪಪ್ತನಿ**—ಸಮುದ್ರಪತನವು ಸುಖಕರವಾಗುವಂತೆ (ಅಥವಾ ಸಮುದ್ರದಲ್ಲಿ ಬೀಳುವ ಅಭ್ಯಾಸವುಳ್ಳ ನೀವಿಬ್ಬರೂ) । **ಮಹಃ ಕ್ಷೋದಸಃ**—ಸಮುದ್ರದ ಅಗಾಧವಾದ ಉದಕದಿಂದ (ಆ ಭುಜ್ಯುವನ್ನೆತ್ತಲು) । **ಪೇತಥುಃ**—(ನೀರಿನೊಳಕ್ಕೆ) ಧುಮುಕಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ದೇವತೆಗಳಲ್ಲೆಲ್ಲಾ ನೀವಿಬ್ಬರು ಮಾತ್ರ ತುಗ್ರಪುತ್ರನಾದ ಭುಜ್ಯುವಿನಲ್ಲಿ ಅನುಗ್ರಹ ಬುದ್ಧಿಯಿಂದ, ದೃಢವೂ, ಭೂಮಿಯ ಮೇಲೆ ಹೋಗಲು ಸಹಾಯಕವಾಗುವ ರಥವಿಶಿಷ್ಟವೂ ಆದ ಪ್ಲವವನ್ನು, ಸಮುದ್ರೋದಕಗಳಲ್ಲಿ ಅವನು ಸುಖವಾಗಿರಲೆಂದು ಅವನಿಗೆ ಒದಗಿಸಿ, ಸಾಗರದ ಅಗಾಧವಾದ ಉದಕದಿಂದ ಅವನನ್ನು ಮೇಲಕ್ಕೆತ್ತುವುದಕ್ಕೋಸ್ಕರ, ಇಂತಹ ಸಾಹಸಗಳಲ್ಲಿ ನುರಿತ ನೀವಿಬ್ಬರೂ, ಸಮುದ್ರದಲ್ಲಿ ಧುಮುಕಿದಿರಿ.

## English Translation·

You constructed a pleasant, substantial, winged bark, borne on the ocean waters for the son of Tugra, by which, with mind devoted to the gods, you bore him up, and, quickly descending (from the sky), you made a path for him across the great waters.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಸಹ ಹಿಂದೆ ಹೇಳಿದ ಭುಜ್ಯುವಿನ ರಕ್ಷಣಾವಿಷಯವನ್ನೇ ಹೇಳಿದೆ. **"ಪೂರ್ವಂ ಪ್ರಪಂಚಿತಃ"** ಎಂದು ಸಾಯಣರು ಪುನಃ ಅದೇ ಕಥೆಯನ್ನು ಈ ರೀತಿ ತಿಳಿಸಿದ್ದಾರೆ.

**"ತೌಗ್ರ್ಯೋ ಭುಜ್ಯೂ ರಾಜಾ ಸಮುದ್ರವರ್ತೀ ಸಸೇನಃ ಪರಚಕ್ರಂ ಪ್ರಮಥಿತುಂ ಪ್ರಸ್ಥಿತಃ । ತಂ ಪ್ರತೀಪಬಲಾನಿ ಅಗತ್ಯಾಪಾತಯನ್ ಸ ಚ ಪ್ರಸಾದಫಲಕರಾಶ್ವಿನೌ ಸ್ತುತ್ವಾ ಸ್ವಾತ್ಮಾನಂ ರರಕ್ಷ ಇತ್ಯೆಯಮಿತಿಹಾಸಃ"**

ಪರಸೈನ್ಯವನ್ನು ನಾಶಮಾಡಲು ಸಮುದ್ರದಲ್ಲಿಳಿದ ಭುಜ್ಯುವನ್ನು ಶತ್ರುಸೈನ್ಯಗಳು ಸಮುದ್ರದೊಳಕ್ಕೆ ತಳ್ಳಿದವು. ಆಗ ಅವನು ರಕ್ಷಕರಾದ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು, ಅವರು ನೌಕೆಯ ಸಹಾಯದಿಂದ ಇವನನ್ನು ರಕ್ಷಿಸಿದರು ಎಂಬ ವಿಷಯವು ಋ ಸಂ. ೧-೧೧೬-೩ ಮತ್ತು ೧-೧೧೬-೪ ಇತ್ಯಾದ್ಯನೇಕಕಡೆಗಳಲ್ಲಿ ಉಕ್ತವಾಗಿದೆ. ಭುಜ್ಯುವಿನ ವಿಷಯವನ್ನು ಹಿಂದೆ ತಿಳಿಸಿದೆ. ಆದರೆ ಹಿಂದೆ ಬಿರುಗಾಳಿಯಿಂದ ತೊಂದರೆಗೆ ಗುರಿಯಾದನೆಂದು ತಿಳಿಸಿದೆ. ಪ್ರಕೃತವಾದ ವಿವರಣೆಯಲ್ಲಿ ಶತ್ರುಗಳಿಂದ ತೊಂದರೆಗೆ ಸಿಕ್ಕಿದನೆಂದು ತಿಳಿಸಿದೆ. ಅದೇ ವ್ಯತ್ಯಾಸ

**ಸಿಂಧುಷು** ಎಂಬ ಪದಕ್ಕೆ **ಸಮುದ್ರೋದಕೇಷು** ಎಂದರ್ಥಮಾಡಿದೆ. **ಸಿಂಧು** ಶಬ್ದವು **ನದೀ** ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೪) **ಸಿಂಧುಃ ಸ್ರವಣಾತ್** । (ನಿ. ೫-೨೭) ಪ್ರವಹಿಸುವುದರಿಂದ **ಸಿಂಧು** ಶಬ್ದಕ್ಕೆ ನದಿಯೆಂದು ಹೆಸರು. ಪ್ರವಾಹರೂಪದಲ್ಲಿರುವುದರಿಂದ ಕೆಲವು ಕಡೆಗಳಲ್ಲಿ ರಶ್ಮಿಗಳೆಂಬ ಅರ್ಥವೂ ಸಾಧ್ಯವಾಗುತ್ತದೆ. ಆ ಅರ್ಥದಲ್ಲಿ ಈ ಪದದ ಪ್ರಯೋಗವೂ ಇರುತ್ತದೆ. ಉದಾಹರಣೆಗೆ—

**ಯುವಮೇತಾನಿ ದಿವಿ ರೋಚನಾನ್ಯಗ್ನಿಶ್ಚ ಸೋಮ ಸಕ್ರತೂ ಅಧತ್ತಂ ।**
**ಯುವಂ ಸಿಂಧೂಁರಭಿಶಸ್ತೇರವದ್ಯಾದಗ್ನೀಷೋಮಾವಮುಂಚತಂ ಗೃಭೀತಾನ್ ॥**

(ಋ. ಸಂ. ೧-೯೩-೫)

ಎಂಬಲ್ಲಿ ಸಾಯಣರು **ಸಿಂಧೂನ್** ಎನ್ನುವುದಕ್ಕೆ ನದೀವಿಶೇಷಾನ್ ಎಂದರ್ಥಮಾಡಿದ್ದಾರೆ. ಸ್ಕಂದಸ್ವಾಮಿಗಳು **ಸ್ಯಂದನಾತ್ ಸಿಂಧವೋ ರಶ್ಮಯ ಇಹೋಚ್ಯಂತೇ** । ಎಂದರೆ, ಪ್ರಸರಿಸುವ ರಶ್ಮಿಗಳೆಂದು ಅರ್ಥಮಾಡಿ **"ನ ಸಿಂಧವೋ ರಜಸೋ ಅಂತಮಾನಶುಃ"** (ಋ. ಸಂ. ೧-೫೨-೧೪) ಎಂಬ ವಾಕ್ಯವನ್ನು ದಾಹರಿಸಿ ಅದರಂತೆಯೇ ಇಲ್ಲಿಯೂ (ಉದಾಹೃತವಾಗಿರುವ ಮೇಲಿನ ಋಕ್ಕಿನಲ್ಲಿಯೂ) ರಶ್ಮಿಗಳೆಂಬ ಅರ್ಥವನ್ನು ಹೇಳಬೇಕೆಂದಿರುತ್ತಾರೆ. ಅನೇಕ ಕಡೆಗಳಲ್ಲಿ **ಸಿಂಧು** ಶಬ್ದಕ್ಕೆ ಸಮುದ್ರವೆಂದೇ ಅರ್ಥವನ್ನು ಹೇಳಬೇಕಾಗುತ್ತದೆ. ಆದರೆ,

**ಪಿಪೀಳೇ ಅಂಶುರ್ಮದ್ಯೋ ನ ಸಿಂಧುರಾ ತ್ವಾ ಶಮೀ ಶಶಮಾನಸ್ಯ ಶಕ್ತಿಃ ।**
**ಅಸ್ಮದ್ರ್ಯಕ್ಛುಶುಚಾನಸ್ಯ ಯಮ್ಯಾ ಆಶುರ್ನ ರಶ್ಮಿಂ ತುವ್ಯೋಜಸಂ ಗೋಃ ॥**

(ಋ. ಸಂ ೪-೨೨-೮)

ಇತ್ಯಾದಿ ಕೆಲವು ಕಡೆಗಳಲ್ಲಿ **ಸ್ಯಂದಮಾನಃ ಸೋಮಃ** ಎಂದು ಸೋಮಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆ. ಪ್ರವಹಿಸುವ ಸ್ವರೂಪವುಳ್ಳದ್ದೆಂದರ್ಥ. (ಋ. ಸಂ. ೨-೧೧-೯) ಇತ್ಯಾದಿ ಸ್ಥಳಗಳಲ್ಲಿ **ಮೇಘವೆಂದೂ** ಅರ್ಥವಾಗುತ್ತದೆ ಪ್ರಕೃತವಾದ ಋಕ್ಕಿನಲ್ಲಿ **ಸಿಂಧುಷು** ಎನ್ನುವುದಕ್ಕೆ **ಸಮುದ್ರೋದಕೇಷು** ಎಂದರ್ಥಮಾಡಿದೆ.

**ಆತ್ಮನ್ವಂತಂ** ಎಂಬ ಪದವು **ಪ್ಲವ** ಶಬ್ದಕ್ಕೆ ವಿಶೇಷಣವಾಗಿದೆ. **ದಾರ್ಢ್ಯವಂತಂ ಪ್ಲವಂ** ಎಂದರ್ಥ. ಈ ವಿಶೇಷಣವು ಬರುವೆಡೆಗಳಲ್ಲೆಲ್ಲಾ **ಆತ್ಮನ್** ಶಬ್ದಕ್ಕೆ ಸ್ಥಿರ, ಸ್ಥೈರ್ಯ, ಸಾರಭೂತವಾದದ್ದು ಎಂಬರ್ಥವನ್ನು ಹೇಳ ಬೇಕು. ಇದರಂತೆಯೇ,

**ತಮೂಹಥುರ್ನೌಭಿರಾತ್ಮನ್ವತೀಭಿರಂತರಿಕ್ಷಪ್ರುದ್ಭಿರಪೋದಕಾಭಿಃ ।**

(ಋ. ಸಂ. ೧-೧೧೬-೩)

ಎಂಬ ಋಕ್ಕಿನಲ್ಲಿಯೂ ಸಹ ಅಶ್ವಿನೀದೇವತೆಗಳ ನೌಕೆಯ ಶಕ್ತಿಯನ್ನು ವರ್ಣಿಸಲು **ಆತ್ಮನ್ವತೀಭಿಃ** ಎಂಬ ವಿಶೇಷಣ ವನ್ನು ಪಯೋಗಿಸಿದೆ. ಆ ಪದಕ್ಕೆ ಸಾಯಣರು **ಧೃತಿರಾತ್ಮಾ; ಧಾರಣವತೀಭಿಃ** ಎಂದರೆ ದೃಢವಾದುದೂ ಧಾರಕವಾ ದುದೂ ಆದ ಶಕ್ತಿಯುಳ್ಳದ್ದು ಎಂದರ್ಥ ಮಾಡಿದ್ದಾರೆ.

**ಆತ್ಮನ್ವನ್ನಭೋ ದುಹ್ಯತೇ ಘೃತಂ ಪಯ ಋತಸ್ಯ ನಾಭಿರಮೃತಂ ವಿ ಜಾಯತೇ ।**
**ಸಮೀಚೀನಾಃ ಸುದಾನವಃ ಪ್ರೀಣಂತಿ ತಂ ನರೋ ಹಿತಮವ ಮೇಹಂತಿ ಪೇರವಃ ॥**

(ಋ. ಸಂ. ೯-೭೪-೪)

ಎಂಬಲ್ಲಿ **ಆತ್ಮನ್ವತ್** ಎಂಬ ಪದವು **ಘೃತಂ** ಮತ್ತು **ಪಯಃ** ಎಂಬ ಪದಗಳಿಗೆ ವಿಶೇಷಣವಾಗಿದ್ದು **ಸಾರವತ್** ಎಂದರೆ ರಸವುಳ್ಳದ್ದು, ಅಂತಶ್ಶಕ್ತಿಯುಳ್ಳದ್ದು ಎಂಬರ್ಥವನ್ನು ತಿಳಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಧಾರಣಶಕ್ತಿಯನ್ನು ಹೊಂದಿರುವ ಪ್ಲವವೆಂದರ್ಥ.

**ಕ್ಷೋದಸಃ— ಕ್ಷೋದ** ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯)

**ಪಕ್ಷಿಣಂ**—ಎಂಬ ಪದವೂ ಸಹ **ಪ್ಲವ** ಶಬ್ದಕ್ಕೆ ವಿಶೇಷಣವಾಗಿದೆ. **ಪಕ್ಷವದ್ಗತಿಸಾಧನರಥವಂತಂ**! ರೆಕ್ಕೆಗಳನ್ನು ಹೊಂದಿರುವುದೂ, ಶೀಘ್ರವಾಗಿ ಸಂಚರಿಸಲು ಯೋಗ್ಯವಾದುದೂ ಆದ ರಥವನ್ನು ಹೊಂದಿರುವ ಪ್ಲವವೆಂದರ್ಥ.

**ಮನಸಾ**—ಎಂಬುದಕ್ಕೆ **ಅನುಗ್ರಹಾತ್ಮಕವಾದ ಮನಸ್ಸಿನಿಂದ** ಎಂದರ್ಥ.

**ದೇವತ್ರಾ**—ಎಂಬುದಕ್ಕೆ ದೇವತೆಗಳ ನಡುವೆ (ನೀವೇ ರಕ್ಷಕರು) ಎಂದರ್ಥಮಾಡಿದೆ. ಇದರಂತೆಯೇ **ಯಜತ್ರಾ** ಎಂಬ ಪ್ರಯೋಗವಿರುವೆಡೆಗಳಲ್ಲಿ ಯಜ್ಞಕ್ಕೆ ಅರ್ಹರು, ಪೂಜಾರ್ಹರು ಎಂದು ತಾತ್ಪರ್ಯವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಚಕ್ರಥುಃ**—ಡುಕೃಞ್ ಕರಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪ್ಲವಮ್**—ಪ್ಲುಙ್ ಗತೌ. ಧಾತು. **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಸಾರ್ವಧಾತುಕಾರ್ಧ**—ಎಂಬುದರಿಂದ ಗುಣ. ಅವಾದೇಶ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಆತ್ಮನ್ವಂತಮ್**—ಆತ್ಮಾ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾಮಾಡಿದಾಗ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. ಪದಸಂಜ್ಞಾ ಇರುವುದರಿಂದ ನಲೋಪ. **ಅನೋನುಟ್** (ಪಾ. ಸೂ. ೮-೨-೧೬) ಎಂಬುದರಿಂದ ಮತುಪಿಗೆ ನುಡಾಗಮ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ದೇವತ್ರಾ—ದೇವಮನುಷ್ಯಪುರು**—(ಪಾ. ಸೂ. ೫-೪ ೫೬) ಎಂಬುದರಿಂದ ಸಪ್ತಮ್ಯರ್ಥದಲ್ಲಿ ತ್ರಾ ಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ.

**ನಿರೂಹಥುಃ**—ನಿರ್ ಉಪಸರ್ಗ. ವಹ ಪ್ರಾಪಣೇ. ಧಾತು. ಛಾಂದಸವಾಗಿ ಲಿಟ್. ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. **ತಿಙಿಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ ಅನುದಾತ್ತಸ್ವರ ಬರುತ್ತದೆ.

**ಸುಪಪ್ತನಿ**—ಪತ್ಲೃ ಗತೌ. ಧಾತು. ವ್ಯತ್ಯಯದಿಂದ ಅಜ್ ಪರವಲ್ಲಿ ಇಲ್ಲದಿದ್ದರೂ ಪುಗಾಗಮ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪೇತಥುಃ**—ಪೂರ್ವೋಕ್ತವಾದ ಧಾತು. ಛಾಂದಸವಾಗಿ ಲಿಟ್. ಮಧ್ಯಮಪುರುಷ ದ್ವಿವಚನಕ್ಕೆ ಅಥುಸಾದೇಶ. ಲಿಣ್ನಿಮಿತ್ತವಾಗಿ ದ್ವಿತ್ವಾದಿಗಳು ಬಂದಾಗ **ಅತ ಏಕಹಲ್ ಮಧ್ಯೇ**—(ಪಾ. ಸೂ. ೬-೪-೧೨೦) ಎಂಬುದರಿಂದ ಏತ್ವಾಭ್ಯಾಸ ಲೋಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೫ ॥

॥ ಸಂಹಿತಾಪಾಠಃ ॥

ಅವವಿದ್ಧಂ ತೌಗ್ರ್ಯಮಪ್ಸ್ವಂತರನಾರಂಭಣೇ ತಮಸಿ ಪ್ರವಿದ್ಧಂ ।
ಚತಸ್ರೋ ನಾವೋ ಜಠಲಸ್ಯ ಜುಷ್ಟಾ ಉದಶ್ವಿಭ್ಯಾಮಿಷಿತಾಃ ಪಾರಯಂತಿ ॥ ೬ ॥

॥ ಪದಪಾಠಃ ॥

ಅವऽವಿದ್ಧಂ । ತೌಗ್ರ್ಯಂ । ಅಪ್ऽಸು । ಅಂತಃ । ಅನಾರಂಭಣೇ । ತಮಸಿ । ಪ್ರऽವಿದ್ಧಂ ।
ಚತಸ್ರಃ । ನಾವಃ । ಜಠಲಸ್ಯ । ಜುಷ್ಟಾಃ । ಉತ್ । ಅಶ್ವಿऽಭ್ಯಾಂ । ಇಷಿತಾಃ । ಪಾರಯಂತಿ ॥ ೬ ॥

॥ ಸಾಯಣಭಾಷ್ಯಂ ॥

ಅಪ್ಸ್ವಂತರ್ಮಧ್ಯೇಽವವಿದ್ಧಮವಸ್ತಾಚ್ಛತ್ರುಭಿಃ ಪಾತಿತಮನಾರಂಭಣೇಽನಾಲಂಬನ ಆಲಂಬಲನ-ರಹಿತೇ ತಮಸಿ । ತಮೋವತ್ತಮಃ । ದೃಷ್ಟಿಶ್ವಾಸಾದಿಪ್ರತಿಬಂಧಕೇ ಜಲಮಧ್ಯೇ ಪ್ರವಿದ್ಧಂ ಪ್ರಕರ್ಷೇಣ ಪೀಡಿತಂ ತೌಗ್ರ್ಯಂ ಭುಜ್ಯಂ ಜಠಲಸ್ಯ ಜಠರವದುದಕಧಾರಕಸ್ಯ ಮಧ್ಯೇ ಜುಷ್ಟಾಃ ಸೇವಿತಾಃ । ಯದ್ವಾ ॥ ಕರ್ಮಣಿ ಷಷ್ಠೀ ॥ ಜಠರಂ ಪ್ರಾಪ್ತಾ ಅಂತರ್ಜಲಂ ಪ್ರವಿಷ್ಟಾಃ । ಅಶ್ವಿಭ್ಯಾಮಿಷಿತಾಶ್ಚತುಸ್ರೋ ನಾವ ಉತ್ಪಾರಯಂತಿ । ಉತ್ತಾರಯಂತಿ । ಪ್ರಾಪಯಂತಿ ॥

॥ ಪ್ರತಿಪದಾರ್ಥ ॥

**ಅಪ್ಸು ಅಂತಃ**—ಉದಕಗಳ ಮಧ್ಯದಲ್ಲಿ । **ಅವ ವಿದ್ಧಂ**—ತಲೆಕೆಳಗಾಗಿ (ಶತ್ರುಗಳಿಂದ) ಎಸೆಯಲ್ಪಟ್ಟಿದ್ದವನೂ । **ಅನಾರಂಭಣೇ**—ಆಲಂಬನರಹಿತವಾದ । **ತಮಸಿ**—ತಮಸ್ಸಿನಂತೆ ದೃಷ್ಟಿ ಪ್ರತಿಬಂಧಕವಾದ ಜಲಮಧ್ಯದಲ್ಲಿ । **ಪ್ರ ವಿದ್ಧಂ**—ಹೆಚ್ಚಾಗಿ (ಶತ್ರುಗಳಿಂದ) ಪೀಡಿತನೂ ಆದ । **ತೌಗ್ರ್ಯಂ**—ತುಗ್ರಪುತ್ರನಾದ ಭುಜ್ಯುವನ್ನು । **ಜಠಲಸ್ಯ**—ಜಠರದಂತೆ ಉದಕಧಾರಕವಾದ ಸಮುದ್ರದಲ್ಲಿ । **ಜುಷ್ಟಾಃ**—ಅವನಿಂದ ಸೇವಿತವಾದ । [ಅಥವಾ **ಜಠಲಸ್ಯ ಜುಷ್ಟಾಃ**—ಜಲಾಂತರ್ಭಾಗವನ್ನು ಪ್ರವೇಶಿಸಿದ ಮತ್ತು ] **ಅಶ್ವಿಭ್ಯಾಂ ಇಷಿತಾಃ**—ಅಶ್ವಿನೀದೇವತೆಗಳಿಂದ ಪ್ರೇರಿತವಾದ । **ಚತಸ್ರಃ ನಾವಃ**—ನಾಲ್ಕು ನಾವೆಗಳು । **ಉತ್ ಪಾರಯಂತಿ**—(ದಡವನ್ನು) ಸೇರಿಸುತ್ತವೆ.

॥ ಭಾವಾರ್ಥ ॥

ಸಮುದ್ರ ಮಧ್ಯದಲ್ಲಿ ಶತ್ರುಗಳಿಂದ ತಲೆಕೆಳಗಾಗಿ ಎಸೆಯಲ್ಪಟ್ಟು, ದೃಷ್ಟಿ ಮತ್ತು ಶ್ವಾಸನಿರೋಧಗಳಿಂದ ವಿಶೇಷವಾಗಿ ಹಿಂಸಿತನಾದ ಭುಜ್ಯುವನ್ನು, ಅಶ್ವಿನೀದೇವತೆಗಳಿಂದ ಪ್ರೇರಿತವಾದ ನಾಲ್ಕು ನಾವೆಗಳು ಜಲಾಂತರ್ಭಾಗವನ್ನು ಪ್ರವೇಶಿಸಿ, ದಡಕ್ಕೆ ಒಯ್ಯುತ್ತವೆ.

## English Translation.

Four ships launched into the midst of the receptacle (of the waters), sent by the Ashwins, brought safe to shore the son of Tugra, who had been cast headlong into the waters (by his foes), and plunged in inextricable darkness.

॥ ವಿಶೇಷವಿಷಯಗಳು ॥

A. C. ದಾಸ್ ಎಂಬುವರು ತಮ್ಮ Rigvedic India, vol. I. ಎಂಬ ಗ್ರಂಥದಲ್ಲಿ ಭುಜ್ಯುವಿನ ವಿಷಯದಲ್ಲಿ ಈ ರೀತಿ ವಿವರಿಸಿದ್ದಾರೆ—

> This legend (of Bhujyu) also means that the Sun remained invisible in consequence of the fall of incessant rains for three days and nights, during which period, the Aswins also remained in the **ಪರಾವತ್** or distant region, as they were not at all visible on account of the presence of dripping clouds in the sky. The Aswins rescued Bhujyu from his perilous position and brought him home in a hundred oared ship, the hundred ones probably representing hundred days or three months during which the rains lasted. The same sentiment is probably also more elaborately expressed in the verses which say that Aswins rescued Bhujya. " with animated water-tight ships, which traversed the air (ಅಂತರಿಕ್ಷ); with four ships, with an animated winged boat; with three flying cars having a hundred feet. and six horses." Now these ships or flying cars either three or four in number approximately represented the three or four months, the hundred feet represented the hundred days, and the six horses probably the six fortnights during which the rainy season lasted. Across tihs season Bhujyu (the Sun) was safely piloted home by Aswins in their ships or flying cars.
>
> [Rig-Vedic India. p. 533-534]

ಇದರಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುದೇನೆಂದರೆ, ಪ್ರಕೃತವಾದ ಋಕ್ಕಿನಲ್ಲಿ **ಚತಸ್ರಃ ನಾವಃ** ಎಂಬುದಕ್ಕೆ ಇವರು ನಾಲ್ಕು ಮಾಸಗಳು ಎಂದರ್ಥಮಾಡಿದ್ದಾರೆ. ವರ್ಷಾಕಾಲದಲ್ಲಿ ಮೇಘರೂಪವಾದ ಕತ್ತಲಿನಿಂದ ಆವೃತನಾಗಿದ್ದ ಸೂರ್ಯನನ್ನು ಅಶ್ವಿನೀದೇವತೆಗಳು ತಮ್ಮ ಮಾಸರೂಪವಾದ ನಾವೆಗಳ ಮೂಲಕ ದಾಟಿಸಿದರು ಎಂದರ್ಥಮಾಡಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅವವಿದ್ಧಮ್**—ವ್ಯಧ ತಾಡನೇ· ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಕಿತ್ತಾದುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಸಂಪ್ರಸಾರಣ. **ನ ಸಸಂಪ್ರಸಾರಣೇ ಸಂಪ್ರಸಾರಣಮ್** ಎಂಬುದರಿಂದ ಪೂರ್ವಕ್ಕೆ ನಿಷೇಧವಿರುವುದರಿಂದ ಯಕಾರಕ್ಕೆ ಇಕಾರರೂಪ ಸಂಪ್ರಸಾರಣ. **ಝಷಸ್ತಥೋರ್ಧೋಽಧಃ** ಎಂಬುದರಿಂದ ಪ್ರತ್ಯ

ಯಕ್ಕೆ ಧಕಾರಾದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ಪ್ರವಿದ್ಧಮ್ ಎಂಬಲ್ಲಿಯೂ ಹೀಗೆಯೇ ಕಾರ್ಯವೂ ಸ್ವರವೂ ಬರುತ್ತದೆ.

**ಅಪ್ಸು**—**ಊಡಿದಂ ಪದಾದಿ**—(ಪಾ. ಸೂ. ೬-೧.೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಅನಾರಂಭಣೇ**—ನ ವಿದ್ಯತೇ ಆರಂಭಣಂ ಯಸ್ಯ ತತ್. **ನಞ್ಸುಭ್ಯಾಮ್** (ಪಾ. ಸೂ ೬-೨ ೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಜರಲಸ್ಯ**—ಜನೀ ಪ್ರಾದುರ್ಭಾವೇ. ಧಾತು. **ಜನೇರರಷ್ಠ ಚ** (ಉ. ಸೂ. ೭೧೬) ಎಂಬುದರಿಂದ ಅರ ಪ್ರತ್ಯಯ. ಧಾತು ನಕಾರಕ್ಕೆ ತಕಾರಾದೇಶ. ಛಾಂದಸವಾಗಿ ಪ್ರತ್ಯಯ ರೇಫಕ್ಕೆ ಲತ್ವ. **ಕರ್ತೃ ಕರ್ಮಣೋಃ ಕೃತಿ** (ಪಾ. ಸೂ. ೨-೩-೬೫) ಎಂಬುದರಿಂದ ಕರ್ಮಾರ್ಥದಲ್ಲಿ ಷಷ್ಠೀ ಬಂದಿದೆ.

**ಜುಷ್ಟಾಃ**—ಜುಷೀ ಪ್ರೀತಿಸೇವನಯೋಃ ಧಾತು. ಕ್ತ ಪ್ರತ್ಯಯ. ಷ್ಟುತ್ವದಿಂದ ಅದಕ್ಕೆ ಟಕಾರಾದೇಶ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಇಷಿತಾಃ**—ಇಷ ಗತೌ. ಧಾತು. ಕ್ತ ಪ್ರತ್ಯಯ ಬಂದಾಗ ಇಡಾಗಮ. ಆಗಮಗಳು ಅನುದಾತ್ತಗಳಾಗುವುದರಿಂದ ಪ್ರತ್ಯಯ ಸ್ವರದಿಂದ ಅಂತೋದಾತ್ತನಾಗುತ್ತದೆ.

**ಪಾರಯಂತಿ**—ಪಾರ ಕರ್ಮಸಮಾಪ್ತೌ. ಧಾತು. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ‖ ೬ ‖

‖ ಸಂಹಿತಾಪಾಠಃ ‖

**ಕಃ ಸ್ವಿದ್ವೃಕ್ಷೋ ನಿಷ್ಠಿತೋ ಮಧ್ಯೇ ಅರ್ಣಸೋ ಯಂ ತೌಗ್ರ್ಯೋ ನಾಧಿತಃ ಪರ್ಯಷಸ್ವಜತ್ ।**

**ಪರ್ಣಾ ಮೃಗಸ್ಯ ಪತರೋರಿವಾರಭ ಉದಶ್ವಿನಾ ಊಹಥುಃ ಶ್ರೋಮತಾಯ ಕಂ॥**

‖ ಪದಪಾಠಃ ‖

**ಕಃ । ಸ್ವಿತ್ । ವೃಕ್ಷಃ । ನಿಃऽಸ್ಥಿತಃ । ಮಧ್ಯೇ । ಅರ್ಣಸಃ । ಯಂ । ತೌಗ್ರ್ಯಃ । ನಾಧಿತಃ । ಪರಿऽಅಸಸ್ವಜತ್।**

**ಪರ್ಣಾ । ಮೃಗಸ್ಯ । ಪತರೋಃऽಇವ । ಆऽರಭೇ । ಉತ್ । ಅಶ್ವಿನಾ । ಊಹಥುಃ । ಶ್ರೋಮತಾಯ । ಕಂ॥**

॥ ಸಾಯಣಭಾಷ್ಯಂ ॥

**ಕಃ ಸ್ವಿತ್ ಕಶ್ಚಿದನುಗ್ರಾಹಕೋ ವೃಕ್ಷೋ ವೃಕ್ಷವಿಕಾರೋ ರಥಃ । ವಿಕಾರೇ ಪ್ರಕೃತಿಶಬ್ದಃ । ಯದ್ವಾ । ಸಂಸ್ತವಾಭಿಪ್ರಾಯಮೇತತ್ । ಸ್ತೋತ್ರಾಖ್ಯೋ ವೃಕ್ಷ ಇತ್ಯರ್ಥಃ । ಕೀದೃಶೋ ರಥಃ । ನಿಷ್ಠಿತೋ ನಿಶ್ಚಲಂ ವರ್ತಮಾನಃ । ಕುತ್ರೇತಿ ಉಚ್ಯತೇ । ಅರ್ಣಸ ಉದಕಸ್ಯ ಮಧ್ಯೇ । ಯಂ ವೃಕ್ಷಂ ತೌಗ್ರ್ಯಸ್ತುಗ್ರ್ಯಪುತ್ರೋ ಭುಜ್ಯುರ್ನಾಧಿತೋ ಯಾಚಮಾನಃ ಪರ್ಯಷಸ್ವಜತ್ ಪರಿಷ್ವಕ್ತವಾನಕರೋತ್। ಆಲಂಬನೇ ದೃಷ್ಟಾಂತಃ । ಪತರೋಃ ಪತನಶೀಲಸ್ಯ ಮೃಗಸ್ಯ ಮಾರ್ಜಯಿತುಃ ಶೋಧಯಿತುರ್ಹಿಂಸಾ- ದೇರಾರಭೆ ಆಲಂಬನಾಯ ಪರ್ಣಾನೀವ । ತಾನಿ ಯಥಾಲಂಬನಾಯ ಪ್ರಭವಂತಿ ತದ್ವತ್ । ಹೇ ಅಶ್ವಿನೌ ಶ್ರೋಮತಾಯ ಕೀರ್ತಿಮತ್ತ್ವಾಯೋದೂಹಥುಃ । ಊರ್ಧ್ವಂ ಪ್ರಾಪಯಥಃ । ಸ್ತುತಿಪಕ್ಷೇ ಸ್ತೋತ್ರಾಖ್ಯಂ ವೃಕ್ಷಮಾಶ್ರಿತವಂತಂ ತಮೂಹಥುರಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಪತರೋಃ**—ಬೀಳುತ್ತಿರುವ । **ಮೃಗಸ್ಯ**—ಮೃಗಗಳಿಗೆ । **ಪರ್ಣಾ**—ಎಲೆಗಳು । **ಆರಭೇ ಇವ**—ಆಲಂಬನೆಗೆ (ಸಹಾಯಕವಾಗುವಂತೆ) । **ಯಂ**—ಯಾವ ವೃಕ್ಷವನ್ನು । **ನಾಧಿತಃ**—(ಸಮುದ್ರದಲ್ಲಿ ಕ್ಷಿಪ್ತನಾಗಿ ಸಹಾಯವನ್ನು) ಯಾಚಿಸುತ್ತಿದ್ದ । **ತೌಗ್ರ್ಯಃ**—ತುಗ್ರಪುತ್ರನಾದ ಭುಜ್ಯುವು । **ಪರಿ ಅಸಸ್ವಜತ್**—ಆಲಂಗಿಸಿ ಕೊಂಡನೋ (ಅಂತಹ) । **ಕಃ ಸ್ವಿತ್**—ಯಾವುದು ತಾನೇ । **ವೃಕ್ಷಃ**—ವೃಕ್ಷವಿಕಾರವಾದ ರಥವು ಅಥವಾ ಸ್ತೋತ್ರಾಖ್ಯವೃಕ್ಷವು । **ಅರ್ಣಸಃ ಮಧ್ಯೇ**—ಉದಕ ಮಧ್ಯದಲ್ಲಿ । **ನಿಷ್ಠಿತಃ**—ನಿಶ್ಚಲವಾಗಿ ಸ್ಥಾಪಿತವಾಗಿತ್ತು । **(ಹೇ) ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ಶ್ರೋಮತಾಯ**—ಕೀರ್ತಿವಂತರಾಗಬೇಕೆಂದು । **ಕಂ**—ಸುಖವಾಗಿರುವಂತೆ (ಸುರಕ್ಷಿತವಾದ ಪ್ರದೇಶಕ್ಕೆ) । **ಉತ್ ಊಹಥುಃ**—(ಆ ಭುಜ್ಯುವನ್ನು) ಮೇಲಕ್ಕೆ ಎತ್ತಿದಿರಿ (ಸೇರಿಸಿದಿರಿ).

॥ ಭಾವಾರ್ಥ ॥

ಬೀಳುತ್ತಿರುವ ಮೃಗಕ್ಕೆ ಎಲೆಗಳು ಆಧಾರವಾಗುವಂತೆ, ಸಮುದ್ರಮಗ್ನನಾಗಿ ಸಹಾಯವನ್ನಪೇಕ್ಷಿಸುತ್ತಿದ್ದ ಭುಜ್ಯುವು, ಸಮುದ್ರಮಧ್ಯದಲ್ಲಿ ಸ್ಥಾಪಿತವಾಗಿದ್ದ ಯಾವ ವೃಕ್ಷವನ್ನು ಆಶ್ರಯಿಸಿಕೊಂಡಿದ್ದನು ? ಎಲೈ ಅಶ್ವಿನೀ ದೇವತೆಗಳೇ, (ನಿಮ್ಮ ಸ್ತುತಿಯನ್ನೇ ಆಶ್ರಯಿಸಿಕೊಂಡಿದ್ದ) ಭುಜ್ಯುವನ್ನು, ನಿಮ್ಮ ಕೀರ್ತಿಯನ್ನು ಉಳಿಸಿಕೊಳ್ಳುವುದ ಕ್ಕೋಸ್ಕರ, ಸುರಕ್ಷಿತವಾದ ಸ್ಥಳಕ್ಕೆ ಒಯ್ದಿರಿ.

English Translation.

What was the tree that was stationed in the midst of the ocean, to which the supplicating son of Tugra clung : as leaves (are caught hold of) for the support of a falling animal : you, Ashwins, bore him up to safety, to your great renown.

॥ ವಿಶೇಷವಿಷಯಗಳು ॥

**ಶ್ರೋಮತಾಯ—ಕೀರ್ತಿಮತ್ವಾಯ ।** ಕೀರ್ತಿವಂತರಾಗಲು ಎಂದರ್ಥಮಾಡಿದೆ. ಈ ಪದವು **ಶ್ರು** ಧಾತುವಿನಿಂದ ನಿಷ್ಪನ್ನವಾಗಿದೆ. **(ಶ್ರು+ಮತ್)** ಮತ್ತು ಇದರ ಪ್ರಯೋಗವಿರುವಾಗ ಇತರ ಕಡೆಗಳಲ್ಲೆಲ್ಲಾ ಕೇಳಲು ಯೋಗ್ಯವಾದ ಎಂಬ ಅರ್ಥವನ್ನೇ ಹೇಳಿದೆ. ಉದಾಹರಣೆಗೆ—

**ನೃವತ್ತ ಇಂದ್ರ ನೃತಮಾಭಿರೂತೀ ವಂಸೀಮಹಿ ವಾಮಂ ಶ್ರೋಮತೇಭಿಃ ।**
**ಈಕ್ಷೇ ಹಿ ವಸ್ವ ಉಭಯಸ್ಯ ರಾಜನ್ಧಾ ರತ್ನಂ ಮಹಿ ಸ್ಥೂರಂ ಬೃಹಂತಂ ॥**

(ಋ. ಸಂ. ೬-೧೯-೧೦)

ಇತ್ಯಾದಿ ಋಕ್ಕುಗಳಲ್ಲಿ **ಶ್ರೋತವ್ಯೈಃ** ಎಂದು ಮೊದಲು ಹೇಳಿ ಅನಂತರ **ಯಶೋಭಿಃ** ಎಂಬ ತಾತ್ಪರ್ಯವನ್ನು ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಹಾಗೆಯೇ ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ನಿಷ್ಠಿತಃ**—ನಿಸ್ ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. ಕ್ತ ಪ್ರತ್ಯಯ ಪರವಾದಾಗ **ದ್ಯುತಿಸ್ಯತಿ ಮಾಸ್ಥಾ**—(ಪಾ. ಸೂ. ೭-೪-೪೦) ಎಂಬುದರಿಂದ ಧಾತುವಿನ ಆಕಾರಕ್ಕೆ ಇತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ನಾಧಿತಃ**—ನಾಧೃ ಯಾಚ್ಞಾಯಾಂ ಧಾತು. ಕ್ತ ಪ್ರತ್ಯಯ ಬಂದಾಗ ಇಡಾಗಮ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಪರ್ಯಷಸ್ವಜತ್**—ಪರಿ ಉಪಸರ್ಗ. ಷ್ವಂಜ ಪರಿಷ್ವಂಗೇ. ಧಾತು. ವ್ಯತ್ಯಯದಿಂದ ಪರಸ್ಮೈಪದಿ ಯಾಗುತ್ತದೆ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ದಂಶಸಂಜ ಸ್ವಂಜಾಂಶಪಿ** (ಪಾ. ಸೂ. ೬-೪-೨೫) ಎಂಬುದರಿಂದ ಶಪ್ ಪರವಾದಾಗ ಧಾತುವಿನ ಉಪಧಾ ನಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ನಿಷೇಧ ಬರುವುದರಿಂದ ಅಟ್ ಸ್ವರದಿಂದ ಆದ್ಯುದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿಗೆ) ಸರ್ವಾನುದಾತ್ತಸ್ವರ ಬರುತ್ತದೆ.

**ಪತರೋಃ**—ಪತ್ಲೃ ಗತೌ. ಧಾತು. ಔಣಾದಿಕ ಅರು ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಶ್ರೋಮತಾಯ**—ಶ್ರು ಶ್ರವಣೇ. ಧಾತು. **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತ ಪ್ರತ್ಯಯ ಸ್ವರಗಳು ಬರುತ್ತವೆ. ॥ ೭ ॥



॥ ಸಂಹಿತಾಪಾಠಃ ॥

ತದ್ವಾಂ ನರಾ ನಾಸತ್ಯಾವನು ಷ್ಯಾದ್ಯದ್ವಾಂ ಮಾನಾಸ ಉಚಥಮವೋಚನ್ ।
ಅಸ್ಮಾದದ್ಯ ಸದಸಃ ಸೋಮ್ಯಾದಾ ವಿದ್ಯಾಮೇಷಂ ವೃಜನಂ ಜೀರದಾನುಂ ॥ ೮ ॥

॥ ಪದಪಾಠಃ ॥

ತತ್ । ವಾಂ । ನರಾ । ನಾಸತ್ಯೌ । ಅನು । ಸ್ಯಾತ್ । ಯತ್ । ವಾಂ । ಮಾನಾಸಃ । ಉಚಥಂ । ಅವೋಚನ್ ।
ಅಸ್ಮಾತ್ । ಅದ್ಯ । ಸದಸಃ । ಸೋಮ್ಯಾತ್ । ಆ । ವಿದ್ಯಾಮ । ಇಷಂ । ವೃಜನಂ । ಜೀರऽದಾನುಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರೌ ಕರ್ಮಣೋ ನರಾಕಾರೌ ವಾ ಹೇ ನಾಸತ್ಯಾವಸತ್ಯರಹಿತೌ ಸತ್ಯಫಲೌ ವಾ ವಾಂ ಯುವಾಂ ತತ್ತಾದೃಶಂ ಸ್ತೋತ್ರಮನು ಸ್ಯಾತ್ । ಅನೂಕೂಲಂ ಭವತು । ಅನುಭವತು ವಾ ವಾಂ । ತದಿತ್ಯುಕ್ತಂ ಯದಿತ್ಯಾಹ । ವಾಂ ಪ್ರತಿ ಮಾನಾಸಃ ಪೂಜಾವಂತೋಽಸ್ಮದೀಯಾ ಹೋತ್ರಾದಯೋ ಯದುಚಥಂ ಸ್ತೋತ್ರಮವೋಚನ್ ಅಕುರ್ವನ್ ತದ್ವಾಮನು ಷ್ಯಾತ್ । ಹೇ ಅಶ್ವಿನೌ ಅದ್ಯಾಸ್ಮಿನ್ಪ್ರ-ಧಾನಯಾಗದಿನೇಽಸ್ಮಾದಸ್ಮಾಭಿಃ ಕ್ರಿಯಮಾಣಾತ್ಸದಸಃ ಸಂಬಂಧಿನಃ ಸೋಮ್ಯಾತ್ ಸೋಮಯಾಗ-ಸಂಪಾದಕಾತ್ । ಆ ಇತ್ಯಪ್ಯರ್ಥೇ । ಅಸ್ಮಾಭಿರ್ಯಜಮಾನೈರದ್ಯ ಕ್ರಿಯಮಾಣಾದಪಿ ಸ್ತೋತ್ರಾತ್ ಪ್ರೀಣಯತಮಿತಿ ।ವಿದ್ಯಾಮೇತಿ ಗತಂ ॥

॥ ಪ್ರತಿಪದಾರ್ಥ ॥

**ನರಾ**—ಯಾಗನೇತೃಗಳೂ (ಅಥವಾ ನರಾಕಾರರೂ) । **ನಾಸತ್ಯಾ**—ಸತ್ಯಫಲದಾಯಕರೂ (ಅಸತ್ಯರಹಿತರೂ ಆದ) ಎಲೈ ಅಶ್ವಿನೀದೇವತೆಗಳೇ । **ವಾಂ (ಪ್ರತಿ)**—ನಿಮ್ಮಿಬ್ಬರನ್ನುದ್ದೇಶಿಸಿ । **ಮಾನಾಸಃ**—ಪೂಜಾಕರ್ತೃಗಳಾದ (ನಮ್ಮ) ಹೋತ್ರಾದಿಗಳು । **ಯತ್ ಉಚಥಂ**—ಯಾವ ಸ್ತೋತ್ರವನ್ನು । **ಅವೋಚನ್**— ಪಠಿಸಿದರೋ । **ತತ್**—ಆ ಸ್ತೋತ್ರವು । **ವಾಂ**—ನಿಮ್ಮಿಬ್ಬರಿಗೆ । **ಅನು ಸ್ಯಾತ್**—ಅನುಕೂಲವಾಗಲಿ । **ತತ್**—ಆ ಸ್ತುತಿಯನ್ನು । **ವಾಂ**—ನೀವಿಬ್ಬರು । **ಅನು ಸ್ಯಾತ್**—ಅನುಭವಿಸಿ । (ಮತ್ತು) **ಅದ್ಯ**—ಈ ಪ್ರಧಾನ ಯಾಗ ದಿನದಲ್ಲಿ । **ಅಸ್ಮಾತ್**—ನಮ್ಮಿಂದ (ಕ್ರಿಯಮಾಣವೂ)। **ಸದಸಃ**—ಸದಸ್ಸಿಗೆ ಸಂಬಂಧಿಸಿದುದೂ । **ಸೋಮ್ಯಾತ್**—ಆ ಸೋಮಯಾಗಸಂಪಾದಕವೂ ಆದ ಈ ಸ್ತುತಿಯಿಂದಲೂ (ನೀವಿಬ್ಬರೂ ಪ್ರೀತರಾಗಿರಿ) । **ಇಷಂ**—ಅನ್ನವನ್ನೂ । **ವೃಜನಂ**--ಬಲವನ್ನೂ । **ಜೀರದಾನುಂ**—ದೀರ್ಘಾಯುಷ್ಯವನ್ನೂ । **ವಿದ್ಯಾಮ**—(ಪ್ರೀತರಾದ ನಿಮ್ಮಿಂದ) ಪಡೆಯೋಣ.

॥ ಭಾವಾರ್ಥ ॥

ಯಾಗನೇತೃಗಳೂ, ಅಸತ್ಯರಹಿತರೂ ಆದ ಎಲೈ ಅಶ್ವಿನೀದೇವತೆಗಳೇ, ಪೂಜಾಕರ್ತೃಗಳಾದ ನಮ್ಮ ಹೋತ್ರಾದಿ ಋತ್ವಿಜರಿಂದ ಮಾಡಲ್ಪಡುವ ಸ್ತುತಿಯೂ, ಮತ್ತು ಪ್ರಧಾನಯಾಗದಿನದಲ್ಲಿ ಸದಸ್ಸಿನಿಂದ ಮಾಡ

ಲ್ಪಡುವ ಮತ್ತು ಸೋಮಯಾಗ ನಿಷ್ಪಾದಕವಾದ ಸ್ತುತಿಯೂ ನಿಮಗೆ ಪ್ರೀತಿಕರವಾಗಲಿ; ಹಾಗೆ ಪ್ರೀತರಾದ ನೀವು ನಮಗೆ ಅನ್ನ, ಬಲ ಮತ್ತು ದೀರ್ಘಾಯುಷ್ಯಗಳನ್ನನುಗ್ರಹಿಸಿ.

English Translation

May the praise which your devout adorers have uttered be acceptable to you, Nasatyas; leaders (in pious rites), be propitiated to-day by the libations of our assembly, that we may obtain food, strength, and long life.

॥ ವಿಶೇಷವಿಷಯಗಳು ॥

**ಮಾನಾಸಃ—ಪೂಜಾವಂತಃ ಅಸ್ಮದೀಯಾ ಹೋತ್ರಾದಯಃ** ಎಂದರ್ಥಮಾಡಿದೆ. **ಮಾನಾಸಃ, ಮಾನ್ಯಸ್ಯ** ಎಂಬ ಪದಗಳ ಅರ್ಥವನ್ನು ಹಿಂದೆ ಸೂಕ್ಷ್ಮವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ **ಅಗಸ್ತ್ಯ** ಪ್ರಭೃತಿಗಳಾದ ಮಂತ್ರದ್ರಷ್ಟೃಗಳಿಗೆ ವಿಶೇಷಣವಾಗಿದೆ. ಬೃಹದ್ದೇವತೆಯಲ್ಲಿ ಅಗಸ್ತ್ಯನ ಉತ್ಪತ್ತಿಯ ಕ್ರಮವನ್ನು ಹೇಳುವಾಗ ಈ ರೀತಿ ತಿಳಿಸಿದೆ.

**ಮಾನೇನ ಸಂಮಿತೋ ಯಸ್ಮಾತ್ತಸ್ಮಾನ್ಮಾನ್ಯ ಇಹೋಚ್ಯತೇ ।**
**ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ॥**

(ಬೃ. ದೇ. ೫-೧೫೩)

ಪೂಜಾರ್ಹನಾಗಿರುವುದರಿಂದಲೂ, ಅಥವಾ **ಮಾನದ** (ಅಳತೆಯ) ಪ್ರಕಾರವನ್ನು ತಿಳಿಸುವ ಕುಂಭದಲ್ಲಿ ಉತ್ಪನ್ನನಾದುದರಿಂದ ಎಂದರೆ ಕುಂಭರೂಪವಾದ ಮಾನದಲ್ಲಿ ಉತ್ಪನ್ನನಾದುದರಿಂದ ಅಗಸ್ತ್ಯನಿಗೆ ಮಾನ್ಯನೆಂದು ಹೆಸರು ಪ್ರಸಿದ್ಧವಾಗಿದೆಯೆಂದು ಹೇಳಬಹುದು ಎಂದು ತಿಳಿಸಿದೆ. ಮತ್ತು ಋ. ಸಂ. ೧-೧೬೫-೧೫ ನೇ ಋಕ್ಕಿನಲ್ಲಿರುವ **ಮಾನ್ಯ**ಶಬ್ದಕ್ಕೆ the son of ಮಾನ ಎಂದು Max Muller ಪಂಡಿತನು ಅರ್ಥವನ್ನು ಹೇಳುವುದನ್ನೂ ಅದರ ಔಚಿತ್ಯವನ್ನೂ ಹಿಂದೆ ಇದೇ ಭಾಗದಲ್ಲಿ ಋ. ಸಂ. ೧-೧೭೧-೫ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ. (p. 217)**ಮಾನ** ಎಂಬ ಅಂಕಿತನಾಮವು ಒಂದು ಸಂತತಿಯ ಮೂಲಪುರುಷನ ಹೆಸರು ಎಂದು ಆಂಗ್ಲ ಪಂಡಿತರು ಅಭಿಪ್ರಾಯಪಡುತ್ತಾರೆ. ಉದಾಹರಣೆಗೆ, Kieth ಎಂಬುವನೂ ಸಹ ಈ ರೀತಿ ತಿಳಿಸಿದ್ದಾರೆ.

**ಮಾನ** is the name of the man occuring in several passages of the Rig-Veda. In one place, express mention is made of his son (ಸೂನು) by whom **ಅಗಸ್ತ್ಯ** must have been meant. In another passage, apparently the same meaning applies to **ಮಾನ**. i.e, **ಅಗಸ್ತ್ಯ** as **ಮಾನ**.

[Vedic names & Subjects. vol. II. p. 152]

ಎಂದರೆ,

**ಅವೋಚಾಮ ನಿವಚನಾನ್ಯಸ್ಮಿನ್ಮಾನಸ್ಯ ಸೂನುಃ ಸಹಸಾನೇ ಅಗ್ನೌ ।**
**ವಯಂ ಸಹಸ್ರಮೃಷಿಭಿಃ ಸನೇಮ ವಿದ್ಯಾಮೇಷಂ ವೃಜನಂ ಜೀರದಾನುಂ ॥**

(ಋ. ಸಂ. ೧-೧೮೯-೮)

ಎಂಬ ಋಕ್ಕಿನಲ್ಲಿ **ಮಾನ್ಯಸ್ಯ ಸೂನುಃ** ಎಂದರೆ **ಮಾನ** ಎಂಬ ಋಷಿಪುತ್ರನಾದ **ಅಗಸ್ತ್ಯ** ಎಂಬುದಾಗಿ ಆಂಗ್ಲ ಪಂಡಿತರ ಅಭಿಪ್ರಾಯವು. ಆದರೆ ಸಾಯಣರು ಇದೇ ಉದಾಹೃತವಾದ ಋಕ್ಕಿನಲ್ಲಿ ಈ ಪದಕ್ಕೆ ಅರ್ಥವನ್ನು ಹೇಳುವಾಗ ಈ ರೀತಿ ವ್ಯಾಖ್ಯಾನವನ್ನು ಮಾಡಿದ್ದಾರೆ.

**ಮಾನಸ್ಯ ಸೂನುಃ –ವಿಾಯತ ಇತಿ ಮಾನಃ ಮಂತ್ರಃ ತಸ್ಯ ಸೂನುಃ ಅಗ್ನಿಃ ಮಂತ್ರೇಣ ಉತ್ಪಾದ್ಯಮಾನತ್ವಾತ್ । ಮಾನಸ್ಯ ಸೂನೌ ಅಗ್ನೌ ।**

(ಋ. ಭಾ. ೧೮೯-೮)

**ಮಾನನೆಂದರೆ ಮಂತ್ರ**. ಇದರ ಮಗ **ಅಗ್ನಿ**. ಆದುದರಿಂದ **ಮಾನಸ್ಯ ಸೂನುಃ** ಎಂದರೆ ಅಗ್ನಿಯೆಂದರ್ಥ, ಎಂದು ವಿವರಿಸಿದ್ದಾರೆ. ಇದರಂತೆಯೇ,

**ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।**
**ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥**

(ಋ. ಸಂ. ೭-೩೩-೧೩)

ಎಂಬಲ್ಲಿಯೂ ಸಹ ಅಗಸ್ತ್ಯನೆಂದೇ ಅರ್ಥವಾದರೂ **ಮಾನ** ಎಂಬುದಕ್ಕೆ ಸಾಯಣರು ಅಂಕಿತನಾಮವೆಂದು ತಿಳಿಸಿಲ್ಲ. ಆದುದರಿಂದ **ಮಾನಾಸಃ ಮಾನ್ಯಸ್ಯ** ಎಂಬ ಪದಗಳಿರುವಾಗಲೆಲ್ಲಾ ಆಂಗ್ಲಪಂಡಿತರು ಅರ್ಥಮಾಡುವುದಕ್ಕೂ ಸಾಯಣರು ವಿವರಿಸುವುದಕ್ಕೂ ವ್ಯತ್ಯಾಸವಿದ್ದೇ ಇರುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅಗಸ್ತ್ಯ ಸಂಬಂಧಿಗಳೆಂದಾಗಲಿ ಅಥವಾ ಸಂಭಾವಿತರೂ ಪೂಜ್ಯರೂ ಆದ ಹೋತೃಗಳೆಂದಾಗಲಿ ಅರ್ಥವಾಗುತ್ತದೆ.

**ಸದಸಃ**—ಯಜ್ಞಗೃಹಕ್ಕೆ ಸಂಬಂಧಿಸಿದುದೆಂದರ್ಥ. **ಸದಸೀ** ಎಂಬ ಪದವನ್ನು **ದ್ಯಾವಾಪೃಥಿವೀ** ನಾಮಗಳಲ್ಲೂ ಪಠಿಸಿದೆ. (ನಿ. ೩-೩೧) ದ್ಯಾವಾಪೃಥಿವಿಗಳಷ್ಟು ವಿಸ್ತೃತವಾದ ಯಜ್ಞಗೃಹವೆಂದೂ ಕೆಲವು ಸಂದರ್ಭಗಳಲ್ಲಿ ಅರ್ಥವಾಗುತ್ತದೆ. **ಸದಸ್ಸಿನ** ಉತ್ಪತ್ತಿಯ ಸ್ವರೂಪವೂ ಇದರ ಮಾಹಾತ್ಮ್ಯವೂ ಐತರೇಯಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿದೆ.

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವಾ ಅಸುರಾ ಇಮಾನೇವ ಲೋಕಾನ್ಪುರೋಽಕುರ್ವತ ಯಥೌಜೀಯಾಂಸೋ ಬಲೀಯಾಂಸ ಏವಂ ತೇ ವಾ ಅಯಸ್ಮಯೀಮೇವೇಮಾಮಕುರ್ವತ ರಜತಾಮಂತರಿಕ್ಷಂ ಹರಿಣೀಂ ದಿವಂ ತೇ ತಥೇಮಾँಲ್ಲೋಕಾನ್ಪುರೋಽಕುರ್ವತ ತೇ ದೇವಾ ಅಬ್ರುವನ್ ಪುರೋ ವಾ ಇಮೇಽಸುರಾ ಇಮಾँಲ್ಲೋಕಾನಕ್ರತ ಪುರ ಇಮಾँಲ್ಲೋಕಾನ್ಪ್ರತಿಕರವಾಮಹಾ ಇತಿ ತಥೇತಿ ತೇ ಸದ ಏವಾಸ್ಯಾಃ ಪ್ರತ್ಯಕುರ್ವತಾಗ್ನೀಧ್ರಮಂತರಿಕ್ಷಾದ್ಧವಿರ್ಧಾನೇ ದಿವಸ್ತೇ ತಥೇಮಾँಲ್ಲೋಕಾನ್ ಪುರಃ ಪ್ರತ್ಯಕುರ್ವತ ॥**

(ಐ. ಬ್ರಾ. ೪-೬)

ದೇವತೆಗಳಿಗೂ ಅಸುರರಿಗೂ ಈ ಮೂರು ಲೋಕಗಳ ಆಕ್ರಮಣದ ವಿಷಯದಲ್ಲಿ ಸ್ಪರ್ಧೆಯುಂಟಾದಾಗ ಅಸುರರು ಈ ಲೋಕಗಳನ್ನೇ ತಮ್ಮ ಕೋಟೆಗಳನ್ನಾಗಿ ಮಾಡಿಕೊಂಡರು. ಮತ್ತು ತಮ್ಮ ಶಕ್ತಿಯನ್ನು ಬೀರಿ ದೇವತೆಗಳಿಗೆ ಪ್ರವೇಶವಿಲ್ಲದಂತೆ ಮಾಡಿದರು. ಪೃಥ್ವಿಯನ್ನು ಅಯೋಮಯವಾದ ಕೋಟೆಯಂತೆಯೂ, ದ್ಯುಲೋಕವನ್ನು ರಜತ

ಮಯವಾಗಿಯೂ, ಅಂತರಿಕ್ಷವನ್ನು ಸುವರ್ಣಮಯವಾದ ದುರ್ಗದಂತೆಯೂ ಪರಿವರ್ತಿಸಿದರು. ಆಗ ದೇವತೆಗಳು ಪೃಥ್ವಿಯನ್ನು **ಸದಸ್ಸಿನ** ರೂಪಕ್ಕೆ ಪರಿವರ್ತಿಸಿ ತಮ್ಮ ಪ್ರಭಾವವನ್ನು ಬೀರಿದರು ಎಂದು **ಸದಸ್ಸಿನ** ಉತ್ಪತ್ತಿಯ ಕಥೆಯನ್ನು ತಿಳಿಸಿದೆ. ಮತ್ತು,

**ದೇವಾಸುರಾ ವಾ ಏಷು ಲೋಕೇಷು ಸಮಯತಂತೆ ತೇ ನೈ ದೇವಾಃ ಸದ ಏವಾಯತನಮಕುರ್ವತೆ ತಾನ್ತ್ಸದಸೋಽಜಯನ್ ।** (ಐ. ಬ್ರಾ. ೧೦-೪)

ಇದೇ ಸದಸ್ಸನ್ನಾಶ್ರಯಿಸಿ ಅಸುರರೊಡನೆ ಹೊಡೆದಾಡಿ ಮೂರುಲೋಕಗಳನ್ನೂ ಜಯಿಸಿದರು ಎಂದು ಸದಸ್ಸಿನ ಮಹತ್ತ್ವವನ್ನೂ ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ನರಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಂಬೋಧನಾ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಸ್ಯಾತ್**—ಅಸ ಭವಿ. ಧಾತು. ಲಿಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇಕಾರಲೋಪ. ಯಾಸುಟಾಗಮ. **ಶ್ನಸೋರಲ್ಲೋಪಃ** ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ.

**ಮಾನಾಸಃ**—ಮನ ಜ್ಞಾನೇ. ಧಾತು. ಘಞ್ ಪ್ರತ್ಯಯ. **ಅತ ಉಪಧಾಯಾಃ** ಎಂಬುದರಿಂದ ಉಪಧಾ ವೃದ್ಧಿ. ಛಾಂದಸವಾಗಿ ಮತ್ವರ್ಥ ಪ್ರತ್ಯಯಕ್ಕೆ ಲುಕ್. ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಉಚಥಮ್**—ವಚ ಪರಿಭಾಷಣೇ. ಧಾತು. **ರುವಿದಿಭ್ಯಾಂ ಕಿತ್** (ಉ. ಸೂ. ೩-೩೯೫) ಎಂಬುದರಿಂದ ವಿಧಿಸಲ್ಪಡುವ ಅಥ ಪ್ರತ್ಯಯವೂ ಕಿತ್ತ್ವವೂ ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. **ವಚಿಸ್ವಪಿಯಜಾದೀನಾಂ ಕಿತಿ** ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅವೋಚನ್**—ಪೂರ್ವೋಕ್ತವಾದ ಧಾತುವಿನ ಲುಙ್ ಪ್ರಥಮಪುರುಷ ಬಹುವಚನಾಂತರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸೋಮ್ಯಾತ್—ಸೋಮಮರ್ಹತಿ ಯಃ** (ಪಾ. ಸೂ ೪-೪-೧೩೭) ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಸೂತ್ರದಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರ ಬರುತ್ತದೆ. ಪಂಚಮ್ಯಂತರೂಪ. ॥ ೮ ॥

ಇಲ್ಲಿಗೆ ನೂರ ಎಂಭತ್ತೆರಡನೇ ಸೂಕ್ತ ಮುಗಿದುದು.



# ನೂರ ಎಂಭತ್ತಮೂರನೆಯ ಸೂಕ್ತವು

**ತಂ ಯುಂಜಾಥಾಮಿತಿ ಷಡೃಚಂ ಚತುರ್ಥಂ ಸೂಕ್ತಂ ತ್ರೈಷ್ಟುಭಮಾಗಸ್ತ್ಯಮಾಶ್ವಿನಂ ||**

ಅನುವಾದವು— **ತಂ ಯುಂಜಾಥಾಂ** ಎಂಬ ಈ ಸೂಕ್ತವು ಇಪ್ಪತ್ತನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗಸ್ತ್ಯನು ಋಷಿಯು; ಅಶ್ವಿನೀದೇವತೆಗಳೇ ದೇವತೆಯು; ತ್ರಿಷ್ಟುಪ್ ಛಂದಸ್ಸು. ಹಿಂದಿನ ಸೂಕ್ತಗಳಿಗೆ ಹೇಳಿದಂತೆ ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು.

## ಸೂಕ್ತ—೧೮೩

ಮಂಡಲ—೧ || ಅನುವಾಕ—೨೪ || ಸೂಕ್ತ—೧೮೩ ||
ಅಷ್ಟಕ—೨ || ಅಧ್ಯಾಯ—೪ || ವರ್ಗ—೨೯ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||
|| ಋಷಿಃ—ಅಗಸ್ತ್ಯಃ ||
|| ದೇವತಾ—ಅಶ್ವಿನೌ ||
|| ಛಂದಃ—ತ್ರಿಷ್ಟುಪ್ ||

|| ಸಂಹಿತಾಪಾಠಃ ||

ತಂ ಯುಂಜಾಥಾಂ ಮನಸೋ ಯೋ ಜವೀಯಾನ್ ತ್ರಿವಂಧುರೋ ವೃಷಣಾ ಯಸ್ತ್ರಿಚಕ್ರಃ |
ಯೇನೋಪಯಾಥಃ ಸುಕೃತೋ ದುರೋಣಂ ತ್ರಿಧಾತುನಾ ಪತಥೋ ವಿರ್ನ ಪರ್ಣೈಃ || ೧ ||

|| ಪದಪಾಠಃ ||

ತಂ | ಯುಂಜಾಥಾಂ | ಮನಸಃ | ಯಃ | ಜವೀಯಾನ್ | ತ್ರಿऽವಂಧುರಃ | ವೃಷಣಾ | ಯಃ | ತ್ರಿऽಚಕ್ರಃ |
ಯೇನ | ಉಪऽಯಾಥಃ | ಸುऽಕೃತಃ | ದುರೋಣಂ | ತ್ರಿऽಧಾತುನಾ | ಪತಥಃ | ವಿಃ | ನ | ಪರ್ಣೈಃ ||

॥ ಸಾಯಣಭಾಷ್ಯಂ ॥

ಹೇ ವೃಷಣಾ ವರ್ಷಕೌ ಕಾಮಾನಾಂ ಯುವಾಂ ತಂ ವಕ್ಷ್ಯಮಾಣಗುಣವಿಶಿಷ್ಟಂ ರಥಂ ಯುಂಜಾಥಾಂ । ಯೋಜಯತಂ । ತಮಿತ್ಯುಕ್ತಂ ಕಮಿತ್ಯಾಹ । ಯೋ ರಥಸ್ತ್ರಿವಂಧುರಃ ತ್ರಿಪ್ರಕಾರ-ಸಾರಥಿಸ್ಥಾನಃ । ವಂಧುರಂ ರಥಿನಃ ಸ್ಥಾನಮಿತ್ಯಾಹುಃ । ಆ ಯಾಹ್ಯರ್ವಾಙುಪ ವಂಧುರೇಷ್ಠಾಃ । ಋ. ೩-೪೩-೧ । ಇತ್ಯಾದಿಮಂತ್ರಾಂತರಾತ್ । ಯಶ್ಚ ತ್ರಿಚಕ್ರಃ ಚಕ್ರತ್ರಿತಯೋಪೇತಃ । ಪುನಃ ಸ ಏವ ವಿಶೇಷ್ಯತೇ । ಯೇನ ರಥೇನೋಪಯಾಥಃ ಉಪಗಚ್ಛಥಃ । ಕಿಂ । ಸುಕೃತಃ ಶೋಭನಸೋಮಾಖ್ಯ-ಕರ್ಮವತೋ ಯಜಮಾನಸ್ಯ ದುರೋಣಂ । ಗೃಹನಾಮೈತತ್ । ಯಾಗಗೃಹಂ । ಯೇನೇತ್ಯುಕ್ತಂ ಕೇನೇತ್ಯಾಹ । ತ್ರಿಧಾತುನಾ ತ್ರಿಪ್ರಕಾರಸ್ಥಾನೋಪೇತೇನ ಸುವರ್ಣರಜತತಾಮ್ರಧಾತುತ್ರಯೋಪೇತೇನ ವಾ ರಥೇನ । ಗಮನೇ ದೃಷ್ಟಾಂತಃ । ವಿರ್ನ ಪರ್ಣೈಃ ಪಕ್ಷೀ ಪಕ್ಷೈರ್ಯಥಾ ಶೀಘ್ರಮಪ್ರಯತ್ನೇನ ಗಚ್ಛತಿ ತದ್ವದುಕ್ತಲಕ್ಷಣೇನ ರಥೇನ ಪತಥಃ । ಗಚ್ಛಥಃ ॥

॥ ಪ್ರತಿಪದಾರ್ಥ ॥

**ಹೇ ವೃಷಣಾ**—ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ । **ಯಃ**—ಯಾವ ರಥವು । **ತ್ರಿವಂಧುರಃ**—ತ್ರಿಪ್ರಕಾರವಾದ ಸಾರಥಿಸ್ಥಾನವುಳ್ಳದ್ದೋ । ಮತ್ತು **ಮನಸಃ ಜವೀಯಾನ್**—ಮನಸ್ಸಿಗಿಂತಲೂ ಹೆಚ್ಚು ವೇಗವುಳ್ಳದ್ದೋ । **ಯಃ**—ಯಾವುದು । **ತ್ರಿಚಕ್ರಃ**—ಮೂರುಚಕ್ರಗಳುಳ್ಳದ್ದೋ । **ತ್ರಿಧಾತುನಾ**—ಸುವರ್ಣ, ರಜತ ಮತ್ತು ತಾಮ್ರ ಲಕ್ಷಣವಾದ ಧಾತುತ್ರಯವಿಶಿಷ್ಟವಾದ । (**ಯೇನ**—ಯಾವ ರಥದಿಂದ) । **ವಿಃ**—ಪಕ್ಷಿಯು । **ಪರ್ಣೈಃ ನ**—ರೆಕ್ಕೆಗಳಿಂದ ಸುಲಭವಾಗಿ ಸಂಚರಿಸುವಂತೆ । **ಪತಥಃ**—ಹೋಗುತ್ತೀರೋ । ಮತ್ತು **ಯೇನ**—ಯಾವ ರಥದಿಂದ । **ಸುಕೃತಃ**—(ಶೋಭನವಾದ ಸೋಮಯಾಗರೂಪ) ಸತ್ಕರ್ಮಕರ್ತೃವಾದ ಯಜಮಾನನ । **ದುರೋಣಂ**—ಮನೆಗೆ । **ಉಪ ಯಾಥಃ**—ಆಗಮಿಸುತ್ತೀರೋ । **ತಂ**—ಆ ರಥವನ್ನು । **ಯುಂಜಾಥಾಂ**—ನೀವಿಬ್ಬರೂ ಹೂಡಿರಿ.

॥ ಭಾವಾರ್ಥ ॥

ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ, ತ್ರಿಪ್ರಕಾರವಾದ ಸಾರಥಿಸ್ಥಾನವುಳ್ಳದ್ದೂ, ಮನಸ್ಸಿನ ವೇಗಕ್ಕಿಂತಲೂ ಹೆಚ್ಚಾದ ವೇಗವುಳ್ಳದ್ದೂ, ಮೂರು ಚಕ್ರವುಳ್ಳದ್ದೂ, ಸುವರ್ಣ, ರಜತ ಮತ್ತು ತಾಮ್ರ ಲೋಹಗಳಿಂದ ನಿರ್ಮಿತವಾದುದೂ, ಪಕ್ಷಿಗಳಂತೆ ಪ್ರಯತ್ನವಿಲ್ಲದೇ ಸಂಚರಿಸಲು ನಿಮಗೆ ಅನುಕೂಲವಾದುದೂ. ಮತ್ತು ಸತ್ಕರ್ಮಿಗಳ ಮನೆಗೆ ಗಮಿಸಲು ನಿಮಗೆ ವಾಹನರೂಪವಾದುದೂ ಆದ ನಿಮ್ಮ ರಥವನ್ನು ಹೂಡಿಕೊಂಡು ನಮ್ಮ ಯಾಗಶಾಲೆಗೆ ಆಗಮಿಸಿ.

## English Translation.

Showerers of benefits, harness the car which has three benches, three wheels, and is as quick as thought with which, embellished with three metals, you come to the dwelling of the pious (worshipper), and in which you travel like a bird with wings.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿಯೂ ಸಹ ಅಶ್ವಿನಿದೇವತೆಗಳ ರಥದ ವರ್ಣನೆಯಿದೆ. **ತ್ರಿಚಕ್ರಃ ತ್ರಿವಂಧುರಃ. ಮನಸಃ ಜವೀಯಾನ್** ಇತ್ಯಾದಿ ವಿಶೇಷಣಗಳ ತಾತ್ಪರ್ಯವನ್ನು ಹಿಂದೆ ವಿವರಿಸಿದೆ. ಪ್ರಕೃತದಲ್ಲಿ **ತ್ರಿಚಕ್ರಃ, ತ್ರಿವಂಧುರಃ** ಎಂಬ ವಿಶೇಷಣಗಳು ಅಶ್ವಿನಿದೇವತೆಗಳ ವಿಶ್ವವ್ಯಾಪಕತ್ವವನ್ನು ಯಾವರೀತಿಯಲ್ಲಿ ತಿಳಿಸುತ್ತವೆ ಎಂಬುದನ್ನು ಪರಿಶೀಲಿಸಬೇಕು. **ತ್ರಿಷು ವಿಕ್ರಮಣೇಷು** ಇತ್ಯಾದಿಯಾದ ವಾಕ್ಯಗಳಿಂದ **ವಿಷ್ಣು**ವಿನ ವ್ಯಾಪಕತ್ವವೂ, **ತ್ರೀಣಿ ಜಾನಾ ಪರಿಭೂಷಂತಿ** ಇತ್ಯಾದಿ ವಾಕ್ಯಗಳಿಂದ ಅಗ್ನಿಯ ವಿಶ್ವವ್ಯಾಪಕತ್ವವೂ ತಿಳಿಯುವಂತೆ, **ತ್ರಿಚಕ್ರಃ** ಇತ್ಯಾದಿ ವಿಶೇಷಣಗಳಿಂದ ಅಶ್ವಿನಿದೇವತೆಗಳ ಸ್ವರೂಪವು ತಿಳಿಯುತ್ತದೆ ಅಗ್ನಿ, ವಿಷ್ಣು, ಸವಿತೃ, ಅಶ್ವಿನೀದೇವತೆಗಳು ಇವರ ವರ್ಣನೆಯೆಲ್ಲವೂ ಸಮಾನವಾದ ತತ್ವವನ್ನು ವಿವರಿಸುತ್ತದೆ ಮತ್ತು ಎಲ್ಲಾ ಸಂದರ್ಭಗಳಲ್ಲೂ ಈ ಎಲ್ಲಾ ದೇವತೆಗಳಿಗೂ ಸಮಾನವಾದ ಅಂಶವನ್ನು ವಿವರಿಸುತ್ತದೆ ಎಂಬ ವಿಷಯವು ಗಮನಾರ್ಹವಾದುದು. Hopkins ಎಂಬ ಆಂಗ್ಲಪಂಡಿತನು ಈ ಅಂಶವನ್ನು ವಿವರಿಸುತ್ತಾ ಈ ರೀತಿ ತಿಳಿಸಿದ್ದಾನೆ.

A comparison with the abodes of other Vedic Deities who are said to traverse the whole Universe like Vishnu confirms the same view. One of these deitics is **ಸವಿತೃ**. The second deity that traverses or measures the Universe is **ಅಗ್ನಿ**. He has three stations. his light is spoken of as three-fold. Athough these three stations do not seem to be always conceived alike, yet, one of them at any rate can be clearly identified with the third step of Vishnu. Agni somtimes represents the Sun in the Rig-Veda and Vishnu is also the same Sun under a different name and the third or the hidden abode of Agni can therefore, be easily recognised as identical in character. The third Deity that traverses the Universe is the Aswins to whom the epithet **ಪರಿಜ್ಮನ್** is applied several times in the Rig-Veda. The Aswins are said to have three stations and their chariot which is to go over both the worlds alike has three wheels one of which is represented as deposited in a cave or a secret place like the third step of Vishnu which is beyond the ken of mortals. This coincidence between the third stations of three different worldtraversing Gods cannot be treated as accidental.

(J. A. O. S. Vol. 16. p. CXLIX to CL.)

ಮೇಲಿನ ವಾಕ್ಯಗಳಲ್ಲಿ ಎರಡು ಅಂಶಗಳು ಸ್ಪಷ್ಟವಾಗಿ ತಿಳಿಯುತ್ತವೆ. ಮೊದಲನೆಯದಾಗಿ—

೧ ಪೃಥಿವೀ, ದ್ಯುಲೋಕ ಮತ್ತು ಅಂತರಿಕ್ಷ ಈ ಮೂರು ಲೋಕಗಳೂ ಸಹ ಅಗ್ನಿ, ವಿಷ್ಣು ಮತ್ತು ಅಶ್ವಿನೀದೇವತೆಗಳಿಗೆ ಆವಾಸಸ್ಥಾನಗಳು ; ಎರಡನೆಯದಾಗಿ,

೨. ಈ ಮೂರು ದೇವತೆಗಳಿಗೂ ಮೂರು ಪಾದಗಳಿದ್ದು, ಎಲ್ಲಾ ದೇವತೆಗಳ ಮೂರನೇ ಪಾದವೂ ಸಹ ಪುರುಷನಿಗೆ ಗಹನಾತೀತವಾದ ಲೋಕವನ್ನಾಕ್ರಮಿಸಿರುವುವು. ಈ ಎರಡು ಅಂಶಗಳೂ ಸಹ ಗಮನಾರ್ಹವಾದವು. ಮೊದಲನೆಯ ಅಂಶವನ್ನು ವರ್ಣಿಸುವ ವಾಕ್ಯಗಳಲ್ಲಿ ಕೆಲವನ್ನು ಮಾತ್ರ ಪರಿಶೀಲಿಸಿದರೆ,

**ಪ್ರ ತದ್ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।**
**ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ ॥**

(ಋ. ಸಂ. ೧-೧೫೪-೨)

**ಯಸ್ಯ ತ್ರೀ ಪೂರ್ಣಾ ಮಧುನಾ ಪದಾನ್ಯಕ್ಷೀಯಮಾಣಾ ಸ್ವಧಯಾ ಮದಂತಿ ।**
**ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ ॥**

(ಋ. ಸಂ. ೧-೧೫೪-೪)

**ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕಮಪ್ಸು ।**
**ಪೂರ್ವಾಮನು ಪ್ರ ದಿಶಂ ಪಾರ್ಥಿವಾನಾಮೃತೂನ್ಪ್ರಶಾಸದ್ವಿ ದಧಾವನುಷ್ಠು ॥**

(ಋ. ಸಂ. ೧-೯೫-೩)

**ಅಗ್ನಿಸ್ತ್ರೀಣಿ ತ್ರಿಧಾತೂನ್ಯಾ ಕ್ಷೇತಿ ವಿದಥಾ ಕವಿಃ ।**
**ಸ ತ್ರೀರೇಕಾದಶಾ ಇಹ ಯಕ್ಷಚ್ಚ ಪಿಪ್ರಯಚ್ಚ ನೋ ವಿಪ್ರೋ ದೂತಃ ಪರಿಷ್ಕೃತೋ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೩೯-೯)

**ತ್ರೀಣಿ ಪದಾನ್ಯಶ್ವಿನೋರಾವಿಃ ಸಾಂತಿ ಗುಹಾ ಪರಃ ।**
**ಕವೀ ಋತಸ್ಯ ಪತ್ಮಭಿರರ್ವಾಗ್ಜೀವೇಭ್ಯಸ್ಪರಿ ॥**

(ಋ. ಸಂ. ೮-೮-೨೩)

ಈ ಋಕ್ಕುಗಳಲ್ಲಿ ಮೊದಲನೆಯ ಎರಡೂ ವಿಷ್ಣುವಿನ ವ್ಯಾಪಕತ್ವವನ್ನು ವರ್ಣಿಸುತ್ತವೆ. ಅದರಂತೆ, ವಿಷ್ಣುವಿನ ಅತ್ಯಂತ ವಿಸ್ತೃತವಾದವೂ, ಮೂರು ಸಂಖ್ಯೆಗಳುಳ್ಳುವೂ ಆದ ಪಾದಗಳ ಪ್ರಕ್ಷೇಪಗಳಲ್ಲಿ ಸಮಸ್ತವಾದ ಭೂತಜಾತಗಳೂ ನೆಲೆಸಿ ನಿಂತಿವೆ. ಮಧುರವಾದ ಅಮೃತದೊಡನೆ ತುಂಬಿದವೂ ನಾಶರಹಿತವೂ ಆದ ವಿಷ್ಣುವಿನ ಮೂರು ಪಾದ ಪ್ರಕ್ಷೇಪಣಗಳೂ ತಮ್ಮ ಆಶ್ರಿತಜನರನ್ನು ಪವಿತ್ರವಾದ ಅನ್ನದಾನದಿಂದ ಸಂತೋಷಗೊಳಿಸುತ್ತವೆ. ಮತ್ತು ಅದೇ ವಿಷ್ಣುವು ಕೆಳಭಾಗದ ಸಪ್ತಲೋಕಗಳನ್ನೂ ಮತ್ತು ಮೇಲುಭಾಗದ ಸಪ್ತಲೋಕಗಳನ್ನೂ ಹೀಗೆ ಸಮಸ್ತವಾದ ಹದಿನಾಲ್ಕು ಲೋಕಗಳನ್ನೂ ಸಹ ಪೃಥಿವ್ಯಪ್ತೇಜೋರೂಪವಾದ **ತ್ರಿಧಾತು** ಗಳೊಡನೆ ಕೂಡಿಕೊಂಡಿರುವಂತೆ ಎತ್ತಿ ಹಿಡಿದಿದ್ದಾನೆಂದು ವಿಷ್ಣುವಿನ ಪಾದತ್ರಯದ ವ್ಯಾಪಕತ್ವದ ವರ್ಣನೆಯಿದೆ. ಮೂರು ಮತ್ತು ನಾಲ್ಕನೆಯ ಋಕ್ಕುಗಳಲ್ಲಿ ಅಗ್ನಿಯ ಸ್ವರೂಪವನ್ನು ತಿಳಿಸಿದೆ. ಅಗ್ನಿಗೆ ಬಡಬಾಲನರೂಪದಲ್ಲಿ ಸಮುದ್ರದಲ್ಲಿ ಒಂದೂ ಆದಿತ್ಯರೂಪದಲ್ಲಿ ದ್ಯುಲೋಕದಲ್ಲಿ ಒಂದೂ, ವಿದ್ಯುದ್ರೂಪದಿಂದ ಅಂತರಿಕ್ಷರಿಂದ ಒಂದು ಹೀಗೆ ಮೂರು ಜನ್ಮಸ್ಥಾನಗಳಿವೆ. ಮತ್ತು ಇದೇ ಅಗ್ನಿಯು **ತ್ರಿಧಾತು** ಗಳನ್ನೂ ಆಕ್ರಮಿಸಿದ್ದಾನೆ, ಎಂದು ಅಗ್ನಿಯು ಲೋಕತ್ರಯವನ್ನೂ ವ್ಯಾಪಿಸಿರುವುದು ವರ್ಣಿಸಿದೆ. ಇದರಂತೆಯೇ ಐದನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಪಾದತ್ರಯದ ವರ್ಣನೆಯಿದೆ ಮತ್ತು ವಿಷ್ಣು ಮತ್ತು ಅಗ್ನಿಗಳ ಆವಾಸ ಸ್ಥಾನಗಳನ್ನು ವರ್ಣಿಸಿರುವಂತೆಯೇ,

**ಇದಂ ಹಿ ವಾಂ ಪ್ರದಿವಿ ಸ್ಥಾನಮೋಕ ಇಮೇ ಗೃಹಾ ಅಶ್ವಿನೇದಂ ದುರೋಣಂ ।**
**ಆ ನೋ ದಿವೋ ಬೃಹತಃ ಪರ್ವತಾದಾದ್ಭ್ಯೋ ಯಾತಮಿಷಮೂರ್ಜಂ ವಹಂತಾ ॥**

(ಋ. ಸಂ. ೫-೭೬-೪)

ಎಂಬಲ್ಲಿ ಅಶ್ವಿನೀದೇವತೆಗಳಿಗೂ ಸಹ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳೂ ಸಹ ಆವಾಸಸ್ಥಾನಗಳೆಂದು ವರ್ಣಿಸಿದೆ. ಈ ವಿವರಣೆಗಳಲ್ಲಿ ಇನ್ನೊಂದಂಶವನ್ನೂ ಸಹ ಗಮನಿಸಬೇಕಾಗಿದೆ. ವಿಷ್ಣುವಿನ ಪಾದಪ್ರಕ್ಷೇಪಗಳನ್ನು ವರ್ಣಿಸುವ ೧-೧೫೪-೪ ನೇ ಋಕ್ಕಿನಲ್ಲೂ, ಅಗ್ನಿಯ ವ್ಯಾಪಕತ್ವವನ್ನು ವರ್ಣಿಸುವ ೮-೩೯-೯ನೇ ಋಕ್ಕಿನಲ್ಲೂ ಮತ್ತು ಅಶ್ವಿನೀದೇವತೆಗಳ ರಥಸಂಚಾರವನ್ನು ವರ್ಣಿಸುವ ಪ್ರಕೃತವಾದ ಋಕ್ಕಿನಲ್ಲೂ (೧-೧೮೩-೧) **ತ್ರಿಧಾತುವೆಂಬ** ಪದವು ಈ ಮೂರು ದೇವತೆಗಳ ಸಮಾನವಾದ ಸ್ವರೂಪವನ್ನು ಸೂಚಿಸುವ ಪದವಾಗಿರುತ್ತದೆ.

ಎರಡನೆಯದಾಗಿ, ಇವರೆಲ್ಲರ ತೃತೀಯ ಪಾದವು (ಅಥವಾ ಸ್ಥಾನವು) ಗಹನಾತೀತವಾದ ರಹಸ್ಯಸ್ಥಾನದಲ್ಲಿರುವುದೆಂಬ ವರ್ಣನೆಯು ಎಲ್ಲರಿಗೂ ಇರತಕ್ಕ ಸಮಾನ ಸ್ವರೂಪವನ್ನು ತೋರಿಸುತ್ತದೆ.

**ವಿಷ್ಣುರಿತ್ಥಾ ಪರಮಮಸ್ಯ ವಿದ್ವಾಞ್ಜಾತೋ ಬೃಹನ್ನಭಿ ಪಾತಿ ತೃತೀಯಂ ।**
**ಆಸಾ ಯದಸ್ಯ ಪಯೋ ಅಕ್ರತ ಸ್ವಂ ಸಚೇತಸೋ ಅಭ್ಯರ್ಚಂತ್ಯತ್ರ ॥**

(ಋ. ಸಂ. ೧೦-೧-೩)

**ಕಂ ಇಮಂ ವೋ ನಿಣ್ಯಮಾ ಚಿಕೇತ ವತ್ಸೋ ಮಾತೄರ್ಜನಯತ ಸ್ವಧಾಭಿಃ ।**

(ಋ. ಸಂ. ೧-೯೫-೪)

**ದ್ವೇ ಇದಸ್ಯ ಕ್ರಮಣೇ ಸ್ವರ್ದೃಶೋಽಭಿಖ್ಯಾಯ ಮರ್ತ್ಯೋ ಭುರಣ್ಯತಿ ।**
**ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ ಪತತ್ರಿಣಃ ॥**

(ಋ. ಸಂ. ೧-೧೫೫-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಮೂರನೆಯ ಸ್ಥಾನವೂ ಮತ್ತು ವಿಷ್ಣುವಿನ ಮೂರನೇ ಪಾದದ ಆಕ್ರಮಣವೂ ಯಾವ ಮಾನವನಿಂದಲೂ ತಿಳಿಯಲು ಸಾಧ್ಯವಿಲ್ಲ ಎಂದು ತಿಳಿಸಿದೆ. "ಸ್ವರ್ಗಲೋಕವನ್ನು ವೀಕ್ಷಿಸುವ ವಿಷ್ಣುವಿನ ಎರಡು ಪಾದಗಳನ್ನಿಡುವ ಭೂಲೋಕ ಮತ್ತು ಅಂತರಿಕ್ಷಲೋಕಗಳನ್ನು ಮಾತ್ರ ಮಾನವನು ಸ್ತುತಿಮಾಡಿ ತಿಳಿದುಕೊಳ್ಳುತ್ತಾನೆ ಈ ವಿಷ್ಣುವಿನ ಮೂರನೆಯ ಪಾದವನ್ನಿಡುವ ಲೋಕವನ್ನು ಯಾವ ಮಾನವನೂ ತಿಳಿದುಕೊಳ್ಳಲು ಸಾಧ್ಯವೇ ಇಲ್ಲ" ಎಂದು ಹೇಳಿರುವಂತೆಯೇ, ಅಶ್ವಿನೀದೇವತೆಗಳ **ತ್ರಿಚಕ್ರಾತ್ಮಕವಾದ ರಥದ** ಗತಿಯನ್ನೂ ಅದರ ಗಹಾತೀತವಾದನ ಸಂಚಾರವನ್ನೂ ತಿಳಿಸಿದೆ.

**ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।**
**ಕ್ವೈಕಂ ಚಕ್ರಂ ವಾಮಾಸೀತ್ಕ್ವ ದೇಷ್ಟ್ರಾಯ ತಸ್ಥಥುಃ ॥**
**ದ್ವೇ ತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತುಥಾ ವಿದುಃ ।**
**ಅಥೈಕಂ ಚಕ್ರಂ ಯದ್ಗುಹಾ ತದದ್ಧಾತಯ ಇದ್ವಿದುಃ ॥**

(ಋ. ಸಂ. ೧೦-೮೫-೧೫, ೧೬)

ಎಂಬಲ್ಲಿ ಅಶ್ವಿನೀದೇವತೆಗಳ ರಥದ ಮೂರು ಚಕ್ರಗಳಲ್ಲಿ ಒಂದು ಮಾತ್ರ ಯಾರ ಕಣ್ಣಿಗೂ ಗೋಚರವಾಗದೆ, ಕೇವಲ ದರ್ಶನಶಕ್ತಿಯುಳ್ಳ ಋಷಿಗಳಿಗೆ ಮಾತ್ರ ತಿಳಿಯುವುದೆಂದು ವರ್ಣಿಸಿದೆ. ಈ ವಿಧವಾಗಿ ಅವರ ಅಸಾಧಾರಣವಾದ ಸ್ವರೂಪದ ವರ್ಣನೆಯಲ್ಲಿ ಮೂರು ದೇವತೆಗಳಿಗೂ ಸಮಾನ ಧರ್ಮವನ್ನು ಎರಡು ಮುಖ್ಯವಾದ ಅಂಶಗಳಲ್ಲಿ ತೋರಿಸಿದೆ. ಮೂರುದೇವತೆಗಳೂ ಸಹ ಆದಿತ್ಯಸ್ವರೂಪರೇ ಎಂದೂ ಸಹ ಹಿಂದೆಲ್ಲಾ ತಿಳಿಸಿದೆ. **ತ್ರಿಚಕ್ರಃ, ತ್ರಿಬರ್ಹಿಃ, ತ್ರಿಷಧಸ್ಥಃ, ತ್ರಿವಂಧುರಃ, ತ್ರಿವಿಕ್ರಮಃ,** ಇತ್ಯಾದಿ ವಿಶೇಷಣಗಳಲ್ಲಿ ಒಂದು ಸಾಂಕೇತಿಕವಾದ ಅಭಿಪ್ರಾಯವು ಸೂಚಿತವಾಗಿದೆ ಅದೇ ವಿಷಯವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ತಿಳಿಸಿದೆ. ಮತ್ತು ಮೇಲೆ ತಿಳಿಸಿದಂತೆ, **ತ್ರಿಧಾತು** ಶಬ್ದದಿಂದ ಅವರ ವಿಶ್ವವ್ಯಾಪಕತ್ವವು ಬೋಧಿತವಾಗಿದೆಯಾದುದರಿಂದ **ತ್ರಿಧಾತು** ಶಬ್ದಕ್ಕೆ ಅರ್ಥವೇನೆಂದು ತಿಳಿಯಬೇಕು.

**ತ್ರಿಧಾತುನಾ—ತ್ರಿಪ್ರಕಾರಸ್ಥಾನೋಪೇತೇನ; ಸುವರ್ಣರಜತತಾಮ್ರಧಾತುತ್ರಯೋಪೇತೇನ ವಾ ರಥೇನ** ಎಂದರ್ಥಮಾಡಿದೆ. ತ್ರಿಧಾತು ಶಬ್ದಕ್ಕೆ ಅನೇಕಸ್ಥಳಗಳಲ್ಲಿ **ತ್ರಯಾಣಾಂ ಧಾತೂನಾಂ ಸಮಾಹಾರಸ್ತ್ರಿಧಾತು। ಪೃಥಿವ್ಯಪ್ತೇಜೋರೂಪಧಾತುತ್ರಯವಿಶಿಷ್ಟಂ। ಪೃಥಿವೀ, ಅಪ್** ಮತ್ತು **ತೇಜಸ್ಸು** ಈ ಮೂರು ಭೂತಗಳ ಸಮುಷ್ಟಿತತ್ತ್ವವೆಂದು ತಿಳಿಸಿದೆ. ಸಾಯಣರು ಈ ಪದದ ತಾತ್ಪರ್ಯವನ್ನು ವಿವರಿಸುವಾಗ ಕೆಲವೆಡೆಗಳಲ್ಲಿ,

> **ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾತ್ಮಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್ ।**
> (ಛಾ. ಉ. ೬-೩-೨-೩)

ಎಂಬ ವಾಕ್ಯವನ್ನುದಾಹರಿಸಿ ಇಲ್ಲಿ **ಅನ್ನ, ಅಪ್** ಮತ್ತು **ತೇಜೋ** ರೂಪಗಳ ತತ್ತ್ವತ್ರಯವನ್ನು ಸೃಷ್ಟಿಸಿ ಅವುಗಳನ್ನು ತನ್ನ ಮಹಿಮೆಯಿಂದ ಧರಿಸಿದ ಪರಬ್ರಹ್ಮನ ಮಹತ್ವವು ಇಲ್ಲೂ ಸ್ತುತಿಸಲ್ಪಟ್ಟಿದೆಯೆಂದು ಸಾಯಣರು ತಿಳಿಸಿದ್ದಾರೆ. ಈ ವಿವರಣೆಯು **ತ್ರಿಧಾತು** ಶಬ್ದಕ್ಕೆ ಇರತಕ್ಕ ಅನೇಕವಿವರಣೆಗಳಲ್ಲಿ ಒಂದು ಮಾತ್ರವಾಗಿದೆ. ಇನ್ನು ಕೆಲವೆಡೆಗಳಲ್ಲಿ ಸಾಯಣರು **ತ್ರಿಧಾತು ಕಾಲತ್ರಯಂ ಗುಣತ್ರಯಂ ವಾ;** ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯವೆಂದಾಗಲೀ ಅಥವಾ ಸತ್ತ್ವರಜಸ್ತಮೋರೂಪವಾದ ಗುಣಗಳೆಂದಾಗಲಿ ಅರ್ಥವಾಗುವುದೆಂದು ಹೇಳಿದ್ದಾರೆ.

> **ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।**
> **ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥**
> (ಋ. ಸಂ. ೩-೨೬-೭)

ಎಂಬ ಋಕ್ಕಿನಲ್ಲಿ **ತ್ರಿಧಾತು** ಶಬ್ದಕ್ಕೆ **ಪ್ರಾಣಾಪಾನವ್ಯಾನಾತ್ಮನಾ ತ್ರಿಧಾ ವರ್ತಮಾನೋಽರ್ಕೋಽರ್ಚನೀಯೋಯಃ ಪ್ರಾಣೋಽಸ್ತಿ ಸೋಽಪಿ ಅಹಮೇವಾಸ್ಮಿ। ಪ್ರಾಣ, ಅಪಾನ** ಮತ್ತು **ವ್ಯಾನ** ಈ ಮೂರು ರೂಪಗಳ ಪ್ರಾಣತತ್ತ್ವವೆಂದೂ,

> **ಯದ್ದೇವಾಃ ಶರ್ಮ ಶರಣಂ ಯದ್ಭದ್ರಂ ಯದನಾತುರಂ ।**
> **ತ್ರಿಧಾತು ಯದ್ವರೂಥ್ಯಂ೧ ತದಸ್ಮಾಸು ವಿ ಯಂತನಾನೇಹಸೋ ವ ಊತಯಃ ಸುಊತಯೋ ವ ಊತಯಃ ॥**
> (ಋ. ಸಂ. ೮-೪೭-೧೦)

ಎಂಬಲ್ಲಿ **ಸತ್ತ್ವರಜಸ್ತಮೋ** ರೂಪವಾದ **ತ್ರಿಗುಣ**ವೆಂದೂ ಅರ್ಥಮಾಡಿದೆ. ಅಲ್ಲದೇ,

**ಆ ಧರ್ಣಸಿರ್ಬೃಹದ್ದಿವೋ ರರಾಣೋ ವಿಶ್ವೇಭಿರ್ಗನ್ತ್ವೋಮಭಿರ್ಹುವಾನಃ ।**
**ಗ್ನಾ ವಸಾನ ಓಷಧೀರಮೃಧ್ರಸ್ತ್ರಿಧಾತುಶೃಂಗೋ ವೃಷಭೋ ವಯೋಧಾಃ ॥**
(ಋ ಸಂ. ೫-೪೩-೧೩)

ಎಂಬಲ್ಲಿ ಅಗ್ನಿಜ್ವಾಲೆಯ ವರ್ಣನೆಯಿದೆ. ಇಲ್ಲಿ **ತ್ರಿಧಾತುಶೃಂಗಃ** ಎಂಬ ಪದಕ್ಕೆ **ತ್ರಿಪ್ರಕಾರಶೃಂಗವದುನ್ನತ-ಲೋಹಿತಶುಕ್ಲಕೃಷ್ಣವರ್ಣಜ್ವಾಲಃ । ಶುಕ್ಲ, ಕೃಷ್ಣ** ಮತ್ತು **ಲೋಹಿತ** ಎಂಬ ಮೂರು ವಿಧವಾಗಿಯೂ ಉನ್ನತವಾಗಿಯೂ ಎದ್ದಿರುವ ಜ್ವಾಲೆಗಳುಳ್ಳವನು ಎಂದು ವಿವರಿಸಿದೆ.

**ತ್ರಿರಾ ದಿವಃ ಸವಿತರ್ವಾರ್ಯಾಣಿ ದಿವೇದಿವ ಆ ಸುವ ತ್ರಿರ್ನೋ ಅಹ್ನಃ ।**
**ತ್ರಿಧಾತು ರಾಯ ಆ ಸುವಾ ವಸೂನಿ ಭಗ ತ್ರಾತರ್ಧಿಷಣೇ ಸಾತಯೇ ಧಾಃ ॥**
(ಋ. ಸಂ. ೩-೫೬-೬)

ಎಂಬಲ್ಲಿ **ವಸೂನಿ ಧನಾನಿ** ಎಂಬುದಕ್ಕೆ ವಿಶೇಷಣವಾಗಿ **ತ್ರಿಧಾತೂನಿ ಪಶುಕನಕರತ್ನಭೇದೇನ ತ್ರಿಪ್ರಕಾರಾಣಿ ।** ಪಶು, ಚಿನ್ನ ಮತ್ತು ರತ್ನ ಎಂಬ ಮೂರು ವಿಧವಾದ ಧನವೆಂದರ್ಥಮಾಡಿದೆ.

**ತವ ತ್ರಿಧಾತು ಪೃಥಿವೀ ಉತ ದ್ಯೌರ್ವೈಶ್ವಾನರ ವ್ರತಮಗ್ನೇ ಸಚಂತ ।**
**ತ್ವಂ ಭಾಸಾ ರೋದಸೀ ಆ ತತಂಥಾಜಸ್ರೇಣ ಶೋಚಿಷಾ ಶೋಶುಚಾನಃ ॥**
(ಋ ಸಂ. ೭-೫-೪)

ಎಂಬಲ್ಲಿ **ವೈಶ್ವಾನರನ** ವ್ರತವನ್ನು ಮೂರು ಲೋಕಗಳೂ ಸೇವಿಸುತ್ತವೆಯೆಂದು ವರ್ಣಿಸುವಾಗ **ತ್ರಿಧಾತು, ಪೃಥಿವೀ, ದ್ಯೌಃ** ಎಂದು **ತ್ರಿಧಾತುವನ್ನು ಅಂತರಿಕ್ಷ** ಪರ್ಯಾಯವಾಗಿ ಪ್ರಯೋಗಿಸಿದೆ.

**ತಸ್ಯ ಯೋ ಯೋನಿರಾಶಯ ಆಸ । ತಮನು ಪರಾವೃತ್ಯ ಸಂಲುಪ್ಯಾಚ್ಛಿನತ್ಸೈಷೇಷ್ಟಿರಭವತ್ತ-ದ್ಯದೇತಸ್ಮಿನ್ನಾಶಯೇ ತ್ರಿಧಾತುರಿನ್ಯೈಷಾ ವಿದ್ಯಾ ತಸ್ಮಾತ್ತ್ರೈಧಾತವೀ ನಾಮ ।**
(ಶ. ಬ್ರಾ. ೫-೫-೫-೬)

ವೃತ್ರಾಸುರನ ವಧದ ಕಾಲದಲ್ಲಿ ತ್ರಯ್ಯಾತ್ಮಕವಾದ ವಿದ್ಯೆಯು ಆಧಾರವಿದ್ದುದರಿಂದ ಆ ಸಂದರ್ಭದಲ್ಲಿ ನೆರವೇರಿಸಿದ **ಇಷ್ಟಿಗೆ ತ್ರೈಧಾತವೀ ಇಷ್ಟಿ**ಯೆಂಬ ಹೆಸರು ಪ್ರಸಿದ್ಧವಾಗಿದೆಯೆಂಬ ಅಂಶವು ಶತಪಥಬ್ರಾಹ್ಮಣದ ವಾಕ್ಯಗಳಿಂದ ತಿಳಿಯುತ್ತದೆ.

**ತತೋ ವೈ ಸ ಇಮಾನ್ ಲೋಕಾಗ್ ಸ್ತ್ರೇಧಾಧುಹತ್ತ್ರಿಧಾತೋಸ್ತ್ರಿಧಾತುತ್ವಂ ಯಂ ಕಾಮಯೇತಾನ್ನಾದಸ್ಸ್ಯಾದಿತಿ ತಸ್ಮಾ ಏತಂ ತ್ರಿಧಾತುಂ ನಿರ್ವಪೇದಿಂದ್ರಾಯ ರಾಜ್ಞೇ ಪುರೋಡಾಶಮೇಕಾದಶಕಪಾಲಂ ॥** (ತೈ. ಸಂ. ೨-೩-೬-೧)

ಎಂಬ ತೈತ್ತಿರೀಯ ಸಂಹಿತಾವಾಕ್ಯಗಳಲ್ಲಿರುವ **ತ್ರಿಧಾತು** ಶಬ್ದಕ್ಕೆ ಸಾಯಣರು ಈ ರೀತಿ ಅರ್ಥಮಾಡಿದ್ದಾರೆ.

**ತಿಸ್ರ ಏತಾಸ್ತ್ರಿಧಾತೋರ್ದೇವತಾ ಲೋಕತ್ರಯಾತ್ಮಿಕಾಃ । ತತಃ ಖಲು ತ್ರಿಧಾತು ದೇವತಾನಾಂ ತ್ರಿತ್ವಾತ್ಪ್ರಜಾಪತಿಃ ಲೋಕತ್ರಯವ್ಯಾಪೀ ವ್ಯಾಪ್ತಾನಿಮಾನ್ ಲೋಕಾಂಸ್ತ್ರೇಧಾ ದುಹತ್ ತ್ರಿಪ್ರಕಾರಮದುಹತ್ । ತ್ರಯೋಧಾತವೋ ಧನಾನ್ಯಸ್ಮಿನ್ನಿತಿ ತ್ರಿಧಾತುಃ; ತ್ರೇಧಾ ಧಾತವ್ಯ-ತ್ವಾತ್ಪುರೋಡಾಶಸ್ಯ । ಯದ್ವಾ ಸರ್ವಾಧಾರಲೋಕತ್ರಯಾತ್ಮಕತ್ವಾತ್ ತ್ರಿಧಾತುಃ ॥**
(ತೈ. ಸಂ. ಭಾಷ್ಯ)

ಲೋಕತ್ರಯದಲ್ಲಿರತಕ್ಕವರೂ, ಮೂರು ರೂಪಗಳಲ್ಲಿರತಕ್ಕವರೂ ಆದ ದೇವತೆಗಳಿಗೆ ಪುರೋಡಾಶರೂಪವಾದ ಅನ್ನವನ್ನು ಪ್ರಜಾಪತಿಯು ಮೂರು ಕಾಲಗಳಲ್ಲಿ ಕಲ್ಪಿಸಿದನು, ಎಂದು **ತ್ರಿಧಾತು** ಶಬ್ದಕ್ಕೆ **ಲೋಕ, ಅನ್ನ, ಭೂತ-ತ್ರಯ** ಇತ್ಯಾದ್ಯರ್ಥಗಳನ್ನು ಹೇಳಿದೆ. ಹೀಗೆ **ತ್ರಿಧಾತು** ಶಬ್ದವನ್ನು ನಾನಾ ಕಡೆಗಳಲ್ಲಿ ಬೇರೆಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಪ್ರಕೃತದಲ್ಲಿ **ಅಗ್ನಿ, ಅಶ್ವಿನೀ** ಮತ್ತು **ವಿಷ್ಣು** ಎಂಬ ದೇವತೆಗಳನ್ನು ಸ್ತುತಿಸಿರುವ ಋಕ್ಕುಗಳಲ್ಲಿ ಈ ಪದವನ್ನು **ಪೃಥಿವೀ, ಅಂತರಿಕ್ಷ, ದ್ಯುಲೋಕ** ಎಂಬ ಲೋಕತ್ರಯವನ್ನು ತಿಳಿಸುವ ಪರ್ಯಾಯ ಪದವಾಗಿ ಉಪಯೋಗಿಸಿದೆಯೆಂದು ಹೇಳಬಹುದು. ತ್ರಿಚಕ್ರ, ತ್ರಿಧಾತು ಮೊದಲಾದ ಶಬ್ದಗಳ ವಿವರಣೆಯು ಋ ಸಂ. ಭಾಗ ೪ ರಲ್ಲಿ ೩೪ ನೇ ಸೂಕ್ತದಲ್ಲಿ ವಿವರಿಸಲಾಗಿದೆ.

**ದುರೋಣಂ**— **ದುರೋಣ** ಶಬ್ದವು **ಗೃಹ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಸಾಧಾರಣವಾಗಿ ಯಜ್ಞಗೃಹವೆಂದೇ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಯುಞ್ಜಾಥಾಮ್**— ಯುಜಿರ್ ಯೋಗೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ವಿಕರಣದ ಅಕಾರಕ್ಕೆ ಲೋಪ. ತಿಙಂತ ನಿಘಾತಸ್ವರ ಬರುತ್ತದೆ.

**ಜವೀಯಾನ್**— ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತ್ರಿವಂಧುರಃ**— ತ್ರಿಚಕ್ರಾದಿ ಗಣದಲ್ಲಿ ಸೇರಿರುವುದರಿಂದ ಬಹುವ್ರೀಹಿ ಸಮಾಸದಲ್ಲಿ **ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಮ್** ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ತ್ರಿಚಕ್ರಃ ಎಂಬಲ್ಲಿಯೂ ಹೀಗೆ ಅಂತೋದಾತ್ತಸ್ವರ ಬರುತ್ತದೆ.

**ಉಪಯಾಥಃ**— ಯಾ ಪ್ರಾಪಣೇ. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಗತಿಗೆ (ಉಪ) ಸರ್ವಾನುದಾತ್ತಸ್ವರ ಬರುತ್ತದೆ.

**ಪತಥಃ**— ಪತ್ಲೃ ಗತೌ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ

ವಿಃ— ವಾ ಗತಿಗಂಧನಯೋಃ ಧಾತು. **ವಾತೇರ್ಡಿಚ್ಚ** (ಉ. ಸೂ. ೪-೫೭೩) ಎಂಬುದರಿಂದ ಇಣ್ ಪ್ರತ್ಯಯ. ಡಿತ್ವ ವಿಧಾನಮಾಡಿರುವುದರಿಂದ ಧಾತುವಿನ ಟಿಗೆ (ಆ) ಲೋಪ. ಪ್ರತ್ಯಯಸ್ವರ ಬರುತ್ತದೆ.

**ಪರ್ಣೈಃ**— ಪೃ ಪಾಲನ ಪೂರಣಯೋಃ ಧಾತು. **ಧಾಪೃವಸ್ಯಜ್ಯತಿಭ್ಯೋನಃ** (ಉ. ಸೂ. ೩–೨೮೬) ಎಂಬುದರಿಂದ ನ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. **ರಷಾಭ್ಯಾಂ-**

ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ. ॥ ೧ ॥



॥ ಸಂಹಿತಾಪಾಠಃ ॥

ಸುವೃದ್ರಥೋ ವರ್ತತೇ ಯನ್ನಭಿ ಕ್ಷಾಂ ಯತ್ತಿಷ್ಠಥಃ ಕ್ರತುಮಂತಾನು ಪೃಕ್ಷೇ ।
ವಪುರ್ವಪುಷ್ಯಾ ಸಚತಾಮಿಯಂ ಗೀರ್ದಿವೋ ದುಹಿತ್ರೋಷಸಾ ಸಚೇಥೇ ॥ ೨ ॥

॥ ಪದಪಾಠಃ ॥

ಸುಽವೃತ್ । ರಥಃ । ವರ್ತತೇ । ಯನ್ । ಅಭಿ । ಕ್ಷಾಂ । ಯತ್ । ತಿಷ್ಠಥಃ । ಕ್ರತುಽಮಂತಾ । ಅನು । ಪೃಕ್ಷೇ ।
ವಪುಃ । ವಪುಷ್ಯಾ । ಸಚತಾಂ । ಇಯಂ । ಗೀಃ । ದಿವಃ । ದುಹಿತ್ರಾ । ಉಷಸಾ । ಸಚೇಥೇ ಇತಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಯುವಯೋಃ ರಥಃ ಸುವೃತ್ಶೋಭನವರ್ತನಃ ಶೋಭನಚಕ್ರಪರಿಭ್ರಮಣೋ ಯನ್ ಗಚ್ಛನ್ ಕ್ಷಾಮಭಿ ವರ್ತತೇ । ದೇವಯಜನಭೂಮಿಂ ಪ್ರತಿ ಗಚ್ಛತಿ । ಯದ್ಯಂ ರಥಂ ಕ್ರತುಮಂತಾ ಸಂಕಲ್ಪವಂತೌ ಕರ್ಮವಂತೌ ವಾ ಪೃಕ್ಷೇ । ಅನ್ನನಾಮೈತತ್ । ಹವಿಷಿ ನಿಮಿತ್ತಭೂತೇ ಸತಿ । ಅನ್ವಧೀತ್ಯರ್ಥೇ । ಅಧಿ ತಿಷ್ಠಥಃ ಆಶ್ರಯಥಃ । ತಾದೃಶೋ ರಥೋ ದೇವಯಜನಂ ಪ್ರತ್ಯಾಗತ ಇತ್ಯರ್ಥಃ । ಅನಂತರಂ ವಪುಷ್ಯಾ ಯುಷ್ಮದ್ವಪುಷಿ ಹಿತಾ ಶರೀರವರ್ಧನೀಯಂ ಗೀರಿದಾನೀಂಕ್ರಿಯಮಾಣಪ್ರಕಾರಾ ಸ್ತುತಿರೂಪಾ ವಾಗ್ವಪುಃ ಸಚತಾಂ । ಯುವಾಂ ಚ ದಿವೋ ದ್ಯುಲೋಕಸ್ಯಾದಿತ್ಯಸ್ಯ ವಾ ದುಹಿತ್ರಾ ದುಹಿತೃಸ್ಥಾನೀಯಯೋಷಸೋಷೋದೇವತಯಾ ಸಚೇಥೇ । ಯುಜ್ಞಂ ಸಂಗಚ್ಛೇಥೇ । ಉಷಸ್ಯಾಶ್ವಿನಯೋಃ ಸಮಾನಕಾಲತ್ವಾದಿತಿ ಭಾವಃ ॥

॥ ಪ್ರತಿಪದಾರ್ಥ ॥

(**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಕ್ರತುಮಂತಾ**—ಕರ್ಮವಂತರಾದ (ಯಾಗನಿರ್ವಾಹಕರೂಪ ಸಂಕಲ್ಪವುಳ್ಳ) ನೀವಿಬ್ಬರೂ । **ಪೃಕ್ಷೇ**—ಹವಿರ್ನಿಮಿತ್ತವಾಗಿ । **ಯತ್**—ಯಾವರಥವನ್ನು ।**ಅನುತಿಷ್ಠಥಃ**—ಆಶ್ರಯಿಸುತ್ತೀರೋ । (**ಸಃ**—ಅ) । **ಸುವೃತ್**—ಒಳ್ಳೆಯ ಚಕ್ರ ಪರಿಭ್ರಮಣವುಳ್ಳ । **ರಥಃ**—ನಿಮ್ಮ ರಥವು । **ಯನ್**—ಸಂಚರಿಸುತ್ತಾ । **ಕ್ಷಾಂ**—ದೇವಯಜನಭೂಮಿಗೆ । **ಅಭಿ ವರ್ತತೇ**—ಅಭಿಮುಖವಾಗಿ ಹೋಗುತ್ತದೆ ।

(ನಮ್ಮ ಯಾಗಶಾಲೆಗೆ ಬರುತ್ತದೆ. ಅನಂತರ) **ವಪುಷ್ಯಾ**—ನಿಮ್ಮ ಶರೀರಹಿತಕಾರಿಯಾದ (ಶರೀರಾಭಿವೃದ್ಧಿಕಾರಕವಾದ) | **ಇಯಂ ಗೀಃ**—ಈ ನಮ್ಮ ಸ್ತುತಿಯು | **ವಪುಃ ಸಚೇತಾಂ**—ನಿಮ್ಮ ಶರೀರಗಳನ್ನು ಸೇರಲಿ | (ನೀವಿಬ್ಬರೂ) **ದಿವಃ**—ದ್ಯುಲೋಕದ ಅಥವಾ ಆದಿತ್ಯನ | **ದುಹಿತ್ರಾ**—ದುಹಿತೃಸ್ಥಾನೀಯಳಾದ | **ಉಷಸಾ**—ಉಷೋದೇವತೆಯೊಡನೆ ಸೇರಿ | **ಸಚೇಥೇ**—(ಯಜ್ಞಕ್ಕೆ ಆಗಮಿಸುತ್ತೀರಿ) ಸಂಗತರಾಗುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾಗವನ್ನು ನಿರ್ವಹಿಸಬೇಕೆಂಬ ಸಂಕಲ್ಪದಿಂದ ನೀವಿಬ್ಬರೂ ಏರಿಬರುವ ರಥದ ಚಕ್ರಗಳು ಚೆನ್ನಾಗಿ ತಿರುಗುತ್ತಾ, ದೇವಯಜನಭೂಮಿಗೆ ನಿಮ್ಮನ್ನು ಕರೆತರುತ್ತವೆ; ನಮ್ಮ ಈ ಸ್ತುತಿಯು ನಿಮ್ಮ ಶರೀರಾಭಿವೃದ್ಧಿಕಾರಕವಾಗಲಿ; ಆದಿತ್ಯನ ದುಹಿತೃಸ್ಥಾನೀಯಳಾದ ಉಷೋದೇವಿಯೊಡನೆ ಸಂಗತರಾಗಿಯೇ ನಮ್ಮ ಯಾಗಶಾಲೆಗೆ ಆಗಮಿಸಿ.

## English Translation.

Your easy-rolling car alights upon the earth where, favourable to the sacred rite, you stop for the sake of the (sacrificial) food : may this hymn, promotive of your personal (welfare), be associated with your forms, and do you unite with the dawn, the daughter of heaven.

॥ ವಿಶೇಷವಿಷಯಗಳು ॥

ಕ್ರತುಮಂತಾ—ಎಂಬ ಈ ಪದವು ಅಶ್ವಿನೀದೇವತೆಗಳಿಗೆ ವಿಶೇಷಣವಾಗಿದೆ. **ಕ್ರತು** ಶಬ್ದಕ್ಕೆ **ಯಜ್ಞ, ಉದಕ, ಸತ್ಯ,** ಎಂಬರ್ಥಗಳಲ್ಲಿರುವ ಪ್ರಯೋಗಗಳನ್ನು ಹಿಂದೆ ತಿಳಿಸಿದೆ. ಪ್ರಕೃತದಲ್ಲಿರುವ ವಿಶೇಷಣದಿಂದ ಯಜ್ಞರೂಪವಾದ ಕರ್ಮಕ್ಕೆ ಅಧ್ಯಕ್ಷರೆಂದು ವರ್ಣಿತವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ. ಅಥವಾ ಈ ಪದಕ್ಕೆ ಯಾವ ಅರ್ಥವನ್ನು ಹೇಳಿದರೂ ಹೊಂದಿಕೊಳ್ಳುತ್ತದೆ. **ಋತ** ಶಬ್ದಕ್ಕೆ ಉದಕವೆಂದರ್ಥಮಾಡಿದರೆ, ಅಶ್ವಿನಿಗಳಿಗೂ ವೃಷ್ಟಿಗೂ ಇರುವ ಸಂಬಂಧವು ಪ್ರಸಿದ್ಧವಾದುದಾಗಿದೆ. **ಸತ್ಯ** ವೆಂದರ್ಥಮಾಡಿದರೆ, ಈ ಅಶ್ವಿನೀದೇವತೆಗಳೇ ಸಮಸ್ತ ವಿಶ್ವವನ್ನೂ ವ್ಯಾಪಿಸಿಕೊಂಡು ತಾವೇ ಆದಿತ್ಯಾದಿ ಸಕಲಸ್ವರೂಪರಾಗಿರುವವರು ಎಂಬುದನ್ನೂ ಹಿಂದೆ ತಿಳಿಸಿದೆ. ಯಜ್ಞಕರ್ಮವೆಂದರ್ಥಮಾಡಿದರೆ, ಪ್ರಾತಃಸವನಾದಿ ಸಕಲ ಕರ್ಮಗಳೂ ಇವರ ಆವಿರ್ಭಾವಾನಂತರವೇ ಸಾಧ್ಯವೆಂಬುದನ್ನೂ ತಿಳಿಸಿದೆ. ಆದುದರಿಂದ **ಕ್ರತುಮಂತಾ** ಎಂಬ ವಿಶೇಷಣಕ್ಕೆ ಯಾವ ಅರ್ಥವನ್ನು ಹೇಳಿದರೂ ಸಮಂಜಸವಾಗಿರುತ್ತದೆ.

**ದಿವಃ ದುಹಿತ್ರಾ ಉಷಸಾ ಸಚೇಥೇ—ದಿವಃ ದುಹಿತ್ರಾ** ಎಂಬುದಕ್ಕೆ ದ್ಯುಲೋಕದ ದುಹಿತೃವೆಂದಾಗಲಿ ಅಥವಾ ಆದಿತ್ಯನ ದುಹಿತೃವೆಂದಾಗಲಿ ಅರ್ಥವೆಂದು ತಿಳಿಸಿದೆ. ಉಷಸ್ಸಿಗೂ ಅಶ್ವಿನೀದೇವತೆಗಳಿಗೂ ಇರುವ ನಿತ್ಯಸಂಬಂಧವನ್ನೂ ಸಹ ಹಿಂದೆ ತಿಳಿಸಿದೆ. ಆದರೆ, ಕೆಲವೆಡೆಗಳಲ್ಲಿ ಇವರಿಗೆ ದಾಂಪತ್ಯಸಂಬಂಧವಿದೆಯೆಂದೂ, ಇನ್ನು ಕೆಲವೆಡೆಗಳಲ್ಲಿ ಸಹೋದರತ್ವ ಸಂಬಂಧವಿದೆಯೆಂದೂ ವರ್ಣಿತವಾಗಿದೆ. ಈ ವಿಷಯವನ್ನು ವಿಶದವಾಗಿ ಮುಂದೆ ತಿಳಿಸಲಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಸುವೃತ್**—ಶೋಭನಂ ವೃತ್ ವರ್ತನಂ ಯಸ್ಯ ಸಃ **ನಞ್‌ಸುಭ್ಯಾಮ್** (ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ.

**ತಿಷ್ಠತಃ**—ಷ್ಠಾ ಗತಿನಿವೃತ್ತೌ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗ ವಿರುವುದರಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲ ಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಕ್ರತುಮಂತಾ**—ಕ್ರತುಃ ಅನಯೋಃ ಅಸ್ತಿ ಇತಿ ಕ್ರತುಮಂತೌ. ಮತುಪ್ ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ.

**ವಪುಷ್ಯಾ**—ವಪುಷಃ ಹಿತಾ. ಹಿತಾರ್ಥದಲ್ಲಿ ಯ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಸಚೇತಾಮ್**—ಷಚ ಸಮವಾಯೇ. ಧಾತು. ಲೋಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿವಃ—ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಷಷ್ಠೀ ವಿಭಕ್ತಿಯು ಉದಾತ್ತವಾಗುತ್ತದೆ. ॥ ೨ ॥



॥ ಸಂಹಿತಾಪಾಠಃ ॥

**ಆ ತಿಷ್ಠತಂ ಸುವೃತಂ ಯೋ ರಥೋ ವಾಮನು ವ್ರತಾನಿ ವರ್ತತೇ ಹವಿಷ್ಮಾನ್ ।**
**ಯೇನ ನರಾ ನಾಸತ್ಯೇಷಯಧ್ಯೈ ವರ್ತಿರ್ಯಾಥಸ್ತನಯಾಯ ತ್ಮನೇ ಚ ॥ ೩ ॥**

॥ ಪದಪಾಠಃ ॥

**ಆ । ತಿಷ್ಠತಂ । ಸುಽವೃತಂ । ಯಃ । ರಥಃ । ವಾಂ । ಅನು । ವ್ರತಾನಿ । ವರ್ತತೇ । ಹವಿಷ್ಮಾನ್ ।**
**ಯೇನ । ನರಾ । ನಾಸತ್ಯಾ । ಇಷಯಧ್ಯೈ । ವರ್ತಿಃ । ಯಾಥಃ । ತನಯಾಯ । ತ್ಮನೇ । ಚ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ವಾಂ ಯುವಾಂ ಸುವೃತಂ ಶೋಭನವರ್ತನಂ ರಥಮಾ ತಿಷ್ಠತಂ । ಆಶ್ರಯೇತಂ । ಯೋ ರಥೋ ಹವಿಷ್ಮಾನ್ । ಷಷ್ಠ್ಯರ್ಥೇ ಪ್ರಥಮಾ । ಹವಿಷ್ಮತೋ ಯಜಮಾನಸ್ಯ ವ್ರತಾನಿ ಕರ್ಮಾ-**

**ಣ್ಯನು ವರ್ತತೇ । ಯದ್ವಾ । ಯಜಮಾನಾಯ ದತ್ತಹವಿಷಾ ತೇದ್ವಾನ್ । ಯೇನ ಚ ರಥೇನ ಹೇ ನರಾ ನೇತಾರೌ ವಾ ಹೇ ನಾಸತ್ಯಾಸತ್ಯರಹಿತೌ ಯುವಾಮಿಷಯಧ್ಯೈ । ಯಜ್ಞಂ ಪ್ರಾಪ್ತುಮಿಚ್ಛತಮಿತಿ ಶೇಷಃ । ತೇನ ರಥೇನ ವರ್ತಿಃ । ಗೃಹನಾಮೈತತ್ । ಯಜಮಾನಸ್ಯ ಯಜ್ಞಗೃಹಂ ತನಯಾಯ ಪುತ್ರಲಾಭಾಯ ತ್ಮನ ಆತ್ಮನ ಆತ್ಮಹಿತಾಯ ಚ ಯಾಥಃ ॥**

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾ! **ನಾಸತ್ಯಾ** – ಅಸತ್ಯರಹಿತರೂ ಆದ ಎಲೈ ಅಶ್ವಿನೀದೇವತೆಗಳೇ! **ಯಃ ರಥಃ**-ಯಾವ ರಥವು । **ಹವಿಷ್ಮಾನ್**—ಹವಿರ್ಯುಕ್ತನಾದ ಯಜಮಾನನ **। ವ್ರತಾನಿ ಅನು**—ಕರ್ಮಗಳನ್ನನುಸರಿಸಿ **। ವರ್ತತೇ**—ಗಮಿಸುತ್ತದೆಯೋ । **ಯೇನ**—ಯಾವ ರಥದಿಂದ । **ಇಷಯಧ್ಯೈ**—ಯಜ್ಞವನ್ನು ಪ್ರಾಪ್ತರಾಗಲು ಇಚ್ಛಿಸುತ್ತೀರೋ । ಮತ್ತು **(ಯೇನ**—ಯಾವ ರಥದಿಂದ) । **ವರ್ತಿಃ** – ಯಾಗಕರ್ತೃವಿನ ಗೃಹವನ್ನು । **ತನಯಾಯ**—(ಅವನಿಗೆ) ಪುತ್ರಾದಿಗಳನ್ನೂ (ಅನುಗ್ರಹಿಸಲೂ) । **ತ್ಮನೇ ಚ**–(ಅವನ) ಆತ್ಮಹಿತಕ್ಕೋಸ್ಕರಲೂ । **ಯಾಥಃ**—ಗಮಿಸುತ್ತೀರೋ । **(ತಂ**—ಆ) । **ವಾಂ**—ನಿಮ್ಮಿಬ್ಬರ । **ಸುವೃತಂ**—ಸುಖಗಮನವುಳ್ಳ ರಥವನ್ನು । **ಆ ತಿಷ್ಠತಂ**—ಆಶ್ರಯಿಸಿರಿ.

॥ ಭಾವಾರ್ಥ ॥

ನೇತೃಗಳೂ, ಅಸತ್ಯರಹಿತರೂ ಆದ ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥವು ಹವಿರಾದಿಯುಕ್ತನಾದ ಯಜಮಾನನ ಕರ್ಮಗಳನ್ನನುಸರಿಸಿ (ಕಾಲಕಾಲಕ್ಕೆ ಆಗಮಿಸುತ್ತದೆ.) ಅದೇ ರಥದಲ್ಲಿಯೇ ನೀವು ಯಾಗಗಳಿಗೆ ಆಗಮಿಸುವುದು ಮತ್ತು ಯಾಗ ಕರ್ತೃಗಳಿಗೆ ಪುತ್ರಾದಿಗಳನ್ನೂ ಶ್ರೇಯಸ್ಸನ್ನೂ ಅನುಗ್ರಹಿಸುವುದು ಇಂತಹ ಸುಲಭವಾಗಿ ಸಂಚರಿಸುವ ನಿಮ್ಮ ರಥವನ್ನಾಶ್ರಯಿಸಿ ನಮ್ಮ ಯಾಗಶಾಲೆಗೆ ಆಗಮಿಸಿ.

English Translation.

Ascend your rolling car, which approaches the sacred rite of the oblation; the car in which, Nasatyas, leaders, you purpose to come the sacrifice, and to procceed to the dwelling (of the worshipper) for (bestowing upon him) offspring, and for his own (good).

॥ ವಿಶೇಷವಿಷಯಗಳು ॥

**ವರ್ತಿಃ—ವರ್ತನಹೇತುಭೂತಂ ಗೃಹಂ** । ವಾಸಮಾಡಲು ಆಧಾರಭೂತವಾದ ಮನೆಯೆಂದರ್ಥವೆಂದು ಸಾಯಣರು ಈ ಪದವು ಬರುವೆಡೆಗಳಲ್ಲೆಲ್ಲಾ ಅರ್ಥಮಾಡಿದ್ದಾರೆ. ಆದರೆ ಸ್ಕಂದಸ್ವಾಮಿಗಳು ಸಾಧಾರಣವಾಗಿ ಎಲ್ಲಾ ಕಡೆಗಳಲ್ಲೂ ಸಹ ಪ್ರಸಿದ್ಧವಾದ ಮಾರ್ಗವೆಂದರ್ಥಮಾಡಿದ್ದಾರೆ. ಉದಾಹರಣೆಗೆ

**ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ ।**
**ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ॥**
(ಋ. ಸಂ. ೧-೩೪-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ವರ್ತಿ**ಯೆಂಬುದಕ್ಕೆ ಸಾಯಣರು ಗೃಹವೆಂದೂ, ಸ್ಕಂದಸ್ವಾಮಿಗಳು ಪಥವೆಂದೂ ಅರ್ಥ ಮಾಡಿದ್ದಾರೆ. ಹೀಗೆ **ತ್ರಿರ್ವರ್ತಿಃ, ಅಶ್ವಿನಾವರ್ತಿಃ** ಇತ್ಯಾದಿಯಾಗಿ **ವರ್ತಿ** ಶಬ್ದಪ್ರಯೋಗವಿರುವ ೧-೧೧೬-೧೮ ;

೧-೧೧೭-೨; ೧-೧೧೯-೪ ಇತ್ಯಾದಿ ಋಕ್ಕುಗಳಿರುವ ಸೂಕ್ತಗಳೆಲ್ಲವೂ ಅಶ್ವಿನೀ ದೇವತೆಗಳ ಪರವಾದವೇ ಆಗಿವೆ ಯೆಂಬುದು ಒಂದು ವಿಶೇಷ ವಿಷಯ. ಆದರೆ,

**ಇಷಂ ದುಹನ್ತ್ಸುದುಘಾಂ ವಿಶ್ವಧಾಯಸಂ ಯಜ್ಞಪ್ರಿಯೇ ಯಜಮಾನಾಯ ಸುಕ್ರತೋ ।**
**ಅಗ್ನೇ ಘೃತಸ್ನುಸ್ತ್ರಿರ್ಋತಾನಿ ದೀದ್ಯದ್ವರ್ತಿರ್ಯಜ್ಞಂ ಪರಿಯನ್ತ್ಸುಕ್ರತೂಯಸೇ ॥**
(ಋ. ಸಂ. ೧೦-೧೨೨-೬)

ಎಂಬ ಋಕ್ಕಿನಲ್ಲಿ ಮಾತ್ರ ಅಗ್ನಿ ಪರವಾದ ಮಂತ್ರದಲ್ಲಿ ಈ ಪದದ ಪ್ರಯೋಗವಿರುತ್ತದೆ. ಇಲ್ಲಿ ಯಜ್ಞಗೃಹವೆಂದರ್ಥ ಮಾಡಿದೆ. ಸಾಯಣರೂ ಸಹ ಕೆಲವೆಡೆಗಳಲ್ಲಿ ಈ ಪದಕ್ಕೆ ಮಾರ್ಗವೆಂದರ್ಥಮಾಡಿದ್ದಾರೆ. ಉದಾಹರಣೆಗೆ

**ಯೋ ಹ ಸ್ಯ ವಾಂ ರಥಿರಾ ವಸ್ತ ಉಸ್ರಾ ರಥೋ ಯುಜಾನಃ ಪರಿಯಾತಿ ವರ್ತಿಃ ।**
**ತೇನ ನಃ ಶಂಯೋರುಷಸೋ ವ್ಯುಷ್ಟೌ ನ್ಯಶ್ವಿನಾ ವಹತಂ ಯಜ್ಞೇ ಅಸ್ಮಿನ್ ॥**
(ಋ. ಸಂ. ೭-೬೯-೫)

ಎಂಬಲ್ಲಿ **ವರ್ತಿಃ ಮಾರ್ಗಂ** ಎಂದರ್ಥಮಾಡಿದೆ. ಇದೂ ಸಹ. ಅಶ್ವಿನಿ ದೇವತೆಗಳನ್ನೇ ಉದ್ದೇಶಿಸಿ ಪ್ರಾರ್ಥಿಸಿದ ಮಂತ್ರವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಗೃಹವೆಂದರ್ಥ. ಎಂದರೆ ಯಜ್ಞಗೃಹವು.

**ತ್ಮನೇ ಚ—ತ್ಮನ್** ಶಬ್ದವು **ಆತ್ಮನ್** ಶಬ್ದದ ಸಂಗ್ರಹರೂಪದಲ್ಲಿದೆ. ಒಂದು ಸನ್ನಿವೇಶದಲ್ಲಿ ಮಾತ್ರ ಸಾಯಣರು **ಜೀವ**ವೆಂದರ್ಥಮಾಡಿದ್ದಾರೆ.

**ತ್ವಂ ತ್ಯಾಂ ನ ಇಂದ್ರ ದೇವ ಚಿತ್ರಾಮಿಷಮಾಪೋ ನ ಪೀಪಯಃ ಪರಿಜ್ಮನ್ ।**
**ಯಯಾ ಶೂರ ಪ್ರತ್ಯಸ್ಮಭ್ಯಂ ಯಂಸಿ ತ್ಮನಮೂರ್ಜಂ ನ ವಿಶ್ವಧ ಕ್ಷರಧ್ಯೈ ॥**
(ಋ. ಸಂ. ೧-೬೩-೮)

ಎಂಬಲ್ಲಿ **ತ್ಮನಂ** ಎಂಬುದಕ್ಕೆ **ಆತ್ಮಾನಂ ಜೀವಂ** ಎಂದರ್ಥವನ್ನು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ತಿಷ್ಠತಮ್**—ಷ್ಠಾ ಗತಿನಿವೃತ್ತೌ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವರ್ತತೇ**—ವೃತು ವರ್ತನೇ. ಧಾತು. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ನರಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಇಷಯಧ್ಯೈ**—ಇಷ ಗತೌ. ಧಾತು. ತುಮುನರ್ಥದಲ್ಲಿ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಅಧ್ಯೈ ಪ್ರತ್ಯಯ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ವರ್ತಿಃ—ವೃತು ವರ್ತನೆ. ಧಾತು. ಹೃಪಿಷಿರುಹಿ ವೃತಿ—(ಉ. ಸೂ. ೪-೫೫೮) ಎಂಬುದರಿಂದ ಇನ್ ಪ್ರತ್ಯಯ. ಪುಗಂತಲಘೂಪಧಸ್ಯ ಚ ಎಂಬುದರಿಂದ ಲಘೂಪಧಗುಣ. ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ. ವರ್ತತೇ ಅತ್ರ ಇತಿ ವರ್ತಿಃ ಗೃಹಮ್. (ಮನೆ).

ತ್ಮನೇ—ಆತ್ಮನೇ ಎಂದು ರೂಪವಾದಾಗ ಮಂತ್ರೇಷ್ವಾಙ್ಯಾದೇರಾತ್ಮನಃ (ಪಾ. ಸೂ. ೬-೪-೧೪೧) ಎಂಬುದರಿಂದ ಆದಿಯ ಅಕಾರಕ್ಕೆ ಲೋಪ. ॥ ೩ ॥



॥ ಸಂಹಿತಾಪಾಠಃ ॥

ಮಾ ವಾಂ ವೃಕೋ ಮಾ ವೃಕೀರಾ ದಧರ್ಷೀನ್ಮಾ ಪರಿ ವರ್ಕ್ತಮುತ ಮಾತಿ ಧಕ್ತಂ।
ಅಯಂ ವಾಂ ಭಾಗೋ ನಿಹಿತ ಇಯಂ ಗೀರ್ದಸ್ರಾವಿಮೇ ವಾಂ ನಿಧಯೋ
ಮಧೂನಾಂ ॥ ೪ ॥

॥ ಪದಪಾಠಃ ॥

ಮಾ । ವಾಂ । ವೃಕಃ । ಮಾ । ವೃಕೀಃ । ಆ । ದಧರ್ಷೀತ್ । ಮಾ । ಪರಿ । ವರ್ಕ್ತಂ । ಉತ । ಮಾ । ಅತಿ । ಧಕ್ತಂ ।

ಅಯಂ । ವಾಂ । ಭಾಗಃ । ನಿऽಹಿತಃ । ಇಯಂ । ಗೀಃ । ದಸ್ರಾ । ಇಮೇ । ವಾಂ । ನಿऽಧಯಃ ಮಧೂನಾಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ದಸ್ರೌ ಶತ್ರೂಣಾಮುಪಕ್ಷಪಯಿತಾರಾವಶ್ವಿನೌ ವಾಂ ಯುವಯೋರನುಗ್ರಹಾದಿತಿ ಶೇಷಃ। ವೃಕೋ ಹಿಂಸಕೋಽರಣ್ಯಶ್ವಾದಿರ್ಮಾ ದದರ್ಷೀನ್ಮಾಂ। ತಥಾ ವೃಕೀರ್ವೃಕ್ಯೋ ಹಿಂಸಕಾ ಅನ್ಯಾ ಅಪಿ ಮಾ ದಧರ್ಷೀತ್॥ ವಚನವ್ಯತ್ಯಯಃ॥ ಧರ್ಷಣಂ ಮಾ ಕಾರ್ಷುಃ। ಯುವಾಮೇವ ವಾ ಮಾ ದಧರ್ಷೀದಿತಿ ಯೋಜ್ಯಂ। ತಥಾ ಯುವಾಂ ಮಾ ಪರಿ ವರ್ಕ್ತಂ। ಪರಿತೋ ಮಾ ವರ್ಜಯತಂ ಮಾಂ। ಉತಾಪಿ ಚ ಮಾತಿ ಧಕ್ತಂ। ಅಸ್ಮಾನತಿಕ್ರಮ್ಯಾನ್ಯಸ್ಮೈ ಮಾ ದತ್ತಂ। ಕಿಮರ್ಥಮೇವಮಿತಿ ಉಚ್ಯತೇ। ವಾಂ ಯುವಯೋರರ್ಥಾಯಾಯಂ ಭಾಗೋ ಭಜನೀಯೋ ಹವಿರಂಶೋ ನಿಹಿತಃ। ತಥೇಯಂ ಚ ಗೀಃ ಸ್ತುತಿರೂಪಾ ವಾಗಪಿ ನಿಹಿತೇತಿ ಶೇಷಃ। ಹೇ ದಸ್ರಾವಶ್ವಿನೌ ವಾಂ ಯುವಾಭ್ಯಾಮಿಮ ಇಮಾನಿ ಮಧೂನಾಂ ಸೋಮರಸಾನಾಂ ನಿಧಯೋ ನಿಧಾನಾನಿ ಸ್ಥಾಪಿತಾನಿ ॥

॥ ಪ್ರತಿಪದಾರ್ಥ ॥

**(ಹೇ) ದಸ್ರೌ**—ಎಲೈ ಶತ್ರುನಾಶಕರಾದ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರ (ಅನುಗ್ರಹದಿಂದ) **ವೃಕಃ**—(ಹಿಂಸಕರವಾದ) ತೋಳವು । **ಮಾ ಆ ದಧರ್ಷೀತ್**—(ನನ್ನನ್ನು) ಹಿಂಸಿಸದಿರಲಿ । **(ತಥಾ**—ಹಾಗೆಯೇ । **ವೃಕೀಃ**—ಹೆಣ್ಣು ತೋಳವೊದಲಾದುವುಗಳೂ । **ಮಾ (ದಧರ್ಷೀತ್**—ಹಿಂಸಿಸದಿರಲಿ ಹಾಗೆಯೇ ನೀವಿಬ್ಬರೂ) **ಮಾ ಪರಿ ವರ್ಕ್ತಂ**—ನನ್ನ ಕೈ ಬಿಡಬೇಡಿ । **ಉತ**—ಮತ್ತು । **ಮಾ ಅತಿ ಧಕ್ತಂ**- (ನಮ್ಮನ್ನು) ಬಿಟ್ಟು (ಬೇರೆಯವರಿಗೆ) ದಾನಮಾಡಬೇಡಿ (ಅಥವಾ) ಬೇರೆಯವರಿಗೆ (ನಮ್ಮನ್ನು) ಒಪ್ಪಿಸಬೇಡಿ । **ವಾಂ**—ನಿಮ್ಮಿಬ್ಬರಿಗೋಸ್ಕರ । **ಅಯಂ ಭಾಗಃ**—ಈ ಹವಿರ್ಭಾಗವು । **ನಿಹಿತಃ**—ಇಡಲ್ಪಟ್ಟಿದೆ । **(ತಥಾ**—ಹಾಗೆಯೇ) । **ಇಯಂ ಗೀಃ (ಚ)**—ಈ ಸ್ತುತಿರೂಪವಾಕ್ಯೂ ನಿಮಗೋಸ್ಕರ ಸಿದ್ಧವಾಗಿದೆ । **ವಾಂ**—ನಿಮಗೋಸ್ಕರ । **ಇಮೇ**—ಈ । **ಮಧೂನಾಂ**—ಮಧುಸದೃಶವಾದ ಸೋಮರಸಗಳ । **ನಿಧಯಃ**—ನಿಧಿಸ್ಥಾನೀಯಗಳಾದ ಪಾತ್ರೆಗಳು । (**ನಿಹಿತಾಃ** —ಇಡಲ್ಪಟ್ಟಿವೆ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನುಗ್ರಹಕ್ಕೆ ಪಾತ್ರನಾದ ನನ್ನನ್ನು ವೃಕ ವೃಕಿಗಳ್ಯಾವುವೂ ಹಿಂಸಿಸದಿರಲಿ ; ನೀವೂ ನನ್ನನ್ನು ಕೈ ಬಿಡಬೇಡಿ ಅಥವಾ ಬೇರೆಯಾರಿಗಾದರೂ ಒಪ್ಪಿಸಬೇಡಿ ; ನಿಮ್ಮ ಹವಿರ್ಭಾಗವು ಸಿದ್ಧವಾಗಿದೆ ; ಈ ಸ್ತುತಿಯು ನಿಮ್ಮನ್ನೇ ಉದ್ದೆಶಿಸಿದುದು, ಮಧುಸದೃಶವಾದ ಈ ಸೋಮರಸಗಳು ನಿಮಗಾಗಿಯೇ ಸಿದ್ಧವಾಗಿಡಲ್ಪಟ್ಟಿವೆ.

English Translation.

Let not the wolf, let not the she-wolf, harm me, safe (in your protcction); obandon me not, nor deliver me (to another). This your share of the offering is prepared ; this prayer, Dasras, (is addressed) to you ; these treasures of Soma juice are for you.

॥ ವಿಶೇಷವಿಷಯಗಳು ॥

**ವೃಕದ** ಹಿಂಸೆಯಿಂದ ತಪ್ಪಿಸಿ ಎಂದು ಅಶ್ವಿನೀದೇವತೆಗಳು ಈ ಋಕ್ಕಿನಲ್ಲಿ ಪ್ರಾರ್ಥಿತರಾಗಿದ್ದಾರೆ. **ವೃಕ** ಶಬ್ದಕ್ಕೆ ಸಾಧಾರಣವಾಗಿ ತೋಳನೆಂದೇ ಅರ್ಥಮಾಡಿದೆ. ಹಿಂದೆ ತೋಳನಿಂದ ಹಿಡಿಯಲ್ಪಟ್ಟ ವರ್ತಿಕೆಯೆಂಬ ಪಕ್ಷಿಯನ್ನು ತೋಳನ ಬಾಯಿಂದ ಅಶ್ವಿನೀದೇವತೆಗಳು ಬಿಡಿಸಿದರು ಎಂಬ ಕಥೆಯನ್ನು ಋ ಸಂ. ೧–೧೧೨-೮ ನೇ ಋಕ್ಕಿನಲ್ಲಿ ಸೂಚಿಸಿದೆ. ಪಶ್ವಾದಿಗಳಿಗೆಲ್ಲಾ ಈ ಕ್ರೂರಪ್ರಾಣಿಯು ತೊಂದರೆಯನ್ನು ಕೊಡುತ್ತಿದ್ದ ವಿಷಯವನ್ನೂ ಅನೇಕ ಕಡೆಗಳಲ್ಲಿ ತಿಳಿಸಿದೆ. ಆದರೆ, **ವೃಕ** ಶಬ್ದವು ಪ್ರಯೋಗಿಸಲ್ಪಟ್ಟಾಗೆಲ್ಲಾ ಕ್ರೂರಪ್ರಾಣಿಯೆಂದು ರೂಢವಾದ ಅರ್ಥವನ್ನು ಹೇಳಲಾಗುವುದಿಲ್ಲ. ಹೇಗೆಂದರೆ—

**ಸುಪರ್ಣಾ ಏತ ಆಸತೇ ಮಧ್ಯ ಆರೋಧನೇ ದಿವಃ ।**
**ತೇ ಸೇಧಂತಿ ಪಥೋ ವೃಕಂ ತರಂತಂ ಯಹ್ವತೀರಪೋ ವಿತ್ತಂ ಮೇ ಅಸ್ಯ ರೋದಸೀ ॥**

(ಋ. ಸಂ. ೧-೧೦೫-೧೧)

ಎಂಬಲ್ಲಿ "ಮನೋಹರವಾದ ಪತನವುಳ್ಳ ಸೂರ್ಯಕಿರಣಗಳು ಸರ್ವತ್ರ ವ್ಯಾಪಿಸಿರುವ ಅಂತರಿಕ್ಷದ ಮಧ್ಯಭಾಗದಲ್ಲಿರುತ್ತವೆ. ಅವು ದಾರಿಯಲ್ಲಿ ಮಹತ್ತಾದ ನೀರುಗಳನ್ನು ದಾಟಿ ತ್ರಿತನನ್ನು ತಿನ್ನಲು ಬರುತ್ತಿರುವ ತೋಳನನ್ನು ತಡೆದು ನಿಲ್ಲಿಸುತ್ತವೆ'' ಎಂಬ ವರ್ಣನೆಯಿದೆ. ಇಲ್ಲಿ ಸಾಯಣರು **ವೃಕ** ಶಬ್ದಕ್ಕೆ ಎರಡು ವಿಧವಾದ ಅರ್ಥವಿದೆಯೆಂದು ತೋರಿಸಿದ್ದಾರೆ. ಮೊದಲನೆಯದಾಗಿ,

> **"ಕೂಪಪತನಾತ್ಪೂರ್ವಂ ತ್ರಿತಂ ದೃಷ್ಟ್ವಾ ಏನಂ ಭಕ್ಷಯಿತುಂ ಕಶ್ಚಿದರಣ್ಯಶ್ವಾ ಮಹತೀಂ ನದೀಂ ತಿತೀರ್ಷುಃ ಆಜಗಾಮ । ಸ ಚ ಸೂರ್ಯರಶ್ಮೀನ್ ದೃಷ್ಟ್ವಾ ಅಯಮವಸರೋ ನ ಭವತೀತಿ ನಿವವೃತೇ । ಅತೋ ರಶ್ಮಯೋ ವೃಕಂ ನಿಷೇಧಂತೀತ್ಯುಚ್ಯತೇ" ॥**

**ತ್ರಿತನು** ಬಾವಿಯಲ್ಲಿ ಬೀಳುವುದಕ್ಕೆ ಮೊದಲು ವೃಕವು ಮಹತ್ತಾದ ನದಿಯನ್ನು ದಾಟಲು ಪ್ರಯತ್ನಪಟ್ಟಾಗ ಸೂರ್ಯರಶ್ಮಿಗಳನ್ನು ನೋಡಿ ಈಗ ಇದು ಸಮಯವಲ್ಲವೆಂದು ಹಿಂತಿರುಗಿತು. ಆದುದರಿಂದಲೇ ಸೂರ್ಯರಶ್ಮಿಗಳು ವೃಕವನ್ನು ತಡೆದವು ಎಂದಭಿಪ್ರಾಯವೆಂದು ಮೊದಲು ಹೇಳಿ ಅನಂತರ,

> **"ಯಾಸ್ಕಪಕ್ಷೇ ತು—ಅಪ ಇತ್ಯಂತರಿಕ್ಷನಾಮ । ಯಹ್ವತೀರಪೋ ಮಹದಂತರಿಕ್ಷಂ ಪಥಃ ಪಥಾ ದ್ವಾದಶರಾಶ್ಯಾತ್ಮನಾ ಮಾರ್ಗೇಣ ತರಂತಂ ವೃಕಂ ಚಂದ್ರಮಸಂ ಸೂರ್ಯರಶ್ಮಯೋ ನಿಷೇಧಂತಿ । ಅಹನಿ ಹಿ ಸೂರ್ಯರಶ್ಮಿಭಿಃ ನಿರುದ್ಧಶ್ಚಂದ್ರಮಾ ನಿಷ್ಪ್ರಭೋ ದೃಶ್ಯತೇ । ಅತೋ ನಿಷ್ಪ್ರಭಂ ಕುರ್ವಂತೀತ್ಯರ್ಥಃ ।**

ಯಾಸ್ಕರ ಮತದಂತೆ **ಅಪಃ** ಎಂಬ ಪದಕ್ಕೆ ಅಂತರಿಕ್ಷವೆಂದೂ **ವೃಕ** ಶಬ್ದಕ್ಕೆ ಚಂದ್ರನೆಂದೂ ಅರ್ಥವಾದರೆ, ಆಗ ಅಹಸ್ಸಿನಲ್ಲಿ ಚಂದ್ರನ ಪ್ರಕಾಶವು ಮಹತ್ತಾದ ಅಂತರಿಕ್ಷದಲ್ಲಿ ಪ್ರಸಾರವಾಗದಂತೆ ಸೂರ್ಯನ ಕಿರಣಗಳು ತಡೆಯುತ್ತವೆಯೆಂದೂ ಸಾಯಣರು ಎರಡರ್ಥಗಳನ್ನು ಹೇಳಿದ್ದಾರೆ. ಮತ್ತು,

> **ಅರುಣೋ ಮಾಸಕೃದ್ವೃಕಃ ಪಥಾ ಯಂತಂ ದದರ್ಶ ಹಿ ।**
> **ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಟ್ಯಾಮಯೀ ವಿತ್ತಂ ಮೇ ಅಸ್ಯ ರೋದಸೀ ॥**
> (ಋ. ಸಂ. ೧-೧೦೫-೧೮)

ಎಂಬಲ್ಲಿ," ಒಂದು ಸಲ ನಾನು ದಾರಿಯಲ್ಲಿ ಹೋಗುತ್ತಿದ್ದಾಗ ಒಂದು ಕೆಂಪು ಬಣ್ಣದ ತೋಳನು ನನ್ನನ್ನು ನೋಡಿಬಿಟ್ಟಿತು ಅನಂತರ ಅದು ನನ್ನನ್ನು ನೋಡಿ ತಿನ್ನಲಿಚ್ಛೆಯಿಂದ ಆ ತೋಳನು ತನ್ನ ದೇಹವನ್ನು ಊರ್ಧ್ವಮುಖವಾಗಿ ಮಾಡಿಕೊಂಡು ನನ್ನನ್ನು ಅಟ್ಟಿಸಿಕೊಂಡು ಬಂದಿತು" ಎಂಬ ವರ್ಣನೆಯಿದೆ. ಮತ್ತು ನಿರುಕ್ತಕಾರರು, ಉದಾಹೃತವಾದ ಈ ಋಕ್ಕಿನಲ್ಲಿರುವ **ವೃಕ** ಶಬ್ದದ ವಿವರಣೆಯನ್ನು ತಿಳಿಸುತ್ತಾ,

> **ವೃಕಶ್ಚಂದ್ರಮಾ ಭವತಿ । ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ ।**
> (ನಿ. ೫-೨೦)

**ವೃಕ**ನೆಂದರೆ ಚಂದ್ರನೆಂದರ್ಥ. ಜ್ಯೋತಿಯನ್ನು ಪ್ರಕಾಶಪಡಿಸುವುದರಿಂದಾಗಲಿ, ಅಥವಾ ನ್ಯೂನವಾದ ಜ್ಯೋತಿಯುಳ್ಳನೆಂದಾಗಲೀ ಅಥವಾ ನಕ್ಷತ್ರಗಳೊಡನೆ ಹೋಲಿಸಿದರೆ ಅಧಿಕವಾದ ಪ್ರಕಾಶವುಳ್ಳವನೆಂದಾಗಿ ಅರ್ಥವನ್ನು ಕೊಡು

ವುದರಿಂದ ಚಂದ್ರನಿಗೆ ಈ ಹೆಸರು ಬಂದಿದೆ ಎಂದು ತಿಳಿಸಿದ್ದಾರೆ. ಇದಲ್ಲದೇ, ಈ ಪದವನ್ನು ಇನ್ನೂ ಕೆಲವು ಅರ್ಥಗಳಲ್ಲೂ ಪ್ರಯೋಗಿಸಿದೆ. **ಆದಿತ್ಯೋಽಪಿ ವೃಕ ಉಚ್ಯತೇ ಯದಾ ವೃಙ್ಕ್ತೇ** (ನಿ.೫-೨೧) ಎಂದು ನಿರುಕ್ತಕಾರರು,

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ ।**
(ಋ. ಸಂ. ೧-೧೧೭-೧೬)

ಎಂಬ ಋಕ್ಕನ್ನು ಉದಾಹರಿಸಿ, ಕತ್ತಲನ್ನು ನಾಶಮಾಡಿ ಬೆಳಕನ್ನು ಹರಡುವುದೆಂಬ ಅರ್ಥವನ್ನು ಕೊಡುವುದರಿಂದ ಇಲ್ಲಿ **ವೃಕ** ಶಬ್ದಕ್ಕೆ ಆದಿತ್ಯನೆಂದರ್ಥ.

**ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ ।** ಕಚ್ಚುವುದರಿಂದ **ಅರಣ್ಯಶ್ವಾ** ಎಂದರೆ ಕಾಡುನಾಯಿಗೂ (ತೋಳನಿಗೂ) ವೃಕವೆಂದು ಹೆಸರು, ಎಂದು,

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಯುನೇಷು ಭೂಷತಿ ।**
(ಋ. ಸಂ. ೮-೬೬-೮)

ಎಂಬ ಋಕ್ಕನ್ನುದಾಹರಿಸಿ ವಿವರಿಸಿದ್ದಾರೆ. ಆದರೆ ಈ ಋಕ್ಕಿನಲ್ಲಿ **ವೃಕ** ಶಬ್ದಕ್ಕೆ ಸಾಯಣರು **ತಸ್ಕರ** (ವಸ್ತುವನ್ನು ಕೊಂಡೊಯ್ಯುವನಾದ್ದರಿಂದ ಈ ಹೆಸರು) ಎಂದರ್ಥಮಾಡಿದ್ದಾರೆ. ಮತ್ತು, " **ಅಜೋಹವೀದಶ್ವಿನಾ** " ಎಂಬ ಮೇಲೆ ಉದಾಹೃತವಾಗಿರುವ ಋಕ್ಕಿನಲ್ಲಿ (ಋ. ಸಂ. ೧-೧೧೭-೧೬) ಸಾಯಣರು ಈ ರೀತಿ ವಿವರಣೆಯನ್ನು ಹೇಳಿದ್ದಾರೆ.

**ವರ್ತತೇ ಪ್ರತಿದಿವಸಮಾವರ್ತತೇ ಇತಿ ವರ್ತಿಕಾ ಉಷಾಃ । ವೃಕ ಇತಿ ವಿವೃತಜ್ಯೋತಿಷ್ಕಃ ಸೂರ್ಯಃ ಉಚ್ಯತೇ । ತೇನ ಗ್ರಸ್ತಾ ಸತೀ ಸಾ ಹೇ ಅಶ್ವಿನೌ ಯುವಾಂ ಅಜೋಹವೀತ್ ಆಹ್ವಯತ್ ಯದಾ ಖಲು ಯುವಾಂ ವೃಕಸ್ಯ ಸೂರ್ಯಸ್ಯ ಆಸ್ನಃ ಅಸ್ಯಸ್ಥಾನೀಯಾನ್ಮಂಡಲಾತ್ ಅಮುಂಚತಂ ಅಮೋಚಯತಂ । ಸೂರ್ಯೇಣ ಏಕೀಭೂತಾಮುಷಸಂ ಪೃಥಕ್ಕೃತ್ಯ ಉದಯಾತ್ಪೂರ್ವಂ ರಾತ್ರೇರಪರಭಾಗೇ ಸ್ಥಾಪಿತವಂತಾವಿತ್ಯರ್ಥಃ ॥**

ಎಂದರೆ, **ವರ್ತಿಕೆಯೆಂದರೆ ಉಷಸ್ಸೆಂದೂ**, ವೃಕವೆಂದರೆ ಆದಿತ್ಯನೆಂದೂ ಅರ್ಥಮಾಡಿ ಈ ಅರ್ಥಕ್ಕೆ ಆಧಾರವಾಗಿ ಯಾಸ್ಕರ ವಾಕ್ಯವನ್ನುದಹರಿಸಿದ್ದಾರೆ. (ನಿ. ೫-೨೧) ಇದನ್ನು ಹಿಂದೆ ವಿವರಿಸಿದೆ. (ಋ ಸಂ. ೧-೧೧೭-೧೬) ಅಲ್ಲದೆ, ಅಶ್ವಿನೀದೇವತೆಗಳ ರಥದ ವಾಹನವಾದ ರಾಸಭವೇ ವೃಕರೂಪವಾಗಿ ಪರಿವರ್ತಿತವಾಗಿ ಅದಕ್ಕೆ ಆಹಾರಾರ್ಥವಾಗಿ ಋಜ್ರಾಶ್ವನು ಕುರಿಗಳನ್ನು ಕೊಂದು ಅವುಗಳಿಗೆ ಕೊಟ್ಟು ತಂದೆಯಿಂದ ಶಪಿತನಾದ ಕಥೆಯನ್ನೂ ಹಿಂದೆ ತಿಳಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ ಪ್ರಾಯಃ ವೃಕಶಬ್ದಕ್ಕೆ **ಅರಣ್ಯಶ್ವಾ** ಎಂದರೆ ತೋಳನೆಂದೇ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ವೃಕೇಃ**—ವೃಞ್ ವರಣೇ. ಧಾತು. **ಸೃವೃಭೂಶುಷಿಮುಷಿಭ್ಯಃ ಕಕ್** (ಉ. ಸೂ. ೩-೩೭೧) ಎಂಬುದರಿಂದ ಕಕ್ ಪ್ರತ್ಯಯ. ಕಿತ್ತಾದುದುರಿಂದ ಗುಣ ಬರುವುದಿಲ್ಲ. **ಜಾತೇರಸ್ತ್ರೀ ವಿಷಯಾದ**— (ಪಾ. ಸೂ. ೪-೧-೬೩)

ಎಂಬುದರಿಂದ ಸ್ತ್ರೀತ್ವದಲ್ಲಿ ಜೀಷ್. ಜಸ್ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಪೂರ್ವ ಸವರ್ಣದೀರ್ಘ.

**ದಧೃಷೀಃತ್**—ಞಿಧೃಷಾ ಪ್ರಾಗಲ್ಭ್ಯೇ. ಧಾತು. **ಮಾಙಿ ಲುಙ್** (ಪಾ. ಸೂ. ೩-೩-೧೭೫) ಮಾಙ್ ಸಂಬಂಧವಿರುವುದರಿಂದ ಲುಙ್. ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ಇಲ್ಲಿ ವೃಕೀಃ ಎಂಬುದು ಕರ್ತೃವಾಗುವಾಗ ಏಕವಚನವು ವ್ಯತ್ಯಯದಿಂದ ಬಂದಿದೆ.

**ವರ್ಕ್ತಂಮ್**—ವೃಜೀ ವರ್ಜನೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಕ್ಕೆ **ತಸ್‌ಥಸ್‌ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ವ್ಯತ್ಯಯದಿಂದ ಲಘೂಪಧಗುಣ. **ಚೋಃ ಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಜಕಾರಕ್ಕೆ ಕುತ್ವ ಬಂದಾಗ **ಖರಿ ಚ** (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವ. ತಿಙಂತನಿಘಾತಸ್ವರ ಬರುತ್ತದೆ.

**ಧಕ್ತಮ್**- ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ಛಾಂದಸವಾಗಿ ವರ್ಣವಿಕಾರ ಬಂದಿದೆ. ತಿಙಂತನಿಘಾತಸ್ವರ ಬರುತ್ತದೆ.

**ನಿಹಿತಃ**—ಪೂರ್ವೋಕ್ತವಾದ ಧಾತುವಿಗೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಉದಾತ್ತಸ್ವರ ಬರುತ್ತದೆ.

**ನಿಧಯಃ**—ನಿ ಎಂಬ ಉಪಸರ್ಗವು ಉಪಪದವಾಗಿರುವಾಗ **ಉಪಸರ್ಗೇ ಘೋಃ ಕಿಃ** (ಪಾ. ಸೂ. ೩-೩-೯೨) ಎಂಬುದರಿಂದ ಧಾಞ್ ಧಾತುವಿಗೆ ಕಿ ಪ್ರತ್ಯಯ. **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ಪ್ರಥಮಾ ಬಹುವಚನಾಂತ ರೂಪ. || ೪ ||



|| ಸಂಹಿತಾಪಾಠಃ ||

ಯುವಾಂ ಗೋತಮಃ ಪುರುಮೀಳ್ಹೋ ಅತ್ರಿರ್ದಸ್ರಾ ಹವತೇಽವಸೇ ಹವಿಷ್ಮಾನ್ ।
ದಿಶಂ ನ ದಿಷ್ಟಾಮೃಜೂಯೇವ ಯಂತಾ ಮೇ ಹವಂ ನಾಸತ್ಯೋಪ ಯಾತಂ ||

|| ಪದಪಾಠಃ ||

**ಯುವಾಂ । ಗೋತಮಃ । ಪುರುऽಮೀಳ್ಹಃ । ಅತ್ರಿಃ । ದಸ್ರಾ । ಹವತೇ । ಅವಸೇ । ಹವಿಷ್ಮಾನ್ ।**
**ದಿಶಂ । ನ । ದಿಷ್ಟಾಂ । ಋಜುಯಾऽಇವ । ಯಂತಾ । ಆ । ಮೇ । ಹವಂ । ನಾಸತ್ಯಾ । ಉಪ । ಯಾತಂ ||**

॥ ಸಾಯಣಭಾಷ್ಯಂ ॥

**ಹೇ ದಸ್ರಾ ದಸ್ರಾವಶ್ವಿನೌ ಯುವಾಂ ಗೋತಮಶ್ಚ ಪುರುಮೀಳ್ಹಶ್ಚಾತ್ರಿಶ್ಚ ಮಹರ್ಷಯಶ್ಚ ಏತೇಷ್ವೇಕೈಕೋ ಹವಿಷ್ಮಾನ್ ಸನ್ನವಸೇ ರಕ್ಷಣಾಯ ಯುಷ್ಮತ್ತರ್ಪಣಾಯ ವಾ ಹವತೇ । ಆಹ್ವಯತಿ । ಏವಮಹಮಪ್ಯಾಹ್ವಯಾಮಿ । ಫಲಸಾಧನಾಹ್ವಾನೇ ದೃಷ್ಟಾಂತಃ । ಯಂತೋಪಗಂತೋಪಗಂತುಕಾಮ ಋಜೂಯೇವ ॥ ದ್ವಿತೀಯಾಯಾ ಆಕಾರಃ ॥ ಋಜುಗಾಮಿನಂ ಮಾರ್ಗಜ್ಞಂ ದಿಷ್ಟಾಂ ದಿಶಂ ನ ಗಂತವ್ಯಾಮಭಿಮತಾಂ ದಿಶಂ ಪ್ರತಿ ಯಥಾ ತಥಾ ವಾಮಪಿ । ಯಥಾಧ್ವಗಾಮೀ ಸ್ವಗಂತವ್ಯಸ್ಯ ಶೀಘ್ರ-ಗಮನಾಯ ಮಾರ್ಗಜ್ಞಮೃಜುಗಾಮಿನಮಾಹ್ವಯತಿ ತದ್ವತ್ । ಯದ್ವಾ । ಋಜೂಯೇವ । ಇವಶಬ್ದ ಏವಾರ್ಥೇ । ಗಂತಾ ಋಜುನೈವ ಮಾರ್ಗೇಣೇಷ್ಟಾಂ ದಿಶಮಿವ ತಥಾ ಯುಷ್ಮತ್ಪ್ರೀಣನೇನ ಮಾರ್ಗೇಣ ಸ್ವಾಭಿಮತಂ ಫಲಂ ಪ್ರಾಪ್ನೋತಿ । ಹೇ ನಾಸತ್ಯಾವಶ್ವಿನೌ ಮೇ ಮಮ ಹವಮಾಹ್ವಾನಮಾಲಕ್ಷ್ಯೋಪ ಯಾತಂ ಉಪಗಚ್ಛತಂ ॥**

॥ ಪ್ರತಿಪದಾರ್ಥ ॥

**(ಹೇ) ದಸ್ರಾ**—ಎಲೈ ದರ್ಶನೀಯರಾದ ಅಶ್ವಿನೀದೇವತೆಗಳೇ । **ಯುವಾಂ**—ನಿಮ್ಮಿಬ್ಬರನ್ನು । **ಗೋ-ತಮಃ**—ಗೋತಮನು । **ಪುರುಮೀಳ್ಹಃ**-ಪುರುಮೀಳ್ಹನು ಮತ್ತು । **ಅತ್ರಿಃ (ಚ)**-ಅತ್ರಿಯೆಂಬ ಮೂವರು ಮಹರ್ಷಿ ಗಳು (ಒಬ್ಬೊಬ್ಬರೂ) । **ಹವಿಷ್ಮಾನ್**—ಹವಿರಾದಿವಿಶಿಷ್ಟರಾಗಿ । **ಅವಸೇ**—ತಮ್ಮ ರಕ್ಷಣೆಗೋಸ್ಕರ (ನಿಮ್ಮ ತೃಪ್ತಿ ಗೋಸ್ಕರ)। **ಹವತೇ**—ಆಹ್ವಾನಿಸುತ್ತಾರೆ (ಅದರಂತೆಯೇ) । **ಯಂತಾ**—ದಾರಿಹೋಕನು । **ಋಜೂಯಾ ಇವ**—ಋಜುಗಾಮಿಯನ್ನು (ಮಾರ್ಗಜ್ಞನನ್ನು ಕೇಳಿ ತಿಳಿದುಕೊಂಡು) । **ದಿಷ್ಟಾಂ ದಿಶಂ ನ**— ಅಭಿಮತವಾದ ಮಾರ್ಗ ವನ್ನು (ಅನುಸರಿಸುವಂತೆ)। [ಅಥವಾ **ಋಜೂಯಾ ಇವ**—ನೇರವಾದ (ಋಜುವಾದ) ಮಾರ್ಗದಿಂದಲೇ । **ದಿಷ್ಟಾಂ ದಿಶಂ ನ**—ಅಭಿಮತವಾದ ದಿಕ್ಕನ್ನು (ಸೇರುವಂತೆ)!] (ನಾನೂ ನಿಮ್ಮನ್ನು ಪೂಜಿಸಿ ಅಭಿಮತವಾದುದುದನ್ನು ಪಡೆಯು ತ್ತೇನೆ) । **ಹೇ ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ಮೇ**—ನನ್ನ । **ಹವಂ**—ಆಹ್ವಾನವನ್ನು (ಲಾಲಿಸಿ)। **ಉಪ ಯಾತಂ**—(ನಮ್ಮ ಯಾಗಕ್ಕೆ) ಆಗಮಿಸಿ.

॥ ಭಾವಾರ್ಥ ॥

ಎಲೈ ದಸ್ರರೇ, ಹಿಂದೆ ಗೋತಮ, ಪುರುಮೀಳ್ಹ, ಅತ್ರಿ ಎಂಬ ಮೂವರು ಮಹರ್ಷಿಗಳಲ್ಲಿ ಒಬ್ಬೊಬ್ಬರೂ ಹವಿರಾದಿ ವಿಶಿಷ್ಟರಾಗಿ ನಿಮ್ಮನ್ನು ತೃಪ್ತಿಪಡಿಸುವುದಕ್ಕೋಸ್ಕರ ಆಹ್ವಾನಿಸಿದರು. ನಾನೂ ಅಭಿಮತಪ್ರಾಪ್ತಿಗೋಸ್ಕರ (ದಾರಿಹೋಕನು ಸರಿಯಾದ ದಾರಿಯನ್ನು ಅನುಸರಿಸಿ ಉದ್ದಿಷ್ಟ ಪ್ರದೇಶವನ್ನು ಸೇರುವಂತೆ) ದಾರಿಹೋಕನು ಉದ್ದಿಷ್ಟ ಪ್ರದೇಶಕ್ಕೆ ದಾರಿಯನ್ನು ತಿಳಿದವರಿಂದ ಕೇಳಿ ತಿಳಿದುಕೊಳ್ಳುವಂತೆ, ಆ ಮಹರ್ಷಿಗಳಂತೆ ನಿಮ್ಮನ್ನೇ ಸ್ತುತಿಸುತ್ತೇನೆ; ನೀವೂ ನನ್ನ ಆಹ್ವಾನವನ್ನು ಮನ್ನಿಸಿ ನಮ್ಮ ಯಾಗ ಶಾಲೆಗೆ ಆಗಮಿಸಿ.

## English Translation.

Gotama, Purumilha, Atri (each) offering oblations, invokes you for his protection; like unto a way-farer, who (makes for his intended direction) by a straight (path), do you Dasras, come (direct) to my invocation.

॥ ವಿಶೇಷವಿಷಯಗಳು ॥

ಪ್ರಕೃತವಾದ ಋಕ್ಕಿನಲ್ಲಿ **ಪುರುಮೀಳ್ಹ, ಅತ್ರಿ** ಮತ್ತು **ಗೋತಮ** ಈ ಮೂವರೂ ಅಶ್ವಿನೀದೇವತೆಗಳ ರಕ್ಷಣೆಯನ್ನಾಶ್ರಯಿಸಿ ಅವರಿಂದ ರಕ್ಷಣೆಯನ್ನು ಪಡೆದರೆಂದು ತಿಳಿಸಿದೆ.

ಇವರಲ್ಲಿ ಪುರುಮೀಳ್ಹನೆಂಬುವನು ಪ್ರಾಚೀನನಾದ ಋಷಿಯೆಂದು ಕೆಲವು ಕಡೆಗಳಲ್ಲಿಯೂ, ರಾಜನೆಂದು ಕೆಲವು ಕಡೆಗಳಲ್ಲಿಯೂ ಪ್ರಸಿದ್ಧನಾಗಿದ್ದಾನೆ. ಇವನ ಕಥೆಯನ್ನು ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದೆ. ಅಲ್ಲಿಯ ಕಥೆಯು ಮುಖ್ಯವಾಗಿ ಶ್ಯಾವಾಶ್ವನ ವಿಷಯದ್ದಾಗಿದ್ದರೂ ಸಹ, ಶ್ಯಾವಾಶ್ವನಿಗೂ ಪುರುಮೀಳ್ಹನಿಗೂ ಇರುವ ಸಂಬಂಧವನ್ನು ತಿಳಿಸುವುದರಿಂದ ಬೃಹದ್ದೇವತಾಕಾರರು ಹೇಳಿರುವ ಕಥೆಯನ್ನು ಇಲ್ಲಿ ತಿಳಿಸಲಾಗಿದೆ.

**ರಾಜರ್ಷಿರಭವದ್ದಾರ್ಭ್ಯೋ ರಥವೀತಿರಿತಿ ಶ್ರುತಃ । ಸ ಯಕ್ಷ್ಯಮಾಣೋ ರಾಜಾತ್ರಿಮಭಿಗಮ್ಯ ಪ್ರಸಾದ್ಯ ಚ ॥ ಆತ್ಮಾನಂ ಕಾರ್ಯಮರ್ಥಂ ಚ ಖ್ಯಾಪಯನ್ ಪ್ರಾಂಜಲಿಃ ಸ್ಥಿತಃ । ಅವೃಣೀತರ್ಷಿಮಾತ್ರೇಯಮಾರ್ತ್ವಿಜ್ಯಾಯಾರ್ಚನಾನಸಂ ॥ ಸ ಸಪುತ್ರೋಽಭ್ಯಗಚ್ಛತ್ತಂ ರಾಜಾನಂ ಯಜ್ಞಸಿದ್ಧಯೇ । ಶ್ಯಾವಾಶ್ವಶ್ಚಾತ್ರಿಪುತ್ರಸ್ಯ ಪುತ್ರಃ ಖಲ್ವರ್ಚನಾನಸಃ ॥ ಸಾಂಗೋಪಾಂಗಾನ್ ಸರ್ವವೇದಾನ್ ಯಃ ಪಿತ್ರಾಧ್ಯಾಪಿತೋ ಮುದಾ । ಆರ್ಚನಾನಾಃ ಸಪುತ್ರೋಽಥ ಗತ್ವಾ ನೃಪಮಯಾಜಯತ್ ॥ ಯಜ್ಞೇ ಚ ವಿತತೇಽಪಶ್ಯದ್ರಾಜಪುತ್ರೀಂ ಯಶಸ್ವಿನೀಂ । ಸ್ನುಷಾ ಮೇ ರಾಜಪುತ್ರೀ ಸ್ಯಾದಿತಿ ತಸ್ಯ ಮನೋಽಭವತ್ ॥ ಶ್ಯಾವಾಶ್ವಸ್ಯ ಚ ತಸ್ಯಾಂ ವೈ ಸಕ್ತಮಾಸೀತ್ತದಾ ಮನಃ । ಸಂಯುಜ್ಯಸ್ವ ಮಯಾ ರಾಜನ್ನಿತಿ ಯಾಜ್ಯಂ ಚ ಸೋಽಬ್ರವೀತ್ ॥ ಕಿಂ ತೇ ಮತಮಹಂ ಕನ್ಯಾಂ ಶ್ಯಾವಾಶ್ವಾಯ ದದಾಮಿ ಹಿ । ಅತ್ರಿಪುತ್ರೋಽದುರ್ಬಲೋ ಹಿ ಜಾಮಾತಾ ತ್ವಾವಯೋರಿತಿ ॥ ರಾಜಾನಮಬ್ರವೀತ್ಸಾಪಿ ನೃಪರ್ಷಿಕುಲಜಾ ಹ್ಯಹಂ । ನಾನೃಷಿರ್ನೌ ತು ಜಾಮಾತಾ ನೈಷ ಮಂತ್ರಾನ್ ಹಿ ದೃಷ್ಟವಾನ್ ॥ ಋಷಯೇ ದೀಯತಾಂ ಕನ್ಯಾ ವೇದಸ್ಯಾಂಬಾ ಭವೇತ್ತಥಾ । ಋಷಿರ್ಮಂತ್ರದೃಶಂ ವೇದಪಿತರಂ ಮನ್ಯತೇ ಯತಃ ॥ ಪ್ರತ್ಯಾಚಷ್ಟೇ ಸ ತಂ ರಾಜಾ ಸಹ ಸಂಮಂತ್ರ್ಯ ಭಾರ್ಯಯಾ । ಅನೃಷಿರ್ನೈವ ಜಾಮಾತಾ ಕಶ್ಚಿದ್ಭವಿತುಮರ್ಹತಿ ॥ ಪ್ರತ್ಯಾಖ್ಯಾತ ಋಷಿಸ್ತೇನ ವೃತ್ತೇ ಯಜ್ಞೇ ನ್ಯವರ್ತತ । ಶ್ಯಾವಾಶ್ವಸ್ಯ ತು ಕನ್ಯಾಯಾ ಮನೋ ನೈವ ನ್ಯವರ್ತತ ॥ ತತಸ್ತೌ ತು ನಿವರ್ತೇತಾಂ ಉಭಾವೇವಾಭಿಜಗ್ಮತುಃ । ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ॥ ತರಂತ ಪುರುಮೀಳ್ಹೌ ತು ರಾಜಾನೌ ವೈದದಶ್ವ್ಯೃಷೀ । ತಾಭ್ಯಾಂ ತೌ ಚಕ್ರತುಃ ಪೂಜಾಂ ಋಷಿಭ್ಯಾಂ ನೃಪತೀ ಸ್ವಯಂ ॥ ಋಷಿಪುತ್ರಂ ಮಹಿಷ್ಯಾಶ್ಚ ದರ್ಶಯಾಮಾಸ ತಂ ನೃಪಃ । ಅಜಾವಿಕಂ ಗವಾಶ್ವಂ ಚ ಶ್ಯಾವಾಶ್ವಾಯ ಶಶೀಯಸೀ ॥ ಅತ್ರಿಂ ಯಜ್ಯಾರ್ಚಿತೌ ಗತ್ವಾ ಪಿತಾಪುತ್ರೌ ಸ್ವಮಾಶ್ರಮಂ । ಅಭ್ಯವಾದಯತಾಮತ್ರಿಂ ಮಹರ್ಷಿಂ ದೀಪ್ತತೇಜಸಂ ॥ ಶ್ಯಾವಾಶ್ವಸ್ಯ ಮನಸ್ಯಾಸೀನ್ಮಂತ್ರಸ್ಯಾದರ್ಶನಾದಹಂ । ನ ಲಬ್ಧವಾನಹಂ ಕನ್ಯಾಂ ಹಂತ ಸರ್ವಾಂಗಶೋಭನಾಂ ॥ ಅಪ್ಯಹಂ ಮಂತ್ರದರ್ಶೀ ಸ್ಯಾಂ ಭವೇದ್ಧರ್ಷೋ ಮಹಾನ್ಮಮ । ಇತ್ಯರಣ್ಯೇ ಚಿಂತಯತಃ ಪ್ರಾದುರಾಸೀನ್ಮರುದ್ಗಣಃ ॥ ದದರ್ಶ ಸಂಸ್ಥಿತಾನ್ಪಾರ್ಶ್ವೇ ತುಲ್ಯರೂಪಾನಿವಾತ್ಮನಃ । ಸಮಾನವಯಸಶ್ಚೈವ ಮರುತೋ ರೂಕ್ಮವಕ್ಷಸಃ ॥ ತಾಂಸ್ತುಲ್ಯವಯಸೋ ದೃಷ್ಟ್ವಾ ದೇವಾನ್ಪುರುಷವಿಗ್ರಹಾನ್ । ಶ್ಯಾವಾಶ್ವೋ**

**ವಿಸ್ಮಿತೋಽಪೃಚ್ಛತ್ಕೇಷ್ಠೇತಿ ಮರುತಸ್ತದಾ ॥ ತತಸ್ತು ಮರುತೋ ದೇವಾನ್ ರುದ್ರಸೂನೂನ-ಬುಧ್ಯತ । ಯ ಈಂ ವಹಂತ ಇತ್ಯಾಭಿರ್ಬುದ್ಧ್ವಾ ತುಷ್ಟಾವ ತಾಂಸ್ತಥಾ ॥ ಅತಿಕ್ರಮಂ ಹಿ ತಂ ಮೇನೇ ಋಷಿರ್ವಿಪುಲಮಾತ್ಮನಃ..........॥ ರಥವೀತೇರ್ದುಹಿತರಂ ಆಗಚ್ಛನ್ಮನಸಾ ತದಾ । ಸ ಸದ್ಮ ಋಷಿರಾತ್ಮಾನಂ ಪ್ರವಕ್ಷ್ಯನ್ ರಥವೀತಯೇ ॥ .......... ಆದಾಯ ಕನ್ಯಾಂ ತಾಂ ದಾರ್ಭ್ಯ ಉಪೆಯೇಯಾರ್ಚನಾನಸಂ । ಪಾದೌ ತಸ್ಯೋಪಸಂಗೃಹ್ಯ ಸ್ಥಿತ್ವಾ ಪ್ರಹ್ವಃ ಕೃತಾಂ-ಜಲಿಃ ॥ ರಥವೀತಿರಹಂ ದಾರ್ಭ್ಯ ಇತಿ ನಾಮ ಶಶಂಸ ಚ । ಮಯಾ ಸಂಗತಮಿಚ್ಛಂತಂ ತ್ವಾಂ ಪ್ರತ್ಯಾಚಕ್ಷಿ ಯತ್ಪುರಾ ॥ ತತ್ ಕ್ಷಮಸ್ವ ನಮಸ್ತೇಽಸ್ತು ಮಾ ಚ ಮೇ ಭಗವನ್ಕ್ರುಧಃ ಋಷೇಃ ಪುತ್ರಃ ಸ್ವಯಮೃಷಿಃ ಪಿತಾಸಿ ಭಗವನ್ನೃಷೇಃ ॥ ಹಂತ ಪ್ರತಿಗೃಹಾಣೇಮಾಂ ಸ್ನುಷಾಮಿತ್ಯೇವಮಬ್ರವೀತ್ । ಪಾದಾರ್ಘ್ಯಮಧುಪರ್ಕೈಶ್ಚ ಪೂಜಯಿತ್ವಾ ಸ್ವಯಂ ನೃಪಃ ॥ ಶುಕ್ಲಮಶ್ವಶತಂ ದತ್ವಾ ಅನುಜಜ್ಞೇ ಗೃಹಾನ್ಪ್ರತಿ । ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ॥ ಷಡ್ಭಿಃ ಸನದಿತಿ ಸ್ತುತ್ವಾ ಜಗಾಮರ್ಷಿರಪಿ ಕ್ಷಯಂ ॥**

(ಬೃ. ದೇ. ೫-೫೦ ರಿಂದ ೮೦)

ರಥವೀತಿದಾರ್ಭ್ಯನೆಂಬ ರಾಜರ್ಷಿಯು ಯಾಗವನ್ನು ಮಾಡಲುದ್ದೇಶಿಸಿ, ಅತ್ರಿಋಷಿಯಲ್ಲಿಗೆ ಹೋಗಿ ಆತನನ್ನು ಪೂಜಿಸಿ, ಅವನ ಪುತ್ರನಾದ **ಅರ್ಚನಾನಸನನ್ನು** ತನ್ನ ಯಜ್ಞಕ್ಕೆ ಪೌರೋಹಿತ್ಯವನ್ನು ಸ್ವೀಕರಿಸಿ, ತನಗೆ ಯಜ್ಞಕಾರ್ಯದಲ್ಲಿ ಸಹಾಯಮಾಡಬೇಕೆಂದು ಪ್ರಾರ್ಥಿಸಿದನು. ಅವನು ಅದಕ್ಕೆ ಒಪ್ಪಿಕೊಂಡು, ತನ್ನ ಪುತ್ರನಾದ ಶ್ಯಾವಾಶ್ವನೊಡನೆ ದೊರೆಯ ಗೃಹಕ್ಕೆ ಯಜ್ಞಕಾರ್ಯಕ್ಕಾಗಿ ಹೋದನು; ಮತ್ತು ಯಜ್ಞವೂ ನೆರವೇರಿತು. ಯಾಗ ಮಾಡತಕ್ಕ ಕಾಲದಲ್ಲಿ ಅರ್ಚನಾನಸನು ದೊರೆಯ ಮಗಳನ್ನು ನೋಡಿ ಆಕರ್ಷಿತನಾಗಿ, ಅವಳನ್ನು ಶ್ಯಾವಾಶ್ವನಿಗೆ ವಿವಾಹಮಾಡಿಕೊಳ್ಳಬೇಕೆಂದಾಶಿಸಿದನು. ಶ್ಯಾವಾಶ್ವನೂ ಸಹ ಅವಳಲ್ಲಿ ಮೋಹಗೊಂಡನು. ಆಗ ತಂದೆಮಕ್ಕಳಿಬ್ಬರೂ ರಾಜನಿಗೆ ತಮ್ಮ ಆಸೆಯನ್ನು ತಿಳಿಸಲು, ಅವನೂ ಸಹ ಆ ಸಂಬಂಧಕ್ಕೆ ಒಪ್ಪಿ, ತನ್ನ ಪತ್ನಿಯನ್ನು ಕೇಳಿ ಅನಂತರ ಉತ್ತರವನ್ನು ಕೊಡುವೆನೆಂದು ಹೇಳಿ ಅವಳ ಅನುಮತಿಯನ್ನು ಕೇಳಲು ಅವನ ಪತ್ನಿಯು ಅದಕ್ಕೊಪ್ಪಲಿಲ್ಲ. ಶ್ಯಾವಾಶ್ವನು ಋಷಿಯಲ್ಲವೆಂದೂ, ಋಷಿ ಸಂತತಿಯಲ್ಲಿ ಹುಟ್ಟಿದ ತಮ್ಮ ಪುತ್ರಿಯನ್ನು ಅನೃಷಿಗೆ ಕೊಡಲು ತನ್ನ ಸಮ್ಮತಿಯಿಲ್ಲವೆಂದೂ ಅವಳು ತಿಳಿಸಿಬಿಟ್ಟಳು. ಅದೇ ರೀತಿಯಲ್ಲಿ ದೊರೆಯೂ ಸಹ ತಂದೆಮಕ್ಕಳಿಬ್ಬರಿಗೂ ಉತ್ತರವನ್ನು ಕೊಟ್ಟನಂತರ ಅವರು ತಮ್ಮ ಊರಿಗೆ ಹಿಂತಿರುಗಿದರು. ಆದರೆ, ಶ್ಯಾವಾಶ್ವನು ಮಾತ್ರ ರಾಜಕನ್ಯೆಯಲ್ಲಿಯೇ ನೆಟ್ಟಮನಸ್ಸುಳ್ಳವನಾದನು. ಹಿಂತಿರುಗುವಾಗ ದಾರಿಯಲ್ಲಿ **ಶಶೀಯಸನನ್ನೂ, ತರಂತನನ್ನೂ** ಮತ್ತು ರಾಜನಾದ **ಪುರುಮೀಳ್ಹನನ್ನೂ** ಸಂಧಿಸಿದನು. **ತರಂತ** ಮತ್ತು **ಪುರುಮೀಳ್ಹ** ಇವರಿಬ್ಬರೂ ಸಹ **ವಿದದಶ್ವನೆಂಬ** ರಾಜನ ಪುತ್ರರೂ ಸ್ವಯಂ ಋಷಿಗಳೂ ಆಗಿದ್ದರು. ಇವರಿಬ್ಬರೂ ಸಹ ಆಗಂತುಕರಾದ ತಂದೆಮಕ್ಕಳಿಬ್ಬರಿಗೂ ನಮಸ್ಕರಿಸಿ ಅವರನ್ನು ಸತ್ಕರಿಸಿ ಪೂಜಿಸಿದರು. ಆಗ ಅಂತಃಪುರದ ಸ್ತ್ರೀಯರೂ ಸಹ ಇವರನ್ನು ಗವಾಶ್ವಾದಿದಾನಗಳಿಂದ ಸತ್ಕರಿಸಿದರು. ಶ್ಯಾವಾಶ್ವನು ಮಾತ್ರ ತನಗೆ ಸುಂದರಸ್ತ್ರೀಯು ಲಭಿಸಲಿಲ್ಲವಲ್ಲ ಎಂದು ಕೊರಗುತ್ತಾ ಕಾಡಿನಲ್ಲಿ ಸಂಚರಿಸುತಿದ್ದಾಗ ಮರುತ್ತುಗಳ ಸಂಘವನ್ನು ಸಂಧಿಸಿದನು. ಆಗ ಅವರು ರುದ್ರಪುತ್ರರೂ, ದೈವಾಂಶರೂ ಆದ ಮರುತ್ತುಗಳೆಂದು ತಿಳಿದು ಅವರನ್ನು ಸ್ತುತಿಸಿ **ಕೇ ಷ್ಠಾ ನರಃ** (ಋ. ಸಂ ೫-೬-೧) ಎಂಬ ಸೂಕ್ತದ ದ್ರಷ್ಟೃವಾದನು. ಇದನ್ನು ತಿಳಿದು **ದರ್ಭನ** ಮಗನಾದ ರಥವೀತಿಯು ತನ್ನ ಪುತ್ರಿಯನ್ನು ಕರೆದುಕೊಂಡು ಬಂದು, ತಾನು ಹಿಂದೆ ತನ್ನ ಮಗಳನ್ನು

ಕೊಡಲು ನಿರಾಕರಿಸಿದುದಕ್ಕೆ ಕ್ಷಮಿಸಬೇಕೆಂದೂ, ಮತ್ತು ಈಗ ಶ್ಯಾವಾಶ್ವನು ಋಷಿಯಾದುದರಿಂದಲೂ, ಮತ್ತು ತನ್ನ ಮಗಳನ್ನು ಪರಿಗ್ರಹಿಸಲು ಅರ್ಹನಾದುದರಿಂದಲೂ ಅವಳನ್ನು ಸ್ವೀಕರಿಸಬೇಕೆಂದೂ ಪ್ರಾರ್ಥಿಸಿದನು. ಶ್ಯಾವಾಶ್ವನೂ ಅವನ ತಂದೆಯೂ ಇದಕ್ಕೆ ಒಪ್ಪಲು, ಆಗ ಅರ್ಘ್ಯಪಾದ್ಯಾದಿಗಳ ಪೂರ್ವಕವಾಗಿ ಕನ್ಯಾದಾನವನ್ನು ಮಾಡಿದನು. ಆಗ ಶ್ಯಾವಾಶ್ವನು **ಪುರುಮೀಳ್ಹಾದಿಗಳು** ತನಗೆ ಮಾಡಿದ ಸಹಾಯಕ್ಕಾಗಿ ಅವರನ್ನು ವಂದಿಸಿ, ಅವರನ್ನು ಸ್ತುತಿಸ ತಕ್ಕ ಆರು ಋಕ್ಕುಗಳನ್ನು ರಚಿಸಿದನು. ಅವುಗಳಲ್ಲಿ,

**ಉತ ಮೇಽರಪದ್ಯುವತಿರ್ಮಮಂದುಷೀ ಪ್ರತಿ ಶ್ಯಾವಾಯ ವರ್ತನಿಂ ।**
**ವಿ ರೋಹಿತಾ ಪುರುಮೀಳ್ಹಾಯ ಯೇಮತುರ್ವಿಪ್ರಾಯ ದೀರ್ಘಯಶಸೇ ॥**

(ಋ. ಸಂ. ೫-೬೧-೯)

ಎಂಬ ಮಂತ್ರವು ಪುರುಮೀಳ್ಹನನ್ನು ಸ್ತುತಿಸತಕ್ಕದ್ದಾಗಿದೆ. ಪ್ರಕೃತವಾದ ಋಕ್ಕಿನಲ್ಲಿ (೧-೧೮೩-೫) ಪುರುಮೀಳ್ಹನು ಅಶ್ವಿನೀದೇವತೆಗಳನ್ನು ಸ್ತುತಿಸಿ ಅವರ ರಕ್ಷಣೆಯನ್ನು ಪಡೆದನೆಂದು ತಿಳಿಸಿದೆ. ಇದೇ ಕಥೆಯನ್ನು ಸಾಯಣರು ವ್ಯತ್ಯಸ್ತಮಾಡಿ ಈ ರೀತಿ ತಿಳಿಸಿದ್ದಾರೆ.

**ಅತ್ರಾಶ್ಚರ್ಯಂ ಪುರಾವೃತ್ತಮಾಹುರಾಗಮಪಾರಗಾಃ । ಅರ್ಚನಾನಾಃ ಪುರಾತ್ರೇಯೋ ದಾರ್ಭ್ಯೇಣ ರಥವೀತಿನಾ ॥ ಆರ್ತ್ವಿಜ್ಯಾಯ ವೃತೋ ಯಜ್ಞೇ ವಿತತೇ ಹೌತ್ರ ಆಸ್ಥಿತಃ । ರಥವೀತಿಸುತಾಂ ಕನ್ಯಾಂ ದದರ್ಶ ಪಿತುರಂತಿಕೇ ॥ ಯಯಾಚೇ ಸ್ವಕುಮಾರಾಯ ಶ್ಯಾವಾಶ್ವಾಯ ಚ ತಾಂ ಸುತಾಂ.। ಸ ಪ್ರದಾನಮನಾ ಭಾರ್ಯಾಮಪೃಚ್ಛತ್ಕಿಂ ಪ್ರಯಚ್ಛಸಿ ॥ ಇತಿ ಪೃಷ್ಟಾ ಪುನಃ ಪ್ರಾಹ ಕಥಮಸ್ಮೈ ಪ್ರದಾಸ್ಯಸಿ । ಇತಃ ಪೂರ್ವಂ ಸುತಾ ದತ್ತಾ ನಾಸೀದನೃಷಯೇ ಕ್ವಚಿತ್ ॥ ತತ್ತಥೈವೇತಿ ನಿಶ್ಚಿತ್ಯ ಪ್ರತ್ಯಾಚಷ್ಟಾರ್ಚನಾನಸಂ । ಶ್ಯಾವಾಶ್ವಃ ಸಂಸ್ಥಿತೇ ಯಜ್ಞೇ ತೇನ ರಾಜ್ಞಾ ನಿರಾಕೃತಃ ॥ ತತ್ಪ್ರತ್ಯಾಶಾನ್ವಿತೋ ವಿಪ್ರಸ್ತಪಸ್ತೇಪೇ ಸುದಾರುಣಂ । ಬ್ರಹ್ಮಚರ್ಯರತಃ ಶಾಂತೋ ಭಿಕ್ಷಾರ್ಥಂ ಪರ್ಯಟನ್ ದ್ವಿಜಃ ॥ ತರಂತಮಹಿಷೀಂ ಸಾಧ್ವೀಂ ಬಿಭಿಕ್ಷೇಽಸೌ ಶಶೀಯಸೀಂ । ಸಾ ಸಂಪ್ರಾಪ್ಯಾಂತಿಕೇ ಪತ್ಯುಃ ಪ್ರೋವಾಚಾಗತವಾನ್ನೃಷಿಃ ॥ ಇತ್ಯುಕ್ತೋ ನೃಪತಿರ್ಭಾರ್ಯಾಂ ಪ್ರತ್ಯಾಹೈನಂ ಪ್ರಪೂಜಯ । ಸಾನುಜ್ಞಾತಾ ಗವಾಂ ಯೂಥಂ ಪ್ರಾದಾದಾಭರಣಾನಿ ಚ ॥ ತರಂತೋಽಪಿ ಪುನಸ್ತಸ್ಮೈ ಪ್ರಾದಾದ್ಧನಮಪೇಕ್ಷಿತಂ । ದತ್ವಾ ಚ ಪುರುಮೀಳ್ಹಸ್ಯ ಸ್ವಾನುಜಸ್ಯಾಂತಿಕಂ ಪ್ರತಿ ॥ ಪ್ರೇರಯಾಮಾಸ ತಮೃಷಿಂ ಸೋಽಪಿ ತ್ವಾಂ ಮಾನಯಿಷ್ಯತಿ । ತಥೇತಿ ರಾಜ್ಞೋ ವಚನಂ ನಿಶಮ್ಯ ತದ್ಭಾರ್ಯಯಾ ದರ್ಶಿತಸರ್ವಮಾರ್ಗಃ ॥ ಗಚ್ಛನ್ ಶನೈರರ್ಧಪಥೇ ಮರುದ್ಗಣಾನ್ ಸಮಾನರೂಪಾನ್ ಸ್ವದಿದೃಕ್ಷಯಾಗತಾನ್ । ವಿಲೋಕ್ಯ ವಿಪ್ರಃ ಸಭಯಃ ಪ್ರಣಮ್ಯ ಕೃತಾಂಜಲಿಃ ಕಂಟಕಿತಾಂಗಸಂಘಃ ॥ ತುಷ್ಟಾವ ಹೃಷ್ಟಾನ್ ಮರುತೋ ವಿಶಿಷ್ಟೈರರ್ಥೈರ್ವಚೋಭಿಃ ಪರಿತುಷ್ಟಚಿತ್ತಃ । ಸಂಪ್ರಾಪ್ಯ ಸರ್ವಂ ಸ್ವಮನೀಷಿತಂ ತದಾ ಮರುದ್ಗಣೇಭ್ಯೋ ಮುದಿತಾತ್ಮವದ್ಭ್ಯಃ ॥ ತದಾಭವದೃಷಿಃ ಸೂಕ್ತದ್ರಷ್ಟಾ ಶ್ಯಾವಾಶ್ವನಾಮಕಃ । ಪಶ್ಚಾತ್ಪುನರ್ಗೃಹಂ ಗತ್ವಾ ಭೂಯೋ ಲಬ್ಧ್ವಾ ಗವಾಂ ಶತಂ ॥ ದಾರ್ಭ್ಯೋ ಮಂತ್ರದೃಶೇ ರಾಜ್ಞ್ಯೈ ಚೋದಿತಃ**

**ಸ್ವಸುತಾಂ ದದೌ । ಪುರುಮೀಳ್ಹಸ್ತರಂತಶ್ಚ ತದ್ಭಾರ್ಯೋ ಚ ಶಶೀಯಸೀ ॥ ದಾಭ್ಯೋರ್ಗೇ ಯೋ ರಥವೀತ್ಯಾಖ್ಯಃ ಸಪ್ತ ಯೇ ಮರುತಾಂ ಗಣಾಃ । ತೇ ತಸ್ಮೈ ಯದ್ದದುಸ್ತುಷ್ಟಾಸ್ತ್ವೇಷ್ವೇತ್ಯತ್ರ ವರ್ಣ್ಯತೇ ॥**

(೫ನೇ ಮಂಡಲದಲ್ಲಿ ೬೧ನೇ ಸೂಕ್ತದ ಭಾಷ್ಯದ ಪೀಠಿಕೆ.)

ಬೃಹದ್ದೇವತೆಯಲ್ಲಿ ಹೇಳಿರುವಂತೆಯೇ ಇಲ್ಲಿಯೂ ಕಥಾವಿವರಣೆಯಿದ್ದರೂ ಸಹ ಶ್ಯಾವಾಶ್ವನೂ **ತರಂತನ** ಪತ್ನಿಯ ಹತ್ತಿರ ಭಿಕ್ಷಾಟನೆಗೆ ಹೋದನೆಂಬುದು ವಿಶೇಷವಿಷಯ.

Max Muller ಎಂಬ ಪಂಡಿತನು ತನ್ನಿಂದ ಸಂಪಾದಿತವಾದ ಋಗ್ವೇದದ ೫ ನೇ ಸಂಪುಟದಲ್ಲಿ (Vol. V. p. XXXIII)ತಾಂಡ್ಯಬ್ರಾಹ್ಮಣದಲ್ಲಿ ಉಕ್ತವಾಗಿರುವ ಪುರುಮೀಳ್ಹನ ಕಥೆಯನ್ನು ಉದಾಹರಿಸಿದ್ದಾನೆ. ( ಋ. ಸಂ. ೫-೮-೩ ) ಉದಾಹೃತವಾದ **ಈ** ಕಥೆಯಲ್ಲಿ **ಧ್ವಸ್ರ** ಮತ್ತು **ಪುರುಷಂತಿ** ಎಂಬಿಬ್ಬರೂ ಸಹ **ವಿದದಶ್ವನ** ಮಕ್ಕಳಾದ **ತರಂತ** ಮತ್ತು **ಪುರುಮೀಳ್ಹ** ಎಂಬಿಬ್ಬರಿಗೆ ಪಾರಿತೋಷಿಕವನ್ನು ಕೊಡಲಿಚ್ಛಿಸುವರು. ಆಗ **ಈ** ಸಹೋದರರಿಬ್ಬರೂ ಸಹ ಅದನ್ನು ತೆಗೆದುಕೊಳ್ಳಲು ತಮಗೆ ಸದ್ಯಃ ಅರ್ಹತೆಯಿಲ್ಲವೆಂದೂ, ಆ ಅರ್ಹತೆಯನ್ನು ತಾವು ಸಂಪಾದಿಸಿಕೊಳ್ಳಬೇಕೆಂದೂ ಚಿಂತಿಸಿ **ಧ್ವಸ್ರನನ್ನೂ ಪುರುಷಂತಿಯನ್ನೂ** ಸ್ತುತಿಸುವ ಒಂದು ಸೂಕ್ತವನ್ನು ನಿರ್ಮಿಸುತ್ತಾರೆ. ಅನಂತರ ಅವರಿಂದ ದತ್ತವಾದ ಬಹುಮಾನಕ್ಕೆ ತಾವು ಅರ್ಹರೆಂದು ತಿಳಿದು ಅದನ್ನು ಸ್ವೀಕರಿಸುತ್ತಾರೆ. ಮೇಲೆ ಉದಾಹೃತವಾದ ಬೃಹದ್ದೇವತೋಕ್ತವಾದ ಕಥೆಯಲ್ಲಿ ಪುರುಮೀಳ್ಹನು ಬಹುಮಾನಕ್ಕೆ ದಾತನಾಗಿದ್ದಾನೆ, ಆದುದರಿಂದ ಸಾಯಣರು ತಮ್ಮ ಋ. ಸಂ ೯-೫೮-೩ ನೇ ಋಕ್ಕಿನ ವಿವರಣೆಯಲ್ಲಿ ತಿಳಿಸಿರುವ ಪುರುಮೀಳ್ಹನು ವೈದದಶ್ವಿಯಲ್ಲವೆಂದು ತಿಳಿಸುತ್ತಾ Max Mullerನು ಈ ರೀತಿಳಿಸಿದ್ದಾನೆ.

> **ಪುರುಮೀಳ್ಹ** is here (V· 61. 9.) clearly the man from whom benifits are expected, and therefore could not be the same as **ಪುರುಮೀಳ್ಹ ವೈದದಶ್ವಿ,** mentioned by the cnmmentator, who accepted gifts from **ಧ್ವಸ್ರ.** and **ಪುರುಷಂತಿ.** Nor can **ತರಂತ ವೈದಶ್ವಿ** in the next verse be taken for a recipient, but only for a giver and therefore, most likely, a a prince. The whole story, however, is by no means clear, and I doubt whether the commentator draw his information from any source except his own brain.
>
> [Sacred Books of the East Vol. 32. p. 361].

" **ವಿದದಶ್ವನ** ಮಕ್ಕಳಿಂದ **ಪುರುಮೀಳ್ಹ** ಮತ್ತು **ತರಂತರು** ದಾನವನ್ನು ಸ್ವೀಕರಿಸತಕ್ಕವರು. ಪ್ರಕೃತವಾದ ಋಕ್ಕುಗಳಲ್ಲಿ (ಋ.ಸಂ. ೫-೬೧-೯, ೧೦) ನಿರ್ದಿಷ್ಟವಾಗಿರುವ **ಪುರುಮೀಳ್ಹ** ಮತ್ತು **ತರಂತರು** ದಾನವನ್ನು ಕೊಡತಕ್ಕವರು. ಆದುದರಿಂದ ಅವರೇ ಬೇರೆ ಮತ್ತು ಇವರೇ ಬೇರೆಯಾಗಿರಬೇಕು. ಅಂತೂ ಇವರ ವಿಷಯವು ಅಷ್ಟು ಖಚಿತವಾಗಿ ತಿಳಿಯಲು ಸಾಕಾದಷ್ಟು ಆಧಾರವಿಲ್ಲ. ಸಾಯಣರು ವಿವರಿಸಿರುವ ಕಥೆಯು ಕೇವಲ ಸ್ವಕಪೋಲಕಲ್ಪಿತವೇ ಆಗಿರಬೇಕು" ಎಂದಿದ್ದಾನೆ.

**ಗೋತಮಃ**—ಗೋತಮನು ಅಶ್ವಿನೀ ದೇವತೆಗಳಿಂದ ರಕ್ಷಣೆಯನ್ನು ಪಡೆದ ಋಷಿಗಳಲ್ಲಿ ಒಬ್ಬನು ಎಂದು ಸಾಯಣರು ಇವನ ಕಥೆಯನ್ನು ಈ ರೀತಿ ಸೂಕ್ಷ್ಮವಾಗಿ ತಿಳಿಸಿದ್ದಾರೆ.

> **ಅತ್ರೇದಮಾಖ್ಯಾನಂ । ಕದಾಚಿನ್ಮರುಭೂಮೌ ವರ್ತಮಾನಸ್ಯ ಸ್ತೋತುಃ ಗೋತಮಸ್ಯ ಋಷೇಃ ಸಮೀಪಂ ದೇಶಾಂತರೇ ವರ್ತಮಾನಂ ಕೂಪಮುತ್ಥಾಯಾಶ್ವಿನೌ ಪ್ರಾಪಯೇತಾಂ । ಪ್ರಾಪಯ್ಯ ಚ ತಂ ಕೂಪಂ ಸ್ನಾನಪಾನಾದಿಸೌಕರ್ಯಾಯ ಉಪರಿಮೂಲಮಧೋಬಿಲಮವಾಸ್ಥಾಪಯೆತಾಮಿತಿ । ತದೇತದಾಹ ।**

> **ಪರಾವತಂ ನಾಸತ್ಯಾನುದೇಥಾಮುಚ್ಚಾಬುಧ್ನಂ ಚಕ್ರಥುರ್ಜಿಹ್ಮಬಾರಂ ।**
> **ಕ್ಷರನ್ನಾಪೋ ನ ಪಾಯನಾಯ ರಾಯೇ ಸಹಸ್ರಾಯ ತೃಷ್ಯತೇ ಗೋತಮಸ್ಯ ॥**
>
> (ಋ. ಸಂ. ೧-೧೧೬-೯)

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಗೋತಮನಿಗೆ ಮಾಡಿದ ಸಹಾಯವನ್ನು ತಿಳಿಸಿದೆ. ಮರುಭೂಮಿಯಲ್ಲಿ ತಪಸ್ಸನ್ನು ಮಾಡುತ್ತಿದ್ದ ಸ್ತೋತೃವಾದ ಗೋತಮನಿಗೆ ಅನುಕೂಲಪಡಿಸಲು ದೂರದಲ್ಲಿದ್ದ ಕೂಪವನ್ನು ಅಗೆದು ಇವನ ಸಮೀಪದಲ್ಲಿರಿಸಿ, ಇವನ ಸ್ನಾನಪಾನಾದಿಗಳಿಗೆ ಅನುಕೂಲವನ್ನು ಕಲ್ಪಿಸಿದರು ಎಂಬುದು ಗೋತಮನ ಮಹಿಮೆಯ ವಿಷಯದಲ್ಲಿ ಸೂಕ್ಷ್ಮವಾದ ಪರಿಚಯವನ್ನು ಕೊಡುತ್ತದೆ.

**ಗೋತಮನು ರಹೂಗಣನ** ಪುತ್ರನೆಂಬುದು ಸಂಹಿತೆ ಮತ್ತು ಬ್ರಾಹ್ಮಣಾದಿಗಳಲ್ಲೆಲ್ಲಾ ಪ್ರಸಿದ್ಧವಾದ ವಿಷಯವಾಗಿದೆ. ಸಾಯಣರು ಇವನ ಪರಿಚಯವನ್ನು ಮಾಡಿಕೊಡುತ್ತಾ ಒಂದು ಇತಿಹಾಸ ಸಂದರ್ಭವನ್ನೂ ಸಹ ಸೂಚಿಸಿದ್ದಾರೆ ಅದು ಈ ರೀತಿಯಲ್ಲಿದೆ.

> **ಅತ್ರೇದಮಾಖ್ಯಾನಂ । ರಹೂಗಣಪುತ್ರೋ ಗೋತಮಃ ಕುರುಸೃಂಜಯಾನಾಂ ರಾಜ್ಞಾಂ ಪುರೋಹಿತ ಆಸೀತ್ । ತೇಷಾಂ ರಾಜ್ಞಾಂ ಪರೈಃ ಸಹ ಯುದ್ಧೇ ಸತಿ ಸ ಋಷಿರನೇನ ಸೂಕ್ತೇನೇಂದ್ರಂ ಸ್ತುತ್ವಾ ಸ್ವಕೀಯಾನಾಂ ಜಯಂ ಪ್ರಾರ್ಥಯಾಮಾಸೇತಿ । ತಸ್ಯ ಚ ತತ್ಪುರೋಹಿತತ್ವಂ ವಾಜಸನೇಯಿಭಿರಾಮ್ನಾತಂ । ಗೋತಮೋ ಹ ವೈ ರಾಹೂಗಣ ಉಭಯೇಷಾಂ ಕುರುಸೃಂಜಯಾನಾಂ ಪುರೋಹಿತ ಆಸೀದಿತಿ ।**
>
> (ಸಾ. ಭಾ. ಋ. ಸಂ. ೧-೮೧-೩)

ಋ. ಸಂ. ೧–೮೧ನೇ ಸೂಕ್ತದ ದ್ರಷ್ಟೃವೂ ರಹೂಗಣಪುತ್ರನೂ ಆದ ಗೋತಮನು ಕುರು ಮತ್ತು ಸೃಂಜಯ ಎಂಬ ಜನಾಂಗದ ರಾಜರುಗಳಿಗೆ ಪುರೋಹಿತನಾಗಿದ್ದನು. ಆಗ ಆ ರಾಜರು ತಮ್ಮ ಶತ್ರುರಾಜರೊಡನೆ ಯುದ್ಧಮಾಡುವ ಕಾಲದಲ್ಲಿ **ಗೋತಮನು** ಉದಾಹೃತವಾಗಿರುವ ಈ (೧-೮೧) ಸೂಕ್ತದಿಂದ ಇಂದ್ರನನ್ನು ಸ್ತುತಿಸಿ ಇಂದ್ರನು ಪ್ರಸನ್ನನಾಗುವಂತೆ ಮಾಡಿದನು. ಮತ್ತು **ಗೋತಮನು ಕುರುಸೃಂಜಯ**ರಿಗೆ ಪುರೋಹಿತನಾಗಿದ್ದನೆಂಬ ವಿಷಯದಲ್ಲಿ **ಗೋತಮೋ ಹ ವೈ ರಾಹುಗಣ ಉಭಯೇಷಾಂ ಕುರುಸೃಂಜಯಾನಾಂ ಪುರೋಹಿತ ಆಸೀತ್ ।** ಎಂಬ ವಾಜಸನೇಯಿ ಶ್ರುತಿವಾಕ್ಯವನ್ನು ಉದಾಹರಿಸಿರುವರು. ಈ ರಾಹುಗಣ ಗೋತಮನು ಋಕ್ಸಂಹಿತೆಯ ಒಂದನೇ ಮಂಡಲದಲ್ಲಿ ೭೪ರಿಂದ ೯೩ನೇ ಸೂಕ್ತಗಳವರೆಗೆ ೨೦ ಸೂಕ್ತಗಳ ದ್ರಷ್ಟೃವಾಗಿದ್ದಾನೆ. ಇದೇ ರಾಹುಗಣ ಗೋತಮನ

ವಿಷಯವನ್ನು ಶತಪಥಬ್ರಾಹ್ಮಣದಲ್ಲಿಯೂ ಸಹ ತಿಳಿಸುತ್ತಾ ಐತಿಹಾಸಿಕವಾದ ಒಂದು ಸಂದರ್ಭವನ್ನು ಈ ರೀತಿ ವರ್ಣಿಸಿದೆ.

**ವಿದೇಘೋ ಹ ಮಾಥವೋಽಗ್ನಿಂ ವೈಶ್ವಾನರಂ ಮುಖೇ ಬಭಾರ ತಸ್ಯ............ಮುಖಾತ್ ಭೂತ್ಸ ನೇನ್ಮೇ ಮುಖಾನ್ನಿಷ್ಪದ್ಯಾ ತೈ ತಸ್ಮಾತ್ತೇ ನ ಪ್ರತ್ಯಶ್ರಾಷಮಿತಿ ||**

(ಶ ಬ್ರಾ. ೧-೪-೧-೧೦ ರಿಂದ ೧೮).

ವಿದೇಘಮಾಥವನೆಂಬ ರಾಜನಿಗೆ ಋಷಿಯಾದ ಗೋತಮ ರಾಹೂಗಣನು ಪುರೋಹಿತನಾಗಿದ್ದನು. ಒಂದುಸಲ ವಿದೇಘಮಾಥವನು ವೈಶ್ವಾನರಾಗ್ನಿಯನ್ನು ತನ್ನ ಮುಖದಲ್ಲಿ ವಹಿಸಿಕೊಂಡಿದ್ದನು, ಆ ಸಂದರ್ಭದಲ್ಲಿ ಪುರೋಹಿತ ನಾದ ಗೋತಮನು ಅವನನ್ನು ಸಂಬೋಧಿಸಿ ಮಾತನಾಡಿಸಲು ಪ್ರಯತ್ನಿಸಿದಾಗ ಮಾಥವನು ತನ್ನ ಆಸ್ಯದಿಂದ ಅಗ್ನಿಯು ಬಿದ್ದುಬಿಡಬಹುದೆಂಬ ಭೀತಿಯಿಂದ ಉತ್ತರವನ್ನೇ ಕೊಡಲಿಲ್ಲ. ಆಗ ಗೋತಮನು **ವೀತಿಹೋತ್ರಂ ತ್ವಾ ಕವೇ ದ್ಯುಮಂತಂ** ಎಂಬ ಋಙ್ಮಂತ್ರದಿಂದ (ಋ. ಸಂ. ೫-೨೬-೩) ಪ್ರಾರ್ಥಿಸಿದನು ರಾಜನು ಉತ್ತರವನ್ನೇ ಕೊಡಲಿಲ್ಲ. ಪುನಃ ಗೋತಮನು, **ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ** (ಋ. ಸಂ. ೮-೪೪-೧೭) ಎಂಬ ಮಂತ್ರದಿಂದ ಪ್ರಾರ್ಥಿಸಿದನು. ರಾಜನು ಅದಕ್ಕೂ ಉತ್ತರವನ್ನೇ ಕೊಡಲಿಲ್ಲ. ಆಗ ಪುನಃ ಗೋತಮನು **ತಂ ತ್ವಾ ಘೃತಸ್ನ ವೀಮಹೇ** (ಋ. ಸಂ. ೫-೨೬-೨) ಎಂಬ ಮಂತ್ರದಿಂದಲೂ ಪ್ರಾರ್ಥಿಸಿದನು, ಆಗ ಘೃತಶಬ್ದವು ಉಚ್ಚರಿತವಾದೊಡನೆಯೇ ಅಗ್ನಿವೈಶ್ವಾನರನು ಪ್ರಜ್ವಲಿತನಾಗಿ ತನ್ನ ಪ್ರಭೆಯೊಡನೆ ಪ್ರಕಾಶಿಸಿದನು. ಆಗ ಅವನನ್ನು ತಡೆದುಕೊಳ್ಳಲು ಮಾಥವನಿಗೆ ಸಾಧ್ಯವಾಗಲೇ ಇಲ್ಲ. ಆಗ ಅಗ್ನಿವೈಶ್ವಾನರನು ಕೆಳಕ್ಕೆ ಜಾರಿ ಬಿದ್ದುಬಿಟ್ಟನು. ಆ ಸಮಯದಲ್ಲಿ ವಿದೇಘಮಾಥವನು ಸರಸ್ವತೀನದಿಯ ದಡದಲ್ಲಿದ್ದನು. ಆಗ ಕೆಳಗೆ ಬಿದ್ದ ಅಗ್ನಿಯು ಆ ಪ್ರದೇಶದಿಂದ ಪೂರ್ವಕ್ಕಿರತಕ್ಕ ಪ್ರದೇಶಗಳನ್ನು ಸುಡುತ್ತಾ ಬಂದನು. ಈ ರೀತಿ ಅಗ್ನಿಯು ದಹಿಸುತ್ತಾ ಮುಂದುವರಿದ ಹಾಗೆಲ್ಲಾ ಗೋತಮನೂ, ಮಾಥವನೂ ಅವನನ್ನು ಹಿಂಬಾಲಿಸುತ್ತಾ ಹೋದರು. ಅಗ್ನಿಯು ದಾರಿಯಲ್ಲಿದ್ದ ನದಿಗಳನ್ನೆಲ್ಲಾ ಬತ್ತುವಂತೆ ಮಾಡಿದನು. ಆದರೆ ಉತ್ತರ ಪ್ರದೇಶವಾದ ಹಿಮಾಲಯದಿಂದ ದಕ್ಷಿಣ ದಿಙ್ಮುಖವಾಗಿ ಹರಿಯುತ್ತಿರುವ **ಸದಾನೀರಾ** ಎಂಬ ನದಿಯನ್ನು ಮಾತ್ರ ಶೋಷಿಸುವಂತೆ ಮಾಡಲಿಲ್ಲ. ಅಗ್ನಿವೈಶ್ವಾನರನು ಅದನ್ನು ದಹಿಸದೇ ಇದ್ದುದರಿಂದಲೇ ಬ್ರಹ್ಮವಿತ್ತುಗಳು ಆ ನದಿಯನ್ನು ದಾಟಲಿಲ್ಲ. ಈಚೆಗೆ **ಸದಾನೀರಾ** ನದಿಗಿಂತ ಪೂರ್ವಕ್ಕೂ ಸಹ ಬ್ರಾಹ್ಮಣ ಸಮುದಾಯದವರು ನೆಲಸಿದ್ದಾರೆ. ಆದರೆ ರಾಹುಗಣ ಗೋತಮನ ಕಾಲದಲ್ಲಿ ಆ ಪ್ರದೇಶವೆಲ್ಲ ನಿರ್ಜನ ಪ್ರದೇಶವಾಗಿಯೂ, ಕೃಷ್ಯಾದಿಗಳಿಲ್ಲದೆಯೂ ಇರುತ್ತಿತ್ತು. ಅಗ್ನಿವೈಶ್ವಾನರನಿಂದ ಅನುಗೃಹೀತವಾಗಲಿಲ್ಲವೆಂದು ಯಾರೂ ಆ ಪ್ರದೇಶವನ್ನಾಕ್ರಮಿಸಲಿಲ್ಲ. ಆಗ ವಿದೇಘಮಾಥವನು ಅಗ್ನಿವೈಶ್ವಾನರನನ್ನು ಕೇಳಿದನು.—" ಈ ಸದಾ ನೀರಾನದಿಯ ಪೂರ್ವಕ್ಕೆ ಸೇರಿದ ಪ್ರದೇಶದಲ್ಲಿ ನೆಲೆಸು " ಎಂದು ಅವನು ಹೇಳಿದನು. ಈಗಲೂ ಸಹ **ಕೋಸಲಕ್ಕೂ ವಿದೇಹಕ್ಕೂ** ಈ ಪ್ರದೇಶವೇ ಸೀಮಾಪ್ರದೇಶವಾಗಿರುತ್ತದೆ.

ಆಗ ರಾಹುಗಣ ಗೋತಮನು ಮಾಥವನನ್ನು ಕುರಿತು " ನಾನು ನಿನ್ನನ್ನು ಸಂಬೋಧಿಸಿದಾಗ ನೀನೇಕೆ ಮಾತನಾಡಲಿಲ್ಲ "ವೆಂದು ಕೇಳಿದನು. ಅದಕ್ಕೆ ಅವನು " ಅಗ್ನಿವೈಶ್ವಾನರನು ನನ್ನ ಆಸ್ಯದಲ್ಲಿದ್ದುದರಿಂದಲೂ, ನಾನು ಬಾಯಿತೆರೆದರೆ ಅನನೆಲ್ಲಿ ತಪ್ಪಿಸಿಕೊಳ್ಳುವನೋ ಎಂಬ ಬೆದರಿಕೆಯಿಂದಲೂ ಹಾಗಿದ್ದೆನು " ಎಂದುತ್ತರವನ್ನು ಕೊಟ್ಟನು ಎಂಬುದೇ ಈ ಸನ್ನಿವೇಶದ ವರ್ಣನೆಯಾಗಿದೆ. ಈ ರಾಹುಗಣ ಗೋತಮನ ಮತ್ತು ಮಾಥವನ ಐತಿಹ್ಯವನ್ನು

ತಿಳಿಸತಕ್ಕ ಈ ಸನ್ನಿವೇಶದ ಆಧಾರದ ಮೇಲೆ ಈ ಕಾಲದಲ್ಲೇ ವೈದಿಕ ಸಂಗಡದವರು ಕ್ರಮಕ್ರಮವಾಗಿ ಪೂರ್ವಾಭಿಮುಖವಾಗಿ ಪ್ರಸರಿಸಿದರು ಎಂದು ಐತಿಹಾಸಿಕಕಾರರು ತೀರ್ಮಾನಿಸಿರುತ್ತಾರೆ.

"It was pointed out by Weber that this legend distinguishes three successive stages of the eastward migration of the Brahmanical Hindus. In the first place, the settlements of the Aryans had already been extended from the Panjab, where they were settled in the times of the Rig-Veda, as far as the Saraswathi. They thence pushed forward, led by Videha Mathava and Rahugana Gotama according to our legend, as far east as the river ಸದಾನೀರಾ, which, according to Sayana, is another name for the ಕರತೋಯಾ, which formed the eastern boundary of the Videhas."

[S. B. E. Vol. XII. Satapatha Brahmana Vol. I. p. 104].

ಎಂದರೆ, ಪ್ರಕೃತವಾದ ಋಕ್ಕಿನಲ್ಲಿ (೧-೧೮೭-೫) ನಿರ್ದೇಶಿಸಿರುವ ಗೋತಮನು ರಾಹುಗಣ ಗೋತಮನೇ ಆಗಿದ್ದರೆ, (ಪ್ರಾಯಃ ರಾಹುಗಣನೇ ಆಗಿರಬೇಕು), ಶತಪಥಬ್ರಾಹ್ಮಣದ ಇತಿಹಾಸ ಸಂದರ್ಭದ ವರ್ಣನೆಯಂತೆ, ಋಕ್ಸಂಹಿತಾ ಕಾಲದವರೆಗೂ ಸಹ ವೈದಿಕ ಸಂಪ್ರದಾಯಕ್ಕೆ ಸೇರಿದ ಆರ್ಯರ ವಿಸ್ತೃತಿಯು **ಸರಸ್ವತೀ** ನದಿಗಿಂತ ಪೂರ್ವಪ್ರದೇಶಕ್ಕೆ ಆಗಿರಲಿಲ್ಲವೆಂದೂ, ವಿದೇಘಮಾಥವನ ಮತ್ತು ಗೋತಮ ರಾಹುಗಣನ ಕಾಲದಿಂದೀಚೆಗೆ **ಸರಸ್ವತೀ** ನದಿಯನ್ನೂ ದಾಟಿ **ಸದಾನೀರಾ** ಎಂಬ ನದಿಯವರೆಗೂ ಮತ್ತು ಅದಕ್ಕಿಂತಲೂ ಕೊಂಚ ಮುಂದಕ್ಕೂ ಸಹ ಪೂರ್ವಾಭಿಮುಖವಾಗಿ ಪ್ರಸರಿಸಿದರು ಎಂಬುದು ಖಚಿತವಾಗಿದೆಯೆಂದು ಐತಿಹಾಸಿಕರ ಮತವಾಗಿದೆ. **ಸದಾನೀರಾ** ಎಂಬ ನದಿಯನ್ನೇ ಸಾಯಣರು **ಕರತೋಯಾ** ಎಂದೂ ಕರೆದಿದ್ದಾರೆ.

ಅತಿಶಯವಾದ ಐತಿಹ್ಯವುಳ್ಳ ಮಾಥವನಿಗೂ ಪುರೋಹಿತನಾಗಿದ್ದ ಗೋತಮನ ಮಾಹಾತ್ಮ್ಯವು ಇದರಂತೆಯೇ ಇನ್ನೂ ಅನೇಕ ಕಡೆಗಳಲ್ಲಿ ಸ್ತುತಿಸಲ್ಪಟ್ಟಿದೆ.

**ತಾಗ್ಂ ಹೈತಾಂ ಗೋತಮೋ ರಾಹೂಗಣಃ। ವಿದಾಂಚಕಾರ ಸಾ ಹ ಜನಕಂ ವೈದೇಹಂ ಪ್ರತ್ಯುತ್ಸಸಾದ ತಾಗ್ಂ ಹಾಜ್ಞಜಿದ್ಬ್ರಾಹ್ಮಣೇಷ್ವನ್ವಿಯೇಷ ತಾಮು ಹ ಯಾಜ್ಞವಲ್ಕ್ಯೋ ವಿವೇದ ಸ ಹೋವಾಚ ಸಹಸ್ರಂ ಭೋ ಯಾಜ್ಞವಲ್ಕ್ಯ ದದ್ಮೋ ಯಸ್ಮಿನ್ವಯಂ ತ್ವಯಿ ಮಿತ್ರವಿಂದಾಮನ್ವವಿದಾಮೇತಿ ವಿಂದತೇ ಮಿತ್ರ್ರಗ್ಂ ರಾಷ್ಟ್ರಮಸ್ಯ ಭವತ್ಯಪ ಪುನರ್ಮೃತ್ಯುಂ ಜಯತಿ ಸರ್ವಮಾಯುರೇತಿ ಯ ಏವಂ ವಿದ್ವಾನ್ ॥**

(ಶ. ಬ್ರಾ. ೧೧-೪-೩-೨೦)

ಇದೇ **ರಾಹುಗಣಗೋತಮನು ಮಿತ್ರವಿಂದಾ** ಎಂಬ ಯಾಜ್ಞಿಕಪ್ರಯೋಗವನ್ನುಪದೇಶಿಸಿದನು. ಈ **ಮಿತ್ರವಿಂದಾ** ಎಂಬ ಯಜ್ಞತತ್ತ್ವವು ಜನಕವಿದೇಹನಲ್ಲಿಗೆ ಪ್ರಸರಿಸಿತು. ಅವನು ತನ್ನ ಸಭೆಯಲ್ಲಿರತಕ್ಕ ಬ್ರಾಹ್ಮಣೋತ್ತಮರಲ್ಲಿ ಯಾರು ಈ ಯಜ್ಞತತ್ತ್ವವನ್ನು ಅರಿತಿರುವರು ಎಂದು ವೇದಾಂಗವನ್ನು ತಿಳಿದವರಲ್ಲೆಲ್ಲಾ ಶೋಧಿಸಿ ನೋಡಿದನು. ಕೊನೆಗೆ ಯಾಜ್ಞವಲ್ಕ್ಯನಿಗೆ ಈ ತತ್ತ್ವಜ್ಞಾನವಿದೆಯೆಂದು ತಿಳಿದು ಅವನಿಗೆ ಬಹುವಿಧವಾದ ದಾನಗಳನ್ನು ಕೊಟ್ಟನು.

ಗೋತಮನಿಂದ ಉಪದಿಷ್ಟವಾದ **ಈ ಮಿತ್ರವಿಂದಾ** ಎಂಬ ಯಜ್ಞತತ್ತ್ವವನ್ನರಿತು, ಇದರ ಆಧ್ಯಾತ್ಮಿಕವಾದ ಮಹಿಮೆಯನ್ನು ತಿಳಿದು, ಯಜ್ಞವನ್ನಾಚರಿಸುವವರಿಗೆ ರಾಷ್ಟ್ರವೆಲ್ಲಾ ಮಿತ್ರಪ್ರಾಯವಾಗಿ ತನ್ನ ಸ್ವಾಧೀನದಲ್ಲಿರುವುದು ಮತ್ತು ಆತನು ಮೃತ್ಯುವನ್ನೂ ಜಯಿಸುತ್ತಾನೆ ಎಂಬ ಸ್ತುತಿಯಿದೆ. ಆಧ್ಯಾತ್ಮಿಕತತ್ತ್ವವನ್ನು ಪ್ರತಿಬಿಂಬಿಸುವ ಇದೇ ಗೋತಮನ ಮಹಿಮೆಯು ಬೃಹದಾರಣ್ಯಕದಲ್ಲಿಯೂ ಸ್ತುತವಾಗಿದೆ.

(ಬೃ. ಉ. ೨-೨-೪)

ಪ್ರಕೃತವಾದ ಋಕ್ಕಿನಲ್ಲಿ (೧-೧೮೩-೫) ನಿರ್ದಿಷ್ಟವಾಗಿರುವ **ಪುರುಮೀಳ್ಹ; ಗೋತಮ;** ಮತ್ತು **ಅತ್ರಿ** ಎಂಬ ಋಷಿಗಳ ಪೈಕಿ **ಅತ್ರಿಯ** ವಿಷಯವನ್ನು ಹಿಂದೆ ತಿಳಿಸಿದೆ. (ಋ. ಸಂ. ೧-೧೮೦-೪)

ಈ ಮೂರು ಋಷಿಗಳೂ ಸಹ ತಮ್ಮ ಯಜ್ಞಾಚರಣೆಗಳಿಂದ ಯಾವ ರೀತಿ ಋಜುಮಾರ್ಗವನ್ನೇ ಅನುಸರಿಸುತ್ತಿರುವರು ಎಂಬ ವಿಷಯವನ್ನು ನಿವೇದಿಸಿಕೊಂಡು ಅಶ್ವಿನೀದೇವತೆಗಳನ್ನು ಸ್ತುತಿಸಿ, ಅವರ ಅನುಗ್ರಹವನ್ನು ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ದಸ್ರಾ—ಸುಪಾಂ ಸುಲುಕ್**—ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಹವತೇ—ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಪೂರ್ವದಲ್ಲಿ ಪದವಿದ್ದರೂ ಇಲ್ಲದಂತಿರುವುದರಿಂದ ಪಾದಾದಿಯಲ್ಲಿ ಬಂದಂತಾಗುವುದರಿಂದ ತಿಙಂತ ನಿಘಾತಸ್ವರ ಬರುವುದಿಲ್ಲ. ಶಬ್ದಾರ್ಥಕ ಹ್ವೇಙ್ ಧಾತುವಿನ ಲಟ್ ಪ್ರಥಮಪುರುಷ ಏಕವಚನಾಂತರೂಪ.

**ದಿಷ್ಟ್ವಾಮ್**—ದಿಶ ಅತಿಸರ್ಜನೇ. ಧಾತು. ಕ್ತ ಪ್ರತ್ಯಯ. **ವ್ರಶ್ಚಭ್ರಸ್ಜ**—(ಪಾ. ಸೂ. ೮-೨-೩೬) ಎಂಬುದರಿಂದ ಧಾತು ಶಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ಸ್ತ್ರೀತ್ವದಲ್ಲಿ ಟಾಪ್. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಋಜುಯಾ ಇವ**— ಋಜು ಯಾತಿ ಇತಿ ಋಜುಯಾಃ ತಮ್. ಯಾ ಪ್ರಾಪಣೇ. ಧಾತು. ವಿಚ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. **ಸುಪಾಂ ಸುಲುಕ್**—ಎಂಬುದರಿಂದ ದ್ವಿತೀಯಾ ವಿಭಕ್ತಿಗೆ ಆಕಾರಾದೇಶ.

**ಯಂತಾ**—ಕರ್ತರಿಯಲ್ಲಿ ಯಮ್ ಧಾತುವಿಗೆ ತೃನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಅತಾರಿಷ್ಮ ತಮಸಸ್ಪಾರಮಸ್ಯ ಪ್ರತಿ ವಾಂ ಸ್ತೋಮೋ ಅಶ್ವಿನಾವಧಾಯಿ ।
ಏಹ ಯಾತಂ ಪಥಿಭಿರ್ದೇವಯಾನೈರ್ವಿದ್ಯಾಮೇಷಂ ವೃಜನಂ ಜೀರದಾನುಂ ॥

॥ ಪದಪಾಠಃ ॥

ಅತಾರಿಷ್ಮ । ತಮಸಃ । ಪಾರಂ । ಅಸ್ಯ । ಪ್ರತಿ । ವಾಂ । ಸ್ತೋಮಃ । ಅಶ್ವಿನಾ । ಅಧಾಯಿ ।
ಆ । ಇಹ । ಯಾತಂ । ಪಥಿಽಭಿಃ । ದೇವಽಯಾನೈಃ । ವಿದ್ಯಾಮ । ಇಷಂ । ವೃಜನಂ । ಜೀರಽದಾನುಂ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವಯೋಃ ಪ್ರಸಾದಾದಸ್ಯ ತಮಸಸ್ತಮನಹೇತೋಃ ಶ್ರೇಯಃಪ್ರತಿಬಂಧರೂಪಸ್ಯ ದುಃಖಸ್ಯ ಪಾರಂ ಪರ್ಯಂತಭೂಮಿಮತಾರಿಷ್ಮ । ಉತ್ತೀರ್ಣಾಃ ಸ್ಮಃ । ಹೇ ಅಶ್ವಿನೌ ವಾಂ ಪ್ರತಿ ಸ್ತೋಮಃ ಸ್ತೋತ್ರಮಧಾಯಿ । ಅಕಾರೀತ್ಯರ್ಥಃ । ಯುವಾಂ ದೇವಯಾನೈರ್ದೇವಗಂತವ್ಯೈರ್ಮಾರ್ಗೈಃರಿಹಾಸ್ಮದ್ಯಜ್ಞ ಆ ಯಾತಂ । ಆಗಚ್ಛತಂ । ಶಿಷ್ಟೋ ವ್ಯಾಖ್ಯಾತಃ ॥**

॥ ಪ್ರತಿಪದಾರ್ಥ ॥

(**ಹೇ ಅಶ್ವಿನೌ**—ಎಲೈ ಅಶ್ವಿನೀ ದೇವತೆಗಳೇ । (**ಯುವಯೋಃ ಪ್ರಸಾದಾತ್**—ನಿಮ್ಮ ಪ್ರಸಾದದಿಂದ ।) **ಅಸ್ಯ ತಮಸಃ**—(ಶ್ರೇಯಃ ಪ್ರತಿ ಬಂಧರೂಪವಾದ) ಈ ದುಃಖರೂಪ ತಮಸ್ಸಿನ । **ಪಾರಂ**—ಮೇರೆಯನ್ನು । **ಅತಾರಿಷ್ಮ**—ದಾಟಿದೆವು । (**ಹೇ**) **ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ವಾಂ ಪ್ರತಿ**—ನಿಮ್ಮನ್ನುದ್ದೇಶಿಸಿ । **ಸ್ತೋಮಃ**—ಸ್ತುತಿಯೂ । **ಅಧಾಯಿ**—ಮಾಡಲ್ಪಟ್ಟಿತು । **ದೇವಯಾನೈಃ ಪಥಿಭಿಃ**—ದೇವತೆಗಳು ಸಂಚರಿಸುವ ಮಾರ್ಗಗಳಿಂದ । **ಇಹ**—ಈ ನಮ್ಮ ಯಜ್ಞಕ್ಕೆ । **ಆ ಯಾತಂ**—ಆಗಮಿಸಿ । **ಇಷಂ**—ಅನ್ನವನ್ನು । **ವೃಜನಂ**—ಬಲವನ್ನೂ । **ಜೀರದಾನುಂ**—ದೀರ್ಘಾಯುಸ್ಸನ್ನೂ । **ವಿದ್ಯಾಮ**—ಪಡೆಯೋಣ.

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ, ನಿಮ್ಮನುಗ್ರಹದಿಂದ ಶ್ರೇಯಃಪ್ರತಿಬಂಧಕವಾದ ಈ ದುಃಖರೂಪತಮಸ್ಸು ಉತ್ತೀರ್ಣವಾಯಿತು; ನಿಮ್ಮನ್ನು ಸ್ತುತಿಸಿದ್ದೂ ಆಯಿತು; ದೇವಯೋಗ್ಯವಾದ ಮಾರ್ಗಗಳ ಮೂಲಕ ನಮ್ಮ ಯಾಗಶಾಲೆಗೆ ಆಗಮಿಸಿ, ನಮಗೆ ಆಹಾರ, ಬಲ, ದೀರ್ಘಾಯುಷ್ಯಾದಿಗಳನ್ನು ಅನುಗ್ರಹಿಸಿ.

English Translation.

(Through your aid), Aswins, we cross over this (limit of) darkness; to you this (our) hymn has been addressed; come hither by the paths traversed by the gods, that we may obtain food, and strength and long life.

॥ ವಿಶೇಷವಿಷಯಗಳು ॥

**ದೇವಯಾನೈಃ ಪಥಿಭಿಃ—ದೇವಗಂತವ್ಯೈರ್ಮಾರ್ಗೈಃ** । ದೇವತೆಗಳು ಸಂಚರಿಸುವ ಮಾರ್ಗಗಳಿಂದ ಎಂದು ಭೌತಿಕವಾದ ಅರ್ಥವನ್ನು ಹೇಳಿದೆ. ಉಪನಿಷತ್ತುಗಳಲ್ಲಿ **ದೇವಯಾನ, ಪಿತೃಯಾನ** ಎಂಬ ಪದಗಳಿಗೆ ಪಾರಿಭಾಷಿಕವಾದ ಅರ್ಥವಿದೆ. ಆದರೆ ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ **ದೇವಯಾನವೆಂಬ** ಪದಕ್ಕೆ ದೇವತೆಗಳು ಸಂಚರಿಸುವ ಮಾರ್ಗವೆಂದೇ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕವಾದ ತಾತ್ಪರ್ಯವೂ ಸೂಚಿತವಾಗಿದೆ.

ಉಪನಿಷತ್ತುಗಳಲ್ಲಿ **ದೇವಯಾನ,** ಮತ್ತು **ಪಿತೃಯಾನ** ಎಂಬ ಪದಗಳಿಂದ ಪುರುಷನ ಮರಣಾನಂತರ ಅವನ ದೇಹವು ಭಸ್ಮವಾಗಿ ನಿತ್ಯನಾಗಿರುವ ಆತ್ಮನು ಸಂಚರಿಸತಕ್ಕ ಮಾರ್ಗಗಳೆರಡು ಎಂದು ಪ್ರಸಿದ್ಧವಾಗಿದೆ. ಸತ್ಕರ್ಮಕ್ಕೆ ಫಲವನ್ನನುಭವಿಸಲು ಹೋಗತಕ್ಕ ಮಾರ್ಗಗಳಲ್ಲಿ ಒಂದು ದೇವಯಾನ ಇನ್ನೊಂದು ಪಿತೃಯಾನ. ಒಂದು ದೇವತೆಗಳ ಮಾರ್ಗ; ಮತ್ತೊಂದು ಪಿತೃಗಳ ಮಾರ್ಗ. **ಪಂಚಾಗ್ನಿವಿದ್ಯೆ**ಯನ್ನರಿತು ಸತ್ಯದಲ್ಲೇ ಶ್ರದ್ಧೆಯನ್ನಿಟ್ಟಿರುವರು ದೇವಮಾರ್ಗದಲ್ಲಿ ಹೊರಟು ಪರಬ್ರಹ್ಮನನ್ನು ಸೇರುತ್ತಾರೆ. ಇವರ ಮರಣಾನಂತರ ಆತ್ಮನು ಜ್ವಾಲೆಯನ್ನು ಪ್ರವೇಶಿಸಿ ತನ್ಮೂಲಕ ಅಹಸ್ಸನ್ನೂ, ಶುಕ್ಲಪಕ್ಷವನ್ನೂ, ಉತ್ತರಾಯಣವನ್ನೂ, ಸಂವತ್ಸರವನ್ನೂ, ಆದಿತ್ಯನನ್ನೂ, ವಿದ್ಯುತ್ತನ್ನೂ ಪ್ರವೇಶಿಸಿ ತನ್ಮೂಲಕ ಅಮಾನವನಾದ ಪುರುಷನ ಸಹಾಯದಿಂದ ಪರಬ್ರಹ್ಮನನ್ನು ಪಡೆಯುತ್ತಾನೆ. ಎಂಬ ವಿಷಯವನ್ನು ಉಪನಿಷತ್ತುಗಳಲ್ಲಿ ಈ ರೀತಿ ವರ್ಣಿಸಿದೆ–

**ತೇ ಯ ಏವಮೇತದ್ವಿದುರ್ಯೇಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿರಭಿ-**
**ಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ಷ-**
**ಣ್ಮಾಸಾನ್ನುದಙ್ಙಾದಿತ್ಯ ಏತಿ ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಮಾದಿತ್ಯಾ-**
**ದ್ವೈದ್ಯುತಂ ತಾನ್ವೈದ್ಯುತಾನ್ಪುರುಷೋ ಮಾನಸ ಏತ್ಯ ಬ್ರಹ್ಮಲೋಕಾನ್ಗಮಯತಿ ತೇ**
**ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸಂತಿ ತೇಷಾಃ ನ ಪುನರಾವೃತ್ತಿಃ ॥**

(ಬೃ. ಉ. ೬–೨–೧೫)

ಈ ವಿಧವಾಗಿ ಬ್ರಹ್ಮಲೋಕವನ್ನು ಸೇರಿದವರಿಗೆ ಪುನರಾವೃತ್ತಿಯಿರುವುದಿಲ್ಲವೆಂದು ತಿಳಿಸಿ ಅನಂತರ ಪಿತೃಯಾನದ ಸ್ವರೂಪವನ್ನೂ ಆ ಮಾರ್ಗದ ಕ್ರಮವನ್ನೂ ವರ್ಣಿಸಿದೆ–

**ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾಞ್ಜಯಂತಿ ತೇ ಧೂಮಮಭಿಸಂಭವಂತಿ**
**ಧೂಮಾದ್ರಾತ್ರಿಂ ರಾತ್ರೇರಪಕ್ಷೀಯಮಾಣಪಕ್ಷಮಪಕ್ಷೀಯಮಾಣಪಕ್ಷಾದ್ಯಾನ್ಷಣ್ಮಾಸಾನ್ದ-**
**ಕ್ಷಿಣಾದಿತ್ಯ ಏತಿ ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾಚ್ಚಂದ್ರಂ ತೇ ಚಂದ್ರಂ ಪ್ರಾಪ್ಯಾನ್ನಂ**
**ಭವಂತಿ ತಾಂಸ್ತತ್ರ ದೇವಾ ಯಥಾ ಸೋಮಂ ರಾಜಾನಮಾಪ್ಯಾಯ.............ತೇ ಪೃಥಿವೀಂ**
**ಪ್ರಾಪ್ಯಾನ್ನಂ ಭವಂತಿ ತೇ ಪುನಃ ಪುರುಷಾಗ್ನೌ ಹೂಯಂತೇ.......................ಏವಮೇ-**
**ವಾನುಪರಿವರ್ತಂತೇ ।**

(ಬೃ. ಉ. ೬-೨-೧೬).

ಯಾರು ಕೇವಲ ಯಜ್ಞದಿಂದಲೂ ದಾನಾದಿಗಳಿಂದಲೂ ಲೋಕವನ್ನು ತೃಪ್ತಿಗೊಳಿಸುತ್ತಾರೆಯೋ ಎಂದರೆ ಪಂಚಾಗ್ನಿ ವಿದ್ಯೆಯನ್ನರಿಯದೇ ಕೇವಲ ಸತ್ಕರ್ಮನಿರತರಾಗಿರುವರೋ ಅಂತಹವರು ಮರಣಾನಂತರ ಬೇರೆ ಮಾರ್ಗದಲ್ಲಿ ಸಂಚರಿಸುತ್ತಾರೆ. ದೇಹವು ದಗ್ಧವಾದನಂತರ ಆತ್ಮನು ಧೂಮದೊಂದಿಗೆ ಸೇರಿ ಅನಂತರ ರಾತ್ರಿಯನ್ನೂ, ತನ್ಮೂಲಕ ಕೃಷ್ಣ ಪಕ್ಷವನ್ನೂ, ತದ್ದ್ವಾರಾ ದಕ್ಷಿಣಾಯನವನ್ನೂ ಅನಂತರ ಪಿತೃಲೋಕವನ್ನೂ ಕೊನೆಗೆ ಚಂದ್ರಲೋಕವನ್ನೂ ಸೇರುತ್ತಾರೆ. ಅದೇ ಅವರ ಚರಮಸ್ಥಾನವು. ಈ ಲೋಕದಲ್ಲಿ ಅವರ ಸತ್ಕರ್ಮಗಳಿಗನುಗುಣವಾದ ಫಲಗಳನ್ನು ಪೂರ್ಣವಾಗಿ ಅನುಭವಿಸಿ, ಪಿತೃಗಳೊಂದಿಗಿದ್ದು, ತಮ್ಮ ಕರ್ಮದ ಸಂಸ್ಕಾರವು ಮುಗಿದೊಡನೆಯೇ ಪುನಃ ಅದೇ ಧೂಮಮಾರ್ಗವಾಗಿ ಪೃಥ್ವಿಗೆ ಹಿಂತಿರುಗುತ್ತಾರೆ. ಇದೇ ಉಪನಿಷತ್ತುಗಳಲ್ಲಿ ವರ್ಣಿಸಿರತಕ್ಕ **ದೇವಯಾನ** ಮತು **ಪಿತೃಯಾನ**ಗಳ ಸ್ವರೂಪವು.

ಪ್ರಕೃತದಲ್ಲಿ ನಾವು ಗಮನಿಸಬೇಕಾದುದೇನೆಂದರೆ, ಮೇಲೆ ವಿವರಿಸಿದಂತೆ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವವೆಲ್ಲವೂ ಪೂರ್ಣವಾಗಿ ಋಕ್ಸಂಹಿತೆಯಲ್ಲಿ ಉಪಯೋಗಿಸುವ **ದೇವಯಾನ** ಪದದಿಂದ ಸೂಚಿತವಾಗುತ್ತದೆಯೇ ಅಥವಾ ಕೇವಲ ದೇವತೆಗಳು ಸಂಚರಿಸತಕ್ಕ ಭೌತಿಕವಾದ ಮಾರ್ಗವೆಂದರ್ಥವಾಗುತ್ತದೆಯೇ ಎಂಬುದು. ಇದರಂತೆಯೇ, ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ **ಪಿತೃಯಾನ** ಶಬ್ದಕ್ಕೂ ಸಹ ಯಾವ ಅರ್ಥ ಎಂಬುದನ್ನೂ ಪ್ರಕೃತದಲ್ಲಿ ವಿಮರ್ಶಿಸಬೇಕಾಗಿದೆ.

ಋಕ್ಸಂಹಿತೆಯಲ್ಲಿ **ದೇವಯಾನ** ಎಂಬ ಪದವು ಒಟ್ಟು ಹದಿಮೂರುಸಲ ಪ್ರಯೋಗಿಸಲ್ಪಟ್ಟಿದೆ [೧. ೭೨-೭; ೧. ೧೬೨-೪; ೧. ೧೮೩-೬, ೧-೧೮೪-೬ ೪. ೩೭-೧; ೫. ೪೩-೬; ೭ ೩೮-೮ ೭. ೭೬-೨; ೧೦. ೧೮-೧; ೧೦. ೫೧-೨; ೧೦-೫೧-೫; ೧೦. ೯೮-೧೧; ೧೦. ೧೮೧-೩.] ಈ ಸಂದರ್ಭಗಳಲ್ಲೆಲ್ಲಾ ಸಾಯಣರು ಪ್ರಧಾನವಾಗಿ ಎರಡು ಅರ್ಥಗಳನ್ನುಮಾತ್ರ ಹೇಳಿದ್ದಾರೆ. ಅವರ ವಿವರಣೆಯ ಪ್ರಕಾರ ಮೊದಲನೆಯದಾಗಿ ಯಜ್ಞಕರ್ತರಾದ ಮಾನವರು ತಮ್ಮ ಹವಿಸ್ಸುಗಳೊಂದಿಗೆ ದೇವತೆಗಳನ್ನು ಸಮೀಪಿಸಲು ಹೋಗತಕ್ಕ ಮಾರ್ಗವೆಂದೂ ಎರಡನೆಯದಾಗಿ ದೇವತೆಗಳು ತಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ಪೃಥ್ವಿಗೆ ಬರತಕ್ಕ ಮಾರ್ಗವೆಂದೂ ಅರ್ಥವಾಗುತ್ತದೆ.

**ಪಿತೃಯಾನವೆಂಬ** ಪದವು ಋಕ್ಸಂಹಿತೆಯಲ್ಲಿ ಕೇವಲ ಒಂದು ಸಲ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಆ ಪ್ರಯೋಗವು ಯಾವ ಸಂದರ್ಭದಲ್ಲೆಂದರೆ,

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
**ಪಂಥಾಮನು ಪ್ರವಿದ್ವಾನ್ ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥**

(ಋ. ಸಂ. ೧೦-೨-೭)

ಎಂಬ ಋಕ್ಕಿನಲ್ಲಿ ದ್ಯಾವಾಪೃಥಿವಿಗಳಿಂದಲೂ, ಅಪ್ಪುಗಳಿಂದಲೂ, ಸೃಷ್ಟಿಕರ್ತನಿಂದಲೂ, ತ್ವಷ್ಟೃವಿನಿಂದಲೂ, ಪ್ರಜ್ವಲಿತನಾದವನೂ ಮತ್ತು **ಪಿತೃಯಾಣದ** ಸ್ವರೂಪವನ್ನು ಪೂರ್ಣವಾಗಿ ಅರಿತವನೂ ಆದ ಅಗ್ನಿಯು ಪ್ರಜ್ವಲಿತನಾದೊಡನೆಯೇ ಪ್ರಕಾಶಿತನಾಗಲಿ ಎಂದು ಪ್ರಾರ್ಥಿಸಿದೆ. ಋಕ್ಕಿನಲ್ಲಿ ಮೂರನೇ ಪಾದದಲ್ಲಿರುವ ಈ ಪದಕ್ಕೆ ಸಾಯಣರ ವಿವರಣೆಯಂತೆ **“ಪಿತೃಯಾಣಂ ಪಿತರೋ ಯೇನ ಮಾರ್ಗೇಣ ಗಚ್ಛಂತಿ ತಂ”** ಪಿತೃಗಳು ಯಾವ ಮಾರ್ಗದಲ್ಲಿ ಸಂಚರಿಸುವರೋ ಆ ಮಾರ್ಗವೆಂದರ್ಥ. ಇದೇ ಅರ್ಥವನ್ನು ಆಂಗ್ಲಪಂಡಿತರೂ ಒಪ್ಪಿ ವಿವರಿಸಿದ್ದಾರೆ.

ಹೀಗೆ **ದೇವಯಾನಕ್ಕೆ** ದೇವತೆಗಳು ಹವಿಸ್ಸಿಗಾಗಿ ಬರತಕ್ಕ ಮಾರ್ಗವೆಂದೂ, **ಪಿತೃಯಾನಕ್ಕೆ** ಪಿತೃಗಳು ಸಂಚರಿಸತಕ್ಕ ಮಾರ್ಗವೆಂದೂ ಅರ್ಥಮಾಡಿದರೆ, ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕಪರವಾದ ತಾತ್ಪರ್ಯವು ಈ ಸಂದರ್ಭಗಳಲ್ಲಿ ಹೇಗೆ ಸಾಧ್ಯವಾಗುವುದು ಎಂದರೆ ಆಗ ಕೆಳಗೆ ಉದಹರಿಸಿರುವ ಋಕ್ಕುಗಳ ತಾತ್ಪರ್ಯವನ್ನು ವಿಮರ್ಶಿಸಿ ಈ ಭಾವವು ಆ ಮಂತ್ರಗಳಿಂದ ವ್ಯಕ್ತವಾಗುವುದೇ ಎಂಬುದನ್ನು ನಿರ್ಧರಿಸಬೇಕು.

**ಪ್ರ ಮೇ ಪಂಥಾ ದೇವಯಾನಾ ಅದೃಶ್ರನ್ನಮರ್ಧಂತೋ ವಸುಭಿರಿಷ್ಕೃತಾಸಃ ।**
**ಅಭೂದು ಕೇತುರುಷಸಃ ಪುರಸ್ತಾತ್ಪ್ರತೀಚ್ಯಾಗಾದಧಿ ಹರ್ಮ್ಯೇಭ್ಯಃ ॥**

(ಋ. ಸಂ. ೭-೭೬-೨)

**ಕೋ ಮಾ ದದರ್ಶ ಕತಮಃ ಸ ದೇವೋ ಯೋ ಮೇ ತನ್ವೋ ಬಹುಧಾ ಪರ್ಯಪಶ್ಯತ್ ।**
**ಕ್ವಾಹ ಮಿತ್ರಾವರುಣಾ ಕ್ಷಿಯಂತ್ಯಗ್ನೇರ್ವಿಶ್ವಾಃ ಸಮಿಧೋ ದೇವಯಾನೀಃ ॥**

(ಋ. ಸಂ. ೧೦-೫೧-೨)

**ಏಹಿ ಮನುರ್ದೇವಯುರ್ಯಜ್ಞಕಾಮೋಽರಂಕೃತ್ಯಾ ತಮಸಿ ಕ್ಷೇಷ್ಯಗ್ನೇ ।**
**ಸುಗಾನ್ಪಥಃ ಕೃಣುಹಿ ದೇವಯಾನಾನ್ವಹ ಹವ್ಯಾನಿ ಸುಮನಸ್ಯಮಾನಃ ।**

(ಋ. ಸಂ. ೧೦-೫೧-೫)

ಎಂಬ ಈ ಋಕ್ಕುಗಳಲ್ಲಿ ಮೊದಲನೆಯ ಋಕ್ಕಿನಲ್ಲಿ ಪೂರ್ವಾರ್ಧದಲ್ಲಿ ವರ್ಣಿತವಾಗಿರುವ **ದೇವಯಾನಕ್ಕೆ** ಎರಡು ವಿಶೇಷಗಳಿವೆ. ಮೊದಲನೆಯದಾಗಿ **ಅಮರ್ಧಂತಃ (ಅಹಿಂಸಂತಃ)** ಎಂದೂ ಎರಡನೆಯದಾಗಿ **ವಸುಭಿಃ ಇಷ್ಕೃತಾಸಃ ತೇಜೋಭಿಃಸಂಸ್ಕೃತಾಃ** ಎಂದೂ ಇವೆ. ಈ ಎರಡು ವಿಶೇಷಣಗಳಿಂದ ದೇವಯಾನದ ಸ್ವರೂಪವು ವರ್ಣಿತವಾಗಿದೆ ಅದು ಅಹಿಂಸಿತವಾದ ಮಾರ್ಗವೆಂದೂ, ಪೂರ್ಣವಾದ ತೇಜಸ್ಸಿನಿಂದ ಕೂಡಿದುದೆಂದೂ ಈ ವಿಶೇಷಣಗಳು ತಿಳಿಸುತ್ತವೆ. ಎರಡನೆಯ ಮಂತ್ರದ ಉತ್ತರಾರ್ಧದಲ್ಲಿ ಅಗ್ನಿಯು ಮಿತ್ರಾವರುಣರನ್ನು ಪ್ರಶ್ನಿಸುವಾಗ, ತೇಜೋಯುತವೂ, ದೇವಯಾನರೂಪವಾದುದೂ ಆದ ಅಗ್ನಿಯ ಅನಂತರೂಪವನ್ನು ದೇವತೆಗಳಲ್ಲಿ ಯಾರುತಾನೆ ಅರಿತಿರುವದು ಎಂದು ಪ್ರಶ್ನಿಸುತ್ತಾನೆ. ಮತ್ತೆ ಮೂರನೆಯ ಮಂತ್ರದಲ್ಲಿ ದೇವತೆಗಳಿಗೆ ಹವಿಸ್ಸನ್ನು ವಹಿಸುವ ದೇವಯಾನವನ್ನು ತೇಜೋಯುತವನ್ನಾಗಿ ಮಾಡಬೇಕೆಂದು ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

ಈ ಆಧಾರಗಳ ಮೇಲೆ ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ದೇವಯಾನವು ಕೇವಲ ಸಂಚಾರಮಾರ್ಗ ಮಾತ್ರವೇ ಅಲ್ಲ. ಅದು ಸಂಚರಿಸಲು ಯೋಗ್ಯವಾದುದೂ ಆದ ಮಾರ್ಗವೆಂದು ಹೇಳಬಹುದು. ಈ ಗುಣಗಳಿಲ್ಲದೇ ಇದಕ್ಕೆ ವಿರೋಧವಾದುದು ಪಿತೃಮಾರ್ಗವೆಂಬುದು ಉಪನಿಷದ್ವಾರಗಳಿಂದ ತಿಳಿದುಬರುತ್ತದೆ.

ಈ ದೇವಯಾನದಿಂದ ಸಂಚರಿಸಲು ಯೋಗ್ಯತೆಯನ್ನು ಪಡೆದಿರುವ ಆತ್ಮನು ಬ್ರಹ್ಮಲೋಕವನ್ನು ಸೇರಿದ ನಂತರ ಪುನರಾವರ್ತಿಯನ್ನು ಹೊಂದಿ ಪೃಥ್ವಿಗೆ ಹಿಂತಿರುಗುವುದಿಲ್ಲ ಎಂದು ಉಪನಿಷತ್ತುಗಳಲ್ಲಿ ಹೇಳಿರುವ ಅಂಶವೂ ಸಹ ಋಕ್ಸಂಹಿತಾ ವಾಕ್ಯಗಳಲ್ಲಿ ಸೂಚಿತವಾಗಿದೆಯೇ ಎಂಬುದೂ ಒಂದು ಪ್ರಶ್ನೆ. ಆ ಅಂಶವು ಕೆಳಗೆ ಉದಾಹೃತವಾಗುವ ಮಂತ್ರಗಳಲ್ಲಿರುವ ವರ್ಣನೆಗಳಿಂದ ವಿಶದವಾಗಿ ತಿಳಿಯಬಹುದು.

**ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।**
**ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥**
(ಋ. ಸಂ. ೧೦-೧೮-೧)

**ಏತಾನ್ಯಗ್ನೇ ನವತಿಂ ಸಹಸ್ರಾ ಸಂ ಪ್ರ ಯಚ್ಛ ವೃಷ್ಣ ಇಂದ್ರಾಯ ಭಾಗಂ ।**
**ವಿದ್ವಾನ್ ಪಥ ಋತುಶೋ ದೇವಯಾನಾನಪ್ಯೌಲಾನಂ ದಿವಿ ದೇವೇಷು ಧೇಹಿ ॥**
(ಋ. ಸಂ. ೧೦-೯೮-೧೧)

**ವಿದ್ವಾँ ಅಗ್ನೇ ವಯುನಾನಿ ಕ್ಷಿತೀನಾಂ ವ್ಯಾನುಷಕ್ಛುರುಧೋ ಜೀವಸೇ ಧಾಃ ।**
**ಅಂತರ್ವಿದ್ವಾँ ಅಧ್ವನೋ ದೇವಯಾನಾನತಂದ್ರೋ ದೂತೋ ಅಭವೋ ಹವಿರ್ವಾಟ್ ॥**
ಋ. ಸಂ. ೧-೭೨-೭)

ಈ ಮಂತ್ರಗಳಲ್ಲಿ ಮೊದಲನೆಯದರಲ್ಲಿ ಮೃತ್ಯುವನ್ನು ಉದ್ದೇಶಿಸಿದ ಪ್ರಾರ್ಥನೆಯಾಗಿದೆ. ಇಲ್ಲಿ ಮೃತ್ಯುವಿನ ಮಾರ್ಗವೇ ಬೇರೆ, ದೇವಯಾನದ ಮಾರ್ಗವೇ ಬೇರೆ ಎಂಬುದು ವಿಶದವಾಗಿದೆ. **ಯಃ ತೇ ಸ್ವಃ ದೇವಯಾನಾತ್** ಇತರಃ ಎಂಬ ವಾಕ್ಯದಿಂದ ದೇವಯಾನಕ್ಕಿಂತ ಮೃತ್ಯುಮಾರ್ಗವು ಬೇರೆಯಾದುದು ಎಂದು ವರ್ಣಿತವಾಗಿದೆ. ಆದುದರಿಂದ, ದೇವಯಾನಕ್ಕೂ ಮೃತ್ಯುವಿಗೂ ವಿರೋಧವೆಂದಾಗಿ ದೇವಯಾನದಲ್ಲಿ ಸಂಚರಿಸುವವರೆಲ್ಲರೂ ಮರಣರಹಿತರಾಗಿ ನಿತ್ಯವಾದ ಬ್ರಹ್ಮಲೋಕವನ್ನು ಸೇರುವರು ಎಂದಭಿಪ್ರಾಯವು ಸೂಚಿತವಾಗುತ್ತದೆ.

ಎರಡನೆಯ ಮಂತ್ರದಲ್ಲಿ ದೇವಯಾನದ ಸ್ವರೂಪವನ್ನರಿತ ಅಗ್ನಿಯನ್ನು ಕುರಿತು ಔಲಾನಶಂತನುವೆಂಬುವನನ್ನು ದೇವತೆಗಳಲ್ಲಿಗೆ ಸೇರಿಸಬೇಕೆಂದು ಪ್ರಾರ್ಥಿಸಿದೆ. ಮರಣಾನಂತರ ಆತ್ಮನು ಅಗ್ನಿಜ್ವಾಲೆಯೊಡನೆ ಅಂತರ್ಗತನಾಗಿ ದೇವಲೋಕವನ್ನು ಸೇರುವನು ಎಂದು ವರ್ಣಿತವಾಗಿರುವ ಭಾವವು ಇಲ್ಲಿ ಸೂಚಿತವಾಗಿದೆ. ಮೂರನೆಯ ಮಂತ್ರದಲ್ಲೂ ಸಹ ಇದೇ ಅಂಶವು ವಿಶದವಾಗಿ ಸೂಚಿಸಲ್ಪಟ್ಟಿದೆ.

ಈ ಆಧಾರಗಳ ಮೇಲೆ **ದೇವಯಾನವೂ ಪಿತೃಯಾಣವೂ** ಸಹ ಮರಣಾನಂತರ ಆತ್ಮನನ್ನು ಕೊಂಡೊಯ್ಯುವ ಬೇರೆ ಬೇರೆ ಮಾರ್ಗಗಳೆಂದು ತಿಳಿಯುತ್ತದೆ. ಈ ಅಭಿಪ್ರಾಯಗಳನ್ನು ಇನ್ನೂ ವಿಶದವಾಗಿ ತಿಳಿಯಬೇಕಾದರೆ **ಗಾತು, ರಜಸ್, ಸ್ರುತಿ** ಎಂಬ ಪದಗಳ ತಾತ್ಪರ್ಯವನ್ನು ವಿವರಿಸುವಾಗ ಆಯಾ ಸಂದರ್ಭಗಳಲ್ಲಿ ತಿಳಿಯಬಹುದು. ಉದಾಹರಣೆಗೆ--

**ದ್ವೇ ಸ್ರುತೀ ಅಶೃಣವಂ ಪಿತೄಣಾಮಹಂ ದೇವಾನಾಮುತ ಮರ್ತ್ಯಾನಾಂ ।**
**ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ॥**
(ಋ. ಸಂ. ೧೦-೮೮-೧೫)

**ಆ ಕೃಷ್ಣೇಣ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।**
**ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ॥**
(ಋ. ಸಂ. ೧-೩೫-೨)

ಇತ್ಯಾದಿ ಮಂತ್ರಗಳಲ್ಲಿ ಎರಡು ಮಾರ್ಗಗಳಿಗೂ ಇರುವ ವ್ಯತ್ಯಾಸವು ತಿಳಿಸಲ್ಪಟ್ಟಿದೆ. ಈ ವಿಷಯವನ್ನು ಇನ್ನೂ ವಿಶದವಾಗಿ ಮುಂದೆ ಆಯಾ ಸನ್ನಿವೇಶಗಳಲ್ಲಿ ವಿವರಿಸಲಾಗುತ್ತದೆ. ಈ ದೇವಯಾನವನ್ನೇ ಉಪನಿಷತ್ತುಗಳಲ್ಲಿ ಅರ್ಚಿರಾದಿಮಾರ್ಗವೆಂದೂ ಹೇಳಿದೆ. ಮರಣಾನಂತರ ಈ ಮಾರ್ಗದಲ್ಲಿ ಬ್ರಹ್ಮಲೋಕವನ್ನು ಸೇರಿದ ಸುಕೃತಿಗಳಿಗೆ ಪುನರಾವರ್ತಿಯಿಲ್ಲವೆಂದು ಮೇಲೆ ಉದಾಹೃತವಾದ ಬೃಹದಾರಣ್ಯಕೋಪನಿಷದ್ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಇತರ ಉಪನಿಷತ್ತುಗಳಲ್ಲಿಯೂ ಈ ಅಂಶವನ್ನು ತಿಳಿಸಿದೆ.

**ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ।**

(ಛಾ. ಉ. ೪-೧೫-೫)

**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋಽಹ್ಯವ್ಯಯಾತ್ಮಾ ।**

(ಮು. ಉ. ೨-೧೧)

ಇತ್ಯಾದಿ **ಸೂರ್ಯದ್ವಾರ** ವನ್ನು ವರ್ಣಿಸುವ ವಾಕ್ಯಗಳು ದೇವಯಾನದ ಮಹತ್ತ್ವವನ್ನು ಪ್ರಶಂಸಿಸುತ್ತವೆ.

॥ ವ್ಯಾಕರಣಪ್ರಕ್ರಿಯಾ ॥

**ಅತಾರಿಷ್ಮ**—ತೄ ಪ್ಲವನತರಣಯೋಃ ಧಾತು. ಲುಙ್ ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಕ್ಕೆ ಲೋಪ. ಚ್ಲಿಗೆ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. **ಸಿಚಿ ವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ಸೂತ್ರದಿಂದ ಧಾತುವಿನ ಇಕಿಗೆ ವೃದ್ಧಿ. ರ ಪರವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ಅಧಾಯಿ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಆತೋಯುಕ್ ಚಿಣ್ ಕೃತೋಃ** (ಪಾ. ಸೂ. ೭-೩-೩೩) ಸೂತ್ರದಿಂದ ಚಿಣ್ ಪರವಾದುದರಿಂದ ಆದಂತಕ್ಕೆ ಯುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದ ಪ್ರತ್ಯಯಕ್ಕೆ ಲುಕ್. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವಯಾನೈಃ**—ದೇವಾನಾಂ ಯಾನಾನಿ (ಮಾರ್ಗಾಃ) ಯಾ ಪ್ರಾಪಣೇ. ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧೩) ಎಂಬುದರಿಂದ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯಕ್ಕೆ ಪೂರ್ವದ ಉದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ. ॥ ೬ ॥

ಇಲ್ಲಿಗೆ ನೂರ ಎಂಭತ್ತಮೂರನೇ ಸೂಕ್ತ ಮುಗಿದುದು.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರ ಬುಕ್ಕಭೂಪಾಲ ಸಾಮ್ರಾಜ್ಯ ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ಚತುರ್ಥೋಽಧ್ಯಾಯಃ ಸಮಾಪ್ತಃ.

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಸ್ತು ತೇ ॥

॥ ಶುಭಂ ಭೂಯಾತ್ ॥
॥ ಮಂಗಳಂ ॥



ಆರ್. ಕೃಷ್ಣಶೆಟ್ಟಿ ಪ್ರಿಂಟರ್, ಶ್ರೀ ಶಾರದಾ ಪ್ರೆಸ್, ಹನುಮಂತರಾವ್ ಸ್ಟ್ರೀಟ್, ಮೈಸೂರು.